ಅಂತರ ಭಾರತೀಯ ಪುಸ್ತಕ ಮಾಲೆ

# ಏಣಿಯ ಮೆಟ್ಟಿಲುಗಳು

(ಮಲಯಾಳ ಭಾಷೆಯ "ಏಣಿಪ್ಪಡಿಕಳ್" ಕಾದಂಬರಿಯ ಕನ್ನಡ ರೂಪಾಂತರ)

ಲೇಖಕ:

ತಕಳಿ ಶಿವಶಂಕರ ಪಿಳ್ಳೈ

ಅನುವಾದ:

ಬಿ. ಕೆ. ತಿಮ್ಮಪ್ಪ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮೊದಲ ಮುದ್ರಣ: 1977 (ಶಕ 1898)
ದ್ವಿತೀಯ ಮುದ್ರಣ: 1990 (ಶಕ 1912)

ರೂ. **40.00**

*Original Title in Malayalam* : Enippadikal
*by* Thakazi Shivashankara Pillai
*Kannada Translation* : ENIYA METTALUGALU

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016,
ಇವರಿಂದ ಪ್ರಕಟಿತ

# ಮುನ್ನುಡಿ

ಕಾದಂಬರಿ, ಮಧ್ಯಮ ವರ್ಗದ ಅಥವಾ ಬೂರ್ಷ್ವ ವರ್ಗದ ಕಲಾಕೃತಿಯಾಗಿ ಪ್ರಾರಂಭವಾದದ್ದು. ಮಧ್ಯಮ ವರ್ಗದ ಉನ್ನತಿ ಅವನತಿಗಳು, ಸ್ವಪ್ನಗಳು, ಭಗ್ನಸ್ವಪ್ನ ಗಳು—ಇವೆಲ್ಲವೂ ಈ ಕಲಾಕೃತಿಯಲ್ಲಿ ಮೇಲಿಂದ ಮೇಲೆ ಪ್ರತಿಫಲಿತವಾಗಿವೆ. ಸಮಾಜವೆನ್ನುವ ಮಹಾದುರ್ಗದ ಮಧ್ಯೆ ಯುದ್ಧಸನ್ನದ್ಧನಾಗಿ ನಿಂತ ವ್ಯಕ್ತಿಯೇ ಪ್ರಾಚೀನ ಕಾದಂಬರಿಯ ಕೇಂದ್ರಬಿಂದು. 18ನೇ ಶತಮಾನದಲ್ಲಿ ಕೈಗಾರಿಕಾ ಕ್ರಾಂತಿಯ ಫಲವಾಗಿ ಒಂದು ಹೊಸದಾದ ಮಧ್ಯಮವರ್ಗ ಉದ್ಭವಿಸಿದುದು, ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳಲ್ಲಷ್ಟೆ. ಅಲ್ಲಿಂದಲೇ ಆಧುನಿಕ ಕಾದಂಬರಿಗಳು ಹುಟ್ಟಿಕೊಂಡದ್ದು. ಆ ಕಾಲದ ಸಾಹಿತ್ಯಿಯ ಉತ್ಸಾಹ ಮಧ್ಯಮವರ್ಗದ ಜೀವಿಯ ಬದುಕಿನ ಸಾಹಸಮಯ ಹೋರಾಟವನ್ನು ಚಿತ್ರಿಸುವುದೇ ಆಗಿತ್ತು. ರಾಬಿನ್‌ಸನ್ ಕ್ರೂಸೋ, ಡಾನ್ ಕ್ವಿಕ್ ಸೋಟ್, ಪಿಕ್‌ವಿಕ್ ಇವೆಲ್ಲಾ ಆ ಸಾಹಸ ಪರಂಪರೆಯ ಪ್ರತಿನಿಧಿಗಳು. ನಮ್ಮ ದೇಶಕ್ಕೆ ತಲಪಿದಾಗ ಇದಕ್ಕೆ ಪೌರಾಣಿಕ ಛಾಯೆ ಬೆರೆತಂತೆ ತೋರುತ್ತದೆ. ಮಲಯಾಳದ ಮೊದಲನೆಯ ಕಾದಂಬರಿ ಎಂದು ಹೇಳಲಾಗುತ್ತಿರುವ 'ಕುಂದಲತ' ಕಾದಂಬರಿ (1887) ಯಲ್ಲಿ ಒಂದು ಅದ್ಭುತ ಪುರಾಣ ಛಾಯೆ ಕಂಡುಬರುತ್ತದೆ. ಆ ಕಾದಂಬರಿಯಲ್ಲಿ ಮತ್ತಾವುದೇ ಗುಣವಿದ್ದರೂ ಕೇರಳೀಯತ್ವವೆಂಬ ಗುಣವಿಲ್ಲ. ಕಳಿಂಗದೇಶದಲ್ಲಿ ನಡೆದ ಕಥೆ ಎಂದು ನಂಬುವಂತೆ ಮಾಡಲು ಗ್ರಂಥಕರ್ತೃ ಶ್ರಮಿಸಿದ್ದಾರೆ. ಕಳಿಂಗದಲ್ಲಿಯೋ ವಂಗದಲ್ಲಿಯೋ ಮಾಳವದಲ್ಲಿಯೋ. ಎಲ್ಲಿಯಾದರೂ ನಮಗೆ ಬೇಸರವಿಲ್ಲ. ಒಂದು ಕಥೆಯನ್ನು ಸೃಷ್ಟಿಸುವುದಷ್ಟೇ ಗ್ರಂಥಕರ್ತೃವಿನ ಉದ್ದೇಶವಾಗಿತ್ತಲ್ಲದೆ ಬೇರಾವ ದೊಡ್ಡ ಉದ್ದೇಶವೂ ಇರಲಿಲ್ಲ. ಆದುದರಿಂದಲೇ ಇರಬೇಕು 'ಕುಂದಲತ' ಇಂದು ಯಾವ ಓದುಗರ ಆಕರ್ಷಣೆಗೂ ಒಳಗಾಗದೆ ಸಾಹಿತ್ಯ ಚರಿತ್ರೆಯಲ್ಲಿ ಸುಖನಿದ್ರೆ ಮಾಡುತ್ತಿರುವ ಒಂದು ಕಾದಂಬರಿಯಾಗಿ ಉಳಿದುದು.

ಆದರೆ ಸ್ವಲ್ಪ ಕಾಲದ ನಂತರ ಹೊರಬಂದ 'ಇಂದುಲೇಖ' (1889) ಕಾದಂಬರಿ ಯನ್ನು ಇಂದಿಗೂ ಜನರು ಧಾರಾಳವಾಗಿ ಓದುತ್ತಿದ್ದಾರೆ. ಲಾರ್ಡ್ ಬೀಕನ್ಸ್‌ಫೀಲ್ಡ್‌ನ ಒಂದು ಕಾದಂಬರಿ 'ಹೆನ್ರಿ ಟಾಡ್‌ಬಿಲ್' ಚಂದು ಮೆನನ್‌ರನ್ನು ಪ್ರಚೋದಿಸಿದೆಯಾದರೂ 'ಇಂದುಲೇಖ' ಅಚ್ಚ ಕೇರಳೀಯವಾದ ಒಂದು ಕಾದಂಬರಿ. ಚಂದು ಮೆನನ್‌ರು ಹೇಳುವುದು ಒಂದು ಹಳೆಯ ಅಳಿಯಸಂತಾನ ಕುಟುಂಬದ ಕಥೆ. ಅಂದಿನ ಕುಲೀನ ನಾಯರ್ ಕುಟುಂಬಗಳಲ್ಲಿ ಮತ್ತೆಲ್ಲಿಯೂ ಆಚರಣೆಯಲ್ಲಿಲ್ಲದಿದ್ದ ಒಂದು ರೀತಿಯ ವಿವಾಹ ಸಂಪ್ರದಾಯ ಆಚರಣೆಯಲ್ಲಿತ್ತು. ನಾಯರ್ ಸ್ತ್ರೀಯರನ್ನು ನಂಬೂದಿರಿ

ಬ್ರಾಹ್ಮಣರಿಗೆ, ಜಾತಿ ಮಹತ್ವವನ್ನು ಮಾತ್ರ ನೋಡಿ ಮದುವೆ ಮಾಡಿಕೊಡುವುದು —ಹೆಚ್ಚಾಗಿ ಆ ಬ್ರಾಹ್ಮಣರು ವೃದ್ಧರೂ ಆಗಿರಬಹುದು—ಬ್ರಾಹ್ಮಣನಿಗೆ ಸಂಬಂಧಿಸಿದಂತೆ ಈ ವಿವಾಹ ಒಂದು ರೀತಿಯ ಅವೈದಿಕ ಸಂಬಂಧವಾಗಿತ್ತು. ಹೆಂಡತಿಯ ಕುಟುಂಬದಲ್ಲಿ ಒಬ್ಬ ವಿಶಿಷ್ಟ ಅತಿಥಿಯಾಗಿ ಆತನನ್ನು ಪರಿಗಣಿಸುತ್ತಿದ್ದರು. ಈ ಸಂಪ್ರದಾಯ ಎರಡು ಸಮಾಜಗಳನ್ನೂ—ವಿಶೇಷವಾಗಿ ಆ ಸಮಾಜದ ಸ್ತ್ರೀಯರನ್ನು—ಅಧೋಗತಿಗಿಳಿಸುತ್ತದೆ ಎನ್ನುವುದು ಸಮಾಜ ಸುಧಾರಕರಿಗೆ ಅರ್ಥವಾಗಿರಲಿಲ್ಲ. ಅರ್ಥ ಮಾಡಿಕೊಂಡವರು ಮನಬಿಚ್ಚಿ ಹೇಳಲೂ ಇಲ್ಲ. ಆ ಪರಿಸ್ಥಿತಿಯಲ್ಲಿ ಚಂದು ಮೆನನ್ ಶಕ್ತಿಯುತವಾಗಿ, ವ್ಯಂಗ್ಯೋಕ್ತಿಯಿಂದ ಸುಂದರವಾದ ರೂಪವನ್ನಿತ್ತರು. ಅದೇ 'ಇಂದುಲೇಖ'. ಮೇಲುನೋಟಕ್ಕೆ ಸರ್ವಸಾಮಾನ್ಯವಾದ ಒಂದು ಪ್ರಣಯಕಥೆ. ಭಾಷೆ ಕತೆಗಿಂತಲೂ ಸಾಮಾನ್ಯ. ತಾನೊಂದು ಸಾಹಿತ್ಯಕೃತಿಯನ್ನು ನಿರ್ಮಿಸುತ್ತಿದ್ದೇನೆ ಎನ್ನುವ ಭಾವನೆಯೇ ಇಲ್ಲ ಚಂದು ಮೆನನ್‌ರಿಗೆ. ಆದರೆ ಈ ಸಾಧಾರಣತ್ವದ ಹಿಂದೆ ಸಂಬುಪ್ರವಕ್ಕೂ ಸಾಧ್ಯವಿಲ್ಲದಂಥ ಶಕ್ತಿಯೂ. ಕಳೆಗುಂದದ, ಹೊಸತನವೂ ಶೋಭಿಸಿದೆ. ಆದುದರಿಂದಲೇ ಇಂದಿಗೂ ಜನರು 'ಇಂದುಲೇಖ' ಕಾದಂಬರಿಯನ್ನು ಕುತೂಹಲದಿಂದ ಓದುತ್ತಿರುವುದು. ಆ ಕಾದಂಬರಿಯ ಕಥಾಪಾತ್ರಗಳು ಮುಕ್ಕಾಲು ಶತಮಾನದ ಹಿಂದೆ ಜೀವಿಸಿದ್ದ ಕೆಲವು ಮನುಷ್ಯರಂತೆ ತೋರದೆ ನಮ್ಮ ಗ್ರಾಮಗಳಲ್ಲಿ ಎಲ್ಲಿಯೋ ಈಗಲೂ ಕಂಡುಬರುತ್ತಿರುವ ಕೆಲವು ಸುಪರಿಚಿತ ವ್ಯಕ್ತಿಗಳಾಗಿದ್ದಾರೆ.

ಪಾಶ್ಚಾತ್ಯ ಸಂಪರ್ಕದ ವಿಶಿಷ್ಟವಾದ ಪದ್ಧತಿಗಳನ್ನು ನಾಡಿಗೆ ಉದ್ದೇಶಪೂರ್ವಕ ಬಲಾತ್ಕಾರವಾಗಿ ಎಳೆತರುವ ಕಾರ್ಯವನ್ನೇ ಚಂದು ಮೆನನ್ ಮಾಡಿದ್ದು. ಪಿಯಾನೊ ನುಡಿಸುವ ಒಬ್ಬ ನಾಯಿಕೆಯನ್ನು ಎಂಬತ್ತು ವರ್ಷಕ್ಕೆ ಮೊದಲೇ ಚಂದು ಮೆನನ್ ಕಲ್ಪಿಸಿದ್ದು. ಇಂದಿನ ಕಾದಂಬರಿಕಾರ ತನ್ನ ನಾಯಿಕೆಯಿಂದ ನುಡಿಸುವುದು ವೀಣೆಯನ್ನೆ. ಹತ್ತಿ ಗಿರಣಿ, ಏಲಕ್ಕಿ ತೋಟ ಮುಂತಾದುವುಗಳನ್ನೆಲ್ಲ 'ಇಂದುಲೇಖ'ದಲ್ಲಿ ಪರಾಮರ್ಶಿಸಿದ್ದಾರೆ. ನಿರೀಶ್ವರವಾದವನ್ನು ಗ್ರಂಥಕರ್ತೃ ನೇರವಾಗಿ ಒಪ್ಪಿಕೊಳ್ಳದಿದ್ದರೂ ಡಾರ್ವಿನ್ನನ. ಥಾಮಸ್ ಹೆನ್ರಿ ಹಕ್ಸ್ಲೀಯ. ವಿಚಾರಸರಣಿಯನ್ನು ಚರ್ಚಾ ವಿಷಯವಾಗಿ ಕೈಗೆತ್ತಿಕೊಂಡಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ಚಂದು ಮೆನನ್ ಯಥಾರ್ಥವಾಗಿ ದೂರದೃಷ್ಟಿಯುಳ್ಳವರಾಗಿದ್ದರು. ಮಲಯಾಳ ಕಾದಂಬರಿ ಶಾಖೆಯಲ್ಲಿ ಅತ್ಯಂತ ಪ್ರತಿಭಾಶಾಲಿಯಾದ ಸಿ. ವಿ. ರಾಮನ್ ಪಿಳ್ಳೆ (1858–1922) ಚರಿತ್ರೆಯ ಪುನರ್ನಿರ್ಮಾಣ ಕಾರ್ಯದಲ್ಲಿ ತೊಡಗಿದುದು ಕಂಡುಬರುತ್ತದೆ. ಚಂದು ಮೆನನ್‌ರಿಗಿಂತಲೂ ಸಂಪ್ರದಾಯವಾದಿ ಸಿ. ವಿ. ರಾಮನ್ ಪಿಳ್ಳೆ. ಈತ ದೊಡ್ಡ ರಾಜಭಕ್ತ. ಸಮಾಜಪ್ರೇಮಿ. ಎಡೆತಡೆ ಇಲ್ಲದ ಸನ್ಮಾರ್ಗವಾದಿ. ವೀರರ ಆರಾಧಕ. ಯಥಾಸ್ಥಿತಿಯನ್ನು ತಿಳಿಸುವ ಹಳಬನೆಂದೇ ಅಂದಿನ ಪೀಳಿಗೆ ಆತನನ್ನು ಕರೆದಿರಬಹುದು. ಆದರೆ ವಿ. ವಿ. ಗೆ ಅದಕ್ಕೆ ಮುಂಚೆಯೂ ಅನಂತರವೂ ಇದ್ದ ಬೇರೆ ಯಾವ ಕಾದಂಬರಿಕಾರನಿಗಿಂತಲೂ ಮಿಗಿಲಾದ ಒಂದು ವಿಶಿಷ್ಟ

ಶಕ್ತಿ ಇತ್ತು. ಒಂದೇ ನೋಟದಿಂದ ತ್ರಿಕಾಲಗಳನ್ನು ಕಾಣುವ ಕಣ್ಣನ್ನು "ಪಶ್ಯಂತಿಬುದ್ಧಿ" ಎಂದು ನಮ್ಮ ಪ್ರಾಚೀನರು ಹೇಳಿರುತ್ತಾರೆ. **All-seeing eye** ಎಂದು ಹೆನ್ರಿ ಜೇಮ್ಸ್ ಸಹ ಹೇಳಿದ್ದಾನೆ.

ಇನ್ನೂರು ವರ್ಷಗಳಿಗೆ ಹಿಂದಿನ ತಿರುವಾಂಕೂರಿನ ಘಟನಾವಳಿಗಳ ಚರಿತ್ರೆಯನ್ನು ಉಜ್ವಲ ಪ್ರಭಾವಿಗಳಾದ ಕೆಲವು ಮಹಾಪುರುಷರ ಪುನಃಸೃಷ್ಟಿಯ ಮೂಲಕ ಸಿ. ವಿ. ರಾಮನ್ ಪಿಳ್ಳೆ ನಮ್ಮ ಮುಂದಿರಿಸಿದ್ದಾರೆ. ಆ ಭಾವನಾಸಂಪನ್ನನ ಮುಂದೆ ಚಿರಂತನ ವಾದ ಭೂತಕಾಲ, ಆಭರಣಗಳನ್ನು ತೊಟ್ಟು ಮೇಳವಾದ್ಯ ಘೋಷಗಳೊಡನೆ ನರ್ತಿಸು ತ್ತಿತ್ತು. ಎಂಥೆಂಥ ಅದ್ಭುತಗಳು; ವಿಷ್ಟೆಷ್ಟೋ ಉಗ್ರಮೂರ್ತಿಗಳು; ಆ ಭೂತಕಾಲದ ಪರದೆಯ ಹಿಂದೆ ಪ್ರತ್ಯಕ್ಷಗೊಂಡಿಲ್ಲ! ಮಲಯಾಳದಲ್ಲಿ ಮಹಾ ಶೈಲಿ (**Grand style**) ಎನ್ನುವ ಶೈಲಿಯೊಂದಿದ್ದಲ್ಲಿ ಅದು ಸಿ. ವಿ.ಯ ಶೈಲಿ. ಸಿ. ವಿ.ಗೆ ಸಂಬಂಧಿಸಿದುದೆಲ್ಲ ಮಹತ್ತಾದುದು, ಬೃಹತ್ತಾದುದು. ಆ ಮೂರು ಕೃತಿಗಳ (ಮಾರ್ತಾಂಡ ವರ್ಮ, ಧರ್ಮರಾಜ, ರಾಮರಾಜ ಬಹದ್ದೂರ್) ಐತಿಹಾಸಿಕ ವೈಶಾಲ್ಯವೂ ಗಾಂಭೀರ್ಯವೂ ಸ್ಕಾಟನನ್ನಲ್ಲ, ಟಾಲ್‌ಸ್ಟಾಯಿಯನ್ನೂ ನೆನಪು ಮಾಡಿಕೊಡುತ್ತದೆ. ಅಂಬೆಗಾಲಿಡುತ್ತ ಸಾಗಿದ ಮಲಯಾಳ ಕಾದಂಬರಿಯನ್ನು ದಿಢೀರನೆ ವಿಶ್ವಸಾಹಿತ್ಯದ ರಾಜಸಭೆಗೆ ಪ್ರವೇಶಿಸು ವಂತೆ ಮಾಡಿದವರೇ ಸಿ. ವಿ. ರಾಮನ್ ಪಿಳ್ಳೆ.

ಈ ಇಬ್ಬರು ಮಹಾವ್ಯಕ್ತಿಗಳ ನಂತರ ಮಲಯಾಳ ಕಾದಂಬರಿಗಳ ನಡಿಗೆ ಸ್ವಲ್ಪ ಕಾಲದ ವರೆಗೆ ಎರಡನೆ ವರ್ಗದವರ ವಿನೋದರಂಗವಾಗಿ ಬದಲಾಯಿಸಿತು. ಅಪ್ಪನ್ ತಂಬುರಾನ್, ಕೆ. ಎಂ. ಪಣಿಕ್ಕರ್ ಮುಂತಾದವರು ಕೆಲವು ಚಾರಿತ್ರಿಕ ಕಾದಂಬರಿಗಳನ್ನು ರಚಿಸಿರುವರಾದರೂ ಅವರಾರಿಗೂ ಸಿ. ವಿ.ಯನ್ನು ಸಮೀಪಿಸಲೂ ಆಗಲಿಲ್ಲ. ಕ್ರಿ.ಶ. 1930ರ ನಂತರ ಕೆಲವು ಹೊಸ ಮಾರ್ಪಾಟುಗಳು ಅನುಭವಕ್ಕೆ ಬರಲಾರಂಭಿಸಿದುವು. ರಿಯಲಿಸಂ, ಮನೋವಿಶ್ಲೇಷಣೆ, ಮುಂತಾದ ನೂತನ ಸಂಕಲ್ಪಗಳನ್ನು ಕುರಿತು ಪ್ರಸಿದ್ಧ ವಿಚಾರಶೀಲನೂ ಪತ್ರಿಕಾ ಸಂಪಾದಕನೂ ಆದ ಎ. ಬಾಲಕೃಷ್ಣ ಪಿಳ್ಳೆಯ ಲೇಖನಗಳ ಮೂಲಕ ಬರಹಗಾರರು ಅವುಗಳನ್ನು ಗ್ರಹಿಸತೊಡಗಿದರು. ಬಾಲಕೃಷ್ಣ ಪಿಳ್ಳೆಯ ಶಿಷ್ಯವರ್ಗದಲ್ಲಿ ಕೆಲವು ಮಂದಿ ಯುವಕ ಬರಹಗಾರರು ಹೊಸ ರಚನಾ ಸಂಪ್ರದಾಯ ಗಳನ್ನು ಪರಿಶೀಲಿಸಿ ನೋಡಲು ಧೈರ್ಯ ವಹಿಸಿದರು. ಆ ಗುಂಪಿನಲ್ಲಿ ಒಬ್ಬರು ತಕಳಿ ಶಿವಶಂಕರ ಪಿಳ್ಳೆ. ಕೇಶವದೇವ್ ಆದರೋ ಕಾರ್ಮಿಕರ ಸಂಘಟನೆಗಳ ಮೂಲಕ ಒಂದು ಹೊಸ ಸಾಹಿತ್ಯಮಾರ್ಗದಲ್ಲಿ ಪ್ರವೇಶಿಸಿದರು. ಪೊಟ್ಟೆಕ್ಕಾಟ್ ಅವರೂ ಬಶೀರರೂ ಕಾಲದ ಅನಿರ್ಬಂಧ ಪ್ರೇರಣೆಗಳಿಂದಾಗಿ ಸಣ್ಣ ಕಥೆಗಳ ಮೂಲಕ ಹೊಸ ಪ್ರಯೋಗ ಗಳನ್ನು ಪರೀಕ್ಷಿಸಿ ನೋಡತೊಡಗಿದರು.

ಇವರೆಲ್ಲರೂ ಸಣ್ಣಕಥೆಗಳನ್ನೂ ಕಿರು ಕಾದಂಬರಿಗಳನ್ನೂ ಮೊದಲು ಬರೆದದ್ದು. ತಕಳಿಯ "ಪತಿತಪಂಕಜಂ", "ತ್ಯಾಗದ ಪ್ರತಿಫಲ" ಇವು ಸಾಂಕೇತಿಕ ರೀತಿಯಲ್ಲಿ

ಹೊಸತನವನ್ನು ಪಡೆದು ವಸ್ತುವೈಶಿಷ್ಟ್ಯದಿಂದಲೂ ಆಖ್ಯಾನದ ಚಟುಲತೆಯಿಂದಲೂ ಆಕರ್ಷಣೆಗೊಳಗಾದುವು. ಇವುಗಳನ್ನು ಆರಾಧಿಸುವವರು ಇದ್ದಂತೆಯೇ ಆಕ್ಷೇಪಿಸುವವರೂ ಇದ್ದರು. ಅಶ್ಲೀಲ ಬರಹಗಾರ, ಜಾಡಮಾಲಿ ಎಂದು ಮುಂತಾಗಿ ತಕಜಿಯ ಮೇಲೆ ಅವಹೇಳನಗಳ ಮಳೆಯನ್ನು ಕರೆದರು. ತಕಜಿ ಮಾತ್ರವಲ್ಲ ಕೇಶವದೇವ್ ಬಶೀರ್ ಮುಂತಾದವರೆಲ್ಲರೂ ಈ ಆಕ್ಷೇಪಣೆಯ ಕೂಪದಲ್ಲಿ ಮುಳುಗಿ ಎದ್ದು ಬಂದವರು. ಅವರ ಕೃತಿಗಳಲ್ಲಿ ದಾರಿದ್ರ್ಯದ ಮತ್ತು ಅನೌಚಿತ್ಯದ ಚಿತ್ರಗಳೇ ಅತಿ ವರ್ಣರಂಜಿತಗಳಾಗದೆಯೂ ಹೋಗಿಲ್ಲ. ಫ್ಲೇಬರ್, ವಿಕ್ಟರ್ ಹ್ಯೂಗೋ, ಎಮಿಲಿಜೋಲ ಮುಂತಾದವರ ವಿಷಯದಲ್ಲೂ ಈ ಅತ್ಯುಕ್ತಿಯುಂಟು.

ಮೇಲೆ ಹೇಳಿದ ಕಾದಂಬರಿಕಾರರಾರೂ ಹಳೆಯ ಕಾದಂಬರಿಕಾರರಂತೆ, ತಮ್ಮ ಕಥಾಪಾತ್ರಗಳಿಂದ ಜೀವನನಾಟಕದ ಆದ್ಯಂತವನ್ನು ನಿರೂಪಿಸಲು ಶಕ್ತರಾಗಿಲ್ಲ. ಸಣ್ಣ ಕಥೆಗಿಂತ ಸ್ವಲ್ಪ ಹೆಚ್ಚು ವಿಸ್ತಾರ ಕಂಡುಬರುತ್ತದೆ, ಅಷ್ಟೆ. ಹೆಚ್ಚುಕಡಿಮೆ 1945ರ ವರೆಗಿನ ಸ್ಥಿತಿ ಇದಾಗಿತ್ತು. ಅನಂತರ ಸಾಹಿತ್ಯದ ಗತಿ ಸಂಪೂರ್ಣವಾಗಿ ಬದಲಾಯಿಸಿತು. ಪುರೋಗಮನ ಸಾಹಿತ್ಯ ಪ್ರಸ್ಥಾನ ಶಕ್ತಿಯುತವಾಗಿ ಬಂದಿತು. ವಿಷಯಗಳನ್ನು ಮತ್ತಷ್ಟು ವಿಸ್ತರಿಸಿ ಮನಸ್ಸು ಬಿಚ್ಚಿ ಹೇಳುವಂತಾಯಿತು. ಆ ಕಾಲದಲ್ಲಿ 'ಚರಂಡಿಯೊಳಗಿಂದ' 'ರಂಡಿಡಂಗಯಿ' (ಎರಡು ಬಳ್ಳ), 'ತೋಟಿಯ ಮಗ', 'ಬಾಲ್ಯಕಾಲಸಖಿ', 'ವಿಷಕನ್ನಿಕೆ', ಮುಂತಾದ ಪ್ರಸಿದ್ಧ ಕಾದಂಬರಿಗಳು ನಮಗೆ ದೊರೆತವು. ಈ ಕಾದಂಬರಿಗಳಲ್ಲೆಲ್ಲ ಬರಹಗಾರರ ಸ್ವಾನುಭವಗಳು ಯೋಗ್ಯ ಪ್ರಮಾಣದಲ್ಲಿ ಬೆರೆತಿವೆ. ದಾರಿದ್ರ್ಯವೆನ್ನುವ ಹೊಸ ಘಟಕದ ರಂಗಪ್ರವೇಶವನ್ನು ಈ ಕಾದಂಬರಿಗಳಲ್ಲಿ ಪ್ರಥಮವಾಗಿ ನಾವು ಕಾಣುತ್ತೇವೆ. ರಿಕ್ಷಾವಾಲ, ತೋಟಿ, ಕುಟ್ಟನಾಡಿನ ಹೊಲೆಯ— ಇವರಾರೂ ಈ ಮೊದಲು ಮಲಯಾಳ ಕಾದಂಬರಿಗಳಲ್ಲಿ ಗೋಚರಿಸಿಲ್ಲ. ಹೊಸ ಬದುಕಿಗಾಗಿ ಆಗ್ರಹಿಸುವ ಅಸಂತುಷ್ಟನಾದ ಕಾರ್ಮಿಕನೂ ಕೃಷಿಕನೂ ಮೆಲ್ಲಮೆಲ್ಲನೆ ಸಮಾಜದ ಮೇಲ್ನೆಲೆಗೆ ಏರಿಹೋಗುವುದರ ಸೂಚನೆಯನ್ನು ಈ ಕಾದಂಬರಿಕಾರರು ಕೊಟ್ಟಿದ್ದು. (ಇದನ್ನು ಅವರು ಈ ಮೊದಲೇ ಸಣ್ಣಕಥೆಗಳಲ್ಲಿ ನಿರೂಪಿಸಿದ್ದರು.) 'ಇಂದುಲೇಖ'ಯಿಂದ 'ರಂಡಿಡಂಗಯಿ'ಯ ವರೆಗಿನ ದೂರ, ಮಾಡಂಬ ನಾಯರರ ತರವಾಡಿನಿಂದ ಕೃಷಿಕೂಲಿಗಾರನ ಮಣ್ಣಿನ ಪರಗಿರುವ ದೂರವೇ ಆಗಿದೆ. ಬೂರ್ಷ್ವ ಜೀವನದಿಂದ ಪ್ರಾಲಿಟೇರಿಯನ್ ಜೀವನಕ್ಕೆ ಇವರ ಕಾದಂಬರಿ ಸಾಹಿತ್ಯ ಉರುಳಿ ಬಂದದ್ದು ಎಂದು ಹೀಗೆ ಹೇಳಿದ್ದರಿಂದ ಅರ್ಥಮಾಡಿಕೊಳ್ಳಬಾರದು. ಆ ಕಾದಂಬರಿಕಾರರಲ್ಲಿ ಹೆಚ್ಚು ಮಂದಿ ಮಧ್ಯಮ ವರ್ಗದವರಾಗಿದ್ದುದರಿಂದ ಸ್ವಾಭಾವಿಕವಾಗಿಯೇ ಮಧ್ಯಮವರ್ಗ ಕಾದಂಬರಿಯ ಹಿನ್ನೆಲೆಯಾಗಿ ಪ್ರತ್ಯಕ್ಷಗೊಂಡಿತ್ತು. ಅದೂ ತಗಜಿ, ಪೊಟ್ಟೆಕ್ಕಾಟ್, ಉರೂಬ್ ಮುಂತಾದವರ ಕಾದಂಬರಿಗಳಲ್ಲಿ ವಿಶೇಷವಾಗಿ. ಆದರೂ ಅವರು ಹೊಸ ಕ್ಷೇತ್ರಗಳನ್ನು, ಹೊಸ ಸಮಾಜ ಸ್ಥಿತಿಗಳನ್ನು ಕಂಡುಹಿಡಿಯಲು ನಿರಂತರ

ವಾಗಿ ಶ್ರಮಿಸಿಕೊಂಡಿದ್ದರು. ಹಾಗೆ ತಗಜಿ ಮುಕ್ಕುವರ* ಬದುಕಿನ ಕಡೆಗೆ (ಚೆಮ್ಮೀನ್) ಉರೂಬ್ ಮಲಬಾರಿನ ಮುಸ್ಲಿಮರ ಜೀವನದ ಕಡೆಗೆ (ಉಮ್ಮಾಚ್ಚು) ಪೊಟ್ಟೆಕ್ಕಾಟ್‌ರು ಕಲ್ಲಿಕೋಟೆ ನಗರದ ತಮೋಮಯವಾದ ಅಧೋಲೋಕಗಳ (ತೆರುವಿನ್ಡೆ ಕಥ) ದೃಷ್ಟಿ ಹಾಯಿಸಿದರು.

ಸಾಹಿತ್ಯ ಪ್ರಪಂಚದಲ್ಲಿ ಈ ಕಾದಂಬರಿಗಳೆಲ್ಲ ಒಂದೊಂದು ರೀತಿಯಲ್ಲಿ ಪರಿವರ್ತನೆಯ ಘಟನೆಗಳಿಗೊಳಗಾದುವು ಎಂದು ಹೇಳಬಹುದು. ಕಾದಂಬರಿಕಾರನಿಗೆ ಅವಶ್ಯವಿರಬೇಕಾದದ್ದು ಎರಡು ದೃಷ್ಟಿಯೆಂದು ಹೇಳಬಹುದು. ಒಂದು ಲೌಕಿಕವಾದ ದೃಷ್ಟಿ: ಮತ್ತೊಂದು ದಾರ್ಶನಿಕವಾದ ದೃಷ್ಟಿ. ಮೇಲೆ ಹೇಳಿದ ಕಾದಂಬರಿಗಳಲ್ಲಿ ಈ ಎರಡು ದೃಷ್ಟಿಗಳೂ ಬಹು ಸೂಕ್ಷ್ಮವೂ ನಿಶಿತವೂ ಆಗಿರುವುದನ್ನು ಕಾಣಬಹುದು. ತಗಜಿಯ 'ಚೆಮ್ಮೀನ್' ಮುಕ್ಕುವರ ಜೀವನವನ್ನು ಕುರಿತಾದ ಒಂದು ಡಾಕ್ಯುಮೆಂಟರಿ ಚಿತ್ರೀಕರಣವೇನಲ್ಲ. ಅವರ ಜೀವನದ ಎಷ್ಟೋ ಮುಖಗಳನ್ನು ಆತ ಕೈಬಿಟ್ಟಿರುವುದುಂಟು. ಅದೊಂದು ತುಂಬ ಪ್ರಧಾನವಾದದ್ದೇನಲ್ಲ. 'ಚೆಮ್ಮೀನ್' ಮುಕ್ಕುವನ ದರ್ಶನ ಸಂಗ್ರಹವೆಂದು ನಮ್ಮನ್ನು ನಂಬಿಸಲು ತಗಜಿಗೆ ಸಾಧ್ಯವಾಯಿತು. ಅದೇ ಆ ಕಾದಂಬರಿ ಸಾಧಿಸಿದ ವಿಜಯ. ನಾನು ಹೆಸರೆತ್ತಿ ಹೇಳಿದ ಇತರ ಎರಡು ಕಾದಂಬರಿಗಳನ್ನು ಕುರಿತೂ ಇದನ್ನೇ ಹೇಳಬಹುದು. ಉರೂಬಿನ 'ಸುಂದರಿಗಳುಂ ಸುಂದರನ್ಮಾರುಂ' ಎನ್ನುವ ಕೃತಿಯಲ್ಲಿ ಡಾಕ್ಯುಮೆಂಟರಿ ಸ್ವಭಾವ ಸ್ಪಷ್ಟವಾಗಿದೆ. ಮಲಬಾರಿನ ಮಾಪಿಳ್ಳೆ ಲೂಟಿಯ ಹಿನ್ನೆಲೆಯಲ್ಲಿ ಅಲ್ಲಿಯ ಜನಜೀವನ ಹೇಗೆ ತಲೆಕೆಳಗಾಯಿತು ಎನ್ನುವುದನ್ನೂ ಅದರಿಂದ ಎಷ್ಟು ಕುಟುಂಬಗಳು ಶೈಥಿಲ್ಯಕ್ಕೊಳಗಾದುವು. ಎಷ್ಟು ಜನರು ಮತಾಂತರ ಹೊಂದಿ ಹೊಸ ಜೀವನವನ್ನಾರಂಭಿಸಿದರು ಎನ್ನುವುದನ್ನೂ ಉರೂಬ್ ಚಿತ್ರೀಕರಿಸಿದ್ದಾರೆ. ಮೂರು ನಾಲ್ಕು ತಲೆಮಾರುಗಳ ಕಥೆಯ ಸೂತ್ರ ಕಿತ್ತುಹೋಗದಂತೆ ಗಂಟುಹಾಕದಂತೆ. ಮನುಷ್ಯತ್ವದ ಮಾಧುರ್ಯದೊಡನೆ. ಆತ ಅದನ್ನು ವಿವರಿಸಿದರು. ಉರೂಬ್ ಅವರ ಈ ಕಾದಂಬರಿ ಸ್ವಾತಂತ್ರ್ಯದ ನಂತರ ಬಂದ ಒಳ್ಳೆಯ ಸಾಹಿತ್ಯಕೃತಿಯಾಗಿ ಸಾಹಿತ್ಯ ಅಕಾಡೆಮಿಯ ಬಹುಮಾನವನ್ನು ಪಡೆಯಿತು ಎನ್ನುವುದರಲ್ಲಿ ಆಶ್ಚರ್ಯವಿಲ್ಲ.

ಸ್ವಾತಂತ್ರ್ಯ ದೊರೆಯುವುದಕ್ಕೆ ಮೊದಲೇ ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಪಡೆದಿದ್ದವರ ಕಥೆಯನ್ನು ಈ ಮೊದಲು ಹೇಳಿದ್ದು. ಸ್ವಾತಂತ್ರ್ಯದ ನಂತರ ಮಾತ್ರ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ ಒಂದು ಹೊಸ ತಲೆಮಾರಿದೆ. ಕಾದಂಬರಿ ಪ್ರಪಂಚದಲ್ಲಿ ಮಹತ್ವವುಳ್ಳ ಕೆಲವರು ಸಿನೆಮಾ ನಟರಂತೆ ತಾರಾಮೌಲ್ಯ (Star value) ವುಳ್ಳ ಈ ಕಾಲದ ಬರಹಗಾರರು ಈ ಗುಂಪಿಗೆ ಸೇರುತ್ತಾರೆಂದು ಹೇಳಬಹುದು. ಎಂ. ಟಿ.

---

* ಬೆಸ್ತರು.

ವಾಸುದೇವನ್ ನಾಯರ್, ಪಾರಪ್ಪುರಂ (ಮಥಾಯ್), ಕೆ. ಸುರೇಂದ್ರನ್, ಪುಲಯೂಟ್ಟೂರ್ ರಾಮಕೃಷ್ಣನ್, ವಿಲಾಸಿನಿ (ಎಂ. ಕೆ. ಮೆನನ್), ಜಿ. ವಿವೇಕಾನಂದನ್, ಒ. ವಿ. ವಿಜಯನ್, ಕಾಕನಾಡನ್, ಮುಕುಂದನ್ ಇವರನ್ನೇ ನಾನು ಭಾವಿಸಿರುವುದು. ಮಲಯಾಳದಲ್ಲಿ ಇಪ್ಪತ್ತು ಒಳ್ಳೆಯ ಕಾದಂಬರಿಯ ಒಂದು ಪಟ್ಟಿಯನ್ನು ತಯಾರಿಸಬೇಕಿದ್ದರೆ ಬಹುಶಃ ಅದರಲ್ಲಿ ಹೆಚ್ಚು ಪಾಲುಗೊಳ್ಳುವ ಕೃತಿಗಳು ಮೇಲೆ ಹೇಳಿದ ಕರ್ತೃಗಳ ಕೃತಿಗಳು ಎನ್ನುವುದು ನನ್ನ ನಂಬಿಕೆ. ಮತ್ತೊಂದು ರೀತಿಯಲ್ಲಿ ಹೇಳುವುದಾದರೆ 'ಇಂದುಲೇಖ'ದಿಂದ ಪ್ರಾರಂಭಿಸಿ ಸುಮಾರು 60–70 ವರ್ಷಗಳಲ್ಲಿ ನಮಗೆ ಲಭಿಸಿದ ಮೂಲ ಸಾಧನೆಗಳಾದ ಕಾದಂಬರಿಗಳು ಕಳೆದ ಹನ್ನೆರಡು ವರ್ಷಗಳಲ್ಲಿ ನಮಗೆ ದೊರೆತುವು ಎಂದರ್ಥ. ಇದರಲ್ಲಿ ಒಬ್ಬೊಬ್ಬ ಬರಹಗಾರನನ್ನು ಕುರಿತು ವಿವರಿಸಲು ಹೋಗುವುದಿಲ್ಲ. ಕೆಲವು ಮುನ್ನಡೆಗಳನ್ನು ಮಾತ್ರ ಇಲ್ಲಿ ನಿರ್ದೇಶಿಸಲಾಗುತ್ತದೆ, ಅಷ್ಟೆ.

ಎರಡನೆಯ ಮಹಾಯುದ್ಧದಿಂದಾಗಿ ಎಷ್ಟೋ ಮಂದಿ ಸೈನ್ಯಕ್ಕೆ ಸೇರಬೇಕಾಗಿ ಬಂದಿತಷ್ಟೆ. ಅವರಿಂದ ಸಾಹಿತ್ಯಕ್ಕೆ ಏನಾದರೂ ಲಾಭ ದೊರೆತೀತೆಂದು ಯಾರೂ ನಿರೀಕ್ಷಿಸಿರಲಿಲ್ಲ. ಆದರೆ ಅದೊಂದು ಅದ್ಭುತವೆಂದೇ ಹೇಳಬೇಕು. ಆ ಸೈನ್ಯಶಿಬಿರಗಳಿಂದ ಅಪೂರ್ವ ಸುಂದರವಾದ ಕೆಲವು ರಚನೆಗಳು ಹೊರ ಬರತೊಡಗಿದವು. ಮೊದಲು ಸಣ್ಣ ಕತೆಗಳಾಗಿ, ಅನಂತರ ಕಾದಂಬರಿಗಳಾಗಿ. ಈ ದಿಕ್ಕಿನಲ್ಲಿ ನಂದನಾರ್, ಕೋವಿಲನ್, ಪಾರಪ್ಪುರಂ ಇವರು ಪ್ರಮುಖರು. ಕೋವಿಲನ್ ಮತ್ತು ನಂದನಾರ್ ಗಡಸು ಶೈಲಿಯಲ್ಲೂ ಪಾರಪ್ಪುರಂ ಸ್ವಲ್ಪ ಮಟ್ಟಿಗೆ ವೈನೋದಿಕವಾಗಿಯೂ, ಸರಳವಾಗಿಯೂ ವಿವರಿಸಿದ್ದಾರೆ. ಒಂದು ಶೈಲಿ ಕಾಕಿ ಬಟ್ಟೆಯಂತೆ ಮತ್ತೊಂದು ನೊರೆ ಬರುತ್ತಿರುವ ಬಿಯರ್‌ನಂತೆ. ಸೈನಿಕಜೀವನದ ಕತೆಗಳನ್ನು ಬರೆದಾಗ ಒಂದು ಹೊಸ ದಿಗಂತ ನಮ್ಮೆದುರಿಗೆ ಪ್ರತ್ಯಕ್ಷವಾದಂತೆ ತೋರಿತು. ವೇದನೆಯನ್ನು ಅನುಭವಿಸಿದ ಮನುಷ್ಯರನ್ನು ವೇದನೆಗೊಳಗುಮಾಡುವುದರಲ್ಲಿ ಪರಮಾನಂದವನ್ನು ಅನುಭವಿಸುವ ಸಮರ ಮೇಧಾವಿಗಳು, ಉಸಿರುಕಟ್ಟಿಸುವಂಥ ಪಾರತಂತ್ರ್ಯ, ಇವೆಲ್ಲಾ ಒಂದು ಕಡೆಯಲ್ಲಿ. ಮತ್ತೊಂದು ಕಡೆಯಲ್ಲಿ ಕರುಣಾಜನಕವಾದ ಮನುಷ್ಯತ್ವ. ದೀನಾನುಕಂಪವನ್ನುಂಟು ಮಾಡುವ ಮಧುರಸ್ನೇಹದ ಅಮೃತಧಾರೆ ಇವುಗಳನ್ನು ಕತೆಗಾರರು ಬರೆದದ್ದು. ಅವರು ಬರೆದದ್ದೆಲ್ಲಾ ಸೈನಿಕ ಕಥೆಗಳಲ್ಲ. ಇಂದು ಅವರೆಲ್ಲರೂ ನಿವೃತ್ತರಾಗಿ ಗ್ರಾಮಜೀವನದೊಂದಿಗೆ ಬೆರೆತು ಬದುಕನ್ನು ಸಾಗಿಸುತ್ತಿರುವವರು. ಪಾರಪ್ಪುರಂ ಅವರ ಅತ್ಯಂತ ಪರಿಗಣನೀಯವಾದ ಕಾದಂಬರಿ—"ಅರ ನಾಳಿಗ ನೇರಂ" ಸೈನಿಕರ ಕಥೆಯೇ ಅಲ್ಲ. ಸಂಕೀರ್ಣವಾದ ಒಂದು ಕುಟುಂಬದ ಕಥೆ. ಜೀವನದ ಆದಾಯ ವೆಚ್ಚಗಳನ್ನು ಲೆಕ್ಕಾಚಾರದ ಆಧಾರದ ಮೇಲೆ ಗಣಿಸುವ ಕೆಲವು ಮನುಷ್ಯರು ಪ್ರೀತಿಯ ಸೂತ್ರಗಳನ್ನು ಕಿತ್ತುಹಾಕಿ ನಾಶಪಡಿಸುವ ಚಿತ್ರಗಳನ್ನು ಅದರಲ್ಲಿ ಕಾಣಬಹುದು. ಓದುಗರು ಕುತೂಹಲ

ದಿಂದ ಕಣ್ಣರಳಿಸಿಕೊಂಡು ನೋಡುವ ಒಬ್ಬ ಕಾದಂಬರಿಕಾರ ಎಂ. ಟಿ. ವಾಸುದೇವನ್ ನಾಯರ್. ಕೈಚಳಕವುಳ್ಳ ಐಂದ್ರಜಾಲಿಕನಂತೆ ಎಂ. ಟಿ. ಪ್ರತಿಯೊಂದರಲ್ಲಿಯೂ ಹೊಸ ಹೊಸ ಪ್ರಯೋಗಗಳನ್ನು ನಡೆಸಿರುವುದನ್ನು ಓದುಗರು ಊಹಿಸಬಲ್ಲರು. ಬಾಲ್ಯಕಾಲ ಜೀವನದ ದುಸ್ಸಹನೀಯವಾದ ಸಂಕಟಗಳೂ ಅಸಂತೃಪ್ತವಾದ ಅಭಿಲಾಷೆಗಳ ಮೂಲಕ ನಿಟ್ಟುಸಿರು ಬಿಡುವುದೂ ಎಂ. ಟಿ.ಯ ಕಾದಂಬರಿಗಳ ಮುಖ್ಯ ವಿಷಯ. ಸಮಾಜವನ್ನೂ ಅಂಗೀಕೃತ ಮರ್ಯಾದೆಗಳನ್ನೂ ಧಿಕ್ಕರಿಸುವ ಗಂಭೀರಪ್ರವೃತ್ತಿಯ ಕೆಲವು ಯುವಕರು ಉಳಿದ ಕಾದಂಬರಿಗಳಲ್ಲೂ ಕಂಡುಬರಬಹುದು. ಅವರು ಎಂ. ಟಿ.ಯ ಪ್ರತಿರೂಪವೂ ಆಗಿರಬಹುದು. ಕಾದಂಬರಿಯನ್ನು ಭಾವುಕತೆಯ ಸೌಕುಮಾರ್ಯದ ಕಡೆಗೂ ಚಲನ ಚಿತ್ರದ ಚಟುಲತೆಯ ಕಡೆಗೂ ನಡೆಸಿದ ಒಬ್ಬ ಪ್ರತಿಭಾಶಾಲಿ ಎಂ. ಟಿ. (ಪ್ರಧಾನ ಕೃತಿಗಳು —ನಾಲುಕೆಟ್ಟು, ಅಸುರವಿತ್ತು, ಮಂಜು, ಕಾಲಂ). ಕಾದಂಬರಿಯನ್ನು ಒಂದು ಚಿತ್ತಾಕರ್ಷಕ ಸಂವಾದವನ್ನು ತಂದು ಪರಿವರ್ತಿಸಿದ ಒಬ್ಬ ಬರಹಗಾರ ಕೆ. ಸುರೇಂದ್ರನ್. ಸಮಾಜ, ಪ್ರೇಮ, ವಿವಾಹ, ಪತ್ರಿಕಾವ್ಯವಸಾಯ, ರಾಜಕೀಯ, ಸಾಹಿತ್ಯ, ಸಂಗೀತ—ಇವೆಲ್ಲವುಗಳನ್ನೂ ಕುರಿತಾದ ಸರಸ ಚರ್ಚೆಗಳ ಮೂಲಕ ಸುರೇಂದ್ರ ಅವರ ಕಾದಂಬರಿಗಳು ಪುರೋಗಮಿಸುತ್ತಿರುವುದು. ಇವರ ಮಧ್ಯೆ ಸುಸ್ಪಷ್ಟವಾದ ಕಥಾಪಾತ್ರಗಳೂ ಉದ್ವೇಗವನ್ನುಂಟುಮಾಡುವ ಘಟನೆಗಳೂ ಉಂಟು. ಜಿ. ವಿವೇಕಾನಂದನ್. ಮಲಯಾಟ್ಟೂರ್ ರಾಮಕೃಷ್ಣನ್ ಅವರು ಜನಪ್ರಿಯ ಕಾದಂಬರಿಕಾರರು. ಬಡಜನರ, ದೀನರ ಬದುಕನ್ನು ಪ್ರತಿಬಿಂಬಿಸುವುದರಲ್ಲಿ ವಿವೇಕಾನಂದನ್ ಒಬ್ಬ ಪ್ರಾಮಾಣಿಕ ವ್ಯಕ್ತಿ. 'ಕಳ್ಳು', 'ಕಳ್ಳಿಚೆಲ್ಲಮ್ಮ'ನ ಮೂಲಕ ಗ್ರಾಮಜೀವನದ ಕಡೆಗೆ ಸ್ಪಾಟ್‌ಲೈಟನ್ನು ಬಿಟ್ಟು ನೋಡುವುದು. ಆಶೆಗಿಂತ ಹೆಚ್ಚಾಗಿ ನಿರಾಶೆಯನ್ನು ಹೊರಹೊಮ್ಮಿಸುವ ದೌರ್ಭಾಗ್ಯಶಾಲಿಗಳಾದ ನಮ್ಮ ಗ್ರಾಮಗಳು—ತೇಜೋಹೀನವಾದ ನೆಳಲುಗಳಾಗಿ ಜೀವಿಸುವ ಮನುಷ್ಯರು—ಇವುಗಳು ನಮ್ಮ ಸ್ಮೃತಿಯಲ್ಲಿ ಶಾಶ್ವತವಾಗಿ ನಿಲ್ಲುತ್ತವೆ. ರಾಮಕೃಷ್ಣನ್ ಅಮೂಲ್ಯ ಸಿದ್ಧಿ ಗಳಿಸಿರುವ ಒಬ್ಬ ಬರಹಗಾರರು. ಮನಶ್ಶಾಸ್ತ್ರ, ರಾಜಕೀಯ ವಿಡಂಬನೆ, ಸಾಮಾಜಿಕ ಚಿತ್ರಗಳು, ಅಪರಾಧ ಅನ್ವೇಷಣೆ, ಇವುಗಳನ್ನೆಲ್ಲ ವಿದಗ್ಧತೆಯಿಂದ ಅಳವಡಿಸಿದ್ದಾರೆ. ವಿಲಾಸಿನಿ (ಎಂ. ಕೆ. ಮೆನನ್) ಒಬ್ಬ ಮಲೇಶ್ಯ ಮಲಯಾಳಿ. ಆ ವೈಶಿಷ್ಟ್ಯವನ್ನು ಪ್ರತಿಬಿಂಬಿಸುವುದಕ್ಕಾಗಿಯೇ ಅವರ ಮೊದಲನೆಯ ಕಾದಂಬರಿ ಹೊರ ಬಂದದ್ದು. ಕವಿತಾಮಯವಾದ ಶೈಲಿಯಲ್ಲಿ ವಿಶದಾಂಶಗಳಿಗೆ ವಿದಗ್ಧ ದೃಷ್ಟಿಯನ್ನು ಹಾಯಿಸಿಕೊಂಡು ಯಾವ ಕಡೆಯೂ ಇಲ್ಲದೆ ಸರಾಗವಾಗಿ ಮುಂದುವರೆಯುವ ಕಥೆ—ಅದನ್ನು ಹೇಳುವ ನೈಪುಣ್ಯ, ಆ ಕಾದಂಬರಿಯಲ್ಲಿ ಪ್ರತ್ಯಕ್ಷಗೊಂಡಿದೆ.

ಪ್ರತಿಭಾವಂತನಾದ ಒಬ್ಬ ಕಾರ್ಟೂನಿಸ್ಟ್ ಎಂದು ಭಾರತದಲ್ಲೆಲ್ಲ ಅಂಗೀಕೃತನಾದ ಒ. ವಿ. ವಿಜಯನ್, 'ಕಸಾಕಿನ್ಟೆ ಇತಿಹಾಸಂ' ಎನ್ನುವ ಅಪೂರ್ವ ರೂಪವಾದ ಕಾದಂಬರಿಯ ಮೂಲಕ ರಂಗವನ್ನು ಪ್ರವೇಶಿಸಿದಾಗ ಸಾಹಿತ್ಯದಲ್ಲಿ ಅದೊಂದು ಚರ್ಚಾ ವಿಷಯ

ವಾಯಿತು. ಮಲಯಾಳ ಕಾದಂಬರಿಯಲ್ಲಿ ಯುರೋಪ್ ಸಾಹಿತ್ಯದಲ್ಲಿಯ ಹೊಸ ದಾರ್ಶನಿಕ ಹತ್ತಿರಕ್ಕೆ ತಲಪಿದ ಮೊದಲನೆಯ ಕಾದಂಬರಿ ಬರಹಗಾರ. ವಿಜಯನೆಂದು ಹೇಳಬಹುದು. ಪ್ರತ್ಯಕ್ಷವಾಗಿ, ಅಕಾರಣವಾಗಿ, ಯಥಾರ್ಥದಲ್ಲಿ ಆತ್ಮಗತವೂ ಆದ ಜೀವನಯಾತ್ರೆಯನ್ನು ಆತ ಚಿತ್ರೀಕರಿಸುವುದು. ಪರ್ವತದ ತಪ್ಪಲಿನ ಒಂದು ಹಳ್ಳಿಯಲ್ಲಿ ವಾರ್ಡಿಯ ವೆಸ್ಕ್ಯ ಅಂತಿರುವ ಒಂದು ಗ್ರಾಮ ಕಸಾಕ್. ಎಷ್ಟೋ ಮನುಷ್ಯರ ನಡುವೆ ಕಥಾನಾಯಕ ಬಂದು ಸೇರುವುದು ಹೊರನೋಟಕ್ಕೆ ರಿಯಲಿಸ್ಟಿಕ್ ಎಂದು ತೋರುವು ದಿದ್ದರೂ ನಿಜವಾಗಿ ಪ್ರತಿರೂಪಾತ್ಮಕವಾದ ಒಂದು ಸತ್ಯಕಥೆ ಇದು.

ಒಂದು ಕಾಲದಲ್ಲಿ ಮಲಯಾಳ ಸಾಹಿತ್ಯದಲ್ಲಿ ದುರ್ಬಲ ಶಾಖೆಗಳಲ್ಲೊಂದಾ ಗಿತ್ತು, ಕಾದಂಬರಿಶಾಖೆ. ಇಂದು ಸತ್ವಪೂರ್ಣವಾದ ಒಂದು ಶಾಖೆಯಾಗಿ ಪರಿವರ್ತನೆ ಹೊಂದಿತು ಎಂದು ಈ ಸಂಕ್ಷಿಪ್ತ ಚರಿತ್ರೆಯಿಂದ ತಿಳಿಯಬಹುದಾಗಿದೆ.

## ತಗಳಿಯೂ ಏಣಿಪ್ಪಡಿಗಳೂ (ಏಣಿಮೆಟ್ಟಿಲುಗಳು)

ತಗಳಿ 'ಚೆಮ್ಮೀನ್' (1956) ಎನ್ನುವ ಕಾದಂಬರಿಯ ಮೂಲಕ ಅಂತರ ರಾಷ್ಟ್ರೀಯ ಪ್ರಸಿದ್ಧಿಯನ್ನು ಪಡೆದರು. ಒಬ್ಬ ಶುದ್ಧ ರಿಯಲಿಸ್ಟ್ ಎಂದು ತಿಳಿದು ಬರುವ ತಗಳಿಯ ಒಂದು ಕಾವ್ಯ ಸುಂದರವಾದ ರೊಮ್ಯಾಂಟಿಕ್ ಕಥೆಯೊಂದು ಇಷ್ಟೊಂದು ಪ್ರಸಿದ್ಧಿಯನ್ನು ಪಡೆಯಿತು ಎನ್ನುವುದನ್ನು ನೆನೆಸಿಕೊಂಡಾಗ ಆಹ್ಲಾದ ವುಂಟಾಗುತ್ತದೆ. 'ಏಣಿಪ್ಪಡಿಗಳ್' ತಗಳಿಯ ಹದಿಮೂರನೆ ಕಾದಂಬರಿ (1964). ಬಡಜನರ ಜೀವನವನ್ನು ಚಿತ್ರೀಕರಿಸಿ ಪಳಗಿದ ತಗಳಿಯ ಕೈ ಈ ಸಲ ಬ್ಯೂರೋಕ್ರಸಿಯ ಲೋಕಕ್ಕೆ ಪ್ರವೇಶಿಸಿತು. ತಗಳಿಗೆ ಇಲ್ಲಿಯೂ ದೊಡ್ಡ ಅನಾಯತವೇನೂ ಉಂಟಾಗಿಲ್ಲ. ತಿರುವನಂತಪುರದ—ಒಂದು ವೇಳೆ ಯಾವುದೇ ನಗರದ—ಉದ್ಯೋಗ ವಲಯದ ಸ್ಫುಟಿಕಸ್ಫುಟವಾದ ಒಂದು ಚಿತ್ರವನ್ನು ಇದರಲ್ಲಿ ಕಾಣಬಹುದು. ಅಸೂಯೆಯೂ ಅಹಂಭಾವವೂ ಸ್ವಾರ್ಥಸಾಧನೆಯ ವಿಷಯವೂ ಸುರುಳಿಯಾಗಿ ಉರುಳುವ ಒಂದು ವಿಶಿಷ್ಟ ಪ್ರಪಂಚ ಅದು. ಆ ಪ್ರಪಂಚಕ್ಕೆ ಶುದ್ಧ ಹಳ್ಳಿಗಾಡಿನವನಾದ ಕೇಶವ ಪಿಳ್ಳೆ ಬಿ. ಎ. ಪದವೀಧರನಾಗಿ ಪ್ರವೇಶಿಸಿ ಪಡಬಾರದ ಪಾಡುಪಟ್ಟು ಉದ್ಯೋಗವನ್ನು ಪಡೆದ. ಪ್ರತಿಯೊಂದು ಹೆಜ್ಜೆಯಲ್ಲೂ ಆತ ಶಕ್ತನಾಗಿ ಮುನ್ನುಗ್ಗಿದ. ಮೆಟ್ಟಿಲು ಮೆಟ್ಟಿಲಾಗಿ ಮೇಲೇರಿ ಚೀಫ್ ಸೆಕ್ರೆಟರಿಯಾದ. ಕಾಲಕ್ಕೆ ತಕ್ಕಂತೆ ವೇಶ ಹಾಕುವ ರಾಜ ಕಾರಣಿಯೂ ಯಾವ ರಾಜಕಾರಣಿಯನ್ನೂ ಥಟ್ಟನೆ ವಶಪಡಿಸಿಕೊಳ್ಳುವ ಉದ್ಯೋ ಗಸ್ಥನೂ ನಮ್ಮ ಕಾಲಘಟ್ಟದಲ್ಲಿ ಹೊಸದಾದ ವರ್ಗಗಳು. ಕೇಶವ ಪಿಳ್ಳೆ ಈ ಹೊಸತನ ಗಳುಳ್ಳ ಒಬ್ಬ ಮಾದರಿ ಪುರುಷನಾಗಿದ್ದಾನೆ. ಮೇಲೇರಿದ ಅನಂತರ ಏರಿಹೋಗಲು ಉಪಯೋಗಿಸಿದ 'ಏಣಿ'ಯನ್ನು ತಾನಾಗಿ ಬೀಳಿಸುವ ಒಂದು ಬಗೆಯುಂಟು. ಕೇಶವ ಪಿಳ್ಳೆ ಅಂಥವರಲ್ಲಿ ಒಬ್ಬ. ತನಗೆ ದೊರೆತ ಪ್ರತಿಯೊಬ್ಬ ವ್ಯಕ್ತಿಯನ್ನೂ ಬಹಳ ಚೆನ್ನಾಗಿ

ಉಪಯೋಗಿಸಿಕೊಂಡ. ಕಾರ್ಯ ಕೈಗೂಡಿದ ಮೇಲೆ ಅವರನ್ನೆಲ್ಲ ಯಾವ ಸಂಕೋಚವೂ ಇಲ್ಲದೆ, ಯಾವ ಉದ್ವೇಗಕ್ಕೂ ಒಳಗಾಗದೆ, ಯಾವ ಮಮತೆಯನ್ನೂ ತೋರಿಸದೆ ಆತ ನಿರ್ದಯವಾಗಿ ದೂರ ತಳ್ಳಿದ. ಪತ್ನಿ, ಸ್ನೇಹಿತೆ, ತಂದೆತಾಯಿಗಳು, ಸ್ನೇಹಿತರು ಎಲ್ಲರೂ ಅವನಿಗೆ ಉಪಕರಣಗಳು ಅಷ್ಟೆ. ಯಂತ್ರದ ಹಾಗೆ ನಡೆದುಕೊಳ್ಳಲು ಆತನಿಗೆ ಗೊತ್ತು. ಮನಸ್ಸಾಕ್ಷಿಯ ತೊಂದರೆಯೇ ಆತನಿಗಿಲ್ಲ.

ಕೇಶವ ಪಿಳ್ಳೆಯ ಮತ್ತೊಂದು ಅಂಗ ಅವನ ಪತ್ನಿ—ಶುದ್ಧ ಹಳ್ಳಿಗಾಡಿನವಳಾದ ಕಾತ್ಯಾಯಿನಿ—ವಿದ್ಯಾವತಿಯಲ್ಲದ ಅವಳು ವಿದ್ಯಾವಂತರಾದ ವಿಷ್ಟೋ ಮಂದಿಗಿಂತ ಪ್ರಾಪಂಚಿಕ ಜ್ಞಾನವುಳ್ಳವಳು. ಯಾವ ಸಂದರ್ಭಕ್ಕೂ ಅವಳು ಹೊಂದಿಕೊಳ್ಳಬಲ್ಲಳು. ಈ ಕಾದಂಬರಿಯ ಮನೋಹರ ಪಾತ್ರಗಳ ಸೃಷ್ಟಿಯಲ್ಲಿ ಕಾತ್ಯಾಯಿನಿಯ ಪಾತ್ರ ಸೃಷ್ಟಿಯೂ ಒಂದು, ಅವಳ ಪಾತ್ರಸೃಷ್ಟಿಯಲ್ಲಿ ಟಾಲ್‌ಸ್ಟಾಯ್ ಅವರ ಸರಳತೆಯಿದೆ. ಏಣಿಮೆಟ್ಟಿಲುಗಳ ಕಥಾವಸ್ತು ಏಕಕಾಲದಲ್ಲಿ ರಾಜಕೀಯವೂ ಹೌದು, ಸಾಮಾಜಿಕವೂ ಹೌದು. ತಿರುವಾಂಕೂರಿನ ಪ್ರಜೆಗಳ ಆಳ್ವಿಕೆಯ ಕ್ರಾಂತಿಯಿಂದ ಹಿಡಿದು ಕೇರಳದಲ್ಲಿ ಕಮ್ಯುನಿಸ್ಟ್ ಆಳ್ವಿಕೆಯ ವರೆಗೆ ವ್ಯಾಪಿಸಿದ ಇಪ್ಪತ್ತೈದು ವರ್ಷಗಳ ಕಥೆ. ಘಟನಾ ಬಾಹುಳ್ಯವೂ ಪರಿವರ್ತನಾಪ್ರಾಧಾನ್ಯವೂ ನಿರ್ಣಾಯಕವೂ ಆದ ಇಪ್ಪತ್ತೈದು ವರ್ಷಗಳು ಸಹಜವೋ ಎನ್ನುವ ರೀತಿಯಲ್ಲಿ ಆ ಕಥೆಯನ್ನು ಹೇಳಿದ್ದಾರೆ ತಗಜಿ. ಪತ್ರಿಕಾ ವರದಿಗಳೋ ಎನ್ನುವ ದೋಷವನ್ನು ಉಂಟುಮಾಡಬಾರದೆಂಬ ಭಾವನೆ ಗ್ರಂಥಕರ್ತೃವಿಗಿದ್ದರೂ ಸಂಕ್ಷಿಪ್ತವಾಗಿ ಕೆಲವು ಕಡೆಗಳಲ್ಲಿ ಕೈಬಿಡಲು ಸಾಧ್ಯವಾಗಿಲ್ಲ. ಆದರೂ ಒಂದು ಸಮಾಧಾನವಿದೆ. ಕೇಶವ ಪಿಳ್ಳೆ ಎನ್ನುವ ಕೇಂದ್ರ ಕಥಾಪಾತ್ರದ ಜೀವನವಾಹಿನಿಯೊಂದಿಗೆ ಬೆರೆತ ಈ ರಾಜಕೀಯ ಹೋರಾಟಗಳು ಇದರಲ್ಲಿ ವರ್ಣಿತವಾಗಿರುವುದು. ಈ ಕಾದಂಬರಿಯಲ್ಲಿ ಒಬ್ಬ ನಿಸ್ಸಂಗಿಯಾದ ನಿರೀಕ್ಷಕನೆನ್ನುವ ರೀತಿಯಲ್ಲಿ ತಗಜಿ ರಾಜಕೀಯ ವಿಚಾರವನ್ನು ವಿಮರ್ಶಿಸಿರುವುದು. ಆಳ್ವಿಕೆ ದಿವಾನರದ್ದಾಗಿರಲಿ, ಕಾಂಗ್ರೆಸ್ಸಿನದಾಗಿರಲಿ, ಕಮ್ಯುನಿಸ್ಟರದಾಗಿರಲಿ ಆಡಳಿತ ಚಕ್ರ ಜಗನ್ನಾಥರ ರಥಚಕ್ರದಂತೆ ನಿರ್ದಯವಾಗಿ ಉರುಳುತ್ತದೆ. ಜನರ ಅಭೀಷ್ಟಗಳನ್ನು ತುಳಿದು ಮುಂದೆ ಸಾಗುವುದುಂಟು. ಸಂದರ್ಭಸಾಧಕರಿಗೆ ಯಾವ ವ್ಯವಸ್ಥೆಯಲ್ಲೂ ಸ್ಥಾನವುಂಟು. ಏನೂ ಅರಿಯದ ಬಡ ಜನರ ಬದುಕು ತಮ್ಮ ಸಂಕಟಗಳ ಅರ್ಜಿಯೊಂದಿಗೆ ನಡೆದು—ನಡೆದು ಮುಕ್ತಾಯಗೊಳ್ಳುತ್ತದೆ. ಗೊಗೋಲ್‌ನ 'ಡೆಡ್ ಸೋಲ್ಸ್'ಅನ್ನು ಓದಿ ಪುಷ್ಕಿನ್ "ಅಯ್ಯೋ ರಷ್ಯವೇ ! ಎಂತಹ ಭಾಗ್ಯಹೀನ ರಾಷ್ಟ್ರ" ಎಂದು ಹೇಳಿದನಷ್ಟೆ ! ಏಣಿಮೆಟ್ಟಿಲುಗಳನ್ನು ಓದಿದ ನಮ್ಮಲ್ಲೂ ನಮ್ಮ ದೇಶ ಎಂತಹ ಭಾಗ್ಯಹೀನ ದೇಶ ಎಂಬ ಉದ್ಗಾರ ಹೊರಡುತ್ತದೆ.

ತಗಜಿಯ ಮನೋವಿಶ್ಲೇಷಣಾ ನೈಪುಣ್ಯವೇ ಇದರಲ್ಲಿ ಎಣಿಕೆಗೆ ಸಿಗುವಂತಹ ಕಥಾಪಾತ್ರಗಳನ್ನು ನೆನಪಿನಲ್ಲಿಟ್ಟುಕೊಳ್ಳುವಂತೆ ಮಾಡಿರುವುದು—ಅದರಲ್ಲೂ ಮುಖ್ಯ

ಪಾತ್ರಗಳಲ್ಲಿ 'ಪಣಿಪ್ಪಡಿಗಳ್' ಕೇಶವ ಪಿಳ್ಳೆಯ ಕಥೆಯೇ ಆಗಿದ್ದರೂ ಆ ಕಥೆಯೊಂದಿಗೆ ಇಬ್ಬರು ಸ್ತ್ರೀಯರ ಕಥೆಯೂ ಬೆರತಿದೆ. ಕಾತ್ಯಾಯಿನಿಯೂ ತಂಗಮ್ಮನೂ ಒಂದೊಂದು ರೀತಿಯಲ್ಲಿ ಸಂಕೀರ್ಣ ಸ್ಫಟಿಕಗಳು. ಒಂದೊಂದು ಹೊಸ ಸಂದರ್ಭದಲ್ಲೂ ಅವರ ಕೆಲವು ಹೊಸ ಮಾರ್ಗಗಳು ನಮಗೆ ಕಂಡುಬರುತ್ತವೆ. ಕ್ಷಮಾಮೂರ್ತಿಯೂ ಸಂಯಮಶೀಲೆಯೂ ಆದ ಕಾತ್ಯಾಯಿನಿ—ತೃಪ್ತಿಗೊಳ್ಳದ ಕಾಮವೂ ಕುಂದದ ಮೋಹವೂ ಉಳ್ಳ ತಂಗಮ್ಮ. ಅವಳನ್ನು ಕೇವಲ ದುರ್ಮಾರ್ಗಾನುಸಾರಿಣಿ ಎಂದು ಕರೆಯಲು ನಾವು ಇಷ್ಟಪಡುವುದಿಲ್ಲ. ಕೇಶವ ಪಿಳ್ಳೆಯ ನಿರ್ದಯವಾದ ಅವಗಣನೆಯೇ ಅವಳನ್ನು ಕೆಟ್ಟ ಮಾರ್ಗಕ್ಕೆ ಇಳಿಯುವಂತೆ ಮಾಡಿದುದು. ಕೇಶವ ಪಿಳ್ಳೆಯ ನಿಜವಾದ ಪ್ರೀತಿ ಅವಳಿಗೆ ಒಮ್ಮೆಯೂ ದೊರೆತಿಲ್ಲ. ಕೇಶವ ಪಿಳ್ಳೆ ತನ್ನ ಆವಶ್ಯಕತೆಗೆ ಉಪಯೋಗಿಸಿಕೊಳ್ಳುವ ಒಂದು ಉಪಕರಣವಾಗಿ ಅವಳನ್ನು ಕಂಡದ್ದು. ಉದ್ದೀಪ್ತವಾದ ಕಾಮ ಹಿಡಿತಮೀರಿ ಪ್ರವಹಿಸಿದ್ದು: ಅವಳ ಮಾನಸಿಕ ಘಟನೆಯ ಯಾವುದೋ ನಿಗೂಢಶಕ್ತಿಯಿಂದಾಗಿ. ಕಾಷಾಯವಸ್ತ್ರಕ್ಕೂ ಜಪಧ್ಯಾನಗಳಿಗೂ ಒಗ್ಗದೆ ಅದು ಕೈಮೀರಿ ಹರಿಯಿತು. ಸ್ವಾಭಾವಿಕವಾದ ಒಂದು ಟ್ರಾಜಿಡಿ ಅದು.

ಅರವತ್ತು ವಯಸ್ಸು ತುಂಬಿದ ತಗಜಿ ಈಗಲೂ ಸಾಹಿತ್ಯಸೃಷ್ಟಿಯನ್ನು ಮುಂದುವರಿಸುತ್ತಿದ್ದಾರೆ. ತಾನೊಂದು ಅತ್ಯಂತ ಒಳ್ಳೆಯ ಕಾದಂಬರಿಯನ್ನು ಬರೆಯಬೇಕೆಂದು ಆತ ಆಗಾಗ ಹೇಳುತ್ತಿರುತ್ತಾರೆ. ಆ ಮಾತು ನಿಜವಾಗಲಿ ಎಂದು ನಾವು ಹಾರೈಸೋಣ.

**ಎಸ್. ಗುಪ್ತನ್ ನಾಯರ್**

# [1]

## ಮದುವೆಯ ಪ್ರಸ್ತಾಪ

ಅಮ್ಮ ನಗುಮುಖದಿಂದಲೇ ಮನೆಯ ಮೆಟ್ಟಲಿಳಿದು ಬಂದು ಹಿತ್ತಿಲಿನಲ್ಲಿ ನಡೆದು ಹೋಗುತ್ತಿದ್ದಾಳೆ. ತಂದೆ ಜಗಲಿಯ ತೆಂಕು ಮೂಲೆಯಲ್ಲಿ ಹಲ್ಲುಜ್ಜುತ್ತಾ ಇದ್ದಾರೆ. ಅಕ್ಕ ಅಡಿಗೆಯ ಮನೆಯ ಬಾಗಿಲಿನಲ್ಲಿ ನಿಂತಿದ್ದಾಳೆ. ಪಡುಮನೆಯ ನಾಣಿ ಕುಟ್ಟಿ ಎನ್ನುವ ಹೆಣ್ಣು ಆ ದಿನವೂ ಪದ್ಧತಿಯಂತೆ ಅಡಿಗೆ ಮನೆಯಲ್ಲಿ ಸಹಾಯ ಮಾಡು ತ್ತಿದ್ದಾಳೆ. ಯಾವ ವಿಶೇಷವೂ ಇದ್ದಂತಿಲ್ಲ. ತನ್ನನ್ನೇಕೆ ತಂತಿ ಕಳಿಸಿ ಬರಮಾಡಿ ಕೊಂಡದ್ದು ಎಂದು ಕೇಶವ ಪಿಳ್ಳೆ ಆಶ್ಚರ್ಯಪಟ್ಟ. ಅವನು ಕೇಳಿದ:

"ಅಮ್ಮಾ, ಯಾಕೆ ತಂತಿ ಕಳಿಸಿದ್ದು- ಅಮ್ಮನಿಗೆ ಸೌಖ್ಯವಿಲ್ಲವೋ ಏನೋ ಅಂತ ನನಗೆ ತುಂಬ ಗಾಬರಿಯಾಗಿತ್ತು."

ತನಗೇನೂ ತಿಳಿಯದವಳಂತೆ ಅಮ್ಮ ಹೇಳಿದಳು: "ಅದೇನೋ ನಂಗೊತ್ತಿಲ್ಲ. ತಂದೆ ಹತ್ರ ಕೇಳಿನೋಡು."

ಅಮ್ಮನ ಮುಖಭಾವನೆಯನ್ನು ಕಂಡಾಗ ಅಮ್ಮನಿಗೆ ವಿಷಯ ಗೊತ್ತಿದೆ ಎನ್ನು ವುದು ವ್ಯಕ್ತವಾಗುತ್ತಿತ್ತು. ಅಕ್ಕನಿಗೂ ಗೊತ್ತಿದೆ. ಅಕ್ಕನೂ ನಗುಮುಖದಿಂದಿದ್ದಾಳೆ.

ಹಲ್ಲು ತಿಕ್ಕಿ ಆದ ಮೇಲೆ ಪಪ್ಪು ಪಿಳ್ಳೆ ಕೇಶವ ಪಿಳ್ಳೆಯ ಹತ್ತಿರ ಬಂದರು.

"ನೀನು ನಿನ್ನೇನೇ ಬರಬಹುದು ಅಂದುಕೊಂಡಿದ್ದೆ."

ಕೇಶವ ಪಿಳ್ಳೆ ಅದಕ್ಕೆ ಸಮಾಧಾನಕರವಾದ ಉತ್ತರವನ್ನು ನೀಡಿದ:

"ಸೂಪರಿಂಟೆಂಡೆಂಟ್ ರಜೆ ಕೊಡಲಿಲ್ಲ. ಅವನೊಬ್ಬ ಹಿಡಿದ ಹಠದವನು. ನಾನು ಟೆಲಿಗ್ರಾಂ ತೋರಿಸಿದೆ. ಇವತ್ತು ಅರ್ಜಿ ಕೊಟ್ಟು ಅನುಮತಿ ಪಡೆಯದೇ ಬಂದದ್ದು."

ಸ್ವಲ್ಪ ಹೊತ್ತು ಯಾರೂ ಏನನ್ನೂ ಮಾತನಾಡಲಿಲ್ಲ. ಕುಟ್ಟಿಯಮ್ಮ ಗಂಡನ ಹತ್ತಿರ ಕೇಳಿದಳು: "ಅದೇನೂ ಅನ್ನೋದನ್ನ ಆ ಕಡೆ ಹೇಳಬಾರದಾ?"

ಪಪ್ಪು ಪಿಳ್ಳೆ ಹ್ಞೂಂಗುಟ್ಟಿದರು ಅಷ್ಟೆ. ಹೀಗೆ ಸ್ವಲ್ಪ ಹೊತ್ತು ಕಳೆಯಿತು.

ನಂತರ ಪಪ್ಪು ಪಿಳ್ಳೆ ಕೇಶವ ಪಿಳ್ಳೆ ಹತ್ತಿರ ಹೇಳಿದರು:

"ಈ ತಿಂಗಳು ಮುವತ್ತನೇ ತಾರೀಖು ಬೆಳಗಿನ ಐದು ಗಂಟೆಗೆ ನಿನ್ನ ಮದುವೆ ಗೊತ್ತುಮಾಡಿ ಆಗಿದೆ. ಹೆಣ್ಣು, ಕುಟ್ಟನ್ ಪಿಳ್ಳೆಯ ತಂಗಿ."

ಸ್ವಲ್ಪ ಹೊತ್ತು ಬಿಟ್ಟು ತಂದೆ ಕೇಳಿದರು:

"ತಿರುವನಂತಪುರದಿಂದ ನಿನ್ನ ಸ್ನೇಹಿತರು ಎಷ್ಟು ಜನರು ಬರಬಹುದು?"

ಕುಟ್ಟಿಯಮ್ಮ ಹೇಳಿದಳು:

"ಅದನ್ನ ಅವನು ಈಗಲೇ ಹೇಳೋದು ಹ್ಯಾಗೆ?"

ಮಗನೊಡನೆ ಆಕೆ ಹೇಳಿದರು: "ಸಿಕ್ಕಾಬಟ್ಟೆ ಜನರನ್ನು ಕರಕೊಂಡು ಬರಬೇಡಪ್ಪ. ಇವತ್ತಿಗೆ ಹದಿನೈದು ದಿನ ಇರೋದು. ಅದ್ದೂರಿಯಾಗಿ ಮಾಡೋದಕ್ಕೆ ಸಮಯ ಇಲ್ಲ."

ಪಪ್ಪು ಪಿಳ್ಳೆಗೆ ಹೆಂಡತಿ ಹೇಳಿದುದು ಸರಿ ಎನ್ನಿಸಿತು. ಜೊತೆಗೆ ಹೇಳಬೇಕಾದದ್ದು ಇನ್ನೂ ಸ್ವಲ್ಪ ಇತ್ತು.

"ಹೆಚ್ಚಿಗೆ ಜನರನ್ನು ಕರೆದುಕೊಂಡು ಬರುವುದಕ್ಕೆ ಹೋದರೆ ದಾರಿ ಖರ್ಚು ನೀನೇ ವಹಿಸಿಕೊಳ್ಳಬೇಡವಾ? ಆದ್ದರಿಂದ ಸ್ವಲ್ಪ ಜನರೇ ಸಾಕು."

ನಂತರ, ಪಪ್ಪು ಪಿಳ್ಳೆ ಮದುವೆಯ ಸಿದ್ಧತೆ ಹೇಗೆ ನಡೆಯಬೇಕು ಎನ್ನುವುದನ್ನು ವಿವರಿಸಿದರು. "ತಾಳಿ ಇಲ್ಲೇ ಮಾಡಿಸುವುದು......... ಸಾಮಾನುಗಳನ್ನು ಕೊಂಡು ಕೊಳ್ಳುವುದು......... ಅವನು ತರಬೇಕಾದದ್ದು ಒಂದು ಇನ್ನೂರು ನಿಂಬೆಹಣ್ಣು. ಹೇಗೂ ತಿರುವನಂತಪುರದಲ್ಲಿ ಒಳ್ಳೇ ನಿಂಬೆ ಸಿಗುತ್ತದಲ್ಲ. ಒಂದು ನಾಲ್ಕು ರಾತ್ಲ ಹೊಗೆಸೊಪ್ಪು—ಅಷ್ಟೆ."

ಅಮ್ಮ ಮಧ್ಯೆ ಬಾಯಿ ಹಾಕಿದಳು: "ಅಯ್ಯೋ ಅದಕ್ಕೆಲ್ಲ ಅವನ ಕೈಲಿ ಹಣ ಇದ್ದೀತಾ? ಹದಿನೈದು ರೂಪಾಯಿ ಸಂಬಳ ಅಲ್ವಾ, ಅದರಲ್ಲೇನು ಉಳಿದೀತು?"

"ಅದಕ್ಕೆ ಬೇಕಾಗೊ ಹಣ ನಾನು ಕೊಡ್ತೀನಿ."

ಕೇಶವ ಪಿಳ್ಳೆ ಪ್ರತಿಮೆಯಂತೆ ನಿಂತಿದ್ದ.

ತಂದೆ ಗಂಜಿ ಕುಡಿಯುವುದಕ್ಕೆ ಒಳಗೆ ಹೋದರು. ಅಮ್ಮ ಬಡಿಸುವುದಕ್ಕೆ ಹೋದಳು.

ತಿರುವನಂತಪುರದಲ್ಲಿ ಕೇಶವ ಪಿಳ್ಳೆ, ಒಬ್ಬಳ ಪ್ರೇಮಿಯಾಗಿದ್ದ. ಸೆಕ್ರೆಟರಿಯೇಟಿನ ರೆವಿನ್ಯೂ ಸೆಕ್ಷನ್ನಿನಲ್ಲಿ ಅವನ ಕುರ್ಚಿಗೆ ಹತ್ತಿರದ ಕುರ್ಚಿಯಲ್ಲಿ ಕುಳಿತು ಕೆಲಸ ಮಾಡುವ ತಂಗಮ್ಮ ಎನ್ನುವ ಕ್ಲಾರ್ಕಿನ ಪ್ರೇಮಿ ಅವನು.

ಅಕ್ಕ, ಗೌರಿಯಮ್ಮ ಕೇಳಿದಳು: "ನೀನು ಹಲ್ಲುಜ್ಜಿ ಆಯ್ತು?"

ಕೇಶವ ಪಿಳ್ಳೆ ಯಾಂತ್ರಿಕವಾಗಿ ಹೇಳಿದ: "ಇಲ್ಲ."

"ಬೇಗ ಹಲ್ಲು ಉಜ್ಜಿ ಗಂಜಿ ಕುಡಿ ಬಾ."

ಕೇಶವ ಪಿಳ್ಳೆಯ ಹೆಪ್ಪುಗಟ್ಟಿದ ಮನಸ್ಸಿನ ಅವಸ್ಥೆ ವ್ಯತ್ಯಾಸಗೊಳ್ಳುತ್ತಿತ್ತು.

"ನನಗೆ ಬೇಡ."

ದೃಢ ಸ್ವರದಲ್ಲಿ "ಬೇಡ" ಎಂದಂತಿತ್ತು. ಗೌರಿಯಮ್ಮ ಹೇಳಿದಳು: "ಹಾಗಾದರೆ ಕಾಫಿ ಮಾಡ್ತೀನಿ ತಾಳು."

"ಬೇಡ. ನಾನೀಗ ಹೋಗ್ಬೇಕು."

ಒಂದು ಕ್ಷಣ ಬಿಟ್ಟು ಕೇಶವ ಪಿಳ್ಳೆ ಹೇಳಿದ: "ನಾನೀಗ ಹೋಗದಿದ್ದರೆ ಕೆಲಸ ಹೋಗ್ತದೆ."

ತೀವ್ರವಾದ ಬೇಸರದಿಂದ, ಒಂದು ರೀತಿಯ ವಿರೋಧವನ್ನು ಪ್ರಕಟಿಸಿದಂತಿತ್ತು, ಅವನಾಡಿದ ಮಾತು.

ತಿರುವನಂತಪುರದಲ್ಲಿ ಅವನು ಒಬ್ಬಾಕೆಯ ಪ್ರೇಮಿಯಾಗದೆ ಇದ್ದಿದ್ದರೆ ಈ ಬೇಸರ ಮತ್ತು ವಿರೋಧ ಭಾವನೆ ಅವನಲ್ಲುಂಟಾಗುತ್ತಿತ್ತೆ? ಅವನು ಬಿ.ಎ. ಪಾಸು ಮಾಡಿದವನು. ತಂದೆ ತಾಯಿಗಳಿಗೆ, ಅಕ್ಕನಿಗೆ, ಭಾವನಿಗೆ ಎಷ್ಟೇ ಋಣಿಯಾಗಿದ್ದರೂ, ಮದುವೆಯ ವಿಷಯ ಬಂದಾಗ ಅವರು ಅವನನ್ನು ಒಂದು ಮಾತು ಕೇಳಬೇಕಾಗಿತ್ತು. ಒಂದು ವೇಳೆ ಹಾಗೆ ಕೇಳಿದ್ದಿದ್ದರೆ ಆತ ವಿರೋಧಿಸುತ್ತಿರಲಿಲ್ಲವೋ ಏನೋ! ಗೌರಿ ಯಮ್ಮನಿಗೆ ಅವನು ಪ್ರಕಟಿಸಿದ ವಿರೋಧವನ್ನು ಕಂಡು ಸಂಶಯ ಉಂಟಾಯಿತು.

ಕುಟ್ಟಿಯಮ್ಮ ಗಂಡನಿಗೆ ಗಂಜಿಯನ್ನು ಬಡಿಸಿ ಮಗನ ಹತ್ತಿರ ಬಂದಳು. ಗಂಜಿ ಕುಡಿಯಲು ಬರುವಂತೆ ಮಗನನ್ನು ಒತ್ತಾಯಿಸಿದಳು.

"ನೀನು ಗಂಜಿ ಕುಡಿದು ಎಷ್ಟು ದಿನವಾಯ್ತು? ನಿನಗೆ ನಾನು ಗಂಜಿ ಬಡಿಸಿ ಎಷ್ಟು ದಿನ ಆಯ್ತು?"

ಕೇಶವ ಪಿಳ್ಳೆ ತಾಯಿಯ ಒತ್ತಾಯಕ್ಕೆ ತಲೆಬಾಗಬೇಕಾಯಿತು. ಗಂಜಿ ಕುಡಿಯು ತ್ತಿದ್ದಾಗ, ಕುಟ್ಟಿಯಮ್ಮ ಅವನ ಹತ್ತಿರದಲ್ಲಿ ಕುಳಿತು ಆ ಮದುವೆಯ ವಿಷಯ ಮಾತಾಡಿಕೊಂಡಿದ್ದಳು.

"ಮಗಾ, ಇದು ನಮ್ಮ ಹೊಣೆಗಾರಿಕೆ. ಕುಟ್ಟನ್ ಪಿಳ್ಳೆ ಬಂದು ಈ ವಿಷಯ ನಿನ್ನ ತಂದೆ ಹತ್ರ ಹೇಳಿದರು. ನಾವು ಅದನ್ನ ಹ್ಯಾಗೆ ತಳ್ಳಿಹಾಕೋದು? ಅಕ್ಕನನ್ನೂ ಮಕ್ಕಳನ್ನೂ ನೋಡಿಕೊಳ್ಳುವ ಮನುಷ್ಯ, ಪ್ರೀತಿಯುಳ್ಳವನು. ಅವನ ತಂಗೀನೇ ಆ ಹೆಣ್ಣು. ಅಪ್ಪ ಅಮ್ಮ ಅದನ್ನು ಒಪ್ಪಿದ್ದಾಯ್ತು. ಅದರಲ್ಲಿ ಕೇಡೇನೂ ಆಗೋದಿಲ್ಲ. ನನ್ನ ಮಗನಿಗೆ ಶ್ರೇಯಸ್ಸೇ ಆಗೋದು."

ತುಂಬುಗಣ್ಣಿನಿಂದ ತಾಯಿ ಮಗನನ್ನು ಆಶೀರ್ವದಿಸಿದಳು. ಹೆಣ್ಣನ್ನು ಕುರಿತು ತಾಯಿಗೆ ಹೇಳಬೇಕಾದದ್ದು ಎಷ್ಟೋ ಇತ್ತು.

"ಏನೂ ತಿಳೀಯದ್ದು. ಪಾಪ! ಆ ಹುಡುಗೀನ ನೀನು ನೋಡಿಲ್ಲ. ಯಾವಾಗ್ಲಾದ್ರೂ ನೋಡಿದ್ದೀಯಾ? ಚಿಕ್ಕ ವಯಸ್ಸಿನಲ್ಲಿ ನೋಡಿರಬೇಕು ಅಲ್ಲವಾ? ಮತ್ತೂ ಒಂದು ಸಂಗತಿ. ನನಗೇನೋ ಸಂತೋಷ. ತಂದೆ ತಾಯಿಗಳನ್ನು ಚೆನ್ನಾಗಿ ನೋಡಿ ಕೊಳ್ಳುತ್ತಾಳೆ. ಯಾವ ರೀತಿಯ ನಿಂದೆಯೂ ಬರೋದಿಲ್ಲ. ಭೂಮಿ ಕಾಣಿ ಯಾವುದೂ ಇಲ್ಲದೇ ಇದ್ರೂ ಸಂಜೆ ಊಟಕ್ಕೆ ಪಂಚೆ ತುದೀಲಿ ನೀನು ಅಕ್ಕಿ ಗಂಟು ಹಾಕಿಕೊಂಡು ಹೋಗಬೇಕಾಗಿಲ್ಲ."

ಅಮ್ಮ ಮಾತು ನಿಲ್ಲಿಸದೆ ಮುಂದುವರೆಸಿಕೊಂಡಿದ್ದಳು. ಕೇಶವ ಪಿಳ್ಳೆ ಒಂದೇ ಒಂದು ಮಾತನ್ನೂ ಆಡದೆ ಯಾಂತ್ರಿಕವಾಗಿ ಗಂಜಿ ಕುಡಿಯುತ್ತಾ ಕುಳಿತಿದ್ದ.

ಗಂಜಿ ಕುಡಿದಾದ ಮೇಲೂ ಯಾರೊಡನೆಯೂ ಮಾತನಾಡದೆ ಎದ್ದುಹೋದ.

ಗೌರಿಯಮ್ಮ ಹೇಳಿದ ಮೇಲೆಯೇ ಪಪ್ಪು ಪಿಳ್ಳೆಗೂ ಕುಟ್ಟಿಯಮ್ಮನಿಗೂ ಕೇಶವ ಪಿಳ್ಳೆ ಹೊರಟುಹೋದ ಸುದ್ದಿ ತಿಳಿದದ್ದು. ಗೌರಿಯಮ್ಮ ತನಗುಂಟಾಗಿದ್ದ ಸಂಶಯವನ್ನು ತಾಯಿಗೆ ತಿಳಿಸಿದಳು. ತಂದೆಗೆ ತಿಳಿಸಲಿಲ್ಲ. ಮಗನೊಂದಿಗೆ ಮದುವೆಯ ಸುದ್ದಿಯನ್ನು ಮಾತನಾಡಿದ ಮೇಲೆ ಪಪ್ಪು ಪಿಳ್ಳೆ ಎಂದಿನಂತೆ ಹೊರಗೆಲ್ಲಿಯೋ ಹೋಗಿದ್ದರು.

ಕುಟ್ಟಿಯಮ್ಮನಿಗೆ ಗಾಬರಿಯಾಯಿತು.

"ಅವನು ಅಪ್ಪನ ಮುಖಕ್ಕೆ ಮಸಿ ಹಚ್ಚ್ಯಾನೇನೆ?" ಎಂದು ತಾಯಿ ಮಗಳನ್ನು ಕೇಳಿದಳು.

ಮಗಳು ಹೇಳಿದಳು: "ನನಗೆ ಗೊತ್ತಿಲ್ಲ."

ಆದರೆ ಗೌರಿಯಮ್ಮನಿಗೆ ಒಂದು ವಿಷಯ ಹೇಳುವುದಿತ್ತು.

"ಈ ಮದುವೆ ತನಗಿಷ್ಟ ಎಂದಾಗಲೀ ಇಲ್ಲ ಅಂತಲಾಗಲೀ ಒಂದೇ ಒಂದು ಮಾತನ್ನೂ ಹೇಳಿರಲಿಲ್ಲ."

ಕುಟ್ಟಿಯಮ್ಮನ ಬುದ್ಧಿ ಜಾಗೃತಗೊಂಡಿತು. "ಹಾಗಂತ ಯಾರೂ ಅವನನ್ನ ಕೇಳಲೂ ಇಲ್ಲ."

ಗೌರಿಯಮ್ಮ ಕೇಳಿದಳು:

"ಅದನ್ನ ಕೇಳಬಾರದಾಗಿತ್ತಾ?" ಎಂದು.

ಆಗ ಕುಟ್ಟಿಯಮ್ಮನ ಸಂಶಯ ಬಲವಾಯಿತು. ಅದರಿಂದಾಗಿ ನಾನಾ ರೀತಿಯ ಭಯಮಿಶ್ರಿತ ಸಂಶಯವುಂಟಾಯಿತು.

"ಹಂಗಾದರೆ ಅವನು ಮದುವೆಗೆ ಬರದೇಹೋದರೋ?"

"ಒಂದು ಪಕ್ಷ ಅವನಿಗೆ ಇನ್ನು ಮೇಲೆ ಇಲ್ಲಿಗೆ ಬರೋದೇ ಬೇಡ ಅನ್ನಿಸಿದ್ದರೋ?"

ಗೌರಿಯಮ್ಮನಿಗೆ ಹಾಗೆ ನಿರ್ಧಾರವಾಗಿ ಹೇಳಲು ಸಾಧ್ಯವಿಲ್ಲ.

"ಬಂದರೂ ಅವನಿಗೀ ಮದುವೆ ಇಷ್ಟವಿಲ್ಲ. ಅದು ಖಂಡಿತ."

ಕುಟ್ಟಿಯಮ್ಮ ನಂಬಬಹುದಾದ ಕಾರಣಗಳನ್ನು ಹುಡುಕುತ್ತಿದ್ದಳು. ಕಡೆಗೆ ಹೇಳಿದಳು: "ಅವನು ನಾಚಿಕೊಂಡು ಏನೂ ಮಾತಾಡದೆ ಹೋಗಿರಬೇಕು ಕಣೇ! ಬಾಯಿಬಿಟ್ಟು ಹೇಳೋದಕ್ಕೆ ನಾಚಿಕೆ ಆಗೋದಿಲ್ಲವಾ?"

ಗೌರಿಯಮ್ಮ ಹೇಳಿದಳು:

"ಏನಿದ್ರೂ ಮಾತು ಕೊಡುವಾಗಲಾಗಲೀ ದಿನ ನಿಶ್ಚಯ ಮಾಡುವಾಗಲಾಗಲೀ ಅವನ ಹತ್ರ ಒಂದು ಮಾತು ಕೇಳಿ ಆ ಮೇಲೆ ತೀರ್ಮಾನ ಮಾಡಿದ್ರೆ ಒಳ್ಳೇದಿತ್ತು."

ಕುಟ್ಟಿಯಮ್ಮನಿಗೂ ಆ ಅಭಿಪ್ರಾಯ ಸರಿಯೆನಿಸಿತು. ಆದರೆ ಆ ಹೊತ್ತಿನಲ್ಲಿ ಆ ವಿಷಯವನ್ನು ಯಾರೂ ಆಲೋಚಿಸಿರಲಿಲ್ಲ.

ನಾಲ್ಕೈದು ಗಂಟೆಗಳು ಕಳೆದ ಮೇಲೆ ಪಪ್ಪು ಪಿಳ್ಳೆ ಮನೆಗೆ ಹಿಂದಿರುಗಿ ಬಂದರು. ಕುಟ್ಟಿಯಮ್ಮ ಗಂಡನ ಹಾದಿಯನ್ನು ಕಾಯುತ್ತ ಕುಳಿತಿದ್ದಳು. ಮನೆ ಒಳಕ್ಕೆ

ಕಾಲಿರಿಸುವುದಕ್ಕೆ ಮೊದಲೇ ಕುಟ್ಟಿಯಮ್ಮ, ಪಪ್ಪು ಪಿಳ್ಳೆಯ ಹತ್ತಿರಕ್ಕೆ ಹೋಗಿ ಹೇಳಿದಳು:

"ಇಲ್ಲಿ ನೋಡಿ. ಎಲ್ಲ ನಿಶ್ಚಯ ಮಾಡಿ ಆಯ್ತಲ್ಲ! ಆದರೆ ಮಗ ಸಿಟ್ಟುಮಾಡಿ ಕೊಂಡು ಹೋದ."

ಪಪ್ಪು ಪಿಳ್ಳೆ ಸ್ತಬ್ಧನಾಗಿ ನಿಂತರು. ಮತ್ತೆ ಕೇಳಿದರು: "ಸಿಟ್ಟುಮಾಡಿಕೊಂಡು ಹೋದನಾ?"

"ಹ್ಞು, ಸಿಟ್ಟುಮಾಡಿಕೊಂಡೇ ಹೋದದ್ದು. ತಿರುವನಂತಪುರಕ್ಕೆ ಹೋದ."

ಪಪ್ಪು ಪಿಳ್ಳೆಯನ್ನು ಆಕ್ಷೇಪಿಸುತ್ತ ಕುಟ್ಟಿಯಮ್ಮ ಹೇಳಿದಳು:

"ಹಲಸಿನ ಹೂವನ್ನ ಸೊಂಟಕ್ಕೆ ಸಿಕ್ಕಿಸಿಕೊಂಡು ಹೋಗಬಹುದು. ಹಲಸಿನ ಹಣ್ಣು ಸೊಂಟಕ್ಕೆ ಸಿಕ್ಕಿಸಿಕೊಂಡು ಹೋಗೋದಕ್ಕಾದೀತಾ? ನಾನಾಗಲೇ ಹೇಳಿದ್ದೆ."

ಪಪ್ಪು ಪಿಳ್ಳೆಗೆ ಒಂದೂ ಅರ್ಥವಾಗದೆ ಕೇಳಿದರು:

"ಸುತ್ತಿ ಬಳಸಿ ಹೇಳದೆ ಅದೇನು ಅನ್ನೋದನ್ನ ನೇರವಾಗಿ ಹೇಳಬಾರದಾ?"

ಕುಟ್ಟಿಯಮ್ಮ ಸುಮ್ಮನಾಗಲಿಲ್ಲ. "ನನ್ನನ್ನ ಯಾಕೆ ಹಾಗೆ ತಿನ್ನೋದಕ್ಕೆ ಬರ್ತೀರಿ? ಇದೇ ನಿಮ್ಮದು ಯಾವಾಗಲೂ."

ಪಪ್ಪು ಪಿಳ್ಳೆ ಕೇಳಿದರು: "ಏನಾಯ್ತೀಗ?"

"ಮಗ ಜಗಳಾಡಿಕೊಂಡು ಹೋದ."

"ಯಾಕೆ?"

"ಮದುವೆ ನಿಶ್ಚಯಿಸುವಾಗ, ಮಾತುಕೊಡುವಾಗ ಅವನ ಹತ್ರ ಒಂದು ಮಾತು ಕೇಳಬಾರದಾಗಿತ್ತಾ ಅಂತ."

ಪಪ್ಪು ಪಿಳ್ಳೆಯ ತಲೆಯಲ್ಲಿ ಮಿಣುಕು ಹುಳ ಸಂಚರಿಸಿದಂತಾಯಿತು.

"ಈ ಮದುವೆ ಇಷ್ಟವಿಲ್ಲ ಅಂತ ಹೇಳಿ ಹೋದನಾ?"

"ಹಾಗಂತ ಏನೂ ಹೇಳಲಿಲ್ಲ. ಸುಳ್ಳು ಯಾಕೆ ಹೇಳಲಿ? ಅಂತು ಅವನು ಹೊರಟುಹೋದ. ಅದನ್ನೆಲ್ಲ ಮಗಳ ಹತ್ರ ಕೇಳಿ. ನನಗೊಂದೂ ಗೊತ್ತಿಲ್ಲ. ನಾನಾಗ಼್ೇ ಹೇಳಿದ್ದೆ."

"ನೀನೇನು ಹೇಳಿದ್ದು ಬದನೆಕಾಯಿ?"

ಪಪ್ಪು ಪಿಳ್ಳೆ ಮನಸ್ಸಮಾಧಾನವನ್ನು ಕಳೆದುಕೊಂಡು, ಮನೆಯೊಳಕ್ಕೆ ಕಾಲಿರಿಸಿದರು. ಏನನ್ನೋ ಹೇಳುತ್ತ ಕುಟ್ಟಿಯಮ್ಮನೂ ಹಿಂಬಾಲಿಸಿದಳು.

ಪಪ್ಪು ಪಿಳ್ಳೆ ಗೌರಿಯಮ್ಮನನ್ನು ಕೇಳಿದರು. ಮಗಳು ತನಗಿದ್ದ ಸಂಶಯವನ್ನೆಲ್ಲ ವಿವರಿಸಿದಳು. ಮಗಳು ಮತ್ತು ಹೆಂಡತಿಯೊಡನೆ ಪಪ್ಪು ಪಿಳ್ಳೆ ಕೇಳಿದರು:

"ಅವನು ಯಾವಾಗ ಬರ್ತೀನಿ ಅಂತ ಹೇಳಿ ಹೋದ?"

ಗೌರಿಯಮ್ಮ: "ಇಲ್ಲ. ಅವನು ಹೋದದ್ದೇ ಯಾರಿಗೂ ಗೊತ್ತಿಲ್ಲ."

"ನೀವು ಕೇಳಲೂ ಇಲ್ಲವಾ?"

ಅದಕ್ಕೆ ತಾಯಿ ಮಗಳು ಯಾವ ಉತ್ತರವನ್ನೂ ಕೊಡಲಿಲ್ಲ. ಪಪ್ಪು 'ಪಿಳ್ಳೆಗೆ ಸಿಟ್ಟು ಬಂದಿತು.

"ತಾಯಿಯೂ ಸರಿ, ಮಗಳೂ ಸರಿ; ಮಗನೂ ಸರಿ. ಗುಣವಿಲ್ಲದ ಗುಂಪು ಅಂತ ನನಗೆ ಮೊದಲೇ ಗೊತ್ತಿತ್ತು."

ಕುಟ್ಟಿಯಮ್ಮನಿಗೂ ಸಿಟ್ಟು ಬಂದಿತು.

"ನನ್ನ ಹತ್ರ ಯಾಕೆ ಹೀಗೆ ಎಗರಾಡ್ತೀರಿ? ಇದೇ ನಿಮಗೆ ಯಾವಾಗಲೂ! ನಾನು ನನ್ನ ಪಾಡಿಗೆ ಇದ್ದೀನಿ. ನಾನಿದರಲ್ಲಿ ಕೈ ಹಾಕಿದೋಳಲ್ಲ. ಅಂಥ ಆಲೋಚನೆ ಬಂದಾಗ ಹೇಗೆ ಮಾಡಬೇಕೋ ಹಾಗೆ ಮಾಡದೇ ಹೋದರೆ ಅದಕ್ಕೆ ನನ್ನ ತಪ್ಪಾ?"

ಪಪ್ಪು ಪಿಳ್ಳೆ ಕೈಯಲ್ಲಿ ದೊಣ್ಣೆಯನ್ನು ಮೇಲೆತ್ತಿದರು. "ನಾನೇಂಥಾದ್ದೇ ಮಾಡ ಬೇಕಾದ ಹಾಗೆ ಮಾಡದೇ ಇರೋದು?"

ಕುಟ್ಟಿಯಮ್ಮ ಏಟನ್ನು ತಪ್ಪಿಸಿಕೊಳ್ಳುವ ಪ್ರಯತ್ನವನ್ನು ಮಾಡದೆ ಹೇಳಿದಳು:

"ಆ ಆಲೋಚನೆ ಮಾಡುವಾಗ ಅವನನ್ನ ಕರೆಸಿ ಕೇಳಿ ತೀರ್ಮಾನ ಮಾಡಿದ್ದ ರಾಗಿತ್ತು. ಆ ಮೇಲೆ ಮಾತು ಕೊಡಬೇಕಾಗಿತ್ತು. ಅದು ಮಾಡಬೇಕಾದದ್ದು."

ಆ ಮಾತನ್ನು ಕೇಳಿದ ಪಪ್ಪು ಪಿಳ್ಳೆ ಗರ್ಜಿಸಿದರು:

"ಅದು ನನಗೆ ಇಷ್ಟವಿರಲಿಲ್ಲ. ನೀನು ಯಾರು ಅದನ್ನ ಕೇಳೋದಕ್ಕೆ?"

ಅದರ ಹಿಂದೆಯೇ ಅವಳ ಉತ್ತರ ಸಿದ್ಧವಾಗಿತ್ತು.

"ಹಾಗಿದ್ದ ಮೇಲೆ ಅನುಭವಿಸಿ."

"ಗುಣವಿಲ್ಲದ ಗುಂಪು. ನಿನ್ನ ವಂಶವೇ ಹಾಗೆ."

"ನನ್ನ ವಂಶದ ವಿಚಾರವಾಗಿ ಮಾತಾಡಬೇಡಿ ಅಂತ ನಾನು ಯಾವಾಗಲೂ ಹೇಳ್ತಾಲೇ ಇದ್ದೀನಿ."

ಪಪ್ಪು ಪಿಳ್ಳೆಗೆ ಸಂಭಾಷಣೆ ದಿಕ್ಕುತಪ್ಪುತ್ತಿದೆ ಎನ್ನಿಸಿತು. ಅವರು ಪಡುಭಾಗದ ಮಾವಿನ ಮರದ ಅಡಿಯಲ್ಲಿ ಹೊಟ್ಟೆಯ ಮೇಲೆ ಕೈಯಾಡಿಸುತ್ತ ನಡೆದಾಡುತ್ತಿದ್ದರು. ಕುಟ್ಟಿಯಮ್ಮ ಅಲ್ಲಿಗೂ ಬಂದಳು. ಪಪ್ಪು ಪಿಳ್ಳೆ ಕೇಳಿದರು: "ಅವನು ನಮಗೆ ಮೋಸ ಮಾಡಿಯಾನೆ?"

ಹೆಂಡತಿ ಹೇಳಿದಳು:

"ಅವನು ಹಾಗೆ ಮಾಡಿಯಾನಾ? ಅವನು ನಮ್ಮ ಮಗ ಅಲ್ಲವಾ? ಅಪ್ಪ ಅಮ್ಮನ ಮುಖಕ್ಕೆ ಮಸಿ ಬಳಿದಾನಾ?"

* * * * *

ಯಾರೊಡನೆಯೂ 'ಹೋಗುತ್ತೇನೆ' ಎಂದು ಹೇಳದೆ ಹೊರಟ ಕೇಶವ ಪಿಳ್ಳೆಗೆ ಆ ಮನೆಯ ಮೆಟ್ಟಲನ್ನಿಳಿದಾಗ ತಾನು ಎಂದೆಂದೂ ಆ ಮನೆಯಿಂದ ಹೊರಟುಹೋಗುತ್ತಿರುವಂತೆ ತೋರಿತು. ಹಾಗೆ ಆಲೋಚಿಸಲಿಲ್ಲ. ಇನ್ನು ಒಮ್ಮೆಯೂ ಹಿಂದಿರುಗುವುದಿಲ್ಲ ಎನ್ನುವ ತೀರ್ಮಾನ ಮಾಡಿಯೂ ಇಲ್ಲ. ಅಂತಹ ಒಂದು ಭಾವನೆ ಅವನಿಗೆ ಉಂಟಾಯಿತು ಅಷ್ಟೆ. ಆ ಅನ್ನಿಸುವಿಕೆಯಿಂದ ಪಾರಾಗಲು ಕೇಶವ ಪಿಳ್ಳೆ ಶ್ರಮಿಸುತ್ತಿದ್ದ. ಶ್ರಮಿಸಿದಷ್ಟೂ ಹೃದಯ ವೇದನೆಯನ್ನುಂಟುಮಾಡುವ ವಿಚಾರಗಳೇ ಮುಂದೆ ಬರುತ್ತಿದ್ದುವು. ಇನ್ನು ಮೇಲೆ ಹುಟ್ಟಿ ಬೆಳೆದ ಮನೆಗೆ ಹಿಂದಿರುಗಬೇಕಾಗಿಲ್ಲ: ತಂದೆ ತಾಯಿಗಳನ್ನು ಕಾಣಬೇಕಾಗಿಲ್ಲ. ಒಮ್ಮೆ ಹಿಂದಕ್ಕೆ ತಿರುಗಿ ಆ ಮನೆಯ ಕಡೆಗೊಮ್ಮೆ ನೋಡುವಂತೆ ಆತನ ಅಂತರಂಗದಲ್ಲಿದ್ದುಕೊಂಡು ಆಜ್ಞಾಪಿಸಿದಂತಾಯಿತು. ಒಂದು ಕ್ಷಣ ಕೇಶವ ಪಿಳ್ಳೆ ಅಲುಗಾಡದೆ ನಿಂತಿದ್ದ. ಆತನ ಭುಜ ಒಂದು ಸಲ ಅರ್ಧಕ್ಕೆ ತಿರುಗಿತು. ಇಲ್ಲ, ಆ ಮನೆಯನ್ನು ಬಿಟ್ಟು ಹೊರಡುತ್ತಿದ್ದೇನೆ ಎನ್ನುವ ತೀರ್ಮಾನಕ್ಕೆ ಆತ ಸಿದ್ಧನಾಗಿಲ್ಲ.

ಪಪ್ಪು ಪಿಳ್ಳೆಯ ಸ್ನೇಹಿತನೂ ಸಮವಯಸ್ಕನೂ ಆದ ಕಿಟ್ಟುಮಾವ ದಾರಿಯಲ್ಲಿ ಎದುರಾಗಿ ಬರುತ್ತಿದ್ದರು. ಕಿವಿಯ ವರೆಗೂ ಇದ್ದ ಆ ದೊಡ್ಡ ಬಾಯನ್ನು ತೆರೆದು ಕಿಟ್ಟುಮಾವ ಒಮ್ಮೆ ನಕ್ಕರು ಕಿಟ್ಟುಮಾವನಿಗೆ ಕೇಶವ ಪಿಳ್ಳೆಯ ಮೇಲೆ ಅಪಾರವಾದ ವಾತ್ಸಲ್ಯವಿತ್ತು.

ಕಿಟ್ಟುಮಾವ ಕೇಳಿದರು: "ಭಾವ ಮೈದ ಯಾವಾಗ ಬಂದದ್ದು?"

ಕೇಶವ ಪಿಳ್ಳೆಯೂ ನಗಲು ಶ್ರಮಿಸಿದ. ಬಳಿಕ ಹೇಳಿದ: "ಬೆಳಿಗ್ಗೆ. ಈಗ ಬಂದೆ. ಕಿಟ್ಟುಮಾವ ಯಾವ ಕಡೆಗೆ?"

"ದುಂಗಾಟ್ಟಿಗೆ ಹೋಗ್ತಿದ್ದೀನಿ. ಅಪ್ಪ ಇಲ್ಲವಾ ಅಲ್ಲಿ?"

ಕೇಶವ ಪಿಳ್ಳೆ ಕೂಡಲೇ ಉತ್ತರಿಸಲಿಲ್ಲ.

"ಇದ್ದಾರೆ, ಇರಬೇಕು ಅಂತ ಕಾಣುತ್ತೆ."

ಕಿಟ್ಟು ಪಿಳ್ಳೆಗೆ ಕೇಶವ ಪಿಳ್ಳೆಯ ಮನಸ್ಥಿತಿಯನ್ನು ತಿಳಿಯಲು ಸಾಧ್ಯವಾಗಿರಲಿಲ್ಲ. ಆದ್ದರಿಂದ ಆತನ ಮಾತಿನಲ್ಲಾಗಿದ್ದ ವ್ಯತ್ಯಾಸವನ್ನು ತಿಳಿಯಲಾಗಲಿಲ್ಲ. ಸದುದ್ದೇಶ ಮಾತ್ರವಾಗಿದ್ದ. ಅಭ್ಯುದಯಾಕಾಂಕ್ಷಿಯಾಗಿದ್ದ ಕಿಟ್ಟುಮಾವ ಹೇಳಲಾರಂಭಿಸಿದರು: "ನೋಡಪ್ಪ, ಅದು ಒಳ್ಳೆ ಮದುವೆ. ಆ ಹುಡುಗಿಯ ಜಾತಕ ತುಂಬ ವಿಶೇಷವಾದದ್ದು. ಅಂಥ ಜಾತಕವನ್ನು ನಾನು ಇದು ವರೆಗೆ ನೋಡಿಲ್ಲ. ಪಂಚ ಮಹಾ ಯೋಗಗಳಲ್ಲಿ ಮೂರು ಯೋಗಗಳು ಎದ್ದು ಕಾಣುತ್ತವೆ. ಅವಳ ಕೈಹಿಡಿಯುವ ಗಂಡಿಗೆ ಭಾರಿ ಐಶ್ವರ್ಯ ಕೊಡುತ್ತದೆ. ಇಂಥ ಅದೃಷ್ಟವಂತ ಜಾತಕ ಬೇರೆ ಯಾವುದಿದ್ದೀತು? ಎಲ್ಲ ಭಾಗ್ಯಗಳೂ ಗಂಡನಿಗೆ!"

ಜಾತಕವನ್ನು ಕುರಿತು ಮಾತನಾಡುತ್ತಿದ್ದಷ್ಟು ಹೊತ್ತೂ ಕಿಟ್ಟುಮಾವನ ನಯನ

ಗಳು ಪ್ರಕಾಶದಿಂದಿದ್ದುವು. ಕಿಟ್ಟುಮಾವ ದೃಢವಾಗಿ ಅದನ್ನು ನಂಬಿದ್ದರು; ಸಂತೋಷ ಗೊಂಡಿದ್ದರು, ಮತ್ತು ಆನಂದಿಸುತ್ತಿದ್ದರು.

ಕೇಶವ ಪಿಳ್ಳೆಗೆ ಆ ಅವಸ್ಥೆಯಲ್ಲೂ ಆ ವೃದ್ಧನ ಸಂತೋಷ ಮತ್ತು ಆನಂದವನ್ನು ಕಾಣಲೂ ಅರ್ಥ ಮಾಡಿಕೊಳ್ಳಲೂ ಸಾಧ್ಯವಾಯಿತು. ಕಿಟ್ಟುಮಾವನ ಪ್ರೀತಿಯನ್ನು ಕುರಿತು ಕೇಶವ ಪಿಳ್ಳೆಗೆ ಯಾವ ಸಂಶಯವೂ ಇಲ್ಲ. ಆ ಹುಡುಗಿಯ ಜಾತಕ ಒಳ್ಳೆಯದಲ್ಲವೆಂದಾಗಿದ್ದಲ್ಲಿ ಕಿಟ್ಟುಮಾವ ಅವನಲ್ಲೂ ಹೇಳುತ್ತಿದ್ದರು. ಬಾಲ್ಯದಿಂದಲೂ ಆ ಮನುಷ್ಯನ ಪ್ರೀತಿಯನ್ನು ಕೇಶವ ಪಿಳ್ಳೆ ಕಂಡದ್ದುಂಟು. ಅನುಭವಿಸಿದ್ದುಂಟು. ಕಿಟ್ಟುಮಾವ ಹೇಳಿದರು:

"ನೀವೆಲ್ಲ ಈಗಿನ ಕಾಲದ ವಿದ್ಯಾವಂತರು. ಇದ್ಯಾವುದನ್ನೂ ನಂಬುವುದಿಲ್ಲ. ಆದರೆ ಜ್ಯೋತಿಷ್ಯಾನ ನಂಬಬೇಕು" ಎಂದು ಹೇಳಿ ಭರವಸೆ ತುಂಬಿದ ಕಣ್ಣುಗಳಿಂದ ಕಿಟ್ಟುಮಾವ ಹೇಳಿದರು.:

"ನನ್ನ ಭಾವ ಮೈದನನ ಒಳ್ಳೆಯದಕ್ಕಾಗಿ ನಾವೆಲ್ಲ ಇದನ್ನು ತೀರ್ಮಾನಿಸಿದೆವು."

ಯಾವುದೋ ಒಂದು ರಹಸ್ಯವನ್ನು ಹೊರಗೆಡಹುವಂತೆ ಧ್ವನಿಯನ್ನು ತಗ್ಗಿಸಿ ಆತನ ಕಿವಿಯಲ್ಲಿ ಕಿಟ್ಟುಮಾವ ಹೇಳಿದರು:

"ಆದರೆ ಆ ಹುಡುಗಿಯ ಜೀವನದಲ್ಲಿ ಮನಸ್ಸಮಾಧಾನ ಅನ್ನುವುದೇ ಇರುವುದಿಲ್ಲ. ಅದೂ ಜಾತಕದಲ್ಲಿದೆ."

ಕೇಶವ ಪಿಳ್ಳೆ ಮೌನವಾಗಿದ್ದ. ಅವನಿಗೆ ಹೋಗಬೇಕಾಗಿತ್ತು.

ಕಿಟ್ಟುಮಾವ ಮುಂದುವರಿಸಿದರು:

"ಕರುವಾಡಿಯಿಂದ ಬೋಟ್‌ನಲ್ಲಿ ಅಲ್ಲವೇ ಹೋಗುವುದು?"

"ಹೌದು."

"ಹಾಗಾದರೆ ಹೋಗಿ ಬಾ. ಇಪ್ಪತ್ತೊಂಬತ್ತನೇ ತಾರೀಖು ಬಂದುಬಿಟ್ಟೀಯೆ! ಇಪ್ಪತ್ತೆಂಟನೇ ತಾರೀಖಿಗೆ ಬರಬೇಕು. ಜ್ಞಾಪಕ ಇಟ್ಟುಕೊ. ಹೆಣ್ಣಿನ ಮನೆಯಲ್ಲೇ ಮದುವೆ. ಖರ್ಚು ಕಡಿಮೆ ಮಾಡಬೇಕು. ಆ ಮಂಗಳ ಕಾರ್ಯ ನಡೆಯಬೇಕು. ಅಷ್ಟಾದರೆ ಸಾಕು."

ಹೋಗಿಬರಲು ಕಿಟ್ಟುಮಾವ ಅನುಮತಿ ನೀಡಿದರು. ಆ ಹುಡುಗಿಯ ಕೈ ಹಿಡಿಯುವುದು ಅದೃಷ್ಟವಂತೆ! ಆ ವಿಷಯ ಕೇಶವ ಪಿಳ್ಳೆಯ ಮನಸ್ಸಿನಲ್ಲಿ ಎಲ್ಲಿಯೋ ಪ್ರವೇಶಿಸಿತು. ಜೀವನದಲ್ಲಿ ಮೇಲೆ ಬರಲು ಅವ್ಯಕ್ತವಾಗಿಯಾದರೂ ಆಗಬಹುದು ಎನ್ನುವ ನಂಬಿಕೆ ಕೇಶವ ಪಿಳ್ಳೆಗುಂಟು. ಅದರ ಕೇಂದ್ರಬಿಂದು ತಂಗಮ್ಮ. ತಂಗಮ್ಮನ ಮೂಲಕ ಜೀವನದಲ್ಲಿ ಮೇಲೆ ಬರಬಹುದು. ಈ ಹೆಣ್ಣಿನ ಗಂಡನಿಗೆ ಐಶ್ವರ್ಯವುಂಟಾಗುತ್ತದೆಯಂತೆ. ತಂಗಮ್ಮನೊಡನಿರುವ ಪ್ರೀತಿಯನ್ನು ಶಾಶ್ವತವಾಗಿ ಉಳಿಸಿಕೊಂಡು ಈ ಭಾಗ್ಯವತಿಯಾದ ಹೆಣ್ಣಿನ ಗಂಡನಾಗಿ ಜೀವನದಲ್ಲಿ ಮೇಲೆ ಬರಬೇಕೆಂತಲೆ?

## ಮದುವೆಯ ಪ್ರಸ್ತಾಪ

ಮಟ್ಟತ್ತಿಲ್ ಮನೆಯ ಅಜ್ಜಿ ಜಗಲಿಯ ಹತ್ತಿರ ಬಂದು ನಿಂತು ಕೇಳಿದಳು:

"ಕೇಶು, ಆಗಲೇ ಹೊರಟೆಯೇನಪ್ಪ? ಈಗಲ್ಲಾ ನೀನು ಆ ಕಡೆ ಹೋದದ್ದು?"

ಒಂದು ಕೃತಕ ನಗುವನ್ನು ತಂದುಕೊಂಡು ಕೇಶವ ಪಿಳ್ಳೆ ಹೇಳಿದ:

"ಹ್ಞೂ. ಹೊರಟಿದ್ದೀನಿ."

ದಾರಿಯುದ್ದಕ್ಕೂ ಎಲ್ಲ ಮನೆಯವರಿಗೆ ಅವನ ಹತ್ತಿರ ಏನಾದರೊಂದನ್ನು ಕೇಳುವುದಿತ್ತು. ಹೆಂಗಸರಿಗೆ, ಗಂಡಸರಿಗೆ. ದಾರಿಯಲ್ಲಿ ಎದುರು ಸಿಕ್ಕಿದವರಿಗೆ! ಎಂಥ ಬೇಡವದ್ದು ಇದು! ಕೆಲವರಿಗೆ ಯಾವ ಉತ್ತರವನ್ನೂ ಕೊಟ್ಟಿದ್ದಿಲ್ಲ. ಕೆಲವರ ಮಾತನ್ನು ಕೇಳಿಸಿಕೊಳ್ಳಲೂ ಇಲ್ಲ. ಮದುವೆಯಿರಬೇಕು ಎನ್ನುವ ಅವನನ್ನು ಅವರೆಲ್ಲರ ಗಮನಕ್ಕೆ ತಂದದ್ದು.

ಬೋಟಿಗಾಗಿ ಹೆಚ್ಚು ಸಮಯ ಕಾಯಬೇಕಾಗಿ ಬರಲಿಲ್ಲ. ನದಿ ದಡಕ್ಕೆ ಬರುವ ಹೊತ್ತಿಗೆ ಬೋಟು ಬಂದಿತು. ಕಬ್ಬಿಣದ ದೊಡ್ಡ ಬೋಟು ಅದು. ಅವನು ಅದರಲ್ಲಿ ಹತ್ತಿ ಕುಳಿತ. ಬೋಟು ಮುಂದೆ ಚಲಿಸಿತು.

ಎಂದೆಂದಿಗೂ ಹಿಂದಿರುಗದಂತೆ ಮನೆಯಿಂದ ಹೊರಟುಹೋಗುತ್ತಿದ್ದೇನೆ ಎನ್ನುವ ಭಾವನೆ ಪುನಃ ಎಲ್ಲಿಂದಲೋ ಒಂದು ಕಪ್ಪು ನೆರಳಿನಂತೆ ಹಾಯ್ದು ಬಂದಿತು. ಇದು ಕೊನೆಯ ಸಂದರ್ಶನವೆನ್ನುವ ಭಾವನೆ ಅವನಿಗೆ ಬಂದಿತ್ತು. ಇನ್ನೆಂದೂ ಈ ಗದ್ದೆ ಬಯಲುಗಳನ್ನು ಕಾಣುವುದಿಲ್ಲವೆನ್ನಿಸಿತು. ಬೋಟು ಮುಂದೆ ಮುಂದೆ ಹೋಗುತ್ತಿತ್ತು.

ಬೋಟನ್ನು ದಡಕ್ಕೆ ನಡೆಸಬೇಕೆಂದು ಹೇಳಲು ಹೊರಟ. ದಡಕ್ಕೆ ಹೋಗಬೇಕು. ಬೋಟಿನಲ್ಲಿ ಹೋಗುವುದು ಬೇಡ. ಹೃದಯವನ್ನು ಮೀಟುವ ಆ ಭಾವನೆಯಿಂದ ಪಾರಾಗಲು ಮತ್ತಷ್ಟು ಕಷ್ಟವಾಯಿತು. ಹೇಗೆ ಪಾರಾಗುವುದು? ಯಾವ ಚಿಂತೆಯನ್ನು ಅಪ್ಪಿಕೊಳ್ಳುವುದಕ್ಕಾಗಿ! ಆ ಕಪ್ಪು ನೆರಳಿನ ಜೊತೆಯಲ್ಲಿ ಯಾವ ಚಿಂತೆಯೂ ಶಾಶ್ವತವಾಗಿ ಉಳಿಯುವುದಿಲ್ಲ.

ಬೋಟಿನಲ್ಲಿ ಪ್ರಯಾಣಿಕರು ಕೆಲವೇ ಮಂದಿ ಇದ್ದರು. ವಿಶಾಲವಾದ ಅಟ್ಟದ ಮೇಲೆ ಒಂದು ಕಡೆಯಲ್ಲಿ ನಾಲ್ಕು ಜನರು ಕುಳಿತು ಇಸ್ಪೀಟು ಆಡುತ್ತಿದ್ದರು. ಸ್ವಲ್ಪ ದೂರದಲ್ಲಿ ಒಬ್ಬ ವೃದ್ಧ ಏಕಾಂಗಿಯಾಗಿ ಕುಳಿತಿದ್ದ. ಆ ಮನುಷ್ಯನಿಗೆ ಪಪ್ಪು ಪಿಳ್ಳೆಯಷ್ಟು ವಯಸ್ಸಾಗಿತ್ತು. ಏನನ್ನೋ ಆಲೋಚಿಸುತ್ತಾ ಕುಳಿತಿದ್ದ. ಆತನ ಮುಖದಲ್ಲಿ ಒಂದು ವಿಷಾದ ಛಾಯೆಯಿತ್ತು. ಸ್ವಲ್ಪ ದಿಟ್ಟಿಸಿ ನೋಡಿದರೆ ಆತನನ್ನು ನಿರಾಶೆ ಕಾಡುತ್ತಿದೆ ಎಂದು ಊಹಿಸಬಹುದಾಗಿತ್ತು. ಜೀವನದಲ್ಲಿ ನಗದೆ ಇರುವ ಮನುಷ್ಯ. ಏನಾಗಿರಬಹುದು ಆತನ ನಿರಾಶೆಯ ಕಾರಣ? ಯಾವ ಕಾರಣದಿಂದ ಆ ಮುಖದಿಂದ ನಗು ಮಾಯವಾಯಿತು? ಒಂಟಿಯಾಗಿ ಕುಳಿತಿದ್ದ ಕೇಶವ ಪಿಳ್ಳೆಯನ್ನು ಆ ಮುದುಕ ದಿಟ್ಟಿಸಿ ನೋಡಿದ. ಆತ ಕೇಳಿದ:

"ನಿನಗೆ ಇಸ್ಪೀಟಾಡೋದಕ್ಕೆ ಬರೋದಿಲ್ವೇನಪ್ಪಾ?"

ಕೇಶವ ಪಿಳ್ಳೆ ಹೇಳಿದ:

"ಬರುತ್ತೆ."

"ಮತ್ತೆ ಯಾಕೆ ಅವರ ಜೊತೆ ಆಟಕ್ಕೆ ಹೋಗದೇ ಇದ್ದೀ?"

"ಓ! ಹೋಗ್ಲಿಲ್ಲ."

ಅದೇ ಒಳ್ಳೆಯದು ಎಂದು ಆತ ಹೇಳಿದ. ಸೊಂಟದಿಂದ ಎಲೆ ಅಡಿಕೆ ಚೀಲವನ್ನು ತೆಗೆದು ಆ ಮುದುಕ ಬಿಡಿಸಿದ. ಎಲೆ, ಅಡಿಕೆ, ಒಂದು ಸಣ್ಣ ಚಾಕು, ಬೆಳ್ಳಿಯ ಸುಣ್ಣ ಕಾಯಿ, ಅರ್ಧ ರೂಪಾಯಿನ ಒಂದು ನಾಣ್ಯ ಅಷ್ಟು ಮಾತ್ರ ಆ ಚೀಲದಲ್ಲಿದ್ದುದ್ದು.

ಕೇಶವ ಪಿಳ್ಳೆ ಕೇಳಿದ:

"ಯಜಮಾನರು ಯಾವ ಕಡೆ ಹೊರಟದ್ದು?"

"ಕೊಲ್ಲಕ್ಕೆ."

"ಏನು ಕೆಲಸ?"

ಸ್ವಲ್ಪ ಹೊತ್ತು ಆತ ಮೌನವಾಗಿದ್ದ. ಅಡಿಕೆ ಪುಡಿ ಮಾಡುತ್ತಾ ಆತ ಹೇಳಿದ:

"ಸ್ವಲ್ಪ ಕೆಲ್ಸ ಇದೆ. ನನ್ನ ಮಗ ಅಲ್ಲಿದ್ದಾನೆ."

ಒಂದು ದೀರ್ಘವಾದ ಕಥೆ ಹೇಳುವಂತಿತ್ತು. ನನ್ನ ಮಗ ಅಲ್ಲಿದ್ದಾನೆ ಎಂದು ಹೇಳಿ ಅಷ್ಟಕ್ಕೆ ಮಾತು ನಿಲ್ಲಿಸುವಂತೆ ತೋರಲಿಲ್ಲ. ಸ್ವಲ್ಪ ಹೊತ್ತು ಕಳೆದು ಮತ್ತೆ ಪ್ರಾರಂಭಿಸಿದ:.

"ನಮಗಿರೋದು ಒಬ್ಬನೇ ಮಗ. ಅಲ್ಲಿ ಕೆಲಸದಲ್ಲಿದ್ದಾನೆ. ರೈಲಾಫೀಸಿನಲ್ಲಿ. ನಾಲ್ಕು ತಿಂಗಳಿಂದ ಕಾಗದ ಇಲ್ಲ. ಅವನ ತಾಯಿಗೆ ಸೌಖ್ಯವಿಲ್ಲ. ಒಂದ್ಸಲ ಕಂಡು ಬರೋಣ ಅಂತ ಹೊರಟಿದ್ದೀನಿ."

ಎಲೆ ಅಡಿಕೆ ಜಗಿಯುತ್ತಾ ಮಧ್ಯೆ ಹೊಗೆಸೊಪ್ಪಿನ ಚೂರು ಹೊರಗೆ ತೆಗೆದಿಟ್ಟು ಎಲೆ ಅಡಿಕೆ ಚೀಲವನ್ನು ಜೋಪಾನವಾಗಿ ಮಡಿಸಿ ಕಟ್ಟಿದ. ಒಂದು ಜೀವಂತ ಸತ್ಯ ಕೇಶವ ಪಿಳ್ಳೆಯ ಮುಂದೆ ಪ್ರತ್ಯಕ್ಷವಾದಂತೆ ತೋರಿತು. ಆ ಮುದುಕನ ಹತ್ತಿರ ತಾನು ಏನೇನೋ ಕೇಳಬೇಕಾದದ್ದಿದೆ ಎನ್ನಿಸಿತು: ಕೇಳಿದ.

"ನಿಮ್ಮ ಮಗ ಹಣ ಕಳಿಸಿ ಕೊಡ್ತಾ ಇದ್ರಾ?"

ಸರಿಯಾಗಿ ಕೇಳಬೇಕಾಗಿದ್ದ ಪ್ರಶ್ನೆ ಅದಾಗಿರಲಿಲ್ಲ. ಬೇರೆ ಯಾವುದೋ ಆಗಿತ್ತು. ಅದು ಯಾವುದೂ ಹೊಳೆದಿರಲಿಲ್ಲ. ಅಂತೂ ಆ ಒಂದು ಪ್ರಶ್ನೆ ಎಷ್ಟೋ ವಿಷಯಗಳನ್ನು ಹೊರಗೆಡಹಿತು.

"ನಮಗಿರೋದು ಅವನೊಬ್ಬನೇ. ಅದ್ದರಿಂದಲೇ ನಾವು ಜೀವನ ಸಾಗಿಸ್ತಾ ಇರೋದು. ಆ ಮಧ್ಯೆ ಅವನಿಗೊಂದು ಮದುವೆ ಆಯಿತು. ವಯಸ್ಸಾದ ಮೇಲೆ ಅದು ಬೇಕಲ್ಲ! ಅವನೇ ಹೆಣ್ಣು ನೋಡಿಕೊಂಡು ಮದುವೆಯಾದ."

ಆ ಮುದುಕ ಎಲೆ ಅಡಿಕೆ ಚೀಲವನ್ನು ಸೊಂಟಕ್ಕೆ ಸಿಕ್ಕಿಸಿದ. ಮಗನಿಗೆ ಸಂಬಂಧ ಪಟ್ಟಂತೆ ತಂದೆಗೂ ಆಗಲೂ ಅನುಕಂಪವಿದ್ದುದು ಕಂಡುಬರುತ್ತಿತ್ತು.

"ಅವನದೂ ಪ್ರಾರಬ್ಧ. ಮೂರು ಮಕ್ಕಳಿವೆ. ಅವುಗಳನ್ನು ಸಾಕಬೇಡವಾ? ಅವನಿಗೇ ಸಾಕಾಗೋದಿಲ್ಲ. ಹಿಂದಿನ ಹಾಗೆ ಕಳಿಸೋದಕ್ಕೂ ಆಗೋದಿಲ್ಲ."

ಆತನಿಗೆ ಒಂದು ವಿಷಯದಲ್ಲಿ ಮಾತ್ರ ಸಂಕಟವಿತ್ತು. "ಅವನನ್ನು ನೋಡಬೇಕೂ ಅಂತ ಕಣ್ಣು ಕಾತರಿಸುತ್ತಿವೆ. ಏಳು ವರ್ಷ ಆಯ್ತು ಅವನನ್ನು ನೋಡಿ. ಹಣ ಕಾಸು ಕಳಿಸೋದು ಹೋಗಲಿ. ಒಂದು ಸಲ ಬಂದು ನೋಡಿಕೊಂಡು ಹೋಗಬಾರದಾ?"

ಕೇಶವ ಪಿಳ್ಳೆ ಕೇಳಿದ:

"ಅದಕ್ಕೆ ಏನಾದರೂ ಬೇರೆ ಕಾರಣ ಇದೆಯಾ?"

ಮುದುಕ ಸ್ವಲ್ಪ ಹೊತ್ತು ಆಲೋಚಿಸಿ ಹೇಳಿದ:

"ಇದೆ ಅಂತಲೂ ಹೇಳಬಹುದು. ಇಲ್ಲ ಅಂತಲೂ ಹೇಳಬಹುದು. ಹಾಗಿದೆ ಅದು. ಆ ಮದುವೆ ಅವನ ತಾಯಿಗೆ ಅಷ್ಟಾಗಿ ಒಪ್ಪಿಗೆ ಆಗಲಿಲ್ಲ. ಅವಳ ಇಷ್ಟ ಅವಳ ಸಹೋದರನ ಮಗಳನ್ನು ಮದುವೆಯಾಗಬೇಕು ಅಂತಿತ್ತು. ಅಂತೂ ನಾನೇನೋ ಮದುವೆಗೆ ಹೋಗಿದ್ದೆ."

ಥಟ್ಟನೆ ಒಂದು ಚಿತ್ರ ಕೇಶವ ಪಿಳ್ಳೆಯ ಅಂತಃಚಕ್ಷುಗಳೆದುರಿನಲ್ಲಿ ಕಾಣಿಸಿತು. ಕೆಲವು ವರ್ಷಗಳ ನಂತರ ವಪ್ಪು ಪಿಳ್ಳೆ ಕೂಡ ಬಾಯಲ್ಲಿ ಎಲೆ ಅಡಿಕೆ ಜಗಿಯುತ್ತಾ ಪದಿನೆಂಟು ಪಾವಲಿ ಹಿಡಿದುಕೊಂಡು ಇದೇ ಬೋಟಿನಲ್ಲಿ ಕೇಶವ ಪಿಳ್ಳೆಯನ್ನು ಕಾಣುವುದಕ್ಕೆ ಹೊರಡಬಹುದು. ಇದು ಸಂಭವಿಸಬಹುದೇ? ಕೇಶವ ಪಿಳ್ಳೆ ಕಣ್ಣು ಮುಚ್ಚಿ ನೋಡಿದ. ಆ ಚಿತ್ರ ಮರೆಯಾಗುವುದಿಲ್ಲ.

ಮುದುಕ ಪ್ರಾರಂಭಿಸಿದ:

"ಅವಳಿಗೆ—ಅವನ ಹೆಂಡತಿಗೆ: ನನ್ನನ್ನ ಪ್ರೀತಿಯಿಂದ ನೋಡಬೇಕು ಅಂತ ಏನು?"

ಕೇಶವ ಪಿಳ್ಳೆ ತನ್ನನ್ನು ತಾನೇ ಒಂದು ಪ್ರಶ್ನೆ ಕೇಳಿಕೊಂಡ: "ತಂಗಮ್ಮನಿಗೆ ತಾನೆ ಏನು?"

ಮುದುಕ ತನ್ನ ಪ್ರಶ್ನೆಗೆ ಉತ್ತರ ನೀಡಿದ. ಅದು ಕೇಶವ ಪಿಳ್ಳೆಯ ಪ್ರಶ್ನೆಗೂ ಉತ್ತರವಾಗಿತ್ತು.

"ಪ್ರೀತಿ ಕಂಡುಬರಬೇಕೂಂತಿಲ್ಲ. ಕಂಡುಬಂದಿಲ್ಲ.

ಬೋಟಿನ ಕೆಲಸದವರಲ್ಲೊಬ್ಬ ಕೂಗಿದ:

"ತೋಟಪ್ಪಳ್ಳಿ ! ತೋಟಪ್ಪಳ್ಳಿ ! ಯಾರಾದರೂ ಇಳಿಯುವವರಿದ್ದೀರಾ?"

ಕೇಶವ ಪಿಳ್ಳೆ ತನಗರಿವಿಲ್ಲದಂತೆಯೇ ಹೇಳಿದ್ದ:

"ಉಂಟು."

ಬೋಟು ದಡ ಸೇರಿತು.
ಮುದುಕ ಕೇಳಿದ:
"ನೀ ಇಲ್ಲೇ ಇಳೀತೀಯೇನಪ್ಪಾ?"
"ಹೌದು."
ಹಾಗೆ ಕೊಲ್ಲಕ್ಕೆ ಟಿಕೆಟ್ ಕೊಂಡಿದ್ದ ಕೇಶವ ಪಿಳ್ಳೆ ತೋಟಪ್ಪಳ್ಳಿಯಲ್ಲಿ ಇಳಿದ.

[2]

## ಪ್ರೇಮವೂ ಕೆಂಪು ಪಟ್ಟಿಯೂ

ತಂದೆ ತಾಯಿಯರು ಬಹಳ ಕಷ್ಟಪಟ್ಟು ಕೇಶವ ಪಿಳ್ಳೆಯನ್ನು ಬಿ.ಎ. ವರೆಗೆ ಓದಿಸಿದ್ದರು. ತಣ್ಣೀರು ಕುಡಿದುಕೊಂಡು ಹಣಸಂಪಾದಿಸಿ ಓದಿಸಿದ್ದರು. ಓದಿದ್ದು ತಿರುವನಂತಪುರದ ಕಾಲೇಜಿನಲ್ಲಿ. ಪರೀಕ್ಷಾ ಫಲಿತಾಂಶ ಹೊರಬಿದ್ದ ಕೂಡಲೇ ಆತ ಪುನಃ ತಿರುವನಂತಪುರಕ್ಕೆ ಹೋದ. ಅಲ್ಲಿ ಯಾವುದಾದರೂ ಕೆಲಸ ಸಿಕ್ಕಬಹುದೇ ಎಂದು ಹುಡುಕುವುದಕ್ಕೋಸ್ಕರ.

ಅರ್ಜಿ ಹಾಕಿನೋಡಿದ. ಕೈಯಲ್ಲಿ ಅಧಿಕಾರವಿರುವ ಎಲ್ಲ ಅಧಿಕಾರಿಗಳ ಹತ್ತಿರವೂ ಹೋಗಿಬಂದ. ಎಲ್ಲ ಆಫೀಸುಗಳ ಮೆಟ್ಟಿಲನ್ನೂ ಹತ್ತಿ ಇಳಿದ. ಒಬ್ಬಂಟಿಗನಾಗಿ. ಶಿಫಾರಸ್ ಮಾಡುವುದಕ್ಕೆ ಯಾರೂ ಇಲ್ಲ. ಆ ಹೊತ್ತಿಗಾಗಲೇ ತನ್ನ ಜೊತೆಯಲ್ಲಿ ಓದಿದ್ದ ಕೆಲವರಿಗೆ ಕೆಲಸ ಸಿಕ್ಕುವುದರಲ್ಲಿತ್ತು. ಕ್ಲಾಸಿನಲ್ಲಿ ದೊಡ್ಡ ಪೋಕರಿಯಾಗಿದ್ದ ರಾಮಚಂದ್ರನ್ ನಾಯರನ್ನು ಸೆಕ್ರೆಟರಿಯೇಟಿನಲ್ಲಿ ಸೀನಿಯರ್ ಕ್ಲಾರ್ಕ್ ಆಗಿ ನೇಮಿಸಲಾಗಿದೆ ಎನ್ನುವ ಸುದ್ದಿ ಕೇಳಿಬಂದಿತ್ತು. ಫಿಲಿಪ್ಸ್ ಹಣ ಸುರಿದು ಉದ್ಯೋಗ ಸಂಪಾದಿಸಿದ್ದ. ಅವನೂ ಸೆಕ್ರೆಟರಿಯೇಟಿನಲ್ಲೇ. ಪರಮೇಶ್ವರನ್ ನಾಯರ್‌ಗೆ ಕೆಲಸ ಸಿಕ್ಕಿದ್ದು ಯಾರೋ ಒಬ್ಬ ಸಾಹುಕಾರನ ಮಗಳನ್ನು ಮದುವೆ ಮಾಡಿಕೊಳ್ಳುವುದಕ್ಕೆ ಒಪ್ಪಿದ್ದರಿಂದ. ಮತ್ತೊಬ್ಬ ಸಹಪಾಠಿ ರಘುನಾಥಯ್ಯರನ್ನು ಪೋಲೀಸ್ ಇನ್ಸ್‌ಪೆಕ್ಟರ್ ವೇಷದಲ್ಲಿ ಪುತ್ತನ್ ಸಂತೆಯಲ್ಲಿ ಕೇಶವ ಪಿಳ್ಳೆ ಕಂಡಿದ್ದ. ಪ್ರಸಾದ್ ಮತ್ತು ಅಬ್ದುಲ್ಲ ಬಿ.ಎಲ್.ಗೆ ಸೇರಿದ್ದರು. ಕೇಶವ ಪಿಳ್ಳೆಯ ಹಾಗೆ ಅರ್ಜಿ ಹಾಕಿಕೊಂಡು ಕೆಲಸ ಹುಡುಕುತ್ತಿರುವವರೂ ಕೆಲವರಿದ್ದರು. ನಳಿನಾಕ್ಷ, ರವೀಂದ್ರ ಮುಂತಾದವರು. ಆದರೆ ಅವರಲ್ಲಿ ಕೆಲವರಿಗೆ ಶಿಫಾರಸ್ ಮಾಡುವುದಕ್ಕೆ ಜನರಿದ್ದಾರೆ. ಸಣ್ಣ ಉದ್ಯೋಗದಿಂದ ತೃಪ್ತಿಪಡದೇ ಇರುವವರೂ ಕೇಶವ ಪಿಳ್ಳೆಗೆ ಗೊತ್ತು.

ನಂದನ್‌ಕೊಟ್ಟಿನ ಒಂದು ಮೂಲೆಯಲ್ಲಿ ಅಷ್ಟೇನೂ ಎತ್ತರವಲ್ಲದ ಮಣ್ಣಿನ ಗೋಡೆಯಲ್ಲಿ ಲಕ್ಷ್ಮಿಯಮ್ಮನೂ ಅವಳ ಗಂಡ ಶಿವನ್ ಪಿಳ್ಳೆಯೂ ಒಂದು ಸಣ್ಣ ಹೋಟೆಲನ್ನು ನಡೆಸುತ್ತಿದ್ದರು. ಗೆದ್ದಲು ಹತ್ತಿದ ಮಾವಿನ ಹಲಗೆಯ ಮೇಲೆ ಸುಣ್ಣದಿಂದ ಆ ವ್ಯಾಪಾರದ ಸ್ಥಳದ ಹೆಸರನ್ನು ಬರೆದಿಡಲಾಗಿತ್ತು. 'ಓಂ ಶಿವಮಯಂ ಲಕ್ಷ್ಮೀ ಹೋಟೆಲ್' ಎಂದು. ಅಲ್ಲಿಯ ಆಸುಪಾಸಿನವರು, ಸಣ್ಣ ಸಂಬಳದವರು, ರಸ್ತೆ ಕೆಲಸದವರು ಮುಂತಾದವರು ಗಿರಾಕಿಗಳು. ಕೊಟ್ಟಾಯದಲ್ಲಿ ಕೆಲಸ ಕಳೆದುಕೊಂಡು ಅದನ್ನು

ಪುನಃ ಪಡೆಯಲು ಶ್ರಮಿಸುವ ಒಬ್ಬ ಪೋಲೀಸಿನವನೂ ಇದ್ದ. ಎರಡು ಸ್ಥಳಗಳಿಂದ ಕೇಶವ ಪಿಳ್ಳೆ ಟ್ಯೂಶನ್ ಸಂಪಾದಿಸಿ ಅದರಿಂದ ಜೀವಿಸುತ್ತಿದ್ದ.

ಓದುತ್ತಿದ್ದ ಕಾಲದಲ್ಲಿ ಕೇಶವ ಪಿಳ್ಳೆಗೆ ಅಂತಹ ದೊಡ್ಡ ಆಶೋತ್ತರಗಳೇನೂ ಇರಲಿಲ್ಲ. ತಾನು ಏನಾಗಬೇಕು ಎನ್ನುವ ಸ್ವಪ್ನವನ್ನು ಆತ ಕಂಡಿರಲಿಲ್ಲ. ಆಲೋಚಿಸಿ ರಲೂ ಇಲ್ಲ. ಆದರೆ ಇಂದು ಆಲೋಚಿಸಬೇಕಾಗಿದೆ. ಸ್ನೇಹಿತರು ಹಲವರಿದ್ದಾರೆ. ಅವರೂ ಕೆಲಸವನ್ನು ಹುಡುಕುತ್ತಿದ್ದಾರೆ. ಆದರೆ ಕೇಶವ ಪಿಳ್ಳೆ ಈಗ ಉಪಜೀವನ ಮಾರ್ಗವನ್ನು ಹುಡುಕಬೇಕಾಗಿ ಬಂದಿತ್ತು. ಹಾಗೆ ಬಂದು ಸೇರಿದ್ದು. ಚೀಫ್ ಸೆಕ್ರೆಟರಿ ಮೆನನ್ ಒಬ್ಬ ಒಳ್ಳೆಯ ಮನುಷ್ಯನೆಂದು ಹೇಳುತ್ತಿದ್ದುದನ್ನು ಲಕ್ಷ್ಮೀ ಹೋಟೆಲಿನಲ್ಲಿ ಕೇಳಿದ್ದ. ಅಂದು ಮೊದಲು ಆತ ಪಾರ್ಕ್ ವ್ಯೂವಿನ ಗೇಟಿನ ಹತ್ತಿರ ಕಾಯುವುದಕ್ಕೆ ಪ್ರಾರಂಭಿಸಿದ. ಪ್ರತಿ ದಿನ ಬೆಳಗ್ಗೆ ಮತ್ತು ಸಾಯಂಕಾಲ ಆ ಗೇಟಿನ ಹತ್ತಿರ ಹೋಗಿ ನಿಂತುಕೊಳ್ಳುತ್ತಿದ್ದ. ಚೀಫ್ ಸೆಕ್ರೆಟರಿ ಒಳಗೆ ಹೋಗುವಾಗ, ಹೊರಗೆ ಬರುವಾಗ ಆತ ಬಾಗಿ ನಮಸ್ಕರಿಸುತ್ತಿದ್ದುದು ಪದ್ಧತಿಯಾಗಿತ್ತು. ಒಂದು ದಿನ ಗೇಟಿನಲ್ಲಿ ನಿಲ್ಲುತ್ತಿದ್ದ ಪೋಲೀಸಿನವನು ಹೇಳಿದ: "ಗಟ್ಟಿಯಾಗಿ ಹಿಡಿದುಕೋ ಮಗ. ಒಳ್ಳೆ ಮನುಷ್ಯ. ದಯೆ ಇರೋ ವ್ಯಕ್ತಿ. ಸಿಟ್ಟುಮಾಡಿಕೊಳ್ಳುವುದು ಮುಂತಾದ್ದುಂಟು. ಆದರೆ ಕೆಲಸ ನಡೀತದೆ."

ಕೇಶವ ಪಿಳ್ಳೆಯ ಆಶೆ ಹೆಚ್ಚಿತು. ಮತ್ತೊಬ್ಬ ಪೋಲೀಸಿನವನು ಮತ್ತೊಂದು ಮುನ್ಸೂಚನೆಯನ್ನೂ ಕೊಟ್ಟ.

"ಅದೇನೋ ಸರಿ. ಸಾಹೇಬರಿಗೆ ಬೇಸರ ಬಂದು ದೂರ ತಳ್ಳು ಅಂತ ಹೇಳಿದರೆ ನಾವು ಬೇರೆ ಜನ ಆಗಬೇಕಾಗ್ತದೆ. ಆಗ ಈ ಪ್ರೀತಿ ಕಂಡುಬರೋದಿಲ್ಲ."

ಮೂರನೆಯ ಒಬ್ಬ ಯುವಕ ಪೋಲೀಸಿನವನು ತೀರ ನಿರ್ದಯನಾಗಿದ್ದ. ಆತ ಹೇಳಿದ:

"ನೀನು ಉದ್ಯೋಗ ಹುಡುಕುವುದಕ್ಕೆ ಹೊರಟ ಮಾರ್ಗ ಸರಿಯಾಗಿಲ್ಲ ಕಣೋ. ಬೆನ್ನಿನ ಮೇಲೆ ಗುದ್ದು ಬೀಳೋದಕ್ಕೆ ಮೊದಲು ಈ ಕೆಲಸ ನಿಲ್ಲಿಸು."

ಆದರೂ ಮೊದಲು ಹೇಳಿದ ಪೋಲೀಸಿನವನ ಮಾತುಗಳನ್ನೇ ಅನುಸರಿಸಿದ್ದ.

ಒಂದು ದಿನ ಕೇಶವ ಪಿಳ್ಳೆ ಚೀಫ್ ಸೆಕ್ರೆಟರಿಯ ದೃಷ್ಟಿಗೆ ಬಿದ್ದ. ಕಾರು ನಿಲ್ಲಿಸಿ ಅವರು ಕೇಳಿದರು:

"ಏನಾಗಬೇಕಿತ್ತು?"

ಒಂದೇ ಮಾತಿನಲ್ಲಿ ಹೇಳುವ ಉತ್ತರವಲ್ಲ ಅದು. ಒಂದು ಗಂಟೆಯ ವರೆಗೆ ಹೇಳಿದರೂ ತೀರುವುದಿಲ್ಲ. ಒಂದೇ ಮಾತಿನಲ್ಲಿ ಹೇಳಿದರೆ ಕಾರ್ಯಸಾಧನೆಯಾಗದೇ ಹೋಗಬಹುದು. ಕೇಶವ ಪಿಳ್ಳೆಯ ನಾಲಗೆ ಒಣಗಿತ್ತು. ಅವನು ನಡುಗುತ್ತಿದ್ದ. ಯಾವ ಉತ್ತರವೂ ನಾಲಗೆಯ ತುದಿಗೆ ಬರುತ್ತಿರಲಿಲ್ಲ. ಆದರೆ ಮರುಕ್ಷಣದಲ್ಲಿ ವಾಗ್ದೇವತೆ ಆತನನ್ನು ಅನುಗ್ರಹಿಸಿದಳು.

"ನಾನು ಉಪವಾಸ ಇದ್ದೇನೆ. ಬಿ.ಎ. ಪಾಸು ಮಾಡಿದ್ದೇನೆ."

ಚೀಫ್ ಸೆಕ್ರೆಟರಿ ಆತನನ್ನು ಆಪಾದಮಸ್ತಕ ನೋಡಿದರು. "ಅದಕ್ಕೆ ನಾನೇನು ಮಾಡಬೇಕು?"

ಅದಕ್ಕೆ ಕೂಡಲೇ ಉತ್ತರ ಹೊರಬಂದಿತು.

"ನನ್ನನ್ನು ಕಾಪಾಡಬೇಕು."

ಆತ 'ಹ್ಞು' ಎಂದರು. ಕಾರು ಮುಂದೆ ಹೋಯಿತು.

ಮತ್ತೊಂದು ದಿನ ಚೀಫ್ ಸೆಕ್ರೆಟರಿ ಕಾರನ್ನು ನಿಲ್ಲಿಸಿ ಆತನನ್ನು ಬಯ್ದರು. "ಅನಿಷ್ಟ! ಅಪಶಕುನಕ್ಕೆ ಬಂದು ನಿಂತಿದ್ದಾನೆ. ನಿನ್ನ ಹತ್ರ ನಾನು ಹೇಳಲಿಲ್ಲವೇನೋ ಖಾಲಿಯಿದ್ದಾಗ ನಿನ್ನನ್ನೇ ನೇಮಿಸ್ತೀನಿ ಅಂತ? ಇನ್ನು ಮೇಲೆ ಈ ಗೇಟಿನ ಹತ್ರ ಕಂಡ್ರೆ......... ಅನಿಷ್ಟಗಳು. ಹೇಳಿದರೆ ಅರ್ಥವಾಗೋದಿಲ್ಲ."

ಎಲ್ಲವನ್ನೂ ಕೇಳಿಸಿಕೊಳ್ಳುತ್ತಿದ್ದ ಯುವಕ ಕಾವಲುಗಾರ ಸುಮ್ಮನೆ ಬಿಡಲಿಲ್ಲ. ಚೀಫ್ ಸೆಕ್ರೆಟರಿಯ ಕಾರು ಮುಂದೆ ಹೋಯಿತು. ಆತ ಹತ್ತಿರ ಬಂದು ಹೆದರಿಸಿದ:

"ಹೇಳಿದ್ದು ಕೇಳಿಸ್ತೇನೋ? ಇನ್ನು ಮೇಲೆ ಈ ಗೇಟಿನ ಹತ್ರ ಕಂಡರೆ ಬೆನ್ನಿಗೆ ಪೆಟ್ಟು ಬೀಳುತ್ತೆ. ಹೇಳಿದೀನಿ."

ಖಾಲಿಯಿದ್ದಾಗ ನೇಮಿಸಿಕೊಳ್ಳುತ್ತೇನೆ ಎಂದು ಚೀಫ್ ಸೆಕ್ರೆಟರಿ ಹೇಳುತ್ತಾರೆ. ಹಿಂದೆ ಒಂದು ಸಲವೂ ಯಾರೂ ಹಾಗೆ ಹೇಳಿಲ್ಲ. ಯಾವ ಉದ್ಯೋಗಸ್ಥನೂ ಹಾಗೆ ಕೇಶವ ಪಿಳ್ಳೆಯ ಹತ್ತಿರ ಹೇಳಿಲ್ಲ. "ಇಲ್ಲಿ ಖಾಲಿಯಿಲ್ಲ" ಎಂದೇ ಅವನಿಗೆ ಉತ್ತರ ಸಿಕ್ಕಿದ್ದದ್ದು. ತನ್ನ ಆಸೆಗೆ ಮಾರ್ಗ ದೊರೆಯುತ್ತದೆ ಎಂದು ಕೇಶವ ಪಿಳ್ಳೆಗೆ ತೋರಿತು.

ಮತ್ತೊಂದು ದಿನ ಸಾಯಂಕಾಲದ ಹೊತ್ತಿನಲ್ಲಿ ಗೇಟಿನ ಹತ್ತಿರ ಚೀಫ್ ಸೆಕ್ರೆಟರಿ ಶಂಕರ ಪಿಳ್ಳೆಯನ್ನು ಕಂಡು ಒಳಗೆ ಬರುವಂತೆ ಹೇಳಿದರು. ಆ ದಿನ ಆತ ಹೇಳುವುದನ್ನೆಲ್ಲ ಕೇಳಿಸಿಕೊಂಡರು. ಮಾರನೆಯ ದಿನ ಆತನನ್ನು ಆಫೀಸಿಗೆ ಬರುವಂತೆ ಹೇಳಿದರು.

ಹಾಗೆ ತಿಂಗಳಿಗೆ ಹದಿನೈದು ರೂಪಾಯಿ ಸಂಬಳಕ್ಕೆ ಕೆಳವರ್ಜೆಯ ಕ್ಲಾರ್ಕಾಗಿ ಕೇಶವ ಪಿಳ್ಳೆ ಸೆಕ್ರೆಟರಿಯೇಟ್‌ನಲ್ಲಿ ನೇಮಕಗೊಂಡ.

ರೆವನ್ಯೂ ಸೆಕ್ಷನ್ನಿನಲ್ಲಿ ಅವನು ಇದ್ದದ್ದು. ಮನೆಗೆ ಕಾಗದ ಬರೆದು ಇಪ್ಪತ್ತೈದು ರೂಪಾಯಿಗಳನ್ನು ತರಿಸಿಕೊಂಡ. ಹೊಸದಾಗಿ ಷರಟು. ಮುಂಡು ಕೊಂಡುಕೊಂಡ. ತಂಬಾನೂರಿನ ಒಂದು ಲಾಡ್ಜ್‌ನಲ್ಲಿ ವಾಸಿಸತೊಡಗಿದ. ಆ ರೀತಿಯಲ್ಲಿ ಕೇಶವ ಪಿಳ್ಳೆ ಜೀವನವನ್ನು ಪ್ರಾರಂಭಿಸಿದ.

ಆ ಸೆಕ್ಷನ್ನಿನಲ್ಲಿ ಆತನೂ ಸೇರಿದಂತೆ ಸೂಪರಿಂಟೆಂಡೆಂಟರ ಕೈಕೆಳಗೆ ಐದು ಜನ ಕ್ಲಾರ್ಕರಿದ್ದರು. ಒಬ್ಬಳು ಲೇಡಿ ಕ್ಲಾರ್ಕ್. ಹರಿಹರಯ್ಯರ್ ಅವರಲ್ಲೆಲ್ಲ ಸೀನಿಯರ್. ಆತ ಕೆಲಸದಲ್ಲಿ ಸಮರ್ಥನೂ ತಿಳುವಳಿಕೆಯುಳ್ಳವನೂ, ಮಧ್ಯವಯಸ್ಸಿನವನೂ ಆದ ಒಬ್ಬ

ಬ್ರಾಹ್ಮಣ. ಅನಂತರ ಗೋವಿಂದ ನಾಯರೂ ಇದ್ದರು. ಪ್ರಭಾಕರನ್ ನಾಯರ್, ಮ್ಯಾಥ್ಯೂ ಇಬ್ಬರೂ ಯುವಕರು. ಮೂರು ನಾಲ್ಕು ವರ್ಷ ಆಗಿರಬಹುದು ಸರ್ವೀಸಿಗೆ ಸೇರಿ. ತಂಗಮ್ಮ ಸೇರಿ ಎರಡು ವರ್ಷಗಳಾಗಿದ್ದುವು. ಅವಳು ಸೆಕ್ರೆಟರಿ ಕೃಷ್ಣನ್ ನಾಯರರ ಅಣ್ಣನ ಮಗಳು. ಆ ಗುಂಪಿನಲ್ಲಿ ಒಬ್ಬನೇ ಬಿ.ಎ. ಪದವೀಧರ, ಕೇಶವ ಪಿಳ್ಳೆ.

ಜೊತೆಯಲ್ಲಿ ಓದಿದ ರಾಮಚಂದ್ರನ್ ನಾಯರನ್ನೂ ಫಿಲಿಪ್ಪನನ್ನೂ ಒಮ್ಮೊಮ್ಮೆ ಕೇಶವ ಪಿಳ್ಳೆ ಕಾಣುವುದುಂಟು. ಕೆಲವು ಸಲ ಒಂದು ಸಣ್ಣ ನಗುವಿನಿಂದ ಅವರ ತುಟಿಗಳು ಅರಳುತ್ತಿದ್ದುವು. ತನ್ನ ಕೆಲಸದಿಂದ ಕೇಶವ ಪಿಳ್ಳೆಯಲ್ಲಿ ಯಾವ ಬದಲಾವಣೆಯೂ ಉಂಟಾಗಿರಲಿಲ್ಲ.

ಆದರೆ ಒಂದು ದಿನ ಪುತ್ತನ್ ಸಂತೆಯಲ್ಲಿ ಹೃದಯದ ಮೇಲೆ ಬರೆ ಎಳೆದಂತಹ ಒಂದು ಘಟನೆ ನಡೆಯಿತು. ಪ್ರಸಾದನನ್ನು ಆಕಸ್ಮಿಕವಾಗಿ ಕೇಶವ ಪಿಳ್ಳೆ ಕಂಡ. ಪ್ರಸಾದನಿಗೆ ಬಲವಾದ ಶಿಫಾರಸ್ಸುಗಳಿದ್ದರೂ ಆ ತನಕ ಯಾವ ಕೆಲಸವೂ ಸಿಕ್ಕಿರಲಿಲ್ಲ. ಅವನು ಸಣ್ಣ ಕೆಲಸದಿಂದ ತೃಪ್ತಿಪಡುವವನಾಗಿರಲಿಲ್ಲ. ಕೇಶವ ಪಿಳ್ಳೆಯನ್ನು ಕಂಡೊಡನೆಯೇ ತೀರ ಕಟುವಾಗಿ. ತೀರ ತಾತ್ಸಾರದಿಂದ ಮಾತನಾಡಿದ.

"ನಾನು ನಿನ್ನ ಹತ್ತಿರ ಒಂದು ವಿಷಯ ಹೇಳಬೇಕೂ ಅಂತ ಆಲೋಚಿಸ್ತಿದ್ದೆ."

ಹಳೆಯ ಸ್ನೇಹಿತನ ಭಾವನೆಯಲ್ಲೂ ಧ್ವನಿಯಲ್ಲೂ ವ್ಯತ್ಯಾಸ ಕಂಡುಬಂದರೂ ಅದನ್ನು ತೋರಿಸಿಕೊಳ್ಳದೆ ಕೇಶವ ಪಿಳ್ಳೆ:

"ಹ್ಞು, ಏನು?" ಎಂದು ಕೇಳಿದ.

ಅಸಹನೀಯವಾದ ತಾತ್ಸಾರದಿಂದ ಕೇಶವ ಪಿಳ್ಳೆಯನ್ನು ಅಡಿಯಿಂದ ಮುಡಿಯ ವರೆಗೆ ಒಮ್ಮೆ ನೋಡಿದ. ಕೇಶವ ಪಿಳ್ಳೆಗೆ ಏನೂ ಅರ್ಥವಾಗಲಿಲ್ಲ. ಅವನು ಕೇಳಿದ:

"ನೀನ್ಯಾಕೆ ಹೀಗೆ ದುರುಗುಟ್ಟಿಕೊಂಡು ನೋಡ್ತೀಯ?"

ಪ್ರಸಾದ್ ಕೇಳಿದ:

"ನಿನಗೆ ಜೀವಿಸೋದಕ್ಕೆ ಬೇರೆ ಮಾರ್ಗವಿಲ್ಲದೇ ಹೋದರೆ ನೇಣು ಹಾಕಿಕೊಂಡು ಸಾಯಬಾರದಾ?"

ಎಂದು ಮತ್ತೆ ಕೇಳಿದ:

"ಬೇರೆಯವರಿಗೆ ಯಾಕೆ ತೊಂದರೆ ಕೊಡ್ತೀಯಾ?"

ಕೇಶವ ಪಿಳ್ಳೆಗೆ ಯಾವುದೂ ಅರ್ಥವಾಗದೆ ಕೇಳಿದ:

"ನಾನೇನು ಮಾಡಿದೆ?"

ತನ್ನಿಂದಾಗಿ ಪ್ರಸಾದನಿಗೆ ಯಾವುದೇ ತೊಂದರೆ ಉಂಟಾದದ್ದೂ ಕೇಶವ ಪಿಳ್ಳೆಗೆ ನೆನಪಿಲ್ಲ. ಪ್ರಸಾದ್ ವಿಷಯವನ್ನು ನೇರವಾಗಿ ಹೇಳಿದ:

"ನೀನು ಬಿ.ಎ. ಡಿಗ್ರಿಗೇ ಅವಮಾನ ಮಾಡಿದೆ. ಅದಕ್ಕೆ ಬೆಲೆಯಿಲ್ಲದ ಹಾಗೆ ಮಾಡಿದೆ. ನೀನು ಮಾನ ಬಿಟ್ಟು ಬದುಕಿ ಉಳಿದವರ ಮಾನಾನೂ ಹಾಳು ಮಾಡಿದೆ."

ಆದರೂ ಕೇಶವ ಪಿಳ್ಳೆಗೆ ಅರ್ಥವಾಗಲಿಲ್ಲ. ತಪ್ಪು ಮಾಡಿದವನಂತೆ ಕೇಶವ ಪಿಳ್ಳೆ ಕೇಳಿದ:

"ನಾನು ಏನು ಮಾಡಿದೆ ಮಿತ್ರಾ?"

"ಹದಿನೈದು ರೂಪಾಯಿಗಲ್ಲವಾ ನೀನು ಕೆಲಸಕ್ಕೆ ಸೇರಿದ್ದು?"

ಆತನನ್ನು ಅದು ಹೇಗೆ ಬಾಧಿಸಿತು ಎಂದು ಪ್ರಸಾದ್ ಹೇಳಿದ. ಈಗ ಬಿ.ಎ. ಪಾಸಾದವನು ಹದಿನೈದು ರೂಪಾಯಿಗೆ ಸಿಕ್ಕುತ್ತಾನೆ ಎಂದು ಅಧಿಕಾರಿಗಳು ಭಾವಿಸುತ್ತಾರೆ. ಪ್ರಸಾದ್ ಆ ಗತಿಗೆಟ್ಟ ಸ್ಥಿತಿಗಿಳಿಯಲು ಸಿದ್ಧನಾಗಿರಲಿಲ್ಲ.

ಕೇಶವ ಪಿಳ್ಳೆಗೆ ಹೇಳಲು ಒಂದು ಅಕ್ಷರವೂ ಹೊಳೆಯಲಿಲ್ಲ. ಅದು ಕಡಿಮೆ ಸಂಬಳವೆಂದಾಗಲೀ ಆ ಕಡಿಮೆ ಸಂಬಳದ ಕೆಲಸವನ್ನು ಸ್ವೀಕರಿಸಿದುದು ಕೀಳಾಯಿತು ಎಂದಾಗಲೀ ಕೇಶವ ಪಿಳ್ಳೆಗೆ ಅನ್ನಿಸಿರಲಿಲ್ಲ. ಹೊಟ್ಟೆಯ ಪಾಡಿನ ಮಾರ್ಗಕ್ಕಾಗಿ ಎಂದು ಮಾತ್ರವೇ ಅವನು ಭಾವಿಸಿದ್ದದ್ದು. ಅದರಲ್ಲಿ ಅವನು ಸಂತೃಪ್ತನೂ ಆಗಿದ್ದ. ಆದರೆ ಓದುತ್ತಿದ್ದ ಕಾಲದಲ್ಲಿ ತರಗತಿಯಲ್ಲಿ ಪ್ರಸಾದ್ ಐಶ್ವರ್ಯವಂತ. ಒಳ್ಳೆಯ ಉಡುಗೆ ಉಟ್ಟು ಬರುತ್ತಿದ್ದ. ಧಾರಾಳವಾಗಿ ಹಣ ಖರ್ಚು ಮಾಡುತ್ತಿದ್ದ. ಅವನು ಅಂದು ಹಾಗೆ ಮಾತನಾಡುವುದಕ್ಕೂ ಶಕ್ತನಾಗಿದ್ದ. ಹಾಗಿದ್ದ ಒಬ್ಬ ಒಂದು ವೇಳೆ ಇದಕ್ಕಿಂತ ಹೆಚ್ಚಿನ ಸಂಬಳವಿರುವ ಕೆಲಸವನ್ನು ನಿರೀಕ್ಷಿಸಬಹುದು.

ಸಹಿಸಲಾಗದ ಬೇಸರದಿಂದ ಪ್ರಸಾದ್ ಕೇಳಿದ:

"ಈಗ ಪ್ರತಿ ದಿನ ಎಷ್ಟು ಸಲ 'ಜೀ ಹುಜೂರ್!' ಅಂತಿಯ?"

ಏನನ್ನೂ ಮಾತನಾಡದೆ ಕೇಶವ ಪಿಳ್ಳೆ ಹೊರಟ. ಪ್ರಸಾದ್ ಹೇಳಿದ್ದು ಒಂದು ವೇಳೆ ಸರಿಯಿರಬಹುದು. ತಾನು ಬಿ.ಎ. ಡಿಗ್ರಿಗೆ ಬೆಲೆ ಕಡಿಮೆ ಮಾಡಿ ಮಾರಿದ್ದಾಗಿರಬಹುದು. ಆದರೆ ಜೀವನ ಒಂದು ಪ್ರಶ್ನೆಯಾಗಿತ್ತು. ಸಂಬಳ ಜೀವನಕ್ಕೆ ಹೇಗೋ ಸಾಕಾಗುತ್ತಿದೆ. ಅದರ ಬಗ್ಗೆ ಅವನದು ಯಾವ ದೂರೂ ಇಲ್ಲ. ಮಾತ್ರವಲ್ಲ, ಅವನು ಸಂತೃಪ್ತನೂ ಆಗಿದ್ದ. ಹಾಗೆ ಆರೇಳು ತಿಂಗಳು ಕಳೆದುವು. ಸಾಧಾರಣವಾಗಿ ಕೆಲಸವನ್ನೂ ಕಲಿತುಕೊಂಡ. ಬಿ.ಎ. ಪದವೀಧರನೆನ್ನುವುದರಿಂದಾಗಿ ಕೆಲವು ಮುಖ್ಯ ಕಾಗದಗಳ ನಕಲುಗಳನ್ನು ಆತನಿಂದಲೇ ಹರಿಹರಯ್ಯರ್ ತಯಾರಿಸುತ್ತಿದ್ದದ್ದು. ಅವನಿಗೆ ಕೆಲಸವನ್ನು ಕಲಸಬೇಕೆಂದು ಹರಿಹರಯ್ಯರ್ ಉದ್ದೇಶಿಸಿಯೂ ಇದ್ದರು. ಕೆಲವು ಸಲ ಹೇಳುತ್ತಿದ್ದರು:

"ಕೇಶವ ಪಿಳ್ಳೆ ಬಿ.ಎ. ಪದವೀಧರ. ಅವನು ಯಾವ ಉದ್ಯೋಗದ ವರೆಗೆ ಏರಿ ಹೋಗೋದಕ್ಕಾಗೋದಿಲ್ಲ? ಏನೂ ಆಗಬಹುದು. ಅದಕ್ಕಾಗಿ ಕೆಲಸ ಕಲಿತುಕೊಂಡಿರಲಿ."

ಜೊತೆಯವರಿಗೆ ಯಾರಿಗೂ ಅವನ ಮೇಲೆ ಅಸೂಯೆಯಾಗಲೀ ಕಲುಷವಾಗಲೀ ಇರಲಿಲ್ಲ. ಹಾಗೆಯೆ ಕಾಲ ಕಳೆಯುತ್ತಿದ್ದಾಗ ಸ್ಪೆಷಲ್ ಸೂಪರಿಂಟೆಂಡೆಂಟ್

ವೈಯಾಪುರಿ ಪಿಳ್ಳೆ ಒಂದು ತಿಂಗಳು ರಜ ತೆಗೆದುಕೊಂಡರು. ಅವರ ಬದಲಿಗೆ ಸ್ಪೆಷಲ್ ಸೂಪರಿಂಟೆಂಡೆಂಟ್ ಆಗಿ ಬಂದದ್ದು ಕೇಶವ ಪಿಳ್ಳೆಯ ಜೊತೆಯಲ್ಲಿ ಓದಿದ ರಾಮಚಂದ್ರನ್ ನಾಯರ್. ಕೇಶವ ಪಿಳ್ಳೆಯ ಪರಿಚಯವಿದ್ದಂತೆ ಕೂಡ ಸೂಪರಿಂಟೆಂಡೆಂಟ್ ತೋರಿಸಿ ಕೊಳ್ಳಲಿಲ್ಲ. ಜೊತೆಯಲ್ಲಿ ಓದಿದ್ದು ಎನ್ನುವ ಭಾವನೆ ಕೇಶವ ಪಿಳ್ಳೆಗೂ ಇರಲಿಲ್ಲ.

ಒಂದು ದಿನ ಮಧ್ಯಾಹ್ನದ ನಂತರ ಸೂಪರಿಂಟೆಂಡೆಂಟ್ ಕೇಶವ ಪಿಳ್ಳೆಯನ್ನು ತನ್ನ ರೂಮಿಗೆ ಬರ ಹೇಳಿದ. ಹಿಂದೆ ಎಂದೂ ಕಾಣದಿದ್ದ ರೀತಿಯಲ್ಲಿ ಸೂಪರಿಂಟೆಂಡೆಂಟ್ ಅವನ ಮುಂದೆ ಮೇಜಿನ ಮೇಲಿದ್ದ ಒಂದು ಪೇಪರನ್ನು ತೋರಿಸುತ್ತ ಕೇಳಿದ:

"ಇದು ಯಾರು ತಯಾರು ಮಾಡಿದ ಡ್ರಾಫ್ಟ್?"

ಮೇಲಧಿಕಾರಿಯ, ಅಧಿಕಾರಯುತವಾದ ಪ್ರಶ್ನೆಯಾಗಿತ್ತು ಅದು.

ಕೇಶವ ಪಿಳ್ಳೆ ತಯಾರಿಸಿದ ನಕಲು ಅದು. ಆ ನಕಲಿನಲ್ಲಿ ಸೂಪರಿಂಟೆಂಡೆಂಟ್ ತುಂಬ ಕಡೆ ಹೊಡೆದು ತಿದ್ದಿ ಬರೆದಿದ್ದ. ಕೇಶವ ಪಿಳ್ಳೆ ಬೆವತುಹೋದ. ಅವನು ಏನನ್ನೂ ಮಾತನಾಡಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ರಾಮಚಂದ್ರನ್ ನಾಯರ್ ಹೇಳಿದ:

"ನೀನು ಹೋಗಬಹುದು."

ತೇಜೋಹೀನನಾಗಿ ಕೇಶವ ಪಿಳ್ಳೆ ಅಲ್ಲಿಂದ ಹೊರಟು ಬಂದ. ಮೇಲಧಿಕಾರಿಯ ಕರ್ಕಶವಾದ ಆಜ್ಞೆಯಾಗಿತ್ತು. ಒಂದು ವೇಳೆ ಜೊತೆಯಲ್ಲಿ ಓದಿದವನಾದ್ದರಿಂದ ಹೆಚ್ಚಿಗೆ ಏನನ್ನೂ ಹೇಳದೇ ಹೋಗಿರಬಹುದು.

ಕೇಶವ ಪಿಳ್ಳೆ ಬಂದು ತನ್ನ ಸ್ಥಾನದಲ್ಲಿ ಕುಳಿತುಕೊಂಡ. ಅವನಿಗೆ ಅಳು ಬಂದಿತು. ಉಳಿದವರು ಏನಾಯಿತು? ಎಂದು ಕೇಳಿದರು. ಅವನಿಗೆ ಏನನ್ನೂ ಹೇಳಲಾಗಲಿಲ್ಲ. ಸ್ವಲ್ಪ ಹೊತ್ತು ಬಿಟ್ಟ ಮೇಲೆ ಆ ನಕಲು. ಸೂಪರಿಂಟೆಂಡೆಂಟಿನ ತಿದ್ದುಪಡಿಯೊಡನೆ ಹಿಂದಿ ರುಗಿತು. ಅದರ ಸರಿಯಾದ ತಿಳಿವಳಿಕೆಯುಳ್ಳ ಹರಿಹರಯ್ಯರ್ ಆ ತಿದ್ದುಪಡಿಗಳನ್ನು ಶ್ರದ್ಧೆಯಿಂದ ನೋಡಿದರು. ಆಗ ಅವರ ಮುಖದಲ್ಲಿ ಒಂದು ಸಣ್ಣ ನಗು ಮೂಡು ತ್ತಿತ್ತು. ಕೇಶವ ಪಿಳ್ಳೆ ಮತ್ತು ತಂಗಮ್ಮನನ್ನುಳಿದು ಉಳಿದ ಕ್ಲಾರ್ಕ್‌ಗಳು ಹರಿಹರಯ್ಯರರ ಸುತ್ತ ಸೇರಿದರು. ಹರಿಹರಯ್ಯರಿಗೆ ಎಲ್ಲವೂ ಅರ್ಥವಾಯಿತು. ಅವರು ಆ ಪೇಪರನ್ನು ಗೋವಿಂದನ್ ನಾಯರರ ಕೈಗೆ ಕೊಟ್ಟರು.

"ಓದಿ ನೋಡಿ. ಆ ಮೇಲೆ ಹೇಳಿ!"

ತಿದ್ದುಪಡಿಯನ್ನು ಓದಿಕೊಂಡಿದ್ದಾಗಲೇ ಗೋವಿಂದನ್ ನಾಯರ್‌ಗೆ ಗಟ್ಟಿಯಾಗಿ ನಗು ಬಂದಿತು. ನಂತರ ಮ್ಯಾಥ್ಯು. ಪ್ರಭಾಕರನ್ ನಾಯರ್ ಅದನ್ನು ಓದಿದರು. ತನ್ನ ತಪ್ಪುಗಳನ್ನು ನೋಡಿ ಎಲ್ಲರೂ ನಗುತ್ತಿದ್ದಾರೆ ಎಂದು ಕೇಶವ ಪಿಳ್ಳೆ ಭಾವಿಸಿದ. ಅವನು ಗಟ್ಟಿಯಾಗಿ ಅಳುತ್ತ ಹೇಳಿದ:

"ಯಾರೂ ಅಷ್ಟೊಂದು ನಗಬೇಡಿ."

ಪುನಃ ಎಲ್ಲರೂ ಗಟ್ಟಿಯಾಗಿ ನಕ್ಕರು. ಗೋವಿಂದನ್ ನಾಯರ್ ಹೇಳಿದರು:

"ಇದನ್ನೇ ಫೇರ್ ಕಾಪಿ ಮಾಡಿ ಕಳಿಸಬೇಕು ಹರಿಹರಯ್ಯರೇ, ಹೋಗಲಿ."

ಅದನ್ನು ಕೇಳಿ ಕೇಶವ ಪಿಳ್ಳೆ ಎಲ್ಲರೂ ತನ್ನ ಶತ್ರುಗಳೆನ್ನುವಂತೆ ಭಾವಿಸಿ ಹೇಳಿದ:

"ಕಳಿಸಿ. ನನಗೇನಂತೆ. ನನಗೆ ಪ್ರೊಮೋಶನ್ ಸಿಕ್ಕದೇ ಹೋಗಬಹುದು. ಇಲ್ಲದೇ ಇದ್ದರೆ ಮನೆಗೆ ಕಳಿಸಬಹುದು. ಅಷ್ಟೇ ತಾನೇ?"

ಕೇಶವ ಪಿಳ್ಳೆ ಹೇಳಿದ್ದನ್ನು ಯಾರೂ ಗಮನಿಸಲಿಲ್ಲ. ಗೋವಿಂದನ್ ನಾಯರರ ನಿರ್ದೇಶನ ಒಪ್ಪಿಗೆಯಾಗದೆ ಹರಿಹರಯ್ಯರ್ ಹೇಳಿದರು: "ಅದು ಸಾಧ್ಯವಿಲ್ಲ ಗೋವಿಂದನ್ ನಾಯರೇ, ಅದು ಸರಿಯಲ್ಲ. ನಮ್ಮ ಸೆಕ್ಷನ್‌ಗೇ ಅಪಮಾನ. ಇಲ್ಲಿ ತಪ್ಪಿಲ್ಲದೆ ಬರೆಯೋರು ಯಾರೂ ಇಲ್ಲ ಅಂತ ಅಲ್ಲವೇ ಅದರರ್ಥ?"

ಕೇಶವ ಪಿಳ್ಳೆ ಅವರೆಲ್ಲರ ಗಮನವನ್ನೂ ಸೆಳೆಯುವಂತೆ ಕೇಳಲು ಸಿದ್ಧನಾದ. ಅವನು ದುಃಖದಿಂದಲೂ ಸಿಟ್ಟಿನಿಂದಲೂ ಕೇಳಿದ: "ನನ್ನ ನಕಲಿನಲ್ಲಿ ತಪ್ಪೆಲ್ಲಿದೆ ಹೇಳಿ! ನಾನು ಗ್ರಾಮರ್ ಓದಿದವನು."

ಅದಕ್ಕೆ ಉತ್ತರ ಕೊಟ್ಟದ್ದು ಗೋವಿಂದನ್ ನಾಯರ್.

"ಸಾಕು ಸುಮ್ಮನಿರೋ. ಕಥೆ ಗೊತ್ತಿಲ್ಲದೆ ಏನೇನೋ ಮಾತಾಡಬೇಡ. ತಪ್ಪು ಇರೋದು ನಿನ್ನ ಬರವಣಿಗೇಲಲ್ಲ. ತಿದ್ದುಪಡಿಯಲ್ಲಿ."

ಕೇಶವ ಪಿಳ್ಳೆ ಹೇಳಿದ: "ಕಾಪಿ ಹೊಡೆದು ಪರೀಕ್ಷೆಯಲ್ಲಿ ಪಾಸಾದವನು. ಅವನಿಗೆ ಸರಿಯಾಗಿ ಬರೆಯೋದಕ್ಕೆ ಬರಬೇಕಲ್ಲ!"

ಕೇಶವ ಪಿಳ್ಳೆ ಸ್ವಲ್ಪ ಗಟ್ಟಿಯಾಗಿ ಮಾತನಾಡಿದ್ದ. ಸ್ವಲ್ಪ ಮೆತ್ತಗೆ ಮಾತನಾಡು ವಂತೆ ಹರಿಹರಯ್ಯರ್ ಕೈಸನ್ನೆ ಮಾಡಿದರು. ಸೂಪರಿಂಟೆಂಡೆಂಟ್ ಕೇಳಿಸಿಕೊಂಡಾರು ಎಂದು.

ಹರಿಹರಯ್ಯರ್ ಗೋವಿಂದನ್ ನಾಯರರ ಹತ್ತಿರ ಕೇಳಿದರು: "ಸೂಪರಿಂಟೆಂ-ಡೆಂಟ್ ಕೇಶವ ಪಿಳ್ಳೆಯಲ್ಲಿ ತಪ್ಪು ಕಂಡುಹಿಡಿಯೋದಕ್ಕೆ ಹೊರಟದ್ದು ಯಾಕೆ ಗೊತ್ತೇ?"

ಗೋವಿಂದನ್ ನಾಯರ್‌ಗೆ ಅರ್ಥವಾಗಲಿಲ್ಲ. ಹರಹರಯ್ಯರ್ ಹೇಳಿದರು: "ಡ್ರಾಫ್ಟ್ ತಪ್ಪಲ್ಲ. ಅದರ ಸಾರಾಂಶದಲ್ಲಿ ತಪ್ಪು ಇರೋದು. ಸೂಪರಿಂಟೆಂಡೆಂಟ್ ತಿದ್ದಿದಾಗ ಬರವಣಿಗೆ ತಪ್ಪಾಯಿತು. ಸಾರಾಂಶವನ್ನು ಓದಿನೋಡಿ."

ಗೋವಿಂದನ್ ನಾಯರ್ ಪುನಃ ಆ ಡ್ರಾಫ್ಟ್ ಓದಿದರು. ಸಾರಾಂಶದಲ್ಲಿ ತನಗೆ ಯಾವ ತಪ್ಪು ಉಂಟಾದದ್ದು ಎಂದು ತಿಳಿಯಲು ಕೌತುಕವುಂಟಾಯಿತು. ಸ್ವಾಮಿ ಪುನಃ ಹೇಳಿದರು: "ಅದು ಆ ಹೈಡ್ರೋ ಇಲೆಕ್ಟ್ರಿಕ್ ಪ್ರಾಜೆಕ್ಟ್‌ಗೆ ಸಂಬಂಧಿಸಿದ ಫೈಲಲ್ಲವೇ? ಅದಕ್ಕಾಗಿ ಚಿನ್ನದ ಬೆಲೆಗೆ ಸ್ಥಳ ಕೊಂಡುಕೊಳ್ಳುವುದಕ್ಕಲ್ಲವೆ? ನಾವು ಚೀಫ್ ಸೆಕ್ರೆಟರಿ ಲೈನಿನಲ್ಲಿ ಹೋಗುತ್ತೇವೆ. ಸೂಪರಿಂಟೆಂಡೆಂಟ್ ಭಕ್ತಿವಿಲಾಸದ* ಲೈನಿನಲ್ಲಿ ಹೋಗು

* ತಿರುವನಂತಪುರದ ದಿವಾನರ ಕಛೇರಿ ಮತ್ತು ನಿವಾಸ.

ತ್ತಾರೆ. ಕೇಶವ ಪಿಳ್ಳೆಗೆ ಇದು ಅರ್ಥವಾಗಲಿಲ್ಲ. ಹಳೆಯ ಮಾರ್ಗದಲ್ಲಿ ಬರೆದದ್ದು ಅದು. ವಿಷಯ ಓದಿ ನೋಡಿ."

ಚೀಫ್ ಸೆಕ್ರೆಟರಿ ಲೈನು, ಭಕ್ತಿವಿಲಾಸಂ ಲೈನು! ಕೇಶವ ಪಿಳ್ಳೆಗೆ ಒಂದೂ ಅರ್ಥವಾಗಲಿಲ್ಲ. ಗೋವಿಂದನ್ ನಾಯರ್‌ಗೆ ವಿಷಯ ತಿಳಿಯಿತು. ಹರಿಹರಯ್ಯರ್ ಹಳೆಯ ನಕಲನ್ನೂ ತಿದ್ದಿದ ನಕಲನ್ನೂ ಓದಿ ವ್ಯಾಖ್ಯಾನಿಸಿ ವ್ಯತ್ಯಾಸವನ್ನು ವಿವರಿಸಿಕೊಟ್ಟರು. ಯಾವ ರೀತಿಯಲ್ಲಿ ಆ ಡ್ರಾಫ್ಟ್ ಬರೆಯಬೇಕೆಂದು ಸೂಪರಿಂಟೆಂಡೆಂಟ್ ಉದ್ದೇಶಿಸಿದ್ದನೋ ಆ ರೀತಿಯಲ್ಲಲ್ಲ ಬರೆದದ್ದು. ಅದು ತಪ್ಪಾದದ್ದು. ಕೇಶವ ಪಿಳ್ಳೆ ಸಂಪೂರ್ಣವಾಗಿ ಹೆದರಿಹೋಗಿದ್ದ. ಆ ಫೈಲಿನ ಹಿಂದಿನ ರಿಕಾರ್ಡುಗಳನ್ನು ನೋಡಿ ಡ್ರಾಫ್ಟ್ ತಯಾರಿಸಿದ್ದ. ಅದಕ್ಕೆ ವಿಪರೀತವಾದ ಒಂದು ಅಶೋತ್ತರ ಮಾರ್ಗವುಂಟೆಂದೂ, ಅವೆರಡಕ್ಕೂ ಪರಸ್ಪರ ಮತ್ಸರವಿದೆಯೆಂದೂ ಅವನಿಗೆ ಗೊತ್ತಿರಲಿಲ್ಲ. ಆಗ ಸ್ವಾಭಾವಿಕವಾದ ಒಂದು ಸಂಶಯ ಕೇಶವ ಪಿಳ್ಳೆಗೆ ಉಂಟಾಯಿತು. ಆತ ಕೇಳಿದ: "ಹಾಗಾದರೆ ಸ್ವಾಮಿ, ಭಕ್ತಿವಿಲಾಸಂಗೂ ಚೀಫ್ ಸೆಕ್ರೆಟರಿಗೂ ದ್ವೇಷವುಂಟೇ?"

"ಈ ವಿಷಯದಲ್ಲಿ ಹಾಗೆಯೇ."

"ಅದು ಹ್ಯಾಗೆ? ದಿವಾನರು ತೀರ್ಮಾನಿಸಿದರೆ........."

ಹರಿಹರಯ್ಯರ್ ಹೇಳಿದರು: "ಚೀಫ್ ಸೆಕ್ರೆಟರಿ ಹೊರಗೆ. ಆದರೆ ಹಾಗೆ ಒದ್ದು ಹೊರಗೆ ಹಾಕೋದಕ್ಕೆ ಸಾಧ್ಯವಾ? ಪತ್ರಕರ್ತರಿದ್ದಾರೆ–ನಿಯಮ ಸಭೆಯಿದೆ. ಅವರು ಗಲಾಟೆ ಮಾಡುವುದಿಲ್ಲವೆ? ಇದು ಹಾಗಲ್ಲ. ದಿವಾನರಿಗೆ ಗೊತ್ತಿಲ್ಲ. ಈ ಒಳಜಗಳ ದಿವಾನರ ಪ್ರೈವೇಟ್ ಸೆಕ್ರೆಟರಿಗೂ. ಚೀಫ್ ಸೆಕ್ರೆಟರಿಗೂ ಇರುವಂಥಾದ್ದು."

ಕೇಶವ ಪಿಳ್ಳೆಗೆ ಸ್ವಾಮಿಯ ಮೇಲೆ ಒಂದು ಆರೋಪ ಹೊರಿಸುವುದಿತ್ತು.

"ಹಾಗಿದ್ದರೆ ಆ ವಿಷಯವನ್ನೂ ಸ್ವಾಮಿಯೇ ಹೇಳಿ ತಿಳಿಸಿಕೊಡಬಹುದಾಗಿತ್ತು."

ಹರಿಹರಯ್ಯರ್ ಹೇಳಿದರು:

"ಅದನ್ನೆಲ್ಲ ಫೈಲ್ ನೋಡಿ ತಿಳುಕೊಳ್ಳಬೇಕು. ಅದನ್ನೆಲ್ಲ ಯಾರಾದರೂ ಹೇಳಿ ಕೊಡ್ತಾರೆ ಅಂತ ಭಾವಿಸಬೇಡ."

ಗೋವಿಂದನ್ ನಾಯರ್ ನಿರ್ದೇಶಿಸಿದರು: "ತಿದ್ದುಪಡಿಯ ಈ ಬರವಣಿಗೆಯ ತಪ್ಪುಗಳನ್ನು ಸ್ವಾಮಿ. ಸೂಪರಿಂಟೆಂಡೆಂಟ್ ದೃಷ್ಟಿಗೆ ತರಬೇಕು."

ಹರಿಹರಯ್ಯರ್ ನಿಷೇಧಾರ್ಥದಲ್ಲಿ ತಲೆ ಅಲ್ಲಾಡಿಸಿ ಹೇಳಿದರು: "ನಮ್ಮಿಂದ ಸಾಧ್ಯವಿಲ್ಲಪ್ಪಾ ಸಾಧ್ಯವಿಲ್ಲ. ಅವರೆಲ್ಲ ದೊಡ್ಡವರು. ತಪ್ಪು ತೋರಿಸಿಕೊಟ್ಟಾಗ ನೀನು ಯಾರು ಎಂದು ಅವರು ಕೇಳಿದರೆ ನಾವು ಬುದ್ಧಿಯಿಲ್ಲದವರಾಗುತ್ತೇವೆ. ನಮಗೆ ಯಾರ ವಿರೋಧವೂ ಬೇಡ."

ಆ ಪೇಪರ್ ಹಾಗೇ ಹೋಗಲಿ ಎಂದು ಕೇಶವ ಪಿಳ್ಳೆ ಹೇಳಿದ. ಮೇಲಕ್ಕೆ

ಹೋದರೆ ಸೂಪರಿಂಟೆಂಡೆಂಟ್‌ಗೆ ಸಿಟ್ಟು ಬರುತ್ತೆ. ಬರಲಿ. ಆದರೆ ಹರಿಹರಯ್ಯರ್ ಹೇಳು ವುದು ಈ ತಪ್ಪುಗಳನ್ನು ನೋಡಿದರೂ ಅಸಿಸ್ಟೆಂಟ್ ಸೆಕ್ರೆಟರಿಯೋ ಸೆಕ್ರೆಟರಿಯೋ ಯಾವುದನ್ನೂ ಗಮನಿಸುವುದಿಲ್ಲ ಎಂದು. "ನೀವು ಅರ್ಥಮಾಡಿಕೊಳ್ಳಬೇಕು. ಸೂಪರಿಂಟೆಂಡೆಂಟ್ ಭಕ್ತಿವಿಲಾಸಂನ ಪ್ರೈವೇಟ್ ಸೆಕ್ರೆಟರಿಯ ಸ್ವಂತ ಮನುಷ್ಯ. ಆತನನ್ನ ಹೆಡ್ಡನನ್ನಾಗಿ ಮಾಡುವುದಕ್ಕೆ ಯಾರಾದರೂ ಹೋದರೆ ಹೋದವನಿಗೇ ತೊಂದರೆ."

ಅಂದು ಸಂಜೆ ಸೂಪರಿಂಟೆಂಡೆಂಟ್‌ನ ಒಂದು ನೋಟ್ ಬಂದಿತು. ಕೇಶವ ಪಿಳ್ಳೆ ಯನ್ನು ಡಿಸ್‌ಪ್ಯಾಚಿಂಗ್ ಕ್ಲರ್ಕಾಗಿ ನೇಮಿಸಲಾಗಿದೆ—ಎಂದು. ಆ ಕೆಲಸ ಮಾತ್ರ ಆತ ಮಾಡಿದರೆ ಸಾಕು. ಅದು ವರೆಗೆ ಆ ಕೆಲಸ ಮಾಡುತ್ತಿದ್ದದ್ದು ತಂಗಮ್ಮ. ತಂಗಮ್ಮ ನಿಗೆ ಕೇಶವ ಪಿಳ್ಳೆ ಮಾಡುತ್ತಿದ್ದ ಕೆಲಸವನ್ನು ಕೊಡಲಾಗಿತ್ತು. ಅದೊಂದು ರೀತಿಯಲ್ಲಿ ಅವನನ್ನು ಕೆಳಗಿಳಿಸಿದ್ದಾಗಿತ್ತು.

ಅದೂ ಒಂದು ಪಾಠವಾಗಿತ್ತು ಕೇಶವ ಪಿಳ್ಳೆಗೆ. ಸರ್ಕಾರದ ಆಫೀಸಿನಲ್ಲಿ ಮೇಲೆ ಬರುವುದಿರಲಿ, ಗಟ್ಟಿಯಾಗಿ ನಿಲ್ಲುವುದಕ್ಕೂ ತಿಳಿಯಬೇಕಾದ ಎಷ್ಟೋ ಸಂಗತಿಗಳಿರುತ್ತವೆ. ಕಲಿಯಬೇಕಾದದ್ದಿರುತ್ತವೆ. ಅವನವನ ಕೆಲಸ ಮಾಡಿದರೆ ಸಾಕು ಎನ್ನುವುದು ಮಾತ್ರ ವಾದರೆ, ಅದೂ ಸಾಲದು. ಅಲ್ಲಿಯ ಒಳ ಹೊರಗಿನ ಸಂಗತಿಗಳನ್ನೆಲ್ಲ ತಿಳಿದಿರಬೇಕು. ಸುಳ್ಳಿನ ಬುಗ್ಗೆಗಳನ್ನು ದೂರದಿಂದ ಕಂಡಿರಬೇಕು.

ಹೊಸ ಕೆಲಸ ತಂಗಮ್ಮನನ್ನು ತೊಂದರೆಗೊಳಗು ಮಾಡಿದ ಕೆಲಸವಾಗಿತ್ತು. ಅಪಾರ ಹಣಕಾಸಿನ ಫೈಲುಗಳನ್ನು ಅವಳು ನೋಡಬೇಕಾಗಿದ್ದದ್ದು. ಉದ್ಯೋಗಕ್ಕೆ ಪ್ರವೇಶಿಸಿದ ದಿನದಿಂದ ಡಿಸ್‌ಪ್ಯಾಚಿಂಗ್ ಅಲ್ಲದೆ ಮತ್ತೊಂದು ಕೆಲಸವನ್ನು ಅವಳು ಮಾಡಿದವಳಲ್ಲ. ಮತ್ತೊಂದು ಗೊತ್ತೂ ಇಲ್ಲ. ಅವಳು ಯಾಕೋ ಏನೋ ಕೇಶವ ಪಿಳ್ಳೆಯ ಸಹಾಯವನ್ನು ಬಯಸಿದಳು. ಹರಿಹರಯ್ಯರ ಉಪದೇಶದಂತೆ ಅದನ್ನು ಕೇಶವ ಪಿಳ್ಳೆ ಮಾಡಿಕೊಡುತ್ತಲೂ ಇದ್ದ.

ತಂಗಮ್ಮ ಮತ್ತು ಕೇಶವ ಪಿಳ್ಳೆಯ ಕುರ್ಚಿಗಳು ಹತ್ತಿರ ಹತ್ತಿರ ಆದುವು. ಅವರಿಗೆ ಮಾತನಾಡುವುದಕ್ಕೆ ಎಷ್ಟೋ ವಿಷಯಗಳಿರುತ್ತಿದ್ದುವು. ಅವಳು ತನ್ನ ಸಂಶಯಗಳನ್ನು ಕೇಳುತ್ತಿದ್ದಳು. ಅವನು ತಿದ್ದಿಕೊಡುತ್ತಿದ್ದ. ಕೆಲವು ಅವಳಿಗೆ ಅರ್ಥವಾಗುತ್ತಿರಲಿಲ್ಲ. ಹರಿಹರಯ್ಯರ್ ವ್ಯಾಖ್ಯಾನಿಸಿದರೂ ಅವಳ ತಲೆಗೆ ಹೋಗುವುದಿಲ್ಲ. ಆಗ ಕೇಶವ ಪಿಳ್ಳೆ ಹೃದ್ಯವಾದ ಮಂದಹಾಸದೊಡನೆ ಕೇಳುತ್ತಿದ್ದ. "ಈ ತಲೆಯಲ್ಲಿರೋದು ಎರೆ ಮಣ್ಣಾ?"

ಆಗ ಅವಳು ಮುಖ ಊದಿಸಿಕೊಂಡು ಉತ್ತರ ಕೊಡುತ್ತಿದ್ದಳು: "ಅದಿದ್ದರೆ ಅದೇ ಇರಲಿ, ನಷ್ಟವೇನೂ ಇಲ್ಲ."

ಅವನು ಕೇಳಿದ: "ಯಾರು ಹೇಳಿದರು ನಷ್ಟವಿಲ್ಲ ಅಂತ?"

ಅವಳು ಬಿಡಲಿಲ್ಲ:

"ಯಾರಿಗೆ ಆ ನಷ್ಟ?"

"ನನಗೆ."

ಅದು ಅವಳು ಬಯಸಿದ ಉತ್ತರ. ತಂಗಮ್ಮ ಮೌನವಾಗಿದ್ದಾಗ ಅವನು ಹೇಳು ತ್ತಿದ್ದ: "ನನ್ನ ಮೇಲೆ ಸಿಟ್ಟಾ?"

"ನನಗೆ ಸಿಟ್ಟು."

ಎಂದು ಹೇಳಿ ಮುಖ ದಪ್ಪಗೆ ಮಾಡಿಕೊಳ್ಳುತ್ತಿದ್ದಳು. ಆಗ ಅವನು ಹೇಳುತ್ತಿದ್ದ:

"ಹಾಗಾದರೆ ನನಗೂ ಸಿಟ್ಟುಂಟು." ಆತನೂ ಮುಖ ದಪ್ಪಗೆ ಮಾಡಿಕೊಳ್ಳುತ್ತಿದ್ದ.

ಹಾಗೆ ತಿಂಗಳುಗಳುರುಳಿದುವು. ರಾಮಚಂದ್ರನ್ ನಾಯರ್ ಹೋಗಿ ವೈಯಾಪುರಿ ಪಿಳ್ಳೆ ಬಂದ ಮೇಲೂ ಯಾವ ಬದಲಾವಣೆಯೂ ಉಂಟಾಗಲಿಲ್ಲ.

ಕೇಶವ ಪಿಳ್ಳೆ, ತಂಗಮ್ಮ ಇಬ್ಬರಿಗೂ ಇದ್ದ ಸಾಮೀಪ್ಯ, ಸೆಕ್ಷನ್‌ನಲ್ಲಿದ್ದವರೆಲ್ಲರ ಗಮನಕ್ಕೆ ಬಂದಿತ್ತು. ಅಲ್ಲಿದ್ದವರಲ್ಲಿ ಅವರಿಬ್ಬರೇ ಅವಿವಾಹಿತರು. ವಯಸ್ಸು, ರೂಪು —ಎಲ್ಲವೂ ಹೊಂದಿಕೆಯೂ ಆಗುತ್ತಿದ್ದುವು.

ಒಂದು ಸಲ ತಂಗಮ್ಮನೂ ಕೇಶವ ಪಿಳ್ಳೆಯೂ ಯಾವ ಕೆಲಸವನ್ನೂ ಮಾಡದೆ ತುಂಬ ಹೊತ್ತು ಸುಮ್ಮನೆ ಕುಳಿತಿದ್ದರು. ಅವರು ಅವರವರ ಚಿಂತೆಯಲ್ಲಿ ಮುಳುಗಿದ್ದರು. ಆಗ ಆ ಮೂಲೆಯಿಂದ ಹರಿಹರಯ್ಯರರ ಗಮನವನ್ನು ಸೆಳೆಯುವಂತಹ ಒಂದು ಅಭಿಪ್ರಾಯ ಹೊರಬಿದ್ದಿತು.

"ಮದುವೆಯಾಗದೇ ಇರೋರನ್ನ ಒಂದು ಆಫೀಸಿನಲ್ಲಿ ಹತ್ತಿರ ಹತ್ತಿರ ಕುಳ್ಳಿರಿಸಿ. ದರೆ ಉಂಟಾಗೋ ದೋಷ ನೋಡಿದಿರಾ ಸ್ವಾಮಿ."

ಸ್ವಾಮಿ ಹೇಳಿದರು: "ಹುಡುಗರಲ್ಲವೆ? ಅವರು ಹಾಗೇ ಸ್ವಲ್ಪ ಸ್ವಪ್ನ ಕಾಣಲಿ ಸರ್ಕಾರದ ಕೆಲಸದ ಯಾಂತ್ರಿಕತೆಯಲ್ಲಿ ಇದೊಂದು ವಿನೋದ ಇರಬೇಕಾದದ್ದೇ. ಅಲ್ಲವಾ ತಂಗಮ್ಮಾ?"

ಸ್ವಾಮಿ ಹಲ್ಲು ತೋರಿಸುತ್ತ ನಕ್ಕರು. ನಂತರ ಹೇಳಿದರು: "ಒಬ್ಬ ಬ್ರಾಹ್ಮಣನ ಆಶೀರ್ವಾದ ಕೇಶವ ಪಿಳ್ಳೆ! ನಿಮಗೆ ಆಯುರಾರೋಗ್ಯ ಸಂತಾನ ಸಂಪತ್‌ಸಮೃದ್ಧಿ ಯುಂಟಾಗಲಿ."

ತಂಗಮ್ಮ ನಾಚಿಕೆಯಿಂದ ತಲೆತಗ್ಗಿಸಿದಳು. ಕೇಶವ ಪಿಳ್ಳೆಯ ಮುಖ ಸ್ವಲ್ಪ ಕೆಂಪಾಯಿತು, ನಾಚಿಕೆಯಿಂದ.

ಗೋವಿಂದನ್ ನಾಯರ್ ಅವರಿದ್ದ ಸ್ಥಿತಿಯನ್ನು ನೋಡಿ ಹೇಳಿದರು: "ಇವತ್ತು ನೀವು ಮದುವೆ ಆದವರು."

ಕೇಶವ ಪಿಳ್ಳೆ ಹೇಳಿದ: "ಸರಿ. ಏನು ತಂಗಮ್ಮ ಅದು ಒಪ್ಪಿಗೆಯಾಯ್ತಾ? ಹಾಗಿದ್ದರೆ—"

ಏನನ್ನೂ ಹೇಳಲು ಸಾಧ್ಯವಿಲ್ಲದೆ ತಂಗಮ್ಮ ತಲೆತಗ್ಗಿಸಿ ಕುಳಿತಿದ್ದಳು.

ಎಲ್ಲರೂ ಆ ಉತ್ಸಾಹದಲ್ಲಿ ಸೇರಿದರು. ಮದುವೆ ಮಂಟಪದಲ್ಲಿ ವರವಧು

ಕುಳಿತಿರುವಂತೆ ಅವರು ಕುಳಿತಿದ್ದರು. ಆಫೀಸಿನ ಕೆಲಸದ ಜವಾಬ್ದಾರಿಯಿದ್ದ ಹರಿಹರ ಯ್ಯರ್ ಹೇಳಿದರು: "ಎಲ್ಲ ಸರಿ. ಮದುವೆ ನಡೆಯಿತು; ಒಪ್ಪಿದೆ. ಇನ್ನು ಸರ್ಕಾರದ ಕೆಲಸ ನಡೆಯಲಿ !"

ಮಾರನೆಯ ದಿನದ ನಂತರ ದಿನಕ್ಕೊಂದು ಸಲವಾದರೂ ಕೇಶವ ಪಿಳ್ಳೆ ತಂಗಮ್ಮನ ಹತ್ತಿರ ಹೇಳುತ್ತಿದ್ದ:

"ತಂಗಮ್ಮ, ನನ್ನ ಹೆಂಡತಿ ಗೊತ್ತಾಯ್ತಾ?"

ಅಲ್ಲ ಎಂದು ಅವಳು ಹೇಳಿಲ್ಲ.

ಕೇಳುವಾಗ ನಾಚಿಕೆಯಾಗುವುದಿದ್ದರೂ ಅವಳಿಗೆ ಅದು ಇಷ್ಟವಾದದ್ದು. ಯಾರಿಗೂ ಕಾಣದಂತೆ ಕೇಶವ ಪಿಳ್ಳೆ ಎನ್ನುವ ಪುರುಷನನ್ನು ಆರ್ತಿಯಿಂದ ನೋಡಿ ಕೊಂಡಿರುತ್ತಿದ್ದಳು. ಅವಳ ಕಣ್ಣುಗಳ ಅಂತರಾಳದಲ್ಲಿ ಆರ್ತಿಯ ಛಾಯೆಯಿದ್ದುದು ಕಾಣಿಸಿತು.

ಒಮ್ಮೆ ಅವನಂ "ತಂಗಮ್ಮ, ನನ್ನ ಹೆಂಡತಿ" ಎಂದು ಹೇಳಿದಾಗ ಅವಳು ಕೇಳಿದಳು: "ನನ್ನ ಪ್ರೀತಿಸ್ತೀರಾ?"

ಅವನು ಒಂದು ನಿಮಿಷ ಕಳೆದು ಉತ್ತರವಾಗಿ ತಾನೊಂದು ಪ್ರಶ್ನೆಯನ್ನು ಹಾಕಿದ:

"ನೀನೋ?"

"ಮೊದಲು ಕೇಳಿದ್ದು ನಾನು, ಅದಕ್ಕುತ್ತರ ಹೇಳಬೇಕು."

ಕೇಶವ ಪಿಳ್ಳೆಯೂ ಬಿಡಲಿಲ್ಲ.

"ಮೊದಲು ನನ್ನ ಪ್ರಶ್ನೆಗೆ ಉತ್ತರ ಹೇಳು. ನೀನು ನನ್ನ ಹೆಂಡತಿ ಅಲ್ವಾ?"

ತಂಗಮ್ಮನ ಹಕ್ಕು ಮೊದಲು ತಾನು ಕೇಳಿದ್ದು ಎಂದಾಗಿತ್ತು. ಆದ್ದರಿಂದ ಮೊದಲು ಉತ್ತರ ಸಿಕ್ಕಬೇಕಾದದ್ದು ಅವಳಿಗೆ. ಆ ವಾದವಿವಾದಗಳು ಸಿಪಾಯಿ ಮಾಧವನ್ ಪಿಳ್ಳೆ ಮಧ್ಯೆ ಬಂದದ್ದರಿಂದ ನಿಂತುಹೋದುವು.

ಅಂದು ಸಂಜೆ ಆಫೀಸು ಬಿಟ್ಟು ಹೋಗುವ ಹೊತ್ತಿನಲ್ಲಿ ಅವಳು ಮೆಲ್ಲನೆ ಅವನ ಕಿವಿಯಲ್ಲಿ ಹೇಳಿದಳು:

"ನಾನು ಪ್ರೀತಿಸ್ತೇನೆ."

ಅವಳ ಕಣ್ಣುಗಳು ಪ್ರಜ್ವಲಿಸಿದುವು. ಪ್ರಜ್ವಲಿಸಿಕೊಂಡೇ ಇದ್ದುವು.

ಅವಳು ತಾನು ಮೊದಲು ಕೇಳಿದುದು ಎನ್ನುವ ಹಕ್ಕನ್ನು ಕೈಬಿಟ್ಟು ಅವನ ಪ್ರಶ್ನೆಗೆ ಉತ್ತರವನ್ನು ನೀಡಿದ್ದಳು. ಆತನ ಉತ್ತರಕ್ಕಾಗಿ ಅವಳು ಕಾಯುತ್ತಿದ್ದಂತೆ ತೋರಿತು. ಅವನು ಹೇಳಿದ:

"ನೀನು ನನ್ನ ಹೆಂಡ್ತಿ ತಾನೆ?"

ಇತ್ತೀಚೆಗೆ ಎಲ್ಲರೂ ಆಫೀಸಿಗೆ ಬರುವುದಕ್ಕೆ ಮೊದಲೇ ಆಫೀಸಿಗೆ ಬರುತ್ತಿದ್ದಾಳೆ. ಅವಳು ಮತ್ತೊಂದು ದಿನ ಕೇಳಿದಳು:

"ಹೀಗೆ ಲೇಟಾಗಿ ಆಫೀಸಿಗೆ ಬಂದ್ರೆ?"

ಕೇಶವ ಪಿಳ್ಳೆ ಒಮ್ಮೆಯೂ ತಡವಾಗಿ ಬಂದಿರಲಿಲ್ಲ. ಅವನು ಹೇಳಿದ:

"ನಾನು ಹೊತ್ತಿಗೆ ಸರಿಯಾಗಿ ಬರುತ್ತಿದ್ದೇನಲ್ಲ? ಯಾರು ಹೇಳಿದ್ದು ನಾನು ತಡವಾಗಿ ಬರ್‍ತಿದ್ದೇನೆ ಅಂತ?"

ಒಂದು ಹುಸಿ ನಗುವಿನೊಡನೆ ಅವಳು ಹೇಳಿದಳು:

"ನಾನು ಹೇಳಿದ್ದು ತಡವಾಗ್ತಿದೆ ಅಂತ."

ಅವನಿಗೆ ತನ್ನ ಮಾತು ಅರ್ಥವಾಗಿಲ್ಲವೆಂದು ಎನ್ನಿಸಿತು. ಅವಳು ಹೇಳಿದಳು:

"ನಾನು ಅರ್ಧ ಗಂಟೆ ಮೊದಲೇ ಬಂದಿರ್‍ತೇನೆ."

ಎಂದು ಹೇಳಿ ಅರ್ಥವತ್ತಾಗಿ ನಗುತ್ತಾ ಮೋಹಕತೆಯಿಂದ ನಗುತ್ತಾ ಅವನ ಮುಖದಲ್ಲಿ ದೃಷ್ಟಿಯನ್ನು ನೆಟ್ಟಳು. ಸ್ವಲ್ಪ ದಿಟ್ಟಿಸಿ ನೋಡಿದರೆ ಅದು ಹಸಿದ ಮೃಗದ ನೋಟದಂತೆ ತೋರುತ್ತಿತ್ತು.

ಅವನು ಕ್ಷಮಾಯಾಚನೆಯ ಧ್ವನಿಯಲ್ಲಿ ಹೇಳಿದ:

"ನಾಳೆಯಿಂದ ನಾನು ತಡವಾಗಿ ಬರೋದಿಲ್ಲ."

ಆ ದಿನ ಮಾದೇವನ್ ಪಿಳ್ಳೆಯೂ ಕೇಶವ ಪಿಳ್ಳೆಯೊಡನೆ ಹೇಳಿದ:

"ಆ ಹುಡುಗಿ ಎಷ್ಟು ದಿವಸದಿಂದ ಕಾಯ್ತಿರುತ್ತೆ ಅಂತ ಗೊತ್ತ? ಸಾರ್ ಸ್ವಲ್ಪ ಹೊತ್ತಿಗೆ ಮುಂಚೆ ಬಂದರೇನು?"

ಎಂದು ಹೇಳಿ ಆ ಮುದುಕ ಮೆಲ್ಲಗೆ ಆತನ ಕಿವಿಯಲ್ಲಿ ಹೇಳಿದ:

"ಗುಟ್ಟಾಗಿ ಏನೋ ಹೇಳೋದಿರಬೇಕು" ಎಂದು.

ಮಾದೇವನ್ ಪಿಳ್ಳೆ ಒಂದು ಮುನ್ಸೂಚನೆಯನ್ನು ಕೊಟ್ಟಿದ್ದ:

"ಆದರೆ ಶ್ರೀಪದ್ಮನಾಭನ ಆಫೀಸು ಇದು. ಇಲ್ಲಿ ಶುದ್ಧವೂ ಆಚಾರವೂ ಇರಬೇಕು."

ಹಾಗೆ ಮೂರನೇ ದಿನ ಕೇಶವ ಪಿಳ್ಳೆ ಬೇಗನೇ ಬಂದ.

ತಂಗಮ್ಮನ ತಂದೆಯ ತಮ್ಮ ಕೃಷ್ಣನ್ನಾಯರ್ ಸರ್ಕಾರದ ಸೆಕ್ರೆಟರಿ. ಆ ಹಿನ್ನೆಲೆಯಲ್ಲೇ ತಂಗಮ್ಮನಿಗೆ ಉದ್ಯೋಗ ಸಿಕ್ಕಿದ್ದು. ಖಂಡಿತವಾಗಿಯೂ ಕೇಶವ ಪಿಳ್ಳೆ ತಂಗಮ್ಮನ ಹೃದಯವನ್ನು ಅಪಹರಿಸಿಲ್ಲ ಎನ್ನುವಂತಿಲ್ಲ. ಅಪಹರಿಸಲ್ಪಟ್ಟದ್ದು ಹೃದಯವೋ ಏನೋ! ಅವಳಿಗೆ ಆತನ ಹೃದಯವನ್ನು ತನ್ನದನ್ನಾಗಿ ಮಾಡಿಕೊಳ್ಳಲು ಸಾಧ್ಯವಾಗಿದೆಯೇ ಎಂದು ಕೇಳಲು ಅವನಿಗೂ ಒಂದು ರೀತಿಯ ಉತ್ಸಾಹವಿದೆ. ಅದು ಪರವಶವಾಗುವ ಮಾರ್ಗವೂ ಆಗಿರಬಹುದು. ತಂಗಮ್ಮನಿಗೆ ಒಬ್ಬ ಗಂಡ ಬೇಕಾಗಿರಬಹುದು. ಅದಕ್ಕೆ ತಕ್ಕ ಆಳನ್ನು ಅವಳು ಕಂಡುಹಿಡಿದಳು. ಇದನ್ನೇ ಅಲ್ಲವೆ ಪ್ರೇಮ ಎಂದು ಹೇಳುವುದು? ಅಲ್ಲದೆ ಮತ್ತೇನು? ಅವನಿಗೂ ಒಬ್ಬಳು ಹೆಂಡತಿ ಬೇಕೆಂದಿರಬಹುದು. ತಂಗಮ್ಮನಲ್ಲೂ ಒಂದು ಕಾತರತೆಯಿದೆ. ಅವಳು ಪತ್ನಿಯಾಗಿ ಸಿಕ್ಕಿದರೆ

ಒಂದು ಗುಣವೂ ಇದೆ. ಕೇಶವ ಪಿಳ್ಳೆಯ ಈ ಉತ್ಸಾಹದ ನೆಲೆಯನ್ನು ಪ್ರೇಮ ಎಂದು ಹೇಳಬಹುದಲ್ಲವೆ? ಅದೂ ಪ್ರೇಮವೇ. ಅವಳಿಗೆ ಅವನು ಹತ್ತಿರದವನಾಗುತ್ತಿದ್ದಾನೆ. ತನ್ನ ಕಡೆಗೆ ಅವನನ್ನು ಹಿಡಿದು ಆಕೆ ಹತ್ತಿರ ಮಾಡಿಕೊಳ್ಳುತ್ತಲೂ ಇದ್ದಾಳೆ. ಇಂದು ಅವರಿಗೆ ಗುಟ್ಟಾದ ಸಂಕೇತಗಳಾವುದೂ ಇಲ್ಲ. ಆದರೆ ಅದು ಇರಲೂ ಬಹುದು. ಹಾಗಿರುವುದಕ್ಕೆ ಅವಳು ಪ್ರಯತ್ನಿಸುತ್ತಿರಬಹುದೆ? ಆಗ ಅಲ್ಲಿ ಅವನ ತಲೆಯನ್ನು ಭುಜಕ್ಕಾನಿಸಿ ಸಾವಿರ ವಿಷಯಗಳನ್ನು ಅವನೊಡನೆ ಹೇಳಬೇಕಾದದ್ದಿದೆ. ಅವಳು ಪ್ರತಿಜ್ಞೆ ಮಾಡಿ ಏನೇನನ್ನೋ ಹೇಳುತ್ತಿರುವಾಗ ಅವನೂ ಪ್ರತಿಜ್ಞೆ ಮಾಡಿ ಹೇಳಬೇಕೆಂದು ಆಸೆಪಟ್ಟಿರಬೇಕು. ಎಷ್ಟೋ ಸಮಯ ಕಳೆದ ಮೇಲೆ ಅವನೂ ಆಣೆಯಿಟ್ಟು ಮಾತು ಕೊಟ್ಟಾನು. ಆಗ ಒಂದೇ ಹೊತ್ತಿನಲ್ಲಿ ಒಬ್ಬರಿಗೊಬ್ಬರು ಮಾತು ಕೊಡುವುದನ್ನೂ ಪಡೆಯುವುದನ್ನೂ ಮಾಡಿಯಾರು. ಹೀಗೇ ಅಲ್ಲವೇ ಪ್ರೇಮದಿಂದ ವಿವಾಹದ ಕಡೆಗೆ ತಿರುಗುವುದು?

# [3]

## ತಪ್ಪುಗಳು

ತೋಟ್ಟಪ್ಪಳ್ಳಿಯಲ್ಲಿ ಬೋಟ್‌ನಿಂದ ಇಳಿದ ಬಳಿಕ ಕೇಶವ ಪಿಳ್ಳೆ ಹತ್ತಿರದ ಕೊಲ್ಲದಿಂದ ಆಲಪ್ಪುಳಿಗೆ ಬಂದ ಬೇರೆ ಬೋಟಿನಲ್ಲಿ ಕರುವಾಡಿಯಲ್ಲಿಳಿದು ಮನೆಯನ್ನು ತಲಪಿದ. ಇಪ್ಪತ್ತೊಂಬತ್ತನೆಯ ತಾರೀಕು ಬರುವುದಾಗಿ ಅಮ್ಮನೊಡನೆಯೂ ಅಕ್ಕ ಡನೆಯೂ ಹೇಳಿದ. ನಾಚಿಕೆಯಿಂದಾಗಿ ಏನನ್ನೂ ಹೇಳದೆ ಹೋಗಿದ್ದದ್ದು ಎನ್ನುವ ಯಮ್ಮನಿಗೆ ತನ್ನ ಅಭಿಪ್ರಾಯ ಸರಿ ಎನ್ನಿಸಿತು. ಆದ್ದರಿಂದಲೇ ಕುಟ್ಟಿಯಮ್ಮ ಪೊದಿಸಿದ್ದದ್ದು.

ಮಾರನೆಯ ದಿನ ಬೆಳಗ್ಗೆ ಕೇಶವ ಪಿಳ್ಳೆ ಆಫೀಸನ್ನು ತಲಪಿದ. ಕ್ಯಾಶುಯಲ್ ಲೀವ್ ಆಗಿದ್ದರೂ ಸೂಪರಿನ್‌ಟೆಂಡೆಂಟ್ ರಜಾ ಕೊಟ್ಟಿರಲಿಲ್ಲ. ಅದೊಂದು ಪ್ರಶ್ನೆಯಾಗಿತ್ತು. ಆ ಸಂದರ್ಭದಲ್ಲಿ ಅದು ಅವನನ್ನು ಚಿಂತೆಗೊಳಗುಮಾಡಿತ್ತು. ಪರಿಪರಯ್ಯರ್, ಗೋವಿಂದನ್ ನಾಯರ್ ಮುಂತಾದವರೆಲ್ಲ 'ಮನೆಯಲ್ಲೇನು ವಿಶೇಷ?' ಎಂದು ಕೇಳಿದರು. ತೇಲಿಸುವ ಧ್ವನಿಯಲ್ಲಿ ಕೇಶವ ಪಿಳ್ಳೆ ಅದಕ್ಕೆ ಉತ್ತರಿಸಿದ:

"ಅಮ್ಮನ ಭ್ರಾಂತಿ."

ಅವರೆಲ್ಲರೂ ಅದನ್ನು ನಂಬಿದಂತೆ ತೋರಿತು. ಆದರೆ ಹಾಗೆ ತೇಲಿಸಿ ಹೇಳಿ ತಂಗಮ್ಮನನ್ನು ಸಮಾಧಾನಪಡಿಸಲು ಸಾಧ್ಯವಿಲ್ಲ. ಅವಳು ಸಾವಿರ ಪ್ರಶ್ನೆಗಳನ್ನು ಒತ್ತಿ ಒತ್ತಿ ಕೇಳುತ್ತಾಳೆ: ತಾನು ಸಮಾಧಾನವಾದ ಉತ್ತರವನ್ನು ಕೊಟ್ಟರೂ ರಜ ಮಂಜೂರಾಗದಿದ್ದರೂ ಆಫೀಸಿಗೆ ಬರದಿರುವುದಕ್ಕೇನು ಕಾರಣ ಎನ್ನುವುದನ್ನು ತಿಳಿಸಬೇಕಾಗಿ ಬರಬಹುದು. ಆ ಮಧ್ಯೆ ಕಟುವಾದ ಒಂದು ಆರ್ಡರ್ ಹೊರಟಿತ್ತು. ಕ್ಯಾಶುಯಲ್ ಲೀವ್ ತೆಗೆಯಲು ಹಕ್ಕಿದ್ದರೂ ರಜಾ ಮಂಜೂರಾಗದೆ ಅದನ್ನು ಉಪಯೋಗಿಸಿಕೊಳ್ಳಬಾರದು ಎಂದು. ತಾನು ನಿರೀಕ್ಷಿಸಿದ್ದಂತೆಯೇ ರಜಾ ತೆಗೆಯಲು ಕಾರಣವನ್ನು ಕೇಳುತ್ತಿದ್ದ ಸೂಪರಿಂಟೆಂಡೆಂಟಿನ ಆರ್ಡರ್ ಬಂದಿತು.

ಸೂಪರಿಂಟೆಂಡೆಂಟಿನ ಆರ್ಡರ್ ತೋರಿಸಿದ್ದ. ಆಗ ಮುಖತಃ "ರಜಾ ಕೊಡಲು ಸಾಧ್ಯವಿಲ್ಲ" ಎಂದು ಸುಪರಿಂಟೆಂಡೆಂಟ್ ಹೇಳಿಯೂ ಇದ್ದರು. ಆರೋಗ್ಯವಿರಲಿಲ್ಲ ಎನ್ನುವ ಕಾರಣ ಸುಳ್ಳಾಗಬಹುದು. ಎಲ್ಲರೂ ಸೇರಿ ಒಂದು ಸಮಾಧಾನಕರವಾದ ಉತ್ತರವನ್ನು ಸಮರ್ಥಿಸಿದರು. ಗೋವಿಂದನ್ ನಾಯರರ ಅಭಿಪ್ರಾಯ ಒಂದು ಸಣ್ಣ ತಪ್ಪು ಎಂದಾದರೂ ಆಗಬಹುದು; ಅದಾಗುವುದಿದ್ದರೆ ಆಗಲಿ.

ಹಾಗೆ ಕಾರಣವನ್ನು ವಿವರಿಸುತ್ತ ಬರೆಯುತ್ತಿದ್ದುದರಿಂದ ಸ್ವಲ್ಪ ಹೊತ್ತು

ಕಳೆಯಿತು. ಕೇಶವ ಪಿಳ್ಳೆ ಭಯಪಡುತ್ತಿದ್ದದ್ದು, ಸೂಪರಿಂಟೆಂಡೆಂಟಿಗೆ ಕೊಡುವ ಕಾರಣಕ್ಕಾಗಿ ಆಗಲಿ, ಅವರು ವಿಧಿಸುವ ಶಿಕ್ಷೆಗಾಗಲಿ ಅಲ್ಲ. ಅವನಿಗೆ ತಂಗಮ್ಮನನ್ನು ಹೇಗೆ ಎದುರಿಸುವುದು ಎನ್ನುವುದು ಸಮಸ್ಯೆಯಾಗಿತ್ತು. ಊರಿಗೆ ಹೋದದೇಕೆ ಎಂದು ಅವಳು ಕೇಳುತ್ತಾಳೆ. ಅಲ್ಲಿಯ ವಿಶೇಷಗಳೆಲ್ಲಾ ಅವಳಿಗೆ ತಿಳಿಯಬೇಕು. ಅವಳಿಗೆ ತನ್ನ ಮೇಲೆ ಅಧಿಕಾರವಿದೆ. ಅವಳಿಗೆ ಏನು ಉತ್ತರ ಹೇಳಬೇಕು ಎನ್ನುವುದನ್ನು ತೀರ್ಮಾನಿಸಿರಲಿಲ್ಲ.

ಅವಳಿಂದ ಆ ಪ್ರಶ್ನೆ ಬಂದೇ ಬಂದಿತು.

"ಊರಿನಲ್ಲಿ ಏನು ವಿಶೇಷ?"

"ಓಹ್ ! ಅಂಥಾ ಹೇಳಿಕೊಳ್ಳೋದೇನೂ ಇಲ್ಲ."

"ಮತ್ಯಾಕೆ ಟೆಲಿಗ್ರಾಂ ಕೊಟ್ಟದ್ದು ?"

"ಅದು ಅಮ್ಮನ ಭ್ರಾಂತಿಯಿಂದ."

"ಇಲ್ಲಿ ಎಲ್ಲರ ಜೊತೇಲೂ ಹೇಳುವ ಉತ್ತರ ಅದು. ನನ್ನ ಹತ್ರ ಹೇಳೋ ಉತ್ತರ ಅಲ್ಲ."

"ಅದ್ಯಾಕೆ?"

"ನನ್ನ ಮುಖ ನೋಡಿ ಹೇಳಿ."

ಕೇಶವ ಪಿಳ್ಳೆ ಅವಳ ಮುಖದ ಕಡೆಗೆ ನೋಡಲಿಲ್ಲ. ಅವಸರದಲ್ಲಿ ಬರೆಯುತ್ತಿದ್ದ. ಒಂದು ಕ್ಷಣ ಬಿಟ್ಟು ಅವಳು ಹೇಳಿದಳು:

"ಓಹ್ ! ಏನು ಕೆಲಸದ ಬಿಸಿಯಪ್ಪ !"

ಅವನು ಬಿಗುಮಾನವನ್ನು ಬಿಟ್ಟಿರಲಿಲ್ಲ.

"ನಿನಗೋಸ್ಕರ ನಕಲು ತಯಾರಿಸ್ತಿದೀನಿ."

ಅವಳು ಆಕ್ಷೇಪದ ಧ್ವನಿಯಿಂದ ಹೇಳಿದಳು:

"ನನಗೆ ತಿಳಿಯೋದಕ್ಕೆ ಹಕ್ಕಿಲ್ಲ ಅಂತ ತಾನೆ? ಬೇಡಿ. ಹೇಳೋದು ಬೇಡಿ."

"ಜಗಳಾಡಬೇಡ. ಹೇಳ್ತೀನಿ."

ಸ್ವಲ್ಪ ಸಮಯ ಕಳೆದ ಮೇಲೆ ಪುನಃ ಅದೇ ಪ್ರಶ್ನೆಯನ್ನು ಹಾಕಿದಳು:

"ಊರಿನಲ್ಲೇನು ವಿಶೇಷ?"

"ಹೇಳ್ತೀನಿ ಅನ್ನಿಲ್ವಾ? ಇಲ್ನೋಡು, ಅವರೆಲ್ಲಾ ಕೇಳಿಸ್ಕೊಳ್ತಾರೆ."

"ಇಲ್ಲದೆ ಇದ್ರೂ ನಾವು ಹರಟೆ ಹೊಡೆಯೂದೂಂತ ಅವರಿಗ್ಗೊತ್ತು. ಊರಿನಲ್ಲಿ ಏನಿತ್ತು ವಿಶೇಷ?"

"ಹೇಳ್ತೀನಿ ಅಂದ್ರೆ !"

"ಅಮ್ಮನ ಕಾಟ ಅಂತ ಹೇಳಿದ್ದು ಸುಳ್ಳು, ಹಾಗಾದರೆ, ಅಲ್ವಾ?"

ಆ ಉತ್ತರ ಸುಳ್ಳು ಎಂದು ಸಾಧಿಸುವುದು ಅವಳ ಉದ್ದೇಶವಾಗಿತ್ತು. ಅವಳಿ

ಗೇನಾದರೂ ಸಂಶಯವಿರಬಹುದೆ? ಅದನ್ನು ತನ್ನಿಂದಲೇ ಬಾಯಿ ಬಿಡಿಸುವ ಪ್ರಯತ್ನ ವಾಗಿರಬಹುದೆ? ಕೇಶವ ಪಿಳ್ಳೆಗೆ ಸಂಶಯವುಂಟಾಯಿತು.

ಆ ದಿನ ಮಧ್ಯಾಹ್ನದ ನಂತರವೂ ಆರೇಳು ಸಲ ಅವಳು ಆ ಪ್ರಶ್ನೆಯನ್ನು ಕೇಳಿದ್ದಳು. ಒಮ್ಮೆ ಅವನು ನೀರಸತೆಯನ್ನು ತೋರಿಸಿದ. ಅವನು ಹೇಳಿದ:

"ನನಗೆ ಹೇಳೋದಕ್ಕೆ ಮನಸ್ಸಿಲ್ಲ ಅಂದರೊ?"

ಅವಳ ಮುಖ ಬಾಡಿತು. ಸ್ವಲ್ಪ ಹೊತ್ತು ಕಳೆಯುವಷ್ಟರಲ್ಲಿ ಅವಳ ಕಣ್ಣುಗಳು ತೇವವಾಗಿದೆಯೋ ಎನ್ನುವ ಅನುಮಾನವುಂಟಾಯಿತು. ಅವನು ಹೇಳಿದ:

"ಸಮಾಧಾನವಾಗಿ ಕುಳಿತು ಮಾತಾಡುವ ವಿಷಯ ಅದು. ನಾನು ಹೇಳ್ತೀನೆ ಅಲ್ಲಿಲ್ವೆ?"

ಅದಕ್ಕೆ ಅವಳು ಹೇಳಿದಳು:

"ಬೇಡಿ. ನಾನು ಕೇಳಿಸ್ಕೋಬೇಕಾಗಿಲ್ಲ. ನನಗೆ ಅಗತ್ಯವಾಗಲಿ, ಅಧಿಕಾರವಾಗಲಿ ಇಲ್ಲದ ಕಡೆಯಲ್ಲಿ ನಾನು ಪ್ರವೇಶಿಸೋದಿಲ್ಲ."

ಅವನು ಅವಳನ್ನು ಆಕರ್ಷಿಸುವ ಪ್ರಸನ್ನತೆಯಿಂದ ಹೇಳಿದ:

"ತಿಳುವಳಿಕೆ ಇರೋ ಹೆಣ್ಣುಮಕ್ಕಳು ಹಾಗೇನೆ."

"ಹೌದು."

ಅವಳು ಹೇಳಿದಳು:

"ತಿಳುವಳಿಕೆ ಇಲ್ಲದೆ ಹೋದರೂ ಚಿಂತೆಯಿಲ್ಲ."

"ತಿಳುವಳಿಕೆ ಉಂಟೂಂತಲ್ವಾ ನಾನು ಹೇಳಿದ್ದು?"

ಆ ದಿನ ಆಫೀಸು ಬಿಟ್ಟ ಹೊತ್ತಿನಲ್ಲಿ ಅವಳು ಹೇಳಿದಳು:

"ನಾನು ನಾಳೆ ಬೆಳಿಗ್ಗೆ ಆಫೀಸಿಗೆ ಬೇಗ ಬರ್‍ತೀನಿ!"

ಅದೊಂದು ಆಮಂತ್ರಣ. ಅಲ್ಲ, ಆವಶ್ಯಕತೆ. ಅವನೂ ಬೇಗ ಬರಬೇಕು ಎಂದಾಗಿತ್ತು. ಒಂದು ನಿಮಿಷದ ವರೆಗೆ "ಬೇಗ ಬರುವುದಕ್ಕೆ ಸಾಧ್ಯವಿಲ್ಲ" ಎಂದು ಹೇಳುವುದಕ್ಕಾಗಿ ಆತ ಮೌನಿಯಾಗಿದ್ದ. ಅವಳು ಅವನಿಂದ ಉತ್ತರವನ್ನು ನಿರೀಕ್ಷಿಸುತ್ತಿದ್ದಳು. ಅವಳ ಮುಖದಲ್ಲಿ ಅದು ಕಂಡುಬರುತ್ತಿತ್ತು. ಅವನ ಆತ್ಮವನ್ನು ಹೊಕ್ಕು ನೋಡುವವಳಂತೆ ಅವನ ಕಣ್ಣುಗಳಲ್ಲಿಯೇ ತನ್ನ ದೃಷ್ಟಿಯನ್ನು ನಟ್ಟಿದ್ದಳು.

ಹಿಂದೆಂದೂ ಅವಳು ಆ ರೀತಿಯಲ್ಲಿ ಉತ್ತರಕ್ಕಾಗಿ ಕಾದು ನಿಂತವಳಲ್ಲ. ದೃಷ್ಟಿ ನಟ್ಟು ನೋಡಿದವಳೂ ಅಲ್ಲ. "ನಾನೂ ಬೇಗ ಬರುತ್ತೇನೆ" ಎಂದು ಉತ್ತರಿಸುತ್ತಿದ್ದದ್ದು ಪದ್ಧತಿಯಾಗಿತ್ತು. ಹಾಗೆಯೇ ಬೇಗ ಬರುತ್ತಲೂ ಇದ್ದ.

ಪುನಃ ಕೇಶವ ಪಿಳ್ಳೆಗೆ ಸಂಶಯವುಂಟಾಯಿತು. ಅವಳಿಗೆ ತನ್ನ ಬಗ್ಗೆ ಯಾವುದೋ ಸಂಶಯವುಂಟಾಗಿರಬೇಕಲ್ಲವೆ?

ವಿಚಲಿತ ಮನಸ್ಸಿನಿಂದ ಆತ ಹೇಳಿದ:

"ಬರುತ್ತೇನೆ."

ಒಂದು ವೇಳೆ ಆ ಸಮಯದಲ್ಲಿ ಅವಳು ಪುನಃ ಊರಿನಲ್ಲಿ ಏನು ವಿಶೇಷವಾಗಿತ್ತು ಎಂದು ಕೇಳಿದ್ದಿದ್ದರೆ ಅವನು ಎಲ್ಲವನ್ನೂ ಹೇಳಿಬಿಡುತ್ತಿದ್ದನೋ ಏನೋ ! ಹೇಳಿಯೇಬಿಡುತ್ತಿದ್ದ. ಅಂತಹ ದುರ್ಬಲ ನಿಮಿಷವಾಗಿತ್ತು ಅದು. ಹೇಳಿಬಿಡುತ್ತಿದ್ದೆನಲ್ಲಾ ಎಂದು ಆತ ಹೆದರಿದ. ಹೌದು. ಹೆಡ್ಡನ ಹಾಗೆ ಹೇಳಿಬಿಡದೆ ಪಾರಾದದ್ದಕ್ಕೆ ಅವನು ತನ್ನನ್ನು ತಾನೇ ಅಭಿನಂದಿಸಿಕೊಂಡ.

ಆ ರಾತ್ರಿ ಕೇಶವ ಪಿಳ್ಳೆಗೆ ನಿದ್ರೆ ಬರಲಿಲ್ಲ. ಒಂದು ದಿವಸದಲ್ಲಿ ಎಷ್ಟೊಂದು ಪ್ರಶ್ನೆಗಳನ್ನು ಎದುರಿಸಿದ್ದ ! ತೋಟ್ಟಪಿಳ್ಳೆಯಲ್ಲಿ ಇಳಿದು ಮನೆಗೆ ಬಂದು ತಂದೆಯ ಹತ್ತಿರವೂ ತಾಯಿಯ ಹತ್ತಿರವೂ "ನನಗೀ ಮದುವೆ ಇಷ್ಟವಿಲ್ಲ" ಎಂದು ಹೇಳಿ ಬಂದಿದ್ದರೆ ! ಆದರೆ ತಂದೆ ತಾಯಿಗಳಿಗೆ ಹಾಗೆ ಹೇಳಿ ಬಂದಿದ್ದರೂ ನಿದ್ದೆ ಬರುತ್ತಿರಲಿಲ್ಲ. ಆಗ ಬಹುಶಃ ಅವರನ್ನು ಧಿಕ್ಕರಿಸಿದಂತಾಗುತ್ತಿತ್ತು. ಅವರನ್ನು ಧಿಕ್ಕರಿಸಿದುದರ ಫಲವಾಗಿ, ಈ ಬಾಂಧವ್ಯದೊಡನೆ ಈರ್ಷ್ಯೆಯೂ ಉಂಟಾಗುತ್ತಿತ್ತೋ ಏನೋ. ಈ ಉತ್ಸಾಹ ಕಾಣದೆಯೂ ಹೋಗುತ್ತಿತ್ತು. ಉತ್ಸಾಹವಿಲ್ಲದಿದ್ದಲ್ಲಿ—ಒಂದು ರೀತಿಯ ದೌರ್ಬಲ್ಯದ ಅನುಭವವಾಗುತ್ತಿತ್ತು. ಆಗ ಉದ್ವೇಗವೇ ಅವನ ಸಾಮರ್ಥ್ಯವಾಗುತ್ತಿತ್ತೋ ಏನೋ. ಹಾಗಿದ್ದಲ್ಲಿ ಹೇಗೆ ವಿವಾಹಕ್ಕೆ ಒಪ್ಪಿಗೆಯನ್ನು ಕೊಡಲು ಸಾಧ್ಯವಾಯಿತು?

ಜಗಳವಾಡಿ ಮುಖ ದಪ್ಪಗೆ ಮಾಡಿಕೊಂಡು ನಿಂತಿದ್ದ ರೂಪವನ್ನು ಅವನು ಕಣ್ಣೆದುರಿಗೆ ತಂದುಕೊಂಡ. ಅವಳ ಹೂನಗುವಿನಲ್ಲಿ ಒಂದು ಪ್ರತ್ಯೇಕವಾದ ಆಕರ್ಷಣೆಯಿತ್ತು. ಆ ಕೆನ್ನೆಗುಳಿಯೇ ಅದಕ್ಕೆ ಕಾರಣವಿರಬಹುದು. ಎದುರಿನಲ್ಲಿ ನಿಂತಾಗ ಕಣ್ಣುಗಳಿಗೂ ಪ್ರತ್ಯೇಕವಾದ ಕಾಂತಿಯಿರುತ್ತದೆ. ಆ ಕಾಂತಿ ಏತರಿಂದ ಉಂಟಾಗಿರಬಹುದು? ಯಾವುದೋ ಒಂದು ಬಗೆಯ ದಾಹವನ್ನು ಆ ಮುಖದಲ್ಲಿ ಕಾಣಬಹುದಾಗಿತ್ತು. ಅವಳು ಏನು ಹೇಳಿದರೂ ಅದಕ್ಕೆ ಮಾಧುರ್ಯವಿರುತ್ತದೆ. ಅದು ಅವಳು ಪ್ರೀತಿಸುವುದರಿಂದಾಗಿರಬಹುದು. ಇದೇ ದಿನ "ಊರಿನಲ್ಲಿ ಏನು ವಿಶೇಷ?" ಎಂದು ಎಷ್ಟು ಸಲ ಅವಳು ಕೇಳಿದ್ದು ! ಅವಳು ಹಾಗೆ ಕೇಳಿದ್ದಾದರೂ ಏಕೆ? ಅವಳಿಗೆ ಹಾಗೆ ಕೇಳುವ ಅಧಿಕಾರವಿದ್ದುದರಿಂದಾಗಿರಬೇಕು. ಸಮಾಧಾನವಾದ ಉತ್ತರ ಸಿಕ್ಕುವ ವರೆಗೂ ಅವಳು ಕೇಳುತ್ತಲೇ ಇರುತ್ತಾಳೆ.

ನಡೆದದ್ದನ್ನೆಲ್ಲ ಹೇಳಿಬಿಟ್ಟರೆ—ಅದನ್ನು ಕೇಶವ ಪಿಳ್ಳೆಗೆ ನೆನಸಿಕೊಳ್ಳಲೂ ಸಾಧ್ಯವಿಲ್ಲ. ಅವಳು ಆ ಸುದ್ದಿಯನ್ನು ಕೇಳಿ ಹೇಗೆ ಸಹಿಸಿಯಾಳು? ಆದರೆ ಒಂದಲ್ಲ ಒಂದು ದಿನ ಅವಳಿಗೆ ಅದು ತಿಳಿಯುತ್ತದೆ. ಅವಳು ಅದನ್ನು ತಿಳಿದೇ ತೀರುತ್ತಾಳೆ. ಇನ್ನೂ ಸ್ವಲ್ಪ ಕಾಲ ಕಳೆದ ಮೇಲೆ ಈ ಸ್ನೇಹ ಗಾಢವಾಗುವುದಕ್ಕೆ ಮೊದಲು ಅವಳು ಅದನ್ನು ತಿಳಿದರೆ ಒಳ್ಳೆಯದಲ್ಲವೆ? ಈಗಲೇ ಅದನ್ನು ಹೇಳಿದರೇನು? ಆದರೆ ಕೇಶವ ಪಿಳ್ಳೆಗೆ ಅದನ್ನು ಹೇಳುವಷ್ಟು ಮನೋದಾರ್ಢ್ಯವಿಲ್ಲ. ಅದಕ್ಕೆ ಬೇಕಾದ ಮನೋಬಲ ಸ್ವಲ್ಪವೂ

ಇಲ್ಲ. ಇರುವುದೂ ಇಲ್ಲ. ಇಂದು ಮೊದಲು ಯಾವ ನಿಮಿಷದಲ್ಲಿ ಬೇಕಾದರೂ ಆ ವಿಷಯ ಬಹಿರಂಗಗೊಳ್ಳಬಹುದು.

ಇದರ ಭವಿಷ್ಯ ಕೇವಲ ಸ್ನೇಹಸೇತುವೆ ಮುರಿದು ಬೀಳುವುದರಿಂದ ಮಾತ್ರ ಅಂತ್ಯಗೊಳ್ಳುವುದಿಲ್ಲ. ನಿಜವಾಗಿಯೂ ವೇದನಾಜನಕವಾಗಿ ಪರಿಣಮಿಸುತ್ತದೆ. ವೇದನೆಯಿಲ್ಲದೆ ಅದನ್ನು ನೆನಸಿಕೊಳ್ಳಲೂ ಸಾಧ್ಯವಿಲ್ಲ. ಜೀವಿತಕಾಲವಿಡೀ ಈ ಪ್ರೇಮ ಬಂಧನ, ಭಗ್ನಗೊಂಡದ್ದೇ ಆಗಿರಲಿ, ಅದು ಸದಾ ನೆನಪಾಗುತ್ತಿರುತ್ತದೆ. ತಂಗಮ್ಮನಿಗೆ ಒಂದು ಹನಿ ಕಣ್ಣೀರು ಹಾಕುವ ಹಕ್ಕಿದೆ. ವಿವಾಹ ನಿಶ್ಚಯವಾಯಿತು......... ವಿವಾಹ ನಡೆಯಿತು ಎಂದೆಲ್ಲ ಆದಾಗ ಕಾರ್ಯಲಾಭಕ್ಕೆ ಅಡ್ಡಿಯುಂಟಾಗಬಹುದು. ಒಂದು ಪಕ್ಷ ಕಾರ್ಯನಷ್ಟದ ವರೆಗೆ ಹೋಗದೇ ಇದ್ದರೂ, ಅದೂ ಸಂಭವಿಸುವಂಥಾದ್ದೇ. ಆ ಕುಟ್ಟಿನಾಡಿನ ಹೆಣ್ಣನ್ನು ಕೈಹಿಡಿದರೆ ಆಗುವ ಪ್ರಯೋಜನವಾದರೂ ಏನು? ಕಿಟ್ಟುಮಾಮ 'ಅವಳು ಭಾಗ್ಯವತಿ, ಮಹಾ ಭಾಗ್ಯವತಿ' ಎಂದು ಹೇಳಿದರು. ಅಷ್ಟೆ. ಅದರಿಂದ ಯಾವ ಲಾಭ ಬಂದಂತಾಯಿತು?

ಎರಡು ಹೊತ್ತಿನ ಊಟ ಮಾತ್ರ ಸಿಕ್ಕಿದರೆ ಸಾಕು ಎಂದು ಕೇಶವ ಪಿಳ್ಳೆ ಒಂದು ಕಾಲದಲ್ಲಿ ಆಶೆಪಟ್ಟಿದ್ದ. ಹದಿನೈದು ರೂಪಾಯಿ ಸಂಬಳ ಸಿಕ್ಕುವಂತಾದಾಗ, ಆತ ಸಂತೃಪ್ತನಾಗಿದ್ದ. ಒಬ್ಬ ಬಿ.ಎ. ಪದವೀಧರನಿಗೆ ಸೆಕ್ರೆಟರಿಯೆಟ್‌ನಲ್ಲಿ ಉದ್ಯೋಗ ಸಿಕ್ಕಿದರೆ ಆ ಉದ್ಯೋಗದಲ್ಲಿ ಎಲ್ಲಿಯ ವರೆಗೆ ಬೇಕಾದರೂ ಏರಬಹುದು. ಆದರೆ ಏರಿಸುವುದಕ್ಕೆ ಜನರಿರಬೇಕು. ಅಂತಹವರು ತನಗೆ ಯಾರೂ ಇಲ್ಲವೆನ್ನುವುದೂ ಕೇಶವ ಪಿಳ್ಳೆಗೆ ಗೊತ್ತಿತ್ತು. ತಾನು ಯಾರಾಗಬೇಕು? ಎಲ್ಲಿಯ ವರೆಗೆ ಏರಬೇಕು ಎನ್ನುವುದನ್ನು ಕೂಡ ಆಲೋಚಿಸಿರಲಿಲ್ಲ. ಆದರೆ ಫಿಲಿಪ್ಸ್‌ನ ಹಾಗಾಗಲೀ ರಾಮಚಂದ್ರನ್ ನಾಯರ ಹಾಗಾಗಲೀ ಅಲ್ಲ. ಒಬ್ಬ ಸೆಕ್ರೆಟರಿಯ ಕುರ್ಚಿಯಲ್ಲಿ ಕೂರುವುದು ಅಲಭ್ಯವೇನಲ್ಲ. ಅಲ್ಲಿ ಕುಳಿತುಕೊಳ್ಳುವುದಕ್ಕೂ ಅರ್ಹತೆಯಿದೆ. ಆದ್ದರಿಂದ ಅವನನ್ನು ಯಾರೂ ಕೀಳಾಗಿ ನೋಡಬೇಕಾಗಿಲ್ಲ.

ಅದೇ ರೀತಿ ಮೇಲಿನ ಕುರ್ಚಿಯ ಕಡೆಗೆ ನೋಡುತ್ತ ಕೇಶವ ಪಿಳ್ಳೆ ಕತ್ತು ನೋಯಿಸಿಕೊಳ್ಳುವುದೂ ಇಲ್ಲ. ಏನಿದ್ದರೂ ಅದೊಂದು ಬದಲಾವಣೆ ತಾನೆ? ಅವನು ಆ ಸ್ಥಾನದ ಕನಸು ಕಂಡಿಲ್ಲದಿದ್ದರೂ ಅಲ್ಲಿಯ ವರೆಗೆ ಏರುವುದಕ್ಕೆ ತನಗೆ ಅರ್ಹತೆಯಿದೆ ಎನ್ನುವ ಭಾವನೆಯೂ ಉಂಟಾಗಿರಲೂ ಬಹುದು. ಏನೂ ಇಲ್ಲದಿದ್ದಾಗ ಇಷ್ಟವರೂ ಆಯ್ತಲ್ಲ!

ಸೆಕ್ರೆಟರಿ ಕೃಷ್ಣನ್ ನಾಯರರ ಅಣ್ಣನ ಮಗಳು ಆತನನ್ನು ನೋಡಿ ಮನಮೋಹಕವಾಗಿ, ಆರ್ತಳಾಗಿ ನಕ್ಕಾಗ ಆ ನಗು ಆತನನ್ನು ವಶೀಕರಿಸಿತು. ಅವಳನ್ನು ಹತ್ತಿರದವಳನ್ನಾಗಿ ಮಾಡಿತು. ಅದನ್ನು ಒಪ್ಪಿಕೊಳ್ಳಬಹುದು. ಅವಳು ಆತನನ್ನು ತನ್ನ ಹತ್ತಿರದವನನ್ನಾಗಿ ಮಾಡಿಕೊಳ್ಳುತ್ತಿದ್ದಳು. ಅವನು ತಾನಾಗಿ ಹತ್ತಿರದವನಾಗುತ್ತಿದ್ದ. ಹತ್ತಿರದವ

ನಾಗಲು ಒಂದೊಂದು ನಗುವಿಗೂ ಆತ ಕಾದಿರುತ್ತಿದ್ದ. ಆ ಕೆನ್ನೆಯ ಗುಳಿಗೆ ಶಕ್ತಿಯಿದೆ ಎನ್ನುವುದನ್ನು ಒಪ್ಪಲೇಬೇಕು. ಆದರೂ ಕೆನ್ನೆಗುಳಿಯಿರುವ ಮತ್ತೊಂದು ಹೆಣ್ಣಾಗಿದ್ದಲ್ಲಿ ಅವಳು ಕೇಶವ ಪಿಳ್ಳೆಯನ್ನು ತನ್ನ ಹತ್ತಿರದವನನ್ನಾಗಿಸಿಕೊಳ್ಳಬೇಕಾಗಿತ್ತಲ್ಲದೆ ಅವನು ತಾನಾಗಿ ಹತ್ತಿರದವನಾಗುತ್ತಿದ್ದನೆ? ಕಾದಿರುತ್ತಿದ್ದನೆ? ಸೆಕ್ರೆಟರಿಯೇಟ್‌ನಲ್ಲಿ ಕೆಳ ದರ್ಜೆಯ ಗುಮಾಸ್ತ, ಅದರಲ್ಲೂ ಸಹಾಯಮಾಡಲು ಯಾರೂ ಇಲ್ಲದವನು ಸೆಕ್ರಟರಿ ಕೃಷ್ಣನ್ ನಾಯರರ ಅಣ್ಣನ ಮಗಳೊಡನೆ ಆತ್ಮೀಯನಾಗುವುದರಲ್ಲಿ ಅರ್ಥವಿದೆ.

ಈ ಸ್ಥಿತಿಯಲ್ಲಿ ಕೇಶವ ಪಿಳ್ಳೆಗೆ ಮದುವೆಯಾಗಿದೆ ಎಂದು ತಿಳಿದರೆ ಯಾವ ಪರಿಣಾಮವುಂಟಾಗಬಹುದು? ಕೇಶವ ಪಿಳ್ಳೆಗೆ ದೊಡ್ಡ ನಷ್ಟವೇ ಸಂಭವಿಸುತ್ತದೆ. ತಂಗಮ್ಮ ಪ್ರತೀಕಾರ ದೇವತೆಯಾಗಿಬಿಡುವುದಿಲ್ಲವೆ? ಆ ಕಣ್ಣುಗಳ ಕಾಂತಿ ಪ್ರತೀಕಾರ ದೇವತೆಯ ಕಣ್ಣಿನ ಬೆಂಕಿಯ ಕೆಂಡವಾಗಿ ಪರಿಣಮಿಸುವುದಿಲ್ಲವೆ? ಹಾಗಾದ ಪಕ್ಷದಲ್ಲಿ ಕೆಲವು ಸಲ ಸೆಕ್ರೆಟರಿಯೇಟ್‌ಗೆ ಹೇಗೆ ಬಂದದ್ದೋ ಹಾಗೆ ಹಿಂದಿರುಗಬೇಕಾಗಿಯೂ ಬರಬಹುದು. ಅವನ ಪರವಾಗಿ ಮಾತನಾಡಲು ಯಾರಿದ್ದಾರೆ? ಯಾರೂ ಇಲ್ಲ. ಅವಳ ಸ್ನೇಹ ಮಾಡಿದ್ದು ಅವನ ತಪ್ಪಲ್ಲವೆ? ಅವಳಿಗುಂಟಾದ ಆಸಕ್ತಿಯಲ್ಲಿ ಅವನ ತಪ್ಪಿಲ್ಲದಿರಬಹುದು. ಅವಳಿಗೆ ಅವನ ಸ್ನೇಹ ಮಾಡುವುದಕ್ಕೆ ಪ್ರೇರಣೆಯನ್ನು ನೀಡಿದ್ದ. ಅವಳೂ ಪ್ರೀತಿಸಿದಳು. ನಿಜ, ಪ್ರೀತಿಸಿದಳು. ಆತ ಜ್ಞಾಪಿಸಿಕೊಂಡ. ಅವಳನ್ನು ಪ್ರೀತಿಸುತ್ತಿದ್ದೇನೆ ಎಂದು ಆತ ಹೇಳಿದ್ದುಂಟೆ? ಇಲ್ಲ. ಹಾಗೆ ಹೇಳಿದ್ದಿಲ್ಲ. ಅವಳನ್ನು ಮದುವೆ ಮಾಡಿಕೊಳ್ಳುವುದಾಗಿ ಆತ ವಾಗ್ದಾನ ಮಾಡಿಲ್ಲ. ಮಾತ್ರವಲ್ಲ, ಆತನನ್ನು ವಾಗ್ದಾನದ ನೆಪದಲ್ಲಿ ತಪ್ಪಿತಸ್ಥನನ್ನಾಗಿ ಮಾಡಲು ಸಾಧ್ಯವಿಲ್ಲ. ಯಾವುದನ್ನೂ ಆತ ನಿರ್ಧಾರವಾಗಿ ಹೇಳಿಲ್ಲ. ಆದರೆ ಅವಳು ಎಲ್ಲವನ್ನೂ ನಂಬಿದ್ದಾಳೆ ಎನ್ನುವಂತೆ ತೋರುತ್ತಿದೆ. ಅದು ನಿರ್ಮಲವಾದ ನಂಬಿಕೆಯಾಗಿರಬಹುದೆ? ಅದರಲ್ಲಿ ಆತನ ತಪ್ಪೇನು? ತಪ್ಪಿಲ್ಲವೆ? ಹಾಗೆ ಅವಳೊಡನೆ ಒಡನಾಡುತ್ತ ನಂಬಿಕೆ ಹುಟ್ಟಿಸಿಲ್ಲವೆ? “ಮನೆಯಲ್ಲಿ ಏನು ವಿಶೇಷವಿತ್ತು?” ಎಂದು ಅವಳು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಬೇಕಾಗಿದ್ದರಿಂದಲೇ ಅಲ್ಲವೇ ರಾತ್ರಿಯಲ್ಲಿ ನಿದ್ದೆ ಬಾರದೇ ಹೋದದ್ದು. ಅವಳು ಎಷ್ಟೋ ವಿಷಯಗಳನ್ನು ನಂಬಿದ್ದಾಳೆ ಎಂದು ಆತ ಭಾವಿಸಿದ್ದ.

ನಾಳೆ ಅವಳು ಆಫೀಸಿಗೆ ಬೇಗ ಬರುತ್ತಾಳೆ. ಅವನೂ ಹೋಗಬೇಕಾಗಿತ್ತು. ಉದ್ದೇಶಪೂರ್ವಕವಾಗಿ ಅವನು ತಡ ಮಾಡಿದ. ಏನು ಹೇಳಬೇಕು ಎನ್ನುವುದೇ ಆತನಿಗೆ ಹೊಳೆದಿರಲಿಲ್ಲ. ಗಂಟೆಗೆ ನಲವತ್ತು ಸಲ ಎಲ್ಲವನ್ನೂ ಆ ಕಡೆ ತೆರೆದು ಹೇಳಿದರೇನು ಎಂದು ಆತ ಆಲೋಚಿಸಿದ್ದ. ಅದರಿಂದ ಏನಾಗುತ್ತದೋ ಅದೆಲ್ಲವನ್ನೂ ಅನುಭವಿಸಿದರಾಯಿತು. ಯಾಕೆ ಬಚ್ಚಿಡಬೇಕು? ಇದು ಬೇಕಾದಷ್ಟು ಬೆಳೆದದ್ದಾಯಿತು. ಇನ್ನೂ ಹೆಚ್ಚು ಬೆಳೆದು ಸಮಸ್ಯೆಗಳನ್ನು ಹೆಚ್ಚಿಸಿಕೊಳ್ಳುವ ಮೊದಲೇ ಇದನ್ನು ತುಂಡರಿಸಬೇಕು. ಈ ದಿನ ಒಂದು ವೇಳೆ ಸೆಕ್ರಟರಿಗೆ ವಿರೋಧವಾಗಿ ಕಾಣಿಸದಿರಬಹುದು. ಮತ್ತೆಂದಾದರೂ

ಆತ ತನಗೆ ಶತ್ರುವಾಗಿ ತಿರುಗಿ ನಿಲ್ಲಬಹುದು. ಆ ಸ್ಥಿತಿಯುಂಟಾಗುವ ಮೊದಲೇ ಎಲ್ಲವನ್ನೂ ಅಂತ್ಯಗೊಳಿಸಬೇಕು.

ಆದರೆ ಕೇಶವ ಪಿಳ್ಳೆಗೆ ಅದಕ್ಕೂ ಮನಸ್ಸು ಬರುವುದಿಲ್ಲ. ಏನಾದರೊಂದು ಸುಳ್ಳನ್ನು ಹೇಳಬೇಕೆಂದು ಮನಸ್ಸು ಸದಾ ಚಿಂತಿಸುತ್ತಿರುತ್ತದೆ. ಅದೊಂದರಲ್ಲಿ ಮಾತ್ರ ಯಾವ ಉಪಾಯವೂ ಹೊಳೆಯುತ್ತಿಲ್ಲ.

ಅವಳು ಆಫೀಸನ್ನು ತಲಪುವ ಹೊತ್ತು ಕಳೆದಿತ್ತು. ತುಂಬ ತಡವಾಗಿಯೇ ಆತ ಲಾಡ್ಜಿನಿಂದ ಹೊರಟದ್ದು. ಅಂದು ಆಫೀಸಿಗೆ ತಡವಾಗಿ ತಲಪಿದರಾಯಿತು ಎಂದುಕೊಂಡ. ತಲಪಿದ್ದೂ ತಡವಾಗಿ. ತಡವಾಗಿ ಬಂದದ್ದಕ್ಕೆ ಆತನಲ್ಲಿ ಯಾವ ಗಡಿಬಿಡಿಯೂ ಕಂಡುಬರಲಿಲ್ಲ. ಎಲ್ಲರೂ ಅವರವರ ಕೆಲಸಗಳಲ್ಲಿ ಮಗ್ನರಾಗುತ್ತಿದ್ದರು. ತಂಗಮ್ಮ ಮಾತ್ರ ಮ್ಲಾನವದನೆಯಾಗಿದ್ದಳು. ತಡವಾಗಿ ಬಂದದ್ದೇಕೆ ಎಂದು ಹರಿಹರಯ್ಯರ್ ಕೇಳಿದರು. ತಂಗಮ್ಮನಿಗೂ ಕೇಳಿಸುವಂತೆ ಕೇಶವ ಪಿಳ್ಳೆ ಆ ಪ್ರಶ್ನೆಗೆ ಸಮಾಧಾನಕರವಾದ ಉತ್ತರವನ್ನು ನೀಡಿದ.

"ಊರಿನಿಂದ ಮೂರು ಜನರು ಬಂದಿದ್ದರು. ಅವರು ಹೈಕೋರ್ಟಿನಲ್ಲಿ ಯಾವುದೋ ಕೇಸು ಕೊಡಬೇಕಾಗಿತ್ತು. ಅವರ ಜೊತೆಯಲ್ಲಿ ಲಾಯರ್ ಆಫೀಸಿಗೆ ಹೋಗಿದ್ದೆ. ತಡವಾಗಿ ಹೋಯ್ತು."

ಇಂತಹ ಒಂದು ಉತ್ತರವನ್ನು ಮೊದಲೇ ಆಲೋಚಿಸಿರಲಿಲ್ಲ. ಅದು ಆ ಕ್ಷಣದಲ್ಲಿ ಹೊಳೆದದ್ದು. ಕತ್ತರಿಯಲ್ಲಿ ಹಸಿರೆಲೆಯನ್ನು ಕತ್ತರಿಸಿದಷ್ಟು ಸುಲಭವಾಗಿ ಆ ಉತ್ತರ ಹೊಳೆದಿತ್ತು. ನೂರಕ್ಕೆ ನೂರು ಪಾಲು ಯಾರೂ ನಂಬುವಂತಿತ್ತು. ತಂಗಮ್ಮನ ಮುಖದ ಕಡೆಗೆ ಆತ ನೋಡಿದ. ಅವಳೂ ಅದನ್ನು ನಂಬಿದಂತೆ ತೋರಿತು. ಅಬ್ಬ! ಎಂತಹ ಆಶ್ವಾಸನೆಯ ಉತ್ತರ ಅದು! ಕೇಶವ ಪಿಳ್ಳೆ ತನ್ನನ್ನು ತಾನು ಅಭಿನಂದಿಸಿಕೊಂಡ.

ಆತ ತನ್ನ ಕುರ್ಚಿಯಲ್ಲಿ ಕುಳಿತು ಕೆಲಸ ನೋಡುವುದಕ್ಕಾರಂಭಿಸಿದ. ತಂಗಮ್ಮ ಕಾಗದದ ಮೇಲೆ ಗೆರೆ ಹಾಕುತ್ತಲೋ ಬರೆಯುತ್ತಲೋ ಏನೋ ಮಾಡುತ್ತ ಕುಳಿತಿದ್ದಳು. ಅವಳ ಕೆಲಸವನ್ನಲ್ಲ ಅವಳು ಮಾಡುತ್ತಿದ್ದದ್ದು.

ಸ್ವಲ್ಪ ಹೊತ್ತು ಕಳೆದ ಮೇಲೆ ಕೇಶವ ಪಿಳ್ಳೆ ಕೇಳಿದ: "ಸಿಟ್ಟು ಮಾಡಿಕೊಂಡಿದ್ದೀಯಾ?"

ಸ್ವಲ್ಪ ಹೊತ್ತು ಬಿಟ್ಟು ಅವಳು ಅದಕ್ಕೆ ಉತ್ತರ ಹೇಳಿದ್ದು. "ನಾನ್ಯಾಕೆ ಸಿಟ್ಟು ಮಾಡಿಕೊಳ್ಳಲಿ? ಸಿಟ್ಟು ಮಾಡಿಕೊಳ್ಳೋದಕ್ಕೆ ನನಗೇನು ಅಧಿಕಾರ ಇದೆ?"

ಅವನು ಹೇಳಿದ: "ಸಿಟ್ಟು ಮಾಡಿಕೊಳ್ಳಬೇಡ."

ಅದಕ್ಕೆ ಅವಳು ಏನನ್ನೂ ಹೇಳದೆ ಮೌನವಾಗಿದ್ದಳು.

ಮಧ್ಯಾಹ್ನ ಊಟ ಮುಗಿಸಿ ಎಲ್ಲರೂ ಬರುವುದಕ್ಕೆ ಮೊದಲೇ ಕೇಶವ ಪಿಳ್ಳೆ

ಬಂದ. ಅವನ ಹಿಂದೆಯೇ ತಂಗಮ್ಮನೂ ಬಂದಳು. ಸ್ವಲ್ಪ ಹೊತ್ತು ಕಳೆದ ಮೇಲೆಯೇ ಉಳಿದವರು ಬರುವುದು. ದೊಡ್ಡ ಅಲಮೇರದ ಹಿಂದೆ ಕೊಡೆ ಇಡುವುದಕ್ಕಾಗಿ ಕೇಶವ ಪಿಳ್ಳೆ ಹೋದ. ಕೊಡೆ ಇಟ್ಟು ಹಿಂದಿರುಗಿ ನೋಡಿದಾಗ ಅವಳು ಅಲ್ಲಿ ನಿಂತಿದ್ದಳು.

ಬೆಳಗ್ಗೆ ಅವಳ ಸೌಂದರ್ಯ ಪ್ರಭಾತದಲ್ಲಿ ತಾನೇ ಅರಳುವ ತಾವರೆಯ ಹೂವಿನಂತಿತ್ತು. ಮಿಂದು, ತುದಿಯಲ್ಲಿ ಗಂಟು ಹಾಕಿದ್ದ ತಲೆಗೂದಲು ಸೊಂಟದಿಂದ ಕೆಳಕ್ಕೆ ಇಳಿಬಿದ್ದಿತ್ತು. ಕುಂಕುಮದ ಬೊಟ್ಟಿಗೂ ಅದರ ಹಿಂದಿದ್ದ ಹಣೆಗೂ ಒಳ್ಳೆಯ ಹೊಂದಾಣಿಕೆಯಿತ್ತು. ಶುಭ್ರವಾಗಿ ಒಗೆದು ಇಸ್ತ್ರಿ ಮಾಡಿದ ಕರಿಯ ಬಾರ್ಡರಿನ ಮುಂಡನ್ನು ಆಕೆ ಉಟ್ಟಿದ್ದದ್ದು. ಎಲ್ಲವೂ ಒಟ್ಟುಗೂಡಿ ಒಂದು ರೀತಿಯ ಹೊಸತನವುಂಟಾಗಿತ್ತು. ಈಗ ಅವಳು ಸಂಪೂರ್ಣವಾಗಿ ಅರಳಿದ ತಾವರೆ ಹೂವು. ಆ ತಲೆಗೂದಲನ್ನು ಎತ್ತಿ ಕಟ್ಟಿದ್ದಾಳೆ. ಒಂದು ಕೆಂಪು ಸಿಂದೂರದ ಬೊಟ್ಟನ್ನಿಟ್ಟಿದ್ದಾಳೆ. ಆ ಮುಂಡನ್ನೂ ದಾವಣಿಯನ್ನೂ ಬದಲಾಯಿಸಿದ್ದಾಳೆ. ಜಂಪರ್ ಕೂಡ ಬೇರೆಯದು. ಬಿಸಿಲಿನಲ್ಲಿ ನಡೆದದ್ದರಿಂದಲೋ ಏನೋ ಮುಖ ಕೆಂಪಾಗಿದೆ.

ಕೇಶವ ಪಿಳ್ಳೆಯ ಮನಸ್ಸು ಭ್ರಮಿಸಿತು. ಅವಳ ಸುಂದರವಾದ ಮುಖವನ್ನು ಒಂದು ಕ್ಷಣ ನೋಡಿದ. ಅವಳಿಗೆ ಏನೋ ಬೇಕಾಗಿತ್ತು. ಅವಳ ಮುಖ ಅದನ್ನು ಹೇಳಿತು: “ನನಗೆ ಕೊಡೋದಿಲ್ಲವಾ?” ಎಂತಲೋ, “ನನಗೆ ಕೊಡಬೇಕು” ಎಂತಲೋ ಅವಳ ಕಣ್ಣುಗಳು ಮಾತಾಡುತ್ತಿದ್ದಂತೆ ತೋರಿತು.

ಆತ ಅದನ್ನು ಕೊಟ್ಟ. ಒಂದು ಚುಂಬನ. ಅದರ ಆನಂದವನ್ನು ಆತನೂ ಅನುಭವಿಸಿದ. ಅಷ್ಟೇ ಸಮಯ ಇದ್ದದ್ದು, ಆ ದೊಡ್ಡ ಅಲಮೇರಗಳ ಮಧ್ಯೆ.

ಉಳಿದ ಕ್ಲಾರ್ಕುಗಳು ಬರುವ ಹೊತ್ತಾಯಿತು. ಆ ಪ್ರೇಮಿಗಳಿಬ್ಬರೂ ತಮ್ಮ ತಮ್ಮ ಕುರ್ಚಿಗಳಲ್ಲಿ ಬಂದು ಕುಳಿತುಕೊಂಡರು. ಅಷ್ಟರಲ್ಲಿ ಉಳಿದವರು ಬಂದರು.

ಆ ದಿನ ಸಂಜೆ ಹೊರಡುವಾಗ ಅವಳು ಆತನೊಡನೆ ಹೇಳಿದಳು:

“ತೊಟ್ಟಿಯಂಬಲದ* ಬಾಗಿಲು ತೆರೆದಿರುತ್ತೆ.”

ಬಹುಶಃ ಅವಳಿಗೆ ಸಾಕಾಗಲಿಲ್ಲವೆಂದು ತೋರುತ್ತದೆ.

ರಾತ್ರಿ ಹತ್ತು ಗಂಟೆಯ ನಂತರ ಅವನು ಚೆಟ್ಟಿಕುಳಂಕರದಲ್ಲಿ ಅವಳಿದ್ದ ಮನೆಯ ಬಾಗಿಲಿಗೆ ಬಂದಿದ್ದ. ಮುಂಭಾಗದ ಗೇಟು ತೆರೆದಿತ್ತು. ಅವಳು ಒಳಗಿನಿಂದ ಸನ್ನೆಮಾಡಿ ಕರೆದಳು. ಆತನ ಎದೆ ಡಬಡಬ ಎನ್ನುತ್ತಿತ್ತು. ಒಳಗೆ ಬಂದ. ಅವಳು ಅವನ ಕೈಹಿಡಿದುಕೊಂಡಳು. ಅವಳ ಹಿಡಿತಕ್ಕೆ ಅವನ ಕೈಗಳು ನಗ್ಗಿಹೋಗುತ್ತಿವೆಯೋ ಎನ್ನಿಸಿತು.

* ಮನೆಯ ಮುಂದಿನ ಗೇಟಿನ ಹತ್ತಿರ ಹತ್ತು ಹದಿನೈದು ಅಡಿ ಚದರಕ್ಕೆ ಹೆಂಚು ಹೊದಿಸಿ ನೆರಳು ಮಾಡಿರುವ ಜಾಗ.

ಒಂದು ರೂಮಿನೊಳಕ್ಕೆ ಹೋದರು. ಶಬ್ದ ಮಾಡದಂತೆ ಬಾಗಿಲು ಹಾಕಿದಳು. ತಾನೊಂದು ಅಪಾಯದಲ್ಲಿ ಸಿಕ್ಕಿಹಾಕಿಕೊಳ್ಳುತ್ತಿದ್ದೇನೆಂದು ಕೇಶವ ಪಿಳ್ಳೆ ಭಯಪಟ್ಟ. ಅದು ಮಧ್ಯಾಹ್ನದಲ್ಲಿ ನಡೆದ ಸಮ್ಮೇಳನದಿಂದ ಆರಂಭವಾಗಿತ್ತು. ಅವಳು ಅವನ ಕಿವಿಯಲ್ಲಿ ಪಿಸುಗುಟ್ಟಿದಳು: "ನನ್ನ ದೇವರೇ ! ನಾನು ಈಗ ಮಾಡ್ತಿರೋದೆಲ್ಲ ತಪ್ಪು !" ಎಂದು ಹೇಳಿ ಆತನಿಗೆ ಚುಂಬನದ ಮಳೆಗರೆದಳು.

ತುಸು ಭಾರವಾದ ಹೃದಯದಿಂದ ಅವಳು ಹಾಗೆ ಹೇಳಿದುದೋ ಏನೋ ! ಹಾಗಿದ್ದರೆ ಏಕೆ ಹಾಗೆ ಚುಂಬಿಸಿದಳು? ಅವಳ ಉಸಿರಾಟದಲ್ಲಿ ಬಿಸಿ ಹೆಚ್ಚಿತ್ತು. ಅಂತು ಅವಳು ಹೋಗಿಬಿಟ್ಟಾಳು ಎಂದು ಅವಳ ಸೊಂಟವನ್ನು ಬಳಸಿದ್ದ ಅವನ ಕೈಗಳು ಅವಳನ್ನು ಗಟ್ಟಿಯಾಗಿ ಅಪ್ಪಿಕೊಂಡುವು. ಅವಳು ಮತ್ತೆ ಕೇಳಿದಳು: "ನಾವು ಹೀಗೆ ರಾತ್ರಿ ಹೊತ್ತು ಒಬ್ಬರನ್ನೊಬ್ಬರು ಕಾಣೋದು ಸರಿಯಾ?"

ಅದರಲ್ಲೇನು ತಪ್ಪು ಎಂದು ಆತ ಕೇಳಬೇಕಾಗಿದ್ದದ್ದು. ಆದರೆ ಆ ಪ್ರಶ್ನೆಯೇ ಹೊರಗೆ ಬರಲಿಲ್ಲ. ಹಾಗೆ ಆತ ಕೇಳಿದನೆಂದೇ ಅವಳು ಭಾವಿಸಿದಳು. ಯಾಕೆ ಸರಿಯಲ್ಲ ಎಂದು ಕೇಳಿದಂತೆ. ಅಂತಹ ಒಂದು ಪ್ರಶ್ನೆ ಎಂದಂತೆ ಅವಳು ಮತ್ತೆ ಹೇಳಿದಳು:

"ಅಯ್ಯೋ ! ಇದು ದೊಡ್ಡ ತಪ್ಪು. ಮದುವೆಯಾಗುವುದಕ್ಕೆ ಮೊದಲು. ದೇವರೇ, ನನ್ನಿಂದಾಗುವುದಿಲ್ಲ."

ಅವಳು "ನನ್ನಿಂದಾಗುವುದಿಲ್ಲ" ಎಂದು ಹೇಳಿದುದು ತಪ್ಪನ್ನು ಕುರಿತಾಗಿರಬಹುದೆ? ಅಥವಾ ಅದಮ್ಯವಿಕಾರದಿಂದಾಗಿಯೋ?

ಏನಾದರೊಂದು ಹೇಳಬೇಕೆನ್ನಿಸುತ್ತದೆ ಅವನಿಗೆ. ಏನೂ ಮಾತನಾಡದೆ ಇದ್ದರೆ ಅವಳು ತಪ್ಪು ತಿಳಿದುಕೊಂಡಾಳು. ಒಂದು ಪ್ರಶ್ನೆ ಅವನ ನಾಲಗೆಯಿಂದ ಹೊರಬಿದ್ದಿತು:

"ನೀನು ಯಾಕೆ ಹೀಗೆಲ್ಲ ಹೇಳೋದು?"

ಅವಳು ಹೇಳಿದಳು: "ಯಾಕೋ ನನಗೆ ಗೊತ್ತಿಲ್ಲ. ನನಗೊಂದು ಥರಾ ಹೆದರಿಕೆ. ವಿಪರೀತ ಹೆದರಿಕೆ. ಆದರೂ ನನಗೆ ಕೈಬಿಡೋದಕ್ಕೆ ಮನಸ್ಸಿಲ್ಲ."

ಒಂದು ಕ್ಷಣ ಬಿಟ್ಟು ಅವಳು ಮತ್ತೆ ಹೇಳಿದಳು: "ಅದೇ ಸಾಕಾಗಿತ್ತು. ಮದುವೆ ಕಳೆದು......... ಅದೇ ಒಳ್ಳೇದಿತ್ತು".

ಅವನು ಕೇಳಿದ: "ಮತ್ತ್ಯಾಕೆ ನೀನು ಕೊಟ್ಟೆಯಂಬಲದ ಬಾಗಿಲು ತೆರೆದಿರುತ್ತೆ ಅಂದದ್ದು?"

"ಸುಮ್ಮನೆ, ಸುಮ್ಮನೆ."

ಅಷ್ಟೊಂದು ಲಘುವಾಗಿ ಅವಳು ಹೇಳಿದ್ದಲ್ಲ. ಅವನ ಕೊರಳನ್ನು ಬಳಸಿದ್ದ ಅವಳ ಕೈಗಳು ಬಿಗಿಯಾದುವು. ಅವನು ಓಡಿಹೋದಾನು; ಹಿಡಿದು ನಿಲ್ಲಿಸಬೇಕು ಎನ್ನುವಂತೆ. ಅವಳು ಆತನ ಮುಖಕ್ಕೆ ತನ್ನ ಮುಖವನ್ನೊಡ್ಡಿ ಹೇಳಿದಳು: "ನನ್ನ ಕಂಡರೆ ಇಷ್ಟವಿಲ್ಲ. ತೀರ ಇಷ್ಟವಿಲ್ಲ."

"ಅದ್ಯಾಕೆ ಹಾಗನ್ನಿಸುತ್ತೆ?"

ಎಂತಹ ನಿರ್ವಿಕಾರವಾದ ಪ್ರಶ್ನೆಯಾಗಿತ್ತು ಅದು! ಒಬ್ಬ ಪ್ರಣಯಿನಿಯೊಡನೆ ಅವಳ ಪ್ರಣಯಿ ಇಷ್ಟವಿಲ್ಲ ಎಂದು ಹೇಳುವಾಗ ಆ ಪ್ರೇಮಿ ಕಾರಣ ಸಹಿತವಾದ ವಿವರವನ್ನು ಬಯಸುತ್ತಾನೆ. ಅವಳು ಹೇಳಿದುದು ಸರಿಯಲ್ಲವೆಂದು ಹೇಳಬೇಕಾದದ್ದಲ್ಲವೆ? ಅವಳನ್ನು ಕಚಗುಳಿಯಾಡಿಸಿ ತನಗೆ ಇಷ್ಟವುಂಟೆಂದು ತಿಳಿಸಬೇಕಾದದ್ದಲ್ಲವೆ? ಅವಳು ಹೇಳಿದಳು:

"ನನಗೆ ಹಾಗನ್ನಿಸುತ್ತೆ."

ಒಂದು ವೇಳೆ ಆತನ ಚುಂಬನದಲ್ಲಿ ಬಿಸಿ ಸಾಕಷ್ಟು ಇಲ್ಲದೇ ಹೋಗಿರಬಹುದು. ಇಲ್ಲದಿದ್ದಲ್ಲಿ ಆತನ ಆಲಿಂಗನದಲ್ಲಿ ಬಲ ಸಾಲದೇ ಹೋಗಿರಬಹುದು. ಅದೂ ಇಲ್ಲದಿದ್ದಲ್ಲಿ ವ್ಯಕ್ತವಾದ ಕಾರಣವಲ್ಲ ಎನ್ನುವ ತೋರಿಕೆಯಾಗಿರಬಹುದು. ಇದಕ್ಕಿಂತ ಹೆಚ್ಚಾಗಿ ಚುಂಬನದಲ್ಲಿ ಬಿಸಿಯೂ ಆಲಿಂಗನದಲ್ಲಿ ಬಿಗಿಯೂ ಅವಳಿಗೆ ಬೇಕೆನ್ನಿಸಿರಬಹುದು.

ಅವಳು ಕೇಳಿದಳು: "ಮನೆಯಲ್ಲಿ ಏನಿತ್ತು ವಿಶೇಷ?"

ಆತ ಸ್ವಲ್ಪ ಗಾಬರಿಯಿಂದ ಹೇಳಿದ: "ಓ! ಅಂತಾ ವಿಶೇಷವಾದದ್ದೇನೂ ಇಲ್ಲ!"

ಉತ್ತರವನ್ನು ಕಂಡುಹಿಡಿದಿಲ್ಲ. ಅಮ್ಮನ ಭ್ರಾಂತಿ ಎಂದರೆ ಮಾತ್ರ ಸಾಲದು. ಮತ್ತೇನಾದರೂ ಕಾರಣವನ್ನು ಹೇಳಬೇಕು. ಏನು ಹೇಳುವುದು?

ಅವಳು ಕೇಳಿದಳು:

"ಮತ್ತೆ ಯಾಕೆ ಟೆಲಿಗ್ರಾಂ ಕಳಿಸಿದ್ರು?"

ಅವನು ಹೇಳಿದ:

"ಅಂಥಾದ್ದೇನೂ ಇಲ್ಲ. ಅಮ್ಮನಿಗೊಂದ್ಸಲ ನೋಡ್ಬೇಕು ಅನ್ನಿಸ್ತು."

"ಅದಕ್ಕೆ ಕಾಗದ ಬರೆದರೆ ಸಾಕಾಗಿತ್ತಲ್ವಾ?"

ತಿರುಗಿ ಮೂವತ್ತನೇ ತಾರೀಕು ಹೋಗಬೇಕಾಗಿದೆ. ಆಗ ಅದಕ್ಕೂ ಸಮಾಧಾನ ಹೇಳಬೇಕಾಗುತ್ತದೆ.

ರಂಗಮ್ಮ ಮತ್ತೆ ಹೇಳಿದಳು:

"ಅಂತೂ ಒಂದು ವಿಷಯ ಗೊತ್ತಾಗಿದೆ. ಊರಿಗೆ ಹೋಗಿ ಬಂದ ಮೇಲೆ ಮುಖದಲ್ಲಿ ಒಂದು ಥರಾ ಬೇಸರ ಕಾಣಿಸುತ್ತೆ."

ಅದು ನಿಜವೆಂದು ಒಪ್ಪಿಕೊಳ್ಳುವುದು ಒಳ್ಳೆಯದೆನ್ನಿಸಿತು. ಆತ ಹೇಳಿದ:

"ಅದು ನಿಜ."

"ಅದಕ್ಕೇ ನಾನು ಕೇಳಿದ್ದು: ಊರಿನಲ್ಲೇನಿತ್ತು ವಿಶೇಷ ಎಂದು."

ಸೋಲಿನ ಧ್ವನಿಯಲ್ಲಿ ಥಟ್ಟನೆ ಅವಳು ಹೇಳಿದಳು:

"ಇಷ್ಟವಿಲ್ಲದಿದ್ದರೆ ಬೇಡ. ಅದನ್ನು ತಿಳಿಯೋ ಹಕ್ಕು ನನಗೆಲ್ಲಿದೆ?"

"ಆ—ಅಂಥಾ ದೊಡ್ಡ ವಿಚಾರ ಏನಲ್ಲ."

"ದೊಡ್ಡದಲ್ಲದೆ ಇದ್ದರೆ ಹೋಗ್ಲಿ. ವಿಷಯ ಏನು?"

ಆಗಲೂ ಅವನಿಗನ್ನಿಸಿತು, ಆ ವಿಷಯ ಆಕಡೆ ತೆರೆದು ಹೇಳಿದರೆ ಏನು? ಎಂದು. ಇಲ್ಲ, ಅದಕ್ಕೂ ಅವನಿಗೆ ಸಾಮರ್ಥ್ಯವಿಲ್ಲ.

ಅವಳು ಉತ್ತರವನ್ನು ನಿರೀಕ್ಷಿಸುತ್ತಿದ್ದಾಳೆ. ತನಗರಿವಿಲ್ಲದಂತೆಯೇ ಅವನ ಬಾಯಿಂದ ಒಂದು ಉತ್ತರ ಹೊರಬಿದ್ದಿತು.

"ಒಂದು ಆಸ್ತಿ ಪತ್ರದ ವಿಚಾರ."

ಕೇಶವ ಪಿಳ್ಳೆಗೆ ಅದ್ಭುತವೆನಿಸಿಹೋಯಿತು. ಎಷ್ಟು ಸಹಜವಾಗಿ ಒಪ್ಪಿಸುವಂತಹ ಉತ್ತರ ಅದು! ಇದು ಎರಡನೇ ಸಲ ತನ್ನನ್ನು ತಾನು ಅಭಿನಂದಿಸಿಕೊಳ್ಳುತ್ತಿರುವುದು. ಅವನ ಭಾವನೆಗಳು ಸರಿಯಾಗಿ ತಿಳಿಗೊಂಡು ಪ್ರಕಾಶಿಸತೊಡಗಿದುವು.

ಅವಳು ಕೇಳಿದಳು:

"ಅದಕ್ಕಿಷ್ಟು ಕಷ್ಟಪಡೋದೇನಿದೆ?"

ಕೇಶವ ಪಿಳ್ಳೆ ಒಂದು ಕಥೆ ಹೇಳಲು ತೊಡಗಿದ. ಸಂದರ್ಭಕ್ಕೆ ಸರಿಯಾಗಿ ಕಥೆ ಹೊಂದಿಕೊಂಡಿತು.

"ನಮಗೆ ವಂಶ ಪಾರಂಪರ್ಯವಾಗಿ ಬಂದ ನೆಲ ಅದು. ಅದನ್ನು ಉಳಿಸಿಕೊಳ್ಳಬೇಕು ಎನ್ನುವುದು ನನಗೆ ಚಿಕ್ಕಂದಿನಲ್ಲೂ ಇದ್ದ ಆಶೆ. ಅಮ್ಮ ನನ್ನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಆ ನೆಲದ ಕಥೆ ಹೇಳಿದ್ದುಂಟು. ನಾನು ಆ ನೆಲ ಉಳಿಸಿಕೊಳ್ಳಬೇಕು ಎನ್ನುವುದು ತಾಯಿಯ ಆಶೆ. ಯಾವಾಗಲೂ ತಾಯಿ ನನ್ನೊಡನೆ ಅದನ್ನೇ ಹೇಳುತ್ತಿದ್ದದ್ದು."

ಆ ಮಾತುಕತೆಯ ಪ್ರವಾಹ ನಿಂತಿತು. ಅದೊಂದು ಹಂತ. ಆಸ್ತಿಯನ್ನು ಉಳಿಸಿಕೊಳ್ಳಬೇಕು ಅಂತಲೇ, ಬೇಡ ಅಂತಲೇ—ಏನು ಹೇಳುವುದು? ತಂಗಮ್ಮ ಕೌತುಕದಿಂದ ಕೇಳಿಸಿಕೊಳ್ಳುತ್ತಿದ್ದಳು. ಆ ಕಥೆಯನ್ನು ಅವಳು ನಂಬುತ್ತಿದ್ದಾಳೆ ಎನ್ನಿಸಿತು. ಅವಳು ಕೇಳಿದಳು—

"ಆ ಮೇಲೆ?"

ಆತ ಮುಂದುವರಿಸಿದ:

"ಆ ಮೇಲೆ ಉಳಿಸಿಕೊಳ್ಳಬೇಕೂಂತ ಉದ್ದೇಶಿಸಿದ್ದ ಆಸ್ತಿಯ ಈಗಿರುವ ಹಕ್ಕನ್ನು ಬರೆದುಕೊಡಬೇಕೂಂತ."

ಅವಳು ಕೇಳಿದಳು:

"ಬರೆದುಕೊಡೋದು. ಆದರಲ್ಲೇನು?"

ಆತ ಉತ್ತರಿಸಿದ:

"ಉದ್ಯೋಗದ ಪರಂಪರೆಯುಳ್ಳ ನಿಮಗೆ, ತಿರುವನಂತಪುರದವರಿಗೆ ಅದರ ಕಷ್ಟ

ಅರ್ಥವಾಗುವುದಿಲ್ಲ. ಅದು ಕೃಷಿಕನ ಪರಂಪರೆಯಲ್ಲಿ ಬೆಳೆದವನಿಗೆ ಮಾತ್ರ ಅರ್ಥವಾದೀತು."

ಅವಳು ಅದಕ್ಕೆ ಸುಮ್ಮನಾಗಲಿಲ್ಲ.

"ನಮಗೆ ಅದೊಂದೂ ಗೊತ್ತಾಗೋದಿಲ್ಲ. ನಾವು ಆಸ್ತಿಪಾಸ್ತಿ ಏನೂ ಇಲ್ಲದವರು."

"ಹೌದು. ಅದು ಸತ್ಯ."

ಕೇಶವ ಪಿಳ್ಳೈ ಖಂಡಿತವಾಗಿಯೂ ಅದನ್ನು ನಂಬಿದ. ಆ ಕಥೆಯನ್ನು ಹೇಳಿಕೊಂಡೇ ತನ್ನ ಮಾತನ್ನು ಸಮರ್ಥಿಸಿದ:

"ಮೂವತ್ತನೇ ತಾರೀಕು ಆಧಾರಪತ್ರ ಬರೆಸಬೇಕು. ಹೋಗಬೇಕು."

ಹಾಗೆ ಅಂದು ಬೆಳಗಾಗುವ ವರೆಗೂ ಒಂದು ಕಡೆಯಲ್ಲಿ ಆ ಪ್ರೇಮಿಗಳು ಪ್ರಶ್ನೋತ್ತರಗಳನ್ನು ನಡೆಸಿದ್ದರು. ಆತ ಅವಳನ್ನು ಕಚಗುಳಿ ಆಡಿಸಿಕೊಂಡಿದ್ದ. ಆದರೆ ಕೇಶವ ಪಿಳ್ಳೈ ಯೌವನದ ಬಿಸಿರಕ್ತದಲ್ಲೂ ತನ್ನ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಂಡಿದ್ದ. ಅವಳನ್ನು ತನಗೆ ಹತ್ತಿರದವಳನ್ನಾಗಿ ಮಾಡಿಕೊಳ್ಳುವುದು ಮಾತ್ರ ಅವನ ಉದ್ದೇಶವಾಗಿತ್ತು. ಆದರೆ ಅವಳೋ ಎಲ್ಲವನ್ನೂ ಮರೆತಳು. ಯೌವನದ ಕಾವು ಅವಳಿಗೆ ಸಂಬಂಧಿಸಿದಂತೆ ಅವಳನ್ನು ಉನ್ಮಾದಕ್ಕೊಳಗುಮಾಡಿತ್ತು. ಆತ ಭಯಪಡುತ್ತಿದ್ದ. ಆತನ ಆಸಕ್ತಿ ತಣ್ಣಗಾಗುತ್ತಿತ್ತು. ಆತ ಕೇಳಿದ:

"ಇದೇನಿದು?"

"ಯಾವುದು?"

"ಇದು ಹೇಗೆ ಕೊನೆಗೊಳ್ಳುತ್ತೆ ಗೊತ್ತಾ? ನಿನ್ನ ಒಳ್ಳೆ ಹೆಸರು?"

ಅವಳು ಹೇಳಿದಳು:

"ಒಳ್ಳೆ ಹೆಸರು! ಹಾಗಾದರೆ ತಾನೆ ಏನಂತೆ? ಅದು ಯಾರದು?"

ಕೇಶವ ಪಿಳ್ಳೈಗೆ ಮತ್ತೂ ಹೆಚ್ಚಿನ ನಿಯಂತ್ರಣ ಆವಶ್ಯಕವೆನ್ನಿಸಿತು. ಅವಳಿಗೆ ಭಯವಿಲ್ಲ. ಆದರೆ ಆತನಿಗೆ ತುಂಬ ಭಯವಿತ್ತು.

# [4]

## ಒಂದು ಮದುವೆ ನಡೆಯಿತು

ಇಪ್ಪತ್ತೊಂಬತ್ತು ಮತ್ತು ಮೂವತ್ತನೇ ತಾರೀಕು ರಜಾ ಸಿಕ್ಕಬೇಕಾಗಿತ್ತು. ರಜಾ ಸ್ಯಾಂಕ್ಷನ್ ಮಾಡಿಸಿಕೊಂಡು ಹೋಗುವುದೇ ಒಳ್ಳೆಯದು. ಕಳೆದ ಸಲದ ಹಾಗೆ ಅಪ್ಲಿಕೇಶನ್ ಕೊಟ್ಟು ಹೋಗುವುದು ಸರಿಯಲ್ಲ ಎನ್ನುವುದು ಹರಿಹರಯ್ಯರರ ಅಭಿಪ್ರಾಯವಾಗಿತ್ತು. ಸೂಪರಿಂಟೆಂಡೆಂಟರ ಮನೆಗೇ ಹೋಗಿ ಅವರನ್ನು ಕಂಡು ಹೇಳಬೇಕು. ರಜಾ ಸ್ಯಾಂಕ್ಷನ್ ಮಾಡಿಸಿಕೊಳ್ಳಬೇಕು—ಆ ಮೇಲೆ ಹೋಗುವುದೇ ಸರಿ. ಈ ಉಪಾಯವನ್ನು ಹರಿಹರಯ್ಯರ್ ಸೂಚಿಸಿದರು.

ವಯ್ಯಾಪುರಿ ಪಿಳ್ಳೆ ಕೆಟ್ಟ ಮನುಷ್ಯನಲ್ಲ. ಆತನೂ ಒಬ್ಬ ಬಿ.ಎ. ಪದವೀಧರ. ಹಿಂದಿನ ಕಾಲದ ಬಿ.ಎ. ಪಾಸು ಮಾಡಿದ ವ್ಯಕ್ತಿ. ಅಂದಿಗೆ ಮೂವತ್ತು ವರ್ಷಗಳಿಗೆ ಹಿಂದೆ ಬಿ.ಎ. ಪಾಸಾಗಿ ಸೆಕ್ರೆಟರಿಯೇಟಿನಲ್ಲಿ ಒಬ್ಬ ಕ್ಲಾರ್ಕಾಗಿ ಪ್ರವೇಶಿಸಿದ್ದು. ಇವತ್ತಿಗೂ ಸೂಪರಿಂಟೆಂಡೆಂಟಾಗಿಯೇ ಇದ್ದಾರೆ. ಆತನ ಅನಂತರ ಕೆಲಸ ಸಿಕ್ಕಿದ ಎಷ್ಟೋ ಜನರು ದೊಡ್ಡ ದೊಡ್ಡ ಉದ್ಯೋಗಗಳಲ್ಲಿದ್ದು ಸೆಕ್ರೆಟರಿಗಳಾಗಿ ಹೋಗಿದ್ದಾರೆ. ವಯ್ಯಾಪುರಿ ಪಿಳ್ಳೆ ಇನ್ನೂ ಆ ಸೆಕ್ಷನ್ನಿನಲ್ಲೇ ಇದ್ದಾರೆ. ಅಲ್ಲಿಯ ಎಲ್ಲಾ ಕುರ್ಚಿಗಳಲ್ಲೂ ಆತ ಕುಳಿತಿರುವುದುಂಟು.

ವಯ್ಯಾಪುರ ಪಿಳ್ಳೆ ಕೆಲಸ ಮಾಡುವುದರಲ್ಲಿ ಅಸಮರ್ಥರೇನಲ್ಲ. ಬುದ್ಧಿಶಕ್ತಿಯೂ ಕಡಿಮೆಯೇನಲ್ಲ. ಆದರೆ ಯಾರಿಗೂ ಅವರ ನೆನಪು ಬರಲಿಲ್ಲ. ಜ್ಞಾಪಿಸಿಕೊಳ್ಳುವವರೂ ಯಾರೂ ಇಲ್ಲ. ಜ್ಞಾಪಿಸಿಕೊಳ್ಳುವಂತಹ ಒಂದೇ ಒಂದು ವ್ಯಕ್ತಿಯನ್ನು ಸಂಪಾದಿಸುವುದಕ್ಕೂ ಅವರಿಗೆ ಸಾಧ್ಯವಾಗಿರಲಿಲ್ಲ. ಈ ಮೂವತ್ತು ವರ್ಷಗಳು ಪೂರ್ತಿ ಆತ ಯಾಂತ್ರಿಕವಾಗಿ ಜೀವಿಸಿದ್ದರು. ಸರಿಯಾಗಿ ಹನ್ನೊಂದು ಗಂಟೆಗೆ ಆಫೀಸಿಗೆ ಬರುತ್ತಿದ್ದದ್ದು. ಐದು ಗಂಟೆಗೆ ಹಿಂದಿರುಗುತ್ತಿದ್ದದ್ದು. ಸೆಕ್ರೆಟರಿಯೇಟಿನ ತನ್ನ ಸೆಕ್ಷನಿನ ಕ್ಲಾರ್ಕುಗಳ ಜತೆಯಲ್ಲಲ್ಲದೆ ಬೇರೆ ಯಾರೊಡನೆಯೂ ಮಾತನಾಡುವುದನ್ನು ಕಂಡದ್ದಿಲ್ಲ. ಐದು ಗಂಟೆಯ ನಂತರ, ಮಾರನೆಯ ದಿನದ ಹನ್ನೊಂದು ಗಂಟೆಯ ವರೆಗೆ ಅವರ ಮನೆಯಲ್ಲಲ್ಲದೆ ಬೇರೆಲ್ಲಿಯೂ ಅವರನ್ನು ಕಾಣುವುದಕ್ಕೂ ಸಾಧ್ಯವಿರಲಿಲ್ಲ. ಹನ್ನೊಂದು ಗಂಟೆಯಿಂದ ಐದು ಗಂಟೆಯ ವರೆಗೆ ಆಫೀಸಿನಲ್ಲಿ. ಹನ್ನೊಂದು ಗಂಟೆಯ ಹೊತ್ತಿಗೆ ಎಡಗಡೆಗೆ ಪಂಚೆ ಸುತ್ತಿ, ಬಣ್ಣ ಮಾಸಿದ ಕೋಟನ್ನು ಧರಿಸಿ, ಹಣೆಗೆ ಭಸ್ಮ ಹಚ್ಚಿಕೊಂಡಿರುವ ಒಬ್ಬಾತ ಸೆಕ್ರೆಟರಿಯೇಟಿನ ಗೇಟನ್ನು ಪ್ರವೇಶಿಸುವುದನ್ನು ಕಾಣಬಹುದು. ಈ ಪದ್ಧತಿ ಎಂದೂ ಬದಲಾಯಿಸಿಲ್ಲ. ಈ ಮೂವತ್ತು ವರ್ಷಗಳೂ ಹಾಗೆಯೇ ಕಳೆದುವು.

ಬರವಣಿಗೆಯ ಮೂಲಕವಲ್ಲದೆ ಮೇಲಿನವರಿಗೆ ವಯ್ಯಾಪುರಿ ಪಿಳ್ಳೆ ಎನ್ನುವ ಉದ್ಯೋಗಸ್ಥ ಸೆಕ್ರೆಟರಿಯೇಟಿನಲ್ಲಿದ್ದಾನೆಂದೇ ತಿಳಿಯದು.

ವಯ್ಯಾಪುರಿ ಪಿಳ್ಳೆಗೆ ಹತ್ತು ಮಕ್ಕಳಿದ್ದಾರೆ. ಕೆಲಸಕ್ಕೆ ಸೇರಿದಂದಿನಿಂದ ಇಲ್ಲಿಯವರೆಗೆ ಆತ ಏನು ಕೊಟ್ಟರೂ ತೆಗೆದುಕೊಳ್ಳುತ್ತಾರೆ. ಲಂಚ ಎಂದು ಅದನ್ನು ಹೇಳುವಂತಿರಲಿಲ್ಲ. ಇಂತಹ ಕೆಲಸಕ್ಕೆ ಇಷ್ಟು ಸಿಕ್ಕಬೇಕು ಎನ್ನುವ ನಿರ್ಬಂಧವೂ ಇರಲಿಲ್ಲ. ಎಷ್ಟು ಕಡಿಮೆ ಕೊಟ್ಟರೂ ತೆಗೆದುಕೊಳ್ಳುತ್ತಿದ್ದರು. ಕಡಿಮೆಯಾಯಿತು ಎಂದು; ಎಂದೂ ಹೇಳಿದ್ದಿಲ್ಲ. ಇಷ್ಟೇ ಸಿಕ್ಕಬೇಕು ಎನ್ನುವುದೂ ಇಲ್ಲ. ಆದ್ದರಿಂದ ಯಾರಿಗೂ ಸಿಟ್ಟಿಲ್ಲ. ದೂರು ಹೇಳುವಂತೆಯೂ ಇಲ್ಲ. ಇದು ವರೆಗೆ ವಯ್ಯಾಪುರಿ ಪಿಳ್ಳೆಯನ್ನು ಕುರಿತು ಯಾವ ದೂರೂ ಬಂದಿರಲಿಲ್ಲ. ಈ ಲಂಚ ಸ್ವೀಕಾರ ಸಂಬಳವಲ್ಲದೆ ಬೇರೆ ಒಂದು ಆದಾಯದ ಮಾರ್ಗವೆಂದು ಒಪ್ಪಿಕೊಂಡಂತಿತ್ತು ಆ ಮನುಷ್ಯನ ವರ್ತನೆ. ಸಂಬಳ ಎಂದರೆ ಲಂಚವೂ ಸೇರಿ. ಆದರೆ ಇಷ್ಟು ಎಂದು ಹೇಳುವುದು ಸರಿಯಲ್ಲ; ಆ ರೀತಿಯಲ್ಲಿ ಹತ್ತು ಮಕ್ಕಳಿರುವ ಆ ಕುಟುಂಬ ಸಾಗುತ್ತಿದ್ದದ್ದು. ತಾವು ಬಹಳ ಕಡಿಮೆ ಲಂಚ ಸಿಕ್ಕುವ ಸ್ಥಾನದಲ್ಲಾಗಿ ಹೋದುದರಿಂದ ತನ್ನ ಭಾಗ್ಯವನ್ನು ಅವರು ಹಳಿದುಕೊಳ್ಳುತ್ತಿದ್ದರು. ವಯ್ಯಾಪುರಿ ಪಿಳ್ಳೆ ತಮಗೆ ಪ್ರಮೋಶನ್ ಸಿಕ್ಕಲಿಲ್ಲ ಎಂದು ದೂರು ಹೇಳಿಕೊಳ್ಳುವುದೂ ಇಲ್ಲ.

ವಯ್ಯಾಪುರಿ ಪಿಳ್ಳೆ ಸುಬ್ರಹ್ಮಣ್ಯ ದೇವರ ದೊಡ್ಡ ಭಕ್ತ. ಆ ಭಕ್ತಿಯೇ ಯಾವ ತೊಂದರೆಯೂ ಇಲ್ಲದೆ ತನ್ನ ಜೀವನವನ್ನು ಹೀಗೆ ನಡೆಸಿಕೊಂಡು ಹೋಗುತ್ತದೆ ಎಂದು ಅವರು ತಿಳಿದಿದ್ದರು. ಈವರೆಗೂ ಯಾವ ದೂರನ್ನೂ ಹೇಳಿಕೊಂಡಿಲ್ಲ. ಆದರಿಂದ ಯಾವ ತೊಂದರೆಯೂ ಆಗಿರಲಿಲ್ಲ. ಸುಬ್ರಹ್ಮಣ್ಯ ದೇವರೊಬ್ಬನೇ ತನ್ನ ಏಕೈಕ ಸಹಾಯಕ ಎಂದು ಅವರು ಹೇಳುವುದು. ಇಂದಿಗೂ ಸುಬ್ರಹ್ಮಣ್ಯನೇ ಸಹಾಯಕನಾಗಿದ್ದಾನೆ.

ಸೂಪರಿಂಟೆಂಡೆಂಟರನ್ನು ಮನೆಗೇ ಹೋಗಿ ಕಂಡು ರಜೆ ಸ್ಯಾಂಕ್ಷನ್ ಮಾಡಿಸಿಕೊಳ್ಳಬೇಕು ಎಂದು ಕೇಶವ ಪಿಳ್ಳೆ ತೀರ್ಮಾನಿಸಿದ. ಅವರ ಮನೆಗೆ ಮೊದಲ ಬಾರಿಗೆ ಹೋಗುತ್ತಿರುವುದು. ಬರಿಗೈಯಲ್ಲಿ ಹೋಗುವುದು ಸರಿಯಲ್ಲ. ಅದು ಸೂಪರಿಂಟೆಂಡೆಂಟರಿಗೆ ಸಂತೋಷವನ್ನುಂಟುಮಾಡೀತು ಎಂದು ಹೇಳಲಾಗುವುದಿಲ್ಲ. ಅದಾಗಿತ್ತು ಅವನ ಭಾವನೆ. ಆಧಾರ ಪತ್ರದ ವಿಚಾರಕ್ಕಾಗಿ ಊರಿಗೆ ಹೋಗುವುದಕ್ಕಾಗಿ ಹತ್ತು ರೂಪಾಯಿಯನ್ನು ತಂಗಮ್ಮ ಸಾಲ ಕೊಡುವುದಾಗಿ ಒಪ್ಪಿದ್ದಳು. ಅದರ ಜೊತೆಗೆ ಮತ್ತೂ ಮೂರು ರೂಪಾಯಿಗಳನ್ನು ಅವನು ಅವಳಿಂದ ಕೇಳಿ ತೆಗೆದುಕೊಂಡಿದ್ದ. ಒಂದಷ್ಟು ಸಕ್ಕರೆ, ಒಂದಷ್ಟು ಕಾಫಿ ಬೀಜ ತೆಗೆದುಕೊಂಡು ವಯ್ಯಾಪುರಿ ಪಿಳ್ಳೆಯ ಮನೆಗೆ ಹೋದ. ತುಂಬ ಚೆನ್ನಾಗಿದ್ದ ಕಾಫಿ ಬೀಜವನ್ನು ಕಂಡು ವಯ್ಯಾಪುರಿ ಪಿಳ್ಳೆಗೆ ಬಹಳ ಸಂತೋಷವಾಯಿತು. ಹಾಗೆ ಇಪ್ಪತ್ತೊಂಬತ್ತು ಮೂವತ್ತನೇ ತಾರೀಕುಗಳಿಗೆ ರಜ ತೆಗೆದುಕೊಂಡು ತಂಗಮ್ಮ

ಕೊಟ್ಟ ಹತ್ತು ರೂಪಾಯಿಗಳನ್ನೂ ತೆಗೆದುಕೊಂಡು ಕೇಶವ ಪಿಳ್ಳೆ ಇಪ್ಪತ್ತೆಂಟನೇ ತಾರೀಕು ಸಾಯಂಕಾಲ ಮದುವೆ ಮಾಡಿಕೊಳ್ಳುವುದಕ್ಕಾಗಿ ಹೊರಟ.

ಆತ ಅಷ್ಟೊಂದು ತಲೆ ಕೆಡಿಸಿಕೊಳ್ಳಬೇಕಾಗಿರಲಿಲ್ಲ. ಭವಿಷ್ಯವನ್ನು ಕುರಿತು ಯಾವುದನ್ನೂ ನಿಶ್ಚಯಿಸಿರಲಿಲ್ಲ. ಮದುವೆ ಮಾಡಿಕೊಳ್ಳುವುದಕ್ಕೆ ಹೋಗಬೇಕು. ತಿಂಗಳ ಕೊನೆ. ಕೈಯಲ್ಲಿ ಕಾಸಿಲ್ಲ. ಹಣ ಕಳಿಸಿಕೊಡಬೇಕೆಂದು ತಂದೆಯನ್ನು ಕೇಳಿಲ್ಲ. ಹೋಗಲೂ ಬೇಕು. ಆಧಾರ ಪತ್ರ ಬರೆಸುವುದಕ್ಕೆ ಹಣ ಬೇಡವೇ ಎಂದು ತಂಗಮ್ಮ ಕೇಳಿದಳು. ಬೇಕು ಎಂದು ಆತ ಹೇಳಿದ್ದ. ಆ ರೀತಿಯಲ್ಲಲ್ಲದೆ ತಾನಾಗಿಯೇ ಅವಳನ್ನು ಸಾಲ ಕೇಳಿದ್ದಲ್ಲ. ಇನಿಯಳೊಡನೆ ಇನಿಯ ಮತ್ತೊಬ್ಬಳನ್ನು ಮದುವೆ ಮಾಡಿಕೊಳ್ಳುವುದಕ್ಕೆ ಹೋಗಲು ಹಣ ತೆಗೆದುಕೊಂಡ ಎಂದು ಬೇಕಾದರೂ ಹೇಳಲಿ. ಆದರೆ ಆತ ತಾನಾಗಿ ಹಣ ಕೇಳಿ ತೆಗೆದುಕೊಂಡ ಎನ್ನುವ ಆರೋಪವನ್ನು ಅವನ ಮೇಲೆ ಹೊರಿಸುವಂತಿರಲಿಲ್ಲ. ಒಂದು ವೇಳೆ ಬೇರೆ ಯಾರಾದರೂ ಹಣ ಕೊಟ್ಟಿದ್ದಿದ್ದರೆ ಈ ಹಣವನ್ನು ತೆಗೆದುಕೊಳ್ಳುತ್ತಲೂ ಇರಲಿಲ್ಲ.

"ಒಬ್ಬ ಸ್ನೇಹಿತನನ್ನಾದರೂ ಕರಕೊಂಡು ಬರಲಿಲ್ಲ ಯಾಕೋ?" ಎಂದು ತಂದೆ ಮಗನನ್ನು ಕಂಡಾಗ ಕೇಳಿದರು.

ಗೌರಿಯಮ್ಮ ತನಗೆ ಹೇಳಬೇಕು ಅನ್ನಿಸಿದ್ದನ್ನು ಬಾಯಿಬಿಟ್ಟು ಹೇಳಿದರು: "ನನಗೆ ಹೆದರಿಕೆ ಇದ್ದೇ ಇತ್ತು. ಅದೇನು ಹೇಳಲಾ? ಮದುವೆ ಏರ್ಪಾಡು ಮಾಡಿ ಹುಡುಗನೇ ಬರಲಿಲ್ಲ ಅಂತ ಆದೀತೋ ಅಂತ."

ಕುಟ್ಟಿಯಮ್ಮ ಅರಳು ಹುರಿದ ಹಾಗೆ ಪಟಪಟನೆ ಹೇಳಿದಳು:

"ನನ್ನ ಮಗ ಹಾಗೆಲ್ಲ ಅಪ್ಪನ ಮುಖಕ್ಕೆ ಮಸಿ ಹಚ್ಚೋನಲ್ಲ."

ಅಮ್ಮನಿಗೆ ಮಗನ ಹತ್ತಿರ ಒಂದು ವಿಷಯದಲ್ಲಿ ಕ್ಷಮಾ ಯಾಚನೆ ಮಾಡುವುದಿತ್ತು. "ಮಗ ಹಾಕುವ ಮಾಲೆ ಚಿನ್ನದ್ದಾಗಿರಬೇಕು ಎಂದು ತಂದೆಯ ಆಲೋಚನೆಯೂ ಅದೇ ಆಗಿತ್ತು. ಹಣಕ್ಕಾಗಿ ತಂದೆ ತುಂಬ ಅಲೆದರು. ನಮ್ಮ ಜಮೀನು ಗೇಣಿಗೆ ಕೊಟ್ಟಾದರೂ ಹಣ ತರೋದು ಅನ್ನೋವರೆಗೂ ಆಲೋಚನೆ ಮಾಡಿದರು. ಆದರೆ ಕೊಡೋರು ಯಾರೂ ಇರಲಿಲ್ಲ. ಆಮೇಲೆ ಕಡೆಗೆ ಹೂಮಾಲೆಯೇ ಸಾಕು ಅಂತ ತೀರ್ಮಾನ ಮಾಡಿದ್ದಾಯ್ತು. ಇನ್ನೇನು ಮಾಡೋದು? ಅದನ್ನ ನಿನ್ನ ಹತ್ರ ಹೇಳೋದಕ್ಕೆ ಅವರಿಗೆ ತುಂಬ ಕಷ್ಟ ಅನ್ನಿಸಿತು. ಕಡೆಗೆ ನಾನೇ ಮಗನ ಹತ್ರ ಹೇಳ್ತೀನಿ ಅಂದೆ."

ಕುಟ್ಟಿಯಮ್ಮ ವಾತ್ಸಲ್ಯದಿಂದ ಕೇಳಿದಳು: "ಅದಕ್ಕೆ ನಿನಗೇನು ಬೇಸರಾನಾ?"

ಒಂದೇ ಮಾತಿನಲ್ಲಿ ಕೇಶವ ಪಿಳ್ಳೆ ಉತ್ತರ ಹೇಳಿದ:

"ಇಲ್ಲ."

ಕುಟ್ಟಿಯಮ್ಮ ಹೇಳಿದಳು: "ಸಮಾರಂಭವೆಲ್ಲ ಕಡಿಮೆ ಖರ್ಚಿನಲ್ಲಿಟ್ಟುಕೊಂಡಿದ್ದೀವಿ. ಹಣ ಎಲ್ಲಿಂದ ತರೋದಪ್ಪ! ಅಪ್ಪನಿಗೆ ವಯಸ್ಸಾಯಿತು. ಗೇಣ್ಯಲ್ಲಿ ಸಿಕ್ಕೋ

ಅಷ್ಟರಲ್ಲೇ ಆಲ್ಲವೇ ಜೀವನ ಸಾಗಿಸೋದು?" ಕುಟ್ಟಿಯಮ್ಮ ಒಂದೇ ಸವನೆ ಮಾತ ನಾಡಿಕೊಂಡಿದ್ದಳು.

ಅಲ್ಲಿ ಎಲ್ಲರಿಗೂ ಉತ್ಸಾಹವಿತ್ತು. ಪ್ರತ್ಯೇಕವಾಗಿ ಪಪ್ಪು ಪಿಳ್ಳೆಗೂ ಕುಟ್ಟಿ ಯಮ್ಮನಿಗೂ. ಅವರು ಅಷ್ಟು ಉತ್ಸಾಹದಲ್ಲಿದ್ದುದನ್ನು ಒಮ್ಮೆಯೂ ಕಂಡದ್ದಿಲ್ಲ. ಅವರ ಜೀವನದಲ್ಲಿ ತುಂಬ ದೊಡ್ಡ ಘಟನೆ ಅದು. ಇಷ್ಟೊಂದು ಉತ್ಸಾಹಕ್ಕೇನು ಕಾರಣ ಎಂದು ಯಾರು ಬೇಕಾದರೂ ಕೇಳುವಂತಿತ್ತು.

ಅಂದು ಕಿಟ್ಟು ಮಾವ ಬಂದದ್ದು, ಆ ಹೆಣ್ಣಿನ ಜಾತಕದೊಡನೆ. ಕಿಟ್ಟು ಮಾವ, ಕೇಶವ ಪಿಳ್ಳೆಯನ್ನು ಹಿಡಿದು ಕುಳ್ಳಿರಿಸಿ, ಗ್ರಹಗತಿಗಳನ್ನು ವಿವರಿಸಿ, ಫಲಗಳನ್ನು ಹೇಳ ತೊಡಗಿದರು. ಆತನಿಗೆ ಗ್ರಹಗತಿಗಳನ್ನು ಕುರಿತು ಯಾವ ಜ್ಞಾನವೂ ಇರಲಿಲ್ಲ. ಆದರೆ ಕೆಲವು ಭಾಗಗಳನ್ನು ಓದಲು ತೊಡಗಿದಾಗ ಕೇಳಿಸಿಕೊಳ್ಳದಿರಲು ಸಾಧ್ಯವಾಗಲಿಲ್ಲ. ವರ್ಷಗಳು, ತಿಂಗಳುಗಳು, ಒಳ್ಳೆಯ ಕಾಲ ಮುಂತಾದುವುಗಳನ್ನು ವಿವರಿಸತೊಡಗಿದಾಗ ಕೇಶವ ಪಿಳ್ಳೆ ಪ್ರಶ್ನೆ ಕೇಳತೊಡಗಿದ.

ಆಸುಪಾಸಿನವರು ಒಬ್ಬೊಬ್ಬರಾಗಿ ಬರತೊಡಗಿದರು. ಕೆಲವೇ ಜನರು. ಅದೇ ಮುಹೂರ್ತದಲ್ಲಿ ಮತ್ತೊಂದು ಮದುವೆ ನಡೆಯುವುದಿತ್ತು. ಕೊಚ್ಚು ನಾಣಿ ಯದು. ಕಿಟ್ಟುಮಾವನ ವಿವರಣೆಗಳನ್ನು ಕೇಳಿಸಿಕೊಳ್ಳಲು ಇಷ್ಟವಿರಲಿಲ್ಲ. ಕೇಶವ ಪಿಳ್ಳೆಯಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದಿತು. ಆತನೂ ಆಸುಪಾಸಿನವರನ್ನು ಸ್ವಾಗತಿಸಲು ಸಿದ್ಧನಾದ. ಅವರಿಗೆ ವೀಳೆಯದೆಲೆ ತೆಗೆದುಕೊಂಡು ಹೋಗಿ ಕೊಡು ವುದು ಮುಂತಾದುವುಗಳನ್ನು ಮಾಡುವುದಕ್ಕೆ ತೊಡಗಿದ. ತನಗೆ ಯಾವ ಸಂಬಂಧವೂ ಇಲ್ಲ ಎನ್ನುವ ರೀತಿಯಲ್ಲಿರಲಿಲ್ಲ ಆತ. ಅವನಿಗೆ ಸಂಬಂಧಪಟ್ಟ ಸಂಗತಿಯೇ ಆಗಿತ್ತಲ್ಲವೆ?

ನಡು ರಾತ್ರಿ ಕಳೆದ ಬಳಿಕ ಅವರು ಹೊರಟದ್ದು. ದೋಣಿಯಲ್ಲಿ ಹೋದದ್ದು. ವರನ ಕಡೆಯವರಲ್ಲಿ ಕೇಶವ ಪಿಳ್ಳೆಯ ವಯಸ್ಸಿನವರು ಇದ್ದದ್ದು ಇಬ್ಬರೇ. ಅವರು ಎಂದೂ ಕೇಶವ ಪಿಳ್ಳೆಯ ಜೊತೆಯಲ್ಲಿದ್ದವರಲ್ಲ. ಅವರೊಡನೆ ಕೇಶವ ಪಿಳ್ಳೆಗೆ ಯಾವ ಹತ್ತಿರದ ಸ್ನೇಹವೂ ಇಲ್ಲ. ಉಳಿದವರೆಲ್ಲ ಪಪ್ಪು ಪಿಳ್ಳೆಯ ವಯಸ್ಸಿನವರು. ಕಿಟ್ಟು ಮಾವ ಭಾಗವತ ಓದುವುದಕ್ಕಾರಂಭಿಸಿದರು. ಆ ತರುಣರನ್ನು ಬಿಟ್ಟು ಉಳಿದವರು ಕಿಟ್ಟುಮಾವನ ಓದುವಿಕೆಯನ್ನೂ ವ್ಯಾಖ್ಯಾನವನ್ನೂ ಕೇಳಿಸಿಕೊಂಡಿದ್ದರು. ಆ ಯುವ ಕರು ಸುಖವಾಗಿ ನಿದ್ರಿಸುತ್ತಿದ್ದರು. ಕೇಶವ ಪಿಳ್ಳೆ ಒಬ್ಬನೇ ಆದ. ಮಾತನಾಡುವುದಕ್ಕೆ ಯಾರೂ ಇಲ್ಲದಂತಾಗಿತ್ತು.

ವಧುವಿನ ಮನೆಗೆ ಒಂದು ಫರ್ಲಾಂಗ್ ದೂರದಲ್ಲಿ ತೆಂಕು ಭಾಗದ ಒಂದು ಮನೆ ಯಲ್ಲಿ ವರನೂ ವರನ ಕಡೆಯವರೂ ಇಳಿದುಕೊಳ್ಳುವುದಕ್ಕೆ ಏರ್ಪಾಟು ಮಾಡಿದ್ದದ್ದು. ಅಲ್ಲಿಯೇ ಬೆಳಗಿನ ಕಾಫಿ. ಕಾಫಿ ಆದ ಮೇಲೆ ವರನನ್ನು ಇದಿರುಗೊಳ್ಳುವುದಿತ್ತು. ವಧು

ವಿನ ಕಡೆಯವರು ವರನನ್ನು ಎದಿರುಗೊಳ್ಳುವುದಕ್ಕೆ ಬಂದರು. ವರ ಕಾಣಲಿಲ್ಲ. ಕೇಶವ ಪಿಳ್ಳೆ ಎಲ್ಲಿ ಎಂದು ಮುದುಕರು ಗಾಬರಿಯಾಗಿ ಒಬ್ಬರನ್ನೊಬ್ಬರು ಕೇಳಿದರು. ಸ್ವಲ್ಪ ಹೊತ್ತು ಅಲ್ಲಿ ಗಲಿಬಿಲಿಯುಂಟಾಗಿತ್ತು. ಪಪ್ಪು ಪಿಳ್ಳೆ ಗಂಟಲು ದೊಡ್ಡದು ಮಾಡಿ ಎರಡುಸಲ ಕೂಗುಹಾಕಿದರು. ಅವನು ಇಲ್ಲಿಯೇ ಇರಬೇಕಾದದ್ದು. ಎಲ್ಲಿಗೆ ಹೋದ? ಹಿತ್ತಿಲಿನ ಒಂದು ಮೂಲೆಯಲ್ಲಿ ಗದ್ದೆಯ ಕಡೆಗೆ ಬಾಗಿದ್ದ ಒಂದು ಹೊನ್ನೆಮರದ ಮೇಲೆ ಹತ್ತಿ ಕೇಶವ ಪಿಳ್ಳೆ ಚಿಂತಾಮಗ್ನನಾಗಿದ್ದ. ಆ ಕೋಲಾಹಲಗಳಾವುವೂ ಅವನಿಗೆ ತಿಳಿಯದು. ಗಾಬರಿಯಿಂದ ಓಡಾಡುತ್ತಿದ್ದ ಕಿಟ್ಟುಮಾವ ಅವನನ್ನು ಕಂಡು ಹಿಡಿದು ಕರೆದುಕೊಂಡು ಬಂದರು. ಪಪ್ಪು ಪಿಳ್ಳೆಗೆ ಸಹಿಸಲಾರದ ಸಿಟ್ಟು ಬಂದಿತ್ತು. ಆ ಹೊತ್ತಿನಲ್ಲಿ ಅದನ್ನು ತಡೆದುಕೊಂಡು ಕೇಳಿದರು: "ಮನುಷ್ಯರು ಇರೋ ಕಡೆ ಇರದೆ ಯಾವ ಕಾಡಿಗೆ ಹೋಗಿದ್ದೆಯೋ?"

ಕಿಟ್ಟುಮಾವ ಅದಕ್ಕೆ ಉತ್ತರಕೊಟ್ಟದ್ದು:

"ಹೋಗಲಿ ಬಿಡಿ. ಅವನ ಜೊತೆಯವರ್‍ಯಾರೂ ಇಲ್ಲ. ನಮ್ಮ ಜೊತೆಯಲ್ಲಿ ಓಡಾಡಿಕೊಂಡಿರೋದಕ್ಕಾಗುತ್ತಾ?"

ಮುಹೂರ್ತ ಸಮೀಪಿಸುತ್ತಿತ್ತು. ಒಬ್ಬ, ಒಂದು ಮಾಲೆಯನ್ನು ಆತನ ಕೊರಳಿಗೆ ಹಾಕಿದ. ದಿಕ್ಕುಗಳೆಲ್ಲಾ ಮೊಳಗುವಂತೆ ಶಬ್ದ ಕೇಳಿಸತೊಡಗಿತು. ಆ ಊರಿನ ದೇವಾಲಯದಲ್ಲಿ ನಾಗಸ್ವರ ಊದುವವನ ಪ್ಪೆ, ಪ್ಪೆಪ್ಪೇ—ಎನ್ನುವ ಶಬ್ದವೂ. ಮದ್ದಳೆಯವನ 'ದಿವಸ ಎರಡು—ಕಣೋ' ಎನ್ನುವ ಶಬ್ದವೂ ಕೇಳಿಬರುತ್ತಿತ್ತು. ದಿಬ್ಬಣ ಹೊರಟಿತು. ಚಂಬಕ್ಕುಳದ ಮೂಲೆಯಲ್ಲಿ ವಧುವಿನ ಕಡೆಯವರ ಪೈಕಿ ಗೋವಿಂದ ಪಿಳ್ಳೆ ಹಾಡಲು ಪ್ರಾರಂಭಿಸಿದರು:

"ಪಾಂಚಾಲ ರಾಜನ
ಮಗಳಿಗೆ ಮದುವೆಯು
ನಡೆಯುವುದಿಂದು........."

ಉಳಿದವರು 'ತೈ. ತೈ, ತಕ ತೈ ತೈ ತೋಂ' ಎಂದು ತಾಳ ಹಾಕುತ್ತ ಹಾಡಲಾರಂಭಿಸಿದರು.

ಆ ಸ್ಥಳದ ದೋಣಿಯ ಹಾಡಾಗಿತ್ತು ಅದು. ಮಧ್ಯೆ ಮಧ್ಯೆ ಜನರ ಘೋಷಣೆಯೂ ಇತ್ತು.

ದಾರಿಯ ಪಕ್ಕದ ಮನೆಯ ಸ್ತ್ರೀಯರು—ವರನು ಹೋಗುವಾಗ ಅವರೂ ಘೋಷಣೆ ಮಾಡುತ್ತಿದ್ದರು.

ಓ! ಎಂತಹ ಶಬ್ದಕೋಲಾಹಲ ಅದು!

ಈ ಶಬ್ದ ತಿರುವನಂತಪುರದ ವರೆಗೆ ಕೇಳಿಸುವುದಾಗಿರಬೇಕು. ಈ ಗದ್ದಲ ಘೋಷಣೆ ಯಾವುದೂ ಇಲ್ಲದೆ ಕಾರ್ಯ ನಡೆಸುವುದಕ್ಕಾಗುವುದಿಲ್ಲವೇ!

ಅಲಮೇರದ ಮರೆಯಲ್ಲಿ ಒಂದು ಚುಂಬನಕ್ಕಾಗಿ ಮುಖವೆತ್ತಿ ನಿಂತ ಆ ಹೆಣ್ಣಿನ ರೂಪವನ್ನು ಆತ ಕಾಣುತ್ತಿದ್ದ. ಅವಳು ಒದ್ದೆಯಾದ ತಲೆಗೂದಲಿನ ತುದಿಯನ್ನು ಕಟ್ಟಿ ಬೆನ್ನಿನ ಮೇಲೆ ಇಳಿಬಿಟ್ಟಿದ್ದಾಳೆ. ಕಪ್ಪು ಬಾರ್ಡರಿನ ಮುಂಡನ್ನು ಉಟ್ಟಿದ್ದಾಳೆ......... ಕಣ್ಣು ಮುಚ್ಚಿಕೊಂಡ. ಆದರೂ ಆ ರೂಪು ಮರೆಯಾಗುವುದಿಲ್ಲ. ನಾಳೆಯೂ ಅವಳು ಹಾಗೆಯೇ ನಿಲ್ಲುತ್ತಾಳೆ.........

"ಪಾಂಚಾಲರಾಜನ........."

ಎಂತಹ ಗದ್ದಲ! ಒಂದಕ್ಕೊಂದು ಹೆಚ್ಚುತ್ತಿದೆ. ಇದೆಲ್ಲವರ. ಉದ್ದೇಶ ಮತ್ತೊಬ್ಬಳು ಆತನಿಗೋಸ್ಕರ ಕಾದಿರುವುದು ಬೇಡ ಎನ್ನುವುದಾಗಿರಬೇಕು......... ಅಥವಾ ತಂಗಮ್ಮ ಬೇಗನೆ ಆಫೀಸಿಗೆ ಬಂದು ಕಾದಿರಬೇಕು ಅಂತಲೇ.........

ಕೊಟ್ಟೆಯಂಬಲ ತೆರೆದು ದಾಸವಾಳದ ಗಿಡದ ಅಡಿಯಲ್ಲಿ ಕಾದಿರುವುದು ಬೇಡ ಅಂತಲೇ.....ಆ ಆನಂದವನ್ನು ಎಂದೆಂದಿಗೂ ನಿಷೇಧಿಸಬೇಕು ಎಂದಲ್ಲವೇ ಅದರ ಅರ್ಥ?

ಅದಕ್ಕೆ ಬದಲಾಗಿ...... ಈ ಹೆಣ್ಣನ್ನು ಅವನು ಕಂಡದ್ದೂ ಇಲ್ಲ. ಎಂದೆಂದಿಗೂ ಹಾಗೆ ಕಾದಿರಬೇಕು ಎಂದಾದಲ್ಲಿ ಇಬ್ಬರು ಹೆಂಡತಿಯರು ಅಂತಲೆ? ಅಲ್ಲಿ ಒಬ್ಬಳು ಕಾಯುತ್ತಿರಬೇಕು. ಇಲ್ಲಿ ಒಬ್ಬಳು ಕಾಯುತ್ತಿರಬೇಕು ಎಂತಲೇ !

ದಿಬ್ಬಣ ಮನೆಯ ಮುಂದೆ ಬಂದಿತು. ಒಬ್ಬ ಹುಡುಗ ಅವನ ಕಾಲನ್ನು ತೊಳೆದ. ಆಗ ಗದ್ದಲ ಮತ್ತಷ್ಟು ಹೆಚ್ಚಿತು. ದೋಣಿಯ ಹಾಡು ನಿಂತಿತು. ಎದುರಿನಲ್ಲಿ ಪಡಸಾಲೆಯ ಹತ್ತಿರ ಮಲ್ಲಿಗೆ ಚಪ್ಪರ ಕಾಣುತ್ತಿತ್ತು. ಏಳು ದೊಡ್ಡ ದೀಪದ ಕಂಬಗಳು. ಅಕ್ಕಿ ತುಂಬಿಸಿದ ಕೊಳಗ. ಭತ್ತ ತುಂಬಿಸಿದ ಕೊಳಗಗಳು. ಆ ಮಲ್ಲಿಗೆ ಚಪ್ಪರಕ್ಕೆ ಯಾವ ಅಲಂಕಾರವೂ ಇಲ್ಲ. ಒಂದೇ ಒಂದು ತುಂಡು ಬಣ್ಣದ ಕಾಗದವನ್ನೂ ಅಂಟಿಸಿಲ್ಲ. ಆದರೆ ಅದನ್ನು ಯಥಾಸ್ಥಾನದಲ್ಲಿ ನಿರ್ಮಿಸಲಾಗಿತ್ತು.

ಮಲ್ಲಿಗೆ ಚಪ್ಪರದಲ್ಲಿಟ್ಟಿದ್ದ, ಬಿಳಿ ಬಟ್ಟೆ ಹರಡಿದ ಮಣೆಯ ಮೇಲೆ ಆತನನ್ನು ಕುಳ್ಳಿರಿಸಿದರು. ಅರಸಿನದ ಆರತಿಯನ್ನೂ, ದೀಪವನ್ನೂ ಹಿಡಿದಿದ್ದ ಒಬ್ಬ ಸ್ತ್ರೀಯ ಹಿಂದುಗಡೆ ಅವಳ ಕೈಯನ್ನು ಹಿಡಿದಿದ್ದ ವಧು ಅಲ್ಲಿಗೆ ಪ್ರವೇಶಿಸಿದಳು. ಜೀವನದಲ್ಲಿ ಮೊಟ್ಟಮೊದಲು ಕೇಶವ ಪಿಳ್ಳೆ ಕಾಣುತ್ತಿರುವುದು......... ಅಲ್ಲ, ಹಿಂದೆ, ಬಹಳ ಹಿಂದೆ, ಒಂದು ಸಣ್ಣ ಹುಡುಗಿಯಾಗಿದ್ದ ಕಾಲದಲ್ಲಿ ಕಂಡದ್ದುಂಟು. ಆ ಚಿತ್ರ ನೆನಪಿಗೆ ಬರುತ್ತಿಲ್ಲ.

ಆತನ ಪಕ್ಕದಲ್ಲಿ ಆ ಹೆಣ್ಣನ್ನು ಕರೆದುಕೊಂಡು ಬಂದು ಕುಳ್ಳಿರಿಸಿದರು. ಯಾರೋ ವೀಳೆಯದೆಲೆಯನ್ನೂ ಅಡಕೆಯನ್ನೂ ಆತನ ಕೈಯಲ್ಲಿ ಕೊಟ್ಟರು. ಅವನೂ ಕೊಟ್ಟ. ಪಪ್ಪು ಪಿಳ್ಳೆಗೆ ದಕ್ಷಿಣೆ ಕೊಟ್ಟು ಆತ ಕಾಲು ಮುಟ್ಟಿ ನಮಸ್ಕಾರ ಮಾಡಿದ.

ತಂದೆ ಅರಸಿನದ ದಾರದಲ್ಲಿ ಕಟ್ಟಿದ್ದ ತಾಳಿಯನ್ನು ಕೇಶವ ಪಿಳ್ಳೆಯ ಕೈಯಲ್ಲಿ ಕೊಟ್ಟರು. ವಾದ್ಯಗಳ, ಮಂತ್ರಗಳ ಘೋಷಣೆಯ ಸಮಯದಲ್ಲಿ ಆತ ನಡುಗುತ್ತಿದ್ದ

ಕೈಗಳಿಂದ ಆ ತಾಳಿಯನ್ನು ಅವಳ ಕತ್ತಿನಲ್ಲಿ ಕಟ್ಟುವುದು ಕಷ್ಟವಾಯಿತು. ಗಂಟು ಹಾಕ ಲಾಗುತ್ತಿಲ್ಲ. ಕೈಗಳು ಆಲದ ಎಲೆಯ ಹಾಗೆ ಅಲುಗಾಡುತ್ತಿದ್ದುವು. ಹಿಂದುಗಡೆಯಿಂದ ಹೆಂಗಸರು ನಗುತ್ತಿದ್ದರು. ಕಡೆಗೆ ಒಂದು ಗಂಟು ಹಾಕಿದ. ದಾರದ ತುದಿಯನ್ನು ಎಳೆದಾಗ ದಾರ ಕತ್ತನ್ನು ಬಿಗಿಯಿತು. ಹೆಣ್ಣು ಕಣ್ಣುಕಣ್ಣು ಬಿಟ್ಟಿತು. ಯಾರೋ ಕೂಗಿ ಹೇಳಿದರು: "ಕಟ್ಟು ಸಡಿಲ ಮಾಡು !"

ಯಾರೋ ಹೆಂಗಸರು ಆ ಕಟ್ಟನ್ನು ಸಡಿಲಿಸಿದರು.

ಅನಂತರ ವಸ್ತ್ರ ಕೊಡುವ ಶಾಸ್ತ್ರ ನಡೆದದ್ದು. ಪಾಣಿಗ್ರಹಣ ಕಳೆಯಿತು. ಆತ ತನ್ನ ಎಡದ ಕೈ ಯಾವುದು ಬಲದ ಕೈ ಯಾವುದು ಎಂದು ತಿಳಿಯದಂತಹ ಸ್ಥಿತಿಯಲ್ಲಾಗಿದ್ದ. ಹೇಗಾದರೂ ಮಾಡಿ ಅಲ್ಲಿಂದ ಒಂದು ಸಲ ಹೋದರೆ ಸಾಕು ಎನ್ನಿಸಿತ್ತು ಅವನಿಗೆ.

ಮದುವೆಯ ಸಂಭ್ರಮ ಮುಗಿಯಿತು. ಊಟವೂ ಮುಗಿಯಿತು. ಹೆಣ್ಣನ್ನು ಅದೇ ದಿನ ಮನೆಗೆ ಕರೆದುಕೊಂಡು ಹೋಗುವುದಾಗಿತ್ತು.

ಸಾಯಂಕಾಲ ನಾಲ್ಕು ಗಂಟೆಯ ಹೊತ್ತಿಗೆ ಮನೆ ತಲಪಿದರು. ಸ್ವಲ್ಪ ಹೊತ್ತು ಕಳೆದ ಮೇಲೆ ಮನೆಯ ಒಳಗಿನಿಂದ ಸ್ವಲ್ಪ ಗಲಾಟೆ ಕೇಳಿಸಿತು. ಕುಟ್ಟಿಯಮ್ಮ ಹೆಂಗಸರ ಹತ್ತಿರ ಏನೋ ಏನೋ ಜಗಳವಾಡುತ್ತಿದ್ದಳು. ಅವಳು ಕೇಳುತ್ತಿದ್ದಳು: "ಏನಾಯ್ತು ನಷ್ಟ ಅದನ್ನು ಹೇಳು. ಹೆಣ್ಣಿಗೆ ಕ್ಷಯರೋಗ ಹಿಡಿದಿದ್ದರೂ ನನ್ನ ಮಗ ಔಷಧಿ ಕೊಡಿಸಿ ಗುಣ ಮಾಡಿಸ್ತಾನೆ !" ಎಂದು ಹೇಳಿ ಪುನಃ ಮುಂದುವರಿಸಿದಳು: "ಒಬ್ಬೊಬ್ಬ ಮನು ಷ್ಯರೂ ಕಣ್ಣು ಕಿವಿಚಿಕೊಳ್ತಾರೆ ! ಒಂದು ಹೆಣ್ಣಿನ ಮದುವೆ ಆಯ್ತು ಅಂದರೆ ಮನುಷ್ಯರ ಕೆಲಸ ದೋಷ ಹುಡುಕೋದು. ಇದೊಂದು ಪದ್ಧತಿ !"

ಗೌರಿಯಮ್ಮನೂ ಕಿಟ್ಟುಮಾವನೂ ಕುಟ್ಟಿಯಮ್ಮನನ್ನು ಸಮಾಧಾನಪಡಿಸಲು ಶ್ರಮಿಸಿದರು. ಕುಟ್ಟಿಯಮ್ಮನಿಗೆ ಸಿಟ್ಟು ಬಂದರೆ ಅದು ಅಷ್ಟು ಬೇಗ ಇಳಿಯುವುದಿಲ್ಲ. ಮದುವೆಗೆ ಬಂದಿದ್ದ ಯಾರೋ ಹೆಣ್ಣಿಗೆ ಕ್ಷಯರೋಗ ಅಂತಲೋ, ಹೆಣ್ಣಿಗೆ ತಲೆಗೂದ ಲಿಲ್ಲ ಅಂತಲೋ, ಸ್ವಲ್ಪ ಹಲ್ಲು ಉಬ್ಬು ಅಂತಲೋ, ಕಪ್ಪು ಅಂತಲೋ ಏನೋ ಮಾತಾಡಿಕೊಂಡಿದ್ದರು. ಅದು ಕುಟ್ಟಿಯಮ್ಮನ ಕಿವಿಗೆ ಬಿದ್ದಿತು. ಆಕೆಗೆ ಸಿಟ್ಟು ಬಂದಿತು.

ಕೇಶವ ಪಿಳ್ಳೆಗೆ ಅದೇ ದಿನ ಹೊರಡಬೇಕಾಗಿತ್ತು. ಎರಡು ದಿವಸ ಮಾತ್ರ ರಜ ತೆಗೆದುಕೊಂಡಿದ್ದದ್ದು. ಅದೇ ದಿನ ಸಂಜೆಯ ಬೋಟಿನಲ್ಲಿ ಹೋದರೆ ಮಾತ್ರ ಬೆಳಗ್ಗೆ ಆಫೀಸಿಗೆ ಹೋಗಲು ಸಾಧ್ಯ.

ಕೇಶವ ಪಿಳ್ಳೆಯನ್ನು ಕುಟ್ಟಿಯಮ್ಮ ಬೆಳಗ್ಗೆ ಹೋದರಾಯ್ತು ಎಂದು ಒತ್ತಾಯಿಸಿ ದಳು. ಆಕೆ ಹೇಳಿದಳು: "ಅಸೂಯೆ ಜನರಿಗೆ ಮಾತಾಡೋದಕ್ಕೆ ಇದೇ ಸಮಯ. ಅವನು ಇವತ್ತೇ ಹೊರಟರೆ ಬಾಯಿಗೆ ಬಂದ ಹಾಗೆ ಮಾತಾಡಿಕೊಳ್ತಾರೆ."

ಅದೇ ದಿನ ಹೊರಟೇ ತೀರಬೇಕೆಂದು ಕೇಶವ ಪಿಳ್ಳೆ ಖಡಾ ಖಂಡಿತವಾಗಿ ತಿಳಿಸಿದ. ಬೇರೆ ಯಾರಾದರೂ ಅವನ ವಯಸ್ಸಿನವರು ಅಲ್ಲಿದ್ದಿದ್ದರೆ ಅವನಿಗೆ ಹೇಳಿಸಿ ಅವನನ್ನು

ಉಳಿಸಿಕೊಳ್ಳಬಹುದಾಗಿತ್ತು ಎಂದುಕೊಂಡಳು ಕುಟ್ಟಿಯಮ್ಮ. ಅದು ಒಳ್ಳೆಯ ದಿವಸವಾಗಿತ್ತು. ಕಿಟ್ಟುಮಾವನ ಹತ್ತಿರ ಕೇಳಿಯೂ ಇದ್ದಳು.

ಆ ವಿಷಯವನ್ನು ತಾಯಿ ಮಗನ ಹತ್ತಿರ ಹೇಗೆ ಹೇಳುವುದು?

ಇಷ್ಟವಿಲ್ಲದ ಮದುವೆಯಾದ್ದರಿಂದ. ತಂದೆ ತಾಯಿಗಳಿಗೋಸ್ಕರ ಸಮಾರಂಭವನ್ನು ಮುಗಿಸಿ ಆಕಡೆ ಹೋಗಿಬಿಡಬೇಕು ಎಂದು ಅವನು ತೀರ್ಮಾನಿಸಿರಬೇಕು. ಇಂತಹ ಹುಡುಗರೂ ಇದ್ದಾರಾ? ದೇಹ ಇಳಿದುಹೋಗಿದ್ದರೂ ತಲೆಗೂದಲು ಸಾಲದೇ ಇದ್ದರೂ ಸ್ವಲ್ಪ ಬಣ್ಣ ಸಾಲದೇ ಇದ್ದರೂ ಹೆಣ್ಣಿಗಿನ್ನೂ ಚಿಕ್ಕ ವಯಸ್ಸು. ಅವರಲ್ಲೇನು ಆಕರ್ಷಣೆಯಿಲ್ಲದೇ ಇರುವುದು? ಕುಟ್ಟಿಯಮ್ಮ ಇದೆಲ್ಲವನ್ನೂ ಆಲೋಚಿಸಿ ಮಗಳ ಹತ್ತಿರ ಹೇಳಿಯೂ ಇದ್ದಳು. ಅವನು ಆ ಹುಡುಗಿಯನ್ನು ಮುಟ್ಟಲೇ ಇಲ್ಲ ಎಂದಾಗಿಬಿಟ್ಟರೋ? ಅವನಿಗೋ ಹೊರಡುವ ಸಡಗರ. ಒಂದು ಪಕ್ಷ ಆ ದಿನ ಅದನ್ನು ಕುರಿತು ಆಲೋಚನೆ ಮಾಡಿದರೆ ಎಲ್ಲವೂ ಸರಿಯಾಗಬಹುದು. ಅಂದು ಅವನನ್ನು ತಡೆಯುವ ಮಾರ್ಗ ಯಾವುದು?

ಕುಟ್ಟಿಯಮ್ಮ ಕಾತ್ಯಾಯಿನಿಯ ಹತ್ತಿರ ಬಂದಳು. ಅವಳು ಒಬ್ಬಳೇ ಇದ್ದಳು. ಅದೇ ದಿನ ಅವನು ಹೊರಡಲಿರುವ ಸುದ್ದಿ ಅವಳಿಗೆ ತಿಳಿಯದು.

ಕುಟ್ಟಿಯಮ್ಮ ಹೇಳಿದಳು: "ಅವನಿವತ್ತೇ ಹೊರಟಿದ್ದಾನೆ. ರಜ ಇಲ್ಲವಂತೆ."

ಕಾತ್ಯಾಯಿನಿಯ ಮುಖದಲ್ಲಿ ಯಾವ ವ್ಯತ್ಯಾಸವೂ ಕಂಡುಬರಲಿಲ್ಲ.

ಅದು ಅವಳಿಗೆ ಪ್ರಧಾನವಲ್ಲದ ವಿಷಯವಾಗಿತ್ತೇ? ಹಾಗಿರಲು ಸಾಧ್ಯವಿಲ್ಲ. ಮೊದಲ ರಾತ್ರಿಯನ್ನು ಕುರಿತ ಆಶೋತ್ತರಗಳು. ಆಸಕ್ತಿಗಳು. ಸ್ವಪ್ನಗಳು ಅವಳಿಗಿರಲಿಲ್ಲ ವೆಂತಲೇ? ಮದುವೆ ನಿಶ್ಚಯವಾದ ದಿನದಿಂದ ಮೊದಲ ರಾತ್ರಿಯನ್ನು ಕುರಿತೇ ಅಲ್ಲವೇ ಅವಳು ಸ್ವಪ್ನವನ್ನು ಕಾಣುವುದು? ಅದೆಲ್ಲ ಹಾರ ಹಾಕುವುದು, ತಾಳಿ ಕಟ್ಟುವುದು ಮಾತ್ರವೇ? ಕೇವಲ ಆ ಸಮಾರಂಭವನ್ನು ಮಾತ್ರ ಕುರಿತಾಗಿರುವುದಿಲ್ಲ. ಮೊದಲರಾತ್ರಿಯೆನ್ನುವುದನ್ನೂ ಕುರಿತದ್ದಾಗಿರುತ್ತದೆ. ಆ ದಿನ ಬೇಗ ಬೇಗ ಹತ್ತಿರ ಬರಲಿ ಎಂದು ಹಾರೈಸುವುದಿಲ್ಲವೇ? ಅವಳೂ ಸಹಜವಾಗಿ ಮೊದಲ ರಾತ್ರಿಯ ಸ್ವಪ್ನವನ್ನು ಕಾಣುತ್ತಿರಬೇಕು.

ಕುಟ್ಟಿಯಮ್ಮ ಅವಳ ಹತ್ತಿರ ಹೇಳಿದಳು: "ನೀನೊಂದು ಕೆಲಸ ಮಾಡೇ, ಅಲ್ಲಿ ನೋಡು ಆ ಕಡೆ ಅವನು ನಿಂತಿದ್ದಾನೆ. ಒಬ್ಬನೇ ಇದ್ದಾನೆ. ಇವತ್ತು ಹೋಗೋದು ಬೇಡ ಅಂತ ಹೇಳು."

ಅವಳು ನಾಚಿಕೆಯಿಂದ ಕರಗಿಹೋದಳು.

ಆಗ ಕುಟ್ಟಿಯಮ್ಮನಿಗೆ ಸಾಧಾರಣ ಬುದ್ಧಿಯೂ ಇಲ್ಲದೇ ಹೋಗಿತ್ತು. ಎಷ್ಟೇ ತವಕ ಇದ್ದರೂ ಒಂದು ಹೆಣ್ಣು ಮದುವೆಯಾಗಿ ಕೆಲವೇ ಗಂಟೆಗಳಷ್ಟೇ ಕಳೆದಿರುವ ಹೊತ್ತಿನಲ್ಲಿ ಹಾಗ್ಗೆ ಹೋಗಿ ಹೇಳಿಯಾಳೇ? ಅವರು ಮೊದಲೇ ಪರಿಚಯವಿದ್ದ ಹೆಣ್ಣು

ಗಂಡೇ ಆಗಿದ್ದರೂ ಹೆಣ್ಣು ಹೋಗಿ ಹಾಗೆ ಹೇಳುವುದಿಲ್ಲ. ಆದರೆ ಮಗ ಸೊಸೆಯನ್ನು ಒಂದು ಕಡೆ ಸೇರಿಸುವ ಪ್ರಯತ್ನದಲ್ಲಿ ಕುಟ್ಟಿಯಮ್ಮನಿಗೆ ಆ ಸಾಮಾನ್ಯ ಬುದ್ಧಿಯೂ ಮರೆತು ಹೋಗಿತ್ತು. ಏನನ್ನೂ ಮಾತನಾಡದೆ ನಾಚಿಕೊಂಡು ನಿಂತಿದ್ದ ಕಾತ್ಯಾಯಿನಿಯ ಹತ್ತಿರ ಕುಟ್ಟಿಯಮ್ಮ ಹೇಳಿದಳು:

"ಹೇಳದಿದ್ದರೆ ಬೇಡ. ಅವನೀಗ ಹೋಗ್ತಾನೆ."

ಆದರೂ ಕಾತ್ಯಾಯಿನಿ ಚಲಿಸಲಿಲ್ಲ. ಅವನು ಹೋಗುವುದು ಬೇಡವೆಂದು ಅವಳಿಗೂ ಅನ್ನಿಸಿದೆ. ಆದರೆ ಅದನ್ನು ಹೇಳಲು ಅವಳಿಗೆ ಸಾಧ್ಯವಿಲ್ಲ.

ಕೇಶವ ಪಿಳ್ಳೆ ಹೊರಡುವುದು ಅನಿವಾರ್ಯವಾಗಿತ್ತು. ಅವಕ್ಕೆ ತಲೆಬಾಗಲೇ ಬೇಕಾಗಿತ್ತು. ಮತ್ತೆ ಯಾವಾಗ ಬರುವುದು ಎಂದು ಆತ ಹೇಳಲಿಲ್ಲ. ಅದನ್ನು ಕುಟ್ಟಿಯಮ್ಮ ಗಮನಿಸಿದಳು.

ನಿರ್ವಾಹವಿಲ್ಲದೆ ಪಪ್ಪು ಪಿಳ್ಳೆ ಕೇಳಿದರು: "ಮತ್ತೆ ಯಾವಾಗ ಬರ್ತೀ?"

"ಅದನ್ನ ಅಲ್ಲಿಗೆ ಹೋಗಿ ತೀರ್ಮಾನಿಸಬೇಕು."

ಗಡುಸಾದ ಸ್ವರದಲ್ಲಿ ಪಪ್ಪು ಪಿಳ್ಳೆ ಆಜ್ಞಾಪಿಸಿದರು: "ನೀನು ಎರಡು ದಿನ ರಜ ತೆಗೆದುಕೊಂಡು ಬರೋ ಭಾನುವಾರ ಬಾ."

ಕೇಶವ ಪಿಳ್ಳೆ ಏನೂ ಮಾತಾಡಲಿಲ್ಲ. ಕಿಟ್ಟುಮಾಮ ಮುಂದಿನ ಒಳ್ಳೆಯ ದಿವಸವನ್ನು ಗುಣಾಕಾರ ಹಾಕುತ್ತಿದ್ದರು.

ಕಿಟ್ಟುಮಾವನ ಅಭಿಪ್ರಾಯವೂ ಅದೇ ಆಗಿತ್ತು. ಮುಂದಿನ ಸೋಮವಾರ ಒಳ್ಳೆ ದಿವಸ.

ಪಪ್ಪು ಪಿಳ್ಳೆ ಪುನಃ ಕೇಳಿದರು: "ಭಾನುವಾರ ಬರ್ತೀ ತಾನೆ?"

"ಹೂಂ."

ಅಷ್ಟು ಮಾತ್ರ ಕೇಶವ ಪಿಳ್ಳೆ ಉತ್ತರಿಸಿದ್ದು.

ಎಲ್ಲರೂ ಮನೆಯ ಹೊರಗೆ ಬಂದು ಕೇಶವ ಪಿಳ್ಳೆಯನ್ನು ಬೀಳ್ಕೊಟ್ಟರು. ಒಳ ಬಾಗಿಲಿನ ಮರೆಯಲ್ಲಿ ತಲೆಯನ್ನು ಹೊರಗೆ ಹಾಕಿ ಕಾತ್ಯಾಯಿನಿ ನಿಂತಿದ್ದಳು. ಅವನು ಒಂದು ಸಲ ಕೂಡ ಹಿಂದಿರುಗಿ ನೋಡಲಿಲ್ಲ. ತನಗೆ ಅಂಥವಳೊಬ್ಬಳಿದ್ದಾಳೆ ಎನ್ನುವುದೂ ಅವನ ಗಮನದಲ್ಲಿರಲಿಲ್ಲ.

ಆ ರಾತ್ರಿಯಲ್ಲಿ ಭಗ್ನ ಸ್ವಪ್ನಗಳೊಡನೆ ಒಬ್ಬಳೇ ಮಲಗಿ ಅವಳು ಅಳುತ್ತಾಳೋ ಏನೋ !

## [5]

### ತೆರೆದ ಬಾಗಿಲು

ಹಿಂದಿರುಗುವಾಗ ತಂಗಮ್ಮಳನ್ನು ಕಾಣುವುದು ಹೇಗೆ? ಎನ್ನುವುದಾಗಿತ್ತು ಕೇಶವ ಪಿಳ್ಳೆಯ ತಲೆಯಲ್ಲಿ ನಡೆದಿದ್ದ ಮಂಥನ. ಎಷ್ಟೋ ಸಲ ಎಲ್ಲವನ್ನೂ ತೆರೆದು ಹೇಳಿಬಿಡಬೇಕು ಎನ್ನಿಸಿದ್ದುಂಟು. ಆದರೆ ಹಾಗೆ ತೀರ್ಮಾನಿಸಲು ಆತನಿಗೆ ಸಾಧ್ಯವಾಗಿರಲಿಲ್ಲ. ಮನಸ್ಸಿಗೆ ಆ ಸ್ಥೈರ್ಯವುಂಟಾಗದಿರುವುದರ ಕಾರಣವೇನು ಎನ್ನುವುದು ಅವನಿಗೆ ಸ್ಪಷ್ಟವಾಗಿ ಹೊಳೆದಿರಲಿಲ್ಲ.

ಒಂದು ರೀತಿಯ ವಿಷಮತೆಯಿಂದ ಅವನು ಆಫೀಸನ್ನು ತಲಪಿದ್ದು. ಯಾವುದೋ ಒಂದು ಬಗೆಯ ಅಸಹಾಯಕತೆಯುಂಟಾಗುತ್ತಿತ್ತು. ಇನ್ನು ಮೇಲೆ ಉದ್ಯೋಗದಲ್ಲಿ ಪ್ರಮೋಶನ್‌ಗಾಗಿ ಮೇಲೆ ಬರುವುದಕ್ಕಾಗಿ ಯಾವುದರ ಸ್ವಪ್ನವನ್ನೂ ಕಾಣಬೇಕಾಗಿಲ್ಲ ಎನ್ನುವ ಭಾವನೆ ಮೂಡಿತ್ತು. ಪ್ರತ್ಯೇಕವಾದ ನೈರಾಶ್ಯವೂ ಮ್ಲಾನತೆಯೂ ಆತನ ಮನಸ್ಸಿನಲ್ಲಿ ಹೊಕ್ಕಿದ್ದುವು. ಇನ್ನು ಮೇಲೆ ತನ್ನನ್ನು ಕೈಹಿಡಿದು ಮೇಲೆತ್ತಲು ಯಾರೂ ಇಲ್ಲ. ಜೀವನದ ಬಹು ದೊಡ್ಡ ಸೌಂದರ್ಯ ಕೈಬಿಟ್ಟು ಹೋಯಿತು. ಅಲ್ಲ, ನಷ್ಟ ಹೊಂದಿತು. ಅದೂ ಅಲ್ಲ, ನಷ್ಟಪಡಿಸಿದ್ದಾಯಿತು. ಸೆಕ್ರೆಟರಿ ಕೃಷ್ಣನ್ ನಾಯರ ಅಣ್ಣನ ಮಗಳ ಗಂಡನಾಗುವವನಿಗೆ ಖಂಡಿತವಾಗಿಯೂ ಸೆಕ್ರೆಟರಿಯೇಟ್‌ನಲ್ಲಿ ಅನುಕೂಲತೆಗಳು ದೊರೆಯಬಹುದು. ಅಣ್ಣನ ಮಗಳನ್ನು ವಂಚಿಸಿದನೆನ್ನುವ ದೃಷ್ಟಿಯಲ್ಲಿ ಸೆಕ್ರೆಟರಿ ಕೃಷ್ಣನ್ ನಾಯರ್ ತನ್ನ ಶತ್ರುವಾಗುವುದು ಸಹಜ. ಹಾಗೆ ತಾನು ಯಾರೂ ಇಲ್ಲದವನು ಮಾತ್ರವಲ್ಲ ಶತ್ರುಗಳುಳ್ಳವನೂ ಆದ. ಬಹುಶಃ ಈಗ ಇರುವ ಕೆಲಸವೂ ಕೈಬಿಟ್ಟು ಹೋಗಬಹುದು.

ಉದ್ಯೋಗಕ್ಕೆ ಪ್ರವೇಶಿಸಿದಾಗ ಆಶೆಗಳಿರಲಿಲ್ಲ. ಆಶೆಗಳುಂಟಾದ ಮೇಲೆ ಪ್ರತಿಕೂಲ ಸನ್ನಿವೇಶಗಳುಂಟಾಗತೊಡಗಿದುವು. ನೌಕರಿಗೆ ಸೇರಿದ ಆ ದಿವಸದಂತೆ ಈ ದಿವಸವೂ ಬಹು ಮುಖ್ಯವಾದ ದಿನವಾಗಿ ಕೇಶವ ಪಿಳ್ಳೆಗೆ ತೋರಿತು. ಆಶೋತ್ತರಗಳನ್ನು ಮಣ್ಣುಗೂಡಿಸಿಕೊಂಡವನು !

ಅಂದು ತಂಗಮ್ಮಳಿಗೆ ಹಿಂದೆಂದೂ ಇಲ್ಲದ ಒಂದು ಉತ್ಸಾಹವಿದ್ದಂತೆ ತೋರಿತು. ನಿಸ್ಸಂಶಯವಾಗಿ ಅವಳು ಸುಂದರಿಯಾಗಿದ್ದಳು. ಓ ! ಎಂತಹ ಆಕರ್ಷಣೆಯಿದೆ ಆ ಮುಖದಲ್ಲಿ ! ಆ ಮಂದಹಾಸದಲ್ಲಿ ಹಿಂದೆಂದೂ ಕಾಣದ .ತೇಜಸ್ಸಿದೆ. ಅವಳು ಇಷ್ಟೊಂದು ಸುಂದರಿಯಾದದ್ದೇಕೆ? ನಿವೃತ್ತಿಯಿಲ್ಲದ ಗತಿಯಿಲ್ಲದ ತನ್ನ ಜೀವನದಲ್ಲಿ ಅವಳೇಕೆ ಪ್ರವೇಶಿಸಿದಳು? ಎಂದು ಕೇಶವ ಪಿಳ್ಳೆ ಆಲೋಚಿಸಿದ. ಈ ವಿಶಿಷ್ಟ ಸೌಂದರ್ಯ

ವನ್ನು ತನ್ನದನ್ನಾಗಿ ಮಾಡಿಕೊಳ್ಳುವ ಭಾಗ್ಯ ತನ್ನ ಹಣೆಯಲ್ಲಿ ಬರೆದಿಲ್ಲ. ಆದರೊಂದಿಗಿರುವ ಆಸಕ್ತಿ ನಿಷೇಧಿಸಲ್ಪಟ್ಟದ್ದು. ನಿಷೇಧಿಲಾದದ್ದನ್ನು ಆಶಿಸಬಾರದು. ಎಂದೆಂದಿಗೂ ಅದು ಬೇಡವೆಂದು ನಿರ್ಧರಿಸಬೇಕು. ಹೇಗೆ? ಆದಕ್ಕೆ ಸಾಮರ್ಥ್ಯವುಂಟಾದೀತೆ? ಅನುಭವಿಸಲು ಅವಕಾಶವಿರುವ ಆ ತುಂಬು ಸೌಂದರ್ಯವನ್ನು ಹೇಗೆ ಉಪೇಕ್ಷಿಸುವುದು? ಆದರೆ ಉಪೇಕ್ಷಿಸಲೇ ಬೇಕು.

ಎಲ್ಲಿಂದಲೋ ಕಿಟ್ಟುಮಾವನ ಧ್ವನಿ ಅವನ ಕಿವಿಯಲ್ಲಿ ಪ್ರತಿಧ್ವನಿಸಿತು: 'ಅವಳು ಭಾಗ್ಯವತಿ.'

ತಂಗಮ್ಮ ಕೇಳಿದಳು: "ಆಧಾರ ಪತ್ರ ಬರೆಸಿ ಆಯ್ತಾ?"

ಅವನು ಮುಖದಲ್ಲಿ ನಗುವನ್ನು ತಂದುಕೊಳ್ಳಲು ಶ್ರಮಿಸಿದ. ಸಾಧ್ಯವಾಗಲಿಲ್ಲ. ಆಯಿತು ಎಂದಾಗಲೀ ಆಗಲಿಲ್ಲ ಎಂದಾಗಲೀ ಹೇಳಲಿಲ್ಲ.

ಅವಳ ಮುಂದಿನ ಪ್ರಶ್ನೆ ಹೊರಬಂತು: "ಭೂಮಿ ಉಳಿಸಿಕೊಳ್ಳಬೇಕು ಎನ್ನುವ ಜೀವನದ ಬಹು ದೊಡ್ಡ ಆಶೆ ಕೈಬಿಟ್ಟು ಹೋದದ್ದಕ್ಕೆ ಇಷ್ಟು ಬೇಸರವಾ?"

ಹೌದು ಎನ್ನುವ ಅರ್ಥ ಬರುವ ರೀತಿಯಲ್ಲಿ ಆತ ಒಮ್ಮೆ ನಕ್ಕ. ಅದು ನಗುವಿನ ಪ್ರೇತವಾಗಿತ್ತು; ಅಭಿನಯವಾಗಿತ್ತು.

ಆತ ತುಂಬ ಯೋಚಿಸುತ್ತಿದ್ದಾನೆ ಎನ್ನುವುದು ಅವಳಿಗೆ ಅರ್ಥವಾಯಿತು. ಅವಳು ಹೇಳಿದಳು: "ಅಷ್ಟೊಂದು ಯೋಚನೆ ಮಾಡೋದು ಯಾಕೆ? ಮುಂದೆ ಅದಕ್ಕಿಂತಲೂ ಒಳ್ಳೆ ಭೂಮಿ ಸಂಪಾದಿಸಬಹುದು. ಇಲ್ಲದಿದ್ದರೆ ಇದೇ ಭೂಮಿನ ಬಿಡಿಸಿಕೊಳ್ಳಬಹುದು."

ಕೇಶವ ಪಿಳ್ಳೆ ಅದಕ್ಕೇನೂ ಉತ್ತರ ಹೇಳಲಿಲ್ಲ. ಅವನು ಹೇಳಿದ ಸುಳ್ಳಿನ ಕಥೆ ಅವನನ್ನು ನೋಡಿ ಹಾಸ್ಯ ಮಾಡುತ್ತಿದೆಯೇ ಎನ್ನುವಂತಿತ್ತು.

ಏನೂ ಮಾತನಾಡದೆ ತನ್ನ ಕೆಲಸದಲ್ಲಿ ನಿರತನಾದ. ಎರಡು ದಿನದ ಬಾಕಿ ಕೆಲಸವನ್ನು ಮಾಡಿ ಮುಗಿಸಬೇಕು ಎನ್ನುವ ಭಾವನೆಯಲ್ಲಿ ಆತ ತುಂಬ ಯೋಚನೆ ಹಚ್ಚಿಕೊಂಡಿದ್ದಾನೆ ಎಂದು ಭಾವಿಸಿದ ತಂಗಮ್ಮ, ಆಗ ಹೆಚ್ಚಿಗೆ ಏನೂ ಮಾತನಾಡಲಿಲ್ಲ. ಸದ್ಯದಲ್ಲಿ ಆತನನ್ನು ಆತನ ಪಾಲಿಗೆ ಬಿಡುವುದು ಒಳ್ಳೆಯದು ಎಂದು ಅವಳಿಗೆ ತೋರಿತು. ಇಲ್ಲದಿದ್ದರೆ ಅವನನ್ನು ಉತ್ಸಾಹಿಯನ್ನಾಗಿ ಮಾಡಬೇಕು. ತನಗೆ ತಟ್ಟನೆ ಹೊಳೆಯುವುದೊಂದಿದೆ ಎಂದು ಅವಳು ಭಾವಿಸಿಕೊಂಡದ್ದಾಗಿರ ಬೇಕು. ಅವನನ್ನು ಕಚಗುಳಿಯಿಟ್ಟು ನಗಿಸುವುದು.

ಸಂಬಳ ಬಂದಾಗ ಕೇಶವ ಪಿಳ್ಳೆ ಹದಿಮೂರು ರೂಪಾಯಿಯನ್ನು ತೆಗೆದು ತಂಗಮ್ಮನ ಮೇಜಿನ ಮೇಲಿಟ್ಟ. ಆದೇಕೆ ಎನ್ನುವ ಭಾವನೆಯಲ್ಲಿ ಅವಳು ಅವನ ಮುಖ ನೋಡಿದಳು. ಅವನು ಮೌನವಾಗಿದ್ದ. ಅವಳು ಕೇಳಿದಳು: "ಇನ್ನು ಉಳಿಯೋದು ಆರೇ ರೂಪಾಯಿ ಅಲ್ಲವಾ? ಈಗ ಬೇಡ."

ಹೃದಯಕ್ಕೆ ಎಲ್ಲಿಯೋ ಬಲವಾಗಿ ಚುಚ್ಚಿದಂತಾಯಿತು. ಸಹಿಸಲು ಸಾಧ್ಯವಿರಲಿಲ್ಲ. ಇಂತಹ ವೇದನೆಯನ್ನು ಸಹಿಸಲು ಸಾಧ್ಯವಾಗಿರಲಿಲ್ಲ. ಮದುವೆಗೆ ಹೋಗಲು ಹತ್ತು ರೂಪಾಯಿ ಪಡೆದುಕೊಂಡು ಹೋದಾಗ ಈ ವೇದನೆಯಿರಲಿಲ್ಲ. ಈಗ, ಮದುವೆ ಮುಗಿಸಿಕೊಂಡು ಬಂದ ಮೇಲೆ ಅದರ ವೇದನೆ ಗೊತ್ತಾಗುತ್ತಿದೆ.

ತನ್ನ ಸತ್ಯ ಸಂಗತಿಯನ್ನು ಹೊರಗೆಡಹುತ್ತಿರುವಂತೆ ತನಗರಿವಿಲ್ಲದೆಯೇ ಕೇಶವ ಪಿಳ್ಳೆ ಕೇಳಿದ: "ಅದೂ ಬೇಕಾ?"

ಅವಳಿಗೆ ಅರ್ಥವಾಗಲಿಲ್ಲ. ಅವಳು ಕೇಳಿದಳು: "ಏನು?"

ಎಲ್ಲವೂ ಹೊರಬೀಳುತ್ತಿದೆ. ಅದರ ಸೂಚನೆ ಇದು ಎಂದು ಆಗ ಅವನಿಗೆ ಗೊತ್ತಾದದ್ದು. ಒಂದನ್ನೂ ಹೊರಗೆಡಹಬಾರದೆಂಬ ಎಚ್ಚರಿಕೆ ಅವನನ್ನು ತಡೆಯಿತು. ಅವನು ಒಂದು ಸ್ಥಿತಿಗೆ ಬಂದು ಹೇಳಿದ:

"ಅಲ್ಲ, ನೀನು ಹಣಾನೂ ಕೊಡಬೇಕಾ?"

ಅವಳ ಮುಖ ಥಟ್ಟನೆ ಬಾಡಿದ ಹಾಗೆ ತೋರಿತು. ಅವನು ಹೇಳಿದ: "ಸುಮ್ಮನೆ ಹಾಗಂದೆ. ಈಗ ಇದನ್ನು ತಗೊ, ಮತ್ತೆ ಬೇಕಾದರೆ ಈಸಿಕೊಳ್ತೀನಿ. ತಮಾಷೆಗೆ ಹಾಗೆ ಹೇಳಿದ್ದಕ್ಕೇ ಮುಖ ಬಾಡಿಹೋಗಬೇಕಾ?"

ಅವಳು ಹೇಳಿದಳು: "ಇದು ಹುಡುಗಾಟವಲ್ಲ. ಈ ಸ್ಥಿತಿಯಲ್ಲಿ ತಮಾಷೆ ಮಾಡೋದಕ್ಕೆ ಸಾಧ್ಯವಿಲ್ಲ. ಮನಸ್ಸಿನಲ್ಲಿ ಏನೋ ಇದೆ. ಖಂಡಿತ."

ಆತ ನಗು ತಂದುಕೊಂಡು ಹೇಳಿದ: "ಇಲ್ಲ."

ಒಂದೊಂದು ದಿನವೂ ಅವಳ ಸೌಂದರ್ಯವೂ ಉತ್ಸಾಹವೂ ಹೆಚ್ಚುತ್ತಿದ್ದಂತೆ ಕೇಶವ ಪಿಳ್ಳೆಗೆ ತೋರಿತು. ಪ್ರತ್ಯೇಕವಾದ ಸೌಂದರ್ಯವಿಶೇಷ ಒಂದೊಂದು ದಿನದಲ್ಲೂ ಕಂಡುಬರುತ್ತಿತ್ತು. ಒಂದು ಹೊಸತನ. ನಿನ್ನೆ ಕಂಡ ತಂಗಮ್ಮನಲ್ಲ ಇಂದು ಕಾಣುವುದು. ಈ ಪ್ರತ್ಯೇಕತೆ, ಇದಕ್ಕೆ ಮೊದಲು ಒಮ್ಮೆಯೂ ಉಂಟಾಗಿರಲಿಲ್ಲ. ಅಥವಾ ಅದನ್ನು ಕಾಣಲು ಸಾಧ್ಯವಾಗಿರಲಿಲ್ಲ—ಎಂತಲೇ? ಅವಳನ್ನು ತನ್ನವಳನ್ನಾಗಿಸಿಕೊಳ್ಳುವ ಆಸಕ್ತಿ ಒಂದೊಂದು ದಿನದಲ್ಲೂ ಶಕ್ತಿಯುತವಾಗಿ ಬೆಳೆಯುತ್ತಿತ್ತು.

ಅವಳು ಮನಃಪೂರ್ವಕವಾಗಿ ಆ ಸೌಂದರ್ಯವನ್ನು ಬರಿಸಿಕೊಳ್ಳುತ್ತಿರುವುದೇ? ಇಂದು ಒಂದು ರೀತಿಯಲ್ಲಿ ತಲೆಗೂದಲನ್ನು ಕಟ್ಟಿಕೊಂಡಿರುತ್ತಾಳೆ. ನಿನ್ನೆಯ ರೀತಿಯಲ್ಲಲ್ಲ. ಉಡುಗೆಯ ರೀತಿಯೂ ಬದಲಾಯಿಸಿರುತ್ತದೆ. ಇಂದು ಹಣೆಯಲ್ಲಿ ಕುಂಕುಮದ ಬೊಟ್ಟು. ನಾಳೆ ಅಲಕ್ಷ್ಯವಾಗಿ ಬರೆದಂತೆ ತೋರುವ ಒಂದು ಗೆರೆ. ತಲೆಗೂದಲನ್ನು ಬಾಚಿ ಕಟ್ಟಿರುವುದಿಲ್ಲ. ಹಾಗೆ ಅವಳ ರೀತಿ. ಆದರೆ ಅದನ್ನು ಸ್ತ್ರೀಯ ಸ್ವಾಭಾವಿಕ ವೈಶಿಷ್ಟ್ಯವೆಂದೇ ಭಾವಿಸೋಣ. ಪ್ರತ್ಯೇಕತೆ ಅದಲ್ಲ. ಅದು ಮಾತ್ರವಲ್ಲ; ನಿನ್ನೆ ಅವಳ ಮುಖ ಅರಳುತ್ತಿರುವ ಒಂದು ಹೂವಿನಂತೆ ನಿರ್ಮಲ, ಓಜಸ್ಸುಳ್ಳದ್ದಾಗಿದ್ದರೆ—ಇಂದು ಆ ಮುಖ ಬಾಡಿರುತ್ತದೆ. ಯಾವುದೋ ಒಂದು ರೀತಿಯ ದಣಿವು

ಕಂಡುಬರುತ್ತದೆ. ಕಣ್ಣುಗಳು ಸ್ವಪ್ನ ಕಾಣುತ್ತಿರುತ್ತವೆ. ನಾಳೆ ಪ್ರೌಢಳಾದ ಒಬ್ಬ ಸ್ತ್ರೀಯ ಮುಖಚರ್ಯೆ ಆ ಮುಖದಲ್ಲಿರುತ್ತದೆ. ಮತ್ತೊಂದು ದಿನ ಒಬ್ಬ ಬಾಲಕಿಯಂತೆ ಏನೂ ತಿಳಿಯದವಳು. ಇನ್ನೊಂದು ದಿನ ಅನೇಕ ಪ್ರಶ್ನೆಗಳನ್ನು ಕೇಳುವ ಒಬ್ಬ ಸ್ತ್ರೀ. ಹಾಗೆ ವ್ಯತ್ಯಾಸ ಹೊಂದುತ್ತಾ ಇರುವವಳು.

ಕೇಶವ ಪಿಳ್ಳೆಯ ಮ್ಲಾನತೆ ಚಿಂತೆಗಳನ್ನು ಹೋಗಲಾಡಿಸಲು ಅವಳು ಶ್ರಮಿಸುತ್ತಿದ್ದಳು. ಕೆಲವು ಸಲ ಅವನನ್ನು ನಗಿಸುವುದಕ್ಕಾಗಿ ತಮಾಷೆಯ ಮಾತನಾಡುತ್ತಿದ್ದಳು. ಅವಳು ಸಿಟ್ಟು ಮಾಡಿಕೊಳ್ಳುತ್ತಿದ್ದಳು. ಮತ್ತೆ ಕೆಲವು ಸಲ ಅವನು ತನಗೆ ತಾನೇ ಉತ್ಸಾಹಿಯಾಗುವಂತೆ ಮಾಡಲು ಮಾತನಾಡದೆ ಕುಳಿತಿರುತ್ತಿದ್ದಳು. ಅವಳು ಯಾವಾಗಲೂ ಹೊತ್ತಿಗೆ ಮುಂಚೆ ಆಫೀಸಿಗೆ ಬರುತ್ತಿದ್ದಳು. ಆದರೆ ಕೇಶವ ಪಿಳ್ಳೆ ಬರುತ್ತಿದ್ದದ್ದು ಒಂದು ನಿಮಿಷ ತಡವಾಗಿಯೇ. ಹಾಗೆ ಬರುವುದು ಒಂದು ಪದ್ಧತಿಯೇ ಆಯಿತು. ಪ್ರತಿದಿನವೂ ಅವಳು ಹೇಳುತ್ತಿದ್ದದುಂಟು: "ನಾನು ಅರ್ಧ ಗಂಟೆ ಮೊದಲೇ ಬಂದೆ." ಎಂದು.

ಆತ ನೀರಸವಾಗಿ ಹೇಳುತ್ತಿದ್ದ: "ಹ್ಞು, ನಾನು ಬರೋದು ತಡವಾಯಿತು."

ಒಂದು ದಿನ ಕೊಟ್ಟಿಯಂಬಲದ ಬಾಗಿಲನ್ನು ತೆರೆದಿರುತ್ತೇನೆ ಎಂದು ಅವಳು ಹೇಳಿದಳು. ಅಂದು ಅವನು ಹೋಗಲಿಲ್ಲ. ಆದರೆ ಲಾಡ್ಜಿನಿಂದ ಎಷ್ಟೋ ಸಲ ಹೊರಗೆ ಬಂದ. ಅಲ್ಲಿಯ ವರೆಗೆ ಹೋಗಲಿಲ್ಲ ಅಷ್ಟೆ.

ಆ ಆರೇಳು ದಿನಗಳು ನಿಜವಾಗಿಯೂ ಅವನು ಒಂದು ಹೊಯ್ದಾಟದಲ್ಲಿದ್ದ.

ಮುಂದಿನ ಭಾನುವಾರ ಊರಿಗೆ ಹೋಗಬೇಕಾಗಿತ್ತು. ಊರಿಗೆ ಬರುವುದಾಗಿ ತಂದೆ ತಾಯಿಗಳ ಹತ್ತಿರ ಹೇಳಿದ್ದ. ಆದರೆ ದಾರಿಯ ಖರ್ಚಿಗೆ ಕಾಸಿಲ್ಲ. ಸಂಬಳದಲ್ಲಿ ಬಾಕಿ ಉಳಿದದ್ದು ಆರು ರೂಪಾಯಿ ಮಾತ್ರ. ಅದನ್ನು ಕೊಟ್ಟು ಹೋಟೆಲಿನಿಂದ ಟಿಕೆಟ್ಟು ತೆಗೆದದ್ದೂ ಆಯಿತು. ಕೈಯಲ್ಲಿ ಒಂದು ಕಾಸೂ ಉಳಿದಿಲ್ಲ. ಅವಳೇನೋ ಹಣ ಕೊಡುತ್ತಾಳೆ. ಅವಳಿಂದ ಹಣ ತೆಗೆದುಕೊಳ್ಳುವುದು ಅವನಿಗೆ ಸಾಧ್ಯವಿಲ್ಲ. ಅದು ಮಾತ್ರವಲ್ಲ, ಯಾಕೆ ಈ ಭಾನುವಾರವೂ ಊರಿಗೆ ಹೋಗಬೇಕು ಎಂದು ಕೇಳಿದರೆ ಯಾವ ಉತ್ತರ ಹೇಳುವುದು?

ಮನೆಯ ವಿಷಯಗಳನ್ನು ಆತ ನೆನಸಿಕೊಳ್ಳುತ್ತಿದ್ದ. ಅಲ್ಲಿ ತಂದೆ ಸಿಟ್ಟುಮಾಡಿಕೊಳ್ಳುತ್ತಾರೆ. ತಾಯಿ ಅಳುತ್ತಾಳೆ. ಆ ಹೆಣ್ಣು......? ಅವಳ ಸ್ಥಿತಿ ಹೇಗಾಗಬಹುದು. ಅದನ್ನು ಊಹಿಸಿಕೊಳ್ಳಲೂ ಕೇಶವ ಪಿಳ್ಳೆಗೆ ಸಾಧ್ಯವಿಲ್ಲ. ಅಳಬಹುದು, ಇಲ್ಲದಿದ್ದರೆ ಸಿಟ್ಟುಮಾಡಿಕೊಳ್ಳಬಹುದು.

ಆ ಶನಿವಾರ ಅವನು ತೀರ ಮಂಕಾಗಿದ್ದ. ರಾತ್ರಿ ಅವನಿಗೆ ನಿದ್ದೆ ಬರಲಿಲ್ಲ. ಹೇಗಾದರೂ ಮಾಡಿ ಯಾರ ಹತ್ತಿರವಾದರೂ ಐದು ರೂಪಾಯಿ ಈಸಿಕೊಳ್ಳಬಹುದಾಗಿತ್ತು. ಒಂದು ದಿನದ ರಜವನ್ನೂ ತೆಗೆದುಕೊಂಡು ಹೋಗಬೇಕಾಗಿತ್ತು. ಆದರೆ

ಹೋಗಬೇಕು ಎನ್ನುವ ತೀರ್ಮಾನ ಮಾಡುವುದಕ್ಕೇ ಸಾಧ್ಯವಾಗುತ್ತಿಲ್ಲ. ಹೋಗಬೇಕು ಎನ್ನುವ, ಹೋಗಿಯೇ ತೀರಬೇಕು ಎನ್ನುವ ಎಲ್ಲ ಆಲೋಚನೆಗಳೂ ಮನಸ್ಸಿನಲ್ಲಿ ಉಂಟಾಗುತ್ತವೆ. ಆದರೆ ತೀರ್ಮಾನಗಳಿಗೆ ಸೋಲುಂಟಾಗುತ್ತಿದೆ. ಅವನನ್ನು ಹೊರ ಡಲು ಬಿಡುತ್ತಿಲ್ಲ.

ಆ ರಾತ್ರಿ ಅವನು ನಿದ್ದೆ ಮಾಡಲಿಲ್ಲ. ಮಾರನೆಯ ದಿನ ಬೆಳಗಿನಿಂದಲೂ ಯಾವು ವರ ಕಡೆಗೂ ದೃಷ್ಟಿಯಿಲ್ಲದೆ ತಿರುವನಂತಪುರ ನಗರವನ್ನೆಲ್ಲ ಅಲೆದ. ತಂಗಮ್ಮನ ಮನೆಯ ಮುಂದೆಯೂ ಅವನು ಹೋದ. ಸುಮ್ಮನೆ ಸುತ್ತಾಡಬೇಕು ಅಷ್ಟೆ. ಇಡೀ ದಿನ ಅಲೆದು ರೂಮಿಗೆ ಬಂದು ಬಿದ್ದುಕೊಂಡ.

"ನಿದ್ದೆ ಮಾಡ್ತಿದ್ದೀರಾ?"

ಯಾರೋ ರೂಮಿನೊಳಕ್ಕೆ ಬಂದು ಕೇಳಿದರು.

ಕೇಶವ ಪಿಳ್ಳೆ ಎದ್ದು ಕುಳಿತ. ಅಪರಿಚಿತನಾದ ನಡುವಯಸ್ಸಿನ ಒಬ್ಬ ವ್ಯಕ್ತಿ ರೂಮಿನಲ್ಲಿ ಬಂದು ನಿಂತಿದ್ದ. ಕ್ಷೀಣಿಸಿದ ಶರೀರ. ಕೊಳಕಾದ ಉಡುಗೆ ಹಾಕಿದ್ದ. ಆ ಮನುಷ್ಯ ಒಂದು ಕಾಗದವನ್ನು ಕೇಶವ ಪಿಳ್ಳೆಯ ಕೈಯಲ್ಲಿ ಕೊಟ್ಟ.

"ಕುಟ್ಟನ್ ಪಿಳ್ಳೆಯ ಕಾಗದ."

ಕೇಶವ ಪಿಳ್ಳೆ ಕಾಗದವನ್ನು ಓದಿದ. ಆ ಮೇಲೆ ಕೇಳಿದ: "ನಿಮಗೇನು ಕೆಲಸ ಆಗ ಬೇಕಾಗಿದೆ?"

ಆ ಮನುಷ್ಯ ಹೇಳಿದ: "ನನ್ನ ಇಡೀ ಬದುಕು ಇದು. ನನಗೆ ಇದೇ ಇರೋದು. ಇದು ಮಾತ್ರ. ಆ ಮಹಾ ಪಾಪಿ ನನಗೆ ದ್ರೋಹ ಮಾಡಿದ. ಅವನು ಈಗ ಅದರ ಫಲ ಅನುಭವಿಸ್ತಿದ್ದಾನೆ. ಅವನ ಮಗನಿಗೆ ಹುಚ್ಚು. ವಿಪರೀತ ಹುಚ್ಚು. ನಾನು ಕಷ್ಟ ಪಡೋದೇ ಆಯ್ತು. ಕಷ್ಟ ಪಟ್ಟು ನಾಲ್ಕು ಕಾಸು ಸಂಪಾದನೆ ಮಾಡುವ ಕಾಲವೂ ಹೋಯ್ತು. ಇನ್ನು ಇದೇ ಗತಿ. ರಾಹು ದೆಶೆಯಾಗಿತ್ತು. ಅದು ಕಳೆಯಿತು ಅಂತಲೇ ಇಟ್ಟುಕೊಳ್ಳಿ. ಆ ಮೇಲೆ ಕಾಲ ಒಳ್ಳೆಯದಾಗುತ್ತೆ. ಇನ್ನು ಮೇಲೆ ನನಗೆ ಸಿಕ್ಕಬೇಕಾದದ್ದು ಸಿಕ್ಕುತ್ತೆ. ಚೀಫ್ ಸೆಕ್ರೆಟರಿಯಿಂದ ನನ್ನ ಕೆಲಸ ಮಾಡಿಸಿಕೊಳ್ಳೋದಕ್ಕೆ ಈಗ ಅನುಕೂಲ ವಾಗಿದೆ. ನನ್ನ ಕೆಲಸ ಆಗಬೇಕಾದರೆ ಫೈಲ್ ಅವರ ಮುಂದೆ ಹೋಗಬೇಕು. ಆ ಫೈಲ್ ಕಳಿಸುವಂತೆ ನಿಮ್ಮ ಸೆಕ್ಷನ್‌ಗೆ ತಿಳಿಸಿದ್ದಾರೆ. ಅದನ್ನು ಕೂಡಲೇ ಕಳಿಸಿಕೊಡಬೇಕು. ಅದನ್ನ ಮಾಡಿಕೊಡಬೇಕು ಸಾರ್."

ಗೋಪಾಲನ್ ನಾಯರ್ ಕಷ್ಟಪಟ್ಟು ಜೀವಿಸುತ್ತಿದ್ದ ಒಬ್ಬ ಮನುಷ್ಯ. ಎಂಟೋ ಹತ್ತೋ ವರ್ಷಗಳಿಗೆ ಮೊದಲು ಆತನ ಭೂಮಿಯನ್ನು ಸರ್ಕಾರ ತನ್ನ ಅವಶ್ಯಕತೆಗೆ ಹೆಚ್ಚು ಬೆಲೆಗೆ ಕೊಂಡುಕೊಂಡಿತು. ಆಗ ಇದ್ದ ತಹಸಿಲ್‌ದಾರ್ ಮಾಡಿದ ದ್ರೋಹವನ್ನು ಕುರಿತು ಆತ ಮನಃಪೂರ್ವಕವಾಗಿ ಹೇಳುತ್ತಿರುವುದು. ಭೂಮಿಯ ಹಣ ಸಿಕ್ಕಿಲ್ಲ. ತಡೆ ಹಿಡಿದು ಇಡಲಾಗಿದೆ. ಆ ಉದ್ಯೋಗಸ್ಥನ ಮಗಳ ಮದುವೆಗೆ ಏನೋ ಬೇಕು ಎಂದು ಆತ

ಕೇಳಿದ್ದ. ಗೋಪಾಲನ್ ನಾಯರ್ ಅದನ್ನು ತಂದುಕೊಡಲಿಲ್ಲ ಅಷ್ಟೆ. ಅಲ್ಲಿಂದ ಇಲ್ಲಿಯ ವರೆಗೆ ಆ ತೊಂದರೆಯನ್ನು ನಿವಾರಿಸಿಕೊಳ್ಳುವುದಕ್ಕಾಗಿ ಆತ ಹೀಗೆ ಅಲೆದಾಡುತ್ತಿದ್ದಾನೆ. ಹೆಚ್ಚು ಬೆಲೆಗೆ ಸರ್ಕಾರಕ್ಕೆ ಕೊಟ್ಟ ಭೂಮಿಯನ್ನು ಬಿಟ್ಟರೆ ಉಳಿದದ್ದು ಒಂದು ಸಣ್ಣ ಮನೆ. ಅವರಲ್ಲಿ ಆತ ವಾಸ ಮಾಡುತ್ತಿದ್ದದ್ದು. ಇದರ ಪ್ರಯತ್ನಕ್ಕಾಗಿ ಅದನ್ನೂ ಅಡ್ಡ ಹಾಕಿದ್ದಾನೆ. ಸರ್ಕಾರದಿಂದ ಸಿಕ್ಕಬೇಕಾಗಿರುವ ಈ ಹಣ ಮಾತ್ರ ಈಗ ಅವನಿಗೆ ಇರುವುದು. ಇಷ್ಟು ಕಾಲವೂ ಕಷ್ಟಪಟ್ಟದ್ದು ಅದಕ್ಕಾಗಿ. ಕೇಸು ಹಾಕುವುದಕ್ಕೂ ಉಪಾಯವಿಲ್ಲ.

ಗೋಪಾಲನ್ ನಾಯರ್ ಹೇಳಿದ: "ಕುಟ್ಟನ್ ಪಿಳ್ಳೆಯೂ ನಾನೂ ಹತ್ತಿರದವರು. ನಿನ್ನೆ ತಾವು ಬರ್ತೀರಿ ಅಂದರು. ನಾನು ಮನೆಯಲ್ಲಿ ಕಾದಿದ್ದೆ, ಒಟ್ಟಿಗೆ ಬರೋಣ ಅಂತ. ನೀವು ಬರದೇ ಹೋದದ್ದರಿಂದ ನಾನೇ ಬಂದೆ. ತಂದೆ ತಾಯಿ ಮನೆಯಲ್ಲಿ ಗಾಬರಿಯಾಗಿದ್ದಾರೆ. ಸೌಖ್ಯವಿಲ್ಲವೋ ಏನೋ ಅಂತ ಅವರ ಗಾಬರಿ."

ಕೇಶವ ಪಿಳ್ಳೆ ಹೇಳಿದ: "ನನಗೆ ಅಷ್ಟಾಗಿ ಸೌಖ್ಯವಿಲ್ಲ."

ಕೇಶವ ಪಿಳ್ಳೆ ಮತ್ತೆ ಕೇಳಿದ: "ಫೈಲ್ ಕಳಿಸಿಕೊಟ್ಟರೆ ಸಾಕಾ?"

"ಸಾಕು, ಸಾಕು. ಆದರೆ ಅದನ್ನು ಬೇಗ ಕಳಿಸಿಕೊಡಬೇಕು; ನಾಳೆಯೇ !"

"ಸೂಪರಿಂಟೇಡೆಂಟ್ ಒಂದು ಕಾಡಾನೆಯ ಹಾಗೆ."

ಗೋಪಾಲನ್ ನಾಯರ್‌ಗೆ ಆ ವಿಷಯವೆಲ್ಲ ಗೊತ್ತು. ಆತ ಹೇಳಿದ: "ನಾವು ಏನಾದರೂ ಮಾಡೋಣ."

ಹೇಗೆ ಎಂದು ತಿಳಿಯದು. ಕೂಡಲೇ ಕೇಶವ ಪಿಳ್ಳೆಗೆ ತೋರಿದ್ದು ಅದನ್ನು ಉಪಯೋಗಪಡಿಸಿಕೊಳ್ಳುವ ಒಂದು ಸಂದರ್ಭ ಎಂದು. ಅವನ ಬುದ್ಧಿ ಮಿಂಚಿನಂತೆ ಪ್ರಕಾಶಿಸತೊಡಗಿತು. ಅವನಿಗೆ ಅದರಿಂದಾಗಿ ಒಂದು ಉತ್ಸಾಹವೂ ಉಂಟಾಯಿತು.

ಗೋಪಾಲನ್ ನಾಯರ್ ಕೇಳಿದ: "ಹೇಗೆ? ಆ ಸೂಪರಿಂಟೇಡೆಂಟ್‌ಗೂ ನಿಮಗೂ ಬಹಳ ಸಮೀಪವೆ?"

ಸಮೀಪವೆಂದೋ ಇಲ್ಲವೆಂದೋ ಏನು ಹೇಳಬೇಕು ಎಂದು ಒಂದು ಕ್ಷಣ ಹೊಳೆಯಲಿಲ್ಲ. ಆಫೀಸಿನಲ್ಲಿ ಗೋವಿಂದನ್ ನಾಯರ್. ಪ್ರಭಾಕರನ್ ನಾಯರ್ ಎಲ್ಲರೂ ಇಂತಹ ಸಂದರ್ಭಗಳಲ್ಲಿ ಬುದ್ಧಿ ಉಪಯೋಗಿಸಿ ಏನಾದರೂ ಲಾಭ ಪಡೆಯುತ್ತಿದ್ದುದನ್ನೂ ಪ್ರಯತ್ನಿಸುತ್ತಿದ್ದುದನ್ನೂ ಆತ ಕಂಡದ್ದುಂಟು. ಕೇಶವ ಪಿಳ್ಳೆ ಮೊತ್ತಮೊದಲಾಗಿ ಇಂತಹ ಒಂದು ಕೆಲಸವನ್ನು ಕೈಗೆತ್ತಿಕೊಂಡಿರುವುದು. ಯಾವುದು ಸರಿ, ಯಾವುದು ತಪ್ಪು ಎಂದು ಅವನಿಗೆ ಸರಿಯಾಗಿ ತಿಳಿಯದು. ಗೋಪಾಲನ್ ನಾಯರ್ ಉತ್ತರವನ್ನು ನಿರೀಕ್ಷಿಸುತ್ತಿದ್ದ. ಕೇಶವ ಪಿಳ್ಳೆಯ ನಾಲಗೆಯಲ್ಲಿ ಸರಸ್ವತಿ ಉದಿಸಿದಳು.

"ನನಗಿಂತ ಮೇಲಿನ ಅಧಿಕಾರಿಯಲ್ಲವೆ? ಪರಿಚಯವಿಲ್ಲ ಅಂತ ಹೇಳುವುದಕ್ಕಾಗುತ್ತೇ? ಆದರೆ ದುರಾಶೆ ಮನುಷ್ಯ."

ತಾನು ಅದಕ್ಕೆ ಸಿದ್ಧವಾಗಿದ್ದೇನೆಂದು ಗೋಪಾಲನ್ ನಾಯರ್ ಪುನಃ ಹೇಳಿದ. ಬೇಗ ಫೈಲ್ ಕಳಿಸಿಕೊಟ್ಟರೆ ಸಾಕು. ಗೋಪಾಲನ್ ನಾಯರನ ಮುಂದಿನ ಅನ್ವೇಷಣೆ ಎಷ್ಟು ಕೊಡಬೇಕು ಎನ್ನುವುದಾಗಿತ್ತು. ಎಷ್ಟೆಷ್ಟೋ ಆಫೀಸುಗಳೊಳಗೆ ಹೊಕ್ಕು ಹೊರಗೆ ಬಂದು, ಕೆಲಸ ಆಗಿಯೂ ಆಗದೆಯೂ, ಲಂಚ ಕೊಟ್ಟು, ಲಂಚ ಕೊಡದೆ ಎಲ್ಲ ಅಡೆತಡೆಗಳನ್ನು ಅರಿತವನಾಗಿದ್ದ, ಗೋಪಾಲನ್ ನಾಯರ್. ಆತ ಹೇಳಿದ: "ಒಂದು ದೃಷ್ಟಿಯಲ್ಲಿ ಹೇಳೋದಾದರೆ ಇದು ಅಂಥಾ ದೊಡ್ಡ ಕೆಲಸವೇನಲ್ಲ. ನನಗೆ ಸಿಕ್ಕ ಬೇಕಾದ ಹಣ ಸಿಕ್ಕಬೇಕಾಗಿದೆ ಅಷ್ಟೆ. ಒಂದು ಫೈಲ್ ತೆಗೆದುಕೊಂಡು ಧೂಳು ಒರೆಸಿ ಮುಂದಕ್ಕೆ ಕಳಿಸಿಕೊಡಬೇಕು ಅಷ್ಟೆ. ಅದು ಬೇಗ ಆಗಬೇಕಾಗಿದೆ. ತಡವಾದರೆ ಕೆಲವು ಗಂಟೆಗಳು ಕಳೆದ ಮೇಲೆ ಕಳಿಸಿದರೆ ಸಾಕು ಅನ್ನುವ ಆರ್ಡರೂ ಬರಬಹುದು. ಚೀಫ್ ಸೆಕ್ರೆಟರಿಯನ್ನು ಅಷ್ಟು ಬಲವಾಗಿ ಹಿಡಿದುಕೊಂಡಿದ್ದೇನೆ."

ಕೇಶವ ಪಿಳ್ಳೆಯೂ ಸುಮ್ಮನಾಗಲಿಲ್ಲ. "ಓ! ಅದಕ್ಕೆಲ್ಲ ನಾವೂ ಹೇಳಬಲ್ಲೆವು. ಕೆಲವು ಗಂಟೆಗಳು ಕಳೆದ ಮೇಲೆ ಕಳಿಸಿದರೆ ಸಾಕು ಅಂತ ಹೇಳಿದರೆ—ನಾವು ಮನಸ್ಸು ಮಾಡಿದರೆ ಆರು ತಿಂಗಳು ಬೇಕಾಗಬಹುದು. ಕೆಲವು ಸಲ ಫೈಲ್ ಮೇಲಕ್ಕೆ ಹೋದರೂ ಬೇಕಾಗಿರುವ ಪೇಪರ್ ಅದರಲ್ಲಿರೋದಿಲ್ಲ."

ಗೋಪಾಲನ್ ನಾಯರ್ ಅದನ್ನೂ ಒಪ್ಪಿಕೊಂಡ. ನಂತರ ಹೇಳಿದ: "ಅಂತೂ ಒಬ್ಬ ಸೆಕ್ಷನ್ ಸೂಪರಿಂಟೆಂಡೆಂಟರ ಸ್ಥಾನಕ್ಕೆ ಸಲ್ಲಿಸಬೇಕಾದ ಕಾಣಿಕೆ ಸಲ್ಲಿಸೋಣ. ಒಂದು ಹತ್ತು ರೂಪಾಯಿ ಸಾಲದಾ?"

ಕೇಶವ ಪಿಳ್ಳೆ ಕೇಳಿದ: "ಅಷ್ಟು ಸಾಕಾ?"

"ಹಾಗಿದ್ದರೆ ನೀವೇ ಹೇಳಿ ಸಾರ್."

"ಹದಿನೈದು ರೂಪಾಯಿ."

ಗೋಪಾಲನ್ ನಾಯರ ಮುಖ ಮಂಕಾಯಿತು. ಆತ ಸುಸ್ತಾದ. ಒಟ್ಟು ಅವನ ಹತ್ತಿರ ಇದ್ದದ್ದೇ ಅಷ್ಟು. ಅದನ್ನೆಲ್ಲ ಕೊಡಬೇಕಾಗಿ ಬಂತಲ್ಲ ಎಂದು. ಕಡಿಮೆ ಅಂದರೂ ನಾಲ್ಕು ದಿನ ತಿರುವನಂತಪುರದಲ್ಲಿ ಇರಬೇಕಾಗಿತ್ತು. ಆ ಚರಿತ್ರೆಯನ್ನೆಲ್ಲ ಆತ ವಿವರಿಸಿದ. ಅವನು ಅದನ್ನು ಮುಗಿಸಿದ್ದು ಹೀಗೆ:

"ಆ ಮೇಲೆ ನನ್ನ ಕೈಯಲ್ಲಿ ಒಂದು ಕಪ್ಪು ಕಾಫಿಗೂ ಒಂದು ಬೀಡಿಗೂ ಕಾಸು ಉಳಿಯೋದಿಲ್ಲ ಸಾರ್."

ಕಡೆಗೆ ಹದಿಮೂರು ರೂಪಾಯಿಯಾದರೂ ಆಗಬೇಕು ಎಂದು ಕೇಶವ ಪಿಳ್ಳೆ ಹೇಳಿದ್ದು. ಅದನ್ನು ಹೇಳಿದ ಮೇಲೆ ಆ ಸಂಖ್ಯೆಯನ್ನು ನಿರ್ಧರಿಸಿದ್ದರಲ್ಲಿ ಯಾವುದೋ ಒಂದು ಸಂಶಯವುಂಟಾಗುವುದಿಲ್ಲ ಎನ್ನಿಸಿತು. ನಿಜವಾಗಿಯೂ ಮನಸ್ಸಿನಲ್ಲಿದ್ದದ್ದು ಲೆಕ್ಕದಲ್ಲಿ ಹೊರಗೆ ಬಂದಿತು ಎಂದು ತೋರಿತು. ಒಬ್ಬರಿಗೆ ಹತ್ತು ರೂಪಾಯಿ ಲಂಚ ಕೊಡಬಹುದು—ಹದಿನೈದು ಕೊಡಬಹುದು. ಹದಿಮೂರು ರೂಪಾಯಿ ಲಂಚ

ಅಂದರೆ ಅದು ಯಾವ ಲೆಕ್ಕ? ಅದರಲ್ಲಿ ಯಾವುದೋ ಕಮಿಶನ್ ಇದ್ದ ಹಾಗೆ ತೋರುವುದಿಲ್ಲವೆ? ಈ ವಿಷಯದಲ್ಲೆಲ್ಲ ಒಳ್ಳೆಯ ಪರಿಚಯವಿದ್ದಾತ ಗೋಪಾಲನ್ ನಾಯರ್. ಅವನಿಗೆ ಅದು ಅರ್ಥವಾಗುತ್ತದೆ. ಪೂವನ ಕಾಗದ ತಂದವನ ಹತ್ತಿರ ಹಣ ತೆಗೆದುಕೊಂಡ ಎನ್ನುವ ಕೆಟ್ಟ ಹೆಸರು ಬರುತ್ತದೆ. ಅದು ಖಂಡಿತ. ಹದಿನೈದು ರೂಪಾಯಿಯೇ ಬೇಕು ಎಂದು ಪಟ್ಟಾಗಿ ಹಿಡಿಯಬೇಕಿತ್ತು. ಆ ಮೇಲೆ ಸಾಲ ಕೊಡುವವನ ಹಾಗೆ ಎರಡು ರೂಪಾಯಿ ಹಿಂದಕ್ಕೆ ಕೊಡಬಹುದಾಗಿತ್ತು.

ಗೋಪಾಲನ್ ನಾಯರ್ ಆ ಸ್ಥಿತಿಯಲ್ಲಿ ಅಷ್ಟೆಲ್ಲ ಆಲೋಚಿಸಿದಂತೆ ತೋರುವುದಿಲ್ಲ. ಸೊಂಟದಿಂದ ಒಂದು ಪೊಟ್ಟಣವನ್ನು ತೆಗೆದು ಹದಿಮೂರು ರೂಪಾಯಿ ಎಣಿಸಿ ಕೇಶವ ಪಿಳ್ಳೆಯ ಕೈಯಲ್ಲಿ ಕೊಟ್ಟ. ಆ ಮೇಲೆ ಆ ಹಣವನ್ನು ಹೇಗೆ ತಂದದ್ದು ಎಂದು ಆ ಕಥೆಯನ್ನು ಆತ ವಿವರಿಸಿದ.

ಅವನ ಕಿರಿಯ ಮಗುವಿನ ಸೊಂಟದಲ್ಲಿದ್ದ ಬೆಳ್ಳಿ ಉಡುದಾರವನ್ನೂ, ಮಗುವಿನ ರಕ್ಷಣೆಗಾಗಿ ಮಂತ್ರವಾದಿಯಿಂದ ಬರೆಸಿದ ತಗಡನ್ನಿಟ್ಟಿದ್ದ ಚಿನ್ನದ ತಾಯಿತಿಯನ್ನೂ ಮಾರಿ ತಂದ ಹಣ ಅದು. ಮಾರಬಹುದಾಗಿ ಅವನ ಹತ್ತಿರ ಉಳಿದಿದ್ದದ್ದು ಅಷ್ಟೇ. ಸರ್ವಸ್ವವೂ ಹೋಯಿತು. ಮನೆಯೂ ಅಡ. ಕಡೆಯ ಪ್ರಯತ್ನ ಮಾಡುತ್ತಿದ್ದಾನೆ. ಈ ಹಣ ಸಿಕ್ಕಬೇಕು. ಇಲ್ಲದಿದ್ದರೆ ಕುಟುಂಬ ಬೀದಿಯ ಪಾಲಾಗುತ್ತದೆ. ಅವನ ಸ್ಥಿತಿ ಅದು. ಸರ್ಕಾರ ತೀರ್ಮಾನಿಸಿದ ಮೊತ್ತವಾದರೂ ಸರಿಯೆ. ಅದು ಸಿಕ್ಕಬೇಕು.

ಸಂಜೆಯಾದ ಮೇಲೆ ಸೂಪರಿಂಟೆಂಡೆಂಟರನ್ನು ಕಾಣಬೇಕು ಎಂದುಕೊಂಡ. ಹೇಗೆ ಆ ಕೆಲಸವನ್ನು ಮಾಡಿಸಿಕೊಡುವುದು ಎನ್ನುವುದು ಕೇಶವ ಪಿಳ್ಳೆಯ ಆಲೋಚನೆಯಾಗಿತ್ತು. ಗೋಪಾಲನ್ ನಾಯರನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವುದೆ? ತನ್ನ ಕಡೆಗೆ ಮೂರು ರೂಪಾಯಿ ಎಂದುಕೊಂಡ ಕೇಶವ ಪಿಳ್ಳೆ. ಖಂಡಿತವಾಗಿಯೂ ಗೋಪಾಲನ್ ನಾಯರ್ ಏನನ್ನೂ ಕೇಶವ ಪಿಳ್ಳೆಗೆ ಕೊಡುವುದಿಲ್ಲ.

ಇಬ್ಬರೂ ಸೂಪರಿಂಟೆಂಡೆಂಟರ ಮನೆಗೆ ಹೋದರು. ಗೋಪಾಲನ್ ನಾಯರ್ ತನ್ನ ಸಂಕಟವನ್ನೆಲ್ಲ ಅವರ ಹತ್ತಿರ ಹೇಳಿಕೊಂಡ. ಸಹಾನುಭೂತಿಯಿಂದ ವೈಯಾಪುರಿ ಪಿಳ್ಳೆ ಎಲ್ಲವನ್ನೂ ಕೇಳಿಸಿಕೊಂಡರು. ಸರ್ಕಾರದಿಂದ ಬರಬೇಕಾದ ಗೋಪಾಲನ್ ನಾಯರ್‌ಗೆ ಸಿಕ್ಕಬೇಕಾದ ಹಣದ ಕಥೆ. ಒಂದು ವೇಳೆ ಕೇಶವ ಪಿಳ್ಳೆ ಜೊತೆಯಲ್ಲಿದ್ದದ್ದರಿಂದಲೋ ಏನೋ—ಕೈಯಲ್ಲಾದದ್ದನ್ನು ಮಾಡಿಕೊಡುವುದಾಗಿ ಅವರು ಒಪ್ಪಿದರು. ಗೋಪಾಲನ್ ನಾಯರನ್ನು ಅಲ್ಲಿಂದ ಹೋಗುವಂತೆ ಸೂಪರಿಂಟೆಂಡೆಂಟಿಗೆ ತಿಳಿಯದಂತೆ ಕೇಶವ ಪಿಳ್ಳೆ ಕೈಸನ್ನೆ ಮಾಡಿದ. ತಲೆಬಾಗಿ ನಮಸ್ಕರಿಸಿ ಗೋಪಾಲನ್ ನಾಯರ್ ಹೋದ. ಆ ಮೇಲೆ ಕೇಶವ ಪಿಳ್ಳೆ ಸೂಪರಿಂಟೆಂಡೆಂಟರ ಕುರ್ಚಿಯ ಕೈಮೇಲೆ ಕವರನ್ನಿಟ್ಟ.

ಆ ವಹಿವಾಟಿನಲ್ಲಿ ಕೇಶವ ಪಿಳ್ಳೆಗೆ ಮೂರು ರೂಪಾಯಿಗಳು ಸಿಕ್ಕಿದುವು. ಒಂದು ಕಾಸೂ ಕೈಯಲ್ಲಿಲ್ಲದ ಹೊತ್ತಿನಲ್ಲಿ ಅದು ದೊಡ್ಡ ಮೊತ್ತವಾಗಿತ್ತು. ಗೋಪಾಲನ್

ನಾಯರ ಕೆಲಸ ಮಾಡಿ ಕೊಡುವುದಕ್ಕಾಗಿ ಭಾನುವಾರವೂ ಸೋಮವಾರವೂ ತಿರುವನಂತಪುರದಲ್ಲಿಯೇ ಇರಬೇಕಾಯಿತು—ಎಂದು ಮನೆಗೆ ಕಾಗದ ಬರೆಯಲು ಅನುಕೂಲವಾಗುತ್ತದೆ ಎಂಬ ಒಂದು ದೊಡ್ಡ ಸಮಾಧಾನ ಕೇಶವ ಪಿಳ್ಳೆಗೆ ಉಂಟಾಯಿತು. ಹೋಗದೇ ಇರುವುದಕ್ಕೆ ಒಂದು ಕಾರಣ ಸಿಕ್ಕಿತಲ್ಲ! ಅದಕ್ಕೆ ಸಾಕ್ಷಿಯೂ ಇದೆ. ಆ ಸಾಕ್ಷಿಯ ಅಗತ್ಯವೂ ಇದೆ. ತಂದೆ, ತಾಯಿ, ಅಕ್ಕ ಯಾರಿಗೂ ತಪ್ಪು ತಿಳಿದುಕೊಳ್ಳುವುದಕ್ಕೆ ಅವಕಾಶವಿಲ್ಲ. ಬೇಕಾದರೆ ಗೋಪಾಲನ್ ನಾಯರಿಂದ ಒಂದು ಕಾಗದವನ್ನು ಕುಟ್ಟನ್ ಪಿಳ್ಳೆಗೆ ಬರೆಸಲೂಬಹುದು.

ಮರುದಿನ ಆ ಫೈಲನ್ನು ಕಳಿಸಿಕೊಡುವಂತೆ ಆರ್ಡರ್ ಬಂದಿತು. ಅದೇ ದಿನ ಆ ಫೈಲನ್ನು ಹುಡುಕಿ ಕಳಿಸುವಂತೆ ಸೂಪರಿಂಟೆಂಡೆಂಟ್ ಹೇಳಿಯೂ ಇದ್ದರು. ಗೋವಿಂದನ್ ನಾಯರ್ ಆ ಫೈಲಿಗೆ ಸಂಬಂಧಪಟ್ಟ ಮನುಷ್ಯ. ಮಧ್ಯಾಹ್ನವಾಗುವ ವರೆಗೂ ಗೋವಿಂದನ್ ನಾಯರ್ ಅದನ್ನು ಹುಡುಕಿ ತೆಗೆಯುವ ಹಾಗೆ ಕಾಣಲಿಲ್ಲ. ಅದನ್ನು ಜ್ಞಾಪಿಸಿದರೇನು ಎಂದು ಹಲವಾರು ಸಲ ಕೇಶವ ಪಿಳ್ಳೆ ಆಲೋಚಿಸಿದ. ಆದರೆ ಹಾಗೆ ಮಾಡಲಿಲ್ಲ. ಕಾರಣ ಕೇಶವ ಪಿಳ್ಳೆಗೆ ಇದರಲ್ಲಿ ಆಸಕ್ತಿಯಿದೆ ಎಂದಾಗುತ್ತದೆ. ಸಂಶಯವುಂಟಾಗುತ್ತದೆ. ಸೂಪರಿಂಟೆಂಡೆಂಟರನ್ನೇ ಕಂಡು ಹೇಳಿದರೋ? ಜೊತೆಯವರ ಮೇಲೆ ದೂರು ಹೇಳಿದಂತಾಗುತ್ತದೆ. ಆ ದಿನ ಆ ಕೆಲಸ ಆಗಲಿಲ್ಲ. ಐದು ಗಂಟೆ ಸಮಯ ಆಯಿತು. ಆಫೀಸು ಬಿಟ್ಟಿತು. ಕೇಶವ ಪಿಳ್ಳೆ ಯಾವುದೋ ವಿಷಯದಲ್ಲಿ ತಲೆ ಕಡಿಸಿಕೊಂಡಿದ್ದಾನೆ ಎಂದು ತಂಗಮ್ಮನಿಗೆ ಅರ್ಥವಾಯಿತು. ಅದೇನೆಂದು ಅವಳು ಕೇಳಿಯೂ ಇದ್ದಳು. ಗೇಟಿನಲ್ಲಿ ತಪ್ಪದೆ ಗೋಪಾಲನ್ ನಾಯರ್ ಬಂದು ನಿಂತಿದ್ದ. ನಡೆದ ಸಂಗತಿಯನ್ನೆಲ್ಲ ಕೇಶವ ಪಿಳ್ಳೆ ವಿವರಿಸಿದ. ಗೋಪಾಲನ್ ನಾಯರ್ ಏನೂ ಮಾತನಾಡದೆ ಸುಸ್ತು ಹೊಡೆದು ಅಲ್ಲಿಯೇ ಕುಳಿತುಕೊಂಡ. ಎಲ್ಲವೂ ಕೈಬಿಟ್ಟು ಹೋದಂತಿತ್ತು. ಕೇಶವ ಪಿಳ್ಳೆ ಅವನನ್ನು ಕೈ ಹಿಡಿದು ಎಬ್ಬಿಸಿ ಹೇಳಿದ:

"ನೀವು ಹೀಗೆಲ್ಲ ಬೇಜಾರು ಮಾಡಿಕೊಳ್ಳಬೇಡಿ. ನಾನು ಇವತ್ತು ಸೂಪರಿನ್ ಟೆಂಡೆಂಟರನ್ನು ಕಾಣುತ್ತೇನೆ. ಇವತ್ತೇ! ಹಣ ತೆಗೆದುಕೊಂಡು ಯಾಕೆ ಹೀಗೆ ಅವಮಾನ ಆಗೋ ಹಾಗೆ ಮಾಡಿದಿರಿ ಎಂದು ಕೇಳ್ತೇನೆ."

ಅದಕ್ಕೆ ಗೋಪಾಲನ್ ನಾಯರ್ ಏನೂ ಹೇಳಲಿಲ್ಲ. ಅವನು ಜೀವಚ್ಛವದ ಹಾಗೆ ನಡೆಯುತ್ತಿದ್ದ. ಕೇಶವ ಪಿಳ್ಳೆಗೆ ಈ ಹುಲಿಬಾಲ ಹಿಡಿಯಬಾರದಿತ್ತು ಎನ್ನಿಸಿತು.

ಅವನು ಕೇಳಿದ: "ನಾಳೆಗಾದರೆ ತೊಂದರೆಯೇನು? ಹನ್ನೆರಡು ಗಂಟೆ ತಡ. ಅಷ್ಟೇ ಅಲ್ಲವೇ? ನಾಳೆ ನಾನು ಕಳಿಸ್ತೀನಿ. ನನ್ನ ನಾಲಗೆಗೆ ಶಕ್ತಿಯಿದ್ದರೆ ಕಳಿಸ್ತೀನಿ."

ಆ ಕೆಲಸವನ್ನು ಮಾಡಿಕೊಡುವುದಾಗಿ ಹೇಗೆ ಗೋಪಾಲನ್ ನಾಯರನ್ನು ಸಮಾಧಾನಪಡಿಸುವುದು? ಎನ್ನುವುದಾಗಿತ್ತು ಕೇಶವ ಪಿಳ್ಳೆಯ ಆಲೋಚನೆ. ಅವನಿಗೆ ತಿಳಿಸಿಯೇ ತೀರಬೇಕು. ಕೇಶವ ಪಿಳ್ಳೆ ನೂರು ಆಣೆ ಹಾಕಿದ.

ಒಂದು ಶವ ಮಾತನಾಡಿದಂತೆ ಗೋಪಾಲನ್ ನಾಯರ್ ಹೇಳಿದ: "ನನಗಾಗಿ ಮಾಡಿಕೊಡಿ ಸಾರ್."

"ಅಣ್ಣಾ, ನನ್ನನ್ನು ನೀವು ತಮ್ಮಾ ಅಂತ ಕರೆದರೆ ಸಾಕು."

ಹೇಗಾದರೂ ಮಾಡಿ ಗೋಪಾಲನ್ ನಾಯರಿಗೆ ಭರವಸೆಯುಂಟಾಗುವಂತೆ ಮಾಡಬೇಕಾಗಿತ್ತು.

ಕೇಶವ ಪಿಳ್ಳೆ ಹೇಳುವುದನ್ನು ಕೇಳಿಸಿಕೊಳ್ಳದೆ ಗೋಪಾಲನ್ ನಾಯರ್ ಹೇಳಿದ: "ಈಗಿರೋ ಚೀಫ್ ಸೆಕ್ರೆಟರಿ ಹತ್ತಿರ ನನಗೆ ಒಂದು ಹಿಡಿತ ಸಿಕ್ಕಿದೆ. ಅವರು ಆ ಕೆಲಸ ಖಂಡಿತ ಮಾಡಿಕೊಡ್ತಾರೆ. ಆದರೆ ಅವರು ಚಂಚಲ ಮನಸ್ಸಿನವರು. ಆಗುವುದಿಲ್ಲ ಎಂದು ಹೇಳಿಬಿಡುತ್ತಾರೋ ಎಂದು ತಿಳಿಯದು. ಅವರು ಮಾಡಿಕೊಡದೇ ಹೋದರೆ ......... ಆ ಮೇಲೆ ನಾನು........."

ಗೋಪಾಲನ್ ನಾಯರ್ ಮುಂದೆ ಅನಂತವಾದ ಒಂದು ಶೂನ್ಯತೆ ಗೋಚರಿಸಿತ್ತು. ಕೇಶವ ಪಿಳ್ಳೆಗೆ ಅದೊಂದು ಸುದ್ದಿಯಾಗಿತ್ತು. ಚೀಫ್ ಸೆಕ್ರೆಟರಿಗೆ ಸ್ಥಾನ ಚಲನೆ ಯುಂಟಾಗಲಿದೆ ಎಂದು ಮತ್ತಾರಿಗೂ ತಿಳಿದಿರಲಿಲ್ಲ. ಅವನು ಕೇಳಿದ:

"ಚೀಫ್ ಸೆಕ್ರೆಟರಿ ಹೋಗುತ್ತಾರೆ ಅಂತಲೆ?"

"ಹೌದು. ಯಾವಾಗ ಅಂತ ಗೊತ್ತಿಲ್ಲ. ಅದಕ್ಕೇ ನಾನು ಇಷ್ಟು ಓಡಾಡಿದ್ದು."

ಗೋಪಾಲನ್ ನಾಯರನದು ಆಗ ಕೇಶವ ಪಿಳ್ಳೆಗೆ ಪ್ರಧಾನವಾದ ಕಾರ್ಯವಲ್ಲ. ಆ ವಿಚಾರ ದೂರ ಉಳಿಯಿತು. ಕೇಶವ ಪಿಳ್ಳೆ ಕೇಳಿದ: "ಇದು ನಿಮಗೆ ಹೇಗೆ ಗೊತ್ತಾಯ್ತು?"

ಅವನು ಉತ್ತರಿಸಿದ: "ನಾನೆಷ್ಟು ವರ್ಷಗಳಿಂದ ಇಲ್ಲಿ ಹೀಗೆ ಅಲೆದಾಡ್ತಿದ್ದೀನಿ. ಅವರಿಗೂ ಈ ವಿಷಯ ಗೊತ್ತಿಲ್ಲ. ಅವರು ಹೋಗುವ ಮೊದಲು ನನ್ನ ಕೆಲಸ ಆಗದೇ ಇದ್ದರೆ ಆ ಮೇಲೆ ನಾನು ಬದುಕಿರೋದಿಲ್ಲ."

ಕೇಶವ ಪಿಳ್ಳೆಗೆ ಮತ್ತೊಂದು ವಿಷಯ ತಿಳಿದುಕೊಳ್ಳಬೇಕಾಗಿತ್ತು. "ಅವರ ಬದಲಿಗೆ ಯಾರು ಬರ್ತಾರೆ?"

"ಕೃಷ್ಣನ್ ನಾಯರ್ ಅನ್ನೋ ಒಬ್ಬ ಸೆಕ್ರೆಟರಿ ಇದ್ದಾರಾ? ಅವರಾಗಿರಬೇಕು."

ಕೇಶವ ಪಿಳ್ಳೆ ಸ್ತಂಭಿತನಾದ. ಗೋಪಾಲನ್ ನಾಯರ್ ತನ್ನ ವಿಷಯ ಹೇಳಿ ಕೊಳ್ಳುತ್ತಿದ್ದ.

"ನನಗೆ ಅವರ ಯಾವ ಪರಿಚಯವೂ ಇಲ್ಲ. ಅವರ ಹತ್ತಿರ ಶ್ರಮಿಸಬೇಕು ಅಂದರೆ—ಅದು ಸಾಧ್ಯವಿಲ್ಲ. ಇನ್ನು ನನ್ನ ಮನಸ್ಸೂ ಬುದ್ಧಿಯೂ ಒಟ್ಟುಗೂಡಿ ಮುಂದುವರಿಯುವುದಿಲ್ಲ. ಇದು ನಡೆಯದೇ ಹೋದರೆ ಗೋಪಾಲನ್ ನಾಯರ್ ಒಂದು ದೊಡ್ಡ ಮಾವಿನಮರದ ಕೊಂಬೆಯಲ್ಲಿ ತೂಗಾಡುವುದನ್ನು ನೋಡಬೇಕಾ ಗುತ್ತೆ."

ಹೊಸ ಚೀಫ್ ಸೆಕ್ರೆಟರಿಯವರನ್ನು ಕಂಡು ಕೆಲಸ ಮಾಡಿಸಿಕೊಡುತ್ತೇನೆಂದು ಹೇಳಿದರೇನೆಂದು ಕೇಶವ ಪಿಳ್ಳೆಗೆ ಅನ್ನಿಸಿತು. ಆದರೆ ಅವನು ಹಾಗೆ ಹೇಳಲಿಲ್ಲ. ಗುಟ್ಟಾಗಿಡ ಬೇಕಾದ ವಿಷಯವನ್ನು ಗುಟ್ಟಾಗಿಡಲೇಬೇಕಲ್ಲವೆ?



# [6]

## ಸಂಚರಿಸುವ ಕುರ್ಚಿಗಳು

ಸಂಜೆ ಕಳೆಯಿತು. ಕೇಶವ ಪಿಳ್ಳೆ ಒಬ್ಬನೇ ಸೂಪರಿಂಟೆಂಡೆಂಟನ್ನು ಕಾಣಲು ಹೋದ. ಫೈಲ್ ಕಳಿಸಿಕೊಂಡದ್ದಕ್ಕೆ ಕೇಶವ ಪಿಳ್ಳೆ ತನ್ನ ವ್ಯಸನವನ್ನು ಪ್ರಕಟಿಸಿದ. ಸೂಪರಿಂಟೆಂಡೆಂಟರ ಉತ್ತರ ಇದಾಗಿತ್ತು:

"ನಾನು ಮಾಡಬೇಕಾದದ್ದನ್ನು ಮಾಡಿದೆ."

ಸ್ವಲ್ಪ ಹೊತ್ತು ಬಿಟ್ಟು ಸೂಪರಿಂಟೆಂಡೆಂಟ್ ಕೇಳಿದರು:

"ನಾನು ಹೋಗಿ ಫೈಲ್ ಹುಡುಕಿ ಧೂಳು ಒರೆಸಿ, ಕವರಿನಲ್ಲಿಟ್ಟುಕೊಂಡು ಹೋಗಿ ಕೊಡಬೇಕಾ? ಏನು ನೀವು ಹೇಳ್ತಿರೋದು?"

ಸೂಪರಿಂಟೆಂಡೆಂಟರಿಗೆ ಸ್ವಲ್ಪ ಸಿಟ್ಟು ಬಂದಿರಬಹುದೇ ಎಂದು ಕೇಶವ ಪಿಳ್ಳೆಗೆ ಸಂಶಯವುಂಟಾಯಿತು. ಆತ ಒಂದು ರೀತಿಯ ಹೆದರಿಕೆಯಲ್ಲಿ ಉತ್ತರ ಹೇಳಿದ:

"ಅಲ್ಲ. ಅಲ್ಲ. ಅದನ್ನ ಹೇಳಿದೆ ತಪ್ಪೆ."

ಸ್ವಲ್ಪ ಹೊತ್ತು ಬಿಟ್ಟು ಸೂಪರಿಂಟೆಂಡೆಂಟ್ ಹೇಳಿದರು:

"ನಿಮಗೆ ಪರಿಚಯ ಸಾಲದು. ಹೊಸಬರು. ಅದ್ದರಿಂದಲೇ ಆಕ್ಷೇಪಿಸೋದಕ್ಕೆ ಇಲ್ಲಿಗೆ ಬಂದದ್ದು."

"ಆಕ್ಷೇಪಿಸೋದಕ್ಕಲ್ಲ."

ವಿಷಯ ತಿಳಿಸಿ ಪಾಠ ಕಲಿಸುವ ರೀತಿಯಲ್ಲಿ ಸೂಪರಿಂಟೆಂಡೆಂಟ್ ಹೇಳಿದರು:

"ಆ ಸೆಕ್ಷನ್ ಕ್ಲಾರ್ಕನ್ನು ಕಂಡು ಅದನ್ನು ಮಾಡಿಸಬೇಕು. ಅನಂತರ ಡಿಸ್‌ಪ್ಯಾಚ್ ಮಾಡಿಸಿ ಪ್ಯೂನ್ ಕೈಯಲ್ಲಿ ಅಸಿಸ್ಟೆಂಟ್ ಸೆಕ್ರೆಟರಿಗೆ ಕಳಿಸಬೇಕು. ಅಲ್ಲಿಯೂ ಸಂಬಂಧಪಟ್ಟವರನ್ನು ಕಂಡು ಅನಂತರ ಸೆಕ್ರೆಟರಿಗೆ ಕಳಿಸಬೇಕು. ಅಲ್ಲಿಂದ ಚೀಫ್ ಸೆಕ್ರೆಟರಿ ಹತ್ತಿರಕ್ಕೆ ಕಳಿಸಬೇಕು. ಅರ್ಥವಾಯ್ತಾ? ಫೈಲಿನ ಹಿಂದೆಯೇ ಹೋಗಬೇಕು. ಮಾಡಬೇಕಾದ ಕೆಲಸ ಅದು. ಇಲ್ಲದೇ ಇದ್ದರೆ ಒಂದು ವರ್ಷವಾದರೂ ಫೈಲ್ ತಲಪುವುದಿಲ್ಲ."

"ಸರಿ ಸಾರ್."

"ಸರಿ. ಹಾಗೆ ಮಾಡಬೇಕಾದದ್ದನ್ನು ಮಾಡಿ."

ಆ ಫೈಲನ್ನು ಹುಡುಕಿ ತೆಗೆದಿರಾ ಎಂದು ಕೇಳುವುದಕ್ಕೂ ಸೂಪರಿಂಟೆಂಡೆಂಟ್ ಸಿದ್ಧವಾಗಿಲ್ಲ. ಸಂಗ್ರಹವಾಗಿ ತಿಳಿದದ್ದು ಇಷ್ಟು. ಈ ಸ್ಥಿತಿಯಲ್ಲಿ ಗೋಪಾಲನ್ ನಾಯರ್‌ಗೆ ಹಣ ಸಿಕ್ಕುವ ರೀತಿ ಕಾಣಿಸುವುದಿಲ್ಲ. ಅದಕ್ಕೆ ಸಂಬಂಧಪಟ್ಟ ಆಶೆಯನ್ನೂ

ಪ್ರಯತ್ನವನ್ನೂ ಕೈಬಿಡುವುದು ಒಳ್ಳೆಯದು. ಉಪಾಯದಿಂದ ಅದನ್ನು ಇಲ್ಲಿಂದ ತಳ್ಳಿ ಹಾಕಬೇಕು. ಹಾಗೆ ಆ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಬೇಕು. ಹೊಸ ಚೀಫ್ ಸೆಕ್ರೆಟರಿಯಿಂದ ಕೆಲಸ ಮಾಡಿಸೋಣ ಎಂದು ಹೇಳಿದ್ದಿದ್ದರೆ ಆತ ಕಟ್ಟಿರುವೆಯ ಹಾಗೆ ಕಚ್ಚುತ್ತಿದ್ದ. ಯಾವಾಗಲೂ ತೊಂದರೆ ಕೊಡುತ್ತಿದ್ದ. ಅಂತು ಅದನ್ನು ಹೇಳಲಿಲ್ಲ. ಕೇಶವ ಪಿಳ್ಳೆ ಆ ವಿಷಯದಲ್ಲಿ ತನ್ನನ್ನು ತಾನೇ ಅಭಿನಂದಿಸಿಕೊಂಡ.

ಹೇಗಾದರೂ ನಾಳೆ ಆ ಕೆಲಸದಲ್ಲಿ ಪ್ರತ್ಯೇಕವಾದ ಒಂದು ಪ್ರಯತ್ನ ಮಾಡಿ ನೋಡಬೇಕು ಎಂದು ತೀರ್ಮಾನಿಸಿದ.

ಮೂರನೆಯ ದಿನ ಕೇಶವ ಪಿಳ್ಳೆ ಆಫೀಸಿಗೆ ಹೋದ. ತಂಗಮ್ಮನೂ ಬಂದಿದ್ದಳು. ಹಾಗೆ ಒಂದು ವಾರದ ನಂತರ ಆ ಹಳೆಯ ಪದ್ಧತಿ ಪುನಃ ಅಂದು ಪ್ರಾರಂಭವಾಯಿತು.

"ಏನು?"

ಅವಳು ಕೇಳಿದಳು: "ಮನಸ್ಸಿನ ಬೇಸರವಲ್ಲ ಹೋಯ್ತಾ? ಇವತ್ತೇನು ಬೇಗಲೇ ಬಂದದ್ದು?"

ಅವನು ಹೇಳಿದ: "ಬೇಗಲೇ ಬರೋದು ಬೇಡ ಅಂದುಕೊಂಡೆ". ಅವನು ಮುಂದುವರಿಸಿದ: "ಈಗ ತಂಗಮ್ಮ ಸ್ವಲ್ಪ ಬದಲಾಯಿಸಿಲ್ಲವಾ?"

ಅವಳು ಆಶ್ಚರ್ಯದಿಂದ ಕೇಳಿದಳು:

"ಎಲ್ಲಿ ಬದಲಾಯಿಸಿದ್ದೀನಿ? ನಾನು ಹಳೆಯ ತಂಗಮ್ಮನೇ. ಬದಲಾಯಿಸಿರೋದು ಬೇರೆಯವರು."

ಕೇಶವ ಪಿಳ್ಳೆ ಅದಕ್ಕೆ ಪ್ರತಿಯಾಗಿ ಹೇಳಿದ: "ನಾನೊಬ್ಬ ಬಡ ಗುಮಾಸ್ತ. ಸಹಾಯಕ್ಕೆ ಯಾರ್‍ಯಾರೂ ಇಲ್ಲದವನು. ತಂಗಮ್ಮನಿಗಾದರೆ ಹಾಗೇನು?"

"ನನಗೆ ಯಾವ ಪ್ರತ್ಯೇಕತೆ ಬಂದಿದೆ?"

ಆತ ಅವಳ ಮುಖದ ಕಡೆಗೆ ಒಂದು ಕ್ಷಣ ನೋಡಿ ಕೇಳಿದ:

"ಏನೂ ಇಲ್ಲವೆ?"

ಅವಳ ಮುಖದಲ್ಲಿ ದೃಷ್ಟಿ ನಾಟಲು ಅವನಿಗೆ ಸಾಧ್ಯವಿಲ್ಲ. ಅದಕ್ಕೆ ಅವನಿಗೆ ಧೈರ್ಯವಿಲ್ಲ.

ತಂಗಮ್ಮನಿಗೆ ಅರ್ಥವಾಗಲಿಲ್ಲ. ಕೇವಲ ತಮಾಷೆಯಲ್ಲಲ್ಲ ಅವನು ಮಾತನಾಡುತ್ತಿದ್ದದ್ದು. ಸ್ವಲ್ಪ ಗಾಂಭೀರ್ಯದಿಂದ ಅವನು ಹೇಳಿದ:

"ಅಂತು ತಂಗಮ್ಮ ಪರವಾಯಿಲ್ಲ. ತಂಗಮ್ಮನಿಗೆ ಗುಟ್ಟಾಗಿಡಬೇಕಾದದ್ದನ್ನು ಗುಟ್ಟಾಗಿಡೋದು ಗೊತ್ತು."

ತಂಗಮ್ಮನಿಗೆ ಒಂದು ರೀತಿಯಾಯಿತು. ಅವಳಿಗೆ ಅರ್ಥವಾಗಲಿಲ್ಲ. ಕೇಶವ ಪಿಳ್ಳೆ ಕೇಳಿದ: "ಚಿಕ್ಕ ತಂದೆ ಚೀಫ್ ಸೆಕ್ರೆಟರಿಯಾಗೋ ವಿಷಯಾನ ನನ್ನ ಹತ್ರ ಹೇಳಿದೆಯಾ?"

"ಓ! ಅದಾ? ಅದು ಗುಟ್ಟು ನಿಜ. ಅದನ್ನು ಹೇಳಿರಲಿಲ್ಲ. ಸತ್ಯವಾಗಿ ಮೂರು ನಾಲ್ಕು ಸಲ ಅದನ್ನ ಹೇಳೋದಕ್ಕೆ ಅಂತ ಬಂದೆ."

ಅವನು ಒಂದು ಸಲ 'ಹ್ಞು' ಎಂದು ಹೇಳಿದ.

"ಹ್ಞು. ನನ್ನ ಹತ್ರ ಮುಚ್ಚಿಟ್ಟೆ."

ಅವಳು ಕ್ಷಮಾ ಯಾಚನೆಯ ಸ್ವರದಲ್ಲಿ ಹೇಳಿದಳು:

"ಸತ್ಯವಾಗಿಯೂ ನಾನು ಹೇಳಬೇಕು ಅಂದುಕೊಂಡಿದ್ದೆ. ನೀವು ಇಲ್ಲಿಗೆ ಬೇಗ ಬರೋದಿಲ್ಲ. ಕಂಡು ಮಾತಾಡೋದಕ್ಕೆ ನನಗೆ ಸಂದರ್ಭ ತಂದುಕೊಡಲಿಲ್ಲ. ಅದಕ್ಕೇನಾ ನನ್ನ ಜೊತೆ ಸಿಟ್ಟು ಮಾಡಿಕೊಂಡು ಮಾತನಾಡದೇ ಇದ್ದದ್ದು?"

ಅವನು ಆದ್ದರಿಂದಲೇ ಕಳೆದ ವಾರ ಹಾಗೆ ನಡೆದುಕೊಂಡದ್ದು ಎನ್ನುವ ರೀತಿಯಲ್ಲಿ ಹೇಳಿದ:

"ನಾನ್ಯಾಕೆ ಸಿಟ್ಟು ಮಾಡಿಕೊಳ್ಳಲಿ?"

"ಓ! ಸೋಲಾಯ್ತಲ್ಲ ಅಂತ!"

"ನನಗೆ ಯಾವ ಸೋಲೂ ಇಲ್ಲ."

"ಉಂಟು. ನನಗೆ ಗೊತ್ತು."

ಅವನು ಮಾತನಾಡಲಿಲ್ಲ.

ಅವಳು ಹೇಳಿದಳು: "ಇವತ್ತು ನಾನು ಕೊಟ್ಟಿಯಂಬಲ ತೆರೆದಿರ್ತೀನಿ. ನನ್ನನ್ನು ಸುಮ್ಮನೇ ಚಳೀಲಿ ನಡುಗಿಸಬೇಡಿ. ನಾನೆಲ್ಲ ಹೇಳ್ತೀನಿ."

ಅಷ್ಟು ಹೊತ್ತಿಗೆ ಬೇರೆ ಕ್ಲಾರ್ಕುಗಳು ಬರುವ ಹೊತ್ತಾಯಿತು. ಕೇಶವ ಪಿಳ್ಳೆ ಗೋವಿಂದನ್ ನಾಯರನ್ನು ಕಂಡು ಆ ಫೈಲಿನ ವಿಚಾರವನ್ನು ಹೇಳಿದ. ಗೋವಿಂದನ್ ನಾಯರಿಂದ ಥಟ್ಟನೆ ಬಂದ ಉತ್ತರ:

"ಹ್ಞು, ಹುಡುಕಿ ತೆಗೆಯೋಣ" ಎಂದು.

ಆದರ ಅರ್ಥ ಇವತ್ತು ನಾಳೆಯಲ್ಲಿ ಹುಡುಕಿ ತೆಗೆಯುವುದಕ್ಕೆ ಹೋಗುವುದಿಲ್ಲ ಎಂದಾಗಿತ್ತು.

ಕೇಶವ ಪಿಳ್ಳೆ ಹೇಳಿದ: "ಇದು ನನಗೆ ಸಂಬಂಧಪಟ್ಟದ್ದು."

"ಹ್ಞು, ಹ್ಞು! ನಿನಗೆ ಸಂಬಂಧಪಟ್ಟದ್ದಾ?"

"ಆತ ನಮ್ಮ ಕಡೆಯವರು."

"ಆ ಪಾರ್ಟಿ ಬರಲಿ."

ಕೇಶವ ಪಿಳ್ಳೆ ಗೋಪಾಲನ್ ನಾಯರ ಕಥೆಯನ್ನೆಲ್ಲ ವಿವರಿಸಿದ. ಗೋವಿಂದನ್ ನಾಯರ್ ಹೇಳಿದ: "ಪಾಪ, ನನಗೂ ತುಂಬ ನೋವಾಗುತ್ತೆ. ಆದರೆ ಏನು ಮಾಡೋದು ಕೇಶವ ಪಿಳ್ಳೆ? ಅದಕ್ಕೆ ಮೊದಲು ಮಾಡಿ ಮುಗಿಸಬೇಕಾದ ಕೆಲಸ ಒಂದು ರಾಶಿಯಿದೆ. ಅದನ್ನೆಲ್ಲ ಮುಗಿಸಿ ಆ ಮೇಲೆ ಫೈಲ್ ಹುಡುಕಿ ತೆಗೆದು ಕಳಿಸೋಣ."

ಎಲ್ಲವನ್ನೂ ಕೇಳಿಸಿಕೊಂಡಿದ್ದ ಹರಿಹರಯ್ಯರ್ ಒಂದು ಮಧ್ಯಸ್ಥಿಕೆಯ ಮಾರ್ಗ ವನ್ನು ತಿಳಿಸಿದರು.

"ಮಧ್ಯಾಹ್ನ ಕೇಶವ ಪಿಳ್ಳೆ ಆ ಪಾರ್ಟಿಯನ್ನು ಕಂಡು ಮಾತನಾಡಲಿ. ಮಾದೇವನ್ ಪಿಳ್ಳೆ ಆ ಫೈಲ್ ತೆಗೆದುಕೊಂಡು ಹೋಗಿ ಕೊಡಬೇಕಾದ ಮನುಷ್ಯ. ಆದ್ದರಿಂದ ಗೋವಿಂದನ್ ನಾಯರ್‌ಗೂ ಮಾದೇವನ್ ಪಿಳ್ಳೆಗೂ ಒಂದು ಅಂದಾಜು ಮಾಡಿಕೊಟ್ಟು ಹೋಗಲಿ."

ಮಾಥ್ಯುವೂ ಪ್ರಭಾಕರನ್ ನಾಯರೂ ಅದನ್ನು ಅನುಮೋದಿಸಿದರು.

ಗೋಪಾಲನ್ ನಾಯರ ಹತ್ತಿರ ಒಟ್ಟು ಎರಡು ರೂಪಾಯಿ ಇದ್ದದ್ದು. ಅದರಲ್ಲಿ ಅರ್ಧ ರೂಪಾಯಿ ಖರ್ಚಾಗಿರಬಹುದು. ಮಧ್ಯಾಹ್ನ ಗೋಪಾಲನ್ ನಾಯರನ್ನು ಕಂಡಾಗ ಆ ಲೆಕ್ಕ ಸರಿಯೆಂದು ತೋರಿತು. ಅದರಲ್ಲಿ ಒಂದು ರೂಪಾಯನ್ನು ಆತ ಕೊಟ್ಟ. ಕೇಶವ ಪಿಳ್ಳೆಗೆ ಸಿಕ್ಕಿದ ಮೂರು ರೂಪಾಯಿಗಳಲ್ಲಿ ಎರಡು ರೂಪಾಯಿ ಕೊಡ ಬೇಕಾಗಿ ಬಂತು. ಆ ಪ್ರಾರಬ್ಧ ಬೆನ್ನಿಗೆ ಅಂಟಿಕೊಂಡದ್ದರಿಂದ ಕೇಶವ ಪಿಳ್ಳೆಗೆ ಸಿಕ್ಕಿದ್ದು ಬರೀ ಒಂದು ರೂಪಾಯಿ. ಸರಿಯಾಗಿ ಹದಿನಾರಾಣೆ ಸಿಕ್ಕಿದಷ್ಟು ಸಿಕ್ಕಿತು. ಕೆಲಸ ಆಗಲಿ ಎಂದು ಆತ ಭಾವಿಸಿದ.

ಹಾಗೆ ಆ ಸಾಯಂಕಾಲ ಆ ಫೈಲ್ ಅಸಿಸ್ಟೆಂಟ್ ಸೆಕ್ರೆಟರಿಯ ಮೇಜಿನ ಮೇಲಕ್ಕೆ ಹೋಯಿತು. ಕೇಶವ ಪಿಳ್ಳೆ ಕೈ ತೊಳೆದುಕೊಂಡ.

ಎರಡು ದಿವಸಗಳಿಂದ ಮನಸ್ಸಮಾಧಾನವಿಲ್ಲದೆ ಮಾಡಿ ಮುಗಿಸಿದರೂ ಕೇಶವ ಪಿಳ್ಳೆ ಮತ್ತೊಂದು ವಿಷಯವನ್ನು ತೀರ್ಮಾನಿಸಬೇಕಾಗಿತ್ತು. ಕೊಟ್ಟಿಯಂಬಲ ತೆರೆದಿರು ತ್ತದೆ. ಅವಳು ಚಳಿಯಲ್ಲಿ ಕಾದಿರುತ್ತಾಳೆ. ಅಲ್ಲಿಗೆ ಹೋಗಬೇಕೇ ಬೇಡವೇ?

ಒಂದು ದೃಷ್ಟಿಯಲ್ಲಿ ಅಂದು ಬೇಗ ಆಫೀಸಿಗ ಹೋದದ್ದು ಬೇಡದ ಸಂಗತಿ ಯಾಗಿತ್ತು. ಕೃಷ್ಣನ್ ನಾಯರ್ ಚೀಫ್ ಸೆಕ್ರೆಟರಿಯಾಗುವುದರಿಂದ ಅವನಿಗೇನಾಗ ಬೇಕು? ಆದರೆ ಹಾಗೆ ಆಲೋಚಿಸುವುದಕ್ಕೆ ಸಾಧ್ಯವಿಲ್ಲ. ಅದರಿಂದ ಯಾವುದೋ ಪ್ರಯೋಜನವುಂಟಾಗುತ್ತದೆ ಎಂತಲೋ ಉಂಟುಮಾಡಿಕೊಳ್ಳಬೇಕು ಎಂತಲೋ ಒಂದು ಉದ್ದೇಶವಿತ್ತು. ಆ ಉದ್ದೇಶವೇ ಅವನನ್ನು ಎಳೆದುಕೊಂಡು ಹೋದದ್ದು. ಆ ಉದ್ದೇಶಕ್ಕೆ ಈಗ ಶಕ್ತಿಯಿದೆ. ಅಲ್ಲ ಶಕ್ತಿ ಹೆಚ್ಚುತ್ತಿದೆ. ಅವಳಿಗೆ ತೀರ ಹತ್ತಿರದವ ನಾಗುವ ಆಸಕ್ತಿ ಆ ಕಾರಣದಿಂದ ಹೆಚ್ಚಿತ್ತು. ಒಂದು ವಾರದಿಂದ ತಡೆದು ಹಿಡಿದಿದ್ದ ಆ ಆಸಕ್ತಿ ಈಗ ಅವನನ್ನು ವಶಪಡಿಸಿಕೊಳ್ಳುತ್ತಿದೆ.

ಅಂತೂ ಆ ರಾತ್ರಿ ಹೋಗಬಾರದು ಎಂದು ತೀರ್ಮಾನಿಸಿದ. ಆ ತೀರ್ಮಾನ ವನ್ನು ಗಟ್ಟಿಯಾಗಿ ಹಿಡಿದುಕೊಳ್ಳುವುದಕ್ಕಿಂತಲೂ ಹೆಚ್ಚಾಗಿ ಹಾಗೆ ಗಟ್ಟಿಯಾಗಿ ನಿಲ್ಲು ವುದು ಅತ್ಯಂತ ಕ್ಲೇಶದಾಯಕ ವಿಷಯವಾಗಿತ್ತು. ಮೂರು ನಾಲ್ಕು ಸಲ ಅವನು ರೂಮಿ ನಿಂದ ಹೊರಗೆ ಬಂದಿದ್ದ. ಆದರೆ ಮುಂದೆ ಹೆಜ್ಜೆಯಿರಿಸದಂತೆ ತನ್ನನ್ನು ತಾನು ತಡೆ

ಹಿಡಿದುಕೊಳ್ಳುವುದು ಅವನಿಗೆ ಸಾಧ್ಯವಾಯಿತು. ಈ ದಿನವೂ ಅವಳು ಕಾದಿರಲಿ. ಆ ಮೇಲೆ ಅವಳು ಸಿಟ್ಟು ಮಾಡಿಕೊಳ್ಳಲಿ. ಆದರೆ ಹಾಗೆ ಜಗಳ ಮಾಡುವುದಿದ್ದಲ್ಲಿ ಆ ಘಟ್ಟವನ್ನು ತಲಪುವುದಕ್ಕೂ ಕೇಶವ ಪಿಳ್ಳೆಗೆ ಸಾಧ್ಯವಿಲ್ಲ. ಕಡೆಗೂ ಆತ ಹೋಗಲಿಲ್ಲ.

ಮರುದಿನ ಬೆಳಗ್ಗೆ ಏನು ಕಾರಣ ಕೊಡುವುದು ಎಂದು ಕೇಶವ ಪಿಳ್ಳೆ ಆಲೋಚಿಸುತ್ತಿದ್ದ. ಫೈಲ್‌ನ ಸಂಗತಿ ಅವಳಿಗೂ ತಿಳಿದಿತ್ತು. ಆ ಗೋಪಾಲನ್ ನಾಯರ್ ಆ ರಾತ್ರಿಯಲ್ಲಿ ರೂಮಿಗೆ ಬಂದ ಎಂದು ಹೇಳಿದರಾಯಿತು. ಅದು ನಂಬಬಹುದಾದ ಕಥೆ.

ಎಂದಿನಂತೆ ಬೆಳಗ್ಗೆ ಹನ್ನೊಂದು ಗಂಟೆಗೆ ಸೆಕ್ರೆಟರಿಯೇಟಿನ ನೌಕರರೆಲ್ಲರೂ ಬಂದರು. ಹನ್ನೊಂದು ಗಂಟೆ ಐದು ನಿಮಿಷವಾದಾಗ ಚೀಫ್ ಸೆಕ್ರೆಟರಿ ಮಿಸ್ಟರ್ ಮೇನೋನ್ ಕಾರಿನಲ್ಲಿ ಬಂದಿಳಿದು ತಮ್ಮ ರೂಮಿಗೆ ಹೋದರು.

ಸ್ವಲ್ಪ ಹೊತ್ತು ಕಳೆದು ಚೀಫ್ ಸೆಕ್ರೆಟರಿಯ ದಫೇದಾರ್ ಗಾಬರಿಯಿಂದ ಹೊರಗೆ ಬಂದು ಕೂಗಿ ಹೇಳಿದ:

"ಓಡಿ ಬನ್ನಿ ! ಓಡಿ ಬನ್ನಿ !........."

ಮತ್ತೇನೂ ಹೇಳುವುದಕ್ಕೆ ಅವನಿಗ ಸಾಧ್ಯವಾಗಿರಲಿಲ್ಲ. ಜನರೆಲ್ಲ ಒಳಕ್ಕೆ ಓಡಿದರು. ಕುರ್ಚಿಯನ್ನು ಒರಗಿ ಅವರು ಕಣ್ಣುಮುಚ್ಚಿ ಕುಳಿತಿದ್ದರು. ಮುಖ ತುಂಬ ಬಿಳಿಚಿಕೊಂಡಿತ್ತು. ಸ್ನಾನ ಮಾಡಿದಂತೆ ಶರೀರವಿಡೀ ಬೆವರಿತ್ತು. ಒಂದು ನಿಮಿಷದಲ್ಲಿ ಸೆಕ್ರೆಟರಿಯೇಟ್ ಇಡೀ ಅಲ್ಲಿಗೆ ಓಡಿ ಬಂದಿತು. ಆ ಪ್ರಜ್ಞಾಹೀನ ಸ್ಥಿತಿ ಬಹಳ ಹೊತ್ತು ಇರಲಿಲ್ಲ. ಮುಖಕ್ಕೆ ನೀರು ಚಿಮುಕಿಸಿದಾಗ ಅವರು ಕಣ್ಣುಬಿಟ್ಟರು. ಮಿಸ್ಟರ್ ಕೃಷ್ಣನ್ ನಾಯರನ್ನು ಬಿಟ್ಟು ಎಲ್ಲ ಸೆಕ್ರೆಟರಿಗಳೂ ಆ ಕುರ್ಚಿಯ ಸುತ್ತ ನಿಂತಿದ್ದರು. ಕೃಷ್ಣನ್ ನಾಯರ್ ಹೊರಗೆ ನಿಂತಿದ್ದರು. ಸ್ವಲ್ಪ ಹೊತ್ತು ಕಳೆದ ಮೇಲೆ ವಿಷಯವೇನೆಂದು ಎಲ್ಲರಿಗೂ ಅರ್ಥವಾಯಿತು. ಚೀಫ್ ಸೆಕ್ರೆಟರಿಯನ್ನು ಸ್ಥಾನದಿಂದ ಬದಲಾಯಿಸಿ ಆ ಸ್ಥಾನದಲ್ಲಿ ಕೃಷ್ಣನ್ ನಾಯರನ್ನು ನೇಮಿಸಲಾಗಿತ್ತು. ಮೇನೋನ್ ನಾಳೆ ಯಾವ ಸ್ಥಾನದಲ್ಲಿ ಕುಳಿತುಕೊಳ್ಳಬೇಕು ಎಂದು ಆ ಆರ್ಡರ್‌ನಲ್ಲಿ ತಿಳಿಸಿರಲಿಲ್ಲ. ಕೂಡಲೇ ಚಾರ್ಜು ಕೊಡಬೇಕು ಎಂದಿತ್ತು. ನಾಲ್ಕು ವರ್ಷ ಕಾಲ ಸೆಕ್ರೆಟರಿಯೇಟನ್ನು ನಡುಗಿಸಿದ್ದ ಆಳು ಆತ. ಬೆಳಗ್ಗೆ ಎಂದಿನಂತೆ ಆಫೀಸಿಗೆ ಬಂದರು. ಆಗಲೇ ಆತ ತಾನು ಯಾರೂ ಅಲ್ಲದಂತಾಗುವುದೇ?

ಕೂಡಲೇ ಡಾಕ್ಟರ್ ಬಂದರು. ವಿಶೇಷವಾದ ತೊಂದರೆಯೇನೂ ಇರಲಿಲ್ಲ. ಅವರನ್ನು ಮನೆಗೆ ಕರೆದುಕೊಂಡು ಹೋದರು. ಅಲ್ಲಿಂದಲೇ ಅವರು ಚಾರ್ಜು ವಹಿಸಿ ಕೊಡಬೇಕಾಯಿತು.

ಅಂದು ಮಧ್ಯಾಹ್ನ ಕಳೆದರೂ ಸೆಕ್ರೆಟರಿಯೇಟ್‌ನಲ್ಲಿ ಯಾವ ಕೆಲಸವೂ ನಡೆಯಲಿಲ್ಲ. ಸೆಕ್ರೆಟರಿಗಳೂ ಸುಮ್ಮನೆ ಕುಳಿತಿದ್ದರು. ಮೇನೋನ್ ಬಗ್ಗೆ ಇದ್ದ ಪ್ರತ್ಯೇಕವಾದ ಸ್ನೇಹದಿಂದ ಅಲ್ಲ. ಸಹಾನುಭೂತಿಯಿಂದಲೂ ಅಲ್ಲ. ಯಾವುದೋ ರೀತಿಯಲ್ಲಿ ಆ

ಘಟನೆ ಎಲ್ಲರನ್ನೂ ಹಿಡಿದು ಅಲುಗಿಸಿದಂತೆ ತೋರಿತು. ಎಲ್ಲರನ್ನೂ ನಡುಗುವಂತೆ ಮಾಡಿತ್ತು.

ಇಂದು ಕುಳಿತ ಕುರ್ಚಿಯಲ್ಲಿ ನಾಳೆಯೂ ಕುಳಿತುಕೊಳ್ಳಬಹುದು ಎಂದು ಯಾವ ನಂಬಿಕೆ? ಎಲ್ಲ ಸೆಕ್ರೆಟರಿಗಳೂ ತಮಗೆ ತಾವೇ ಕೇಳಿಕೊಂಡ ಪ್ರಶ್ನೆ ಅದು. ಮುಂದಿನ ನಿಮಿಷವೇ ಕೆಳಗಿಳಿಯಬೇಕು ಎನ್ನುವ ಆರ್ಡರ್ ಬರಬಹುದು. ಬಹುಶಃ ಆ ಭೀತಿಯನ್ನುಂಟುಮಾಡುವುದಕ್ಕೂ ಇರಬಹುದು ಚೀಫ್ ಸೆಕ್ರೆಟರಿಯನ್ನು ತಳ್ಳಿ ಹೊರಗೆ ಹಾಕಿದ್ದು. ಆದರೆ ಒಬ್ಬರು ಮತ್ತೊಬ್ಬರ ಹತ್ತಿರ ಈ ಭಯವನ್ನು ಹೇಳಿಕೊಳ್ಳಲಿಲ್ಲ. ಒಬ್ಬನಿಗೆ ಮತ್ತೊಬ್ಬನಲ್ಲಿ ವಿಶ್ವಾಸವಿಲ್ಲ.

ಮೇನೋನ್ ಮಾಡಿದ ತಪ್ಪೇನು? ಇನ್ನು ಮುಂದೆ ಅವರ ಕೆಲಸ ಯಾವುದು? ಅಥವಾ ಮನೆಗೆ ಕಳಿಸಿಬಿಡುವುದೆ? ಇದರಿಂದ ಸೆಕ್ರೆಟರಿಯೇಟ್‌ನಲ್ಲಿ ಉಂಟಾಗುವ ಬದಲಾವಣೆಗಳೇನಿರಬಹುದು? ಯಾರಿಗೂ ತಿಳಿಯದು.

ಡೆವೆಲಪ್‌ಮೆಂಟ್ ಸೆಕ್ಷನ್‌ನಿಂದ ಒಂದು ಊಹೆ ಕೇಳಿಬಂದಿತು. ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್‌ನ ಒಂದು ಕಂಟ್ರಾಕ್ಟಿಗೆ ಒಂದು ವಿದೇಶದ ಕಂಪೆನಿ ಬಂದಿದೆ. ಲೌವ್ಲಿಂಗ್ ಕಂಪೆನಿ. ಅವರಿಗೆ ದಿವಾನರ ಮತ್ತು ಪ್ರೈವೇಟ್ ಸೆಕ್ರೆಟರಿಯ ಅನುಗ್ರಹ–ಆಶೀರ್ವಾದಗಳಿವೆ. ಚೀಫ್ ಸೆಕ್ರೆಟರಿ ಮೇನೋನ್ ಅವರಿಗೆ ವಿರೋಧವಾಗಿದ್ದರು. ಆ ಕಂಟ್ರಾಕ್ಟನ್ನು ನಮ್ಮ ದೇಶದ ಮೂರು ನಾಲ್ಕು ಜನರಿಗೆ ಕೊಡಬೇಕು ಎನ್ನುವ ಅಭಿಪ್ರಾಯ ಅವರದು. ಹಾಗೆ ದಿವಾನರು ಮತ್ತು ಚೀಫ್ ಸೆಕ್ರೆಟರಿಗಿದ್ದ ಮನಸ್ತಾಪ ಬಹಳ ಕಾಲದಿಂದ ನಡೆಯುತ್ತಿತ್ತು. ಈ ಮನಸ್ತಾಪ, ಅದಕ್ಕೆ ಸಂಬಂಧಪಟ್ಟ ಎಲ್ಲ ಸೆಕ್ಷನ್‌ನಲ್ಲಿಯೂ ಪ್ರತಿಫಲಿಸುತ್ತಿತ್ತು. ಕ್ಲಾರ್ಕುಗಳೂ ಎರಡು ಭಾಗಗಳಾಗಿ ತಿರುಗಿದ್ದುದನ್ನು ಕಾಣಬಹುದಾಗಿತ್ತು. ಈ ಮನಸ್ತಾಪ, ವಿಷಮ ಸ್ಥಿತಿಯನ್ನು ತಲಪಿದ್ದುದರ ಫಲವೇ ಚೀಫ್ ಸೆಕ್ರೆಟರಿಯ ಪತನ.

ಆದರೆ ಒಂದು ವಿಷಯ ಮಾತ್ರ ಅರ್ಥವಾಗದೇ ಇತ್ತು. ಮೇನೋನ್ ಅರಮನೆಯ ಜನರಿಗೆ ತುಂಬ ಬೇಕಾದವರು. ಅರಮನೆಗೆ ಗೊತ್ತಿಲ್ಲದೆ ಈ ಆರ್ಡರ್ ಬರುವುದಿಲ್ಲ. ಒಂದು ವೇಳೆ ಮೇನೋನ್‌ಗೆ ಅರಮನೆಯೊಡನಿದ್ದ ಹತೋಟಿ ಕೈಬಿಟ್ಟು ಹೋಗಿರಬಹುದು.

ಮೇನೋನರ ಪತನದಲ್ಲಿ ಸಂತೋಷಪಡುವವರು, ವ್ಯಸನಪಡುವವರು ಎನ್ನುವ ರೀತಿಯಲ್ಲಿ ಸೆಕ್ರೆಟರಿಯೇಟ್ ಎರಡು ಭಾಗವಾಯಿತು. ಪಿ. ಡಬ್ಲ್ಯು. ಡಿ. ಡೆವೆಲಪ್‌ಮೆಂಟ್, ಲ್ಯಾಂಡ್, ಫಾರೆಸ್ಟ್, ಎಲೆಕ್ಟ್ರಿಸಿಟಿ—ಹೀಗೆ ಎಲ್ಲ ವಿಭಾಗದಲ್ಲೂ ನೌಕರರು ಎರಡು ಪಕ್ಷಗಳಾಗಿ ಬೇರೆ ಬೇರೆಯಾಗಿ ನಿಂತದ್ದು ಅಂದು. ಮೇನೋನರ ಪತನದಲ್ಲಿ ಒಂದು ಗುಂಪಿಗೆ ಆಹ್ಲಾದವುಂಟಾಗಿದ್ದರೆ ನಿರಾಶೆಹೊಂದಿದ ಮತ್ತೊಂದು ಪಕ್ಷ ಸೇಡಿನ ಮನೋಭಾವವನ್ನು ತಾಳಿಕೊಂಡಿದ್ದರು. ಹಾಗಾದರೆ ಲೌವ್ಲಿಂಗ್ ಕಂಪೆನಿ ಈ ಪ್ರಾಜೆಕ್ಟಿನ

ಕೆಲಸ ಮಾಡುವುದನ್ನು ನೋಡೋಣ ಎಂದಾಗಿತ್ತು ಅವರ ತೀರ್ಮಾನ. ಸಾಯಂಕಾಲ ವಾಗುವಷ್ಟರಲ್ಲಿ ಹೆಚ್ಚು ಕಡಿಮೆ ಹೀಗೆ ಎರಡು ಗುಂಪುಗಳಾಗಿ ಕಡೆಗೆ ವಾಗ್ಯುದ್ಧ ವಾಗಿ ಪರಿಣಮಿಸಿತು.

ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್, ಪ್ರಾರಂಭವಾದ ಕಾಲದಿಂದ ವಿದೇಶದ ಲಾವ್ಲಿಂಗ್ ಕಂಪೆನಿಯೂ ಸ್ಥಳೀಯರಾದ ಮೂರು ನಾಲ್ಕು ಕಂಟ್ರಾಕ್ಟರರೂ ಒಟ್ಟಾಗಿಯೂ ಸೆಕ್ರೆಟರಿಯೇಟ್‌ನ ಕೆಲಸಗಳನ್ನು ಮಾಡಿಕೊಡುತ್ತಿದ್ದರು. ಈ ಎರಡು ಪಕ್ಷಗಳಿಗೂ ಜನರು ದೊರೆತರು. ಈ ಸಂದರ್ಭದಲ್ಲಿ ಒಂದು ಗುಂಪಿನವರ ಪರಾಜಯದಲ್ಲೂ, ಮತ್ತೊಂದು ಭಾಗದವರ ತಾತ್ಕಾಲಿಕ ವಿಜಯದಲ್ಲೂ ಸ್ಪಷ್ಟವಾದ ಒಡಕುಗಳು ಕಂಡುಬಂದುವು. ಕೃಷ್ಣನ್ ನಾಯರ್ ಯಾವ ಗುಂಪಿನವರು? ಒಂದು ಭಾಗಕ್ಕೆ ಸೇರಿದ ಮನುಷ್ಯನೆಂದು ಆ ಸೆಕ್ರೆಟರಿಯನ್ನು ಯಾರೂ ಭಾವಿಸಿಲ್ಲ. ಆದರೆ ಅವರು ದಿವಾನರ ಪ್ರೈವೇಟ್ ಸೆಕ್ರೆಟರಿಗೆ ತುಂಬ ಬೇಕಾದ ಮನುಷ್ಯ. ಆ ವಿಷಯವನ್ನು ಹೇಳುವಾಗ ಎಲ್ಲರ ತುಟಿಯಲ್ಲೂ ಒಂದು ಮಂದಹಾಸವುಂಟಾಗುತ್ತದೆ. ಆ 'ತುಂಬ ಬೇಕಾದ' ಎಂದು ಹೇಳುವುದರಲ್ಲಿ ಯಾವುದೋ ಒಂದು ದೊಡ್ಡ ಅರ್ಥವಿದೆ. ಆ ವಿಷಯ ಹೇಗಿದ್ದರೂ ಅಂದು ಕೃಷ್ಣನ್ ನಾಯರ್ ತಮ್ಮ ರೂಮಿನಿಂದ ಹೊರಗೆ ಬರಲಿಲ್ಲ. ಯಾರ ಜೊತೆಯಲ್ಲೂ ಮಾತನಾಡಲಿಲ್ಲ. ಒಂಟಿಯಾಗಿ ಕುಳಿತ್ತಿದ್ದರು. ಎಲ್ಲೋ ಕೆಲವರು ಪ್ರೊಮೋಷನ್ ಬಗ್ಗೆ ಅವರನ್ನು ಅಭಿನಂದಿಸಿದರು. ಒಟ್ಟಿನಲ್ಲಿ ತಮಗೆ ಅರ್ಹತೆಯಿಲ್ಲದ ಒಂದು ಸ್ಥಾನ ದೊರೆಯಿತು ಎಂದು ಅವರಿಗೇ ಅನ್ನಿಸಿದ ಹಾಗಾಯಿತು.

ಸೆಕ್ರೆಟರಿಯೇಟ್‌ನಲ್ಲಿ ಮಾತ್ರವಲ್ಲ, ತಿರುವನಂತಪುರ ನಗರದಲ್ಲಿ ಎಲ್ಲಿ ನೋಡಿದರೂ ಅದೇ ವಿಷಯವನ್ನು ಮಾತನಾಡುತ್ತಿದ್ದರು. ಕೆಲವು ಕಾರಣಗಳನ್ನು ಊಹಿಸಲಾಯಿತು. ಸೆಕ್ರೆಟರಿಗಳಲ್ಲಿ ತುಂಬ ಸೀನಿಯರ್ ಆಗಿದ್ದದ್ದು ಪೋತನ್—ಎನ್ನುವವರು. ಮೇನೋನ್‌ಗೆ ಮೊದಲೇ ಚೀಫ್ ಸೆಕ್ರೆಟರಿಯಾಗಬೇಕಾಗಿದ್ದದ್ದು ಆತ. ಆತನನ್ನು ಈಗಲೂ ಕಡೆಗಣಿಸಲಾಗಿದೆ. ಅದು ಅವರಿಗೆ ಸಹಾಯಕರಿಲ್ಲದ್ದರಿಂದ ಎಂದೇ ಇಟ್ಟು ಕೊಳ್ಳೋಣ. ಆದರೆ ಕೃಷ್ಣನ್ ನಾಯರ ನೇಮಕ ಎಲ್ಲರನ್ನೂ ಅಚ್ಚರಿಗೊಳಿಸಿತು. ಕೃಷ್ಣನ್ ನಾಯರ್ ಅಷ್ಟೊಂದು ಸೀನಿಯರ್ ಅಲ್ಲ.

ಅಂದು ಕೇಶವ ಪಿಳ್ಳೆಯೂ ಜೊತೆಯವರೂ ಲಾಡ್ಜಿಗೆ ಬಂದಾಗ ಲಾಡ್ಜಿನ ಯಜಮಾನನಾದ ಕೊಚ್ಚುವೇಲು ಪಿಳ್ಳೆ ಬಂದಿದ್ದ. ಕೊಚ್ಚುವೇಲು ಪಿಳ್ಳೆ ಅರ್ಧ ಗಂಟೆಯಿಂದ ಅವರನ್ನು ಕಾಯುತ್ತಿದ್ದ. ಆತ ಏಟ್ಟುಮಾನೂರಿನಲ್ಲಿ ಹುಟ್ಟಿ ಬೆಳೆದವನು. ತಿರುವನಂತಪುರದಲ್ಲಿ ಫಾರೆಸ್ಟ್ ಆಫೀಸ್‌ನಲ್ಲಿ ಕೆಲಸದಲ್ಲಿದ್ದು ಪೆನ್ಶನ್ ಪಡೆದವನು. ಮದುವೆ ಮಾಡಿಕೊಂಡ ಮೇಲೆ ತಿರುವನಂತಪುರದಲ್ಲೇ ಖಾಯಂ ಆಗಿ ವಾಸಮಾಡಿಕೊಂಡಿದ್ದ. ಸೆಕ್ರೆಟರಿಯೇಟ್‌ನ ವಿಷಯಗಳನ್ನು ತಿಳಿಯಲು ಬಂದಿದ್ದ. ಆ ಲಾಡ್ಜಿನಲ್ಲಿ ವಾಸಿಸುತ್ತಿದ್ದ ಸೆಕ್ರೆಟರಿಯೇಟ್ ನೌಕರರೂ ಕೊಚ್ಚುವೇಲು ಪಿಳ್ಳೆಯೂ ಸುತ್ತಲೂ ಕುಳಿತು ಮಾತ

ನಾಡುತ್ತಿದ್ದರು. ಕೇಶವ ಪಿಳ್ಳೆ ಮಾತ್ರ ಏನೂ ಮಾತನಾಡಲಿಲ್ಲ. ಅವನಿಗೆ ಹೇಳ ಬೇಕಾದ ಒಂದೇ ಒಂದು ವಿಷಯ ಇದ್ದದ್ದು. ಅವನಿಗೆ ಯಾವ ಶಿಫಾರಸ್ಸೂ ಇಲ್ಲದೆ ಉದ್ಯೋಗವನ್ನು ಕೊಟ್ಟದ್ದು ಮೇನೋನ್. ಆದರೆ ಅವನು ಅದನ್ನು ಹೇಳಲಿಲ್ಲ.

ಕೊಚ್ಚುಣ್ಣಿ ನಾಯರ್ ಎನ್ನುವ ಕ್ಲಾರ್ಕ್ ಹೊಸ ಚೀಫ್ ಸೆಕ್ರೆಟರಿಯ ಕುಟುಂಬದ ವಿಚಾರವಾಗಿ ಕೊಚ್ಚುವೇಲು ಪಿಳ್ಳೆಯ ಹತ್ತಿರ ಕೇಳಿದ. ಒಂದು ನಗುವಿನೊಡನೆ ಆ ಪೆನ್ಶನ್ ಉದ್ಯೋಗಸ್ಥ ಒಂದು ಕಥೆ ಹೇಳತೊಡಗಿದ:

"ಅದನ್ನೆಲ್ಲ ಕೇಳಬೇಡಿ ಪಿಳ್ಳೆ! ಹಿಂದಿನ ಕಾಲದಲ್ಲಿ ಈ ತರಹದ ಕೆಲಸಕ್ಕೆ ಎಲ್ಲ ರನ್ನೂ ನೇಮಿಸುತ್ತಿರಲಿಲ್ಲ. ಒಳ್ಳೆ ಮನೆತನದವನಾಗಿರಬೇಕು. ಒಳ್ಳೆ ಪರಂಪರೆಯುಳ್ಳವ ನಾಗಿರಬೇಕು. ಸತ್ಕುಲದವನಾಗಿರಬೇಕು. ಇವತ್ತು ಕಾಲ ಬದಲಾಯಿಸಿಲ್ಲವೇ?"

ಮೇನೋನನ ಪಕ್ಷದವನಾಗಿದ್ದ ಕೊಚ್ಚುಣ್ಣಿ ನಾಯರ್‌ಗೆ ಆ ಮಾತನ್ನು ಮುಂದು ವರಿಸುವುದು ಹಿಡಿಸಿತು. ಅವನು ಕೇಳಿದ: "ಕೃಷ್ಣನ್ ನಾಯರ್‌ಗೆ ಇದು ಯಾವುದೂ ಇಲ್ಲವೇ?"

ಕೊಚ್ಚುವೇಲು ಪಿಳ್ಳೆ ಅದೆಲ್ಲವೂ ಉಂಟು ಎಂದು ಪರಿಹಾಸ್ಯದ ಧ್ವನಿಯಲ್ಲಿ ಹೇಳಿದ.

"ಆ ಕಥೆ ಕೇಳಿ ನಾಯರ್. ಸೈನ್ಯದಲ್ಲಿ ಸಿಪಾಯಿಗಳಾಗಿ ಕುಮಾರ ಪಿಳ್ಳೆ, ಅನಂತ ಪಿಳ್ಳೆ ಅನ್ನುವ ಇಬ್ಬರು ಅಣ್ಣ ತಮ್ಮಂದಿರಿದ್ದರು. ಅವರಿಬ್ಬರೂ ನನಗೆ ಗೊತ್ತು. ಅವರಿಬ್ಬ ರಿಗೂ ಒಬ್ಬಳೇ ಹೆಂಡತಿಯಿದ್ದದ್ದು. ಹಾಗೆ ನಮ್ಮ ಚೀಫ್ ಸೆಕ್ರೆಟರಿಗೆ ಇಬ್ಬರು ತಂದೆ ಯರು. ಹಿರಿಯ ತಂದೆ ಸತ್ತು ಎರಡೋ ನಾಲ್ಕೋ ವರ್ಷ ಆಗಿರಬೇಕು. ಕಿರಿಯ ತಂದೆ ಇರಬೇಕು ಅಂತ ಕಾಣುತ್ತೆ. ಸರಿಯಾಗಿ ತಿಳಿಯದು. ಇದೇ ಕೃಷ್ಣನ್ ನಾಯರ ಅಣ್ಣ ಒಬ್ಬ ಇದ್ದಾರೆ. ಅವರು ಚಿಟ್ಟಿಕುಳಂದಲ್ಲಿ ವಾಸಮಾಡುವುದು. ಅವರ ಮಗಳಿಗೆ ಸೆಕ್ರೆಟರಿಯೇಟ್‌ನಲ್ಲಿ ಕೆಲಸ."

ಕೊಚ್ಚುಣ್ಣಿ ನಾಯರ್ ಕೇಶವ ಪಿಳ್ಳೆಯ ಹತ್ತಿರ ಕೇಳಿದ: "ಅವಳು ನಿಮ್ಮ ಸೆಕ್ಷನಿ ನಲ್ಲಿದ್ದಾಳಲ್ಲವೆ?"

ಕೇಶವ ಪಿಳ್ಳೆ 'ಹೌದು' ಎಂದು ತಲೆಯಲ್ಲಾಡಿಸಿದ. ಕೊಚ್ಚುವೇಲು ಪಿಳ್ಳೆ ಆ ಕಥೆಯ ಮುಂದಿನ ಭಾಗವನ್ನು ಪ್ರಾರಂಭಿಸಿದ.

"ಈತನಿಗೆ ಮದುವೆಯಾದದ್ದು ಎಲ್ಲಿಂದ ಗೊತ್ತೆ? ಹೇಳ್ತೀನಿ ಕೇಳಿ. ಹಿಂದೆ ಇಲ್ಲಿ ಒಬ್ಬ ಭಯಂಕರನಾದ ಪೇಷ್ಕಾರ್ ಇದ್ದ. ತೆಲುಗರವನು. ಹೆಸರು ಗೋವಿಂದ ರಾಯರು. ದೊಡ್ಡ ಮೀಸೆ. ಗಜನಿಂಬೆಹಣ್ಣಿನ ಬಣ್ಣ. ಆಜಾನುಬಾಹು. ಕೆಂಪಾದ ದಪ್ಪ ಕಣ್ಣುಗಳು. ಗಂಭೀರ ಪ್ರಕೃತಿಯ ಮನುಷ್ಯ. ಆತನ ಕುದುರೆಯ ಆಳು ಗೌರೀಶಪಟ್ಟ ದವನು. ಅವನಿಗೆ ಸುಂದರಿಯಾದ ಒಬ್ಬ ಹೆಂಡತಿಯಿದ್ದಳು. ಅವಳು ಚಾಲದಲ್ಲಿರುವ ಒಬ್ಬ ಪಠಾಣನ ಮಗಳು ಅಂತ ಜನರು ಹೇಳುವುದು. ಗೋವಿಂದರಾಯನಿಗೆ ಕುದುರೆ ಯವನ ಹೆಂಡತಿಯಲ್ಲಿ ಹುಟ್ಟಿದ ಮಗಳು ಚೀಫ್ ಸೆಕ್ರೆಟರಿಯ ಹೆಂಡತಿ."

ಕೊಚ್ಚುಣ್ಣಿ ನಾಯರ್ ಹೇಳಿದ: "ಹಾಗಾದರೆ ವರ್ಣಸಂಕರ !"

ಕೊಚ್ಚುವೇಲು ಪಿಳ್ಳೈ ಪ್ರಾರಂಭಿಸಿದ: "ಆವಳು ತುಂಬ ಸಮರ್ಥೆ. ಕೃಷ್ಣನ್ ನಾಯರ್‌ಗೆ ಹಂತಹಂತವಾಗಿ ಉದ್ಯೋಗ ಸಿಕ್ಕುತ್ತಿದೆ. ಆವಳಿಗೆ ತಾಳ ತಂಬೂರಿ ಹಿಡಿಯೋದು ಗೊತ್ತಿದೆ."

ಕೊಚ್ಚುವೇಲು ಪಿಳ್ಳೈ ಪ್ರಾರಂಭಿಸಿದ; ಕೃಷ್ಣನ್ ನಾಯರ್ ಒಂದೊಂದು ಹಂತದಲ್ಲೂ ಮೇಲಿನ ಉದ್ಯೋಗಕ್ಕೆ ಏರಿದ ಕಥೆಯನ್ನು ವಿವರಿಸಿದ. ಒಂದು ವೇಳೆ ಕೃಷ್ಣನ್ ನಾಯರ್ ದಿವಾನರಾದರೂ ಆಗಬಹುದು.

ಕೇಶವ ಪಿಳ್ಳೈಗೆ ಆ ಕಥೆಗಳು ಸ್ವಲ್ಪ ಆಲೋಚಿಸಬೇಕಾದ ಕಥೆಗಳಾಗಿ ದೊರೆತುವು. ಅಣ್ಣ ತಮ್ಮಂದಿರಾದ ಇಬ್ಬರು ಸೈನಿಕರನ್ನು ತನ್ನ ಕಣ್ಣೆದುರಿನಲ್ಲಿ ಕಾಣುತ್ತಿರುವಂತೆ ಆತನಿಗೆ ತೋರಿತು. ಮರುದಿನ ತಂಗಮ್ಮನೊಡನೆ ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಇದೊಂದು ಸ್ವಾರಸ್ಯವಾದ ವಿಷಯವಾಗಿರುತ್ತದೆ.

"ನಿನ್ನ ಅಜ್ಜನ ಹೆಸರೇನು?" ಎಂದಾಗ ಖಂಡಿತವಾಗಿಯೂ ತಂಗಮ್ಮನ ಮುಖ ಬಿಳುಚಿಕೊಳ್ಳುತ್ತದೆ. ಅಜ್ಜಂದಿರ ಹೆಸರನ್ನಲ್ಲದೆ ಅಜ್ಜನ ಹೆಸರನ್ನು ಹೇಳಲು ಅವಳಿಗೆ ಸಾಧ್ಯವಾಗುವುದಿಲ್ಲ. ಅದೂ ಹೋಗಲಿ. ಆ ಇಬ್ಬರು ಸೈನಿಕರ ಹೆಸರನ್ನು ಬರಿದೇ ಹೇಳಿದರೂ ಅವಳು ಬಿಳುಚಿಕೊಳ್ಳಬಹುದು......... ಹಾಗೆ ಅವಳನ್ನು ವೇದನೆಗೊಳಗು ಮಾಡುವ ಅಪಮಾನವನ್ನುಂಟು ಮಾಡುವ ವಿಷಯಗಳನ್ನು ತಾನೇಕೆ ಆಲೋಚಿಸಬೇಕು ಎಂದುಕೊಂಡ. ಆದರೆ ಅಗತ್ಯ ಬಂದಲ್ಲಿ ಕೇಳಬಹುದಲ್ಲ.

●

# [7]

## ಭಾಗ್ಯಾರಂಭ

ಸೆಕ್ರೆಟರಿಯೇಟ್‌ನಲ್ಲಿ ಚೀಫ್ ಸೆಕ್ರೆಟರಿಯ ಸ್ಥಾನಾರೋಹಣದೊಂದಿಗೆ ಕೆಲವು ಹೊಸ ಹೊಸ ಮಾರ್ಪಾಟುಗಳುಂಟಾಗಲಿವೆಯೆನ್ನುವ ಸುದ್ದಿ ಕೇಳಿಬಂದಿತು. ಕೆಲವು ಸೆಕ್ರೆಟರಿಗಳನ್ನೆಲ್ಲ ಮನೆಗೆ ಕಳುಹಿಸುತ್ತಾರೆ ಎನ್ನುವುದೂ ಕೇಳಿಬಂದಿತು. ಒಂದು ಶುದ್ಧಿ ಕಾರ್ಯ ನಡೆಯಲಿತ್ತು ಅಷ್ಟೆ. ಈ ಸಂದರ್ಭದಲ್ಲಿ ಸಹಾಯ ಮಾಡುವ ಜನರಿರುವವರು ಮೇಲಿನ ಸ್ಥಾನವನ್ನು ಸುಲಭವಾಗಿ ಪಡೆಯಬಹುದಾಗಿತ್ತು. ಅದೊಂದು ಒಳ್ಳೆಯ ಸಂದರ್ಭವಾಗಿತ್ತು.

ಕೇಶವ ಪಿಳ್ಳೆಗೆ ಅಂತಹದೊಂದನ್ನೂ ಆಲೋಚಿಸಲು ಸಾಧ್ಯವಿಲ್ಲ. ಅವನೊಬ್ಬ ಕೆಳದರ್ಜೆಯ ಗುಮಾಸ್ತ. ಆ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ಪಳಗಿದವನೂ ಅಲ್ಲ; ಅನುಭವವೂ ಇಲ್ಲ. ಒಂದು ಪ್ರಮೋಶನ್‌ಗಾಗಿ ಕೂಡ ಆಶೆಪಡುವ ಕಾಲ ಸಮೀಪಿಸಿಲ್ಲ. ಲಾಡ್ಜಿನಲ್ಲಿ ತನ್ನ ಜೊತೆ ವಾಸಿಸುವ ಪದ್ಮನಾಭ ಪಣಿಕ್ಕರ್ ಪಾರ್ಕ್‌ವ್ಯೂ ನಲ್ಲಿರುವ ಸೆಕ್ರೆಟರಿಯ ಪರ್ಸನಲ್ ಸ್ಟಾಫ್‌ನೊಳಗೆ ಸೇರಿಕೊಳ್ಳಲು ಪ್ರಯತ್ನಿಸುತ್ತಿದ್ದ. ಅದು ಅವನು ಆಶಿಸಬಹುದಾದದ್ದೇ. ಕೊಚ್ಚುಣ್ಣಿ ನಾಯರ್‌ಗೆ ತಾನಿರುವ ಸೆಕ್ಷನ್ನಿನಿಂದ ಬದಲಾಯಿಸಿಕೊಳ್ಳಬೇಕು ಅನ್ನಿಸಿದೆ. ಅವರಿಗೆಲ್ಲ ಆ ಕಾರ್ಯವನ್ನು ಸಾಧಿಸುವುದು ಹೇಗೆ ಎನ್ನುವುದು ಗೊತ್ತಿತ್ತು. ಆ ಮಾರ್ಗಗಳನ್ನು ಅವರು ಬಲ್ಲರು. ಇನ್ನು ಮುಂದಿನ ಬದಲಾವಣೆಗಳ ಹೊತ್ತಿನಲ್ಲಿ ಕೇಶವ ಪಿಳ್ಳೆಯೂ ಆಶೆಪಡಬಹುದು, ಶ್ರಮಿಸಬಹುದು. ಕುಳಿತುಕೊಳ್ಳುವುದಕ್ಕೆ ಮೊದಲೇ ಕಾಲು ನೀಡುವುದಕ್ಕೆ ಸಾಧ್ಯವೆ? ಅಂತು ರಾಮ ಚಂದ್ರನ್ ನಾಯರ್ ಸೂಪರಿಂಟೆಂಡೆಂಟ್ ಆಗುವುದಿದ್ದಲ್ಲಿ ತಾನೂ ಈ ಸ್ಥಾನದಿಂದ ಒಂದು ಹಂತ ಮೇಲೇರಬಹುದು. ಒಂದು ಸೀನಿಯರ್ ಕ್ಲಾರ್ಕ್ ಪದವಿಯನ್ನು ಅವನು ಆಶಿಸಬಹುದು.

ಒಂದು ದಿನ ಸಿಪಾಯಿ ಮಾದೇವನ್ ಪಿಳ್ಳೆ ಕೇಳಿದ:

"ನೀವು ಯಾಕೆ ಸಾರ್ ಅಲ್ಲಾಡದೇ ಇದ್ದೀರಲ್ಲ?"

ಕೇಶವ ಪಿಳ್ಳೆ ಅಸಹಾಯಕನಾಗಿ ಹೇಳಿದ: "ನಾನೇನು ಮಾಡಲಿ ಹೇಳು."

ಮಾದೇವನ್ ಪಿಳ್ಳೆ ಕಿಂಡಿ ಹಲ್ಲನ್ನು ತೋರಿಸುತ್ತ ನಗುತ್ತ ಹೇಳಿದ:

"ಏನು ಮಾಡೋದು ಅಂತಲಾ? ನಿಮಗಲ್ಲವಾ ಸಾರ್ ಒಳ್ಳೆ ಕಾಲ ಬರಬೇಕಾದದ್ದು?"

"ನನಗಾ?"

"ಹೌದು, ನಿಮಗೇನೇ !"

"ಅದು ಹೇಗೆ ಹೇಳು?"

ಮಾದೇವನ್ ಪಿಳ್ಳೆ ಹೇಳಿದ:

"ನೋಡಿ ನಲವತ್ತು ವರ್ಷ ಆಯ್ತು ನಾನು ಈ ರೆವಿನ್ಯು ಆಫೀಸಿಗೆ ಬಂದು. ಎಷ್ಟೊಂದು ಜನ ದಿವಾನರು ಬಂದು ಹೋದರು. ಇನ್ನು ಸೆಕ್ರೆಟರಿಗಳಿಗಂತು ಲೆಕ್ಕವೇ ಇಲ್ಲ. ಬುದ್ಧಿವಂತರಾಗಿದ್ದವರು ಯಾವ ಮಾರ್ಗವೂ ಇಲ್ಲದೆ ಇದ್ದ ಸ್ಥಾನದಲ್ಲೇ ಇದ್ದು ಹಣ್ಣಾಗಿ ಸತ್ತುಹೋದರು. ಕೆಲವರು ಬಂದರು, ಮೇಲೇರಿದರು, ಮಿಂಚಿನ ಹಾಗೆ. ಕಣ್ಣು ಮುಚ್ಚಿ ಬಿಡೋ ಅಷ್ಟರಲ್ಲಿ ಆಚೆ ಅಂಚನ್ನ ತಲಪಿದವರೂ ಉಂಟು. ಇದನ್ನೆಲ್ಲ ಈ ಮಾದೇವನ್ ಪಿಳ್ಳೆ ಕಣ್ಣಾರೆ ಕಂಡದ್ದು. ಅದೆಲ್ಲ ಸಣ್ಣ ಮಾರ್ಗದಲ್ಲಿ ನಡೆಯೋದು."

ಒಂದು ನಿಮಿಷ ಬಿಟ್ಟು ಮಾದೇವನ್ ಪಿಳ್ಳೆ ಮತ್ತೆ ಕೆಲವು ಕಥೆಗಳನ್ನು ಹೇಳಿದ: "ಒಂದೇ ದಿನ ಇಬ್ಬರು ಸಮಾನ ವಿದ್ಯಾವಂತರು ಕ್ಲಾರ್ಕುಗಳಾಗಿ ಸೇರಿದರು. ಅವರಲ್ಲಿ ಒಬ್ಬ ಸೆಕ್ರೆಟರಿಯಾದ. ಮತ್ತೊಬ್ಬ ಇನ್ನೂ ಡೆಪ್ಯುಟಿ ತಹಸೀಲ್ದಾರಾಗಿದ್ದಾನೆ. ಇನ್ನೊಂದು ಕಥೆ. ಒಬ್ಬ ಅರಮನೆಯಲ್ಲಿದ್ದ. ಮತ್ತೆ ನೋಡಿದರೆ ರೆವಿನ್ಯೂ ಆಫೀಸಿನಲ್ಲಿ ಜೊತೆಯವರ ಮೇಲಧಿಕಾರಿಯಾಗಿದ್ದ. ಅದು ಯಾರು ಗೊತ್ತೆ? ಈಗ ಮನೆಗೆ ಹೋದ ಚೀಫ್ ಸೆಕ್ರೆಟರಿ." ಆದರೆ ಮಾದೇವನ್ ಪಿಳ್ಳೆಗೆ ಇನ್ನೂ ಒಂದು ವಿಷಯ ಹೇಳುವುದಿತ್ತು.

"ಹತ್ತು ಕಾಸು ಸಂಪಾದಿಸಬೇಕೋ ಈ ಆಫೀಸಿನಿಂದ ಹೊರಗೆ ಹೋಗಬೇಕು. ಅದಕ್ಕೆಲ್ಲ ಇಲ್ಲಿದ್ದರೆ ಸಾಧ್ಯವಿಲ್ಲ."

ಕೇಶವ ಪಿಳ್ಳೆಗೆ ಯಾವುದೂ ಅರ್ಥವಾಗದೆ ಕೇಳಿದ:

"ಅದಕ್ಕೆ ನಾನೇನು ಮಾಡಬೇಕು ಹೇಳು? ನನಗೆ ಸಹಾಯ ಮಾಡೋದಕ್ಕೆ ಯಾರಿದ್ದಾರೆ? ನನಗೆ ಸರ್ವೀಸಿದೆಯಾ?"

"ಸರ್ವಿಸ್ ಗಿರ್ವಿಸ್ ಎಲ್ಲ ಅಲ್ಲಿರಲಿ ಪಿಳ್ಳೆ. ಅದೊಂದೂ ಬೇಡಿ. ಪಿಳ್ಳೆಗೆ ಬಿ.ಎ. ಆಗಲಿಲ್ಲವಾ?"

"ಆದರೇನು ಬಂತು?"

ಮಾದೇವನ್ ಪಿಳ್ಳೆ ಕೇಶವ ಪಿಳ್ಳೆಯ ಕಿವಿಯಲ್ಲಿ ಒಂದು ಗುಟ್ಟನ್ನು ಹೇಳಿದ:

"ಪಿಳ್ಳೆ, ಹೊಸ ಚೀಫ್ ಸೆಕ್ರೆಟರಿ ಜೊತೆಯಲ್ಲಿ ಪಾರ್ಕ್‌ವ್ಯೂ ಬಂಗಲೆಗೆ ಹೋಗಿ. ಐದು ವರ್ಷದೊಳಗೆ ಇಲ್ಲಿಗೆ ಒಂದು ಕಣ್ಣಾದ ಸ್ಥಳಕ್ಕೆ ಹಿಂದಿರುಗಬಹುದು. ಆ ಮೇಲೆ ಹೊರಗೆ ಪೇಷ್ಕಾರ್ ಆಗಿ ಹೋಗಿ. ಹತ್ತು ಹಣ ಸಂಪಾದನೆ ಮಾಡಿ. ಆಗ......... ಮಾದೇವನ್ ಪಿಳ್ಳೆ ಬದುಕಿದ್ದರೆ ಅವನನ್ನು ಒಂದು ಸಲ ನೆನಸಿಕೊಳ್ಳಿ" ಎಂದು ಹೇಳಿ ಆತ್ಮಸಂತೋಷದಿಂದ ಒಮ್ಮೆ ನಕ್ಕ. ತಕ್ಷಣ ಆ ನಗುವನ್ನು ಬದಲಿಸಿ ತಾನು ಮಾತನಾಡುತ್ತಿದ್ದ ವಿಷಯಕ್ಕೆ ಬಂದ.

"ಶೇಖರ ಪಿಳ್ಳೆ ಜೊತೇಲಿ ಇವತ್ತೇ ಹೋಗಿ. ಮತ್ತೊಬ್ಬ ಬರೋ ಮೊದಲು ಅದು ಈಗಲೇ ಮಾಡಬೇಕಾದ ಕೆಲಸ. ತಡಮಾಡಬೇಡಿ."

ಈ ಶೇಖರ ಪಿಳ್ಳೆ ಯಾರು ಎಂದು ಕೇಶವ ಪಿಳ್ಳೆಗೆ ಗೊತ್ತಿತ್ತು. ಮಾದೇವನ್ ಪಿಳ್ಳೆ ಹೇಳಿ ನಿಲ್ಲಿಸಲಿಲ್ಲ.

"ನೀವು ಭಾಗ್ಯವಂತರು. ತುಂಬ ಭಾಗ್ಯವಂತರು. ನೀವು ಹಿಡಿದಿರೋದು ಪರವಾಯಿಲ್ಲ. ಒಳ್ಳೆ ಕಾಲದಲ್ಲಿ ಒಳ್ಳೇದನ್ನೇ ಹಿಡಿದಿದ್ದೀರಿ."

ಒಂದು ಕ್ಷಣ ಬಿಟ್ಟು ಮಾದೇವನ್ ಪಿಳ್ಳೆ ನಿಜವಾದ ಅಭ್ಯುದಯಾಕಾಂಕ್ಷಿಯಾಗಿ ಹಾರೈಸುತ್ತ ಹೇಳಿದ:

"ಅದೊಂದು ಒಳ್ಳೆ ಹುಡುಗಿ. ಮರ್ಯಾದಸ್ಥೆ. ನಿಮಗೆ ಒಳ್ಳೆ ಜೋಡಿ. ಶೇಖರ ಪಿಳ್ಳೆಯೂ ಒಳ್ಳೆ ಮನುಷ್ಯ. ಚೀಫ್ ಸೆಕ್ರೆಟರಿಯೂ ಶೇಖರ ಪಿಳ್ಳೆಯೂ ಒಬ್ಬ ತಾಯಿ ಹೊಟ್ಟೇಲಿ ಹುಟ್ಟಿದ ಅಣ್ಣತಮ್ಮಂದಿರು. ಅಣ್ಣ ಹೇಳಿದರೆ ಚೀಫ್ ಸೆಕ್ರೆಟರಿ ತಳ್ಳಿ ಹಾಕೋದಿಲ್ಲ."

ಕೇಶವ ಪಿಳ್ಳೆಯ ಕಣ್ಣಿನ ಮುಂದೆ ತನ್ನ ಅಭ್ಯುದಯದ ರಾಜಮಾರ್ಗ ಕಾಣಿಸ ತೊಡಗಿತು. ಆ ಮಾರ್ಗ ಆತನನ್ನು ಕೈಬೀಸಿ ಕರೆಯುತ್ತಿತ್ತು. ಆ ಮಾರ್ಗದಲ್ಲಿ ತಿರುವು ಮುರುವು ಒಂದೂ ಇರಲಿಲ್ಲ. ಒಳ್ಳೊಳ್ಳೆಯ ಸ್ಥಾನಗಳು ಮಧ್ಯೆ ಮಧ್ಯೆ ಇವೆ, ವಿಶ್ರಾಂತಿಯ ಸ್ಥಳಗಳಾಗಿ. ಎಲ್ಲವೂ ದೃಷ್ಟಿ ಹಾಯುವಷ್ಟು ದೂರದಲ್ಲೇ ಇವೆ. ಚೀಫ್ ಸೆಕ್ರೆಟರಿ ಸ್ಥಾನವನ್ನೇ ಯಾಕೆ ಆಶೆ ಪಡಬಾರದು? ನಿಜವಾಗಿಯೂ ಇವು ಜೀವನದಲ್ಲಿ ಒಳ್ಳೆಯ ದಿನಗಳು. ಅದೃಷ್ಟಕಾಲದ ಆರಂಭದ ದಿನಗಳು. ಆಲೋಚನೆ ಆ ಘಟ್ಟವನ್ನು ತಲಪಿದಾಗ ಕಿಟ್ಟುಮಾವನ ಮಾತುಗಳು ಅವನ ಕಿವಿಯಲ್ಲಿ ಪ್ರತಿಧ್ವನಿಸಿದುವು.

"ಅವಳು ಭಾಗ್ಯವಂತೆ."

ಉನ್ನತಿಯ ಆ ಮಾರ್ಗದಲ್ಲಿದ್ದ ಪ್ರಕಾಶ ಮಂಕಾದಂತೆ ತೋರಿತು. ಮತ್ತೆ ಮತ್ತೆ ಆ ಮಾತುಗಳು ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದುವು:

"ಅವಳು ಭಾಗ್ಯವಂತೆ."

ಪುನಃ ಮಾದೇವನ್ ಪಿಳ್ಳೆ ಹೇಳಿದ: "ಈ ಮಧ್ಯೆ ಈ ಮಾದೇವನ್ ಪಿಳ್ಳೆ ಎಷ್ಟು ಜನರಿಗೆ ದಾರಿ ತೋರಿಸಿ ಕೊಟ್ಟಿದ್ದಾನೆ! ಆ ದಾರಿಗಳೆಲ್ಲ ಮಾದೇವನ್ ಪಿಳ್ಳೆಗೆ ಗೊತ್ತು. ಆದರೆ ಒಂದು ವಿಷಯ ಇದೆ ಪಿಳ್ಳೆ. ಅವರ್‍ಯಾರೂ ನನ್ನನ್ನು ಆ ಮೇಲೆ ಜ್ಞಾಪಿಸಿಕೊಳ್ಳೋದಿಲ್ಲ."

ಕೇಶವ ಪಿಳ್ಳೆ ಹೇಳಿದ: "ನಾನು ಯಾರೇ ಆದರೂ ನಿಮ್ಮನ್ನು ಜ್ಞಾಪಿಸಿಕೊಳ್ಳದೇ ಇರೋದಿಲ್ಲ."

ತಂಗಮ್ಮ ಬರುತ್ತಿದ್ದುದನ್ನು ಮಾದೇವನ್ ಪಿಳ್ಳೆ ನೋಡಿದ. ಆ ಕಡೆಗೆ ಕಣ್ಣು ತೋರಿಸಿ ಮಾದೇವನ್ ಪಿಳ್ಳೆ ಸೂಚನೆ ಕೊಟ್ಟ:

"ಅಲ್ಲಿ ನೋಡಿ ಬರ್‍ತಿದ್ದಾಳೆ. ಹಿಡಿದುಕೊಳ್ಳಿ ಬಲವಾಗಿ ಹಿಡಿದುಕೊಳ್ಳಿ."

ಯಾವುದೋ ಗುಟ್ಟಿನ ಸುದ್ದಿಯನ್ನು ಹೇಳಿ ಮಾದೇವನ್ ಪಿಳ್ಳೆ ಹೋಗುತ್ತಿರುವುದಾಗಿ ತಂಗಮ್ಮನಿಗೆ ತೋರಿತು. ಅವಳು ಹೇಳಿದಳು:

"ಅಣ್ಣಾ ಅವ್ರು ಏನೋ ಕಿತಾಪತಿ ಮಾಡಿ ಹೋಗ್ತಿದ್ದಾರೆ."

ಮಾದೇವನ್ ಪಿಳ್ಳೆ ಹಿಂದಿರುಗಿ ನಿಂತು ತಂಗಮ್ಮನ ಹತ್ತಿರ ಹೇಳಿದ: "ಇಬ್ಬರಿಗೂ ಒಳ್ಳೇದಾಗೋ ಮಾರ್ಗ ಹೇಳಿಕೊಟ್ಟೆ. ಏನು ಅಂತ ಪಿಳ್ಳೆ ಹತ್ರ ಕೇಳಿ."

ಅವನಿಗೆ ಒಂದು ವಿಷಯ ಹೇಳಬೇಕು ಅನ್ನಿಸಿತ್ತು. ಅದು ಹೀಗೆ ಹೊರಬಿದ್ದಿತು:

"ತಂದೇನ ಕರಕೊಂಡು ಚಿಕ್ಕಪ್ಪನ ಹತ್ರ ಹೋಗಬೇಕು. ಹೋಗಿ ಹೇಳಬೇಕು; ನಮ್ಮ ಕಡೆ ಮನುಷ್ಯನನ್ನೇ ಪಾರ್ಕ್ ವ್ಯಾನಲ್ಲಿ ನೇಮಿಸಬೇಕು ಅಂತ."

ಮಾದೇವನ್ ಪಿಳ್ಳೆ ಅದನ್ನೂ ಹೇಳಿ ಮುಗಿಸಿದ್ದ. ಆದ್ದರಿಂದ ಕೇಶವನ್ ಪಿಳ್ಳೆಗೆ ಹೇಳಬೇಕಾಗಿ ಬರಲಿಲ್ಲ. ಕಣ್ಣು ಮಿಟುಕಿಸಿ ಮಾದೇವನ್ ಪಿಳ್ಳೆ ಹೇಳಿದ: "ಆದರೆ ಒಂದು ವಿಷಯ ಇದೆ. ಅಕ್ಕಪಕ್ಕದ ಕುರ್ಚಿಯಲ್ಲಿ ಕುಳಿತು ಹರಟೆಹೊಡೆಯೋದು, ಎಲ್ಲರೂ ಬರೋದಕ್ಕಿಂತ ಮೊದಲೇ ಒಂದು ಅಲಮೇರದ ಮರೆಯಲ್ಲಿ......... ಅದೊಂದೂ ನಡೆಯೋದಿಲ್ಲ. ಇಲ್ಲದೆ ಇದ್ದರೆ ಇದೆಲ್ಲ ಯಾಕೆ?"

ಮಾದೇವನ್ ಪಿಳ್ಳೆ ಅಲ್ಲಿಂದ ಹೊರಟ. ಕೇಶವ ಪಿಳ್ಳೆಯೂ ತಂಗಮ್ಮನೂ ಪರಸ್ಪರ ನೋಡಿ ನಕ್ಕರು.

"ಆ ಮುದುಕ ಹೇಳಿದ್ದೇನು?" ಎಂದು ತಂಗಮ್ಮ ಕೇಳಿದಳು. ಸ್ವಲ್ಪವನ್ನೂ ಬಿಡದೆ ಕೇಶವ ಪಿಳ್ಳೆ ವಿವರಿಸಿದ. ಆ ಮೇಲೆ ಕೇಶವ ಪಿಳ್ಳೆ ಅಸಹಾಯಕನಾಗಿ ಹೇಳಿದ:

"ನನಗೆ ಸಹಾಯ ಮಾಡೋರು ಯಾರಿದ್ದಾರೆ? ಯಾರೂ ಇಲ್ಲದ ಬಡಗು ದಿಕ್ಕಿನವನು. ನನಗೆ ತಿರುವನಂತಪುರದಲ್ಲಿ ಯಾರೂ ಇಲ್ಲ. ದೊಡ್ಡ ಮನುಷ್ಯರ ನೆನಪಿನಲ್ಲಿರೋದಕ್ಕೂ ಆಗಿಲ್ಲ."

ತಂಗಮ್ಮ ಕೆಳತುಟಿಯನ್ನು ಇಳಿಬಿಟ್ಟು ತಲೆ ಅಲ್ಲಾಡಿಸುತ್ತಾ ಹೇಳಿದಳು: "ಯಾರೂ ಇಲ್ಲ, ಯಾರೂ ಇಲ್ಲ. ಅಯ್ಯೋ ಪಾಪ!"

ಅನಂತರ ಅವಳು ಗಟ್ಟಿಯಾಗಿ ನಕ್ಕಳು. ನಕ್ಕ ನಂತರ ಅವಳು ನಟ್ಟ ದೃಷ್ಟಿಯಲ್ಲಿ ನೋಡಿದಳು. ಅವಳ ಕಣ್ಣುಗಳು, ಆಹಾರವನ್ನು ಕಂಡು ಹಸಿದ ಕಣ್ಣುಗಳಂತಿದ್ದುವು.

"ಎಲ್ಲಿ, ಆ ಮುಖ ಒಮ್ಮೆ ನೋಡ್ತೀನಿ."

ಪೆನ್ನಿನ ತುದಿಯಿಂದ ಅವನ ಕೆನ್ನೆಯ ಮೇಲೆ ಮೆಲ್ಲನೆ ಚುಚ್ಚಿದಳು. ಕೇಶವ ಪಿಳ್ಳೆ ಕೇಳಿದ:

"ಉಂಟಾ? ನನಗೆ ಸಹಾಯ ಮಾಡೋರು ಇದ್ದಾರಾ?"

ಅಷ್ಟು ಹೊತ್ತಿಗೆ ಹರಿಹರಯ್ಯರ್ ಬಂದರು. ಅವರಿಬ್ಬರನ್ನೂ ಸೂಕ್ಷ್ಮವಾಗಿ ನೋಡಿ ಹೇಳಿದರು:

"ಹುಡುಗರಾ ಇದು ಒಳ್ಳೇದಲ್ಲ."

ಕೇಶವ ಪಿಳ್ಳೆ ಕೇಳಿದ:

"ಯಾವುದು ಸ್ವಾಮಿ?"

"ಯಾವುದೂ ಇಲ್ಲ. ನಾನು ಸುಮ್ಮನೆ ಹೇಳಿದೆ ಅಷ್ಟೆ."

ಆಫೀಸು ಪ್ರಾರಂಭವಾಯಿತು. ಗೋವಿಂದನ್ ನಾಯರ್ ಕೇಳಿದರು: "ಪಾರ್ಕ್ ವ್ಯೂವಿನ ಪರ್ಸನಲ್ ಸ್ಟಾಫ್ ನೇಮಕ ಮಾಡಿ ಆಯ್ತಾ ತಂಗಮ್ಮಾ?"

ಒಂದೇ ಮಾತಿನಲ್ಲಿ ತಂಗಮ್ಮ ಉತ್ತರಿಸಿದಳು:

"ನನಗೆ ಗೊತ್ತಿಲ್ಲ."

ಕೇಶವ ಪಿಳ್ಳೆ ತಂಗಮ್ಮನ ಮುಖದ ಕಡೆ ನೋಡಿದ. ಅನಂತರ-ಗೋವಿಂದನ್ ನಾಯರ್ ಹೇಳಿದರು: "ತುಂಬ ಜನ ಅದಕ್ಕಾಗಿ ಪ್ರಯತ್ನ ಪಡ್ತಿದ್ದಾರೆ. ಕೇಳಿಸ್ತಾ ಸ್ವಾಮಿ? ಜನ ಯಾಕೆ ಹೀಗೆ ಅದಕ್ಕೋಸ್ಕರ ತಳ್ಳಾಡ್ತಾರೆ?"

ಹರಿಹರಯ್ಯರ್ ಹೇಳಿದರು:

"ಅಲ್ಲಿ ಕೀ ಪೊಸಿಷನ್ಸ್ ಇರುತ್ತೆ."

ಗೋವಿಂದನ್ ನಾಯರ್‌ಗೆ ನಂಬಿಕೆ ಬರಲಿಲ್ಲ.

"ಯಾವ ಕೀ ಪೊಸಿಷನ್ಸ್?"

ಪ್ರಭಾಕರನ್ ನಾಯರ್ ಕೇಳಿದ: "ಯಾರೆಲ್ಲ ಪ್ರಯತ್ನಪಡ್ತಿದ್ದಾರೆ?"

ಗೋವಿಂದನ್ ನಾಯರ್ ಹೇಳಿದರು: "ತುಂಬ ಜನರು. ತುಂಬ ಜನರು. ತಿರುವ ನಂತಪುರದ ಸಾಹುಕಾರರು. ಎಂ.ಎಲ್.ಸಿ.ಗಳು ಎಲ್ಲ ಓಡಾಡ್ತಿದ್ದಾರೆ. ನನಗೆ ಇದೊಂದು ತರಹದ ಹುಚ್ಚು ಅನ್ನಿಸುತ್ತೆ."

ತಂಗಮ್ಮ ಶ್ರದ್ಧೆಯಿಂದ ಏನನ್ನೋ ಬರೆಯುತ್ತ ಕುಳಿತಿದ್ದಳು. ಯಾರಿಗೂ ಗೊತ್ತಿಲ್ಲದಂತೆ ಒಂದು ಕಾಗದದ ಚೂರನ್ನು ಅವಳು ಕೇಶವ ಪಿಳ್ಳೆಯ ಮೇಜಿನ ಮೇಲಿರಿಸಿದಳು.

ಅದರಲ್ಲಿ ಹೀಗೆ ಬರೆದಿತ್ತು: "ಯಾರು ಬೇಕಾದರೂ ಪ್ರಯತ್ನ ಮಾಡಲಿ. ನಾವೂ ಒಂದು ಕೈ ನೋಡೋಣ. ಚಿಂತೆ ಮಾಡೋದು ಬೇಡ."

ಕೇಶವ ಪಿಳ್ಳೆ ಉಲ್ಲಾಸದಿಂದಿದ್ದ. ಹಾಗಾಗಲು ಕಾರಣವಿದೆಯಲ್ಲ! ಒಳ್ಳೆಯ ಕಾಲದಲ್ಲಿ ಕೈಬೀಸಿ ಕರೆದು ಕೈಹಿಡಿದುಕೊಳ್ಳುವುದಾದಾಗ ಯಾರಿಗಾದರೂ ಉತ್ಸಾಹ ವುಂಟಾಗುತ್ತದೆ. ಆ ಉಲ್ಲಾಸಕ್ಕೆ ಒಂದು ಹಿರಿಮೆಯಿದೆ. ಆ ದೊಡ್ಡ ರಸ್ತೆಗಿಳಿದದ್ದಾ ಯಿತು. ಭವಿಷ್ಯವನ್ನು ಕುರಿತು ಒಂದೇ ಒಂದು ವಿಷಯವೂ ತಿಳಿಯುತ್ತಿಲ್ಲ. ಒಂದು ವೇಳೆ, ತೀರ್ಮಾನವಾಗಿದೆ ಎಂದೇ ಇಟ್ಟುಕೊಳ್ಳೋಣ. ಪಾರ್ಕ್ ವ್ಯೂನಲ್ಲಿ ಕೆಲಸ ಸಿಕ್ಕ ಬಹುದು. ಅದು ಒಂದು ಒಳ್ಳೆಯ ಅವಕಾಶ. ಅದರಲ್ಲಿ ಸಂಶಯವಿಲ್ಲ. ಭಕ್ತಿವಿಲಾಸ ದಲ್ಲೂ ಅರಮನೆಯ ವರೆಗೆ ಆತ ಎಲ್ಲರಿಗೂ ಬೇಕಾದವನಾದ ಎಂದೇ ಇರಲಿ. ಹಾಗೆ

ಉದ್ಯೋಗದಲ್ಲಿ ಮೇಲೇರಲು ಸಾಧ್ಯತೆಯೂ ಕೈಗೂಡಿತು ಎಂದಿಟ್ಟುಕೊಳ್ಳೋಣ. ಆದರೆ ಕೇಶವ ಪಿಳ್ಳೆ ಎನ್ನುವ ಮನುಷ್ಯ ಈಗ ಒಮ್ಮೆಯೂ ಬಿಡಿಸಿಕೊಳ್ಳಲು ಸಾಧ್ಯವಿಲ್ಲದ ಒಂದು ಕುಣಿಕೆಯಲ್ಲಿ ಸಿಕ್ಕಿಬಿದ್ದಿದ್ದಾನೆ. ಈ ಅನುಕೂಲತೆಗಳೆಲ್ಲ ದೊರೆಯುತ್ತಿರುವುದು ತಂಗಮ್ಮನನ್ನು ಮದುವೆ ಮಾಡಿಕೊಳ್ಳುತ್ತಾನೆ ಎನ್ನುವ ನಂಬಿಕೆಯಿಂದ. ಶೇಖರ ಪಿಳ್ಳೆ ತಮ್ಮನೊಡನೆ ಹೇಳಿದುದು ಹೀಗಿರಬಹುದು: "ನಮ್ಮ ತಂಗಮ್ಮನನ್ನು ಮದುವೆ ಮಾಡಿಕೊಳ್ಳೋ ಹುಡುಗನನ್ನ ನೀನು ಜೊತೇಲಿ ಕೂರಿಸಿಕೊಂಡು ಕೆಲಸ ಹೇಳಿಕೊಟ್ಟು ಮೇಲೆ ತರಬೇಕು."

ಚಿಕ್ಕಮ್ಮನ ಹತ್ತಿರ—ಚೀಫ್ ಸೆಕ್ರೆಟರಿಯ ಪತ್ನಿಯ ಹತ್ತಿರ—ಒಂದು ಪಕ್ಷ ತಂಗಮ್ಮನೂ ಹೇಳಬಹುದು.

ಇಲ್ಲಿ ಈಗ ನಡೆಯುತ್ತಿರುವುದೇ ಬೇರೆ. ಅಂದು ತೋಟಪ್ಪಳ್ಳಿಯಲ್ಲಿ ಇಳಿದು ಮನೆಗೆ ಹಿಂದಿರುಗಬಾರದಿತ್ತು. ಮೊದಲೇ ಈ ಮದುವೆ ಇಷ್ಟವಿಲ್ಲ ಎಂದು ತಂದೆಯ ಹತ್ತಿರ ಖಡಾಖಂಡಿತವಾಗಿ ಹೇಳಬೇಕಾಗಿತ್ತು. ಆ ಮಾತು ತಂದೆಯನ್ನು ನಡುಗಿಸುತ್ತಿತ್ತು ಎನ್ನುವುದು ನಿಜ. ತಂದೆಗೆ ವಿಪರೀತ ಸಿಟ್ಟು ಬರುತ್ತಿತ್ತು ಎನ್ನುವುದೂ ನಿಜ. ತಾಯಿ ತುಂಬ ಅಳುತ್ತಿದ್ದಳು. ಭಾವನೂ ದೂರ ನಿಲ್ಲುತ್ತಿದ್ದ. ನಿಂದೆಯ ಮಾತುಗಳನ್ನು ಅಕ್ಕ ತನ್ನ ಗಂಡನಿಂದ ಕೇಳಬೇಕಾಗಿ ಬರುತ್ತಿತ್ತು. ಊರಿನ ಜನರಲ್ಲಿ ಕೆಲವರು ಕೇಶವ ಪಿಳ್ಳೆಯ ಪಕ್ಷ ಹಿಡಿದು ವಾದಿಸುವವರೂ ಇರುತ್ತಿದ್ದರು. ಒಂದು ಬಿರುಗಾಳಿಯ ನಂತರ ಎಲ್ಲವೂ ಸಮಾಧಾನವಾಗುತ್ತಿತ್ತು. ಒಂದು ವಿಷಯ ನಿಜ. ಬಹಳ ಕಾಲದವರೆಗೆ ಉಳಿಯುವಂತಹ ವ್ಯತ್ಯಾಸವೋ ಸಿಟ್ಟೋ ತಂದೆಗೂ ತಾಯಿಗೂ ಉಳಿದಿರುತ್ತಿರಲಿಲ್ಲ. ಅವರಿಗೆ ಅವನೊಬ್ಬನೇ ಮಗ. ಅಕ್ಕನಿಗೆ ಏಕೈಕ ಸಹೋದರ. ವಿಶೇಷವಾಗಿ ಹೀಗೆ ಮೆಟ್ಟಿಲುಮೆಟ್ಟಿಲಾಗಿ ಉದ್ಯೋಗದಲ್ಲಿ ಮೇಲೇರಿ ಒಳ್ಳೆಯದಾಗುವಾಗ ತಂದೆಯ ಅಭಿಮಾನದಲ್ಲಿದ್ದ ಬಿಗುಮಾನ ಸಡಿಲಗೊಳ್ಳುತ್ತಿತ್ತು. ಎಲ್ಲವೂ ಸರಿಹೋಗುತ್ತಿತ್ತು.

ಆ ದೌರ್ಬಲ್ಯವನ್ನು ನೆನಸಿಕೊಂಡು ಆತ ಸಂಕಟಪಟ್ಟ. ಕಷ್ಟಕ್ಕಿಟ್ಟುಕೊಂಡಿತು. ಇದೊಂದೂ ಬೇಡ. ಮೂವತ್ತನೇ ತಾರೀಖು ಮದುವೆ ತೀರ್ಮಾನಿಸಿದ್ದೇವೆ ಎಂದು ಹೇಳಿದಾಗ ಮುಖ ಬಾಡಿಸಿಕೊಂಡು ತುಂಬ ಅತ್ತಿದ್ದರಾದರೂ ಆಗಿತ್ತು. ಅಳುವುದನ್ನು ನೋಡಿ ತಾಯಿ ತನ್ನ ಪಕ್ಷ ವಹಿಸುತ್ತಿದ್ದಳೋ ಏನೋ! ಆದರೆ ಅದಾವುದೂ ನಡೆಯಲಿಲ್ಲ. ನಡೆದದ್ದೇ ಬೇರೆ.

ಹಣೆ ಬರಹ! ಆ ಹೆಣ್ಣು ಹೆಂಡತಿಯಾಗಬೇಕು ಎಂದಿತ್ತು.

"ಅವಳು ಭಾಗ್ಯವಂತೆ!"

ಸ್ಪಷ್ಟವಾಗಿ ಆ ಮಾತು ಕಿವಿಯಲ್ಲಿ ಮೊಳಗುತ್ತಿದೆ. ಒಮ್ಮೆಯೂ ಅಳಿಸದ ರೀತಿಯಲ್ಲಿ ಕಿಟ್ಟುಮಾವನ ಮಾತು ಹೃದಯಫಲಕದಲ್ಲಿ ಕೆತ್ತಿದಂತಿದೆ.

ಕೇಶವ ಪಿಳ್ಳೆಗೆ ಅದು ಸತ್ಯವಾಗಿರಬೇಕು ಎನ್ನಿಸಿತು. ಅವಳು ಅದೃಷ್ಟವಂತೆ ಯಾಗಿರಬೇಕು ಎಂದು.

ಒಬ್ಬಳಿಗೆ ಕತ್ತಿನಲ್ಲಿ ಮಾಂಗಲ್ಯ ಕಟ್ಟಿ ಒಡವೆ ವಸ್ತ್ರ ಕೊಟ್ಟು ಮನೆಯಲ್ಲಿ ಬಿಟ್ಟು ಹಿಂದಿರುಗಿ ನೋಡದಂತೆ ಆತ ತಿರುವನಂತಪುರಕ್ಕೆ ಬಂದದ್ದು. ಆ ಹೆಣ್ಣಿನ ಮನಸ್ಸಿ ನಲ್ಲುಂಟಾಗುವ ನೋವನ್ನು ಕುರಿತು ಆತ ಆಲೋಚಿಸಿಲ್ಲ. ಜೀವನದ ಅಭ್ಯುದಯ ವನ್ನು ಕುರಿತ ಸ್ವಪ್ನಗಳಿಂದ ಅವನು ಆವರಿಸಿದ್ದ. ಆಗ ಮತ್ತೊಂದು ವ್ಯಕ್ತಿಯ ವಿಕಾರ ಗಳಿಗೆ ಸ್ಥಾನವಿಲ್ಲದಂತಾಯಿತು.

ಅವನು ತಿರುವನಂತಪುರಕ್ಕೆ ಬರುವಾಗ ಇದೊಂದನ್ನೂ ಆಲೋಚಿಸಿರಲಿಲ್ಲ. ಕೆಲಸ ಸಿಕ್ಕಿದ್ದೇ ಪುಣ್ಯ. ಇಂದು ಈ ಸಂದರ್ಭ ರೂಪುಗೊಂಡು ಬರುತ್ತಿರುವುದೂ ಅವನ ಅದೃಷ್ಟದಿಂದಾಗಿ. ಈಗ ಅವನಿಗೆ ಒಂದು ಸ್ವತಂತ್ರ ನೆಲೆ ಸಿಕ್ಕಿತ್ತು. ತನ್ನ ಅದೃಷ್ಟದ ಬಗ್ಗೆ ನಂಬಿಕೆಯಿದೆ. ಅದೇ ಆ ಸ್ವತಂತ್ರ ನೆಲೆ. ಈ ವಾಹಿನಿಯಲ್ಲಿ ಮುಂದೆ ಸಾಗುವುದು ಅಷ್ಟೆ. ಅದು ಇದು ಆಲೋಚಿಸಿಕೊಂಡು ಹೆದರಬೇಕಾಗಿಲ್ಲ. ಸಾಗುವ ವರೆಗೂ ಈ ದೋಣಿ ಸಾಗಲಿ.

ಅರ್ಧ ದಾರಿಯಲ್ಲಿ ಸುಳಿಗೆ ಸಿಕ್ಕುವುದಿದ್ದಲ್ಲಿ ಹಾಗೆಯೇ ಆಗಲಿ. ತಂಗಮ್ಮನಿಗೆ ತನ್ನ ಎಲ್ಲ ವಿಷಯಗಳು ತಿಳಿಯುವುದಿದ್ದಲ್ಲಿ ಅದೂ ಆಗಲಿ. ಚೀಫ್ ಸೆಕ್ರೆಟರಿಗೆ ತನ್ನ ವಿಷಯವೆಲ್ಲ ಗೊತ್ತಾಗಿ ತನ್ನನ್ನು ವಂಚಕನೆಂದು ಭಾವಿಸುವುದಿದ್ದರೆ ಭಾವಿಸಿಕೊಳ್ಳಲಿ. ಅದೃಷ್ಟವಶಾತ್ ತಂಗಮ್ಮನ ಚಿಕ್ಕಪ್ಪ ಚೀಫ್ ಸೆಕ್ರೆಟರಿಯ ಸ್ಥಾನದಿಂದ ಇಳಿದು ಹೋಗ ಬೇಕಾಗಿಯೂ ಬರುವುದಿಲ್ಲವೆ? ಆಗ ತೊಂದರೆಗಳು ತಪ್ಪಲೂಬಹುದು. ಏನು ಬರುವುದಿದೆಯೋ ಅದೆಲ್ಲ ಬರಲಿ ಎನ್ನುವ ಧೈರ್ಯ ಅವನಿಗುಂಟಾಯಿತು.

ಆಗಲೂ ಕಿಟ್ಟುಮಾವನ ಮಾತು ಕಿವಿಯೊಳಗೆ ಮೊಳಗುತ್ತಿತ್ತು:

"ಅವಳು ಭಾಗ್ಯವಂತೆ."

ಹೌದೆ? ಇದೆಲ್ಲವೂ ಅದರ ಲಕ್ಷಣವೆಂದು ಹೇಳದೆ ಮತ್ತೇನು ಹೇಳುವುದು?

ಆ ದಿನ ಕೊಟ್ಟೆಯಂಬಲ ತೆರೆದಿಡಬೇಕೆಂದು ಕೇಶವ ಪಿಳ್ಳೆ ತಾನಾಗಿಯೇ ಹೇಳಿದ. ಯಾವಾಗಲೋ ಒಂದು ದಿನ ಅಲ್ಲ. ಯಾವಾಗಲೂ. ಅವಳು ಅವನ್ನು ಅಂಗೀಕರಿಸಿದಳು. ತೆರೆದಿಟ್ಟಳು. ಅವಳಿಗೆ ಅದು ಇಷ್ಟ. ತಂಗಮ್ಮನನ್ನು ತನ್ನ ಹತ್ತಿರದವಳನ್ನಾಗಿ ಮಾಡಿ ಕೊಳ್ಳಲು ಮನಃಪೂರ್ವಕವಾಗಿ ಅವನು ಇದು ವರೆಗೆ ಶ್ರಮಿಸಿಲ್ಲ. ಈಗ ಅವಳನ್ನು ತನ್ನ ಹತ್ತಿರದವಳನ್ನಾಗಿ ಮಾಡಿಕೊಳ್ಳುತ್ತಿದ್ದಾನೆ. ಅವಳನ್ನು ಬರಸೆಳೆದು ಆಲಿಂಗಿಸಿಕೊಳ್ಳು ತ್ತಿದ್ದಾನೆ. ಅವಳ ಹೆಣ್ಣುತನ ಎಚ್ಚೆತ್ತಿತು. ಸವಿಯಬಾರದ್ದನ್ನು ಸವಿದಾಗ ಅವಳಿಗೆ ಹುಚ್ಚು ಹಿಡಿಯಿತು. ಅವಳಲ್ಲಿದ್ದ ಉತ್ಸಾಹ ಬುದ್ಧಿಪೂರ್ವಕವಾಗಿ ಲೆಕ್ಕಹಾಕಿ ಊದಿ ಹೊತ್ತಿಸಿ ಆ ಹುಚ್ಚನ್ನು ದೊಡ್ಡದು ಮಾಡಿತ್ತು. ಅವಳು ತನ್ನನ್ನೇ ಮರೆತಳು. ಇಂದು ಅವಳು ವಿಕಸಿಸುತ್ತಿರುವ ಹೂವಲ್ಲ. ವಿಕಸನ ಪೂರ್ತಿಗೊಂಡು ಸದಾ ದುಂಬಿಗಾಗಿ

ಕಾಯುತ್ತಿರುವ ವೃಷ್ಟ. ಅವಳಿಗೆ ವಾಗ್ದಾನಗಳು ಬೇಕಾಗಿಲ್ಲ. ಅವನು ಮಾತ್ರ ಸಾಕು. ಅವನು ಆ ಅಣೆಕಟ್ಟನ್ನು ಒಡೆದ. ಆ ಪ್ರವಾಹ ಇನ್ನು ಎಲ್ಲೆಲ್ಲಿ ಹರಿದು ಅಂತ್ಯಗೊಳ್ಳು ವುದೋ! ಆ ಸ್ಥಿತಿಗೆ ಆ ಸಂಬಂಧ ಬಂದು ನಿಂತಿತು. ಅವಳು ಅವನನ್ನು ವಶಪಡಿಸಿ ಕೊಂಡಳು. ಅವನಿಗಾಗಿ ಏನು ಮಾಡಲೂ ಸಿದ್ಧಳಾದಳು!

ಈ ನಾಟಕದ ಅಂತ್ಯ ಹೇಗಾಗಬಹುದೆಂದು ಕೇಶವ ಪಿಳ್ಳೆ ಆಲೋಚಿಸುವುದಿಲ್ಲ. ಜೀವನದಲ್ಲಿ ಹೆಂಡತಿಯ ಸ್ಥಾನದಲ್ಲಿ ಯಾರಾಗಿ ಉಳಿಯಬಹುದು? ಊರಿನಲ್ಲಿ ತಾಯಿಗಾಗಿ ಎಲ್ಲ ಕೆಲಸವನ್ನೂ ಮಾಡುತ್ತಿರುವ ಕಾತ್ಯಾಯಿನಿಯೇ? ಅಭ್ಯುದಯದ ಸಾಧನವಾಗಿ ನಿಂತಿರುವ ತಂಗಮ್ಮನೆ? ಯಾರು? ಈ ಪರಿಸ್ಥಿತಿಯಲ್ಲಿ ವಿಧಿ ಯಾರನ್ನು ನಿಶ್ಚಯಿಸಿರಬಹುದು? ಅವಳು ಹೆಂಡತಿಯಾಗಿ ಬರುತ್ತಾಳೆ. ತಳ್ಳಲ್ಪಟ್ಟವಳನ್ನು ಕುರಿತು ಅವನಿಗೆ ಪರಿತಾಪವೂ ಇರುವುದಿಲ್ಲ. ಕೇಶವ ಪಿಳ್ಳೆಯ ಬುದ್ಧಿ ತೀಕ್ಷ್ಣಗೊಂಡಿತು. ತನಗೆ ಸಾಮರ್ಥ್ಯವುಂಟೆಂದು ಆತನಿಗನ್ನಿಸಿತು. ಸುಪ್ತವಾಗಿದ್ದ ದೃಢ ನಿರ್ಧಾರಗಳು ಸಾಮರ್ಥ್ಯ ವನ್ನು ಚೇತನಗೊಳಿಸಿದುವು. ಈಗ ಆಚೆಯ ಅಂಚಿನ ವರೆಗೆ ಸಾಗುವುದಕ್ಕೂ ಆತನಿಗೆ ಭಯವಿಲ್ಲ. ಅಲ್ಲಿಯೂ ಎಲ್ಲೆಲ್ಲಿಯೂ ಜಯಿಸುತ್ತೇನೆಂದು ಅವನ ನಂಬಿಕೆ.

ಎರಡು ಹೊತ್ತಿನ ಊಟವನ್ನು ಮುಡುಕಿಕೊಂಡು ಹೊರಟ ಕೇಶವ ಪಿಳ್ಳೆಯ ಮಾನಸಿಕ ಸಂವಿಧಾನದಲ್ಲಿ ಉಂಟಾದ ಬದಲಾವಣೆ ಅದು. ಅವನ ಚೇತನ ಜಾಗೃತಿ ಗೊಂಡಿತು. ಅಭಿಲಾಷೆಗಳ ಉದ್ಭವದಿಂದಾಗಿ ಒಂದು ದಾರಿ ತನ್ನ ಮುಂದೆ ಕಾಣಿಸಿದ್ದ ರಿಂದ ಉಂಟಾಗಿದ್ದ ಬದಲಾವಣೆ ಅದು. ಆ ಸ್ಥಿತಿಯಲ್ಲಿ ಒಂದು ಕಡೆ ಕಟ್ಟಿಕೊಂಡ ಹೆಣ್ಣನ್ನೂ ಮತ್ತೊಂದು ಕಡೆ ಎಲ್ಲ ಅಭ್ಯುದಯಗಳ ಮೊದಲನೆಯ ಮೆಟ್ಟಿಲಾಗಿ ನಿಂತಿರುವ ಪ್ರೇಮಿಯನ್ನೂ ಕೇವಲ ವಿಕಾರ ಉಪಕರಣಗಳಾಗಿ ಭಾವಿಸುವಂತಹ, ವಿಕಾರ ಮೌಲ್ಯಗಳಲ್ಲಿ ಸ್ವರೂಪ ವ್ಯತ್ಯಾಸವುಂಟಾಗಿದ್ದರೆ, ಅದನ್ನು ಆತನ ಸಾಮರ್ಥ್ಯದಿಂದಾಗಿ, ಎಂದು ಭಾವಿಸಿದರೆ ಸಾಕು. ಕಾತ್ಯಾಯಿನಿ ಭಾಗ್ಯವತಿಯೆಂದು ಕಿಟ್ಟುಮಾವ ಹೇಳಿದರು. ಆ ಭಾಗ್ಯದ ಉಪಭೋಕ್ತೃ ಅವಳ ಗಂಡ ಎಂತಲೇ ಅಥವಾ ಅವಳು ಭಾಗ್ಯವತಿ ಯಾಗಿದ್ದಲ್ಲಿ ಆ ಭಾಗ್ಯ ಕೇಶವ ಪಿಳ್ಳೆಯ ಪ್ರಗತಿಗಾಗಿ ಎಂತಲೇ? ತಂಗಮ್ಮನಲ್ಲಿ ಒಮ್ಮೆಯೂ ಕುಂದದ ಆಸಕ್ತಿಯಿದೆ. ಆ ಆಸಕ್ತಿಯೂ ಕೇಶವ ಪಿಳ್ಳೆಯ ಪ್ರಗತಿಗಾಗಿ. ಅದರ ಉಪಭೋಕ್ತೃವೂ ಅವನೇ. ಆಗ ಇಬ್ಬರೂ ಅವನ ಅಭ್ಯುದಯಕ್ಕಾಗಿ ಸೃಷ್ಟಿಸ ಲ್ಪಟ್ಟವರು.

ಮನೆಯಿಂದ ತಂದೆಯ ಕಾಗದ ಬಂದಿತು. ಕಿಟ್ಟುಮಾವ ಲೆಕ್ಕಹಾಕಿ ಒಳ್ಳೆಯ ದಿನ ವನ್ನು ನಿಶ್ಚಯಿಸಿದ್ದರು. ಆ ದಿನ ಅವನಿಗೆ ಹೋಗಲಾಗಲಿಲ್ಲ. ಗೋಪಾಲನ್ ನಾಯರ ಕಾರ್ಯಕ್ಕಾಗಿ ತಿರುವನಂತಪುರದಲ್ಲಿ ಉಳಿಯಬೇಕಾಗಿ ಬಂದಿತು. ಆ ವಿಷಯವನ್ನು ಮನೆಗೆ ತಿಳಿಸಿದ್ದ. ಎರಡು ವಾರ ಕಳೆದ ಮೇಲೆ ಮತ್ತೊಂದು ಗುರುವಾರ ಅವನು ತಪ್ಪದೆ ಊರಿಗೆ ಬರಬೇಕೆಂದು ತಂದೆ ತಿಳಿಸಿದ್ದರು. ತಂದೆ ತುಂಬ ಬಯ್ದು ಬರೆದಿದ್ದರು.

ಊರಿನ ಜನ ಏನೆಲ್ಲ ಮಾತನಾಡಿಕೊಳ್ಳಬಹುದು ಎನ್ನುವುದನ್ನು ಕುರಿತು ಆಲೋಚಿಸು ವಂತೆಯೂ ತಿಳಿಸಿದ್ದರು. ಊರಿನ ನಡೆ, ನುಡಿ ಪಾಲಿಸಬೇಕೆಂದೂ ಬುದ್ಧಿವಾದ ಹೇಳಿದ್ದರು. ತಂದೆಗೆ ಕೆಟ್ಟ ಹೆಸರು ತರಬೇಡವೆಂದೂ ಸೂಚಿಸಿದ್ದರು. ಗುರುವಾರ ಎಂದು ತೀರ್ಮಾನಿಸಿದ್ದು ಕಿಟ್ಟುಮಾಮವನಿರಬೇಕು. ಪಂಚಾಂಗವನ್ನೂ ಜಾತಕವನ್ನೂ ತೆರೆದು ನೋಡಿ, ದಿನ ಮುಹೂರ್ತ ಲೆಕ್ಕ ಹಾಕಿ ಕಿಟ್ಟುಮಾಮ ಮೊದಲ ರಾತ್ರಿಯನ್ನು ನಿಶ್ಚಯಿಸಿರುವ ದಿನವಾಗಿರಬೇಕು ಆ ಗುರುವಾರ.

ಆದರೆ ಈ ಸ್ಥಿತಿಯಲ್ಲಿ ಆ ಗುರುವಾರ ಅಲ್ಲಿಗೆ ಹೋಗಲು ಸಾಧ್ಯವಿಲ್ಲ. ಅದು ತೀರ್ಮಾನಿಸಿದ ವಿಷಯ. ಈ ದಿನಗಳಲ್ಲೇ ಆ ಏಣಿಯ ಮೊದಲ ಮೆಟ್ಟಲು ಸೃಷ್ಟಿಯಾಗುತ್ತಿರುವುದು. ಈಗ ಇಲ್ಲಿಯೇ ಇರಬೇಕು. ತಂದೆ ತಾಯಿಗಳಿಗೆ ಅವನು ಅಲ್ಲಿಗೆ ಬರಬೇಕು ಎನ್ನುವುದು ಮುಖ್ಯವಾದದ್ದು. ಕೇಶವ ಪಿಳ್ಳೆಗೆ ಸಂಬಂಧಪಟ್ಟಂತೆ ಇಲ್ಲಿಯೇ ನಿಂತು ಕಾರ್ಯ ಸಾಧಿಸಬೇಕಾಗಿತ್ತು. ಆ ಗುರುವಾರದ ಒಳ್ಳೆಯ ಮುಹೂರ್ತವನ್ನು ತಂಗಮ್ಮನ ಜೊತೆಯಲ್ಲೇ ಕಳೆದರಾಯಿತು.

ಕೇಶವ ಪಿಳ್ಳೆ ತಂದೆಗೆ ಒಂದು ಕಾಗದ ಬರೆದ. ಒಂದು ಮೇಲಿನ ಉದ್ಯೋಗ ಸಂಪಾದನೆಯ ವಿಷಯವೆಂದು ತಿಳಿಸಿದ್ದ. ತಾನು ಯಾವಾಗ ಬರುತ್ತೇನೆಂದು ಅದರಲ್ಲಿ ತಿಳಿಸಿರಲಿಲ್ಲ. ಅದನ್ನು ಹೇಳಲೂ ಸಾಧ್ಯವಿಲ್ಲವೆಂದೂ ತಿಳಿಸಿದ್ದ. ವಿಷಯವನ್ನು ಕಾತ್ಯಾಯಿನಿಗೆ ತಿಳಿಸಬೇಕೆಂದು ಬರೆಯಬೇಕೇ ಬೇಡವೇ ಎಂದು ಬಹಳ ಹೊತ್ತು ಆಲೋಚಿಸಿದ. ಕಡೆಗೆ ಅದು ಬೇಡವೆಂದುಕೊಂಡ. ವಿಷಯ ಅವಳಿಗೆ ತಿಳಿಯುತ್ತದೆ. ಅಷ್ಟು ಸಾಲದೆ? ಸಂದರ್ಭ ಬಂದಾಗ ಆ ಸಂಬಂಧ ಬೇಡವೆನ್ನಿಸಿದರೊ.........? ಜೀವನದ ಈ ಗತಿಯಲ್ಲಿ ಅದೂ ಸಂಭವಿಸಬಹುದು. ಎಷ್ಟೋ ಜನರು ದಾಂಪತ್ಯ ವಿಚ್ಛೇದನವನ್ನು ಪಡೆಯುವುದಿಲ್ಲವೇ? ಕಾಗದದಲ್ಲಿ ಅವಳ ಸುದ್ದಿಯನ್ನು ಎತ್ತದಿರುವುದೇ ಒಳ್ಳೆಯದಲ್ಲವೆ?

ಅವಳು ಅದೃಷ್ಟವಂತೆಯಾಗಿದ್ದಲ್ಲಿ—ತನ್ನ ಹೆಂಡತಿಯಾಗಿ ಉಳಿಯುವ ಭಾಗ್ಯವಿದ್ದಲ್ಲಿ ನಾನು ಜೀವನದಲ್ಲಿ ಅಭ್ಯುದಯವನ್ನು ಪಡೆಯುತ್ತೇನೆ. ಅವಳು ಹೆಂಡತಿಯಾಗಿ ಉಳಿಯುತ್ತಾಳೆ. ಇಲ್ಲದಿದ್ದಲ್ಲಿ ಅವಳು ತಾಯಿಯ ಸೇವೆ ಮಾಡಿಕೊಂಡಿರಲಿ. ಅದೂ ಇಲ್ಲದಿದ್ದಲ್ಲಿ ಅವಳ ತೌರುಮನೆಗೆ ಹಿಂದಿರುಗಲಿ.

ಆಗ ತಂಗಮ್ಮ ಅದೃಷ್ಟವಂತೆಯಾಗುತ್ತಾಳೆ.

* * * * *

ಮುಂದಿನ ಭಾನುವಾರ ಮಧ್ಯಾಹ್ನ ಕಳೆದ ಮೇಲೆ ಕೇಶವ ಪಿಳ್ಳೆ ಚಟ್ಟಕುಳಂಗರದ ತಂಗಮ್ಮನ ಮನೆಯ ಕೊಟ್ಟಿಯಂಬಲವನ್ನು ದಾಟಿ ಮನೆಯೊಳಕ್ಕೆ ಪ್ರವೇಶಿಸಿದ. ಹಾಗೆ ಬಹಿರಂಗವಾಗಿ ಹಗಲು ಹೊತ್ತು ಪ್ರವೇಶಿಸುವುದು ಅದೇ ಮೊದಲು. ಹಗಲು ಹೊತ್ತಿ

ನಲ್ಲಿ ಅಲ್ಲಿಗೆ ಹೋಗದಂತೆ ಕಾಪಾಡಿಕೊಳ್ಳಬೇಕೆಂದು ಆತ ಆಶಿಸಿದ್ದ. ಆದರೆ ತಂಗಮ್ಮ ನಿರ್ಬಂಧಿಸಿದ್ದಳು. ಅವಳ ತಂದೆ ತಾಯಿಗಳಿಗೆ ಅವನನ್ನು ಒಮ್ಮೆ ನೋಡಬೇಕಾಗಿತ್ತು. ಆ ಸ್ಥಿತಿಯಲ್ಲಿ ಸಾಧ್ಯವಿಲ್ಲ ಎಂದು ಹೇಳಲು ಸಾಧ್ಯವೇ?

ತಂಗಮ್ಮನನ್ನು ಮದುವೆಯಾಗುವ ವಿಷಯವನ್ನು ಅವಳ ತಂದೆಯೋ ತಾಯಿಯೋ ಕೇಳಿದಲ್ಲಿ ಏನು ಹೇಳುವುದೆಂದು ಕೇಶವ ಪಿಳ್ಳೆಗೆ ತಿಳಿಯದು. ಖಂಡಿತವಾಗಿಯೂ ಅವರು ಅದನ್ನು ಕೇಳುತ್ತಾರೆ. ಅದನ್ನು ಕೇಳಿ ಸ್ಪಷ್ಟಪಡಿಸಿಕೊಂಡ ಮೇಲಲ್ಲವೇ ಚೀಫ್ ಸೆಕ್ರೆಟರಿಯ ಹತ್ತಿರ ಹೇಳಲು ಸಾಧ್ಯ? ಮದುವೆ ನಡೆಸೋಣ ಎಂದು ಹೇಳುತ್ತಾರೆಯೆ? ಹಾಗೆ ಹೇಳಲು ಕೇಶವ ಪಿಳ್ಳೆಗೆ ಸಂಕೋಚವಿಲ್ಲ. ಆದರೆ ಹಾಗೆ ಹೇಳಿ ಮದುವೆ ಮಾಡಿಕೊಳ್ಳದೇ ಇದ್ದರೆ ಉಂಟಾಗುವ ತೊಂದರೆಗಳು ಆತನನ್ನು ಭಯಗೊಳಿಸುತ್ತಿದ್ದುವು. ಏನೆಲ್ಲ ತೊಂದರೆಗಳು ಸಂಭವಿಸಬಹುದು? ಮದುವೆಯನ್ನು ಕುರಿತು ಖಂಡಿತವಾಗಿ ಹೇಳದೆ ಇದ್ದರೆ......... ಆ ಮೇಲೆ ಏನೂ ನಡೆಯುವುದಿಲ್ಲ. ಇದೆಲ್ಲವೂ ಆ ಹಾಳು ಹೆಣ್ಣಿನ ಕತ್ತಿನಲ್ಲಿ ತಾಳಿ ಕಟ್ಟಿದ್ದರಿಂದ ಉಂಟಾದ ತೊಂದರೆಗಳು. ತಂದೆ ತಾಯಿಗಳ ಮುಂದೆ ತನಗಿದ್ದ ದೌರ್ಬಲ್ಯ.

ಕೇಶವ ಪಿಳ್ಳೆಯ ಹೃದಯ ಡಬಡಬನೆ ಬಡಿದುಕೊಳ್ಳುತ್ತಿತ್ತು. ತನ್ನ ಮುಖ, ಮನಸ್ಸಿನಲ್ಲಿ ನಡೆಯುತ್ತಿರುವ ಮಂಥನಗಳನ್ನು ಪ್ರಕಟಿಸುತ್ತಿದೆಯೋ ಎಂದು ಭಯಗೊಂಡ. ಒಂದು ದೊಡ್ಡ ವಂಚನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಬಂದಿರುವುದು ಎನ್ನುವುದು ಯಾರಿಗೂ ಒಂದೇ ನೋಟದಲ್ಲಿ ಅರ್ಥವಾಗುತ್ತಿತ್ತು. ಅದನ್ನು ಮರೆಮಾಡುವುದಕ್ಕಾಗಿ ಕೇಶವ ಪಿಳ್ಳೆ ಒಂದು ನಗುವನ್ನು ತಂದುಕೊಂಡ. ಅದೂ ಹುಸಿನಗುವಾಗಿತ್ತು.

ಮೆಟ್ಟಿಲನ್ನೇರಿ ಬಂದ ಕೇಶವ ಪಿಳ್ಳೆಯನ್ನು ಶೇಖರ ಪಿಳ್ಳೆ ಹಸನ್ಮುಖದಿಂದ ಬಂದು ಸ್ವಾಗತಿಸಿದರು. ಆ ಮನುಷ್ಯ ತನ್ನ ಭಾವೀ ಅಳಿಯನನ್ನು ಸ್ವಾಗತಿಸುತ್ತಿದ್ದದ್ದು. ಆ ವಾತ್ಸಲ್ಯ ಅವರಲ್ಲಿ ಕಂಡುಬರುತ್ತಿತ್ತು. ಕೇಶವ ಪಿಳ್ಳೆ ತುಂಬ ಸಂಕೋಚಕ್ಕೊಳಗಾದ. ತಂಗಮ್ಮ ಒಳಕ್ಕೆ ಓಡಿ ಹೋದಳು. "ಅಮ್ಮ, ಅವರು ಬಂದರು" ಎಂದು ತಾಯಿಯ ಹತ್ತಿರ ಹೇಳಲು ಹೋದದ್ದಾಗಿರಬೇಕು. ಆಗ ಅವಳ ತಾಯಿ ಮರೆಯಲ್ಲಿ ನಿಂತು ಅವನನ್ನು ನೋಡುತ್ತಿರಬಹುದು.

ಬಾಳಿನಲ್ಲಿ ತುಂಬ ಕಷ್ಟವನ್ನನುಭವಿಸಿದವರು ಕೇಶವ ಪಿಳ್ಳೆ. ಅದನ್ನು ಅವರು ಹೇಳದಿದ್ದರೂ ಗುರುತಿಸಬಹುದಾಗಿತ್ತು. ಆದರೆ ಆ ಮನುಷ್ಯನಲ್ಲಿ ಯಾವುದೋ ಒಂದು ಬಗೆಯ ಸ್ಥೈರ್ಯವಿದ್ದಂತೆ ತೋರಿತು. ಒಬ್ಬ ದೃಢ ಸ್ವಭಾವದ ವ್ಯಕ್ತಿ. ಬಹುಶಃ ಬದುಕು ಕಲಿಸಿಕೊಟ್ಟ ಪಾಠಗಳು ಆ ಮನುಷ್ಯನನ್ನು ಹಾಗೆ ಮಾಡಿದ್ದಾಗಿರಬೇಕು.

ಶೇಖರ ಪಿಳ್ಳೆ ಕೇಶವ ಪಿಳ್ಳೆಯ ವಾಸವೆಲ್ಲಿ ಎಂದು ಕೇಳಿದರು. ಮನೆ ಕಡೆಯ ಸಂಗತಿಗಳನ್ನೆಲ್ಲ ಕೇಳಿದರು. ಆ ಕುಶಲ ಪ್ರಶ್ನೆಗಳ ನಂತರ ಶೇಖರ ಪಿಳ್ಳೆ ಪತ್ನಿಯನ್ನು ಕರೆದರು:

"ಭಾಗೀರಥೀ !"

ಭಾಗೀರಥಿಯಮ್ಮ ರೂಮಿನೊಳಗೆ ಬಾಗಿಲಿನ ಮರೆಯಲ್ಲಿ ನಿಂತಿದ್ದರು. ಅವರಿಗೆ ಕರೆದದ್ದು ಕೇಳಿಸಿತು. ಶೇಖರ ಪಿಳ್ಳೆ ಹೇಳಿದರು:

"ನೀ ಯಾಕೇ ಒಳಗೇ ನಿಂತಿದ್ದೀ. ಈಚೆಗೆ ಬಾ."

ಭಾಗೀರಥಿ ಈಚೆಗೆ ಬರಲಿಲ್ಲ. ಶೇಖರ ಪಿಳ್ಳೆ ಕೇಶವ ಪಿಳ್ಳೆಯ ಹತ್ತಿರ ಹೇಳಿದರು:

"ನಾವು ಅಪ್ಪಟ ತಿರುವನಂತಪುರದವರು. ಇಲ್ಲಿ ಒಂದು ನಡತೆಯಿದೆ. ಅತ್ತೆ–ಅಳಿಯ ಮುಖಮುಖಿ ನೋಡಬಾರದು. ಅದಕ್ಕೇ ಅವಳು ಮರೆಯಲ್ಲಿ ನಿಂತಿರೋದು."

ಶೇಖರ ಪಿಳ್ಳೆಗೆ ನಗು ಬಂದಿತು. ಕೇಶವ ಪಿಳ್ಳೆ ನಗಲಿಲ್ಲ. ಆ ಮಾತುಗಳು ಕೇಶವ ಪಿಳ್ಳೆಯ ಮನಸ್ಸನ್ನೂ ಹೃದಯವನ್ನೂ ಒಂದು ರೀತಿಯಲ್ಲಿ ಬಾಧಿಸಿದುವು. ಬಿಡಿಸಿ ಕೊಳ್ಳಲು ಸಾಧ್ಯವಿಲ್ಲದ ರೀತಿಯಲ್ಲಿ ಒಂದು ಮೂಲೆಯಲ್ಲಿ ಬಂಧಿಸಿದಂತಾಯಿತು. ಶೇಖರ ಪಿಳ್ಳೆ ಹೆಂಡತಿಯ ಹತ್ತಿರ ಹೇಳಿದರು:

"ಅದೆಲ್ಲ ಹಿಂದಿನ ಕಾಲದ ನಡತೆ. ಅದಕ್ಕೆ ಯಾವ ಅರ್ಥವೂ ಇಲ್ಲ. ಈಚೆಗೆ ಬಾ."

ಭಾಗೀರಥಿ ಅಮ್ಮ ಒಳಗಿನಿಂದಲೇ ಹೇಳಿದರು: "ನಾನು ಆ ನಡತೆ ತಪ್ಪಿಸೋದಿಲ್ಲ."

ಶೇಖರ ಪಿಳ್ಳೆ ಸಮ್ಮತಿಸಬೇಕಾಯಿತು. "ಸರಿ, ಬರದಿದ್ದರೆ ಹೋಗಲಿ ಬಿಡು."

ಅಷ್ಟು ಹೊತ್ತಿಗೆ ತಂಗಮ್ಮ ಕಾಫಿ ತೆಗೆದುಕೊಂಡು ಬಂದಳು.. ಯಾವ ಪರಿಚಯವೂ ಇಲ್ಲದವಳಂತೆ. ಒಂದು ಮನೆಯ ಹೆಣ್ಣು ಮಗಳಂತೆ—ಕಂಡು ಕೇಳದ ಒಬ್ಬಾತ ತಂದೆಯ ಹತ್ತಿರ ಇರುವುದೆಂದು ಭಾವಿಸಿ ಕಾಫಿ ತಂದು ಕೊಟ್ಟ ಹಾಗಿತ್ತು ಅವಳು ನಡೆದು ಕೊಂಡದ್ದು.

ಕೇಶವ ಪಿಳ್ಳೆ ಅವಳ ಕಡೆಗೆ ನೋಡಲಿಲ್ಲ. ಅವನೂ ಪರಿಚಯವಿಲ್ಲದವನಂತೆ ನಟಿಸಿದ.

ಕಾಫಿ ಕುಡಿದಾಯಿತು. ಆ ವಿಷಯ ಪ್ರತಿಯೊಂದು ನಿಮಿಷದಲ್ಲೂ ಅವನನ್ನು ಭಯಪಡಿಸುತ್ತಿತ್ತು. ಸ್ವಲ್ಪ ಹೊತ್ತು ಶೇಖರ ಪಿಳ್ಳೆ ಏನನ್ನೋ ಆಲೋಚಿಸಿದ್ದರು. ಅದು ತುಂಬ ಗಂಭೀರವಾದ ಯಾವುದೋ ವಿಷಯವಾಗಿತ್ತು ಎನ್ನುವುದರಲ್ಲಿ ಸಂಶಯ ವಿಲ್ಲ. ಆ ಹೊತ್ತಿನಲ್ಲಿ ಗಂಭೀರವಾದ ಮೌನ ಆವರಿಸಿತ್ತು. ಆ ಘಟನೆ ಸಂಭವಿಸಲು ಕೇಶವ ಪಿಳ್ಳೆಗೆ ನಿಶ್ಚಯವಾಯಿತು. ಒಂದು ಸಲ ತಲೆ ಅಲ್ಲಾಡಿಸಿ ಶೇಖರ ಪಿಳ್ಳೆ ಹೇಳಿದರು:

"ಇಲ್ಲಿ ಕೇಳಿ ಪಿಳ್ಳೆ, ನಮಗಿರೋದೆಲ್ಲ ತಂಗಮ್ಮ ಮಾತ್ರ. ನೀವು ರವಿನ್ಯು ಆಫೀಸಿಗೆ ಕೆಲಸಕ್ಕೆ ಬಂದು ಸೇರಿದ ದಿನದಿಂದ ಅವಳು ನಿಮ್ಮನ್ನು ಕುರಿತು ಮನೆಗೆ ಬಂದು ಹೊಗಳ್ತಾಳೆ."

ಥಟ್ಟನೆ ಹೇಳುತ್ತಿದ್ದುದು ನಿಂತಿತು. ಶೇಖರ ಪಿಳ್ಳೆಗೆ ಮುಂದೆ ಏನು ಹೇಳಬೇಕೆಂಬುದು ತಿಳಿಯದಾಯಿತು. ಶೇಖರ ಪಿಳ್ಳೆ ಒಬ್ಬ ದೃಢ ಮನೋಧರ್ಮದವರಂತೆ

ಇದ್ದರೂ ಈ ವಿಚಾರಗಳಲ್ಲಿ ಅಷ್ಟೊಂದು ಅನುಭವವಿದ್ದವರಲ್ಲ. ಸ್ವಲ್ಪ ಹೊತ್ತು ಬಿಟ್ಟು ಶೇಖರ ಪಿಳ್ಳೆ ಮುಂದುವರಿಸಿದರು: "ಚೀಫ್ ಸೆಕ್ರೆಟರಿ ನನ್ನ ತಮ್ಮ; ಒಬ್ಬ ತಾಯಿಯ ಮಕ್ಕಳು. ಅವನ ಹತ್ತಿರ ನಾನು ಯಾವ ವಿಷಯಾನೂ ಮಾತಾಡಿಲ್ಲ. ನಿಮಗೆ ಅವನ ಆಫೀಸಿನಲ್ಲಿ ಕೆಲಸ ಸಿಕ್ಕಿದರೆ ನೀವು ಮೇಲೇರ್ತೀರಿ ಅಂತ ತಂಗಮ್ಮ ಹೇಳಿದಳು. ಅವಳು ಹೇಳಿದ್ದು ಯಾವುದನ್ನೂ ನಾನು ವಿರೋಧಿಸಿಲ್ಲ. ಅವಳು ಹೇಳಿದ್ದನ್ನ ಕೇಳಿ ಹಾಗೇ ಆಗಲಿ ಅಂದುಕೊಂಡೆ."

ಕೇಶವ ಪಿಳ್ಳೆ ಕುಳಿತಲ್ಲಿಯೇ ಕಷ್ಟಪಡುತ್ತಿದ್ದ. ಶೇಖರ ಪಿಳ್ಳೆ ಮತ್ತೆ ಮುಂದುವರಿಸಿದರು: "ಅವನ ಹತ್ತಿರ ಇಲ್ಲಿ ವರೆಗೆ ಏನೂ ಮಾತಾಡಿಲ್ಲ. ನಾನು ಇದನ್ನ ಹೇಳಿದೆ ಅಂತ ಅನ್ನಿ. ಅವನು ಅದನ್ನ ಮಾಡ್ತಾನೆ."

ಸ್ವಲ್ಪ ಹೊತ್ತು ಮೌನ ಆವರಿಸಿತ್ತು. ಕೇಶವ ಪಿಳ್ಳೆಯ ಅಂತರಂಗದಲ್ಲಿ ಒಂದು ಭೂಕಂಪವುಂಟಾಗಿತ್ತು. ಆ ಐಶ್ವರ್ಯ ಬೇಡವೆಂದು ಹೇಳಿದರೇನು? ಒಂದು ವೇಳೆ ಆ ಮೇಲೆ ದೊಡ್ಡ ಆಪತ್ತಾಗಿಬಿಡಲೂ ಬಹುದು. ಎಲ್ಲವೂ ಒಂದು ಕಾಲದಲ್ಲಿ ಬಹಿರಂಗವಾಗುವುದಿಲ್ಲವೆ? ಈಗಲೇ ಶೇಖರ ಪಿಳ್ಳೆ ಮದುವೆಗೆ ಸಂಬಂಧಿಸಿದಂತೆ ಒಂದು ತೀರ್ಮಾನವಾಗಬೇಕು ಎಂದು ಹೇಳಿದರೊ? ಅದರ ನಂತರವೇ ಚೀಫ್ ಸೆಕ್ರೆಟರಿಯ ಹತ್ತಿರ ಹೇಳುವುದು ಎಂದರೇನು ಮಾಡುವುದು? ಅದಕ್ಕೆ ಆ ಮನುಷ್ಯನನ್ನು ಮಾತ್ರವಲ್ಲ ಯಾರನ್ನೇ ಆಗಲಿ ಅನ್ನುವುದಕ್ಕೆ ಸಾಧ್ಯವೆ? ಮದುವೆ ಆದ ಮೇಲೆಯೇ ಹೇಳಲು ಸಾಧ್ಯ ಎನ್ನುವುದಿದ್ದರೂ ಅದು ನ್ಯಾಯವಾದದ್ದೇ? ಸ್ಪಷ್ಟವಾದ ಉತ್ತರವನ್ನು ಪಡೆಯುವ ಪ್ರಶ್ನೆ ಯಾವ ನಿಮಿಷದಲ್ಲಿಯೂ ಬರಬಹುದು. ಅದನ್ನು ಕೇಶವ ಪಿಳ್ಳೆ ನಿರೀಕ್ಷಿಸುತ್ತಿದ್ದ.

ಶೇಖರ ಪಿಳ್ಳೆ ಕೇಳಿದರು: "ಪಿಳ್ಳೆಗೆ ತಂದೆ ತಾಯಿ ಇದ್ದಾರಲ್ಲವೆ? ಅವರ ಹತ್ರ ಹೇಳಿ ಅವರ ಒಪ್ಪಿಗೆ ಪಡೆದುಕೋಬೇಕು. ಜಾತಕ ಹೊಂದಿಕೆಯಾಗುತ್ತಾ ಅಂತ ನೋಡಬೇಕು. ಅದು ಮುಖ್ಯ. ನಿಮ್ಮ ನಕ್ಷತ್ರ ಯಾವುದು?"

ಕೇಶವ ಪಿಳ್ಳೆ ಹೇಳಿದ:

"ರೇವತಿ."

"ಅವಳ ನಕ್ಷತ್ರ ಭರಣಿ."

ಶೇಖರ ಪಿಳ್ಳೆ ಸಣ್ಣ ಲೆಕ್ಕ ಹಾಕಿದರು. "ಅಂತ ತೊಂದರೆಗಳೇನೂ ಇಲ್ಲ ಅಂತ ಕಾಣುತ್ತೆ" ಎಂದು ಹೇಳಿ ಕೇಶವ ಪಿಳ್ಳೆಯನ್ನು ಕೇಳಿದರು:

"ತಂದೇನ ಬರ ಹೇಳೋಣವಾ?"

ಕೇಶವ ಪಿಳ್ಳೆಯನ್ನು ಮರಗಟ್ಟಿಸಿದ ಪ್ರಶ್ನೆಯಾಗಿತ್ತು ಅದು. ಅವನ ರಕ್ತಸಂಚಾರವೇ ನಿಂತುಹೋದಂತಾಯಿತು. ಆದರೆ ಒಂದು ಉತ್ತರ ಅವನ ನಾಲಗೆಯ ತುದಿಗೆ ಬಂದಿತು:

"ತುಂಬ ಕೆಲಸದ ಕಾಲ. ಕೊಯ್ಲುಗಾಲ."

ಆಗ ಒಳಗಿನಿಂದ ಭಾಗೀರಥಿಯಮ್ಮ ಹೇಳಿದುದು ಕೇಳಿಸಿತು:

"ಕೂಡಲೇ ಹೋಗಿ ಹೇಳದೇ ಇದ್ದರೆ ಬೇರೆ ಯಾರನ್ನಾದರೂ ಅಲ್ಲಿಗೆ ನೇಮಕ ಮಾಡಿಕೊಳ್ಳಬಹುದು. ಮದುವೆ ತೀರ್ಮಾನವೆಲ್ಲ ಆದ ಮೇಲೆ ಅಂತ ಆದರೆ ಹೇಗೆ? ತಿಂಗಳ ಬೆಳಕು ಬರೋವರೆಗೆ ಹಂದಿ ನಿಲ್ಲೋದಿಲ್ಲ."

ಅದನ್ನು ನಿಜವಾಗಿಯೂ ಭಾಗೀರಥಿಯಮ್ಮ ಹೇಳಿದ್ದಲ್ಲ. ತಂಗಮ್ಮ ಹೇಳಿಸಿದ್ದು

ಅಬ್ಬ! ಕೇಶವ ಪಿಳ್ಳೆಗೆ ಎಂತಹ ಆಶ್ವಾಸನೆಯನ್ನು ನೀಡಿತ್ತು ಅದು! ಶೇಖರ ಪಿಳ್ಳೆ ಸ್ವಲ್ಪ ಸಿಟ್ಟಿನಿಂದ ಹೇಳಿದರು:

"ಹಾಗಂತಲಾ ನಾನು ಹೇಳಿದ್ದು? ನೀವು ಹೇಳೋದು ಕೇಳಿದರೆ ಒಡವೆ ವಸ್ತ್ರ ಕೊಟ್ಟು ಮದುವೆಯಾದ ಮೇಲೇ ಕೃಷ್ಣನ ಪತ್ರ ಹೇಳೋದು ಅನ್ನೋಹಾಗಿದೆಯಲ್ಲಾ? ನಡೆಯಬೇಕಾಗಿದ್ದ ಸಂಗತಿ ನಾನು ಹೇಳ್ತಾ ಇದ್ದದ್ದು." ನಂತರ ಕೇಶವ ಪಿಳ್ಳೆಯ ಪತ್ತಿರ ಶೇಖರ ಪಿಳ್ಳೆ ಹೇಳಿದರು:

"ಇಲ್ಲಿ ಕೇಳಿ ಪಿಳ್ಳೆ, ನಾಳೇನೇ ನಾನು ಹೋಗಿ ಕೃಷ್ಣನ ಪತ್ರ ಹೇಳ್ತೀನಿ. ಆ ಮೇಲೆ ನಮಗಿಷ್ಟವಿದ್ದ ಹಾಗೆ ಮಾಡಿಕೊಳ್ಳೋಣ."

'ಆಗಲಿ' ಎನ್ನುವ ಮುಖಭಾವ ಕೇಶವ ಪಿಳ್ಳೆಗೆ ಉಂಟಾಗಿತ್ತು. ತಂಗಮ್ಮ ಹೊರಗೆ ಬರಲೇ ಇಲ್ಲ. ಎಂತಹ ನಾಚಿಕೆ.........! ಒಬ್ಬಾತ ಹೆಣ್ಣು ನೋಡುವುದಕ್ಕಾಗಿ ಬಂದ ಹಾಗಿತ್ತು. ಶೇಖರ ಪಿಳ್ಳೆ ಅನಂತರ ಕೆಲವು ಸಂಗತಿಗಳನ್ನು ಮಾತನಾಡಿದರು. ಕೇಶವ ಪಿಳ್ಳೆಗೆ ಅಲ್ಲಿಂದ ಒಂದು ಸಲ ಹೊರಟರೆ ಸಾಕು ಎನ್ನಿಸಿತ್ತು. ಬೆಂಕಿಯ ಸುಳಿಯಲ್ಲಿ ಸಿಕ್ಕಿಕೊಂಡ ಹಾಗಿತ್ತು.

ಕೇಶವ ಪಿಳ್ಳೆ ಹೊರಟು ನಿಂತಾಗ ಬಾಗಿಲಿನ ಮರೆಯಿಂದ ಭಾಗೀರಥಿಯಮ್ಮ: "ನೀವು ಎಂದೆಂದಿಗೂ ಹೊಂದಿಕೊಂಡು ಸುಖವಾಗಿದ್ದರೆ ಸಾಕು" ಎಂದಳು.

ಕೇಶವ ಪಿಳ್ಳೆ ಯಾವಾಗಲೂ ಇರುತ್ತಿದ್ದ ಮಂದಹಾಸದೊಡನೆ ಆ ಹಾರೈಕೆಯನ್ನು ಅಂಗೀಕರಿಸಿದ ಭಾವನೆಯನ್ನು ತಂದುಕೊಂಡ.

ಕೊಟ್ಟಿಯಂಬಲ ದಾಟಿದ ಮೇಲೆ ಆತ ಒಮ್ಮೆ ಹಿಂದಿರುಗಿ ನೋಡಿದ. ತಂಗಮ್ಮ ಹೊರಗೆ ಬಂದು ನಿಂತಿದ್ದಳು.

[8]

## ಹೆಂಡತಿ

ಕಾತ್ಯಾಯಿನಿ ಹೊತ್ತಿಗೆ ಮುಂಚೆ ಅಡಿಗೆಮನೆ ಕೆಲಸ ಮುಗಿಸಿ ಸ್ನಾನಕ್ಕೆ ಹೊರಟಳು. ಸ್ನಾನದ ಕೊಳದ ದಡದಲ್ಲಿ ಪಾಪ್ಪಿ ಅಮ್ಮನೂ, ಮಟ್ಟತ್ತಿಲ್ ಜಾನಕಿಯೂ, ಕುಟ್ಟಿಕಾಟ್ಟು ಮಾಧವಿ ಅಮ್ಮನೂ ಇದ್ದರು. ಯಾರೂ ಇಲ್ಲದ ಹೊತ್ತು ನೋಡಿ ಕಾತ್ಯಾಯಿನಿ ಸ್ನಾನಕ್ಕೆ ಹೋಗುತ್ತಿದ್ದದ್ದು. ಅಲ್ಲಿಗೆ ಬರುತ್ತಿದ್ದ ಹೆಂಗಸರು ಸಾವಿರ ಪ್ರಶ್ನೆ ಕೇಳು ತ್ತಿದ್ದರು. ಎಷ್ಟೋ ಪ್ರಶ್ನೆಗಳಿಗೆ ಅವಳಿಗೆ ಉತ್ತರಿಸಲಾಗುತ್ತಿರಲಿಲ್ಲ. ಅದನ್ನು ತಪ್ಪಿಸಿ ಕೊಳ್ಳುವುದಕ್ಕಾಗಿಯೇ ಯಾರೂ ಇಲ್ಲದಿದ್ದಾಗ ಹೋಗುತ್ತಿದ್ದದ್ದು. ಆ ದಿನ ಗ್ರಹ ಚಾರಕ್ಕೆ ಆ ಮೂವರು ಸ್ತ್ರೀಯರಿದ್ದರು. ಅವರು ಪ್ರಶ್ನಿಸುವುದಕ್ಕೆ ತೊಡಗಿದರು. ಪ್ರಾರಂಭಿಸಿದ್ದು ಜಾನಕಿ.

"ಕೇಶವ ಪಿಳ್ಳೆ ಕಾಗದ ಬರೀತಿದಾನೇನಮ್ಮ?"

"ಹ್ಞು."

ಅಷ್ಟರಲ್ಲಿ ಪಾಪ್ಪಿಯಮ್ಮ ಹೇಳಿದಳು:

"ಬಿ.ಎ. ಓದಿದೋನು. ಒಳ್ಳೆ ಹುಡುಗ. ಆದರೆ ಏನೂ ತಿಳಿಯದ ಈ ಹೆಣ್ಣು ಮಗೂನ ಕಟ್ಟಿಕೊಂಡು ಕೊಲ್ತಿದಾನೆ."

ಮಾಧವಿ ಕೇಳಿದಳು:

"ಮದುವೆ ಮಾಡಿಕೊಂಡು ಕರಕೊಂಡು ಬಂದು ಆ ಕೂಡಲೇ ಹಿಂದಿರುಗಿದ. ಆ ರಾತ್ರಿ ಇಲ್ಲಿ ಮಲಗಲಿಲ್ಲ."

ಅದಕ್ಕೆ ಜೋಡಣೆಯಾಗುವಂತೆ ಪಾಪ್ಪಿಯಮ್ಮ ಹೇಳಿದಳು:

"ಅವನನ್ನು ಅವಳು ನೋಡಲೇ ಇಲ್ಲ. ಅವನ ಮಾತನ್ನೂ ಕೇಳಿಲ್ಲ."

ನಂತರ ಕಾತ್ಯಾಯಿನಿಯ ಹತ್ತಿರ ಕೇಳಿದಳು: "ಹೌದೇನಮ್ಮಾ?"

ಮಾಧವಿಯೂ ಜಾನಕಿಯೂ "ಕಷ್ಟ" ಎಂದರು. ನಿಜವಾದ ಸಹಾನುಭೂತಿ ಯಿಂದ ಅವರು ಹೇಳಿದುದು.

ಮದುವೆಯಾಗಿ ಹೆಚ್ಚು ದಿನ ಆಗಿಲ್ಲದ ಒಂದು ಹೆಣ್ಣಿನ ಹೊಟ್ಟೆಯಲ್ಲಿ ಬೆಂಕಿ ಹಾಕುವುದಕ್ಕೆ ಇದಕ್ಕಿಂತ ಹೆಚ್ಚಿಗೆ ಬೇಕೇ? ಆ ಕ್ಷಣ ಆ ಕೊಳದಲ್ಲಿ ಎರಡು ಹನಿ ಕಣ್ಣೀರು ಉದುರಿದುವು. ಅದನ್ನು ಪಾಪ್ಪಿಯಮ್ಮ ನೋಡಿದಳು.

"ನೋಡು, ಅವಳು ಅಳ್ತಿದ್ದಾಳೆ" ಎಂದಳು.

ಕಾತ್ಯಾಯಿನಿಗೆ ಗಟ್ಟಿಯಾಗಿ ಅಳು ಬಂದಿತು.

ಪಾಪ್ಪಿಯಮ್ಮನ ಅನುಕಂಪ ಸಿಟ್ಟಾಗಿ ಪರಿಣಮಿಸಿತು.

"ಸಾಧು ಹುಡುಗಿ. ನಿಮಗೆ ಯಾರಿಗೂ ಗೊತ್ತಿಲ್ಲ. ನಾನು ಪಕ್ಕದ ಮನೆಯಲ್ಲೇ ವಾಸ ಮಾಡೋದು. ಅದಕ್ಕೆ ಕಾಲೂರಿ ಒಂದು ಗಳಿಗೆ ಕೂರೋದಕ್ಕೆ ಪುರಸೊತ್ತಿಲ್ಲ. ಒಂದು ದಿನಕ್ಕೆ ಇಪ್ಪತ್ತನಾಲ್ಕು ಗಂಟೆ ಕೆಲಸ ಮಾಡಿದರೂ ಮುಗಿಯೋದಿಲ್ಲ. ಮೂಗಿ ಹಾಗೆ ಮನೆ ಕೆಲಸ ಮಾಡಬೇಕು. ಅವರಿಗೆ ಮನೆಗೆಲಸಕ್ಕೆ ಒಬ್ಬಳು ಬೇಕಾಗಿತ್ತು. ಅದಕ್ಕೆ ಕರಕೊಂಡು ಬಂದು ಇರಿಸಿಕೊಂಡಿದ್ದಾರೆ—ದ್ರೋಹಿಗಳು !"

ಮಾಧವಿ ತಿಳಿಯ ಬಯಸಿದ್ದು ಅದನ್ನಲ್ಲ. ಅವಳ ಗಂಡನ ಸುಖದ ವಿಷಯ. ಕೇಶವ ಪಿಳ್ಳೆ ಅವಳನ್ನ ಮುಟ್ಟಿದ್ದಾನೆಯೇ ಎಂದು. ಪಾಪ್ಪಿಯಮ್ಮ ಅದೇ ರೋಷದಿಂದ ಹೇಳಿದಳು: "ನೀವೇ ನೋಡಿ. ಅವು ಮುಟ್ಟಿದ ಹಾಗೆ ಕಾಣ್ತವಾ?" ಕಾತ್ಯಾಯಿನಿ ರವಕೆ ಬಿಚ್ಚಿದ್ದಳು. ಮಾಧವಿಯೂ ಜಾನಕಿಯೂ ಗಟ್ಟಿಯಾಗಿ ನಕ್ಕರು.. ಜಾನಕಿ ಹೇಳಿದಳು:

"ಪಾಪ್ಪಿಯಕ್ಕನ ನಾಲಿಗೆ ಎಲುಬಿಲ್ಲದೆ ಏನೇನೆಲ್ಲ ಹೇಳುತ್ತೆ. ಅಸಹ್ಯನೆಲ್ಲ ಮಾತಾಡಬಾರದು."

ಪಾಪ್ಪಿಯಮ್ಮ ಸುಮ್ಮನಾಗಲಿಲ್ಲ.

"ನಾನು ಹೇಳೋದು ಸುಳ್ಳೇನ್ರೀ? ಅವಳ ಎದೆ ನೋಡ್ರೀ. ಒಂದಿಷ್ಟಾದರೂ ಇಳಿಬಿದ್ದಿದೆಯಾ ಹೇಳ್ರೀ."

ಮಾಧವಿಯೂ ಜಾನಕಿಯೂ ಕಿವಿ ಮುಚ್ಚಿಕೊಂಡರು.

"ನಮ್ಮ ಕೈಯಲ್ಲಿ ಕೇಳೋಕಾಗೋದಿಲ್ಲ."

ಪಾಪ್ಪಿಯಮ್ಮ ಗಂಭೀರವಾಗಿ ಹೇಳಿದಳು: "ನಾನು ಇದ್ದದ್ದು ಹೇಳಿದೆ. ಮದುವೆ ಆಯ್ತು. ಈಗ ಅಲ್ಲಿರೋದು ಬೆಂಕಿ ಅಲ್ಲವಾ? ನಮ್ಮ ಗಂಡಸರು ವಸ್ತ್ರ ತಂದುಕೊಟ್ಟು ಕೈಹಿಡಿದದ್ದಲ್ಲವಾ? ನಮಗೆ ಗೊತ್ತಿಲ್ಲವಾ ಆ ಕಷ್ಟ? ಮತ್ಯಾಕೆ ನಾವು ಹೆಣ್ಣಾಗಿ ಹುಟ್ಟಿದ್ದು?"

ಮಾಧವಿ ಏನನ್ನೋ ನೆನಸಿಕೊಂಡವಳಂತೆ ಹೇಳಿದಳು:

"ಯೋಚನೆ ಮಾಡಿ ನೋಡಿದಾಗ ಅದು ನಿಜ ಅನ್ನಿಸುತ್ತೆ. ಅದು ಇರೋ ಅಂಥಾದ್ದೇ."

ಜಾನಕಿಯೂ ಅದಕ್ಕೆ ದನಿಗೂಡಿಸಿದಳು:

ಪಾಪ್ಪಿಯಮ್ಮ ಹೇಳಿದಳು: "ಅನ್ನಬೇಕಾದದ್ದು ಆ ಮುದುಕೀನ. ಮಗನ ಇಷ್ಟ ಕೇಳಿ ಅಲ್ಲವಾ ಹೆಣ್ಣು ತಂದುಕೊಳ್ಳೋದು? ಅದನ್ನ ಮಾಡಲಿಲ್ಲ."

ಪಾಪ್ಪಿಯಮ್ಮನ ಮುಂದಿನ ಮಾತುಗಳು ಕಟುವಾಗುವುವೆಂದು ಜಾನಕಿಗೆ ಅನ್ನಿಸಿತು. ಅವನ್ನ ಅವಳ ಬಾಯಿಂದ ಹೇಳಿಸದಿರುವುದೇ ಒಳ್ಳೆಯದು ಎಂದು ತೋರಿತು. ಆದ್ದರಿಂದ ಜಾನಕಿ ಕಣ್ಣು ಮಿಟುಕಿಸಿದಳು. ಆದರೆ ಅವಳು ಅಷ್ಟಕ್ಕೇ ಸುಮ್ಮನಾಗುವ ಹಾಗಿರಲಿಲ್ಲ. ಅವಳ ಸಿಟ್ಟು ಏರುತ್ತಿತ್ತು:

"ಯಾಕೇ ಕಣ್ಣುಸನ್ನೆ ಮಾಡ್ತೀ? ಹೇಳಬೇಕು ಅನ್ನಿಸಿದ್ದನ್ನ ಹೇಳದೇ ಇದ್ದರೆ ನನಗೆ ಉಸಿರುಕಟ್ಟುತ್ತೆ. ಗೊತ್ತಾಯ್ತಾ? ಸುಮಾರು ದಿನದಿಂದ ನಾನು ಹೆಣ್ಣಿನ ದುಃಖ ನೋಡ್ತಿದೀನಿ. ನನಗೆ ನೋಡಿ ಸಹಿಸೋದಕ್ಕಾಗ್ತಿರಲಿಲ್ಲ. ಎಷ್ಟೋ ಸಲ ಇವಳ ಹತ್ರವೇ ಹೇಳಬೇಕು ಅಂದುಕೊಂಡೆ. ಇದೆಲ್ಲ ಮರ್ಯಾದೆ ತರೋ ಅಂತಾದ್ದಾ? ಸರಿಯಾದ ನಡೆನುಡಿಯಾ? ಅವನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಅಂಥವನಿಗೆ ಯಾಕೆ ಈ ಹೆಣ್ಣು ತಂದು ಕಟ್ಟಿದರು?"

ಜಾನಕಿಯೂ ಮಾಧವಿಯೂ ಉತ್ತರ ಹೇಳಲಿ ಎಂದು ಕೇಳಿದ ಪ್ರಶ್ನೆಯಂತಿತ್ತು ಅದು. ಜಾನಕಿ ಉತ್ತರಿಸಿದಳು: "ಹಾಗಿದ್ದರೆ ಅದು ತಪ್ಪು."

"ಹಾಗಿದ್ದರೆ ಅಂತಲಾ? ಪರವಾಯಿಲ್ಲ. ಯಾಕೇ —ರೆ ಅನ್ನೋದು?" ಪಾಪ್ಪಿಯಮ್ಮ ಹತ್ತಿರದ ಮೆಟ್ಟಿಲಿನ ಕಡೆಗೆ ಬಂದಳು. "ಹೋಗಲಿ ಬಿಡು. ಹೆತ್ತು ಹೊತ್ತು ಸಾಕಿದ ಮಗ. ಅವನಿಗಾಗಿ ತುಂಬ ಕಷ್ಟಪಟ್ಟಿದ್ದುಂಟು. ಅವನನ್ನ ಓದಿಸೋದಕ್ಕೆ ಅಷ್ಟಿಷ್ಟು ಕಷ್ಟ ಅಲ್ಲ ಅನುಭವಿಸಿರೋದು. ಹೊಟ್ಟೆಬಟ್ಟೆ ಕಟ್ಟಿ ಓದಿಸಿದ್ದು. ಕಟ್ಟಿದ್ದು ಮಾತನಾಡಬಾರದು. ಈ ಊರಿನಲ್ಲಿ ಒಬ್ಬ ಮಗನಿಗಾಗಿ ಕುಟ್ಟಿಯಮ್ಮನೂ ಪಪ್ಪು ಪಿಳ್ಳೆಯೂ ಕಷ್ಟಪಟ್ಟ ಹಾಗೆ ಯಾರೂ ಕಷ್ಟಪಟ್ಟಿಲ್ಲ."

ಅದು ನಿಜವೆನ್ನುವಂತೆ ಜಾನಕಿಯೂ ಮಾಧವಿಯೂ ಒಪ್ಪಿದರು. ಪಾಪ್ಪಿಯಮ್ಮ ಹೇಳಿದಳು: "ಹಾಗೆ ಅವನಿಗೆ ಮನಸ್ಸಿಲ್ಲದೆ ಮದುವೆ ಮಾಡಿಕೊಂಡರೂ ಅದನ್ನು ನೆರವೇರಿಸಬೇಕಾದದ್ದು ತಂದೆ ತಾಯಿಗಳು. ಅದು ಧರ್ಮ ಅಲ್ಲವಾ?"

ಜಾನಕಿಗೂ ಮಾಧವಿಗೂ ಅದು ಅರ್ಥವಾಗಲಿಲ್ಲ. ಜಾನಕಿ ಕೇಳಿದಳು:

"ಅದು ಹೇಗೆ ಪಾಪ್ಪಿಯಕ್ಕ?"

"ಅದು ಹೇಗೆ ಅಂತ ಹೇಳ್ತೀನಿ ಕೇಳಿ. ಹಿರಿಯರು, ತಂದೆ ತಾಯಿಗಳು ನಮ್ಮ ಒಪ್ಪಿಗೆ ಕೇಳಿ ಅಲ್ಲ ನಮಗೆ ಮದುವೆ ಮಾಡಿದ್ದು.

"ನನ್ನದೇನು? ನಾನು ಅವರನ್ನು ನೋಡಿದ್ದು ಮದುವೆ ವಸ್ತ್ರ ಕೊಟ್ಟ ಹೊತ್ತಿನಲ್ಲಿ. ನನಗೆ ಅಳು ಬಂತು. ಕರಿಯ ಧಾಂಡಿಗ. ಮೈಮೇಲೆ ಮುಳ್ಳಿನ ಹಾಗೆ ರೋಮ ಎದ್ದು ನಿಂತಿದ್ದುವು. ನೀವೂ ನೋಡಿದ್ದೀರಲ್ಲ. ಈಗ ಮೂವತ್ತು ವರ್ಷ ಕಳೆದುವು. ಐದು ಮಕ್ಕಳೂ ಆದುವು. ನಾವು ಪ್ರೀತಿಯಿಂದಲೇ ಇದ್ದೇವೆ. ನನ್ನ ಹತ್ರ ಮುಖ ಗಂಟುಹಾಕಿಕೊಂಡು ಒಂದೇ ಒಂದು ಸಲ ಮಾತಾಡಿಲ್ಲ. ನಾನೇ ಎಷ್ಟೋ ಸಲ ಸಿಟ್ಟು ಮಾಡಿಕೊಂಡು ಮಾತಾಡಿದ್ದುಂಟು."

ಪಾಪ್ಪಿಯಮ್ಮನ ಮುಖಭಾವ ಬದಲಾಯಿಸಿತು. ಭಕ್ತಿಭಾವದಿಂದ ಕೈಮುಗಿಯುತ್ತ ಹೇಳಿದಳು: "ನನ್ನ ಭಗವಂತ ಇಷ್ಟು ಮಾಡಿದರೆ ಸಾಕು. ಆ ಮುಖ ನೋಡ್ತಾ ನೋಡ್ತಾ ಕಣ್ಣು ಮುಚ್ಚಿಕೊಂಡರೆ ಸಾಕು."

ಒಂದು ನಿಮಿಷ ಕಳೆಯಿತು. ಪಾಪ್ಪಿಯಮ್ಮ ಪ್ರಾರ್ಥಿಸುತ್ತಿದ್ದಳು. ಅನಂತರ

ತನ್ನ ವಿಷಯಕ್ಕೆ ಹಿಂದಿರುಗಿದಳು.

"ಹಾಗಾದರೆ ಅದು ಯಾವುದರಿಂದ? ನಾನು ಹೇಳ್ತೀನಿ ಕೇಳಿ. ಚಿಕ್ಕ ವಯಸ್ಸಿನಲ್ಲಿ, ನಾಚಿಕೆಯೂ ಸಂಕೋಚವೂ ಇರುತ್ತೆ."

ಸ್ವಲ್ಪ ದನಿ ತಗ್ಗಿಸಿ ಕತ್ತು ಮುಂದಕ್ಕೆ ನೀಡಿ ಪಾಪ್ಪಿಯಮ್ಮ ಕೇಳಿದಳು: "ಒಂದನ್ನ ಜ್ಞಾಪಿಸಿಕೊಂಡು ನೋಡಿ. ನಾವೆಲ್ಲ ಮೈ ನೆರೆದಾಗ ಗಂಡ ಅಂದರೆ ಹ್ಯಾಗಿರಬೇಕು ಅಂತ ಅನ್ನಿಸಿರಲಿಲ್ಲವಾ? ಒಳ್ಳೆ ಬಣ್ಣ, ಒಳ್ಳೆ ಮೀಸೆ ಇರೋನಾಗಿರಬೇಕು ಅನ್ನಿಸಿರಲಿಲ್ಲವಾ? ನನಗೇನೋ ಹಾಗನ್ನಿಸಿತ್ತು. ಹಾಗೇನೇ ಗಂಡಸರಿಗೂ. ಅವರಿಗೂ ಅನ್ನಿಸುತ್ತೆ, ಹೆಣ್ಣಿಗೆ ಒಳ್ಳೆ ತಲೆಗೂದಲಿರಬೇಕು—ಒಳ್ಳೆ ಬಣ್ಣ ಇರಬೇಕು ಅಂತ. ಕೆಲವರ ಪುಣ್ಯಕ್ಕೆ ಬಯಸಿದ್ದ ಕ್ಕಿಂತ ಹೆಚ್ಚಿಗೆ ಸಿಕ್ಕುತ್ತೆ. ಅಂತು ಈ ಊರಿಗೆ ಊರೇ ಗಂಡ ಹೆಂಡತಿಯರು ಹೊಂದಿ ಕೊಂಡು ನಡೆಯೋದು ಹ್ಯಾಗೆ? ಇಷ್ಟಪಟ್ಟು ಗಂಡ ಹೆಂಡತಿ ಆಗಿಯೊ? ಅದೊಂದೂ ಅಲ್ಲ. ಮದುವೆ ಆಯ್ತು. ಆ ಮೇಲೆ ಅವರ ಪರಿಚಯ ಆಯ್ತು. ಒಟ್ಟಿಗೆ ಕಾಲಕಳೆ ದರು—ನಕ್ಕುನಲಿದರು—ಒಬ್ಬರಿಗೊಬ್ಬರು ತೃಪ್ತಿಪಡಿಸಬೇಕು ಅನ್ನಿಸಿತು. ಹಾಗೇ ಮನಸ್ಸು ಹತ್ತಿರ ಆಯ್ತು."

ಮಾಧವಿಯೂ ಜಾನಕಿಯೂ ಗಟ್ಟಿಯಾಗಿ ನಕ್ಕರು. ಪಾಪ್ಪಿಯಮ್ಮ ಕೇಳಿದಳು:

"ಯಾಕ್ರೀ ನಗ್ತೀರಿ? ಇರೋದು ತಾನೆ? ಮತ್ತೆ ಹೇಗೆ ಮನಸ್ಸು ಹತ್ತಿರ ಆಗೋದು?"

ಬದುಕಿನ ಬಹು ದೊಡ್ಡ ಸತ್ಯವನ್ನು ಒಪ್ಪಿಕೊಳ್ಳದಿರಲು ಸಾಧ್ಯವಿರಲಿಲ್ಲ. ಪಾಪ್ಪಿ ಯಮ್ಮ ಕಾತ್ಯಾಯಿನಿಯ ವಿಷಯಕ್ಕೆ ಹಿಂದಿರುಗಿದಳು: "ಕೇಶವನೂ ಮನಸ್ಸೊಪ್ಪಿ ಕೈಹಿಡೀತಿದ್ದ. ಅದಕ್ಕೆ ಆ ಮುದುಕಿ ಅವಕಾಶ ಮಾಡಿಕೊಡಲಿಲ್ಲ. ಅದೇ ನನಗೆ ಆ ಮುದುಕಿ ವಿಷಯವಾಗಿ ಹೇಳೋದಿರೋದು."

ಮಾಧವಿ ಆಶ್ಚರ್ಯದಿಂದ ಕೇಳಿದಳು: "ಅವರೇನು ಮಾಡಿದರು? ಅವರಿಗೆ ಈ ಮದುವೆ ಇಷ್ಟವಿತ್ತಲ್ಲ? ಅವರೇ ಅಲ್ಲವಾ ಒತ್ತಾಯಿಸಿದ್ದು?"

ಪಾಪ್ಪಿಯಮ್ಮ ಅದನ್ನು ಒಪ್ಪಿಕೊಂಡಳು. ಜಾನಕಿ ಮತ್ತೆ ಕೇಳಿದಳು: "ಹುಡು ಗಿಯೂ ಹುಡುಗನೂ ಒಟ್ಟಿಗೆ ಇರೋದಕ್ಕೆ ಒಪ್ಪಲಿಲ್ಲವಾ?"

ಅರ್ಥಮಾಡಿಕೊಳ್ಳಲು ಶಕ್ತಿಯಿಲ್ಲದ ಒಬ್ಬಳಿಗೆ ವಿಷಯವನ್ನು ತಿಳಿಸಿ ಅರ್ಥಮಾಡಿ ಕೊಡುವ ಕಷ್ಟದಿಂದ ಪಾಪ್ಪಿಯಮ್ಮ ಹೇಳಿದಳು:

"ಅದಲ್ಲ ಕಣೇ, ಅದನ್ನು ಹೇಳೋದಕ್ಕೆ ಹೊರಟರೆ ಒಂದು ಚಾಪೆ ಹೆಣೆದು ಮುಗಿಸೋ ಅಷ್ಟು ಹೊತ್ತು ಬೇಕು. ಮದುವೆ ಮಾಡಿಕೊಂಡು ಹೆಣ್ಣು ಕರೆದುಕೊಂಡು ಒಪ್ಪತ್ತಿಗೆ ಮನೆಗೆ ಬಂದರು. ಕೂಡಲೇ ಹುಡುಗ ಹೊರಟುಹೋದ. ಆ ಮುದುಕಿ ಅದಕ್ಕೆ ಸುಮ್ಮನಾದಳು. ಅದಾ ಮಾಡಬೇಕಾದದ್ದು? ಮನಸ್ಸಿಲ್ಲದೆ ಮದುವೆ ಮಾಡಿ ಕೊಂಡ ಹುಡುಗ. ಆ ದಿನ ಅವನನ್ನು ತಡೆದಿದ್ದರೆ ಹುಡುಗಿಯ ಜೊತೆ ಹೊಂದಿ

ಕೊಳ್ಳುತ್ತಿದ್ದ. ಆ ದಿನ ಹೋದ ಕೇಶವ ಮತ್ತೆ ಬಂದಿಲ್ಲ. ಅವತ್ತು ಅವನು ಹುಡುಗಿ ಜೊತೇಲಿ ರಾತ್ರಿ ಕಳೆದಿದ್ದರೆ ಅವನು ಮುಂದಿನ ವಾರವೂ ಬರುತ್ತಿದ್ದ."

ಜಾನಕಿ ಹೇಳಿದಳು: "ಅವನಿಗೆ ತಿರುವನಂತಪುರದಲ್ಲಿ ಎಲ್ಲೋ ಬೇರೆ ಹೆಣ್ಣು ಇರಬೇಕು. ಅದಕ್ಕೇ ಅವನು ಬರದೇ ಹೋದದ್ದು."

ಪಾಪ್ಪಿಯಮ್ಮ ಅಷ್ಟೊಂದು ಆಲೋಚಿಸಿರಲಿಲ್ಲ. ಅವಳು ಹೇಳಿದಳು: "ಹ್ಞೂ, ಅದೂ ಇರಬಹುದು. ತಿರುವನಂತಪುರ ಅಲ್ಲವಾ? ಹೆಂಗಸರು ಹಾರಿಬಂದು ಗಂಡಸ ರನ್ನು ಹಿಡಿದುಕೊಳ್ತಾರೆ ಅಂತ ಹೇಳ್ತಾರೆ. ಗಂಡಸರು ಸಿಕ್ಕಿಹಾಕಿಕೊಳ್ಳುತ್ತಾರೆ. ನಾಗರಿ ಕತೆಯ ಥಳುಕಿನ ಪಟ್ಟಣ ಅಲ್ಲವಾ? ಅಲ್ಲಿಯ ಹೆಂಗಸರು ನಮ್ಮ ಹಾಗೆ ಹಳ್ಳಿಯ ಮುಕ್ಕಗಳಾ? ಅವರು ಸುಂದರಿಯರು. ಆದರೆ ಒಂದು ವಿಷಯ. ತಿರುವನಂತಪುರದಲ್ಲಿ ಒಬ್ಬ ಸಿಕ್ಕಿಹಾಕಿಕೊಂಡ ಅಂದರೆ ಮುಗೀತು. ಅವನು ಮತ್ತೆ ಮನೆಗೆ ಹಿಂದಿರುಗೋದಿಲ್ಲ."

ಮಾಧವಿಯಮ್ಮ ಆಶ್ಚರ್ಯದಿಂದ ಹೇಳಿದಳು:

"ಅಯ್ಯೋ ಹಾಗಾಗಿದ್ದರೆ ಪಾಪ! ಇವನೂ ಎಲ್ಲೋ ಸಿಕ್ಕಿಹಾಕಿಕೊಂಡಿರಬೇಕು."

ಕಾತ್ಯಾಯಿನಿ ನೀರಿಗಿಳಿದು ಸ್ನಾನ ಮಾಡುತ್ತ ಎಲ್ಲವನ್ನೂ ಕೇಳಿಸಿಕೊಳ್ಳುತ್ತಿದ್ದಳು. ಕೆಲವು ಹೊಸ ವಿಷಯಗಳು ತಿಳಿದುವು. ಇಷ್ಟವಿಲ್ಲದೆ ಮದುವೆ ಮಾಡಿಕೊಂಡದ್ದು ......... ಆದರೂ ಒಟ್ಟಿಗೆ ಕಳೆಯಬಹುದು......... ಒಂದೇ ದಿನ ಒಟ್ಟಿಗಿದ್ದಿದ್ದರೆ ಹೊಂದಿಕೊಳ್ಳುತ್ತಿದ್ದರು. ಅನಂತರ ಮುಂದಿನ ವಾರ ಬರ್‍ತಿದ್ದರು......... ತಿರುವನಂತ ಪುರದಲ್ಲಿ ಯಾವಳೋ ಇರಬೇಕು......... ಅದನ್ನು ಅವಳಿಗೆ ಸಹಿಸುವುದಕ್ಕಾಗಲಿಲ್ಲ.

ಬಿಕ್ಕಿ ಬಿಕ್ಕಿ ಅಳುತ್ತ ಕಾತ್ಯಾಯಿನಿ ಮನೆಗೆ ಬಂದದ್ದು. ಕುಟ್ಟಿಯಮ್ಮನಿಗೆ ಅದು ತಿಳಿಯಿತು. ಕಾತ್ಯಾಯಿನಿಗೆ ಏನು ಹೇಳಲೂ ತಿಳಿಯಲಿಲ್ಲ. ಅವಳು ಬಿಕ್ಕಿ ಬಿಕ್ಕಿ ಅಳು ತ್ತಿದ್ದಳು.

ಕುಟ್ಟಿಯಮ್ಮ ಗಾಬರಿಯಾದಳು. ಸ್ನಾನಕ್ಕೆ ಹೋಗಿದ್ದ ಹೆಣ್ಣು ಬಿಕ್ಕಿ ಬಿಕ್ಕಿ ಅಳುತ್ತ ಬಂದಿದ್ದಾಳೆ. ಕಾರಣವನ್ನು ತಿಳಿಯುವುದಕ್ಕೂ ಆಗುತ್ತಿಲ್ಲ.

ಕುಟ್ಟಿಯಮ್ಮ ವಿಷಯವೇನೆಂದು ತಿಳಿಯಲು ಹೊರಟಳು. ವಿವರಗಳನ್ನು ತಿಳಿ ದಳು. ವಿಪರೀತ ಸಿಟ್ಟಿನಿಂದ ಅವಳು ಹೊರಟದ್ದು. ಸೊಸೆಯನ್ನು ಸಮಾಧಾನಪಡಿಸು ವುದು ಅನಂತರ. ಈ ದೋಷಾರೋಪಣೆಯ ಕಥೆಯನ್ನು ಹೇಳಿದ ಪಾಪ್ಪಿಯಮ್ಮನನ್ನು ಕೇಳಿದ ಮೇಲೆಯೇ ಬಾಕಿ ಸಂಗತಿ ಎಂದುಕೊಂಡು ಹೋಗಿದ್ದಳು. ತೆಕ್ಕೆವೇಲಿಯ ಹತ್ತಿರ ಹೋಗಿ ನಿಂತುಕೊಂಡು ಕುಟ್ಟಿಯಮ್ಮ ಕೇಳಿದಳು:

"ಲೇ ಪಾಪ್ಪೀ, ಈ ಇಲ್ಲದೇ ಇರೋ ಮಾತನ್ನೆಲ್ಲ ಆಡಿದ್ದು ಯಾಕೇ?" ಏನೂ ಗೊತ್ತಿಲ್ಲದ ರೀತಿಯಲ್ಲಿ ಪಾಪ್ಪಿಯಮ್ಮ ಮನೆಯ ಒಳಗಿನಿಂದ ಹೊರಗೆ ಬಂದು ಕೇಳಿ ದಳು:

"ನಾನು ಏನು ಹೇಳಿದೆ?"

"ಇನ್ನೇನು ಮುಖಕ್ಕೆ ಮಸಿ ಎರಚಿದ್ದು?"

"ನೀನು ಏನು ಮಾಡ್ತೀ?" ಪಾಪ್ಪಿಯಮ್ಮ ಮತ್ತೆ ಹೇಳಿದಳು:

"ನಿನ್ನ ಬಿ.ಎ. ಓದಿರೋ ಮಗನಿಗೆ ಇಷ್ಟವಿಲ್ಲದ ಹುಡುಗಿ ಕಟ್ಟಿದ್ದನ್ನೂ ಅವನು ಅವಳೊಟ್ಟಿಗೆ ಇರೋದಕ್ಕೆ ಇಷ್ಟಪಡದೇ ಹೋದದ್ದನ್ನೂ ಅಕ್ಕಪಕ್ಕದವರು ಕಂಡಿಲ್ಲವಾ? ಇದು ಪರವಾಯಿಲ್ಲ!"

ಕುಟ್ಟಿಯಮ್ಮ ಸುಮ್ಮನಾಗಲಿಲ್ಲ.

"ನನ್ನ ಮಗ ಬಿ.ಎ. ಓದಿರೋದು ನಾನು ಹಿಂದಿನ ಜನ್ಮದಲ್ಲಿ ಪುಣ್ಯ ಮಾಡಿದ್ದರಿಂದ. ಅಯ್ಯೋ ನಿನ್ನ ಹಾಳು ಕಣ್ಣೆ!"

ಪಾಪ್ಪಿಯಮ್ಮ ಅಷ್ಟಕ್ಕೇ ಬಿಡಲು ಸಿದ್ಧಳಾಗಲಿಲ್ಲ.

"ಭಾರೀ ಪುಣ್ಯ ಮನೇಲ್ಲಿ ಸಂಪಾದಿಸಿಟ್ಟಿರೋದು. ಏನೂ ತಿಳೀದ ಹುಡುಗೀನ ತಂದು ಅದರ ಕಣ್ಣೀರು ಬಿದ್ದಾಗ ಪುಣ್ಯ ಕರಗ್ತಾ ಬರ್‍ತದೆ."

ಕುಟ್ಟಿಯಮ್ಮನಿಗೆ ವಿಪರೀತ ಸಿಟ್ಟು ಬಂದಿತು: "ಹೆಣ್ಣು ಕರೆದುಕೊಂಡು ಬಂದಿದ್ದ ರೇನು? ಅವಳು ಮನೆಯಲ್ಲಿ ಗೌರವವಾಗಿ ಬಾಳ್ತಿದ್ದಾಳೆ."

ಪಾಪ್ಪಿಯಮ್ಮನಿಗೆ ಕಾತ್ಯಾಯಿನಿಯನ್ನು ಕುರಿತು ಹೇಳಬೇಕಾದ್ದು ಏನೂ ಇರಲಿಲ್ಲ. ಆದರೂ ಅವಳು ಬಿಡಲಿಲ್ಲ.

"ಅದನ್ನೇ ನಾನು ಮನೆಗೆ ಕೇಡುಂಟಾಗ್ತದೆ ಅಂತ ಹೇಳಿದ್ದು."

ಹೀಗೆ ಮಾತಿಗೆ ಮಾತು ಬೆಳೆದಿದ್ದಾಗಲೂ ಕಾತ್ಯಾಯಿನಿ ಅಳುತ್ತಿದ್ದಳು. ಗೌರಿ ಯಮ್ಮ ಬಂದು ಕುಟ್ಟಿಯಮ್ಮನನ್ನು ಎಳೆದುಕೊಂಡು ಹೋದಳು. ಆಗಲೂ ಅವಳು ಬಯ್ಯುತ್ತಲೇ ಇದ್ದಳು.

ಕುಟ್ಟಿಯಮ್ಮ ಸೊಸೆಯನ್ನು ಸಮಾಧಾನಪಡಿಸಲು ಯತ್ನಿಸಿದಳು. ಕಾತ್ಯಾಯಿನಿ ಬಿಕ್ಕಿ ಬಿಕ್ಕಿ ಅಳುತ್ತಲೇ ಇದ್ದಳು. ಕುಟ್ಟಿಯಮ್ಮ ಅವಳ ಕಣ್ಣೀರನ್ನು ಒರಸಿದಳು. "ನನ್ನ ಮಗಳೇ, ಅಳಬೇಡ. ಈ ದುಃಖವೆಲ್ಲ ತೀರುತ್ತೆ. ನಿನಗೆ ಒಳ್ಳೇದಾಗುತ್ತೆ. ನೀವಿಬ್ಬರೂ ಸುಖವಾಗಿರ್‍ತೀರಿ."

ಆ ಹಾರೈಕೆ ಅದೆಷ್ಟೇ ಹೃದಯ ಸಾಂತ್ವನಗೊಳಿಸಿದರೂ ಕಾತ್ಯಾಯಿನಿಗೆ ಆ ಮಾತಿ ನಲ್ಲಿ ಭರವಸೆಯುಂಟಾದೀತೆ?

ಕುಟ್ಟಿಯಮ್ಮ ಮುಂದುವರಿಸಿದಳು:

"ಅವನು ಬರದೇ ಇರೋದು ಇಷ್ಟವಿಲ್ಲದೇ ಅಲ್ಲ. ನನ್ನ ಮಗಳು ಬೇಡ ಅಂತಲೂ ಅಲ್ಲ. ಅವನು ಸರ್ಕಾರಿ ನೌಕರ ಅಲ್ಲವಾ? ತೋರಿದ ಹಾಗೆ ಬರೋಕಾಗುತ್ತಾ? ಆ ಕಸುಬರಿಗೆ ಹೆಂಗಸರಿಗೆ ಇದೆಲ್ಲಾ ಗೊತ್ತಾಗತ್ತಾ? ನನ್ನ ಮಗಳೇ, ಅವರಿವರು ಹೇಳೋ ದನ್ನ ಕೇಳಿ ಬೇಸರ ಮಾಡಿಕೊಳ್ಳಬೇಡ. ಹೊಟ್ಟೆಕಿಚ್ಚು! ಹೊಟ್ಟೆಕಿಚ್ಚು! ಈ ಹಾಳು ಜನರಿಗೆ. ಅಳಬೇಡ ನನ್ನಮ್ಮ."

ಕುಟ್ಟಿಯಮ್ಮ ಒಂದು ಮಾತುಕೊಟ್ಟಳು: "ಇನ್ನು ಹತ್ತು ದಿನದೊಳಗೆ ಅವನನ್ನ ಇಲ್ಲಿಗೆ ಕರೆಸ್ತೀನಿ."

ಆದರೆ ಕಾತ್ಯಾಯಿನಿಯನ್ನು ಹಾಗೆ ಸಮಾಧಾನಪಡಿಸಲು ಸಾಧ್ಯವೆ? ತಿರುವನಂತಪುರದಲ್ಲಿ ಅವನಿಗೆ ಯಾವಳೋ ಇದ್ದಾಳೆನ್ನುವ ಸಂಗತಿ ಅವಳ ಹೃದಯದ ಮೇಲೆ ಬರೆ ಎಳೆದಂತಾಗಿತ್ತು.

ಈ ಗಲಾಟೆಯೆಲ್ಲ ನಡೆಯುವಾಗ ಪಪ್ಪು ಪಿಳ್ಳೆ ಮನೆಯಲ್ಲಿರಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಅವರು ಬಂದದ್ದು. ಅವರು ಜಮೀನಿನ ಕಡೆಗೆ ಹೋಗಿದ್ದರು. ಹಿಂದಿರುಗಿ ಬಂದು ಇನ್ನೂ ಮನೆಯ ಮೆಟ್ಟಲಿಗೆ ಕಾಲಿರಿಸಿರಲಿಲ್ಲ. ಆಗ ಕುಟ್ಟಿಯಮ್ಮ ಗೊಣಗಾಟಕ್ಕೆ ಪ್ರಾರಂಭಿಸಿದ್ದಳು. ದೊಡ್ಡ ಧ್ವನಿಯಲ್ಲಲ್ಲದಿದ್ದರೂ ಸಿಟ್ಟಿನಿಂದ ಅವಳು ಕೇಳಿದಳು:

"ಯಾಕೆ ಮನಸ್ಸಿಲ್ಲದವನಿಗೆ ಮದುವೆ ಮಾಡಿದ್ದು? ಈ ಪಾಪದ ಹೆಣ್ಣಿನ ಕಣ್ಣೀರು ಹರಿಸಿ ಈ ಕುಟುಂಬದ ನಾಶ ಮಾಡಬೇಕು ಅಂತಲಾ?"

ಪಪ್ಪು ಪಿಳ್ಳೆಗೆ ಏನೂ ಅರ್ಥವಾಗದೆ ನಿಂತಿದ್ದರು.

"ಏನಾಯ್ತೇ?"

"ಏನಾಯ್ತು ಅಂತಲಾ?"

ಪಪ್ಪು ಪಿಳ್ಳೆಗೂ ಸಿಟ್ಟು ಬಂದಿತು: "ಹೋಗೇ ಹಾಳಾದೋಳೇ. ಅಲ್ಲೆಲ್ಲಾದರೂ ಹೋಗಿ ಕುಕ್ಕರಿಸು."

ಅಕ್ಕಪಕ್ಕದವರನ್ನು ಸಿಕ್ಕಿದ ಹಾಗೆ ಬಯ್ಯುತ್ತ ಪಪ್ಪು ಪಿಳ್ಳೆಯನ್ನೂ ಆಕ್ಷೇಪಿಸುತ್ತ ಕುಟ್ಟಿಯಮ್ಮ ತನ್ನ ವಾಗ್ಧಾರೆಯನ್ನು ಮುಂದುವರಿಸಿಕೊಂಡೇ ಇದ್ದಳು. ಗಂಡ ಸಮಾಧಾನದಿಂದಿರಲು ಬಿಡಲಿಲ್ಲ.

ಪಪ್ಪು ಪಿಳ್ಳೆ ನಾಲ್ಕೈದು ಸಲ ಹೊಡೆಯಲು ಕೈ ಎತ್ತಿದರು. ಆದರೆ ಹೊಡೆಯಲಿಲ್ಲ. ಬಯ್ಯುತ್ತ ಕುಟ್ಟಿಯಮ್ಮ ಹೇಳಿದ್ದನ್ನೆಲ್ಲ ಕೇಳಿಸಿಕೊಳ್ಳುತ್ತಿದ್ದರು. ಪಪ್ಪು ಪಿಳ್ಳೆಯ ಮನಸ್ಸಿನಲ್ಲೂ ರೋಷವುಂಟಾಯಿತು. ತಮ್ಮ ವಿಚಾರದಲ್ಲೂ ತಪ್ಪುಂಟೆಂದು ಅವರಿಗೆ ತೋರಿತು. ಆದರೂ ಅದನ್ನು ಒಪ್ಪಿಕೊಳ್ಳಲು ಪಪ್ಪು ಪಿಳ್ಳೆ ಸಿದ್ಧರಿರಲಿಲ್ಲ. ಆ ಹುಡುಗಿಯ ಸ್ಥಿತಿಯೂ ಕಷ್ಟದ್ದೇ. ಎಲ್ಲಕ್ಕಿಂತಲೂ ಹೆಚ್ಚಾಗಿ ಪಪ್ಪು ಪಿಳ್ಳೆಯನ್ನು ಭಯಪಡಿಸುತ್ತಿದ್ದ ಒಂದು ಸಂಗತಿಯಿದೆ. ಆ ಸತ್ಯ ಕುಟ್ಟಿಯಮ್ಮನ ಒಂದು ಪ್ರಶ್ನೆಯ ಮೂಲಕ ಹೊರಗೆ ಬಂದಿತು.

"ತಿರುವನಂತಪುರದಲ್ಲಿ ಅವನಿಗೆ ಬೇರೆ ಯಾವುದಾದರೂ ಹೆಣ್ಣು ಇರಬಹುದೆ?"

ಆಗಲೂ ಪಪ್ಪು ಪಿಳ್ಳೆ: "ಹೋಗೇ ಹಾಳಾದವಳೇ" ಎಂದು ಒಮ್ಮೆ ಅಬ್ಬರಿಸಿದರು. ಆದರೂ ಕುಟ್ಟಿಯಮ್ಮನ ಪ್ರಶ್ನೆ ಹೃದಯದ ಆಳವನ್ನು ಹೊಕ್ಕು ಇರಿಯಿತು. ಪಪ್ಪು ಪಿಳ್ಳೆ ಮನಸ್ಸಮಾಧಾನವನ್ನು ಕಳೆದುಕೊಂಡರು. ಅದೂ ಸಂಭವಿಸುವಂಥಾದ್ದೇ. ಅದೇ ಇರಬೇಕು ಕೇಶವ ಬರದೇ ಇರುವುದು.

ಜಮಾಖರ್ಚು ಬರೆಯುವುದಕ್ಕೆ ಪಪ್ಪು ಪಿಳ್ಳೆ ಒಂದು ಪುಸ್ತಕ ಕೊಂಡಿಟ್ಟಿದ್ದರು. ಒಂದು ಬೆರಳುದ್ದದ ಪೆನ್ಸಿಲ್ಲೂ ಇತ್ತು. ಅಟ್ಟದ ಮೇಲಿಟ್ಟಿದ್ದ ಆ ಪುಸ್ತಕವನ್ನು ತೆಗೆದು ಕೊಂಡು ಅದರಿಂದ ಒಂದು ಹಾಳೆ ಹರಿದುಕೊಂಡರು. ಭಾಗವತ ಪುಸ್ತಕದೊಳಗಿಟ್ಟಿದ್ದ ದಾರದಿಂದ ಕಟ್ಟುವ ಕನ್ನಡಕವನ್ನೂ ತೆಗೆದುಕೊಂಡರು. ಆ ತಂದೆ ಕಾಗದ ಬರೆಯುತ್ತ ಕುಳಿತರು. ಕಾಗದವನ್ನು ಪ್ರಾರಂಭಿಸಿದ್ದು ಹೀಗೆ:

"ಅತ್ಯಂತ ಪ್ರೀತಿಪಾತ್ರನಾದ ಏಕೈಕ ಪುತ್ರಾ. ನೀನು ತಂದೆಗೆ ಕೆಟ್ಟ ಹೆಸರು ತರ ಬೇಡ........."

ಹಾಗೆ ಆ ಹಾಳೆಯ ಎರಡು ಪುಟಗಳಲ್ಲೂ ಬರೆಯಬೇಕಾದದ್ದನ್ನೆಲ್ಲ ಬರೆದರು. ಕಾಗದ ಬರೆದಾದ ಮೇಲೆ ಅಲ್ಲಿ ಮತ್ತೊಂದು ಜಗಳ ನಡೆಯಿತು. ಕುಟ್ಟಿಯಮ್ಮನಿಗೆ ಆ ಕಾಗದ ಪೂರ್ತಿ ಓದಿಸಿ ಕೇಳಬೇಕಾಗಿತ್ತು. ಪಪ್ಪು ಪಿಳ್ಳೆ ಬರೆಯುವುದಕ್ಕೆ ಪ್ರಾರಂಭಿಸಿ ದಾಗಿನಿಂದಲೂ ಕುಟ್ಟಿಯಮ್ಮ ಅದು ಇದು ನೋಡುತ್ತ ಹತ್ತಿರದಲ್ಲೇ ಕುಳಿತಿದ್ದಳು. ಇದರ ಮಧ್ಯೆ ಎರಡು ಸಲ ವೀಳ್ಯದೆಲೆ ಜೋಡಿಸಿ ಕೊಟ್ಟಳು. ಪಪ್ಪು ಪಿಳ್ಳೆ ಕಾಗದ ಓದಿ ಹೇಳಲಿಲ್ಲ. ಬರೆದಿರುವುದನ್ನು ಕುಟ್ಟಿಯಮ್ಮ ಕೇಳಲೇಬೇಕು ಎಂದು ಒತ್ತಾಯಿಸಿದಳು: "ಅದೇನು ಅನ್ನೋದನ್ನ ನಾನು ಕೇಳಬೇಕು."

"ಈಗ ಕೇಳಬೇಡ."

"ಅದ್ಯಾಕೆ? ನಾನು ಕೇಳಬೇಕು. ಅವನನ್ನು ಹತ್ತು ತಿಂಗಳು ಹೊತ್ತು ಹೆತ್ತವಳು ನಾನು."

"ಓದಿ ಹೇಳೋದಕ್ಕೆ ನನಗೆ ಇಷ್ಟವಿಲ್ಲ."

ಕುಟ್ಟಿಯಮ್ಮನಿಗೆ ಸಿಟ್ಟು ಬಂದಿತು. "ಮಹಾ ಪಾಪಿ! ನನ್ನ ಮಗನಿಗೆಲ್ಲೋ ಶಾಪ ಹಾಕಿ ಬರೆದಿರಬೇಕು."

ಪಪ್ಪು ಪಿಳ್ಳೆ ಆ ಮಾತನ್ನು ಗಣನೆಗೆ ತಂದುಕೊಳ್ಳಲಿಲ್ಲ. ಕುಟ್ಟಿಯಮ್ಮ ಹೇಳಿ ದಳು: "ಆ ಮಗು ಪರ ಊರಿನಲ್ಲಿ ಜೀವನ ಮಾಡ್ತಿದೆ. ತೋರಿದ ಹಾಗೆ ಏನೇನೋ ಬರೆದು ಅದರ ಮನಸ್ಸು ನೋಯಿಸಬೇಡಿ. ಪಾಪ!"

ಆ ಕಾಗದವನ್ನು ಕಸಿದುಕೊಳ್ಳಬೇಕೆಂದು ಕುಟ್ಟಿಯಮ್ಮ ಎರಡು ಮೂರು ಬಾರಿ ಪ್ರಯತ್ನಿಸಿದಳು. ಸಾಧ್ಯವಾಗಲಿಲ್ಲ. ಮತ್ತೂ ಏನನ್ನೋ ಹೇಳಿದಳು. ಅದನ್ನೂ ಕೇಳಿಸಿಕೊಳ್ಳಲಿಲ್ಲ ಪಪ್ಪು ಪಿಳ್ಳೆ.

ಕಾತ್ಯಾಯಿನಿಯ ಮದುವೆ ನಡೆದ ದಿನವೇ ನಾಣಿಕುಟ್ಟಿಯ ಮದುವೆಯೂ ನಡೆ ದದ್ದು. ನಾಣಿಕುಟ್ಟಿ ಗರ್ಭಿಣಿ. ಮತ್ತೊಬ್ಬ ಜೊತೆಗಾತಿ ಕಾತ್ಯಾಯಿನಿಗಿದ್ದಾಳೆ— ಕೊಚ್ಚುಕುಞ್ಞಿ. ಆ ಮಧ್ಯೆ ಅವಳ ಮದುವೆಯೂ ನಡೆಯಲಿತ್ತು. ಈಗಲೂ ಅವ ರಿಬ್ಬರೂ ಬಂದು ಕಾತ್ಯಾಯಿನಿಯ ಮನೆಗೆಲಸದಲ್ಲಿ ಸಹಾಯ ಮಾಡುತ್ತಾರೆ.

ಕಾತ್ಯಾಯಿನಿಗೋಸ್ಕರ ಕುಟ್ಟಿಯಮ್ಮನ ಹತ್ತಿರ ಅಕ್ಕಪಕ್ಕದವರು ಜಗಳವಾಡಿದ

ದಿನವೇ ನಾಣಿಕುಟ್ಟಿಯೂ ಕೊಚ್ಚುಕುಞ್ಞಿಯೂ ಅಲ್ಲಿಗೆ ಬಂದರು. ಆ ಸ್ನೇಹಿತೆಯರು ಕಾತ್ಯಾಯಿನಿಯನ್ನು ಸಮಾಧಾನಪಡಿಸಿದರು. ಕೇಶವ ಪಿಳ್ಳೆ ತುಂಬ ಒಳ್ಳೆಯವನು ಎಂದು ನಾಣಿಕುಟ್ಟಿಯ ಅಭಿಪ್ರಾಯ. ಕೇಶವ ಸಣ್ಣ ಹುಡುಗನಿಂದಲೂ ನಾಣಿಕುಟ್ಟಿಗೆ ಗೊತ್ತಿತ್ತು. ಖಂಡಿತವಾಗಿಯೂ ಕೇಶವನಿಗೆ ತಿರುವನಂತಪುರದಲ್ಲಿ ಯಾವ ಹೆಣ್ಣೂ ಇಲ್ಲ. ಈ ಊರಿನವರ ಹಿಡಿತವಿಲ್ಲದ, ನಾಲಗೆ ಉದ್ದವಾದ ಹೆಂಗಸರು ಏನು ಬೇಕಾದರೂ ಮಾತನಾಡುತ್ತಾರೆ. ಕಾತ್ಯಾಯಿನಿ ದುಃಖಿಸಬೇಕಾದದ್ದಿಲ್ಲ. ನಾಣಿಕುಟ್ಟಿ ಕಾತ್ಯಾಯಿನಿಯ ಕಣ್ಣೀರನ್ನೊರಸಿದಳು. ಕುಞ್ಞಿಕುಟ್ಟಿಯ ಅಭಿಪ್ರಾಯ ಅದಲ್ಲ. ಅವಳು ಹೇಳುವುದು ಹೀಗೆ:

"ಅದಲ್ಲ. ಒಂದುವೇಳೆ ಹಾಗೆ ಯಾವಳೋ ಇದ್ದಾಳೆ ಅಂತಲೇ ಇಟ್ಟುಕೋ. ಇದ್ದರೇನಂತೆ. ಗಂಡಸರಲ್ಲಿ ಕೆಲವು ಸಲ ಹಾಗೆಲ್ಲ ಇರುತ್ತೆ. ಹಾಗೆ ನಡೆಯಲೂ ಬಹುದು. ತೊಟ್ಟು ಕಳಚಿದರೆ ಭೂಮಿ ಮೇಲೆ. ಕೇಶವಣ್ಣ ಇಲ್ಲಿಗೆ ಬಂದೇ ಬರ್ತಾನೆ."

ಕೊಚ್ಚುಕುಞ್ಞಿಗೆ ಕೇಶವ ಪಿಳ್ಳೆಯ ಸ್ವಭಾವವನ್ನು ಕುರಿತು ನಂಬಿಕೆ. ಅಷ್ಟೊಂದು ಒಳ್ಳೆಯ ಗುಣದ ಹುಡುಗ ಈ ಊರಿನಲ್ಲಿಲ್ಲ.

ಅವಳು ಕೇಳಿದಳು:

"ಇಲ್ಲಿ ಈ ಹೆಂಗಸರ ಗಂಡಂದಿರು ಯಾರು ಇದ್ದಾರೆ ಹಾಗೆ ಹೋಗದೇ ಇರೋರು?"

ಕೊಚ್ಚುಕುಞ್ಞಿ ಈ ಜಗಳವಾಡಿದ ಸ್ತ್ರೀಯರ ಗಂಡಂದಿರ ಕಥೆಗಳನ್ನು ತನಗೆ ತಿಳಿದಿದ್ದಷ್ಟನ್ನು ವಿವರಿಸಿದಳು. ನಾಣಿಕುಟ್ಟಿ ನಂಬಿಕೆಯಿಂದಲೇ ಹೇಳಿದಳು:

"ಆದರೆ ಕೇಶವಣ್ಣ ಅಂಥವನಲ್ಲ. ಅವನು ಓದಿದವನು. ತಿಳಿದವನು."

ಕಾತ್ಯಾಯಿನಿಗೆ ಆ ಮಾತಿನಿಂದಲೂ ಸಮಾಧಾನವಾಗಲಿಲ್ಲ. ಶುದ್ಧ ಚಾರಿತ್ರ್ಯವುಳ್ಳ ಆ ಸ್ತ್ರೀಯರು ಅವರ ಬುದ್ಧಿಗೆ ತಿಳಿದಷ್ಟು ಮಟ್ಟಿಗೆ ಅವರ ಸ್ನೇಹಿತೆಯನ್ನು ಸಮಾಧಾನಪಡಿಸುತ್ತಿದ್ದರು. ಕಾತ್ಯಾಯಿನಿಯ ಮದುವೆ ನಡೆದ ದಿನ, ಅದೇ ಮುಹೂರ್ತದಲ್ಲೇ ನಾಣಿಕುಟ್ಟಿಯ ಮದುವೆಯಾದದ್ದು. ಮದುವೆಯಾದ ಮೂರನೆ ದಿನ ನಾಣಿಕುಟ್ಟಿ ತಮ್ಮ ಮನೆಗೆ ಬಂದದ್ದನ್ನು ಕಾತ್ಯಾಯಿನಿ ಜ್ಞಾಪಿಸಿಕೊಂಡಳು. ಅವಳಿಗೆ ಪ್ರತ್ಯೇಕವಾದ ಒಂದು ಚೈತನ್ಯವುಂಟಾಗಿತ್ತು. ಯಾವಾಗಲೂ ಸಂಜೆಯ ಹೊತ್ತಿಗೆ ಅವಳ ಗಂಡ ಮನೆಗೆ ಬರುತ್ತಿದ್ದ. ಅವಳಿಗಾಗಿ ಏನಾದರೊಂದು ಸಾಮಾನನ್ನು ತರುತ್ತಿದ್ದ. ಒಂದು ದಿನ ಯಾವುದಾದರೂ ಸಿಹಿ ತಿಂಡಿ, ಇಲ್ಲದಿದ್ದರೆ ಒಂದು ರವಕೆ ಬಟ್ಟೆ. ಅದೂ ಇಲ್ಲದಿದ್ದರೆ ಒಂದು ಸುವಾಸನೆಯ ಸೋಪು. ಹಿಂದಿನ ದಿನ ತಂದದ್ದೇನು ಎಂದು ಮಾರನೆಯ ದಿನ ನಾಣಿಕುಟ್ಟಿ ಬಂದು ಹೇಳುತ್ತಿದ್ದಳು. ದೊಡ್ಡದಾಗಿ ಭಾವಿಸಿ ಆತ ತಂದ ಸಾಮಾನು ಅವಳಿಗೆ ಇಷ್ಟವಾಗದಿದ್ದರೆ ಅವಳು ಅದನ್ನು ಎಸೆಯುತ್ತಿದ್ದಳು.

"ನಾನು ಬಿಸಾಡಿದೆ. ಆ ಮೇಲೆ ಸಿಟ್ಟು ಮಾಡಿಕೊಂಡು ಚಾಪೆ ಹಾಸಿಕೊಂಡು ಮಲಗಿದೆ."

ಹೀಗೆ ಅವಳು ಆ ದೃಶ್ಯವನ್ನು ವಿವರಿಸುತ್ತಿದ್ದದ್ದು. ಅನಂತರ ಅವಳು ಒಂದು ಮೋಹಕ ನಗುವಿನಿಂದ ಹೇಳುತ್ತಿದ್ದಳು:

"ಆ ಮೇಲೆ ನನ್ನನ್ನ ಹೊನ್ನು, ಚಿನ್ನ, ಬೆಳ್ಳಿ ಅಂತ ಹೊಗಳ್ತಾ ನಯವಾಗಿ ನನ್ನ ಹತ್ತಿರ ಬರ್ತಿದ್ದರು. ನಾನು ಮಲಗಿರ್ತಿರಲಿಲ್ಲ. ಆದರೆ ನಾನು ಮಾತಾಡ್ತಿರಲಿಲ್ಲ." ಆಗಲೂ ಅವಳು ಗಟ್ಟಿಯಾಗಿ ನಗುತ್ತ ಅದರ ಮಧ್ಯೆ ಕೇಳುತ್ತಿದ್ದಳು:

"ಹಾಗೆ ಹೊಗಳಿಕೊಂಡು ಹತ್ತಿರ ಬಂದು ಮೈಮೇಲೆಲ್ಲ ಕಚಗುಳಿ ಇಟ್ಟರೆ. ಮತ್ತೇನು ಮಾಡೋದು?"

ಕಾತ್ಯಾಯಿನಿಗೆ ಅವಳ ಅನುಭವ ನೆನಪಾಗುವುದಿಲ್ಲವೆ? ಅವಳು ಅತ್ತೆಯ ಹತ್ತಿರ ಮಲಗುವುದು. ಮಲಗಿದ ತಕ್ಷಣ ನಿದ್ದೆ ಬರುತ್ತಿತ್ತು. ಆದರೂ ಕೆಲವು ಸಲ ಗಂಡನ ನೆನಪಾಗುತ್ತಿತ್ತು. ಎಷ್ಟೋ ಸಲ ರಾತ್ರಿಯಲ್ಲಿ ಎಚ್ಚರವಾಗಿರುತ್ತಿದ್ದಳು. ಆಗ ಅವಳು ಜ್ಞಾಪಿಸಿಕೊಳ್ಳುತ್ತಿದ್ದದ್ದು. ನಾಣಿಕುಟ್ಟಿಯನ್ನಿರಬೇಕು. ಹೇಗೆ ತಾನು ನಿದ್ದೆ ಮಾಡುವುದೆಂದು ನಾಣಿಕುಟ್ಟಿ ಒಮ್ಮೆ ಹೇಳಿದ್ದಳು. ಅವಳ ಗಂಡನ ತೋಳಿನ ಮೇಲೆ ತಲೆಯಿಟ್ಟುಕೊಂಡು. ಆದರೆ ಅವನದೊಂದು ಕೆಟ್ಟ ಸ್ವಭಾವ. ಅವನ ಕಾಲನ್ನು ಅವಳ ಮೇಲೆ ಇಟ್ಟು ಮಲಗುತ್ತಿದ್ದದ್ದು. ಅವಳಿಗೆ ಸಿಟ್ಟು ಬಂದು ಆ ಕಾಲನ್ನು ತೆಗೆದು ನೂಕುತ್ತಿದ್ದಳು. ಅದು ಅವಳಿಗೆ ಇಷ್ಟವಿಲ್ಲ. ಆ ರೀತಿಯಲ್ಲಿ ಮಲಗುವುದನ್ನು ಕಾತ್ಯಾಯಿನಿ ಜ್ಞಾಪಿಸಿಕೊಳ್ಳುತ್ತಿದ್ದಳು. ಇಲ್ಲ, ಅವಳು ತನ್ನ ಗಂಡನ ಕಾಲನ್ನು ತಳ್ಳುವುದಿಲ್ಲ. ಗಂಡನ ಕೈಯಿಂದ ಕಚಗುಳಿ ಆಡಿಸಿಕೊಳ್ಳುವುದು ಎಷ್ಟೊಂದು ಚೆನ್ನು !

ಆಗಲೂ ಕಣ್ಣೀರು ಸುರಿಸಿಕೊಂಡಿದ್ದ ಕಾತ್ಯಾಯಿನಿಯನ್ನು ನಾಣಿಕುಟ್ಟಿ ಸಹಾನುಭೂತಿಯಿಂದ ಸಮಾಧಾನಪಡಿಸಿದಳು:

"ನೀನು ಅಳಬೇಡ. ನಿನಗೆ ಒಳ್ಳೇದಾಗುತ್ತೆ."

ರಾತ್ರಿ ಕೆಲಸವೆಲ್ಲ ಮುಗಿದ ಮೇಲೆ ಕಾತ್ಯಾಯಿನಿ ತನ್ನ ರೂಮಿನಲ್ಲಿ ದೀಪದ ಮುಂದೆ ಕುಳಿತು ಒಂದು ದೊಡ್ಡ ಕೆಲಸವನ್ನು ಪ್ರಾರಂಭಿಸಿದ್ದಳು: ಪಪ್ಪು ಪಿಳ್ಳೆಯ ಲೆಕ್ಕದ ಪುಸ್ತಕದಿಂದ ಯಾರಿಗೂ ತಿಳಿಯದಂತೆ ಒಂದು ಕಾಗದವನ್ನು ಹರಿದಿದ್ದಳು. ಆ ಪೆನ್ಸಿಲನ್ನೂ ತೆಗೆದುಕೊಂಡಿದ್ದಳು. ಅವಳಿಗೂ ಆ ಪೆನ್ಸಿಲ್ಲಿನಿಂದ ಬರೆಯಬೇಕಾದ ಸಂಗತಿಗಳಿಲ್ಲವೆ? ಮನಸ್ಸು ಮತ್ತು ಹೃದಯದಲ್ಲಿ ತುಂಬಿ ಚೆಲ್ಲುವ ಸಂಗತಿಗಳು—ಬದುಕಿನಷ್ಟು ಭಾರವಾದ ವಿಚಾರಗಳು—ಅವಷ್ಟನ್ನೂ ಬರೆಯಬೇಕು !

ಅದುವರೆಗೂ ಕಾತ್ಯಾಯಿನಿ ಯಾರಿಗೂ ಒಂದು ಕಾಗದ ಬರೆದವಳಲ್ಲ. ಎಲ್ಲ ಅಕ್ಷರಗಳೂ ಅವಳಿಗೆ ಬರುವುದಿಲ್ಲ. ಒಂದು ಕಾಗದ ಬರೆಯುವುದು ಹೇಗೆ ಎನ್ನುವುದೂ ಅವಳಿಗೆ ತಿಳಿಯದು. ಆದರೂ ಅವಳು ಬರೆಯುತ್ತಿದ್ದಾಳೆ. ಮೂಕನಾದರೂ ಅವನ ಭಾವನೆಯನ್ನು ಹೃದಯ ಪ್ರಕಟಿಸುವುದಿಲ್ಲವೆ? ಒಂದು ಮಹಾ ಪ್ರಯತ್ನದಲ್ಲಿ ಅವಳು ತೊಡಗಿದ್ದದ್ದು. ಆ ಹೆಣ್ಣಿಗೆ ಒಂದು ಕಾಗದ ಬರೆಯುವ ಯೋಗ ಬಂದದ್ದು

ಈ ಸ್ಥಿತಿಯಲ್ಲಿ. ಸಂತೋಷದ ಸಂದರ್ಭದಲ್ಲಲ್ಲ. ಅವಳು ಬರೆಯಲಾರಂಭಿಸಿದಳು:

"ಪ್ರಿಯಾ; ಓ ರಾಜ. ಹಿಂಗಾದರೆ ನಾನು ಸತ್ತುಹೋಯಿತಿನಿ. ಅಲ್ಲಿ ಒಬ್ಬಳು ಉಂಟು ಅಂತ ಎಲ್ಲವರೂ ಹೇಳುತಾರೆ. ಅದರೂ ನನ್ನ ನಾಣಿಕುಟ್ಟಿ, ಕುಞ್ಞಿಕುಟ್ಟಿ ಅದು ಸುಳ್ಳು ಅಂತಾರೆ. ಅವರು ಅಳಬ್ಯಾಡ ಅಂತಾರೆ. ನಾನು ಏನು ತಿಳೀದೋಳು. ನನಗಾಸೆ........." ಹೀಗೆ ಮುಂದುವರಿಯಿತು ಆ ಕಾಗದ. ಎಲ್ಲವನ್ನೂ ಬರೆದು ಮುಗಿಸಿರಲಿಲ್ಲ. ಹಾಳೆ ಮುಗಿಯಿತು. ಪೆನ್ಸಿಲಿನ ಮೊನೆಯೂ ಸವೆಯಿತು. ಏನು ಮಾಡುವುದು?

ರೂಮಿನೊಳಗೆ ಬೆಳಕಿದ್ದುದನ್ನು ಕಂಡು ಕುಟ್ಟಿಯಮ್ಮ ಸದ್ದಿಲ್ಲದಂತೆ ಬಂದು ಬಾಗಿಲ ಮರೆಯಲ್ಲಿ ನಿಂತು ನೋಡಿದಳು. ಅದು ಕಾತ್ಯಾಯಿನಿಗೆ ತಿಳಿಯದು. ಅವಳು ಶ್ರದ್ಧೆಯಿಂದ ಬರೆಯುತ್ತ ಕುಳಿತಿದ್ದಳು. ಹೊರಗೆ ಏನು ನಡೆಯುತ್ತಿದೆ ಎನ್ನುವುದು ತಿಳಿಯದು.

ಕುಟ್ಟಿಯಮ್ಮ ಒಳಗೆ ಹೋಗಿ ಪಪ್ಪು ಪಿಳ್ಳೆಯನ್ನು ಕರೆದಳು: "ಮಲಗಿದಿರಾ?"

ಪಪ್ಪು ಪಿಳ್ಳೆ ಮಲಗಿರಲಿಲ್ಲ. ಮಾತ್ರವಲ್ಲ. ನಿದ್ದೆ ಬರುತ್ತಿಲ್ಲ. ಆತನಿಗೆ ನಿದ್ದೆ ಬರುವಂತಹ ದಿನವೂ ಆಗಿರಲಿಲ್ಲ ಅದು. ಅನಿಶ್ಚಿತತೆಯನ್ನು ಅನುಭವಿಸದ ಆ ಮನುಷ್ಯ, ಅದನ್ನು ಮೊತ್ತಮೊದಲಾಗಿ ಅನುಭವಿಸುತ್ತಿದ್ದವ್ರು. ಒಂದು ಸಾವಿರ ಪ್ರಶ್ನೆಗಳನ್ನು ಅವರು ಸ್ವತಃ ಕೇಳಿಕೊಂಡಿದ್ದರು.

ಅವನಿಗೆ ತಿರುವನಂತಪುರದಲ್ಲಿ ಯಾವಳಾದರೂ ಇರಬಹುದೇ? ಕಾತ್ಯಾಯಿನಿ ಯನ್ನು ಸ್ವೀಕರಿಸುತ್ತಾನೆಯೆ? ಈ ವೈವಾಹಿಕ ಜೀವನ ಹೇಗಾಗಬಹುದು? ಇಂಥ ಪ್ರಶ್ನೆಗಳನ್ನೆಲ್ಲ ಅವನ ಹತ್ತಿರ ಕೇಳಿ, ಅನಂತರ ಮದುವೆ ಗೊತ್ತುಮಾಡಿದ್ದರಾಗಿತ್ತು ಎಂದು ಅವರಿಗೆ ಈಗ ಅನ್ನಿಸುತ್ತಿತ್ತು. ಅನು ವಿಚಾರ ವಿವೇಕವಿಲ್ಲದ ಪ್ರವೃತ್ತಿಯಾಗಿ ಹೋಯಿತು. ಪಪ್ಪು ಪಿಳ್ಳೆ ತಪ್ಪು ಒಪ್ಪಿಕೊಳ್ಳುವ ಮನುಷ್ಯನಲ್ಲ.

ಪಪ್ಪು ಪಿಳ್ಳೆ ಹೇಳಿದರು: "ನಿದ್ದೆ ಮಾಡ್ತಿಲ್ಲ, ಏನು ವಿಚಾರ?"

"ಅವಳು ಕಾಗದ ಬರೀತಿದ್ದಾಳೆ."

"ಆ ಕಾಗದವೂ ಅಲ್ಲಿಗೆ ಹೋಗಲಿ." ಅನಂತರ ಪಪ್ಪು ಪಿಳ್ಳೆ ಕೇಳಿದರು: "ಏನೇ ಅವನು ಬರದೆ ಇರ್ತಾನಾ?"

ಕುಟ್ಟಿಯಮ್ಮ ಹೇಳಿದಳು:

"ಅವನು ಬರ್ತಾನೆ. ಖಂಡಿತವಾಗಿಯೂ ಬರ್ತಾನೆ."

ಪಪ್ಪು ಪಿಳ್ಳೆ ಕೇಳಿದರು:

"ಅವನಿಗೆ ಅಲ್ಲಿ ಯಾವಳಾದರೂ ಇರಬಹುದೇನೆ?"

ಕುಟ್ಟಿಯಮ್ಮ ಆ ಮಾತನ್ನು ವಿರೋಧಿಸಿದಳು.

"ಈ ಊರಿನ ಹಾಳು ಹೆಂಗಸರು ಹೇಳೋದಲ್ಲವಾ?"

ಆಲೋಚಿಸಿ ಪಪ್ಪ ಪಿಳ್ಳೆ ಹೇಳಿದರು:

"ದೊಡ್ಡ ತೊಂದರೆಯಾಯ್ತು."

"ಏನು?"

"ಅವನ ಹತ್ರ ಕೇಳಬೇಕಾಗಿತ್ತು."

"ಓ ! ಯಾಕೆ? ಯಾವ ತೊಂದರೆಯೂ ಉಂಟಾಗೋದಿಲ್ಲ."

ಮಾರನೆಯ ದಿನ ಬೆಳಗ್ಗೆ ಒಂದು ಸಲಹೆಯೊಡನೆ ನಾಣಿಕುಟ್ಟಿ ಬಂದದ್ದು. ಹಿಂದಿನ ರಾತ್ರಿ ನಾಣಿಕುಟ್ಟಿ ಅವಳ ಗಂಡನ ಪತ್ರಿರ ವಿಷಯಗಳನ್ನೆಲ್ಲ ವಿವರವಾಗಿ ಹೇಳಿದ್ದಳು.

ಅವನಿಗೆ ತಿರುವನಂತಪುರ ಒಳ್ಳೆಯ ಪರಿಚಯವಿರುವ ಸ್ಥಳ. ಹಿಂದೆ ಯಾವನೋ ಒಬ್ಬ ಉದ್ಯೋಗಸ್ಥನ ಜೊತೆಯಲ್ಲಿ ತಿರುವನಂತಪುರದಲ್ಲಿದ್ದ. ಐದಾರು ವರ್ಷ ಒಂದು ಹೋಟೆಲಿನಲ್ಲೂ ಇದ್ದ. ನಾಣಿಕುಟ್ಟಿ ಹೇಳಿದಳು: "ಕೇಶವಣ್ಣನಿಗೆ ಅಲ್ಲಿ ಅಂತ ಸಂಬಂಧ ಏನಾದರೂ ಇದ್ದರೆ ಹೋಗಿ ರಹಸ್ಯವಾಗಿ ತಿಳಿದುಕೊಂಡು ಬರುವುದಾಗಿ ಹೇಳಿದ್ದಾರೆ. ಒಂದು ಸಲ ಹೋಗಿ ತಿಳಿದುಕೊಂಡು ಬಂದರೇನು? ಕಾತ್ಯಾಯಿನಿಗೆ ಒಪ್ಪಿಗೆಯಿದ್ದರೆ ಹೋಗಿ ಬರಲಿ ಅಂತ ಹೇಳೋದಕ್ಕೆ ನಾನು ಬಂದದ್ದು."

ಕಾತ್ಯಾಯಿನಿಗೆ ಅದನ್ನು ಕುರಿತು ಏನನ್ನೂ ಆಲೋಚಿಸುವುದಕ್ಕಿರಲಿಲ್ಲ. ನಿರ್ಧಾರ ವಾಗಿ ಹೇಳಿದಳು: "ಬೇಡ. ಅದನ್ನು ತಿಳಿಯೋದಕ್ಕೆ ಯಾರೂ ಹೋಗೋದು ಬೇಡ."

ಅಂತು ಈ ವಿಮುಖತೆಯ ರಹಸ್ಯವನ್ನು ತಿಳಿಯಲು ಸಾಧ್ಯವಾಗುತ್ತದೆ ಎನ್ನಿಸಿದರೂ ಅವಳ ಆತ್ಮ ಹೇಳಿದ್ದು ಅದು ಸರಿಯಲ್ಲ ಎಂದು.

●

# [9]

## ಸುಂದರಿಯಾದ ರಾಕ್ಷಸಿ

ಕೆಲವು ದಿನಗಳಲ್ಲಿ ಸೆಕ್ರೆಟರಿಯೇಟ್‌ನಲ್ಲಿ ಹಲವು ಬದಲಾವಣೆಗಳುಂಟಾದುವು. ಎಷ್ಟೋ ಸೆಕ್ರೆಟರಿಗಳಿಗೆ ಸ್ಥಾನಪಲ್ಲಟವುಂಟಾಯಿತು. ಕೆಲವರಿಗೆ ಪೆನ್ಶನ್ ಕೊಟ್ಟು ಕಳುಹಿಸಲಾಯಿತು. ಅಪ್ರಧಾನವಾದ ಸ್ಥಾನಕ್ಕೆ ಪ್ರಧಾನ ಸ್ಥಾನದಲ್ಲಿದ್ದ ಕೆಲವರನ್ನು ಬದಲಾಯಿಸಲಾಯಿತು. ಸೆಕ್ರೆಟರಿ ಪೋತ್ತನನ್ನು ಬಾಳೆ, ಮೆಣಸು ರೋಗನಿವಾರಣಾ ಆಫೀಸರಾಗಿ ಸೆಕ್ರೆಟರಿಯೇಟ್‌ನಿಂದ ಕಳುಹಿಸಲಾಯಿತು. ಮೊದಲಿನ ಚೀಫ್ ಸೆಕ್ರೆಟರಿ ಮೇನನ್ ರಜದಲ್ಲಿದ್ದರು. ಕೆಲವು ಅಸಿಸ್ಟೆಂಟ್ ಸೆಕ್ರೆಟರಿಗಳು ಸೆಕ್ರೆಟರಿಗಳಾದರು. ಈ ಹೊಸ ಬದಲಾವಣೆಗಳಿಂದ ಲೌಲಿಂಗ್ ಕಂಪೆನಿ ಜಯಿಸಿದಂತೆಯೇ. ಆದರೆ ಆ ಸ್ಪರ್ಧೆ ಹಾಗೆ ಅಂತ್ಯಗೊಳ್ಳುವುದಿಲ್ಲವೆಂದು ತಿಳಿದವರ ಅಭಿಪ್ರಾಯ. ಅಸಹಕಾರಿಗಳು ಊರಿನ ಕಂಟ್ರಾಕ್ಟರರ ಪಕ್ಷ ವಹಿಸಿದರು. ಕೆಲವು ಪತ್ರಿಕೆಗಳು ಹೊಸ ಚೀಫ್ ಸೆಕ್ರೆಟರಿಗೂ ಅವರ ಹೊಸ ಸಂವಿಧಾನಕ್ಕೂ ಅನುಕೂಲವಾದವು. ಬೇರೆ ಕೆಲವು ಪತ್ರಿಕೆಗಳು ಕಟುವಾಗಿ ಟೀಕಿಸಿದುವು. ಆ ಪತ್ರಿಕೆಗಳ ಮೇಲೆ. ಸರ್ಕಾರಕ್ಕೆ ದ್ರೋಹವೆಸಗಿದುದಕ್ಕೆ ಕ್ರಮ ಕೈಗೊಳ್ಳಲಾಗುವುದೆಂದೂ ತಿಳಿಯಿತು.

ಈ ಅದಲುಬದಲಾವಣೆಯ ಕಾಲದಲ್ಲಿ ವೈಯಾಪ್ಪುರಿ ಪಿಳ್ಳೆಗೆ ತಹಸೀಲ್ದಾರ್ ಆಗಿ ಒಂದು ವರ್ಗಾವಣೆ ಸಿಕ್ಕಿತು. ಆತ ಮುಪ್ಪಾಟ್ಟುಪುಳಕ್ಕೆ ಹೋಗಬೇಕಾಗಿತ್ತು. ಹಾಗೆ ಸೆಕ್ರೆಟರಿಯೇಟಿನ ರೂಮುಗಳೊಳಗಿಂದ ವಿಶಾಲವಾದ ಲೋಕಕ್ಕೆ ಆತ ಹೋಗುತ್ತಿದ್ದ. ಸಹ್ಯಾದ್ರಿಯ ತಪ್ಪಲಿನ ಶುದ್ಧವಾದ ಗಾಳಿಯನ್ನು ಆತ ಸೇವಿಸಬಹುದು. ಪಂಕದ ಕೆಳಗೆ ಬಿದ್ದು ಕಾಲ ಕಳೆಯುತ್ತಿದ್ದ ಆತನಿಗೆ ಶುದ್ಧವಾದ ವಾಯುಸೇವನೆಯಿಂದ ಸುಖವಾಗಿರಬಹುದೋ ಏನೋ ! ಅಂತು ಆ ಸ್ಥಿತಿಯಿಂದ ಬದಲಾವಣೆ ಹೊಂದುವುದರಲ್ಲಿ ಅರ್ಥವಿತ್ತು. ಇನ್ನುಳಿದಿರುವುದು ಮೂರೇ ವರ್ಷ. ಆ ಮಧ್ಯೆ ಒಂದು ಮನೆ ಕಟ್ಟಿಸಬೇಕು. ಆವನ ಜೊತೆಯಲ್ಲಿ ಇಪ್ಪತ್ತು–ನಲವತ್ತರ ಸ್ಕೇಲಿನಲ್ಲಿದ್ದವರು, ಎಂಬತ್ತು–ನೂರಿಪ್ಪತ್ತರ ಸ್ಕೇಲಿಗೆ ಏರಿದಾಗ ಆತನಿಗೆ ನೂರು–ನೂರೈವತ್ತಾರರ ಸ್ಕೇಲಿತ್ತು. ಎಂಬತ್ತು ನೂರಿಪ್ಪತ್ತು ಇದ್ದವರು ನೂರೈವತ್ತು ಇನ್ನೂರಕ್ಕೇರಿದಾಗಲೂ ಆತನಿಗೆ ನೂರೈವತ್ತೇ ಇದ್ದದ್ದು. ಅವರು ಆತನಿಗೆ ಈಗಲೂ ನೂರೈವತ್ತೇ ಎಂದು ಆಡಿಕೊಳ್ಳುತ್ತಿದ್ದರು. ನಂತರವೂ ಹೇಳುವುದಿತ್ತು. ಜೊತೆಯಲ್ಲಿ ಕೆಲಸಕ್ಕೆ ಸೇರಿದವನು ಒಬ್ಬ ಕೋಟ್ಟೆಯಂ ಪೇಷ್ಕಾರ್ ಆಗಿದ್ದ. ಹಾಗೆಯೇ ಕೆಲವರಿದ್ದರು. ವಿಶ್ವಾಸದಿಂದಲೂ ಅಚ್ಚುಕಟ್ಟಾಗಿಯೂ ಕೆಲಸ ಮಾಡಿದಾತ. ಹಲವು ವಿಜ್ಞಾಪನೆಗಳನ್ನು ಮಾಡಿಕೊಂಡಿದ್ದ. ಚೀಫ್ ಸೆಕ್ರೆಟರಿಯನ್ನು

ತಿಂಗಳಲ್ಲಿ ಒಂದು ದಿನದಂತೆ ಇಷ್ಟು ವರ್ಷಗಳಲ್ಲೂ ಕಂಡಿದ್ದ. ಎಲ್ಲ ವಾರಗಳಲ್ಲಿಯೂ ಜ್ಯೋತಿಷ್ಯದವರನ್ನು ಕಂಡು ಗ್ರಹಯೋಗವನ್ನು ನೋಡಿಸಿದ್ದ. ಥೈಕಾಡು ಸುಬ್ರಹ್ಮಣ್ಯ ದೇವಸ್ಥಾನಕ್ಕೂ ಶಾಸ್ತಾವು ದೇವಾಲಯಕ್ಕೂ ಇತ್ತೀಚೆಗೆ ಪ್ರತಿದಿನ ಹೋಗಿ ದೇವರ ದರ್ಶನ ಮಾಡಿಕೊಂಡು ಬರುತ್ತಿದ್ದ. ಒಳ್ಳೆಯ ಕಾಲ ಬರುತ್ತಿದೆ ಎಂದು ಆತ ಊಹಿಸಿದ್ದ. ಅದೇ ರೀತಿಯಲ್ಲಿ ಈ ಬದಲಾವಣೆಯೂ ಉಂಟಾಗಿತ್ತು.

ಹಾಗೆ ಮುಪ್ಪಾಟ್ಟುಪುಳಕ್ಕೆ ವರ್ಗ ಮಾಡಿಸಿಕೊಳ್ಳಲು ಪ್ರತ್ಯೇಕವಾದ ಕಾರಣವಿದೆ. ಅಲ್ಲಿಗೆ ಹೋಗುವುದಕ್ಕೆ ಇಷ್ಟಪಟ್ಟಿದ್ದವರು ರೆವಿನ್ಯೂ ಆಫೀಸಿನಲ್ಲಿಯೇ ಮೂರು ನಾಲ್ಕು ಜನರಿದ್ದರು. ಅಲ್ಲಿಗೇ ವರ್ಗ ಸಿಕ್ಕಿದ್ದು ಒಳ್ಳೆಯ ಕಾಲದ ಪ್ರಾರಂಭವೆಂದು ವೈದ್ಯಾಪುರಿ ಪಿಳ್ಳೆ ನಂಬಿದ್ದ. ಮುಪ್ಪಾಟ್ಟುಪುಳದ ಅರಣ್ಯ ಪ್ರದೇಶಗಳನ್ನು ಹಂಚಿ ಕೊಡಲು ಸರ್ಕಾರ ತೀರ್ಮಾನಿಸಿತ್ತು. ಅದೊಂದು ಒಳ್ಳೆಯ ಕೆಲಸ. ಜೊತೆಯಲ್ಲಿದ್ದು ಕೆಲಸ ಮಾಡಿದ ಮನುಷ್ಯ ಕೋಟ್ಟಯಂ ಪೇಷ್ಕಾರ್. ಅದೂ ಹಿಡಿಸುವ ಕಲಸ. ಈ ಮೂರು ವರ್ಷಗಳಲ್ಲಿ ಖಂಡಿತವಾಗಿಯೂ ಒಂದು ಮನೆ ಕಟ್ಟಿಸಬಹುದು.

ಈ ಮಧ್ಯೆ ಪಾರ್ಕ್ ವ್ಯೂವಿನಲ್ಲಿ ಪರ್ಸನಲ್ ಸ್ಟಾಫಿನ ನೇಮಕ ನಡೆಯಿತು. ಕೇಶವ ಪಿಳ್ಳೆಯನ್ನು ನಲವತ್ತು–ಎಂಬತ್ತರ ಸ್ಕೇಲಿನಲ್ಲಿ ನೇಮಕ ಮಾಡಲಾಗಿತ್ತು— ಈಗ ಸಿಕ್ಕುತ್ತಿದ್ದ ಎರಡರಷ್ಟು.

ಅಂದು ಕೇಶವ ಪಿಳ್ಳೆ ಸೆಕ್ರೆಟರಿಯೇಟಿನಲ್ಲಿ ಪ್ರಸಿದ್ಧ ವ್ಯಕ್ತಿಯಾದ. ಹೆಚ್ಚು ಜನರಿಗೆ ಪರಿಚಯವಿಲ್ಲದ ಮನುಷ್ಯನನ್ನು ಎಲ್ಲರೂ ಕೇಳಿ ಪರಿಚಯ ಮಾಡಿಕೊಂಡರು. ಹರಿಹರಯ್ಯರ್, ಗೋವಿಂದನ್ ನಾಯರ್, ಪ್ರಭಾಕರನ್ ನಾಯರ್, ಇವರೆಲ್ಲರಿಗೂ ಅದು ಹೇಗೆ ನಡೆಯಿತು ಎಂದು ಊಹಿಸುವುದು ಸಾಧ್ಯವಿದ್ದರೂ ಅವರಿಗೆ ಒಂದು ವಿಷಯ ಹೇಳುವುದಿತ್ತು. ಗೋವಿಂದನ್ ನಾಯರ್ ಹೇಳಿದ:

"ಅಂತು ನೀನೊಬ್ಬ ಸಮರ್ಥನೇ ಸರಿ. ಮಾತಾಡದೇ ಇದ್ದು ಕೆಲಸ ಸಾಧಿಸಿಬಿಟ್ಟೆ ಯಲ್ಲ! ಉಳಿದ ಕೆಲವರು ಶ್ರಮಿಸಿದ್ದು ವ್ಯರ್ಥವಾಯ್ತು. ಜೊತೆಯಲ್ಲೇ ಇದ್ದ ನಮಗೂ ಗೊತ್ತಿಲ್ಲ."

ಹರಿಹರಯ್ಯರ್ ಹೇಳಿದರು:

"ಕೇಳು ಪಿಳ್ಳೆ: ನಾವು ಆಡಿದ್ದನ್ನು ವಾಪಸ್ಸು ತೆಗೆದುಕೊಂಡಿದ್ದೇವೆ. ಆಗ ಪಕ್ಕ ಪಕ್ಕದ ಕುರ್ಚಿಯಲ್ಲಿ ಕುಳಿತುಕೊಳ್ಳೋದು ಸರಿಯಲ್ಲ ಅನ್ನಿಸಿತು. ಈಗ ಅದು ಸರಿ ಅನ್ನಿಸುತ್ತೆ. ನೀವಿಬ್ಬರೂ ಚೆನ್ನಾಗಿರಿ. ಇದು ಬ್ರಾಹ್ಮಣನ ಆಶೀರ್ವಾದ."

ಹರಿಹರಯ್ಯರ್ ತಾಂಬೂಲದ ಕರೆ ಹಿಡಿದಿದ್ದ ಹಲ್ಲನ್ನು ತೋರಿಸುತ್ತ ಗಟ್ಟಿ ಯಾಗಿ ನಕ್ಕರು. ತಂಗಮ್ಮ ಮದುವೆಯ ಹೆಣ್ಣಿನಂತೆ ನಾಚಿಕೆಯಿಂದ ತಲೆತಗ್ಗಿಸಿದಳು. ಹಾಗೆ ತಲೆತಗ್ಗಿಸಿಕೊಂಡು ಕೇಶವ ಪಿಳ್ಳೆಯ ಕಡೆಗ ನೋಡಿದಳು. ಕೇಶವ ಪಿಳ್ಳೆ ಒಂದು ಮುಸಿನಗು ನಕ್ಕ.

ಸ್ವಲ್ಪ ಗೌರವದಿಂದಲೇ ಸ್ವಾಮಿ ತಂಗಮ್ಮನ ಹತ್ತಿರ ಹೇಳಿದರು:

"ಇಲ್ಲಿ ನೋಡು ತಂಗಮ್ಮ, ಇನ್ನುಮೇಲೆ ಆ ಕುರ್ಚಿಯಲ್ಲಿ ಒಬ್ಬಳೇ ಕುಳಿತು ಕೊಳ್ಳಬೇಕಾಗುತ್ತೆ. ಆಗ ಪಿಳ್ಳೆ ಹತ್ತಿರದಲ್ಲಿಲ್ಲವಲ್ಲ ಅನ್ನಿಸುತ್ತೆ. ಅದಕ್ಕೇ 'ವಿರಹ' ಅಂತ ಸಂಸ್ಕೃತದಲ್ಲಿ ಹೇಳಿರೋದು. ಸರ್ಕಾರದ ಕೆಲಸ ಸರಿಯಾಗಿ ನೋಡಿಕೊಳ್ಳಬೇಕು. ನೆನಸಿಕೊಳ್ತಾ ಕುಳಿತಿರೋದಕ್ಕೆ ಸಾಧ್ಯವಿಲ್ಲ."

ಇಷ್ಟು ಹೇಳಿ ಸ್ವಾಮಿ ಮತ್ತೊ ನಕ್ಕರು.

ಸ್ವಾಮಿಯದು ಒಂದು ಅಭಿಪ್ರಾಯವಿತ್ತು. ಕೇಶವ ಪಿಳ್ಳೆಗೆ ಆ ಚಿಕ್ಕ ಸೆಕ್ಷನ್ನಿನ ಪರವಾಗಿ ಒಂದು ಬೀಳ್ಕೊಡುಗೆ ಏರ್ಪಡಿಸಬೇಕು ಎನ್ನುವುದು. ಆ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿರಲಿಲ್ಲ. ಸ್ವಾಮಿ ಹೇಳಿದರು:

"ಕೇಶವ ಪಿಳ್ಳೆಗೆ ಇದಕ್ಕಿಂತಲೂ ದೊಡ್ಡ ಬೀಳ್ಕೊಡುಗೆಗಳು ಇನ್ನು ಮೇಲೆ ದೊರೆ ಯುತ್ತವೆ, ಸಂಶಯವಿಲ್ಲ. ಆದರೆ ಮೊದಲನೆಯದು ನಮ್ಮದಾಗಿರಬೇಕು. ಅದು ಕೇಶವ ಪಿಳ್ಳೆಯ ನೆನಪಿನಲ್ಲೂ ಇರಲಿ. ಈ ಮಾರ್ಗದ ಮೂಲಕ ಸೆಕ್ರೆಟರಿಯಾಗುವಾಗ ಕೇಶವ ಪಿಳ್ಳೆ ನಮ್ಮನ್ನು ಜ್ಞಾಪಿಸಿಕೊಳ್ಳಬೇಕು. ಕೇಳಿಸ್ತಾ ಕೇಶವ ಪಿಳ್ಳೆ? ಕೇಳಿಸ್ತಾ ತಂಗಮ್ಮ?"

ಗೋವಿಂದನ್ ನಾಯರ್ ಹರಿಹರಯ್ಯರ್ ಹತ್ತಿರ ಕೇಳಿದರು: "ಆಗಲೂ ಸ್ವಾಮಿ ಇರ್ತೀರಾ? ಸ್ವಾಮಿಗೆ ಪೆನ್ಶನ್ ಅನ್ನೋದಿಲ್ಲವಾ?"

ಎಲ್ಲವೂ ಗೊತ್ತಿದ್ದಂತೆ ಸ್ವಾಮಿ ಹೇಳಿದರು:

"ನಿಮಗೇನು ಗೊತ್ತು ಗೋವಿಂದನ್ ನಾಯರೇ? ಅದಕ್ಕೆ ತುಂಬ ಕಾಲ ಬೇಕಾಗೋದಿಲ್ಲ. ಕೇಶವ ಪಿಳ್ಳೆ ಸೆಕ್ರೆಟರಿಯಾದ ಮೇಲೆ ಈ ಹರಿಹರಯ್ಯರಿಗೆ ಪೆನ್ಶನ್."

ಸ್ವಾಮಿ ಒಂದು ಅಭಿನಂದನೆಯನ್ನು ತಿಳಿಸಿದರು.

"ಪಿಳ್ಳೆಯ ಬುದ್ಧಿವಂತಿಕೆಯ ವಿಷಯದಲ್ಲೂ ಭಾಗ್ಯದ ವಿಷಯದಲ್ಲೂ ನಮಗೆ ಸಂತೋಷವುಂಟು. ಪರವಾಯಿಲ್ಲ."

ಅಷ್ಟು ಹೊತ್ತಿಗೆ ಮಾದೇವನ್ ಪಿಳ್ಳೆ ಅಲ್ಲಿಗೆ ಬಂದ. ಅವನು ಕೇಳಿದ:

"ಮಾದೇವನ್ ಪಿಳ್ಳೆಗೆ ಏನೂ ಬಹುಮಾನ ಕೊಡೋದಿಲ್ಲವಾ?"

ಕೇಶವ ಪಿಳ್ಳೆ ಕೇಳಿದ:

"ನಿನಗೇನು ಬೇಕಣ್ಣ?"

ಮಾದೇವನ್ ಪಿಳ್ಳೆ ಹರಿಹರಯ್ಯರ ಹತ್ತಿರ ಹೇಳಿದ:

"ಸ್ವಾಮಿ, ಇವತ್ತು ಮಾದೇವನ್ ಪಿಳ್ಳೆ ಅಣ್ಣನಂತೆ. ಸ್ವಾಮಿಯೂ ಕೇಳಿಸಿ ಕೊಂಡಿರಲ್ಲ? ನಾಳೆ ಪಾರ್ಕ್ ವ್ಯೂವಿನಲ್ಲೂ ಮತ್ತೊಂದು ದಿನ ಭಕ್ತಿವಿಲಾಸದಲ್ಲೂ ಆದಾಗಲೋ?"

ಹರಿಹರಯ್ಯರ್ ಕೇಳಿದರು:

"ಆಗ ತಾನೆ ಏನು ಮಾದೇವನ್ ಪಿಳ್ಳೆ?"

ಮಾದೇವನ್ ಪಿಳ್ಳೆ ಹೇಳಿದ:

"ಆಗ ಈ ಮಾದೇವನ್ ಪಿಳ್ಳೆ ಒಬ್ಬ ಈಡಿಯಟ್ ಇಲ್ಲದಿದ್ದರೆ ರ್‍ಯಾಸ್ಕಲ್ ಆಗ್ತಾನೆ. ತೊಲಗಾಚಿ ಅನ್ನೋ ಹಾಗೆ ಆಗಿರ್‍ತಾನೆ."

ಕೇಶವ ಪಿಳ್ಳೆ ಏನೂ ಮಾತಾಡಲಿಲ್ಲ. ಆತ ಹುಸಿ ನಗು ನಗುತ್ತಿದ್ದ. ತಾನು ಏನೇ ಆದರೂ ಯಾರೇ ಆದರೂ ಹೀಗೇ ಇರುತ್ತೇನೆಂದು ಮರ್ಯಾದೆಗಾಗಿಯಾದರೂ ಆತ ಹೇಳಬೇಕಾದದ್ದಲ್ಲವೆ? ಆದರೆ ಹಾಗನ್ನಲಿಲ್ಲ. ಆ ಮರ್ಯಾದೆ ಗೊತ್ತಿರಲಿಲ್ಲವ? ಪರಿಪರಯ್ಯರ್ ಹೇಳಿದರು:

"ಭೇಷ್ ಕೇಶವ ಪಿಳ್ಳೆ. ಅದೇ ಸರಿ. ನಾಳೆ ನಾವು ಹೇಗಿರ್‍ತೀವಿ ಅಂತ ಹೇಗೆ ಹೇಳೋದು? ಆದ್ದರಿಂದ ಬಾಯಲ್ಲಿ ಏನೂ ಹೇಳದೇ ಇರೋದೇ ಒಳ್ಳೆಯದು."

ಅಂದು ಸೆಕ್ಷನ್‌ನಲ್ಲಿ ಒಂದು ಸಣ್ಣ ಟೀ ಪಾರ್ಟಿಯಿತ್ತು. ಅದು ಕಳೆದ ಮೇಲೆ ಹೋಗಿಬರುತ್ತೇನೆಂದು ಹೇಳಲು ಸೂಪರಿಂಟೆಂಡೆಂಟರ ಮನೆಗೆ ಹೋದ. ವೈಯಾಪುರಿ ಪಿಳ್ಳೆಯನ್ನು ಹಸನ್ಮುಖದಿಂದ ಕಂಡದ್ದು ಅಂದು. ಆತ ಹತ್ತಿರ ಬಂದು ಕೇಶವ ಪಿಳ್ಳೆಯ ಕೈಗಳೆರಡನ್ನೂ ಹಿಡಿದು ಕುಲುಕಿ ಭುಜ ತಟ್ಟಿ ಹೇಳಿದರು:

"ನಿಮ್ಮನ್ನು ಆ ದಿನ ನೋಡಿದಾಗಲೇ ನನಗೆ ಗೊತ್ತಾಯ್ತು. ನೀವು ಮೇಲೆ ಬರ್‍ತೀರಿ ಅಂತ. ಅದು ನಿಮ್ಮ ಮುಖದಲ್ಲಿ ಎದ್ದು ಕಾಣಿಸುತ್ತೆ. ಸಾಮುದ್ರಿಕಾಶಾಸ್ತ್ರ ಹೇಳೋದು ಹಾಗೆ."

ಕುಳಿತುಕೊಳ್ಳುವಂತೆ ಹೇಳಿದರು ವೈಯಾಪುರಿ ಪಿಳ್ಳೆ. ಕೇಶವ ಪಿಳ್ಳೆ ಕುಳಿತುಕೊಳ್ಳಲಿಲ್ಲ. ಕೇಶವ ಪಿಳ್ಳೆಯನ್ನು ಹಿಡಿದು ಕುಳ್ಳಿರಿಸಿದರು. ಆದರೂ ಕೇಶವ ಪಿಳ್ಳೆ ಸರಿಯಾಗಿ ಕುಳಿತುಕೊಳ್ಳಲಿಲ್ಲ. ಅನಂತರ ವೈಯಾಪುರಿ ಪಿಳ್ಳೆ ಕೇಳಿದರು:

"ಕೇಶವ ಪಿಳ್ಳೆಯ ನಕ್ಷತ್ರ ಯಾವುದು?"

"ರೇವತಿ."

ಸೂಪರಿಂಟೆಂಡೆಂಟ್ ಬೆರಳಿನಲ್ಲಿ ಏನೋ ಲೆಕ್ಕ ಹಾಕಿ ಒಳ್ಳೆಯ ಕಾಲವನ್ನೂ ಕೆಟ್ಟ ಕಾಲವನ್ನೂ ಗುಣಿಸಿ ನೋಡಿದರು. ಬಳಿಕ ಹೇಳಿದರು:

"ಶುಕ್ರದೆಶೆ. ಅಷ್ಟೊಂದು ಒಳ್ಳೇಕಾಲ ಅಂತ ಹೇಳೋದಕ್ಕಾಗೋದಿಲ್ಲ. ಆದರೆ ಒಳ್ಳೆಯ ಕಾಲದಲ್ಲಿ ನಡೆಯಬೇಕಾದದ್ದೆಲ್ಲ ನಡೆಯುತ್ತೆ."

ಒಂದು ಸಣ್ಣ ನಗುವಿನೊಂದಿಗೆ ಅವರು ಹೇಳಿದರು: "ಈ ಕಾಲದಲ್ಲಿ ಮದುವೆಯೂ ನಡೆಯುತ್ತೆ." ಸ್ವಲ್ಪ ಹೊತ್ತು ಬಿಟ್ಟು ವೈಯಾಪುರಿ ಪಿಳ್ಳೆ ಹೇಳಿದರು: "ಅಷ್ಟೊಂದಂ ಒಳ್ಳೆಯ ಸ್ಥಾನ ಪತ್ನಿಯ ಸ್ಥಾನ! ಪತ್ನಿ ಪರಮ ಭಾಗ್ಯವತಿಯಾಗಿರುತ್ತಾಳೆ."

ತಂಗಮ್ಮನನ್ನು ಉದ್ದೇಶಿಸಿಯಾಗಿರಬೇಕು ಸೂಪರಿಂಟೆಂಡೆಂಟ್ ಹೇಳುವುದೆಂದು

ಕೇಶವ ಪಿಳ್ಳೈಗೆ ತೋರಿತು. ಆದರೆ ಮರುಕ್ಷಣ ಕಿಟ್ಟುಮಾವನ ಶಬ್ದ ಕಿವಿಯಲ್ಲಿ ಮೊಳಗಿತು: "ಅವಳು ಭಾಗ್ಯವತಿ."

ಸೂಪರಿಂಟೆಂಡೆಂಟ್ ಕೇಳಿದರು:

"ಕೇಶವ ಪಿಳ್ಳೈ ಜಾತಕ ಇದೆಯಾ?"

"ಊರಿನಲ್ಲಿ ಕಣಿಯಾರ್ ಗುರುತು ಹಾಕಿದ್ದಿರಬೇಕು. ಇಲ್ಲಿಲ್ಲ."

ಸ್ವಲ್ಪ ಗಂಭೀರವಾಗಿ ವೈಯಾಪ್ಪುರಿ ಪಿಳ್ಳೈ ಹೇಳಿದರು: "ಅದು ಸಾಲದು. ಒಂದು ಜಾತಕ ಬೇಕು. ವಿವರವಾದ ಜಾತಕ. ಪುಳಿಮೂಟ್ಟಿನಲ್ಲಿ ಒಬ್ಬ ಜೋಯಿಸನಿದ್ದಾನೆ. ಅವನು ಚೆನ್ನಾಗಿ ತಿಳಿದುಕೊಂಡಿದ್ದಾನೆ. ಅವನ ಹತ್ತಿರ ಜಾತಕ ಬರೆಸಬೇಕು. ಅದನ್ನನುಸರಿಸಿ ಜೀವಿಸಬೇಕು. ಈಗಿನ ಚೀಫ್ ಸೆಕ್ರೆಟರಿಯ ಪ್ರೊಮೋಶನ್ ತಾರೀಕಿನ ವರೆಗೂ ಆತ ಜಾತಕ ಬರೆದುಕೊಟ್ಟಿದ್ದಾನೆ."

ಆತನಿಂದ ಒಂದು ಜಾತಕ ಬರೆಸುವುದಾಗಿ ಕೇಶವ ಪಿಳ್ಳೈ ಒಪ್ಪಿದ.

"ಕೇಶವ ಪಿಳ್ಳೈಯ ದೇವತೆ ಶನೀಶ್ವರ. ಸರಿಯಾಗಿ ಅಯ್ಯಪ್ಪ ಸೇವೆ ಮಾಡಿಸಬೇಕು. ಚೀಫ್ ಸೆಕ್ರೆಟರಿಯ ಈ ಅಭ್ಯುದಯ ಬಂದದ್ದು ಹೇಗೆ ಅಂತ ಗೊತ್ತಾ? ಶನಿಯನ್ನು ಪೂಜಿಸಿದ್ದರಿಂದ. ಈಗ ದಿವಾನರಿಗೂ ಅದು ಅರ್ಥವಾಗಿದೆ."

ಮತ್ತೆ ಕೆಲವು ಹಿತವಚನಗಳನ್ನು ವೈಯಾಪ್ಪುರಿ ಪಿಳ್ಳೈ ಹೇಳಿದರು. ಹೇಗೆ ಸರ್ಕಾರದ ಕೆಲಸ ನಡೆಸಿಕೊಂಡು ಹೋಗಬೇಕು ಇತ್ಯಾದಿಗಳನ್ನು ಕುರಿತು.

ಹೋಗಿಬರುತ್ತೇನೆ ಎಂದು ಹೇಳಿ ಕೇಶವ ಪಿಳ್ಳೈ ಎದ್ದ. ಸೂಪರಿಂಟೆಂಡೆಂಟರಿಗೆ ಕೆಲವು ಸ್ವಂತ ವಿಷಯಗಳನ್ನು ಹೇಳುವುದಿತ್ತು.

"ನಾನು ಯಾವಾಗಲೂ ಗ್ರಹಚಾರ ಹಿಡಿದವನು. ದೊಡ್ಡ ಗ್ರಹಚಾರ ಹಿಡಿದವನು. ಇನ್ನು ನಾಲ್ಕೈದು ವರ್ಷ ಸರ್ವೀಸಿದೆ. ಹದಿನೆಂಟನೆಯ ವಯಸ್ಸಿನಲ್ಲಿ ಸೆಕ್ರೆಟರಿಯೇಟ್‌ನಲ್ಲಿ ಸೆಲ್ಫ್‌ನ ಹತ್ತಿರ ಬಂದು ಕುಳಿತದ್ದು. ಇವತ್ತು ಹೊರಗೆ ಬಂದದ್ದು. ಕೆಲವು ಸಲ ನನಗೆ ಸಂಬಂಧಪಟ್ಟ ಕಾಗದ ಪತ್ರಗಳು ನೀವಿರುವಲ್ಲಿಗೆ ಬರಬಹುದು. ಅದನ್ನು ನೋಡಿಕೊಳ್ಳಬೇಕು."

ಸೂಪರಿಂಟೆಂಡೆಂಟ್ ಅದೆಲ್ಲ ಏನಿರಬಹುದು ಎಂತಹುದು ಎಂದು ವಿವರಿಸಿದರು.

"ಕೆಟ್ಟ ಕಾಲ, ಕೇಶವ ಪಿಳ್ಳೈ. ಇದು ಅಧಿಕಾರವನ್ನು ಎದುರಿಸುವ ಕಾಲ. ಈ ಮುಂದಾಳುಗಳು ತೊಂದರೆ ಕೊಡೋ ಜನ. ರಾಜ, ಚಕ್ರವರ್ತಿ ಎಂದು ಹೇಳುವಾಗ ಅವರಿಗೆ ಯಾವ ಗೌರವವೂ ಇಲ್ಲ. ಮತ್ತೆ ತಹಸೀಲ್‌ದಾರರ ವಿಷಯ ಯಾವ ಮಹಾ! ಅವರು ಕಾರಣವಿಲ್ಲದಿದ್ದರೂ ದೂರು ಕೊಡಬಹುದು. ಚೀಫ್ ಸೆಕ್ರೆಟರಿಯ ಸಮೀಪದಲ್ಲಿ ನನ್ನವರೊಬ್ಬರಿದ್ದಾರೆ ಎನ್ನುವುದು ನನಗೆ ಒಂದು ದೊಡ್ಡ ಭರವಸೆ. ಅದೂ ರಾಜಧಾನಿಯಿಂದ ದೂರ ಇರುವಾಗ. ಕೇಶವ ಪಿಳ್ಳೈಗೆ ಈಗ ಅದೊಂದೂ ಅರ್ಥವಾಗುವುದಿಲ್ಲ."

ತುಂಬಿದ ನಗುವಿನೊಡನೆ ಆತ ಹೇಳಿದರು: "ನೀವು ಒಬ್ಬ ತಹಸೀಲ್‌ದಾರ್, ಅಥವಾ ಪೇಷ್ಕಾರ್ ಆಗುವಾಗ ಅದು ಅರ್ಥವಾಗುತ್ತೆ."

ಸೂಪರಿಂಟೆಂಡೆಂಟ್ ಕೂಡ ಬೇರೆಯವರು ಹೇಳುವ ಹಾಗೆಯೇ ಹೇಳುತ್ತಾರೆ—ಆತ ಪೇಷ್ಕಾರ್ ಆಗುತ್ತಾನೆ ಎಂದು.

ಕೇಶವ ಪಿಳ್ಳೆ ಹೋಗಿ ಬರುತ್ತೇನೆಂದು ಹೊರಟ. ದಾರಿಯಲ್ಲಿ ಅನೇಕ ವಿಷಯ ಗಳನ್ನು ತಲೆಯಲ್ಲಿ ತುಂಬಿಕೊಂಡು ನಡೆಯುತ್ತಿದ್ದ.

ಲಾಡ್ಜಿನ ಹತ್ತಿರ ಬಂದಾಗ ಲಾಡ್ಜಿನ ಎಲ್ಲ ಸ್ನೇಹಿತರೂ ಅಭಿನಂದಿಸಲು ಕಾದು ನಿಂತಿದ್ದರು. ಅಲ್ಲಿ ಒಂದು ಪರಿಹಾಸ್ಯದ ಅರಿವು ಆತನಿಗುಂಟಾಯಿತು. ಅಲ್ಲಿಯೂ ಅವರು ಹೇಳುವುದಿದ್ದದ್ದು ಅಭ್ಯುದಯವನ್ನು ಕುರಿತು. ಸೆಕ್ರೆಟರಿಯ ಸ್ಥಾನದ ವರೆಗೆ, ಕೈ ಎತ್ತುವ ವರೆಗೆ —ಎಂದು. ಆತನಿಗೆ ಆ ವಿಷಯದಲ್ಲಿ ಸ್ವಲ್ಪ ಅಪನಂಬಿಕೆಯುಂಟಾಯಿತು. ಇನ್ನು ಯಾರೂ ಹೀಗೆ ಹೇಳದಿದ್ದರೆ ಒಳ್ಳೆಯದು ಎಂದುಕೊಂಡ. ತಾನು ಇದಕ್ಕೆ ಅರ್ಹನೇ ಎನ್ನುವ ವರೆಗೆ ಆತ ಸಂಶಯಪಟ್ಟ. ಆತನ ಶಕ್ತಿ ಕುಂದಿದಂತೆ ತೋರಿತು. ಪದ್ಮನಾಭ ಪಣಿಕ್ಕರ್ ನೇರವಾಗಿ ಕೇಳಿದ:

"ಮದುವೆ ನಿಶ್ಚಯಿಸಿ ಆಯ್ತಾ?"

ಇಂತಹ ಎದೆ ಇರಿಯುವಂತಹ ಪ್ರಶ್ನೆಯನ್ನು ಇದುವರೆಗೆ ಯಾರೂ ಕೇಳಿರಲಿಲ್ಲ. ಪದ್ಮನಾಭ ಪಣಿಕ್ಕರ್ ಪ್ರಶ್ನೆಯಲ್ಲಿ ಸ್ವಲ್ಪ ವಿಷ ಬೆರೆತಿತ್ತು. ಅವನೂ ಪಾರ್ಕ್ ವ್ಯೂವಿನೊಳಕ್ಕೆ ಪ್ರವೇಶಿಸಲು ಪ್ರಯತ್ನಿಸಿದ್ದ. ಆದರೆ ಅದು ಫಲಿಸಿರಲಿಲ್ಲ. ಅದರ ಬೇಸರ ಅವನಿಗಿತ್ತು.

ಕೇಶವ ಪಿಳ್ಳೆ ಏನೂ ಹೇಳಲಿಲ್ಲ. ಕೊಚ್ಚುಣ್ಣಿ ನಾಯರ್ ಒಂದು ಮುನ್ಸೂಚನೆ ಕೊಟ್ಟ: "ಜಾಗ್ರತೆ. ಅಲ್ಲಿ ಹೊಂದಿಕೊಂಡು, ಅರಿತುಕೊಂಡು ಬಾಳದೇ ಇದ್ದರೆ ತೊಂದರೆ ಇದೆ. ದೊಡ್ಡವರ ಹತ್ತಿರದ ವ್ಯವಹಾರ. ಯಾವಾಗ ದೊಡ್ಡ ಅಧಿಕಾರಿಗಳಿಗೆ ಸಿಟ್ಟು ಬರುತ್ತೆ ಅಂತ ಗೊತ್ತಾಗೋದಿಲ್ಲ."

ಪದ್ಮನಾಭ ಪಣಿಕ್ಕರ್ ಅದಕ್ಕೆ ಸಮಾಧಾನ ಹೇಳಿದ: "ಕೇಶವ ಪಿಳ್ಳೆ ಹೆದರಿಕೊಳ್ಳ ಬೇಕಾದದ್ದೇನೂ ಇಲ್ಲ. ಚೀಫ್ ಸೆಕ್ರೆಟರಿ ಸ್ವಂತ ಮನುಷ್ಯ ತಾನೆ?"

ಕೊಚ್ಚುಣ್ಣಿ ನಾಯರ್‌ಗೆ ಆ ಮಾತಿನಲ್ಲಿ ದೊಡ್ಡ ವಿಶ್ವಾಸವಿರಲಿಲ್ಲ. ಅವನು ಹೇಳಿದ:

"ಸ್ವಾಮಿ ಪಣಿಕ್ಕರ್! ನಮಗೆ ಗೊತ್ತಿಲ್ಲವಾ? ಈ ದೊಡ್ಡ ಆಫೀಸರುಗಳು! ಅವರಿಗೆ ತಮ್ಮ ಮನುಷ್ಯ, ನಂಟ ಅನ್ನೋದೇನಾದರೂ ಉಂಟಾ?"

ಎಲ್ಲವನ್ನೂ ಕೇಳಿಸಿಕೊಂಡಿದ್ದ ಉಣ್ಣಿ ಅಭಿಪ್ರಾಯಪಟ್ಟ: "ಕೇಶವ ಪಿಳ್ಳೆ ಪಾರ್ಕ್ ವ್ಯೂವಿಗೆ ಇನ್ನೂ ಕಾಲಿರಿಸಿಲ್ಲ. ಅದಕ್ಕೆ ಮೊದಲೇ ಬಾಯಿ ಮುಚ್ಚಿಕೊಂಡಿರೋದನ್ನ ಕಲಿತನಲ್ಲಪ್ಪ!"

ಪಣಿಕ್ಕರ್ ಹೇಳಿದ: "ಮೊದಲೇ ಕೇಶವ ಪಿಳ್ಳೆ ಸದ್ದುಗದ್ದಲ ಇಲ್ಲದ ಮನುಷ್ಯ ಅಲ್ವಾ?"

ಒಂದೇ ದಿನದಲ್ಲಿ ಆ ಲಾಡ್ಜಿನಲ್ಲಿದ್ದವರಲ್ಲಿ ಉಂಟಾಗಿದ್ದ ವ್ಯತ್ಯಾಸ ಭಾವನೆಯನ್ನು ಕೇಶವ ಪಿಳ್ಳೆ ಕಂಡ. ಅಲ್ಲಿ ಮಾತ್ರವಲ್ಲ, ಎಲ್ಲರಲ್ಲಿಯೂ ಬದಲಾವಣೆಯುಂಟಾಗಿದೆ. ಇದು ವರೆಗೆ ಒಂಟಿಯಾಗಿದ್ದ ಮಂಡಲದಿಂದ ತಾನು ಒಂಟಿಯಾದ ಹಾಗೆ ತೋರಿತು. ಸ್ವಲ್ಪ ಮೇಲಿನ ಮಂಡಲಕ್ಕೆ ಏರಿದುದಾಗಿ ಎಲ್ಲರೂ ಭಾವಿಸಿದರು. ಅವನಿಗೆ ಅಲ್ಲಿ ಜೊತೆಯವರಿಲ್ಲದಂತಾದರು.

ಮನೆಗೆ ತನ್ನ ಸಂಬಳ ನಲವತ್ತು ರೂಪಾಯಿಗೆ ಏರಿತು ಎಂದು ಮಾತ್ರ ಬರೆದ. ಕೆಲಸ ಎಲ್ಲಿ ಎಂದಾಗಲೀ ಯಾವುದು ಎಂದಾಗಲೀ ತಂದೆತಾಯಿಗಳಿಗೆ ತಿಳಿಸಿರಲಿಲ್ಲ.

ಜೋಯಿಸನನ್ನು ಕಂಡು ಹೊಸ ಕೆಲಸಕ್ಕೆ ಸೇರಬೇಕಾದ ಒಳ್ಳೆಯ ಮುಹೂರ್ತವನ್ನು ನೋಡಿದ. ಆ ಜೋಯಿಸನೂ ಹೇಳಿದುದು ಪತ್ನೀಸ್ಥಾನ ಬಹಳ ವಿಶೇಷವೆಂದು. ಆ ಸ್ಥಾನದಲ್ಲಿ ಇರುವವರು ಯಾರು? ಕಾತ್ಯಾಯಿನಿಯೇ? ತಂಗಮ್ಮನೇ?

ಆ ರಾತ್ರಿಯಲ್ಲಿ ಆ ನಲ್ಲ ನಲ್ಲೆಯರು ಸಂಕೇತಸ್ಥಳದಲ್ಲಿ ಭೇಟಿಯಾದರು. ತಂಗಮ್ಮ ಎಂದಿಗಿಂತ ಹೆಚ್ಚು ಉತ್ಸಾಹದಿಂದಿದ್ದಳು. ಒಂದು ರೀತಿಯ ಉನ್ಮಾದವೂ ಇತ್ತು. ಆದರೆ ಕೇಶವ ಪಿಳ್ಳೆ ಕ್ಷೀಣಿಸಿಹೋಗಿದ್ದ. ಆತನ ಉನ್ಮಾದ ಮಾತ್ರವಲ್ಲ ಓಜಸ್ಸು ಕೂಡ ಬಾಡಿಹೋದಂತಿತ್ತು. ಅವಳ ತೋಳುಗಳೊಳಗೆ ತಣ್ಣಗಾಗಿ ಬಾಡಿದ್ದ ಆ ಪುರುಷ ಸೇರಿದ.

ಅವಳು ಸ್ವಲ್ಪ ಸಿಟ್ಟಿನಿಂದಲೇ ಕೇಳಿದಳು:

"ಇದೇನಿದು?"

ಕೇಶವ ಪಿಳ್ಳೆ ತನ್ನ ಶಕ್ತಿಕ್ಷಯದ ಕಥೆಯನ್ನು ಹೇಳಲು ಹಿಂದುಳಿಯಲಿಲ್ಲ. ಎಲ್ಲರೂ ಬಹುಬೇಗ ಒಂದು ದೊಡ್ಡ ಉದ್ಯೋಗಸ್ಥನೆಂದು ಕಾಣುತ್ತಿದ್ದಾರೆ. ಒಂದು ತರಹ ಭಯ, ಒಂದು ತರಹ ಗಾಬರಿ, ಒಂದು ತುಡಿತ ಎಂದು ಆತ ಹೇಳಿದ.

ತನ್ನ ಒಂದು ಉಪಯೋಗ ಸಾಧನವೆನ್ನುವ ನೆಲೆಯಲ್ಲಿ ಅವಳು ಹೇಳಿದಳು:

"ಹಾಗಿದ್ದರೆ ನನ್ನ ಹಳೆಯ ಕ್ಲಾರ್ಕನ್ನು ಹಳೆಯ ಕ್ಲಾರ್ಕಾಗಿಯೇ ಸ್ವೀಕರಿಸ್ತೀನಿ. ನನ್ನ ಹಳೆಯ ಕ್ಲಾರ್ಕ್‌ಗೆ ಶಕ್ತಿಯಿತ್ತು. ನನಗೆ ನನ್ನ ಹಳೆಯ ಕ್ಲಾರ್ಕೇ ಸಾಕು."

ಅದನ್ನು ಅವಳು ನಿಜವಾಗಿಯೂ ಉದ್ದೇಶಪಟ್ಟೇ ಹೇಳುವುದಾಗಿ ಕೇಶವಪಿಳ್ಳೆಗೆ ತೋರಿತು. ಅವಳು ಒಂದು ವೇಳೆ ಹಾಗೆಯೇ ಹಳೆಯ ಕ್ಲಾರ್ಕಾಗಿ ಮಾಡಿಬಿಡಬಹುದು.

ಕೇಶವ ಪಿಳ್ಳೆ ಮತ್ತೂ ಏನೋ ಸಮಾಧಾನವನ್ನು ಹೇಳಿದ. ಆದರೆ ಅವಳು ಅದನ್ನು ಕೇಳಿಸಿಕೊಂಡಂತೆ ತೋರಲಿಲ್ಲ. ಅವಳಿಗೆ ಕೇಳಿಸಿಕೊಳ್ಳಬಾರದು ಎನ್ನಿಸಿತು. ಒಂದೆಂದೂ ಅವಳು ಅಷ್ಟೊಂದು ವೀರಾವೇಶಕ್ಕೊಳಗಾದದ್ದನ್ನು ಅವನು ನೋಡಿರಲಿಲ್ಲ. ಅವಳು ಅತಿಮಾನುಷ ಶಕ್ತಿಯುಳ್ಳ ರಾಕ್ಷಸಿಯಾಗಿಹೋಗಿದ್ದಳು. ಅವನ ಮೂಳೆಗಳೆಲ್ಲ

ಮುರಿದುಹೋಗುತ್ತಿವೆಯೋ ಎನ್ನಿಸಿತು. ಅವಳನ್ನು ತೃಪ್ತಿಪಡಿಸಲು ಕೇಶವ ಪಿಳ್ಳೆಗೆ ಸಾಧ್ಯವಾಗಲಿಲ್ಲ.

ಹಾಗ ಆ ವಿಕಾರದ ಆಕೃತಿ ಆತನನ್ನು ಅಂದು ಪದ್ಧತಿಯಂತೆ ಹೊರಡುವ ಹೊತ್ತಿಗೆ ಮೊದಲೇ ಹೊರಗೆ ಕಳುಹಿಸುವಂತಿತ್ತು. "ಹೋಗಾಚೆ" ಎಂದು ಅವಳು ಹೇಳಿದಂತಿತ್ತು. ಕೆಲಸಕ್ಕೆ ಬಾರದವನು ಎನ್ನುವ ಭಾವನೆಯಲ್ಲಿ ಒದೆದು ಹೊರಗೆ ತಳ್ಳಿದಂತೆ.

ಮನಸ್ಸೂ ಶರೀರವೂ ಕ್ಷೀಣಿಸಿ ಕೇಶವ ಪಿಳ್ಳೆ ಅಂದು ಹಿಂದಿರುಗಿದ್ದು. ಅಂತಹ ನೋವಿನ ರಾತ್ರಿಯನ್ನು ಅವನು ಎಂದೂ ಕಂಡಿರಲಿಲ್ಲ. ಅಂದು ಹಗಲಿಡೀ ಅಭಿನಂದನ ಗಳನ್ನು ಸ್ವೀಕರಿಸಿದ್ದೆಲ್ಲವೂ ಹಾಗೆಯೇ ಮುರಿದುಬೀಳುವಂತೆ ತೋರಿತು. ಅರ್ಹತೆ ಯಿಲ್ಲದ ಒಂದು ಸ್ಥಾನ ದೊರೆತಾಗ ತಾನು ಏನು ಮಾಡಬೇಕು ಎನ್ನುವ ಗಾಬರಿ. ಅದರ ಫಲ ಸಾಮರ್ಥ್ಯವಿಲ್ಲದ್ದು ತಾನೆ? ಜೊತೆಗೆ ದೊರೆತ ಸ್ಥಾನ ಕೈಬಿಟ್ಟುಹೋಗ ಬಹುದೇ ಎನ್ನುವ ಭಯವಿತ್ತು. ಅವಳು ಹೇಳಿದ್ದು ಆಗಲೂ ಅವನ ಕಿವಿಯಲ್ಲಿ ಪ್ರತಿ ಧ್ವನಿಸುತ್ತಿತ್ತು. ಅವಳಿಗೆ ಅವಳ ಹಳೆಯ ಕ್ಲಾರ್ಕ್ ಸಾಕು.

ಕೇಶವ ಪಿಳ್ಳೆ ಒಂದು ಸತ್ಯವನ್ನು ಕಂಡ. ತಂಗಮ್ಮನ ವಿಶ್ವರೂಪ! ಅದು ಅಷ್ಟೊಂದು ಭೀಕರವೆಂದು ಆತನಿಗೆ ಎಂದೂ ತಿಳಿದಿರಲಿಲ್ಲ. ಅವನಿಗೆ ಭಯವಾಯಿತು. ಅವಳು ಇದಕ್ಕಿಂತಲೂ ದೊಡ್ಡ ರಾಕ್ಷಸಿಯಾಗಬಹುದು. ತೃಪ್ತಿಯಾಗದ ಅವಳು ನಾಳೆ ಏನೆಲ್ಲ ಮಾಡಬಹುದು?

ಬಹುಶಃ ಇಂದು ದೊರೆತ ಅಭಿನಂದನೆಗಳು ನಾಳೆ ವ್ಯರ್ಥವಾಗಿಬಿಡಬಹುದು. ಅವನು ಹಳೆಯ ಸೆಕ್ರೆಟರಿಯೇಟ್‌ನ ಮೆಟ್ಟಿಲಿನಲ್ಲಿ ಇಪ್ಪತ್ತು ರೂಪಾಯಿ ಕ್ಲಾರ್ಕಾಗಿ ಹಳೆಯ ಕುರ್ಚಿಯಲ್ಲೇ ಕುಳಿತುಕೊಳ್ಳಬೇಕಾಗಿ ಬರಬಹುದು. ಅವಳೇ ಇದನ್ನು ದೊರಕಿಸಿಕೊಟ್ಟದ್ದು. ಅವಳೇ ಅದನ್ನು ಇಲ್ಲದಂತೆ ಮಾಡಬಹುದು. ಅವಳಿಗೆ ಬೇಕಾ ದದ್ದು ಆ ಹಳೆಯ ಕ್ಲಾರ್ಕ್. ಆದರೆ ಆ ಹಳೆಯ ಕ್ಲಾರ್ಕ್ ಕೈಗೆ ಸಿಕ್ಕುವುದಿಲ್ಲ.

ಅಂದು ಊರಿನಲ್ಲಿ ಮದುವೆ ಮಾಡಿಕೊಂಡು ಎಷ್ಟೋ ದಿನಗಳಾಗಿದ್ದರೂ ಮೊದಲ ರಾತ್ರಿಯ ಅನುಭವವಿಲ್ಲದ ಆ ಹೆಣ್ಣು ಈಗ ಮುಖ ಅಡಿಮಾಡಿ ಮಲಗಿ ಅಳುತ್ತಿರಬೇಕು. ಅಥವಾ ಹಗಲಿಡೀ ಕೆಲಸ ಮಾಡಿ ಆಯಾಸಗೊಂಡು ಅವಳು ಮಲಗಿರ ಬೇಕು. ಆದರೂ ಒಬ್ಬಳೇ ಚಾಪೆಯ ಮೇಲೆ ಮಲಗಿದ್ದಾಗ ಒಂದು ನಿಟ್ಟುಸಿರು ಬಿಡ ಬಹುದು. ಅವಳ ಕಣ್ಣಿನಿಂದ ಒಂದೆರಡು ಹನಿ ಕಣ್ಣೀರು ಉದುರಲೂ ಬಹುದು. ಆ ನಿಟ್ಟುಸಿರು ಕಾಮದಿಂದ ಅಲ್ಲ. ಅದು ಬಿಸಿಯಾದ ಕಣ್ಣೀರು. ಅಪಮಾನ ಹೊಂದಿದ ಸ್ತ್ರೀತ್ವದ ಕಣ್ಣೀರು. ಅವಳ ಕತ್ತಿನಲ್ಲಿ ತಾಳಿ ಕಟ್ಟಿದವನಿಗೆ ಅವಳು ಬೇಡ. ಒಂದು ವೇಳೆ ಆ ಶಾಪದ ಫಲ ಇದಿರಬಹುದೇ ಎಂದು ಕೇಶವ ಪಿಳ್ಳೆ ಸಂಶಯ ಪಟ್ಟ. ಒಬ್ಬ ಭದ್ರ ಕಾಳಿಯ ಹಿಡಿತಕ್ಕೆ ಸಿಕ್ಕಿ ಅಸಹಾಯಕನಾಗಿ ಹೋಗಿದ್ದಾನೆ. ಮೂಳೆ ಮುರಿಯುತ್ತಿವೆ. ಅವನ ಶರೀರದಲ್ಲಿ ವೇದನೆಯಿದೆ.

ಅವಳು ಸುಂದರಿ ಎನ್ನುವುದು ನಿರ್ವಿವಾದ. ಒಂದೇ ನೋಟದಲ್ಲಿ ಅದು ಒಳ್ಳೆ ನಡೆನುಡಿಯಿರುವ ಒಬ್ಬಳ ಸೌಂದರ್ಯವಾಗಿತ್ತು. ಎರಡನೆಯ ಸಲ ನೋಡಿದಾಗ ಮಾತ್ರ ಆ ಕಣ್ಣುಗಳೊಳಗಿರುವ ಬೆಂಕಿ ಗೊತ್ತಾಗುವುದು. ಇಷ್ಟೊಂದು ಉಗ್ರವಾದ ಒಂದು ವಿಕಾರ ಸರ್ಪ ಆ ಸುಂದರವಾದ ಆಕೃತಿಯಲ್ಲಿ ಅಡಗಿಕೊಂಡಿರುತ್ತದೆ ಎಂದು ತಿಳಿದಿರಲಿಲ್ಲ. ಕಳೆದ ಕೆಲವು ದಿವಸಗಳಲ್ಲಿ ಅವಳನ್ನು ತನ್ನ ಸ್ವಾಧೀನಕ್ಕೊಳಪಡಿಸಿ ಕೊಳ್ಳಲು ತನಗೆ ಸಾಧ್ಯವಾದದ್ದಕ್ಕೆ ಆಶ್ಚರ್ಯಪಟ್ಟ. ಆ ಸಾಮರ್ಥ್ಯ ಹೇಗುಂಟಾಯಿತು? ಇನ್ನು ಮೇಲೂ ತನಗೆ ಆ ಶಕ್ತಿ ಉಂಟಾದೀತೆ? ಆಗುವುದಿಲ್ಲ ಎನ್ನುವ ವಿಷಯದಲ್ಲಿ ಅವನಿಗೆ ಸಂದೇಹವಿಲ್ಲ. ಅದು ಅಸಾಧ್ಯ.

ಹಾಗೇನಾದರೂ ಆದರೊ? ಆಗಲೂ ಅವನ ಕಿವಿಗಳೊಳಗೆ ಕಿಟ್ಟುಮಾಮನ ಮಾತು ಪ್ರತಿಧ್ವನಿಸಿತು. ಜೊತೆಗೆ ಸೂಪರಿಂಟೆಂಡೆಂಟರೂ, ಜೋಯಿಸರೂ ಪತ್ನಿಯ ಸ್ಥಾನದ ಮೇಲ್ಮೆಯನ್ನು ಕುರಿತ ಪ್ರಸ್ತಾವನೆಗಳೂ ಪ್ರತಿಧ್ವನಿಸಿದುವು.

ಪುನಃ ಹಳೆಯ ತೀರ್ಮಾನಕ್ಕೆ ಹಿಂದಿರುಗಲು ಕೇಶವ ಪಿಳ್ಳೆ ಸ್ವತಃ ಸಮ್ಮತಿಸಿದ. ಸಾಗುವಷ್ಟು ದೂರ ಸಾಗಲಿ. ಅರ್ಧ ದಾರಿಯಲ್ಲಿ ಮುಳುಗುವುದಿದ್ದರೆ ಮುಳುಗಲಿ.

ಆದರೆ ತಂಗಮ್ಮನೊಡನಿರುವ ಸಂಬಂಧ ಒಂದು ಪ್ರಶ್ನೆಯಾಗಿ ಉಳಿಯುತ್ತದೆ. ಅವನಿಗೆ ಭಯವಿದೆ. ಅವಳ ಉನ್ಮಾದ ಸ್ಥಿತಿಯನ್ನು ಹಿಡಿದು ಬಗ್ಗಿಸಲು ತನ್ನ ಶಕ್ತಿಯ ಬಗ್ಗೆ ನಂಬಿಕೆಯಿಲ್ಲ. ಅವಳು ಇನ್ನು ಮೇಲೆ ಇಷ್ಟಪಡದೆ ಹೋಗಬಹುದು. ಅವಳ ಆ ಕೋಪ ತನ್ನ ಜೀವನವನ್ನು ಯಾವ ರೀತಿಯಲ್ಲಿ ಬಾಧಿಸಬಹುದು?

ಏನೇ ಆದರೂ ಒಂದು ವಿಷಯವನ್ನು ಕೇಶವ ಪಿಳ್ಳೆ ತೀರ್ಮಾನಿಸಿದ್ದ. ಇಂದಲ್ಲ ದಿದ್ದರೆ ನಾಳೆ ಎಲ್ಲ ರಹಸ್ಯಗಳೂ ಹೊರಬೀಳುತ್ತವೆ. ಆಗ ಉಂಟಾಗುವ ದ್ವೇಷ ಮತ್ತೂ ಉಗ್ರವಾಗಿರುತ್ತದೆ. ಜೀವನದ ಬಹು ದೊಡ್ಡ ಘಟನೆ ಅದಾಗಿರುತ್ತದೆ. ಅದನ್ನು ಎದುರಿಸಿಯೇ ತೀರಬೇಕು.

ಮಾರನೆಯ ದಿನ ಹೊಸ ಕೆಲಸಕ್ಕೆ ಸೇರುವುದಕ್ಕೆ ಹೋಗಬೇಕು. ಬೆಳಗಿನ ಹನ್ನೊಂದು ಗಂಟೆಗೆ. ಆಗ ಬೆಳಗ್ಗೆ ತಂಗಮ್ಮನನ್ನು ಕಾಣಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ಇನ್ನೆಂದೂ ಕಾಣಬಾರದು ಎಂದು ಅವಳು ಭಾವಿಸಿರಬಹುದೇ? ಹೇಳ್ಕೊಟ್ಟಿದ್ದು ಹಾಗಿತ್ತು ಎನ್ನುವುದರಲ್ಲಿ ಕೇಶವ ಪಿಳ್ಳೆಗೆ ಸಂಶಯವಿಲ್ಲ. ಅವಳು ಹಾಗೆ ಉಪೇಕ್ಷಿಸುತ್ತಾಳಾದರೆ ತನ್ನ ಭವಿಷ್ಯ ಏನಾಗಬಹುದು ಎಂದು ಅವನು ಚಿಂತಿಸಿದ. ಒಂದು ರೀತಿಯಲ್ಲಿ ಆಲೋಚಿಸಿ ನೋಡಿದಾಗ ಅದು ಆಶ್ವಾಸನೆಯನ್ನೇ ಉಂಟುಮಾಡು ವಂಥಾದ್ದು. ಮತ್ತೊಂದು ರೀತಿಯಲ್ಲಿ ನೋಡಿದರೆ ದೋಷವೂ ಹೌದು.

ಆಗಲೂ ಕೇಶವ ಪಿಳ್ಳೆ ಸ್ವಂತ ಭಾಗ್ಯೋದಯವನ್ನೇ ಆಶ್ರಯಿಸಿದ. ಬರೋ ಹಾಗೆ ಬರಲಿ. ಅದೃಷ್ಟವಿದ್ದರೆ ಎಲ್ಲವೂ ತಾನಾಗಿ ಸರಿಹೋಗುತ್ತೆ.

# [10]

## ಯಜಮಾನಮ್ಮ

ಪಾರ್ಕ್ ವ್ಯೂವಿನಲ್ಲಿ ಉದ್ಯೋಗಕ್ಕೆ ಪ್ರವೇಶಿಸಿದ ಕೂಡಲೇ ದೇವರ ಒಲುಮೆಗೆ ಸಂಬಂಧಿಸಿದ ಒಂದು ಕಾರ್ಯದಲ್ಲಿ ಕೇಶವ ಪಿಳ್ಳೆ ತೊಡಗಿದ್ದ. ಚೀಫ್ ಸೆಕ್ರೆಟರಿ ಅಯ್ಯಪ್ಪ ದೇವಾಲಯದಲ್ಲಿ ವಿಶೇಷ ಪುಷ್ಪಾಂಜಲಿ ನಡೆಸಲಿದ್ದರು. ಅದಕ್ಕೆ ಬೇಕಾದ ಹೂವುಗಳನ್ನು ಚೆಂಗೋಟದಿಂದ ತರಬೇಕು. ಚೆಂಗೋಟದ ತಹಸೀಲ್ದಾರರಿಗೆ ಹೂವನ್ನು ಒದಗಿಸಬೇಕೆಂದು ಮೊದಲೇ ಬರೆಯಲಾಗಿತ್ತು. ಯಜಮಾನಮ್ಮ ಆಜ್ಞೆಮಾಡಿದ್ದಳು. ಪುಷ್ಪಾಂಜಲಿ ಕಾರ್ಯಕ್ರಮ ವಿಜೃಂಭಣೆಯಿಂದಲೇ ನಡೆಯಿತು. ಅದನ್ನೆಲ್ಲ ನಡೆಸುವುದರ ಮುಂದಾಳು ಕೇಶವ ಪಿಳ್ಳೆಯೇ ಆಗಿದ್ದ ಎಂದೂ ಹೇಳಬಹುದು. ಅದು ತನಗರಿವಿಲ್ಲದಂತೆಯೇ ಲಭಿಸಿದ ಒಂದು ಭಾಗ್ಯವೆಂದು ಆತ ಭಾವಿಸಿದ.

ಪುಷ್ಪಾಂಜಲಿಯ ದಿನ ದಿವಾನರೂ ಪ್ರೈವೇಟ್ ಸೆಕ್ರೆಟರಿಯೂ ಮಹಾರಾಜರ ಸೆಕ್ರೆಟರಿಯೂ ಬಂದಿದ್ದರು. ಕಾರ್ಯವಶಾತ್ ಅವರೆಲ್ಲರ ಹತ್ತಿರ ಹೋಗಲು ಅವನಿಗೆ ಸಾಧ್ಯವಾಯಿತು. ಆ ಮುಖಗಳನ್ನು ಪರಿಚಯ ಮಾಡಿಕೊಳ್ಳುವುದು ಒಂದು ಸಾಧಾರಣ ಕೆಲಸವೇನಲ್ಲ. ಪಣಿಕ್ಕರ್. ಕೊಚ್ಚುಣ್ಣಿ ನಾಯರ್. ಗೋವಿಂದನ್ ನಾಯರ್— ಎಲ್ಲರೂ ದೂರದಿಂದ ಅವನನ್ನು ನೋಡುತ್ತಿದ್ದರು. ಖಂಡಿತವಾಗಿಯೂ ಅವರೆಲ್ಲರಿಗೂ ಅವನ ಬಗ್ಗೆ ಅಸೂಯೆಯುಂಟಾಗಿರುತ್ತದೆ. ಕೆಲಸದ ಗಲಾಟೆಯಲ್ಲಿ ಅವರೆಲ್ಲರ ಹತ್ತಿರ ಹೋಗಿ ಮಾತುಕತೆ ಆಡುವುದಕ್ಕೆ ಅವನಿಗೆ ಸಾಧ್ಯವಾಗಲಿಲ್ಲ. ಅವರು ಏನಾದರೂ ಅಂದುಕೊಳ್ಳಬಹುದು.

ತಂಗಮ್ಮನನ್ನು ಆ ರಾತ್ರಿ ಕಂಡ ನಂತರ ಮತ್ತೆ ಕಂಡದ್ದಿಲ್ಲ. ಪುಷ್ಪಾಂಜಲಿಗೆ ಸಂಬಂಧಿಸಿದ ಓಡಾಟದಲ್ಲಿದ್ದ. ಅವಳು ದೇವಸ್ಥಾನದೊಳಗೆ ಎಲ್ಲಿಯಾದರೂ ಇರಬಹುದೇ ಎಂದು ಕೇಶವ ಪಿಳ್ಳೆ ಸುತ್ತ ಕಣ್ಣಾಡಿಸಿದ. ಯಜಮಾನಮ್ಮನ ಹಿಂದೆ ಅವಳು ನಿಂತಿದ್ದಳು. ಒಂದು ರೀತಿಯ ಭಯದಿಂದ ಅವನು ಅವಳನ್ನು ನೋಡಿದ್ದ. ಅವಳು ಏನಾದರೂ ಹೇಳಿಬಿಡುತ್ತಾಳೋ ಏನೋ ಎಂದು ಅವನು ಭಯಗೊಂಡ.

'ಪುಷ್ಪಾಂಜಲಿ' ಸೇವೆ ಮುಗಿದು, ಚೀಫ್ ಸೆಕ್ರೆಟರಿಯೂ ಅವರ ಪತ್ನಿಯೂ ಹಿಂದಿರುಗಿದ ಮೇಲೆ ಅವನು ಅವಳ ಹತ್ತಿರ ಹೋಗಿ ನಿಂತುಕೊಂಡ. ಏನೂ ಸಂಭವಿಸಿದಂತಿಲ್ಲ. ಅವಳೊಮ್ಮೆ ನಕ್ಕಳು. ಕೇಶವ ಪಿಳ್ಳೆ ಕ್ಷಮಾಯಾಚನೆಯ ಧ್ವನಿಯಲ್ಲಿ ಹೇಳಿದ: "ಚೆಂಗೋಟಕ್ಕೆ ಹೂವು ತರೋದಕ್ಕೆ ಹೋಗಿದ್ದೆ. ಕೆಲಸದ ಗಡಿಬಿಡಿಯಲ್ಲಿದ್ದೆ."

ಆ ಕಣ್ಣಿನ ಆಳದಲ್ಲಿ ಬೆಂಕಿಯ ಕಟ್ಟೆಯನ್ನು ಆತ ಕಂಡ. ಭಯಪಡಿಸುವ ಒಂದು ನೋಟ ಅದು. ಅವಳು ಕೇಳಿದಳು:

"ಇವತ್ತು?"

ಅವನು ಗಡಿಬಿಡಿಯಿಂದ ಹೇಳಿದ: "ಇಲ್ಲ, ನಾಳೆ."

ನಾಳೆ ಎನ್ನುವ ಶಬ್ದ ಹೊರಬಿದ್ದಾಗ ಇನ್ನೆರಡು ದಿನ ಮುಂದಕ್ಕೆ ಹಾಕಬೇಕಾಗಿತ್ತು ಎನ್ನಿಸಿತು.

ಚೀಫ್ ಸೆಕ್ರೆಟರಿಯೂ ಅವರ ಪತ್ನಿಯೂ ಕೇಶವ ಪಿಳ್ಳೆಯನ್ನು ಅಭಿನಂದಿಸಿದರು. "ಬಲಿವಾಡು ಚೆನ್ನಾಗಿ ನಡೆಸಿಕೊಟ್ಟಿರಿ. ಪಾಯಸ ತುಂಬ ಚೆನ್ನಾಗಿತ್ತು. ಸೇವೆಯಲ್ಲಿ ಕಂಡ ಲಕ್ಷಣವೂ ಚೆನ್ನಾಗಿತ್ತು."

ಅಂದು ಕೇಶವ ಪಿಳ್ಳೆಗೆ ಒಂದು ರೀತಿಯ ವಿಶೇಷವಾದ ಉತ್ಸಾಹ ಉಂಟಾಯಿತು.

ಮಾರನೆಯ ರಾತ್ರಿ ಆತ ತಂಗಮ್ಮನನ್ನು ಭೇಟಿ ಮಾಡಿದ. ಹೇಗಾದರೂ ಹಿಡಿದೇ ತೀರಬೇಕು ಎನ್ನಿಸಿತು ಅವನಿಗೆ. ಅವಳಿಗೆ ಸಿಟ್ಟುಂಟು ಮಾಡುವುದು ಸಭ್ಯತೆಯಲ್ಲ.

ಪಾರ್ಕ್ ವ್ಯೂವಿನಲ್ಲಿ ಕೆಲಸ ಕೊಡಿಸಿಕೊಟ್ಟವಳು. ಹನ್ನೊಂದು ಗಂಟೆಗೆ ಸರ್ಕಾರಿ ಉದ್ಯೋಗಸ್ಥನಂತೆ ಹೋಗುವುದು. ಐದು ಗಂಟೆಗೆ ಸರಿಯಾಗಿ ಹೊರಬರುವುದು. ಅದು ಸರಿಯಲ್ಲ. ಆರು ಗಂಟೆಗೆ ಹಿಂದಿರುಗಬೇಕು. ರಾತ್ರಿ ಎರಡು ಗಂಟೆಗೆ ಸಾಧಾರಣ ವಾಗಿ ಅಲ್ಲಿಂದ ಹೊರಬರಲು ಸಾಧ್ಯ.

ಕೇಶವ ಪಿಳ್ಳೆ ಹತ್ತಿರದ ಒಂದು ಲಾಡ್ಜಿಗೆ ವಾಸವನ್ನು ಬದಲಾಯಿಸಿದ. ಪಾರ್ಕ್ ವ್ಯೂವಿನ ಉದ್ಯೋಗಸ್ಥ. ಹಿಂದಿನ ಹಾಗೆ ಕಡಿಮೆ ಬೆಲೆಯ ಶರಟು ಲುಂಗಿ ಸರಿಯಲ್ಲ. ಆ ಮಧ್ಯೆ ಒಂದು ಲಾಭ ದೊರಕಿತ್ತು. ಪಾರ್ಕ್ ವ್ಯೂವಿಗೆ ಸಾಮಾನು ಒದಗಿಸುತ್ತಿದ್ದ ಹುಂಡಿ ವ್ಯಾಪಾರಿ ಒಳ್ಳೆಯ ಕ್ವಾಲಿಟಿಯ ಆರು ಲುಂಗಿ, ಆರು ಶರಟಿನ ಬಟ್ಟೆಯನ್ನು ಕೊಟ್ಟ. ಅದರ ಹಣ ಕೊಡಬೇಕಾಗಿ ಬರಲಿಲ್ಲ.

ಭಕ್ತಿವಿಲಾಸದಲ್ಲೂ ಅರಮನೆಯಲ್ಲೂ ಆತ ಪರಿಚಿತನಾಗಿದ್ದ. ಸೆಕ್ರೆಟರಿಗಳ ವರೆಗೆ ಆತನಿಗೆ ಪರಿಚಯವಿತ್ತು. ಪರಿಚಯವಿರುವವನಂತೆಯೂ ಭಾವಿಸಿದ್ದ. ಒಂದು ದಿನ ರಾಮಚಂದ್ರನ್ ನಾಯರ್ ಪಾರ್ಕ್ ವ್ಯೂವಿಗೆ ಬಂದ. ರಾಮಚಂದ್ರನ್ ನಾಯರ್ ಈಗ ವೈಯಾಪುರಿ ಪಿಳ್ಳೆಯ ಸ್ಥಾನದಲ್ಲಿ ಸೂಪರಿಂಟೆಂಡೆಂಟ್. ಕೇಶವ ಪಿಳ್ಳೆ ಒಬ್ಬ ಮೇಲಧಿಕಾರಿ ಎನ್ನುವಂತೆ ಗೌರವಿಸಿದ. ಆಗ ರಾಮಚಂದ್ರನ್ ನಾಯರ್ ಹೇಳಿದ:

"ಯಾಕೋ ಮಂಕೇ ತಮಾಷೆ ಮಾಡ್ತೀಯಾ? ಏನಿಲ್ಲದಿದ್ದರೂ ಒಟ್ಟಿಗೆ ಓದಿ ದವರಲ್ಲವೇನೋ?"

ಅಷ್ಟರ ಮಟ್ಟಿಗೆ ಬಂದ. ರಾಮಚಂದ್ರನ್ ನಾಯರ್ ಬಂದದ್ದು ಆತನ ಮಾವನ ದೊಂದು ಕೆಲಸ ಮಾಡಿಸಿಕೊಳ್ಳುವುದಕ್ಕೆ. ಅದು ಬೇಗ ಆಗಬೇಕಾದರೆ ಕೇಶವ ಪಿಳ್ಳೆಯ ಸಹಾಯ ಬೇಕಾಗಿತ್ತು. ಅದೊಂದು ಸಮಾಧಾನವನ್ನುಂಟುಮಾಡುವ ಘಟನೆಯಾಗಿತ್ತು.

ಮನೆಯ ಕಾರ್ಯಗಳು ಮಾತ್ರವಲ್ಲ ಕೇಶವ ಪಿಳ್ಳೆಯ ಕೆಲಸ. ಸರ್ಕಾರದ ಕೆಲಸವೂ ಇತ್ತು. ಪಾರ್ಕ್ ವ್ಯೂವಿಗೆ ಚೀಫ್ ಸೆಕ್ರೆಟರಿಗೆ ಬರುವ ಅತ್ಯಾವಶ್ಯಕವಾದ ಫೈಲುಗಳನ್ನೂ ತೆಗೆದುಕೊಂಡು ಹೋಗಬೇಕು. ಒಂದು ಕತ್ತೆಯ ಹಾಗೆ ಹೊತ್ತುಕೊಂಡು ಹೋದರೆ ಸಾಲದು. ಅವುಗಳನ್ನು ಓದಿ ಅರ್ಥಮಾಡಿಕೊಳ್ಳಬೇಕು. ಯಾವುದಾದರೂ ಸಂಶಯ ಬಂದಾಗ ಹೇಳುವಂತಿರಬೇಕು.

ಒಂದು ತಿಂಗಳ ವರೆಗೆ ಯಜಮಾನಮ್ಮನೂ ಯಜಮಾನರೂ ಕೇಶವ ಪಿಳ್ಳೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಕೇಶವ ಪಿಳ್ಳೆ ಎಂತಹ ಮನುಷ್ಯ ಎಂದು ತಿಳಿಯುವು ದಕ್ಕಾಗಿ. ಕೇಶವ ಪಿಳ್ಳೆ ಅದನ್ನು ಅರ್ಥಮಾಡಿಕೊಂಡಿದ್ದ. ಆತ ಬಹಳ ಎಚ್ಚರಿಕೆಯಿಂದಿದ್ದ.

ಆ ಒಂದು ತಿಂಗಳೊಳಗೆ ಅನೇಕ ಸಂಗತಿಗಳನ್ನು ಕಂಡ. ಲೌಡ್ಲಿಂಗ್ ಕಂಪೆನಿಯ ಪ್ರತಿನಿಧಿ ನಾಲ್ಕು ಸಲ ಅಲ್ಲಿಗೆ ಬಂದ. ಒಬ್ಬ ದೊಡ್ಡ ಸಾಹುಕಾರ ಒಂದು ಮರದ ಕೂಪಿಗೆ ಸಂಬಂಧಿಸಿ ಅಲ್ಲಿಗೆ ಬಂದಿದ್ದ. ಅವರೆಲ್ಲ ಬಂದು ಹೋದ ಮೇಲೆ ಯಜ ಮಾನಮ್ಮ ಕೇಶವ ಪಿಳ್ಳೆಯನ್ನು ಕರೆದು ಯಜಮಾನರು ಬರುವ ಹೊತ್ತಿಗೆ ಅವರ ಫೈಲು ಗಳನ್ನೆಲ್ಲ ಆರಿಸಿ ಮೇಜಿನ ಮೇಲಿಡಬೇಕೆಂದು ಕೇಶವ ಪಿಳ್ಳೆಯ ಹತ್ತಿರ ಹೇಳಿದಳು.

"ನೀನೇನೂ ಹೆದರಿಕೊಳ್ಳಬೇಡ. ಅದನ್ನು ಪ್ರತ್ಯೇಕವಾಗಿ ಮೇಜಿನ ಮೇಲಿಟ್ಟರೆ ಯಜಮಾನರು ಸಿಟ್ಟುಮಾಡಿಕೊಳ್ಳೋದಿಲ್ಲ."

ಅವನು ಹಾಗೆಯೇ ಮಾಡಿದ್ದುಂಟು. ಮರದ ಕೂಪಿಗೆ ಸಂಬಂಧಿಸಿದ ಫೈಲು ಇಟ್ಟಾಗ ಮಾತ್ರ ಯಜಮಾನರು ಅವನನ್ನು ನೋಡಿ ಏನೋ ಗೊಣಗಿದರು. ಕೇಶವ ಪಿಳ್ಳೆ ಭಯದಿಂದ ನಡುಗಿ ಬೆವತುಹೋದ. ಆದರೆ ಅಷ್ಟು ಹೊತ್ತಿಗೆ ಯಜಮಾನಮ್ಮ ಅಲ್ಲಿಗೆ ಬಂದರು. ಯಜಮಾನರು ಈಗ ಓಡಾಡುವುದು, ಬಸ್ಸಿನ ಮಾಲೀಕರು ಉಡು ಗೊರೆಯಾಗಿ ಕೊಟ್ಟ ಕಾರಿನಲ್ಲಿ. ಸಂಸ್ಥಾನದ ಪ್ರಧಾನ ರಸ್ತೆಯಲ್ಲಿ ಆ ಬಸ್ಸು ಮಾಲೀಕನ ಕಾರು ಹೋಗುತ್ತಿದೆ ಎಂದೂ ಜನರು ಮಾತನಾಡಿಕೊಂಡರು.

ಮತ್ತೂ ಹಲವಾರು ಸಂಗತಿಗಳನ್ನು ಕಂಡ. ದಿವಾನರ ಪ್ರೈವೇಟ್ ಸೆಕ್ರೆಟರಿ ಮಧ್ಯಾಹ್ನ ಎರಡು ಗಂಟೆಯ ನಂತರ ಆಗಾಗ ಮನೆಗೆ ಬರುತ್ತಿದ್ದರು. ಯಜಮಾನರು ಆಗಾಗ ಹೋಗುತ್ತಿದ್ದ ಸರ್ಕೀಟುಗಳ ವಿಷಯ ಮಾತ್ರ ಆತನಿಗೆ ಗೊತ್ತಿರಲಿಲ್ಲ. ಆದರೆ ಅವನು ಅದಾವುದನ್ನೂ ಕಂಡಂತೆ ಕೇಳಿದಂತೆ ತೋರಿಸಿಕೊಳ್ಳುತ್ತಿಲ್ಲ.

ಒಂದು ತಿಂಗಳು ಕಳೆದರೂ ಶೇಖರ ಪಿಳ್ಳೆಯನ್ನಾಗಲೀ ತಂಗಮ್ಮನನ್ನಾಗಲೀ ಚೀಫ್ ಸೆಕ್ರೆಟರಿಯ ಮನೆಗೆ ಬಂದದ್ದನ್ನು ಕಾಣಲಿಲ್ಲ. ಶೇಖರ ಪಿಳ್ಳೆ ಚೀಫ್ ಸೆಕ್ರೆಟರಿಯ ಅಣ್ಣನೆಂದು ಜನರು ಹೇಳುವುದು. ಅದು ಹೇಗೆ ಎಂದು ಅವನಿಗೆ ಆಶ್ಚರ್ಯವುಂಟಾ ಯಿತು. ಅವರ ಸಂಬಂಧದಲ್ಲಿ ಬೇರೆ ಏನಾದರೂ ತೊಂದರೆ ಇರಬಹುದೇ ಎಂದು ಸಂಶಯಪಟ್ಟ.

ಒಂದು ದಿನ ಮಧ್ಯಾಹ್ನ ಯಜಮಾನಮ್ಮ ಕರೆಯುತ್ತಿದ್ದಾರೆ ಎಂದು ಅಡುಗೆ

ಯವನು ಬಂದು ಹೇಳಿದ. ಹಿಂದಕ್ಕೂ ಮುಂದಕ್ಕೂ ಆಡುವ ಕುರ್ಚಿಯಲ್ಲಿ ಯಜಮಾನಮ್ಮ ಕುಳಿತಿದ್ದರು.

ಯಜಮಾನಮ್ಮ ಕೇಳಿದರು: "ಕೇಶವ ಪಿಳ್ಳೆ ಮದುವೆ ವಿಷಯ ಏನಾಯ್ತು?"

ಒಂದು ನಿಮಿಷ ಕೇಶವ ಪಿಳ್ಳೆ ಮೌನವಾಗಿದ್ದ. ಏನು ಉತ್ತರ ಹೇಳಬೇಕೆನ್ನುವುದು ತಿಳಿಯದಾಯಿತು. ಆದರೆ ಉತ್ತರ ಹೇಳದಿರಲು ಸಾಧ್ಯವಿರಲಿಲ್ಲ.

"ಇನ್ನೂ ಏನೂ ತೀರ್ಮಾನಿಸಿಲ್ಲ."

"ಇಲ್ಲಿಗೆ ನೇಮಕ ಆಗೋದಕ್ಕೆ ಮೊದಲು ಎಲ್ಲ ನಿಶ್ಚಯಿಸಿ ಆಗಿರಲಿಲ್ಲವಾ?"

"ಇಲ್ಲ."

"ಹಾಗೇನು? ಮದುವೆ ನಿಶ್ಚಯಿಸೋದಕ್ಕೆ ಮೊದಲೇ ನಿಮಗೋಸ್ಕರ ತಮ್ಮನ ಹತ್ತಿರ ಶಿಫಾರಸ್ ಮಾಡಿದ್ದಾ?"

ಆ ಪ್ರಶ್ನೆಯಲ್ಲಿ ಶೇಖರ ಪಿಳ್ಳೆಯ ಬಗ್ಗೆ ಯಾವುದೋ ಒಂದು ಬಗೆಯ ತಾತ್ಸಾರವಿದ್ದಂತೆ ತೋರಿತು. ಅದನ್ನು ಯಜಮಾನಮ್ಮನ ಮುಖ ಮತ್ತು ಧ್ವನಿಯಿಂದ ಗುರುತಿಸಬಹುದಾಗಿತ್ತು.

ಕೇಶವ ಪಿಳ್ಳೆ ಮೌನವಾಗಿದ್ದ.

ಯಜಮಾನಮ್ಮ ಮತ್ತೆ ಕೇಳಿದರು: "ನೀವು ಮದುವೆ ಮಾಡಿಕೊಳ್ತೀನಿ ಅಂತ ಮಾತು ಕೊಟ್ಟಿದ್ದೀರಾ?"

ಕೇಶವ ಪಿಳ್ಳೆ ಅದಕ್ಕೆ ಉತ್ತರ ಹೇಳಬಲ್ಲ. ಆದರೆ ಅದು ಯಾವ ರೀತಿಯಲ್ಲಿ ಇಷ್ಟವಾಗುವ ಹಾಗೆ ಹೇಳುವುದು ಎಂದು ಕೇಶವ ಪಿಳ್ಳೆಗೆ ತಿಳಿಯದು. ತನ್ನ ನಿಜವಾದ ಅಭಿಪ್ರಾಯವನ್ನು ತಿಳಿದುಕೊಳ್ಳುವುದಕ್ಕಾಗಿ ಅವರು ಕೇಳಿದ್ದಾಗಿರಲಾರದೆ? ಎಷ್ಟೇ ಆದರೂ ತಂಗಮ್ಮ ಅವರ ಗಂಡನ ಅಣ್ಣನ ಮಗಳು. ನಿಜವಾಗಿಯೂ ರಕ್ತಸಂಬಂಧ. ಕೇಶವ ಪಿಳ್ಳೆ ಕಳ್ಳನೋ ಬೆಳ್ಳನೋ ಎಂದು ತಿಳಿದುಕೊಳ್ಳುವುದಕ್ಕಾಗಿ ಧ್ವನಿಯನ್ನೂ ಮುಖಭಾವವನ್ನೂ ಬದಲಾಯಿಸಿ ಕೇಳುತ್ತಿರುವುದಾಗಿರಲೂ ಬಹುದು. ಅವನು ಹೇಳಿದ: "ಇಲ್ಲಿವರೆಗೆ ಆ ವಿಚಾರ ಮಾತಾಡಿಲ್ಲ."

"ನಿಮ್ಮ ಹತ್ರ ಅವಳ ತಂದೆ ಕೇಳಿದ್ದಾಗಲೀ, ನೀವು ಆ ಮನುಷ್ಯನಿಗೆ ಏನನ್ನೂ ಹೇಳಿದ್ದಾಗಲೀ ಇಲ್ಲವೇ?"

ಕೇಶವ ಪಿಳ್ಳೆ "ಇಲ್ಲ" ಎಂದ.

ಯಜಮಾನಮ್ಮ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು. ಹೇಳಬೇಕಾದದ್ದು ಇನ್ನೂ ಏನೋ ಇದೆ ಎನ್ನುವ ರೀತಿಯಲ್ಲಿ ಕುಳಿತಿದ್ದ ಹಾಗಿತ್ತು.

ಯಜಮಾನಮ್ಮ ಮುಖ ಸುಕ್ಕುಗಟ್ಟಿಕೊಂಡು ಹೇಳಿದರು: "ಕೆಟ್ಟ ಜನರು. ಕೇಶವ ಪಿಳ್ಳೇ, ಕೆಟ್ಟ ಜನರು. ನನಗೆ ಗೊತ್ತು. ಹಲ್ಲು ಕಚ್ಚಿಕೊಂಡು ಸಹಿಸಿಕೊಂಡಿದ್ದೀನಿ. ಅಂತಸ್ತು ಅಭಿಮಾನ ಒಂದೂ ಇಲ್ಲದ ಜನರು. ನಿಮ್ಮ ವಿಷಯವಾಗಿ ನಮ್ಮ ಯಜ

ಮಾನರಿಗೆ ಒಳ್ಳೆ ಅಭಿಪ್ರಾಯ ಇದೆ. ನೀವು ಆ ಗುಂಪಿಗೆ ಸೇರಿದಿರೋ? ಹಾಳಾಗಿ ಹೋಗ್ತೀರಿ ನೋಡಿ."

ಕೇಶವ ಪಿಳ್ಳೆಯ ನಾಲಗೆಯಿಂದ ಅಪ್ಪಣೆ ಎನ್ನುವ ಶಬ್ದ ಹೊರಬಂದಿತು.

ಬಳಿಕ ಯಜಮಾನಮ್ಮ ಹೇಳಿದರು: "ಆ ಮದುವೆ ವಿಷಯ ಮುಂದಿಟ್ಟು ಕೊಂಡೇ ನಿಮ್ಮನ್ನ ಇಲ್ಲಿಗೆ ನೇಮಕ ಮಾಡಿಸಿದ್ದು. ನನಗೆ ನೀವು ಒಳ್ಳೆಯವರು ಅನ್ನೋದು ತಿಳಿದ ಮೇಲೆ ಸತ್ಯಸ್ಥಿತಿ ತಿಳಿಸಿದೆ ಅಷ್ಟೆ. ನಿಧಾನವಾಗಿ ಎಲ್ಲವನ್ನೂ ಆಲೋಚನೆ ಮಾಡಿ."

ಅದಕ್ಕೂ ಅವನು "ಆಯ್ತು" ಎಂದು ಹೇಳಿದ. ಯಜಮಾನಮ್ಮ ಅವನನ್ನು "ನೀವು ಇನ್ನು ಹೋಗಿ" ಎಂದರು.

ಕೇಶವ ಪಿಳ್ಳೆಯ ಮನಸ್ಸು ತಾನು ಹಿಂದೆ ಆಲೋಚಿಸುತ್ತಿದ್ದಲ್ಲಿಗೆ ಬಂದು ತಲಪಿತು. ನಾನು ಕೇಳಿದ್ದು, ಅಂದುಕೊಂಡದ್ದು ಸರಿಯೇ ಎನ್ನುವ ಸಂಶಯಕ್ಕೊಳಗಾದ.

ಸ್ವಲ್ಪ ಹೊತ್ತು ಕಳೆದ ಮೇಲೆ ಅವನ ಆಲೋಚನೆಯಲ್ಲಿ ಹೊಸ ಬೆಳಕು ಮೂಡಿತು. ಹಾಗಾದರೆ ಯಜಮಾನಮ್ಮ ಹೇಳುವುದು ತಂಗಮ್ಮನನ್ನು ಮದುವೆ ಮಾಡಿಕೊಳ್ಳುವುದು ಬೇಡ ಎಂದಲ್ಲವೆ?

ಅವನಿಗೆ ಒಂದು ವಿಷಯ ಸ್ಪಷ್ಟವಾಯಿತು. ಪಾರ್ಕ್ ವ್ಯೂವಿನಲ್ಲಿ ಅವನು ಊರಿದ ಕಾಲು ಹಿಡಿದಿದ್ದ. ಒಂದು ವೇಳೆ ತಂಗಮ್ಮನನ್ನು ಮದುವೆ ಮಾಡಿಕೊಳ್ಳದಿದ್ದರೂ ಅವನನ್ನು ಇಲ್ಲಿಂದ ಹೊರದಬ್ಬುವುದಿಲ್ಲವೆನ್ನಿಸಿತು.

ಹೀಗೆಲ್ಲ ಸಂಭವಿಸಬಹುದೆಂದು ಕೇಶವ ಪಿಳ್ಳೆ ಊಹಿಸಿರಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಆಲೋಚಿಸಿ ಅವನು ಹೆದರಿದ್ದದ್ದು. ಆ ಮದುವೆ ನಡೆಯದೇ ಹೋದರೆ ಉದ್ಯೋಗ ಕೈತಪ್ಪಿ ಹೋಗುತ್ತದೆ ಎಂದಿದ್ದದ್ದು ಮದುವೆ ಮಾಡಿಕೊಂಡರೆ ಉದ್ಯೋಗ ಕೈತಪ್ಪುತ್ತದೆ ಎನ್ನುವ ಸ್ಥಿತಿಗೆ ಬಂದಿತ್ತು.

ಎಂತಹ ಸಮಾಧಾನ ಅದು! ಆಗಲೂ ಕಿಟ್ಟುಮಾಮನ ಮಾತುಗಳು ಅರ್ಥವತ್ತಾಗಿ ಅವನ ಕಿವಿಯಲ್ಲಿ ಪ್ರತಿಧ್ವನಿಸಿದುವು—"ಅವಳು ಭಾಗ್ಯವತಿ."

ಆ ದಿನ ಅವನು ಮನೆಗೆ ಒಂದು ಕಾಗದ ಬರೆದ. ತನ್ನ ಕೆಲಸ ಇಂಥಾದ್ದೆಂದೂ, ಇಂಥ ಕಡೆಯೆಂದೂ ಅದರಲ್ಲಿ ವಿವರಿಸಿದ್ದ. ಆದರೆ ಹೇಗೆ ಅಲ್ಲಿಗೆ ತಲಪಿದ್ದು ಎನ್ನುವುದನ್ನು ಮಾತ್ರ ವಿವರಿಸಿರಲಿಲ್ಲ. ಅದು ತಿಳಿಸುವಂಥಾದ್ದೂ ಅಲ್ಲ. ಆ ಕಾಗದದಲ್ಲಿ ಕಾತ್ಯಾಯಿನಿಯನ್ನು ಕುರಿತು ಪ್ರತ್ಯೇಕವಾಗಿ ಬರೆದಿದ್ದ. ಅವಳ ಕ್ಷೇಮಸಮಾಚಾರವನ್ನು ವಿಚಾರಿಸಿ ಮೊತ್ತಮೊದಲು ಅವನು ಕಾಗದ ಬರೆಯುತ್ತಿರುವುದು. ಅವಳು ಅದೃಷ್ಟವಂತೆಯಲ್ಲವೆ? ಕಾತ್ಯಾಯಿನಿಯ ರೂಪವನ್ನು ಕಣ್ಣೆದುರಿಗೆ ತಂದುಕೊಳ್ಳಲು ಶ್ರಮಿಸಿದ. ಆದರೆ ಅದು ಸ್ಪಷ್ಟವಾಗಿ ಕಾಣಿಸಲಿಲ್ಲ. ಸರಿಯಾಗಿ ಅವಳನ್ನು ನೋಡಿದ್ದೇ ಇಲ್ಲವಲ್ಲ!

ಅಂದು ಅವನಿಗೆ ವಿಶೇಷ ರೀತಿಯ ಉತ್ಸಾಹವುಂಟಾಗಿತ್ತು. ಮನಸ್ಸು ಹರ್ಷ

ಗೊಂಡಿತ್ತು. ಹಿಂದೆಂದೂ ಉಂಟಾಗದಂತಹ ಮಾನಸಿಕ ಸಂತೋಷ! ಆ ದಿನ ಐದು ಗಂಟೆಯ ನಂತರ ಮಾದೇವನ್ ಪಿಳ್ಳೆ, ಗೋವಿಂದನ್ ನಾಯರರ ಒಂದು ಕಾಗದ ದೊಂದಿಗೆ ಪಾರ್ಕ್‌ವ್ಯೂವಿಗೆ ಬಂದ. ಕೇಶವ ಪಿಳ್ಳೆಗಿದ್ದ ಕಾಗದ ಅದು. ಕೇಶವ ಪಿಳ್ಳೆ ಕಾಗದ ಓದಿದ. ನಾಳೆ ಐದು ಗಂಟೆಗೆ ಪಾರ್ಕಿನಲ್ಲಿ ಭೇಟಿಯಾಗಬೇಕೆಂದೂ ಅತ್ಯಾವಶ್ಯಕ ವಾದ ಒಂದು ವಿಷಯ ಮಾತನಾಡಬೇಕಾಗಿದೆಯೆಂದೂ ಆ ಕಾಗದದಲ್ಲಿತ್ತು. ಸೆಕ್ಷನ್ನಿನ ವಿಷಯಗಳನ್ನೆಲ್ಲ ಕೇಳಿದ. ಹೊಸ ಸೂಪರಿಂಟೆಂಡೆಂಟ್ ರಾಮಚಂದ್ರನ್ ನಾಯರರ ಅಧಿಕಾರ ಕಟ್ಟುನಿಟ್ಟಾಗಿ ನಡೆಯುತ್ತಿದೆಯೆಂದು ಮಾದೇವನ್ ಪಿಳ್ಳೆ ಹೇಳಿದ್ದು. ತಂಗಮ್ಮ ನನ್ನು ಒಂದು ಗಂಟೆಗೆ ನಲವತ್ತು ಸಲ ರೂಮಿಗೆ ಬರ ಹೇಳಿ ರೇಗಾಡುತ್ತಿದ್ದದ್ದು ಈಗೀಗ ಸ್ವಲ್ಪ ಕಡಿಮೆಯಾಗುತ್ತಿದೆಯೆಂದೂ ಎಲ್ಲರಿಗೂ ಇದೇ ರೀತಿಯ ಕಷ್ಟ ಬಂದೊದಗಿದೆ ಯೆಂದೂ ತಿಳಿಸಿದ.

ಎರಡನೆಯ ಸಲ ಕೇಶವ ಪಿಳ್ಳೆ ಆ ಕಾಗದ ಓದಿದ. ಯಾವುದೋ ಗಂಭೀರವಾದ ವಿಷಯವನ್ನು ಹೇಳುವುದಕ್ಕಾಗಿರಬೇಕು. ಏನಿರಬಹುದೆಂದು ಅವನು ಆಲೋಚಿಸಿದ. ಯಾವುದೂ ಹೊಳೆಯಲಿಲ್ಲ.

ಮರುದಿನ ಎಲ್ಲ ಕೆಲಸವನ್ನೂ ನಾಲ್ಕು ಗಂಟೆಗೇ ಮುಗಿಸಿ ಕೇಶವ ಪಿಳ್ಳೆ, ಅನುಮತಿ ಪಡೆದುಕೊಂಡು ಹೋದ. ಗೋವಿಂದನ್ ನಾಯರ್ ಐದೂವರೆ ಗಂಟೆಗೆ ಪಾರ್ಕಿಗೆ ಬಂದ. ಏನು ಹೇಳುವುದಕ್ಕಿರಬಹುದು ಎಂದು ಕೇಶವ ಪಿಳ್ಳೆ ನಿರೀಕ್ಷಿಸುತ್ತಾ ಕುಳಿತಿದ್ದ. ಆದರೆ ಗೋವಿಂದನ್ ನಾಯರ್ ಮಾತಿಗಾರಂಭಿಸಿದ್ದು ತೀರ ಸಾಧಾರಣ ರೀತಿಯಲ್ಲಿ. ಯಾವ ವಿಶೇಷವೂ ಇಲ್ಲದಂತೆ. "ನೀವು ಇಷ್ಟು ಬೇಗ ನಮ್ಮನ್ನೆಲ್ಲ ಮರೆತುಬಿಟ್ಟಿರಲ್ಲ! ಒಳ್ಳೆ ಜನ!"

ಕೇಶವ ಪಿಳ್ಳೆ ತನ್ನ ಕೆಲಸದ ರೀತಿಯನ್ನು ವಿವರಿಸಿದ. ಭಾನುವಾರ ಕೂಡ ಬಿಡು ವಿಲ್ಲ. ಆ ಮೇಲೆ ಆತ ಆ ವಿಚಾರ, ಈ ವಿಚಾರ ಮಾತನಾಡುತ್ತಿದ್ದ.

"ಅದೇನು ಹೇಳಬೇಕು ಅಂತಿದ್ದದ್ದು?" ಎಂದು ಕೇಳಿದ.

"ಓ! ಅಂಥಾದ್ದೇನೂ ಇಲ್ಲ. ಹೇಳ್ತೀನಿ" ಎಂದ ಗೋವಿಂದನ್ ನಾಯರ್. ಯಾವುದೆನ್ನೋ ಹೇಳಬೇಕು ಅನ್ನಿಸಿದೆ, ಆದರೆ ಅವನು ಹೇಳಲಾರದೆ ಕಷ್ಟಪಡುತ್ತಿದ್ದಂತೆ ತೋರಿತು.

ತೀರ ಸಾಧಾರಣ ರೀತಿಯಲ್ಲಿ ಗೋವಿಂದನ್ ನಾಯರ್ ಕೇಳಿದ: "ಮದುವೆ ನಿಶ್ಚಯಿಸಿದಿರಾ?"

ಧೈರ್ಯವಾಗಿಯೇ ಕೇಶವ ಪಿಳ್ಳೆ ಕೇಳಿಧ:

"ಇಲ್ಲ. ಯಾಕೆ ಕೇಳಿದ್ದು?"

"ಓ! ಏನೂ ಇಲ್ಲ. ಇಷ್ಟು ದಿನ ಆದರೂ ಏನೂ ತೀರ್ಮಾನಿಸಿಲ್ಲವೇ ಅಂತ ಕೇಳಿದ್ದು."

ತಾನಂದುಕೊಂಡಿದ್ದಂತೆ ಅದೊಂದು ಸಾಧಾರಣ ಪ್ರಶ್ನೆಯಾಗಿರಲಿಲ್ಲ. ಏನನ್ನೋ ಹೇಳಲು ಆತ ತಡವರಿಸುತ್ತಿದ್ದಂತೆ ತೋರಿತು.

ಮುಂದೆ ಅವನು ಹೇಳುವುದನ್ನು ಕೇಳಲು ಕೇಶವ ಪಿಳ್ಳೆ ಕಾಯುತ್ತಿದ್ದ.

ಗೋವಿಂದನ್ ನಾಯರ್ ಹೇಳಿದರು: "ನಿಮಗೆ ಇಷ್ಟವಾಗುವ ವಿಷಯವಲ್ಲ. ಇಷ್ಟವಾಗದೇ ಇದ್ದರೂ ತೊಂದರೆಯಿಲ್ಲ. ನಾವು ನಮ್ಮ ಕರ್ತವ್ಯ ನೆರವೇರಿಸ್ತೀವಿ. ನಮಗೆ ಯಾರಿಗೂ ನೀವು ಅವಳನ್ನ ಮದುವೆ ಮಾಡಿಕೊಳ್ಳೋದು ಇಷ್ಟವಿಲ್ಲ. ನಮಗೆ ಗೊತ್ತು. ನಮ್ಮ ಅಭಿಪ್ರಾಯ, ಇದು ಒಳ್ಳೇದಾಗೋದಿಲ್ಲ ಅಂತ. ನೀವು ಉದ್ಯೋಗ ದಲ್ಲಿ ಮೇಲೆ ಬಂದು ಯಾವ ಸ್ಥಾನಕ್ಕೇರಿದರೂ ಈ ಮದುವೆ ಅಷ್ಟು ಒಳ್ಳೆಯದಲ್ಲ. ಅದಕ್ಕಿಂತ ಹೀಗೇ ಇರೋದು ಒಳ್ಳೆಯದು."

ಆ ಮಾತು ಆದಾಗಿತ್ತು. ನಿಸ್ವಾರ್ಥದಿಂದ ಹೇಳುತ್ತಿದ್ದುದಾಗಿತ್ತು. ಯಾವ ಭೇದಭಾವವೂ ಇಲ್ಲದೆ ಕೇಶವ ಪಿಳ್ಳೆ ಕೇಳಿಸಿಕೊಳ್ಳುತ್ತಿದ್ದ. ಆ ಮಾತಿನ ಮಧ್ಯೆ ಕೇಶವ ಪಿಳ್ಳೆ ಕೇಳಿದ: "ವಿಷಯ ಏನು ಹೇಳಿ!"

"ಅದು ಬೇಡ ಅಂತ ನಾವು ಹೇಳೋದು."

"ಅವಳ ಮೂಲಕ ಇಷ್ಟೆಲ್ಲ ಅನುಕೂಲತೆಗಳು ದೊರೆತದ್ದು. ಈಗ ಅದು ಬೇಡ ಅಂತ ಹೇಳೋದು........."

ಕೇಶವ ಪಿಳ್ಳೆ ಹೇಳಿ ನಿಲ್ಲಿಸುವ ಮೊದಲೇ ಗೋವಿಂದನ್ ನಾಯರ್ ಹೇಳಿದ; "ನೀವು ಈ ಮಧ್ಯೆ ಅವಳ ಭೇಟಿ ಮಾಡ್ತಿದ್ದೀರಾ? ಅಲ್ಲಿಗೆ ಹೋಗ್ತಿದ್ದೀರಾ?"

"ಇಲ್ಲ."

"ಅವಳು ಹಿಂದಿನ ತಂಗಮ್ಮನಲ್ಲ. ನಾವು ನೋಡಿದ ಆ ತಂಗಮ್ಮನಲ್ಲಿ. ಭಯಂಕರಿ."

ಕ್ಷಮಿಸಲಾರದವನಂತೆ, "ಅವಳಿಗೇನಾಯ್ತು? ಯಾಕೆ ಬದಲಾಯಿಸಿದಳು?" ಎಂದು ಕೇಳಿದ.

ಒಂದು ದೊಡ್ಡ ರಹಸ್ಯವನ್ನು ಹೊರಗೆ ಹಾಕುವವರಂತೆ ಗಂಭೀರವಾಗಿ ಗೋವಿಂದನ್ ನಾಯರ್ ಹೇಳಿದ: "ಅವಳೀಗ ಸೂಪರಿಂಟೆಂಡೆಂಟ್ ರಾಮಚಂದ್ರನ್ ನಾಯರ ಸ್ನೇಹಿತೆ."

ಕೇಶವ ಪಿಳ್ಳೆ ಪ್ರೇಮ ನೈರಾಶ್ಯದಿಂದ ತಲೆ ತಿರುಗಿ ಬೀಳುತ್ತಾನೆ ಎಂತಲೋ ಗಟ್ಟಿ ಯಾಗಿ ಅಳುತ್ತಾನೆ ಎಂತಲೋ ತಲೆಗೂದಲು ಹಿಡಿದು ಕಿತ್ತುಕೊಂಡು ಅಬ್ಬರಿಸುತ್ತಾನೆ ಎಂತಲೋ ಗೋವಿಂದನ್ ನಾಯರ್ ಭಾವಿಸಿದ್ದದ್ದು. ಒಂದು ಸಿಡಿಲು ಅವನ ತಲೆಯ ಮೇಲೆರಗಿದಂತೆ ಅವನು ಭಾವಿಸುತ್ತಾನೆ ಎಂದು ಗೋವಿಂದನ್ ನಾಯರ್ ಭಾವಿಸಿದ್ದದ್ದು. ನಿಶ್ಶಬ್ದವಾಗಿ, ನಿರ್ವಿಕಾರವಾಗಿ, ಮುಖದಲ್ಲಿ ಯಾವ ವ್ಯತ್ಯಾಸವೂ ಇಲ್ಲದೆ ಕೇಶವ ಪಿಳ್ಳೆ ನಿಂತಿದ್ದ. ತನ್ನ ಮುಂದೆ ನಿಂತಿರುವುದು ಕೇಶವ ಪಿಳ್ಳೆ ಹೌದೇ ಎಂದು ಗೋವಿಂದನ್ ನಾಯರ್ ಸಂಶಯಪಟ್ಟ. ಸ್ತಬ್ಧನಾದದ್ದು ಆತ. ಕೇಶವ ಪಿಳ್ಳೆಯಲ್ಲ.

ಗೋವಿಂದನ್ ನಾಯರ್ ಕೇಳಿದ: "ನಿಮಗೆ ಇದು ಮೊದಲೇ ಗೊತ್ತಿತ್ತಾ?"

"ಇಲ್ಲ."

"ಮತ್ತೆ?"

"ಮತ್ತೆ ಏನು?"

"ನೀವು ಹೀಗೆ ನಿಂತಿರೋದು?"

"ನಾನೇನು ಮಾಡೋದಕ್ಕಾಗುತ್ತೆ ಅದು ಹಾಗಾಗಿದ್ದರೆ?" ಗೋವಿಂದನ್ ನಾಯರ ಬಾಯಿ ಕಟ್ಟಿತು. ಕೇಶವ ಪಿಳ್ಳೆ ಹೇಳುವುದು ಸರಿಯಲ್ಲವೆ?

ಗೋವಿಂದನ್ ನಾಯರ್ ಕೇಳಿದ: "ನೀವು ಅವಳನ್ನ ಪ್ರೀತಿಸಿರಲಿಲ್ಲವಾ?"

ಒಂದು ಉತ್ತರ ಪಡೆಯುವ ಪ್ರಶ್ನೆಯಾಗಿತ್ತು ಅದು.

"ಪ್ರೀತಿಸಿದ್ದೆ ಅಂತಲೇ ಆದರೂ?"

ಪುನಃ ಗೋವಿಂದನ್ ನಾಯರ ಬಾಯಿ ಕಟ್ಟಿತು. ಸ್ವಲ್ಪ ಹೊತ್ತು ಬಿಟ್ಟು ಆತ ಕೇಳಿದ:

"ನೀವು ಅವಳನ್ನ ಮದುವೆ ಮಾಡಿಕೊಳ್ತೀರಾ?"

ಕೇಶವ ಪಿಳ್ಳೆ ಹೇಳಿದ: "ಮದುವೆ ವಿಷಯ ಹಾಗಿರಲಿ. ಅದನ್ನ ಆ ಮೇಲೆ ಆಲೋಚನೆ ಮಾಡೋಣ. ನಿಮಗೆ ಇದು ಹೇಗೆ ಗೊತ್ತಾಯ್ತು?"

ಆ ಕಥೆಯನ್ನೆಲ್ಲ ಗೋವಿಂದನ್ ನಾಯರ್ ವಿವರಿಸಿದ: "ರಾಮಚಂದ್ರನ್ ನಾಯರ್ ಚಾರ್ಜು ತೆಗೆದುಕೊಂಡ ದಿನದಿಂದ ತಂಗಮ್ಮನ ತಪ್ಪು ಹುಡುಕುವುದೇ ಕೆಲಸ. ಒಂದು ದಿನದಲ್ಲಿ ನೂರು ಸಲ ಅವಳನ್ನು ರೂಮಿಗೆ ಬರಹೇಳುತ್ತಿದ್ದ. ಮೊದ ಮೊದಲು ಅಳುತ್ತ ಅವಳು ಹಿಂದಿರುಗುತ್ತಿದ್ದಳು. ಚೆನ್ನಾಗಿ ಬಯ್ದು ಕಳುಹಿಸುತ್ತಿದ್ದ. ಆಮೇಲೆ ಆಮೇಲೆ ಅದು ಬದಲಾಯಿಸಿತು. ಈಗ ಎಲ್ಲರಿಗಿಂತ ಮೊದಲೇ ಸೂಪರಿನ್ ಟೆಂಡೆಂಟೂ ಅವಳೂ ಆಫೀಸಿಗೆ ಬರ್ತಾರೆ. ಅವಳ ಮನೆಯ ಮುಂಭಾಗದ ರೋಡಿನಲ್ಲಿ ರಾತ್ರಿ ಹೊತ್ತಿನಲ್ಲಿ ಸೂಪರಿಂಟೆಂಡೆಂಟ್ ಹೋಗುವುದನ್ನು ಮೂರು ನಾಲ್ಕು ಸಲ ಕಂಡಿದ್ದೇನೆ." ಗೋವಿಂದನ್ ನಾಯರ್ ವಿವರಿಸಿದ ಕಥೆ ಇದು.

ತಾನು ಹತ್ತಿ ಇಳಿದ ಕೊಟ್ಟಿಯಂಬಲದ ಮೆಟ್ಟಿಲನ್ನು ಈಗ ರಾಮಚಂದ್ರನ್ ನಾಯರ್ ಹತ್ತಿ ಇಳಿಯುತ್ತಿರಬೇಕು ಎಂದುಕೊಂಡ. ತನ್ನ ಅನುಭವಗಳನ್ನೆಲ್ಲ ನೆನಸಿ ಕೊಂಡ. ಒಂದು ಪಕ್ಷ ಅವಳು ತನಗೆ ತಕ್ಕವನನ್ನು ಕಂಡುಹಿಡಿದದ್ದಾಗಿರಬೇಕು.

ಆಗಲೂ ನಿರ್ವಿಕಾರನಾಗಿ ನಿಂತಿದ್ದ ಕೇಶವ ಪಿಳ್ಳೆ ಗೋವಿಂದನ್ ನಾಯರ್‌ಗೆ ಒಂದು ಪ್ರಶ್ನೆಯಾಗಿದ್ದ. ಅದರ ರಹಸ್ಯವೇ ತಿಳಿಯಲಿಲ್ಲ. ಆ ಸಂಗತಿಯನ್ನು ತಿಳಿದು "ನೀವೂ ಒಬ್ಬ ಭಯಂಕರ ಮನುಷ್ಯ ಕೇಶವ ಪಿಳ್ಳೆ" ಎಂದ.

"ಅವಳ ಜೊತೆಯಲ್ಲಿ ನೀವು ಆಡಿದ್ದೆಲ್ಲ ನಾಟಕವೇನು?"

ಕೇಶವ ಪಿಳ್ಳೆ ಗಂಭೀರವಾಗಿಯೇ ಕೇಳಿದ:

"ಆದಲ್ಲ ನಿಮಗೆ ಯಾಕೆ?"

"ನೀವು ಅವಳನ್ನ ವಂಚಿಸಬೇಕು ಅಂತಿದ್ದಿರಾ?"

ಮತ್ತಷ್ಟು ಗಂಭೀರವಾಗಿ ಕೇಶವ ಪಿಳ್ಳೆ ಹೇಳಿದ:

"ಅವಶ್ಯವಿಲ್ಲದ್ದಕ್ಕೆಲ್ಲ ತಲೆಹಾಕಿ ನೀವು ಮಾತಾಡ್ತಿದ್ದೀರಿ. ಅವೆಲ್ಲ ಸ್ವಂತ ವಿಷಯಗಳು."

ಗೋವಿಂದನ್ ನಾಯರೂ ಬಿಡಲಿಲ್ಲ. "ಒಪ್ಪಿದೆ. ಅದು ಸರಿ. ನಮ್ಮ ನಿಸ್ವಾರ್ಥದಿಂದ ನಾನು ಕೇಳಿಬಿಟ್ಟೆ. ನಾನು ಇಲ್ಲಿ ನಡೆದದ್ದನ್ನೆಲ್ಲ ನನ್ನನ್ನು ಕಳಿಸಿದವರ ಹತ್ತಿರ ಹೇಳ್ತೀನಿ. ಇಂದಿನಿಂದ ದಡ್ಡತನ ಮಾಡದ ಹಾಗೆ ನೋಡಿಕೊಳ್ತೀನಿ."

ಅದು ಅನಗತ್ಯವಾದ ವಿಷಯ. ಬೇಡದ್ದು. ಅವಳ ಜೊತೆಯಲ್ಲಿ ನಡೆದದ್ದೆಲ್ಲ ಕೇವಲ ಅಭಿನಯ ಎನ್ನುವ ಭಾವನೆಯಲ್ಲಿ ಗೋವಿಂದನ್ ನಾಯರ್ ಹೋಗುವುದು, ಅವಳನ್ನು ವಂಚಿಸಿದ ಎಂದೂ ಭಾವಿಸಬಹುದು. ಅದು ನಾಳೆ ಊರಿಗೆಲ್ಲ ತಿಳಿಯಬಹುದು. ಖಂಡಿತವಾಗಿಯೂ ಅದು ಹಾಗೆ ಬಹಿರಂಗಗೊಳ್ಳಬಾರದು. ಅವಳೇ ತಪ್ಪಿತಸ್ಥಳಾಗಬೇಕು. ಅದಕ್ಕೆ ಕಾರಣವೂ ಇದೆಯಲ್ಲ. ತನ್ನ ನಡತೆಯೂ ಮಾತೂ ನಾಟಕ ಎನ್ನಿಸಿತು ಕೇಶವ ಪಿಳ್ಳೆಗೆ. ಅವನು ತನ್ನ ಮುಖಭಾವವನ್ನು ಬದಲಾಯಿಸಿದ.

"ನೀವು ಹೋಗಿ ಅಲ್ಲಿ ಹಾಗೆಲ್ಲ ಹೇಳಿಬಿಡಬೇಡಿ."

"ನನ್ನ ಜೊತೆಯವರು ನನ್ನನ್ನು ಕಳಿಸಿದ್ದು. ಅವರಿಗೇನು ಹೇಳೋದು?"

"ಬೇರೆ ಇನ್ನೇನಾದರೂ ಹೇಳಿ."

"ನನಗೆಲ್ಲ ಗೊತ್ತಾಯಿತು. ನನಗೆ ತಿಳಿದದ್ದನ್ನು ನನ್ನ ಸ್ನೇಹಿತರಿಗೆಲ್ಲ ಹೇಳ್ತೀನಿ. ನನಗೆ ಬೇರೆ ಏನು ಹೇಳೋದಕ್ಕೂ ತೋರೋದಿಲ್ಲ."

ಕೇಶವ ಪಿಳ್ಳೆ ಹೇಳಿದ: "ನಿಮಗೆ ವಂಡನ್ ಮೇಟ್ಟಕ್ಕೆ ಹೋಗೋ ಹೊತ್ತಾಯ್ತು."

ಕೇಶವ ಪಿಳ್ಳೆಯಲ್ಲಾದ ಬದಲಾವಣೆಯನ್ನು ಕಂಡು ಗೋವಿಂದನ್ ನಾಯರ್ ಗಾಬರಿಗೊಂಡು ನಿಂತ; ಭಯಗೊಂಡಲ್ಲ.

ಒಂದು ಅಕ್ಷರವನ್ನೂ ಉಚ್ಚರಿಸದೆ ಗೋವಿಂದನ್ ನಾಯರ್ ಹೋದ. ಅವನು ಹೋಗಿ ಸೆಕ್ಷನ್‌ನಲ್ಲಿ ಏನೆಲ್ಲ ಹೇಳಿಬಿಡಬಹುದು ಎಂದು ಅವನಿಗೆ ತಿಳಿಯದು. ಅವಳಿಗೂ ಅದು ತಿಳಿಯಬಹುದು. ಸ್ವಲ್ಪ ಮೊದಲೇ ತಿಳಿಯಬಹುದು. ಇಲ್ಲದೇ ಇದ್ದರೆ ಅವಳಿಗೂ ತಿಳಿಯಲಿ ಎಂದು ಕೇಶವ ಪಿಳ್ಳೆ ಸಮಾಧಾನಪಟ್ಟುಕೊಂಡ.

## [11]

### ಅಣ್ಣ ತಮ್ಮ

ಕೇಶವ ಪಿಳ್ಳೆಯ ನೆಲೆ ಭದ್ರಗೊಳ್ಳುತ್ತಿತ್ತು. ಯಜಮಾನರಿಗೂ ಯಜಮಾನಮ್ಮನಿಗೂ ಅವನು ಒಪ್ಪಿಗೆಯಾಗಿದ್ದ. ತಂಗಮ್ಮನನ್ನು ಮದುವೆ ಮಾಡಿಕೊಳ್ಳದಿದ್ದರೂ ಯಾವ ತೊಂದರೆಯೂ ಉಂಟಾಗುವ ಹಾಗಿರಲಿಲ್ಲ. ಎಲ್ಲ ಅಭಿವೃದ್ಧಿಗೂ ಕಾರಣಕಾರಳಾದ ತಂಗಮ್ಮನನ್ನು ಬೇಡವೆಂದು ಹೇಳಿದ್ದೇಕ ಎಂದು ಕೇಳಿದರೆ ಅದಕ್ಕೂ ಈಗ ಉತ್ತರ ಹೇಳಬಹುದು, ಅವಳು ಒಳ್ಳೆಯ ನಡತೆಯವಳಲ್ಲ ಎಂದು. ತಂಗಮ್ಮನ ಈ ನಡತೆ ಕೇಶವ ಪಿಳ್ಳೆಗೆ ಅರ್ಥವಾಗುವಂಥಾದ್ದು. ಅವಳನ್ನು ಅವನು ಸರಿಯಾಗಿ ಅರ್ಥಮಾಡಿಕೊಂಡಿದ್ದ. ವ್ಯತಿರಿಕ್ತವಾಗಿ ಸಂಭವಿಸಿದ್ದಿದ್ದರೆ ಮಾತ್ರ ಆಶ್ಚರ್ಯವಾಗುತ್ತಿತ್ತೋ ಏನೋ. ಅವಳಿಗೆ ಯಾವಾಗಲೂ ಒಬ್ಬ ಗಂಡು ಬೇಕಾಗಿತ್ತು.

ಆಫೀಸಿನ ಕೆಲಸದಲ್ಲಿ ಕೇಶವ ಪಿಳ್ಳೆ ಬಹಳ ಸಮರ್ಥನಾಗಿದ್ದ. ಯಜಮಾನರ ಇಷ್ಟವನ್ನು ಅವನು ಸರಿಯಾಗಿ ಅರ್ಥಮಾಡಿಕೊಂಡಿದ್ದ. ಅದನ್ನು ಅರಿತೇ ರುಜು ಹಾಕುವುದಕ್ಕಾಗಿ ಮಾತ್ರ ಮೇಜಿನ ಮೇಲೆ ಫೈಲುಗಳನ್ನಿಡುತ್ತಿದ್ದದ್ದು. ಆರ್ಡರ್ ಸೂಚಿಸುವುದರಿಂದ ಹಿಡಿದು ಅದರಲ್ಲಿದ್ದುದನ್ನು ವಿವರಿಸುವ ವರೆಗೆ ಎಲ್ಲ ಕೆಲಸವನ್ನೂ ಕೇಶವ ಪಿಳ್ಳೆ ಮಾಡುತ್ತಿದ್ದ. ಚೀಫ್ ಸೆಕ್ರೆಟರಿಗೆ ಆಫೀಸಿನ ಕೆಲಸದ ವಿಚಾರವಾಗಿ ಕೇಶವ ಪಿಳ್ಳೆಯ ಮೇಲೆ ದೊಡ್ಡ ವಿಶ್ವಾಸವಿತ್ತು. ರೆವಿನ್ಯೂ ಆಫೀಸಿನಲ್ಲಿ ಕೇಶವ ಪಿಳ್ಳೆ ಮನಸ್ಸಿಟ್ಟು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲವೆಂದೇ ಹೇಳಬೇಕು.

ಕೇಶವ ಪಿಳ್ಳೆಗೆ ಉತ್ಸಾಹವಿದೆ. ಬುದ್ಧಿ ಹರಿತವಾಗಿದೆ. ಇಷ್ಟೆಲ್ಲ ಆದರೂ ತನ್ನ ನೆಲೆ ಭದ್ರವಾಗಿದೆ ಎನ್ನುವ ನಂಬಿಕೆಯಿಲ್ಲ. ಇನ್ನೂ ಏನೋ ಪಡೆಯಬೇಕಾದದ್ದಿದೆ ಎಂದು ಎನ್ನಿಸಿತ್ತು. ಅದಕ್ಕೆ ಕಾರಣವೂ ಇತ್ತು. ಸದ್ಯದಲ್ಲಿ ಚೀಫ್ ಸೆಕ್ರೆಟರಿಗೂ ತನ್ನ ನೆಲೆ ಸುರಕ್ಷಿತವೇ ಎನ್ನುವ ವಿಷಯ ಸಂದೇಹವುಂಟಾಗಿತ್ತು. ಮತ್ತೆ ಹೇಗೆ ಕೇಶವ ಪಿಳ್ಳೆಗೆ ತನ್ನ ಸ್ಥಾನದ ಬಗ್ಗೆ ನಂಬಿಕೆ ಬಂದೀತು?

ಚೀಫ್ ಸೆಕ್ರೆಟರಿ ಯಾವಾಗಲೂ ಭಯಗೊಂಡೇ ಇರುತ್ತಿದ್ದರು. ಅವರನ್ನೂ ಭಯಗೊಳಿಸಲಾಗಿತ್ತು. ಯಾಕೆ ಎಂದು ತಿಳಿಯದು. ಯಾವ ಗಳಿಗೆಯಲ್ಲಾದರೂ ಆ ಕುರ್ಚಿಯಿಂದ ಇಳಿದು ಹೋಗಬೇಕಾಗಬಹುದು ಎಂದು ಅವರಿಗೆ ಅನ್ನಿಸಿತ್ತು. ಎಲ್ಲ ದಿನಗಳಲ್ಲಿಯೂ ಭಕ್ತಿವಿಲಾಸದಿಂದ ಒಂದು ಆರ್ಡರ್ ಇರುತ್ತಿತ್ತು. ರಿಪೋರ್ಟಿಗೆ ಹೋದಾಗ ಆತ ಹಿಂದಿರುಗಿ ಬರುತ್ತಿದ್ದದ್ದು ಬಾಡಿ ಬೆಂಡಾಗಿ. ಯಾವಾಗಲೂ ಒಂದೇ ಒಂದು ವಿಷಯ ಅವರು ಹೇಳುತ್ತಿದ್ದದ್ದು:

"ಈ ಪ್ರಮೋಷನ್ ಬೇಕಾಗಿರಲಿಲ್ಲ."

ಕೃಷ್ಣನ್ ನಾಯರ್‌ಗೆ ಆ ಜೀವನ ಬೇಸರ ತಂದಿತ್ತು. ಇದನ್ನು ಕೇಳಿ ಕೇಳಿ ಸಾಕಾಗಿ ಯಜಮಾನಮ್ಮ ಒಂದು ದಿನ ಸ್ವಲ್ಪ ಸಿಟ್ಟಿನಿಂದ ಕೇಳಿದರು:

"ಮತ್ತೆ ಯಾಕೆ ಇದಕ್ಕೆ ದೊಡ್ಡ ಬೆಲೆ ಕೊಟ್ಟು ಇದನ್ನು ಪಡೆಯೋದಕ್ಕೆ ಹೋದಿರಿ?"

ಚೀಫ್ ಸೆಕ್ರೆಟರಿ ಹೆಂಡತಿಯನ್ನು ರೂಕ್ಷವಾಗಿ ಒಂದು ಸಲ ನೋಡಿದರು. ಸಿಟ್ಟಿನಿಂದ ಕೇಳಿದರು: "ನೀನು ನೆಮ್ಮದಿಯಿಂದ ಇರದೆ ತೊಂದರೆ ಕೊಟ್ಟು, ಸಂಪಾದಿಸಿದ ಸರ್ವಸ್ವವನ್ನೂ ಕೊಡಿಸಿ ಈಗ ಹೀಗೆ ಹೇಳ್ತಿದ್ದೀಯಾ? ನೀನೇ ಕೊಟ್ಟದ್ದಲ್ಲವಾ? ನಿನಗಲ್ಲವಾ ಚೀಫ್ ಸೆಕ್ರೆಟರಿಯ ಹೆಂಡತಿ ಅನ್ನಿಸಿಕೊಳ್ಳಬೇಕು ಅನ್ನಿಸಿದ್ದು?"

ಅದಕ್ಕೆ ಯಜಮಾನಮ್ಮ ಸುಮ್ಮನಾಗಲಿಲ್ಲ. "ಆದ್ದರಿಂದಲೇ ನಾನು ಹೇಳೋದು ಇಷ್ಟೊಂದು ಹೆದರಿಕೊಳ್ಳೋ ಅಂಥಾದ್ದೇನು ಅಂತ. ತುಂಬ ಹಣ ತೆತ್ತದ್ದು. ಧೈರ್ಯವಾಗಿರಬೇಕು. ಅಳುಕೋದರಿಂದಲೇ ಈ ಭಯ."

ಚೀಫ್ ಸೆಕ್ರೆಟರಿಯ ಮನಸ್ಸು ಸ್ಥಿಮಿತವನ್ನು ಕಳೆದುಕೊಂಡಿತು. ಸಿಟ್ಟು ಸಂಕಟಗಳನ್ನು ಸಹಿಸಲಾಗಲಿಲ್ಲ. ಆ ಭಯಂಕರನಾದ ಮನುಷ್ಯ ಪ್ರತಿ ನಿಮಿಷವೂ ಅರ್ಹತೆಯಿಲ್ಲದವನು ಎಂದು ಹೇಳಿ ನಡುಗಿಸುತ್ತಾನೆ. ಇಲ್ಲಿ ಹೆಂಡತಿಯೂ ಹಾಗೆಯೇ ಆಕ್ಷೇಪಿಸುತ್ತಾಳೆ. ಏನೂ ಹೇಳಲು ತೋರದೆ ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ಯಜಮಾನಮ್ಮ ಆಗಲೂ ಗಂಡನ ಅನರ್ಹತೆಯನ್ನು ಕಟುವಾಗಿ ವಿಮರ್ಶಿಸುತ್ತಿದ್ದರು.

ಕೃಷ್ಣನ್ ನಾಯರ್ ತಾಳ್ಮೆಗೆಟ್ಟು ಹೇಳಿದರು: "ನೋಡು, ನೀನು ಹೀಗೆ ಹೇಳಬಹುದು. ಇವತ್ತು ಈ ಹೈಡ್ರೋ ಇಲೆಕ್ಟ್ರಿಕಲ್ಸ್‌ನ ಒಂದು ಫೈಲಿನ ವಿಚಾರ ಇತ್ತು. ನಿಯಮ ಪ್ರಕಾರವಾಗಿ ಅರಮನೆಯ ಅಪ್ಪಣೆ ಪಡೀಬೇಕಾಗಿತ್ತು. ಅರಮನೆಗೆ ಕಳಿಸದೆ ದಿವಾನರು ಅದನ್ನು ಒಪ್ಪಿದರು. ಕೂಡಲೆ ಕಾರ್ಯಾಚರಣೆಗೆ ತರುವುದಕ್ಕೆ ಈ ಕಡೆ ಕಳಿಸಿದರು. ಅದಕ್ಕೆ ಅರಮನೆ ಅಪ್ಪಣೆ ಬೇಕು ಎಂದು ಮಾತ್ರ ಹೇಳಿದೆ. ಅಷ್ಟೆ. ನನ್ನನ್ನು ಡಿಸ್‌ಮಿಸ್ ಮಾಡಿದ್ದೇನೆ ಅಂತ ಅದಕ್ಕೆ ಬಂದ ಉತ್ತರ. ನಾನು ಕೂಡಲೇ ಅದನ್ನು ನಡೆಸಬೇಕು ಅಂತ ಆ ಮೇಲೆ ಹೇಳಿದ್ದು."

ಒಂದು ಕ್ಷಣ ಬಿಟ್ಟು ಆ ಮೇಲೆ ಹೇಳಿದರು: "ಬಾಯಿಮಾತಿನಲ್ಲಿ ನಾನು ಡಿಸ್‌ಮಿಸ್ ಆಗಿದ್ದೇನೆ. ನಾಳೆ ಬರವಣಿಗೆಯಲ್ಲಿ ಕೊಟ್ಟರೊ? ಕೊಡೋದಿಲ್ಲ ಅಂದುಕೊಳ್ಳಬೇಡ" ಎಂದು ಹೇಳಿ ಅವರು ಕೇಳಿದರು: "ನಾನು ಯಾವ ಸಾಮರ್ಥ್ಯ ತೋರಿಸಬೇಕು ನೀನೇ ಹೇಳು. ಅವರು ಹಾಗೆ ಮಾಡಿದರೆ ಅವರನ್ನು ಕೇಳೋರು ಯಾರಿದ್ದಾರೆ?"

ಅದು ಅರ್ಥವಾಗದೆ ಕೊಚ್ಚಮ್ಮ ಹೇಳಿದರು:

"ಅದು ಮೊದಲೇ ಸಾಮರ್ಥ್ಯ ತೋರಿಸದೇ ಇದ್ದದ್ದರಿಂದ ಇಷ್ಟೇ ಅಂತ ತಿಳಿದುಕೊಂಡರು. ಇನ್ನು ಏನು ಮಾಡೋದಕ್ಕೆ ಆಗುತ್ತೆ?"

ಅಸಹಾಯಕರಾಗಿ ಚೀಫ್ ಸೆಕ್ರೆಟರಿ ಹೇಳಿದರು: "ನೀನು ಹೀಗೆ ಹೇಳಬಹುದು. ಮಹಾರಾಜರನ್ನು ಕೂಡ ಲೆಕ್ಕಕ್ಕಿಡದ ಮನುಷ್ಯ. ಹಣ ಕೊಟ್ಟೆ ಅನ್ನುವ ಸಾಮರ್ಥ್ಯ ತೋರಿಸಿದ್ದಿದ್ದರೆ ಈಗಲೇ ಹಿಂದಕ್ಕೆ ಬರಬೇಕಾಗಿತ್ತು."

ಕೃಷ್ಣನ್ ನಾಯರ್ ಸಮಾಧಾನಪಡಿಸಿದುದು ಯಜಮಾನಮ್ಮನಿಗೆ ಅರ್ಥವಾಗಲಿಲ್ಲ. ಆದರೂ ಯಾವಾಗಲೂ ಈ ರೀತಿಯಲ್ಲಿ ಗೋಣಗುವುದು ಅಷ್ಟೊಂದು ಒಳ್ಳೆಯದಲ್ಲವೆನ್ನಿಸಿತು. ಯಾತಕ್ಕಾಗಿ ಹೀಗೆ ಸಿಟ್ಟಾಗಿ ನಿಂತಿರುವುದು? ಹಣಕ್ಕೋಸ್ಕರವಾಗಿದ್ದರೆ ಅದನ್ನೂ ಕೊಟ್ಟುಕೊಂಡು ಬರಲಾಗುತ್ತಿದೆ.

ಎರಡು ದಿನ ಕಳೆದ ಮೇಲೆ ಆ ದಿನ ಹಗಲು ಎರಡು ಗಂಟೆಗೆ ಥಟ್ಟನೆ ಒಂದು ಕಾರು ಹೊರಗಡೆ ಬಂದು ನಿಂತಿತು. ಕಾರಿನಿಂದ ಇಳಿದದ್ದು ದಿವಾನರ ಪ್ರೈವೇಟ್ ಸೆಕ್ರೆಟರಿ. ಕೇಶವ ಪಿಳ್ಳೆ ಬಾಗಿ ನಮಸ್ಕರಿಸಿ ಪಕ್ಕಕ್ಕೆ ಸರಿದು ನಿಂತುಕೊಂಡ. ಪ್ರೈವೇಟ್ ಸೆಕ್ರೆಟರಿ, "ಏನಯ್ಯಾ ಕೇಶವ ಪಿಳ್ಳೇ" ಎಂದು ಕುಶಲಪ್ರಶ್ನೆ ಮಾಡಿ ಒಳಗೆ ಹೋದರು.

ಕೇಶವ ಪಿಳ್ಳೆ ಫೈಲುಗಳನ್ನು ನೋಡುತ್ತ ಕುಳಿತುಕೊಂಡಿದ್ದ. ಯಾರೋ ತನ್ನ ಮುಂದೆ ಬಂದು ನಿಂತ ಹಾಗೆ ತೋರಿತು. ತಲೆಯೆತ್ತಿ ನೋಡಿದ. ತನ್ನ ಮುಂದೆ ನಿಂತಿದ್ದದ್ದು ಶೇಖರ ಪಿಳ್ಳೆ. ಕೇಶವ ಪಿಳ್ಳೆ ಪಾರ್ಕ್ ವ್ಯೂವಿಗೆ ಬಂದ ನಂತರ ಮೊತ್ತಮೊದಲಾಗಿ ಶೇಖರ ಪಿಳ್ಳೆಯನ್ನು ಅಲ್ಲಿ ಕಾಣುತ್ತಿರುವುದು. ತುಂಬ ಅನಿರೀಕ್ಷಿತವಾದ ಆಗಮನ. ಕೇಶವ ಪಿಳ್ಳೆಗೆ ಸ್ವಲ್ಪ ಆಶ್ಚರ್ಯವೂ ಆಯಿತು. ಮದುವೆ ವಿಷಯ ಮಾತನಾಡುವುದಕ್ಕೆ ಬಂದದ್ದಾಗಿರಬಹುದೇ ಎಂದು ಸ್ವಲ್ಪ ಗಾಬರಿಯೂ ಆಯಿತು. ಒಂದು ವೇಳೆ ಹಾಗಿದ್ದರೆ ಆ ಪ್ರಸ್ತಾಪವನ್ನು ಹೇಗೆ ಎದುರಿಸುವುದು? ಆ ವಿಚಾರವಾಗಿ ಏನೂ ಆಲೋಚಿಸಿಲ್ಲ. ಹೇಗೆ ಮಾತನಾಡಬೇಕು ಎಂದು ಆಲೋಚಿಸಿರಬೇಕಾಗಿತ್ತು.

ಆದರೂ ಒಂದು ಸಣ್ಣ ಹುಸಿನಗುವಿನೊಂದಿಗೆ ಕೇಶವ ಪಿಳ್ಳೆ ಎದ್ದು ನಿಂತ.

ಶೇಖರ ಪಿಳ್ಳೆ ಕೇಳಿದರು: "ಏನು ಪಿಳ್ಳೆ, ಹೇಗಿದ್ದೀರಿ?"

"ತೊಂದರೆಯಿಲ್ಲ. ಹೀಗೇ ಇದ್ದೇನೆ. ಕುಳಿತುಕೊಳ್ಳಿ."

ಶೇಖರ ಪಿಳ್ಳೆ ಕುಳಿತುಕೊಂಡರು. ಕೇಶವ ಪಿಳ್ಳೆಯನ್ನು ಅಡಿಯಿಂದ ಮುಡಿಯವರೆಗೆ ಒಬ್ಬ ಮಗನನ್ನು ನೋಡುವ ರೀತಿಯಲ್ಲಿ ವಾತ್ಸಲ್ಯದಿಂದ ನೋಡಿದರು. ಆಮೇಲೆ ಹೇಳಿದರು:

"ಕೃಷ್ಣನಿಗೆ ನಿಮ್ಮ ವಿಚಾರವಾಗಿ ತುಂಬ ಒಳ್ಳೆ ಅಭಿಪ್ರಾಯವಿದೆ. ನಾನು ಮೂರು ಸಲ ಇಲ್ಲಿಗೆ ಬಂದು ಅವನನ್ನು ಕಂಡಿದ್ದೆ. ನೀವು ಆಗ ಇಲ್ಲಿರಲಿಲ್ಲ. ಕೇಶವ ಪಿಳ್ಳೆ ಹೇಗೆ ಅಂತ ಕೇಳಿದಾಗ ತುಂಬ ಒಳ್ಳೆ ಅಭಿಪ್ರಾಯ ಕೊಟ್ಟ."

ಕೇಶವ ಪಿಳ್ಳೆ ಆಗಲೂ ಆ ಕೃತಕ ನಗುವಿನಿಂದಲೇ ನಿಂತಿದ್ದ. ಒಂದೊಂದು ನಿಮಿಷದಲ್ಲೂ ಎಲ್ಲಿ ಮದುವೆಯ ಪ್ರಸ್ತಾಪ ಎತ್ತುತ್ತಾರೋ ಎಂದು ಕೇಶವ ಪಿಳ್ಳೆ ಹೆದರುತ್ತಿದ್ದ. ಶೇಖರ ಪಿಳ್ಳೆ ಕೇಳಿದರು: "ಇಲ್ಲಿ ಭಗವತಿ ಕುಟ್ಟಿ ಇಲ್ಲವಾ?"

ಭಗವತಿ ಕುಟ್ಟಿ ಎಂದು ಹೇಳಿದುದು ಯಜಮಾನಮ್ಮನನ್ನು ಕುರಿತು. ಸ್ವಲ್ಪ ಹೊತ್ತು ಬಿಟ್ಟು ಬಳಿಕ ಹೇಳಿದ:

"ಇದ್ದಾರೆ."

ಈ ಮನೆಯ ಯಜಮಾನನ ಅಣ್ಣ ಈತ. ನೇರವಾಗಿ ಮನೆಯೊಳಗೆ ಪ್ರವೇಶಿಸುವ ಹಕ್ಕುಳ್ಳವನು. ಈತ ಒಳಗೆ ಹೋದದ್ದಾದರೆ ಅದು ಕೂಡ ತನ್ನ ಮೇಲೆ ಯಾವ ಪರಿಣಾಮವನ್ನುಂಟುಮಾಡೀತು ಎಂದು ಕೇಶವ ಪಿಳ್ಳೆ ಆಲೋಚಿಸುತ್ತಿದ್ದ. ಅದುವರೆಗೆ ತಾನು ಸಂಪಾದಿಸಿದ್ದ ಒಳ್ಳೆಯ ಅಭಿಪ್ರಾಯವೆಲ್ಲ ಹಾಳಾಗುತ್ತದೆ. ಉದ್ದೇಶಪೂರ್ವಕವಾಗಿ ಶೇಖರ ಪಿಳ್ಳೆಗೆ ಹೇಳಿ ಒಳಗೆ ಕಳುಹಿಸಿದ್ದು ಎಂದು ಭಾವಿಸಬಹುದು. ಶೇಖರ ಪಿಳ್ಳೆಯನ್ನೂ ಆತನ ಕಡೆಯವರನ್ನೂ ಕುರಿತು ಯಜಮಾನಮ್ಮನಿಗೆ ದ್ವೇಷವಿದೆ. ತನ್ನನ್ನೂ ಶೇಖರ ಪಿಳ್ಳೆಯ ಗುಂಪಿಗೆ ಸೇರಿದವನೆಂದು ಭಾವಿಸಿಬಿಡಬಹುದು. ತಂಗಮ್ಮನನ್ನು ಮದುವೆ ಮಾಡಿಕೊಡಬೇಕೆಂದು ತೀರ್ಮಾನಿಸಿದ್ದ ಮನುಷ್ಯ ತಾನೆ? ಈ ಉದ್ಯೋಗವನ್ನು ಕೊಡಿಸಿಕೊಟ್ಟದ್ದು ಶೇಖರ ಪಿಳ್ಳೆಯಲ್ಲವೆ? ಅದಕ್ಕೋಸ್ಕರ ಈ ಮನೆಯಲ್ಲಿ ನಡುಹಗಲಿನಲ್ಲೂ ನಡೆಯುತ್ತಿರುವುದನ್ನು ಒಳಗೆ ಹೋಗಿ ನೋಡಿ ಎಂದು ಹೇಳಿ ಕಳುಹಿಸಿದ್ದು ಎಂದು ಯಜಮಾನಮ್ಮ ಭಾವಿಸಬಹುದು. ಶೇಖರ ಪಿಳ್ಳೆ ಒಳಗೆ ಹೋಗಬೇಕು ಎಂದು ಹೊರಟಾಗ ತಡೆಯಲೆ? ತಡೆಯುವುದು ಸರಿಯೆ? ತಾನು ಇಲ್ಲಿ ಕುಳಿತುಕೊಳ್ಳುವಂತೆ ಮಾಡಿಕೊಟ್ಟದ್ದೇ ಶೇಖರ ಪಿಳ್ಳೆಯಲ್ಲವೆ? ಅಂತಹ ಮನುಷ್ಯನನ್ನು ಒಳಗೆ ಹೋಗಬೇಡಿ ಎಂದು ಹೇಗೆ ಹೇಳುವುದು? ಅದು ಸರಿಯೆ?

ಥಟ್ಟನೆ ಕೇಶವ ಪಿಳ್ಳೆ ಹೇಳಿದ:

"ನಿದ್ದೆ ಮಾಡ್ತಿದ್ದಾರೆ."

"ಹ್ಞು! ಸರಿ."

ಶೇಖರ ಪಿಳ್ಳೆ ಬೇಗ ಹೊರಡುವುದಿಲ್ಲ ಎಂದು ಕೇಶವ ಪಿಳ್ಳೆಗೆ ತೋರಿತು.

ಶೇಖರ ಪಿಳ್ಳೆ ಹೇಳಿದರು:

"ಹಗಲು ಹೊತ್ತು ಹೆಂಗಸರು ಮಲಗುವುದು ಶ್ರೇಯಸ್ಸಲ್ಲ. ಮಲಗಬಾರದು. ಈಗಿನ ಕಾಲದ ಹೆಂಗಸರಿಗೆ ಅದೊಂದರಲ್ಲೂ ವಿಶ್ವಾಸವಿಲ್ಲ. ಆದರೆ ನಮ್ಮ ಮನೆಯಲ್ಲಿ ಈ ತರಹ ನಡೆಯೋದಕ್ಕೆ ನಾನು ಬಿಡೋದಿಲ್ಲ."

ಶೇಖರ ಪಿಳ್ಳೆ ಸ್ವಲ್ಪ ತಗ್ಗಿದ ಸ್ವರದಲ್ಲಿ ತನ್ನದೇ ವ್ಯಕ್ತಿಯ ಹತ್ತಿರ ಹೇಳುವಂತೆ ಹೇಳಿದರು:

"ಯಜಮಾನಿ ಅಲ್ಲವಾ? ಏನು ಕೆಲಸ ಇರುತ್ತೆ? ಊಟ ಮಾಡೋದು, ಮಲಗೋದು. ಮನೆಯಲ್ಲಿ ಕೈತುಂಬ ಕೆಲಸ ಇದ್ದರೆ ನಿದ್ದೆ ಬರೋದಿಲ್ಲ. ತುಂಬ ಆಯಾಸವೇ ಆಯ್ತು ಅಂತ ಅನ್ನಿ. ಆದರೂ ನಿದ್ದೆ ಬರೋದಿಲ್ಲ."

ಕೇಶವ ಪಿಳ್ಳೆ ಅದೇ ಕೃತಕ ನಗುವಿನಿಂದ ನಿಂತಿದ್ದ. ಶೇಖರ ಪಿಳ್ಳೆ ಕುಳಿತುಕೊಳ್ಳು

ವಂತೆ ಹೇಳಿದರು. ಕೇಶವ ಪಿಳ್ಳೆ ಕುಳಿತುಕೊಳ್ಳಲಿಲ್ಲ. ಪುನಃ ಕುಳಿತುಕೊಳ್ಳುವಂತೆ ಒತ್ತಾಯ ಪಡಿಸಿದರು:

"ಕುಳಿತುಕೊಳ್ಳಿ ಪಿಳ್ಳೆ, ಕುಳಿತುಕೊಳ್ಳಿ. ಅಷ್ಟೊಂದು ಸಂಕೋಚಪಟ್ಟುಕೊಳ್ಳ ಬೇಡಿ."

ಶೇಖರ ಪಿಳ್ಳೆ ಅಳಿಯನ ಹತ್ತಿರ ಮಾತನಾಡುತ್ತಿದ್ದಂತಿತ್ತು. ಕೇಶವ ಪಿಳ್ಳೆ ಹೇಳಿದ:

"ಇಲ್ಲ, ನಾನು ನಿಂತಿರ್ತೀನಿ."

"ಇದೆಂಥಾದ್ದು ಪಿಳ್ಳೆ. ಕುಳಿತಿದ್ದರೆ ತಪ್ಪೇನು? ಅಗೌರವ ತೋರಿದ ಹಾಗಾಗೋ ದಿಲ್ಲ. ಕುಳಿತುಕೊಳ್ಳಿ."

ಆಗಲೂ ಕೇಶವ ಪಿಳ್ಳೆ ಸಂಕೋಚಪಟ್ಟುಕೊಂಡ. ಶೇಖರ ಪಿಳ್ಳೆಗೆ ಸಂತೋಷ ವಾದಂತೆ ತೋರಿತು.

"ಈಗಿನ ಕಾಲದಲ್ಲಿ ಇಂಥ ಹುಡುಗರು ಸಿಕ್ಕೋದಿಲ್ಲ. ಪರವಾಯಿಲ್ಲ" ಎಂದು ಶೇಖರ ಪಿಳ್ಳೆ ತಮಗೆ ತಾವೇ ಹೇಳಿಕೊಂಡರು.

ಅನಂತರ ಶೇಖರ ಪಿಳ್ಳೆ ಕೇಶವ ಪಿಳ್ಳೆಯ ಹತ್ತಿರ ಹೇಳಿದರು: "ತಂಗಮ್ಮನ ತಾಯಿ ಇಂಥ ಅಮಂಗಳವಾದದ್ದೇನೂ ಮಾಡೋದಿಲ್ಲ."

ಏನನ್ನೂ ಮಾತನಾಡದೆ ನಿಂತಿದ್ದ ಕೇಶವ ಪಿಳ್ಳೆಗೆ ಏನಾದರೊಂದು ಹೇಳಬೇಕು ಎನ್ನಿಸಿ ಹೇಳಿದ: "ಅದು ಒಳೆಯದು."

ಶೇಖರ ಪಿಳ್ಳೆಗೆ ತಂಗಮ್ಮನನ್ನು ಕುರಿತೂ ಹೇಳಬೇಕಾದದ್ದಿತ್ತು.

"ತಂಗಮ್ಮನೂ ಅಮಂಗಳವಾದದ್ದೇನನ್ನೂ ಮಾಡೋದಿಲ್ಲ. ನಾವು ಅವಳನ್ನು ಆ ರೀತಿ ಬೆಳೆಸಲೂ ಇಲ್ಲ. ಈ ತಿರುವನಂತಪುರದಲ್ಲಿ ಬೆಳೆದದ್ದಲ್ಲ. ಇಲ್ಲಿ ಒಳ್ಳೆ ನಡತೆ ಒಳ್ಳೆ ಆಚಾರ ಯಾವುದೂ ಇಲ್ಲ. ಸಂಸ್ಕಾರ ಅನ್ನೋದಿಲ್ಲ. ತಿಂಗಳಾದಾಗ ಬೇರೆ ಕಡೆ ಕುಳಿತುಕೊಳ್ಳುವ ವಿಚಾರದಲ್ಲಿ ಕೂಡ ತುಂಬ ಕಟ್ಟುನಿಟ್ಟು—ಅವಳಿಗೂ ಅವಳ ತಾಯಿಗೂ. ನೀವು ಬಡಗು ದಿಕ್ಕಿನವರು. ಎಂಜಲು, ಶುದ್ಧ, ಅಶುದ್ಧ ಎಲ್ಲವನ್ನೂ ಪಾಲಿಸಿಕೊಂಡು ಬರುವವರು. ನಯವಿನಯ, ನಡೆನುಡಿ ಎಲ್ಲವನ್ನೂ ನೋಡಿ—ನಮ್ಮ ತಂಗಮ್ಮ ಈ ಊರಿನ ಹೆಂಗಸರ ಹಾಗಲ್ಲ."

ಕೇಶವ ಪಿಳ್ಳೆ 'ಹ್ಞೂ' ಎಂದ ಅಷ್ಟೆ.

ಒಂದು ವೇಳೆ ನಡೆನುಡಿ, ನಯವಿನಯ, ಎಂಜಲು, ಶುದ್ಧ ಅಶುದ್ಧ, ಅಮಂಗಳ—ಎಲ್ಲವೂ ಇದ್ದೆ ತಂಗಮ್ಮನನ್ನು ಕುರಿತು ಆಲೋಚಿಸುತ್ತಿದ್ದ. ಇಲ್ಲದಿದ್ದರೆ ತಂದೆಗೆ ಮಗಳನ್ನು ಕುರಿತು ಹೀಗೆ ಮಾತನಾಡುವುದಕ್ಕೆ ಸಾಧ್ಯವೆ?

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಕೇಶವ ಪಿಳ್ಳೆಗೆ ಮನಸ್ಸು ಬಿಚ್ಚಿ ಎಷ್ಟೋ ವಿಷಯಗಳನ್ನು ಮಾತನಾಡಬೇಕೆನ್ನಿಸಿದಂತಿತ್ತು. ಶೇಖರ ಪಿಳ್ಳೆ ಏನನ್ನೋ ಆಲೋಚಿಸಿದ್ದರು. ಅದೇನಿರಬಹುದೋ! ದಿವಾನರ ಪ್ರೈವೇಟ್ ಸೆಕ್ರೆಟರಿ ಹಿಂದಿರುಗಿ

ಹೊರಟಾಗ ಈ ವೃದ್ಧ ಇಲ್ಲಿ ಕುಳಿತೇ ಇದ್ದರೊ? ಅದನ್ನು ಆತ ಆಲೋಚಿಸುತ್ತಿದ್ದದ್ದು. ಈ ಮುದುಕ ಬಂದು ಕುಳಿತಿರುವ ಸೂಚನೆಯನ್ನು ಒಳಗೆ ಹೋಗಿ ಸೂಚಿಸಲೂ ಸಾಧ್ಯವಿಲ್ಲ.

ಶೇಖರ ಪಿಳ್ಳೆ ಹೇಳಿದರು: "ನಾನು ಇಲ್ಲಿ ಕುಳಿತು ನೆನಸಿಕೊಳ್ಳುತ್ತಿದ್ದೆ—ಈಗ ಕೃಷ್ಣ ಇಲ್ಲಿದ್ದಾನೆ. ನಾಳೆ ಅವನು ಭಕ್ತಿವಿಲಾಸಕ್ಕೆ ಬರಬಹುದು. ಅಲ್ಲಿ ನಮ್ಮ ಅಪ್ಪಂದಿರು ಕಾವಲುಗಾರರಾಗಿದ್ದರು. ಆಗ ನಾವು ಸಣ್ಣ ಹುಡುಗರು. ನಾವು ಬೆಳೆದ ಕಾಲ. ಆ ಮನೆ. ಅಪ್ಪಂದಿರು—ಎಲ್ಲವನ್ನೂ ನೆನಸಿಕೊಳ್ಳುತ್ತಿದ್ದೆ. ಪಿಳ್ಳೆ ಹತ್ತಿರ ಹೇಳಬಹುದಲ್ಲ. ಕೃಷ್ಣನ್ ನಾಯರ್ ಎಲ್ಲೆಲ್ಲಿ ವಾಸಮಾಡಿದ್ದಾನೋ ಅಲ್ಲಿಗೆಲ್ಲ ಹೋದಾಗ ನನಗೆ ಜ್ಞಾಪಕಕ್ಕೆ ಬರುತ್ತೆ. ಪಾಪ. ತಾಯಿ ತುಂಬ ಕಷ್ಟಪಟ್ಟಳು. ಇದೊಂದನ್ನೂ ನೋಡುವುದಕ್ಕೆ ಅವರು ಉಳಿಯಲಿಲ್ಲ. ಅಪ್ಪಂದಿರು ಇವನು ಮೇಲೆ ಬರೋವನ್ನು ಕಂಡಿದ್ದರೂ ಆ ಸುಖ ಅನುಭವಿಸಲಿಲ್ಲ."

ಶೇಖರ ಪಿಳ್ಳೆ ಸಂಕಟಕ್ಕೊಳಗಾದರು. ಅವರ ಕಣ್ಣುಗಳು ತೇವಗೊಂಡಂತೆ ತೋರಿತು. ಆ ಮುಖಭಾವದಲ್ಲಾದ ವ್ಯತ್ಯಾಸವನ್ನು ಕೇಶವ ಪಿಳ್ಳೆ ಗಮನಿಸಿದ. ತಂದೆ ತಾಯಿಗಳನ್ನು ಕುರಿತು ಸ್ಮರಿಸಿಕೊಳ್ಳುತ್ತಿರುವುದು. ಕೇಶವ ಪಿಳ್ಳೆಗೆ ಅದು ಅರ್ಥವಾಗುತ್ತದೆ. ತಂದೆ ತಾಯಿಗಳು ಅವನಿಗೂ ಮೊತ್ತವರು.

"ಎಲ್ಲಾ ಕಾಲದಲ್ಲೂ ತಂದೆ ತಾಯಿಗಳು ಜೀವಿಸಿರೋದಕ್ಕೆ ಸಾಧ್ಯವೆ?"

ಶೇಖರ ಪಿಳ್ಳೆ ಕಣ್ಣೊರಸಿಕೊಂಡು ಹೇಳಿದರು: "ಇಲ್ಲ ಪಿಳ್ಳೆ. ಇಲ್ಲ. ಒಪ್ಪಿದೆ. ತಂದೆ ತಾಯಿಗಳು ಎಷ್ಟು ಪ್ರಾಯವಾಗಿ ಸತ್ತರೂ ಸತ್ತರಲ್ಲಾ ಎನ್ನುವ ವೇದನೆಯುಂಟಾಗುತ್ತದೆ. ಅವರನ್ನು ನೆನಸಿಕೊಂಡಾಗ ಕಣ್ಣು ತೇವವಾಗುತ್ತದೆ."

"ಅದು ನಿಜ. ಆದರೆ ಹಾಗೆ ನೆನಸಿಕೊಂಡು ದುಃಖಿಸುವುದು ಸರಿಯಲ್ಲ" ಎಂದ ಕೇಶವ ಪಿಳ್ಳೆ.

ಶೇಖರ ಪಿಳ್ಳೆ ಹೇಳಿದರು: "ನಾಡಿದ್ದು ತಾಯಿಯ ಶ್ರಾದ್ಧ. ಅದನ್ನು ಕೃಷ್ಣನ್ ನಾಯರ್‌ಗೆ ತಿಳಿಸೋದಕ್ಕಾಗಿ ನಾನು ಬಂದದ್ದು. ಕಾಣಿಕೆ ಒಪ್ಪಿಸೋದಿದ್ದರೆ ಒಪ್ಪಿಸಲಿ. ಅದು ನಡೆಯೋದಿಲ್ಲ. ಅದು ನನಗೆ ಗೊತ್ತು. ಎಷ್ಟೋ ವರ್ಷಗಳಾದುವು ಅವನು ಪಿಂಡ ಒಪ್ಪಿಸಿ. ಅವನು ಅಧಿಕಾರ ಇರುವ ಉದ್ಯೋಗಸ್ಥನಲ್ಲವೆ? ಅವರನ್ನು ಮರೆತಿರಬೇಕು. ಯಾಕೆ ಅವರನ್ನು ಈಗ ನೆನಸಿಕೊಳ್ಳಬೇಕು?"

ಸ್ವಲ್ಪ ನೀರಸತೆಯಿಂದಲೂ ವೇದನೆಯಿಂದಲೂ ಶೇಖರ ಪಿಳ್ಳೆ ಹೇಳಿ ಮುಗಿಸಿದ್ದು:

"ಇವರ ಆಲೋಚನೆಯೆಲ್ಲ ತಾವು ಹೀಗೇ ಹುಟ್ಟಿಬಂದವದ್ದು, ಅಂತ. ಇವನು ಈ ಸ್ಥಿತಿಗೆ ಬರೋದಕ್ಕೆ ಆ ಬಡಜೀವಿಗಳು ಎಷ್ಟು ಕಷ್ಟಪಟ್ಟುವು ಅನ್ನೋದು ತಿಳಿಯದು. ಅದನ್ನು ಜ್ಞಾಪಿಸಿಕೊಳ್ಳೋದು ಇಲ್ಲ."

ಕೇಶವ ಪಿಳ್ಳೆ ಒಂದು ಕ್ಷಣಕಾಲ, ತನ್ನ ತಂದೆ ತಾಯಿಗಳನ್ನು ನೆನಸಿಕೊಂಡ, ಅವರು ಅನುಭವಿಸಿದ ಕಷ್ಟಗಳನ್ನೂ. ತಂದೆ ತಾಯಿಗಳನ್ನು ಮರೆಯುವುದು ಸರಿಯಲ್ಲ. ಅಂತು ತನ್ನ ಯಜಮಾನನ ಪರವಾಗಿ ಏನಾದರೂ ಸಮಾಧಾನವನ್ನು ಹೇಳಬೇಕೆಂದು ಕೇಶವ ಪಿಳ್ಳೆಗೆ ತೋರಿತು.

"ಈಗ ತುಂಬ ಕೆಲಸ. ಯಜಮಾನರಿಗೆ ಎಳ್ಳಷ್ಟೂ ಮನಸ್ಸಿಗೆ ನೆಮ್ಮದಿಯಿಲ್ಲ. ಈಗ ದೇಶದಲ್ಲೂ ಶಾಂತಿಯಿಲ್ಲ. ಎಲ್ಲ ಚೀಫ್ ಸೆಕ್ರೆಟರಿಯ ತಲೆಯಲ್ಲಿ. ರಾಜ್ಯದಲ್ಲಿ ಯಾವ ಕಡೆ ನೋಡಿದರೂ ಕಾಂಗ್ರೆಸ್ಸಾಗಿದೆ. ಹಿಂದೆ ನಾಯಕರೆಲ್ಲ ಸರ್ಕಾರದ ಜೊತೆ ಇದ್ದರು. ಈಗ ಯಾರೂ ಇಲ್ಲ. ತುಂಬ ಕಷ್ಟದ ಕೆಲಸ."

ಶೇಖರ ಪಿಳ್ಳೆ ಹೇಳಿದರು: "ಅದಕ್ಕೆ ತಾಯಿಯ ಶ್ರಾದ್ಧದಲ್ಲಿ ಪಿಂಡ ಹಾಕೋದಕ್ಕೂ ಹೊತ್ತು ಸಿಕ್ಕೋದಿಲ್ಲವೆ?"

ಕೇಶವ ಪಿಳ್ಳೆ ನಂತರವೂ ಯಜಮಾನರ ಕಷ್ಟಗಳನ್ನು ವಿವರಿಸತೊಡಗಿದ. ಶೇಖರ ಪಿಳ್ಳೆ ಹೇಳುವುದು ಸರಿಯೆಂದು ಕೇಶವ ಪಿಳ್ಳೆಯ ವಿಶ್ವಾಸ. ಹಾಗೆಂದು ಚೀಫ್ ಸೆಕ್ರೆಟರಿಯ ಬಗ್ಗೆ ಒರಟಾಗಿ ಮಾತನಾಡುವುದಕ್ಕೆ ಇಷ್ಟವಿಲ್ಲ. ಕ್ಷೋಭೆಗೊಂಡವನಂತೆ ಸ್ವಲ್ಪ ಗಟ್ಟಿಯಾಗಿ ಶೇಖರ ಪಿಳ್ಳೆ ಹೇಳತೊಡಗಿದರು:

"ಸುಮ್ಮನೆ ಏನೇನೋ ಹೇಳಬೇಡಿ ಪಿಳ್ಳೆ. ನೀವು ನಿಮ್ಮ ಯಜಮಾನನಿಗಾಗಿ ವಾದಿಸ್ತೀರಿ. ಅದು ನಿಮ್ಮ ಕರ್ತವ್ಯ. ಅದನ್ನು ನೀವು ಮಾಡದೇ ಇದ್ದರೆ ತಪ್ಪು. ಆದರೆ ಅದು ನನಗೆ ವಿಪರೀತ ಸಿಟ್ಟು ತರುತ್ತೆ. ಇವನು ದೊಡ್ಡ ಉದ್ಯೋಗಸ್ಥ. ಅಂತೂ ಮನೆ ಕರ್ತವ್ಯ ಮರೆತವನು. ಚಿಕ್ಕಂದಿನಲ್ಲೂ ಹೀಗೆಯೇ ಇದ್ದ. ತನ್ನ ಕೆಲಸ ಆಯ್ತು. ತಾನಾಯ್ತು. ತಂದೆ ತಾಯಿಗಳ ಹತ್ತಿರ ಅವನಿಗೆ ಅಷ್ಟೇನು ಪ್ರೀತಿಯಿರಲಿಲ್ಲ. ಆದರೆ ಆ ಮೂರು ಜನರಿಗೂ ಅವನು ಅಂದರೆ ಜೀವವಾಗಿದ್ದ. ಅವನೇ ಅವರ ಸರ್ವಸ್ವವಾಗಿದ್ದ." ಶೇಖರ ಪಿಳ್ಳೆಗೆ ಹೇಳಬೇಕಾದದ್ದೆಲ್ಲವೂ ಕಟ್ಟೆಯೊಡೆದು ಹೊರಗೆ ಬಂದಿತು. ಅವರ ಧ್ವನಿಯೂ ಸ್ವಲ್ಪ ಸ್ವಲ್ಪ ಹೆಚ್ಚಿತು. ಅದು ಕೇಶವ ಪಿಳ್ಳೆಗೆ ಸಮಾಧಾನವನ್ನುಂಟು ಮಾಡುತ್ತಿತ್ತು. ಈ ಶಬ್ದ ಒಳಗೆ ಕೇಳಿಸುತ್ತದೆ. ಆಗ ಹೊರಗೆ ಯಾರೋ ಇದ್ದಾರೆಂದು ಒಳಗಿರುವವರಿಗೆ ತಿಳಿಯುತ್ತದೆ. ಥಟ್ಟನೆ ಪ್ರೈವೇಟ್ ಸೆಕ್ರೆಟರಿ ಹೊರಗೆ ಬರುವುದಕ್ಕೆ ಸಾಧ್ಯವಿಲ್ಲ.

ತಾನು ಹೇಳಬೇಕಾದದ್ದನ್ನು ಹೇಳಲೇಬೇಕೆಂದು ತೀರ್ಮಾನಿಸಿದ್ದಂತೆ ಶೇಖರ ಪಿಳ್ಳೆ ಹೇಳಿದರು:

"ನಾನು ಅವನಿಗಿಂತ ಹದಿನೈದು ವರ್ಷ ದೊಡ್ಡವನು. ನನಗೆ ಓದೋದಕ್ಕೆ ಸಾಧ್ಯವಾಗಲಿಲ್ಲ. ನಾನು; ಇಬ್ಬರು ತಂದೆಯರು, ತಾಯಿ—ಎಲ್ಲರೂ ಕಷ್ಟಪಟ್ಟು ಇವನನ್ನ ಓದಿಸಿದ್ದು. ನನ್ನ ಯೌವನದ ಕಾಲದ ಪ್ರಯತ್ನವೆಲ್ಲ ಅದಾಗಿತ್ತು. ನಾನು ಮದುವೆ ಮಾಡಿಕೊಂಡದ್ದೇ ಇವನ ಓದು ಮುಗಿದ ಮೇಲೆ. ಅಪ್ಪಂದಿರಿಗೆ ವಯಸ್ಸಾಯ್ತು.

ಪೆನ್ಶನ್ನಾಯ್ತು. ಆ ಮೇಲೆ ಅವರಿಂದ ಏನು ಸಾಧ್ಯವಾದೀತು? ಕುಟುಂಬ ಸಾಕಬೇಕು. ಅವನು ಓದಬೇಕು. ನಂತರದ ನನ್ನ ಶ್ರಮವೆಲ್ಲ ಅದಕ್ಕಾಗಿ ಮೀಸಲಾಗಿತ್ತು."

ಒಬ್ಬ ಅಣ್ಣನ ಆಕ್ಷೇಪಗಳು ಒಂದೊಂದಾಗಿ ಹೊರಗೆ ಬಂದುವು.

ಶೇಖರ ಪಿಳ್ಳೆ ಮುಂದುವರಿಸಿದರು—

"ಪಿಳ್ಳೆ ಹತ್ರ ಹೇಳ್ತಿದ್ದೀನಿ. ಪಿಳ್ಳೆಗೆ ಇದು ಗೊತ್ತಿರಲೂ ಬೇಕು. ಈಗಿನ ಸ್ಥಿತಿ ಅದು. ಅವನು ದೊಡ್ಡ ಮನುಷ್ಯನಾಗಿರೋದು ನಮ್ಮೆಲ್ಲರಿಂದ. ಅದರಿಂದ ನನಗೇನು ಪ್ರಯೋಜನ ಅಂದುಕೊಂಡಿದ್ದೀರಿ? ಯಾವುದೂ ಇಲ್ಲ. ನಾನು ಏನನ್ನೂ ಕೇಳೋ ದಕ್ಕೂ ಹೋಗೋದಿಲ್ಲ. ನಾನು ಪಾಡುಪಡ್ತೀನಿ. 'ಜೀವಿಸ್ತಿದ್ದೀನಿ. ಒಂದು ದಮ್ಮಡಿ ಪ್ರಯೋಜನವೂ ನನಗಿಲ್ಲ. ಅಪ್ಪಂದಿರನ್ನೂ ಅಮ್ಮನನ್ನೂ ಮರೆತವನು ಇವನು. ನಾನು ಮರೆತಿದ್ದೇನಾ?"

ಒಂದು ಕ್ಷಣ ಬಿಟ್ಟು ಸ್ವರ ತಗ್ಗಿಸಿ ಶೇಖರ ಪಿಳ್ಳೆ ಹೇಳಿದರು:

"ಪಿಳ್ಳೆಗೇ ಗೊತ್ತಲ್ಲ. ನನಗೆ ಇರೋದು ಮೂರು ಮಕ್ಕಳು. ಗಂಡುಮಕ್ಕಳಿಬ್ಬರಿಗೂ ಸರ್ಕಾರದ ಕೆಲಸ ಇಲ್ಲ. ಒಬ್ಬ ವಕೀಲರ ಗುಮಾಸ್ತ. ಮತ್ತೊಬ್ಬ ಕಡಲತೀರದ ಫ್ಯಾಕ್ಟರಿಯಲ್ಲಿ. ಇವರಿಬ್ಬರಿಗೂ ಕೃಷ್ಣನ್ ನಾಯರಿಂದ ಯಾವ ಪ್ರಯೋಜನವೂ ಆಗಿಲ್ಲ. ಇಲ್ಲದಿದ್ದರೆ ಅವರಿಗೆ ಒಂದು ಗೌರ್ಮೆಂಟ್ ಕೆಲಸ ಸಿಕ್ಕುತ್ತಿರಲಿಲ್ಲವಾ? ತಂಗಮ್ಮನಿಗೆ ಉದ್ಯೋಗ ಕೊಟ್ಟದ್ದು ನಿಜವಾಗಿಯೂ ಪೇಷ್ಕಾರ್ ವಡಿವೇಲು ಪಿಳ್ಳೆ. ಅನಂತರ ಸೆಕ್ರೆಟರಿಯೇಟ್‌ಗೆ ತೆಗೆದುಕೊಂಡದ್ದು ಕೃಷ್ಣನ್ ನಾಯರ್ ಮೂಲಕ. ಅವಳಿಗೆ ಉದ್ಯೋಗ ಸಿಕ್ಕಿದ್ದೇ ಒಂದು ಕಥೆ. ವಡಿವೇಲು ಪಿಳ್ಳೆ ಸೆಕ್ರೆಟರಿಯೇಟ್‌ನಲ್ಲಿ ಕ್ಲಾರ್ಕಾಗಿದ್ದ ಕಾಲದಲ್ಲಿ ತಂಬಾನೂರಿನಲ್ಲಿ ನಾವು ವಾಸಮಾಡ್ತಿದ್ದದ್ದು. ವಾಸಮಾಡೋ ಸ್ಥಳದ ಹತ್ತಿರದಲ್ಲೇ ನನ್ನ ಬೀಡ ಅಂಗಡಿ ಇತ್ತು. ಪೇಷ್ಕಾರಾಗಿ ಬಂದಾಗ ನಾನು ಹೋಗಿ ಹೇಳಿದೆ. ಆಗ ಅವರು ಅವಳನ್ನು ನೇಮಿಸಿಕೊಂಡರು. ಅವತ್ತು ಇವನು ಸೆಕ್ರೆಟರಿಯಾಗಿದ್ದ. ಆದರೂ ನಾನು ಹೋಗಿ ಇವನ ಹತ್ರ ಹೇಳಲಿಲ್ಲ. ಅವಳೇ ಹೋಗಿ ಹೇಳಿಕೊಂಡದ್ದರಿಂದ ಅವಳನ್ನು ಸೆಕ್ರೆಟರಿಯೇಟ್‌ಗೆ ತೆಗೆದುಕೊಂಡದ್ದು."

ಯಜಮಾನರಿಗೂ ಅವರ ಅಣ್ಣನಿಗೂ ಇರುವ ಸ್ವಭಾವ ವ್ಯತ್ಯಾಸವನ್ನು ತಿಳಿದಿರುವುದು ಕೇಶವ ಪಿಳ್ಳೆಗೆ ಅವಶ್ಯವಿರುವ ಕೆಲಸವಾಗಿತ್ತು. ಆ ದೃಷ್ಟಿಯಲ್ಲಿ ಶೇಖರ ಪಿಳ್ಳೆಯ ಮಾತುಗಳನ್ನು ಕೇಶವ ಪಿಳ್ಳೆ ಕುತೂಹಲದಿಂದ ಕೇಳಿಸಿಕೊಂಡಿದ್ದ. ಅದನ್ನೂ ಅವನು ಲೆಕ್ಕಾಚಾರ ಹಾಕಿದ. ಶೇಖರ ಪಿಳ್ಳೆ ಅಷ್ಟೊಂದು ಹೆದರಿಕೊಳ್ಳಬೇಕಾದ ಕಾರಣವಿಲ್ಲ ಎಂದು ಆತನಿಗೆ ಅನ್ನಿಸಿತು.

ಇನ್ನೂ ಶೇಖರ ಪಿಳ್ಳೆಗೆ ಹೇಳಬೇಕಾದ ದೂರುಗಳಿವೆ. ಕೃಷ್ಣನ್ ನಾಯರ್‌ಗೆ ಸಂಬಂಧಿಸಿದ್ದಕ್ಕಿಂತ ಹೆಚ್ಚು ದೂರುಗಳಿರುವುದು ಭಗವತಿ ಕುಟ್ಟಿಯನ್ನು ಕುರಿತು. ಶೇಖರ ಪಿಳ್ಳೆ ತಮ್ಮ ಕುಟುಂಬದಲ್ಲಿ ಮೊದಲನೆಯವನಾಗಿ ಬಂದು ಸೇರಿದ ಎನ್ನುವಂತೆ

ಅಳಿಯನ ಹತ್ತಿರ ಎಲ್ಲವನ್ನೂ ಹೇಳುತ್ತಿದ್ದ. ಶೇಖರ ಪಿಳ್ಳೆಯೂ ಅವರ ಹೆಂಡತಿಯೂ ಮನೆಗೆ ಬರುವುದು ಈ ಯಜಮಾನಿಗೆ ಇಷ್ಟವಿಲ್ಲ. ಅದು ಅವರಿಗೆ ಗೌರವಕ್ಕೆ ಕೊರತೆ. ಅಣ್ಣ ಅತ್ತಿಗೆ ಎಂದುಕೊಂಡು ಹೋಗುವುದು ಅವರ ಅಂತಸ್ತಿಗೆ ಸರಿಯಲ್ಲ.

ಶೇಖರ ಪಿಳ್ಳೆ ಹೇಳಿದರು: "ನನ್ನ ಹೆಂಡತಿ, ತಂಗಮ್ಮನ ತಾಯಿ, ಅವಳೂ ಸಾಸಿವೆ ಕಾಳಷ್ಟು ಮರ್ಯಾದೆ ಕೊಡೋದಿಲ್ಲ. ಅವಳು ದೊಡ್ಡ ಮನೆತನದವಳು. ವಟ್ಟಿಯಾರ್ ಕಾವಿನ ಪನಂಗುರನ್ ಮನೆ ಹೆಸರು ಕೇಳಿದ್ದೀರಲ್ಲವೆ? ಆ ಮನೆಯವಳು. ಸೈನ್ಯದಲ್ಲಿ ದೊಡ್ಡ ಉದ್ಯೋಗದಲ್ಲಿದ್ದವರು ಆ ಕುಟುಂಬದ ಜನರು. ಅವಳು ಇವರ ಮನೆಗೆ ಕಾಲಿರಿಸಿ ಹದಿನೈದು ವರ್ಷ ಆಯ್ತು. "ಅವಳು ದೊಡ್ಡವಳಾದರೆ ಅವಳ ಹತ್ರ ಇರಲಿ" ಅಂತ ನಮ್ಮ ಮನೆಯವಳು ಹೇಳುವುದು."

ಅಷ್ಟನ್ನೂ ಹೇಳಿ ಶೇಖರ ಪಿಳ್ಳೆ ಮತ್ತೂ ಒಂದು ಮಾತನ್ನು ಹೇಳಿದರು:

"ಇವಳ ದೊಡ್ಡಸ್ತಿಕೆ ! ಅದನ್ನು ಮಾತಾಡದಿರೋದೇ ಒಳ್ಳೆಯದು."

ಆ ಇಬ್ಬರು ಸ್ತ್ರೀಯರಿಗಿದ್ದ ಒಡಕಿನ ಒಂದೆರಡು ಕಥೆಗಳನ್ನು ಶೇಖರ ಪಿಳ್ಳೆ ವಿವರಿಸಿದರು.

ಚೀಫ್ ಸೆಕ್ರೆಟರಿಯ ಹೆಂಡತಿಯನ್ನು ಶೇಖರ ಪಿಳ್ಳೆಯ ಹೆಂಡತಿ ಬಯ್ದಿದ್ದಾಳೆ—

ವಿಷಯಗಳು ಮತ್ತೂ ಮತ್ತೂ ಹೆಚ್ಚು ಹೊರಗೆ ಬರುತ್ತಿದ್ದುವು. ಕೇಶವ ಪಿಳ್ಳೆ ನಿಂತಿರುವ ನೆಲೆ ಗಟ್ಟಿಯಾದದ್ದೇ. ಹೀಗಿರುವ ಸಂಬಂಧದ ಮಧ್ಯೆ ತನಗೆ ಹೇಗೆ ಈ ಕೆಲಸ ಸಿಕ್ಕಿತು ಎಂದು ಆತ ಆಶ್ಚರ್ಯಪಟ್ಟ. ಪರಸ್ಪರ ಯಾವ ಒಂದು ಸೌಹಾರ್ದವೂ ಇಲ್ಲದ ಈ ಕುಟುಂಬದ ಮಧ್ಯೆ ಹೇಗೆ ತಾನು ಇಲ್ಲಿಗೆ ನೇಮಕಗೊಂಡದ್ದು? ಆಗಲೂ ಕಿಟ್ಟು ಮಾವನ ಮಾತು ಅವನ ಕಿವಿಗಳಲ್ಲಿ ಮೊಳಗಿತು:

"ಅವಳು ಭಾಗ್ಯವತಿ."

ಶೇಖರ ಪಿಳ್ಳೆ ಮುಂದುವರಿಸಿದರು: "ಇಷ್ಟೆಲ್ಲ ಆದರೂ ನಾವು ಒಬ್ಬರನ್ನೊಬ್ಬರು ಕಾಣುವಾಗ ಅವಳಿರಬಾರದು. ಅವನು ಬಾಯಿ ಮುಚ್ಚಿಕೊಂಡಿರ್ತಾನೆ. ಒಬ್ಬ ತಾಯಿಯ ಹೊಟ್ಟೆಯಲ್ಲಿ ಮಲಗಿದ್ದವರಲ್ಲವೇ ನಾವು? ಒಂದೇ ಎದೆಹಾಲು ಕುಡಿದೆವು. ಅವ ನನ್ನು ಎತ್ತಿಕೊಂಡು ತಿರುಗಾಡಿದ್ದು ಈಗಲೂ ನನಗೆ ನೆನಪಿದೆ. ನನ್ನ ಸರ್ವಸ್ವವಾಗಿ ನಾನು ಅವನನ್ನು ಬೆಳೆಸಿದ್ದು. ಅವಳನ್ನು ಕಾಣುವಾಗ ಅವನು ನಾಯಿಯ ಹಾಗಾಗ್ತಾನೆ. ಅದೇ ಕಷ್ಟ."

ಅನಂತರ ಅವರು ಮತ್ತೊಂದು ಕಥೆ ಹೇಳಲಾರಂಭಿಸಿದರು. ಕೇಶವ ಪಿಳ್ಳೆಗೆ ಈ ಉದ್ಯೋಗ ಸಿಕ್ಕಿದ ಕಥೆ. ವಾತ್ಸಲ್ಯವುಳ್ಳ ಆ ತಂದೆ ಆ ಕಥೆಯನ್ನು ಹೀಗೆ ವಿವರಿಸಿದರು:

"ಪಿಳ್ಳೆಯ ಹತ್ತಿರ ನಾನೆಲ್ಲ ಮನಸ್ಸು ಬಿಚ್ಚಿ ಹೇಳ್ತೀನಿ. ಪಿಳ್ಳೆಯೂ ನನಗೆ ಮಗ ನಿದ್ದ ಹಾಗೆ. ನಾನು ತುಂಬ ಮಾತನಾಡಿದೆ. ನನಗಿರೋಳು ಒಬ್ಬಳೇ ಮಗಳು. ಅವಳು

ನನ್ನ ಪ್ರಾಣ. ನನಗೆ ಇನ್ನಿಬ್ಬರು ಗಂಡುಮಕ್ಕಳೂ ಇದ್ದಾರೆ—ಅವರೂ ನನಗೆ ಪ್ರೀತಿಪಾತ್ರರೇ. ಆದರೂ ನನ್ನ ಮಗಳ ವಿಚಾರದಲ್ಲಿ ಒಂದು ಪ್ರತ್ಯೇಕತೆ. ಹೆಣ್ಣಾಗಿ ಅಲ್ಲ, ಹೊನ್ನಾಗಿ ನಾನು ಅವಳನ್ನು ಸಾಕಿದ್ದು. ಅವಳ ಮುಖ ಕಪ್ಪಾದರೆ ನಮ್ಮ ಮನೆಯಲ್ಲಿ ಕತ್ತಲ. ಅವಳು ನಕ್ಕರೆ ಮನೆಯಲ್ಲಿ ಬೆಳಕು. ಪಿಳ್ಳೆ, ಅವಳನ್ನು ನೋಯಿಸಬೇಡಿ. ಅವಳನ್ನು ಪ್ರೀತಿಯಿಂದ ನೋಡಿಕೊಳ್ಳಿ. ಅವಳ ಬಗ್ಗೆ ಪಿಳ್ಳೆ ಕನಿಕರ ಇಡಬೇಕು."

ಆ ವೃದ್ಧ ತಂದೆ ಅಪೇಕ್ಷಿಸುತ್ತಿದ್ದರು—ಅವರ ದೃಷ್ಟಿ ಮಸುಕಾದ ಕಣ್ಣುಗಳಲ್ಲಿ ಪುತ್ರೀವಾತ್ಸಲ್ಯ ಪ್ರಕಟಗೊಳ್ಳುತ್ತಿತ್ತು.

"ಇನ್ನು ಮೇಲೆ ಪಿಳ್ಳೆಯೇ ನಮ್ಮ ಕುಟುಂಬದ ಬೆಳಕು." ಆ ವಾತ್ಸಲ್ಯ ಆನಂದ ಬಾಷ್ಪವಾಗಿ ರೂಪಾಂತರ ಹೊಂದುತ್ತಿದ್ದಂತೆ ತೋರಿತು. ಶೇಖರ ಪಿಳ್ಳೆ ಎದ್ದು ಕೇಶವ ಪಿಳ್ಳೆಯ ತಲೆಯನ್ನು ನೇವರಿಸಿದರು. ಕೇಶವ ಪಿಳ್ಳೆ ಮುಖ ತಗ್ಗಿಸಿ ನಿಂತಿದ್ದ. ಶೇಖರ ಪಿಳ್ಳೆಯ ಕಣ್ಣುಗಳಿಂದ ಎರಡು ಹನಿ ಕಣ್ಣೀರು ಉದುರಿದುವು. ಶೇಖರ ಪಿಳ್ಳೆ ತಡೆದು ತಡೆದು ಹೇಳಿದರು:

"ನನಗೆ ಗೊತ್ತು. ಪಿಳ್ಳೆ ನನ್ನ ಮಗಳನ್ನು ನೋಯಿಸೋದಿಲ್ಲ ಅಂತ ನನಗೆ ಗೊತ್ತು."

ಒಂದು ವಾಗ್ದಾನ ಅಗತ್ಯ ಬರಬಹುದೆ ಎಂದು ಕೇಶವ ಪಿಳ್ಳೆ ಹೆದರಿದ. ಏನಿದ್ದರೂ ಅದುಂಟಾಗಲಿಲ್ಲ.

ಕಣ್ಣೊರಸಿಕೊಂಡು ಅದೇ ಕುರ್ಚಿಯಲ್ಲಿ ಮತ್ತೆ ಕುಳಿತು ಆ ಮುದುಕ ಪ್ರಾರಂಭಿಸಿದರು:

"ಅದ್ಯಾಕೆ ಹೇಳ್ತಿದ್ದೀನಿ ಅಂದರೆ ಅವಳಿಗೆ ನೀವು ಅಂದರೆ ಅಷ್ಟೊಂದು ಇಷ್ಟ. ಅವಳು ನನಗೆ ಯಾವ ಅಸಮಾಧಾನವನ್ನೂ ಉಂಟುಮಾಡಿಲ್ಲ. ನಾನು ಒಂದು ನಿಷ್ಠೆಯಲ್ಲಿದ್ದೆ. ಕೃಷ್ಣನ್ ನಾಯರ್ ಹತ್ತಿರ ಯಾವ ವಿಷಯವನ್ನೂ ಹೇಳುವುದಿಲ್ಲ ಎನ್ನುವ ನಿಷ್ಠೆಯಲ್ಲಿ ನಾನಿದ್ದದ್ದು. ಅವಳು ಅಳತೊಡಗಿದಳು. ನಾನು ಕರಗಿಹೋದೆ. ಅವಳು ಅಳುತ್ತಲೇ ಇದ್ದಳು. ನಾನು ರವಿನ್ನೂ ಆಫೀಸಿಗೆ ಹೋಗಿ ಅವನಿಗೆ ಕೇಶವ ಪಿಳ್ಳೆಯ ವಿಷಯ ಹೇಳಿದೆ. ಮನಸ್ಸಿಲ್ಲವೆನ್ನುವುದು ಅವನ ಮುಖದಲ್ಲಿ ಕಾಣಿಸಿತು. ಸಾಧ್ಯವಿಲ್ಲ ಎಂದು ಹೇಳಿದರ ಮುಖದ ಮೇಲೆ ಹೊಡೆದ ಹಾಗೆ ಕೆಲವು ವಿಷಯ ಹೇಳಬೇಕು ಅಂತ ಹೋಗಿದ್ದೆ. ಅವನು ಜವಾನನಿಗ ಹೇಳಿ ನನ್ನನ್ನು ಹಿಡಿದು ಹೊರಗೆ ಹಾಕಬೇಕೂಂತಿದ್ದರೆ ಅದೂ ನಡೆಯಲಿ ಎಂದು ತೀರ್ಮಾನಿಸಿದ್ದೆ. ಆ ಮನಸ್ಸಿಲ್ಲದ ಮನಸ್ಸನ್ನು ಕಂಡಾಗ ನಾನು ಹೇಳತೊಡಗಿದೆ—ಒಂದು ಅಕ್ಷರವನ್ನೂ ಉಚ್ಚರಿಸದೆ ಎಷ್ಟೋ ಹೊತ್ತು ಕಳೆದ ಮೇಲೆ ಅವನು ಕೇಳಿದ:

"ಅಣ್ಣನಿಗೆ ಈಗೇನಾಗಬೇಕು, ಆಯ್ತು ಅವನನ್ನು ನೇಮಿಸ್ತೀನಿ."

"ನಾನು ಪೂರ್ತಿ ಹೇಳಲಿಲ್ಲ. ಹಾಗೆ ಪಿಳ್ಳೆ, ಇಲ್ಲಿಗೆ ನಿಮ್ಮನ್ನು ನೇಮಿಸಿದ್ದು. ಅದನ್ನು ಕೇಳಿದಾಗ ಅವಳು ಕುಣಿದಾಡುತ್ತಿದ್ದಳು."

ಒಬ್ಬ ಹಿರಿಯ ಸಹೋದರ ತನ್ನ ಜೀವಿತ ಕಾಲದ ಪರಿಶ್ರಮವನ್ನೆಲ್ಲ ಶೇಖರ ಪಿಳ್ಳೆ ಹೇಳಿದ್ದಾಗಿದ್ದರೂ ಅದು ತಮ್ಮನಿಗೆ ಒಳ್ಳೆಯದನ್ನು ಮಾಡುವುದಕ್ಕಾಗಿತ್ತು. ಆ ಅಣ್ಣ ಅದಕ್ಕೆ ಪ್ರತಿಫಲ ಪಡೆದ. ಆದರೆ ಆ ಪ್ರತಿಫಲವನ್ನು ಅನುಭವಿಸಲು ಸಾಧ್ಯವೆ?

ಕೇಶವ ಪಿಳ್ಳೆ ಸ್ತಬ್ಧನಾಗಿ ನಿಂತಿದ್ದ. ಆ ಪುತ್ರೀವಾತ್ಸಲ್ಯವುಳ್ಳ ವೃದ್ಧನ ಬಯಕೆ ಅವನ ಹೃದಯವನ್ನು ಹೊಗಲಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಆ ವೃದ್ಧ ಜೀವಿತ ಕಾಲವಿಡೀ ತನ್ನನ್ನು ಹಿಂಬಾಲಿಸುತ್ತಾನೆಂದು ತೋರಿತು. ಆತ ಸತ್ತ ಮೇಲೂ ಆತನ ಆತ್ಮ ಹಿಂಬಾಲಿಸುತ್ತದೆ.

ಪುನಃ ಶೇಖರ ಪಿಳ್ಳೆ ತುಂಬಿದ ಕಣ್ಣುಗಳಿಂದ ಅನುಗ್ರಹಿಸಿದರು:

"ನೀವು ಸಕಲಾಭಿವೃದ್ಧಿ ಶ್ರೇಯಸ್ಸಿನಿಂದ ಬಾಳಬೇಕು. ನನಗೆ ಅದು ಸಾಕು."

ಕೇಶವ ಪಿಳ್ಳೆಗೆ ಒಳಗೆ ಬೆಂಕಿ ಹೊತ್ತಿಸಿದಂತೆ ಆಯಿತು.

ಯಜಮಾನಮ್ಮ ಅಲ್ಲಿಗೆ ಬಂದರು. ಅವರ ಮುಖದಲ್ಲಿ ಕೋಪದ ಛಾಯೆಯಿತ್ತು. ಶೇಖರ ಪಿಳ್ಳೆ ಯಜಮಾನಮ್ಮನ ಹತ್ತಿರ ಹೇಳಿದರು:

"ನಾಳೆ ತಾಯಿಯ ಶ್ರಾದ್ಧಕ್ಕೆ ಬರಬೇಕು ಅಂತ ಹೇಳಬೇಕು."

ಶೇಖರ ಪಿಳ್ಳೆ ಬೆತ್ತವನ್ನು ಹಿಡಿದುಕೊಂಡು ತಲೆಯೆತ್ತಿಕೊಂಡು ಹೊರಗೆ ಹೋದರು.

ಯಜಮಾನಮ್ಮ ಕೇಶವ ಪಿಳ್ಳೆಯ ಹತ್ತಿರ ಕೇಳಿದರು:

"ಬಂದು ತುಂಬ ಹೊತ್ತಾಯ್ತಾ?"

"ಸ್ವಲ್ಪ ಹೊತ್ತಾಯ್ತು."

"ಶಬ್ದ ಕೇಳಿಸಿತು" ಎಂದು ಹೇಳಿ ಕೂಡಲೇ ಯಜಮಾನಮ್ಮ ಕೇಳಿದರು: "ಅವರಿಲ್ಲಿದ್ದಾರೆ ಅಂತ ಹೇಳಿದಿರಾ?"

"ಇಲ್ಲ, ಹೇಳಲಿಲ್ಲ."

"ಒಳ್ಳೇದಾಯ್ತು. ನಾವು ಕೇರಂ ಆಡಿಕೊಂಡಿದ್ದವು. ನೀವು ಹೋಗಿ ಅಂತ ಹೇಳಬಾರದಾಗಿತ್ತೆ?"

ಕೇಶವ ಪಿಳ್ಳೆ ಸ್ವಲ್ಪ ನಯವಾಗಿ ಹೇಳಿದ:

"ನಾನು ಹಾಗಂದುಕೊಂಡೆ. ಆದರೆ ಹೇಳಿದರೆ ಯಜಮಾನಮ್ಮನಿಗೂ ಯಜಮಾನರಿಗೂ.........."

ಯಜಮಾನಮ್ಮ ಆ ವಾಕ್ಯವನ್ನು ಪೂರ್ತಿಗೊಳಿಸಿದ್ದು:

"ನನಗೇನೂ ಅನ್ನಿಸೋದಿಲ್ಲ. ಅವರಿಗೂ ಅನ್ನಿಸೋದಿಲ್ಲ. ಹಿಡಿದು ತಳ್ಳಬೇಕಾಗಿತ್ತು. ದುಷ್ಟ ಜನ."

ಕೇಶವ ಪಿಳ್ಳೆ ಏನೂ ಮಾತಾಡಲಿಲ್ಲ.

ಅವರು ಕೇಳಿದರು:

"ಮದುವೆ ವಿಷಯ ಏನಾದರೂ ಮಾತನಾಡಿದನಾ?"

ಅವನು ನಿಜ ಹೇಳಬಹುದಾಗಿತ್ತಲ್ಲವೆ?

"ಇಲ್ಲ."

ಯಜಮಾನಮ್ಮ ಆ ಜನರ ವಿಚಾರವನ್ನು ಮತ್ತೂ ಒಂದು ಸಲ ಆವರ್ತಿಸಿದರು:

"ನೀವು ಆ ಕೂಟದಲ್ಲಿ ಸೇರಬೇಡಿ."

ಒಂದು ಒಳ್ಳೆಯ ಸಂದರ್ಭವನ್ನು ಹಾಳುಮಾಡಿದ ರೀತಿಯಲ್ಲಿ ಅವರು ಹೇಳಿದರು:

"ಇವತ್ತು ಹಿಡಿದು ದಬ್ಬಿದ್ದಿದ್ದರೆ ಇನ್ನೆಂದೂ ಮದುವೆ ವಿಚಾರವಾಗಿ ಬರ್‍ತಿರಲಿಲ್ಲ."

ಪ್ರೈವೇಟ್ ಸೆಕ್ರೆಟರಿ ಅಷ್ಟು ಹೊತ್ತಿಗೆ ಅಲ್ಲಿಗೆ ಬಂದರು. ಅವರು ನಗೆಯೊಂದಿಗೆ ಕೇಳಿದರು:

"ಏನು ಕೇಶವ ಪಿಳ್ಳೆ."

"ಏನೂ ಇಲ್ಲ ಸಾರ್."

ಪ್ರೈವೇಟ್ ಸೆಕ್ರೆಟರಿ ಭಗವತಿ ಕುಟ್ಟಿಯಮ್ಮನ ಕಡೆಗೆ ತಿರುಗಿ ಹೇಳಿದರು:

"ಕೇಶವ ಪಿಳ್ಳೆ ಚೆನ್ನಾಗಿ ಫೈಲು ಸ್ಟಡಿ ಮಾಡಿರ್‍ತಾರೆ ಅಂತ ಚೀಫ್ ಸೆಕ್ರೆಟರಿ ಹೇಳಿದರು. ಆ ಹೈಡ್ರೋ ಎಲೆಕ್ಟ್ರಿಕಲ್ ಪ್ರಾಜೆಕ್ಟಿನಲ್ಲಿ ಆ ತಿರುಮಾಲಿ ಚೀಫ್ ಎಂಜಿನಿಯರ ರಿಪೋರ್ಟ್ ಕಂಡುಹಿಡಿದದ್ದು ಕೇಶವ ಪಿಳ್ಳೆ. ಅದಿಲ್ಲದಿದ್ದರೆ ಲೌವ್ಲಿಂಗ್‌ಗೆ ಆರ್ಡರ್ ಪಾಸು ಮಾಡೋದಕ್ಕೆ ಸಾಧ್ಯವಿರಲಿಲ್ಲ. ಕೇಶವ ಪಿಳ್ಳೆ ಕಾಪಾಡಿದರು."

ಯಜಮಾನಮ್ಮ ಕೇಳಿದರು:

"ಚೀಫ್ ಎಂಜಿನಿಯರಿಗೆ ಏನು ಮಾಡಿದಿರಿ?"

"ಅವನನ್ನು ಒಲಿ ಹಾಕಬೇಕು. ಆ ಕಡೆ ಇಟ್ಟಿದ್ದೀವಿ. ಅವನು ಲೌವ್ಲಿಂಗ್‌ನ ಶತ್ರು. ಉಳಿದವರಿಂದಲೂ ಲಂಚ ತೆಗೆದುಕೊಂಡಿದ್ದಾನೆ."

ಭಗವತಿ ಕುಟ್ಟಿಯಮ್ಮ ಹೇಳುವುದು ಅವನು ತೀವ್ರಗಾಮಿಗಳಲ್ಲೊಬ್ಬ ಎಂದು.

"ಸರಿ. ಕೇಶವ ಪಿಳ್ಳೆ ಸರಿಯಾಗಿ ಕೆಲಸ ಮಾಡ್ತಿದ್ದೀರಿ. ದಿವಾನರ ವರೆಗೆ ನಿಮ್ಮನ್ನು ಕುರಿತು ಒಳ್ಳೆ ಅಭಿಪ್ರಾಯವಿದೆ."

ಪ್ರೈವೇಟ್ ಸೆಕ್ರೆಟರಿ ಹೋಗಿಬರುತ್ತೇನೆ ಎಂದು ಹೇಳಿ ಹೋದರು.

ಯಜಮಾನಮ್ಮನಿಗೆ ಏನೋ ಹೇಳಬೇಕೆನಿಸಿತ್ತು. ಒಂದು ವೇಳೆ ಪ್ರೈವೇಟ್ ಸೆಕ್ರೆಟರಿ ಬಂದ ವಿಷಯವನ್ನು ಯಾರ ಹತ್ತಿರವೂ ಹೇಳಬಾರದು ಎಂದಾಗಿರಬೇಕು.

## [12]

### ಮೊದಲ ರಾತ್ರಿ

ಕರುಮಾಡಿಯಲ್ಲಿ ಬೋಟಿನಿಂದ ಇಳಿದು ಒಬ್ಬ ಕೂಲಿಯವನ ಕೈಯಲ್ಲಿ ಒಂದು ಕಟ್ಟನ್ನು ಹೊರಿಸಿಕೊಂಡು ಕೇಶವ ಪಿಳ್ಳೆ ಊರಿಗೆ ಬಂದದ್ದು. ರಸ್ತೆಯ ಪಕ್ಕದ ಮನೆಗಳ ಸ್ತ್ರೀಯರು ಹೊರಗೆ ಬಂದರು. ವಯಸ್ಸಾದವರು ಕ್ಷೇಮಸಮಾಚಾರ ವಿಚಾರಿಸಿದರು.

"ಈಗ ಬರ್‍ತಿರೋದಾ?"

"ಅದೇನು ಹೊರೆ?" ಮುಂತಾಗಿ.

ವಯಸ್ಸಾದ ಹೆಂಗಸರಿಗೆ ಅವನನ್ನು ಒಂದು ಸಲ ಸರಿಯಾಗಿ ನೋಡಬೇಕು ಅನ್ನಿಸಿತ್ತು. "ಸ್ವಲ್ಪ ನಿಂತುಕೊಳ್ಳೋ, ನೋಡ್ತೀನಿ" ಎಂದು ವಾತ್ಸಲ್ಯದಿಂದ ಹೇಳುತ್ತಿದ್ದರು.

ಕೇಶವ ಪಿಳ್ಳೆಯ ಆಗಮನ ಊರಿಗೇ ಒಂದು ಸುದ್ದಿಯಾಗಿತ್ತು. ಅಲ್ಲಿ ಹುಟ್ಟಿ ಬೆಳೆದು ಉದ್ಯೋಗಸ್ಥನಾದವನು ಬರುತ್ತಿದ್ದಾನೆ ಎನ್ನುವುದು ಮಾತ್ರವಲ್ಲ, ಮದುವೆಯಾದ ಮೇಲೆ ಮೊಟ್ಟಮೊದಲು ಊರಿಗೆ ಕಾಲಿರಿಸುತ್ತಿರುವುದು ಎಂದೂ ಆಗಿತ್ತು. ಕೇಶವ ಪಿಳ್ಳೆ ಬರುತ್ತಿದ್ದ ಸುದ್ದಿಯನ್ನು ನಾಣಿಕುಟ್ಟಿ ಓಡಿಹೋಗಿ ಕಾತ್ಯಾಯಿನಿಗೆ ತಿಳಿಸಿದಳು.

ಕೇಶವ ಪಿಳ್ಳೆ ಬೆಳ್ಳಗೆ ಕೆಂಪಗೆ ಚೆನ್ನಾಗಿ ಆಗಿದ್ದಾನೆ ಎಂದು ಎಲ್ಲರೂ ಹೇಳುವುದು. ಒಬ್ಬ ಉದ್ಯೋಗಸ್ಥನ ತೇಜಸ್ಸಿದೆ. ಅವರವರಿಗೆ ತಿಳಿದ ಹಾಗೆ ಅವರು ಮಾತನಾಡಿಕೊಂಡರು. ಏನಿದ್ದರೂ ಶ್ರೀಪದ್ಮನಾಭನ ಹೆಸರಿನ ಹತ್ತು ನಾಣ್ಯ ಪಡೆಯುವಾಗ ಎಷ್ಟೇ ಕುರೂಪಿಯಾಗಿದ್ದವನಿಗೂ ಒಂದು ತೇಜಸ್ಸು ಬರುತ್ತದೆ—ಮೊದಲೇ ಕೇಶವ ಪಿಳ್ಳೆ ಲಕ್ಷಣವಾಗಿದ್ದ.

ಕುಟ್ಟಿಯಮ್ಮ ಮನೆಬಾಗಿಲಿನಿಂದ ಈಚೆಗೆ ಬಂದು ಕೇಶವ ಪಿಳ್ಳೆಯನ್ನು ಕಂಡು ಆತ್ಮಾನಂದಗೊಂಡಳು. ಕೇಶವ ಪಿಳ್ಳೆ ಮನೆಯ ಹತ್ತಿರ ಹೋದಾಗ ಅಲ್ಲಿ ಕಿಟ್ಟುಮಾವ ಇದ್ದರು. ತಂದೆ, ತಾಯಿ, ಕಿಟ್ಟುಮಾವ, ಅಕ್ಕ ಎಲ್ಲರೂ ಓಡಿ ಮನೆಯ ಹೊರಗೆ ಬಂದರು. ಕುಟ್ಟಿಯಮ್ಮ ಉತ್ಸಾಹದಿಂದ ತನ್ನನ್ನೇ ಮರೆತಳು.

"ನನ್ನ ಮಗ ಬಂದ. ದ್ರೋಹಿಗಳು ಏನೆಲ್ಲ ಮಾತಾಡಿದರು!"

ಪಪ್ಪು ಪಿಳ್ಳೆಗೆ ಸಿಟ್ಟು ಬಂದಿತು.

"ಏನು ಮಾತಾಡಿದ್ದು ಬದನೆಕಾಯಿ! ನಿನ್ನ ನಾಲಗೆ ಸುಮ್ಮನಿರೋದಿಲ್ಲ ಅನ್ನುತ್ತೆ." ಕುಟ್ಟಿಯಮ್ಮ ಸುಮ್ಮನಾಗಲಿಲ್ಲ. "ನಾನೇನು ಹೇಳಿದೆ ಅಂತ? ಇನ್ನು ಶುರುವಾಯ್ತು."

ಕಾತ್ಯಾಯಿನಿ ಬಾಗಿಲಿನ ಮರೆಯಲ್ಲೆಲ್ಲಿಯಾದರೂ ಇರಬಹುದೇ ಎಂದು ಕೇಶವ ಪಿಳ್ಳೆ ನೋಡಿದ. ಅವಳನ್ನು ಎಲ್ಲಿಯೂ ಕಾಣಲಿಲ್ಲ.

ಅವಳು ತನ್ನ ಮನೆಗೆ ಹಿಂದಿರುಗಿರಬಹುದೇ ಎಂದು ಸಂಶಯವುಂಟಾಯಿತು. ಅದನ್ನು ಹೇಗೆ ಕೇಳುವುದು?

ಕುಟ್ಟಿಯಮ್ಮ ಕೇಶವ ಪಿಳ್ಳೆ ತಂದಿದ್ದ ಗಂಟನ್ನು ಬಿಚ್ಚಿ ನೋಡುತ್ತಿದ್ದಳು. ಪಪ್ಪು ಪಿಳ್ಳೆಯ ದೃಷ್ಟಿ ಕೇಶವ ಪಿಳ್ಳೆ ತಂದ ಹೊಗೆಸೊಪ್ಪಿನ ಕಡೆಗೆ. ಕೇಶವ ಪಿಳ್ಳೆ ಬಗೆಬಗೆಯ ಬಟ್ಟೆಗಳನ್ನು ತಂದಿದ್ದ. ತಂದೆಗೆ ಪಂಚೆ, ಕಪ್ಪು ಅಂಚಿದ್ದು. ತಾಯಿಗೆ, ಅಕ್ಕನಿಗೆ ಮುಂಡು ಗಳು. ಕಿಟ್ಟುಮಾವನಿಗೂ ಮಲ್ಲು, ಅದರೊಳಗೆ ಬೇರೆ ಒಂದು ಕಟ್ಟಿತ್ತು. ಅದರಲ್ಲಿ ಮೂರು ಜರಿಯ ಮುಂಡುಗಳು ಮತ್ತು ಮೇಲುವಸ್ತ್ರಗಳು. ನಾಲ್ಕು ಬೆರಳು ಅಗಲದ ಜರಿಯಿದ್ದುವು—ಕೊಟ್ಟಾರನ್ ವಸ್ತ್ರಗಳು. ಅವುಗಳನ್ನು ಯಾರಿಗಾಗಿ ತಂದಿರುವುದು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಲ್ಲ.

ಕುಟ್ಟಿಯಮ್ಮ ಉತ್ಸಾಹದಿಂದ ತನ್ನನ್ನು ತಾನೇ ಮರೆತು ಕರೆದಳು—

"ಕಾತ್ಯಾಯಿನೀ ಬಾರೇ ಇಲ್ಲಿ. ಇಲ್ಲಿ ನೋಡು ಬಾರೇ."

ಪಪ್ಪು ಪಿಳ್ಳೆ ಸಣ್ಣ ಹುಡುಗಿಯ ಹಾಗಾಡುತ್ತಿದ್ದ ಕುಟ್ಟಿಯಮ್ಮನ ಸಡಗರವನ್ನು ಕಂಡು ಹೇಳಿದರು: "ಈ ಹೆಣ್ಣಿಗೇನಾದ್ರೂ ತಲೆಗಿಲೆ ಕೆಟ್ಟುಹೋಯ್ತೋ ಹೇಗೆ?"

ಕಾತ್ಯಾಯಿನಿ ಹೊರಗೆ ಬರಲಿಲ್ಲ. ಪಪ್ಪು ಪಿಳ್ಳೆ ಹೇಳಿದ್ದನ್ನು ಕುಟ್ಟಿಯಮ್ಮ ಗಮನಕ್ಕೆ ತಂದುಕೊಳ್ಳಲಿಲ್ಲ. ಅವಳು ಪುನಃ ಗಟ್ಟಿಯಾಗಿ ಕಾತ್ಯಾಯಿನಿಯನ್ನು ಕರೆ ಯುತ್ತಾ ಹೇಳಿದಳು:

"ಅದು ಅಡಿಗೆಮನೆಯಿಂದ ಹೊರಗೆ ಬರೋದಿಲ್ಲ. ಸ್ನಾನ ಇಲ್ಲ, ಮತ್ತೊಂದಿಲ್ಲ. ತಲೆ ಕೆಟ್ಟವಳ ಹಾಗೆ ಯಾವಾಗ ನೋಡಿದರೂ ಅಡಿಗೆಮನೆ! ಹೆಣ್ಣುಮಕ್ಕಳು ಅಂದರೆ ಹೀಗೂ ಇರ್ತಾರಾ?"

ಕಾತ್ಯಾಯಿನಿ ಆ ರೀತಿಯಿರುವುದಕ್ಕೆ ಕುಟ್ಟಿಯಮ್ಮ ಕಾರಣ ಎಂದು ಪಪ್ಪು ಪಿಳ್ಳೆ ಕುಟ್ಟಿಯಮ್ಮನನ್ನು ಆಕ್ಷೇಪಿಸಿದರು. ಆಗ ಕುಟ್ಟಿಯಮ್ಮ ಕೇಳಿದಳು:

"ನಾನೇನು ಮಾಡಿದೆ? ಸ್ನಾನದ ಕೊಳಕ್ಕೆ ಹೋದರೆ ಈ ಊರಿನ ಹೆಂಗಸರು ಅವಳನ್ನ ಸುಮ್ಮನೆ ಬಿಡೋದಿಲ್ಲ. ಬಾಯಿಗೆ ಬಂದ ಹಾಗೆ ಆಡಿಕೊಳ್ಳೋದಕ್ಕೆ ಶುರು ಮಾಡ್ತಾರೆ. ಜಮೀನಿನಲ್ಲಿ ಎಲ್ಲಿಯಾದರೂ ನಿಂತಿದ್ದರೆ ಎಲ್ಲರೂ ಅವಳ ಹತ್ತಿರಕ್ಕೇ ಓಡಿಬರ್ತಾರೆ. ಅವಳು ಇನ್ನೇನುಮಾಡಬೇಕು? ಅಡಿಗೆಮನೆ ಬಿಟ್ಟು ಬರದ ಹಾಗಾದಳು. ಅದು ನಾನು ಮಾಡಿದ ತಪ್ಪಾ?"

ಕಿಟ್ಟುಮಾವ ಹೇಳಿದರು: "ಅವಳು ಒಳ್ಳೆಯ ಮನೆತನದ ಹೆಣ್ಣು. ಅದು ಮುಖ್ಯ ವಾದ ಸಂಗತಿ."

ಅಡಿಗೆಮನೆಯಲ್ಲಿ ಕಾತ್ಯಾಯಿನಿ ಅವಸರ ಅವಸರವಾಗಿ ಕೆಲಸ ಮಾಡುತ್ತಿದ್ದಳು.

ಕೊಟ್ಟು ನಾಣಿ ಸಹಾಯ ಮಾಡುತ್ತಿದ್ದಳು. ಕಾತ್ಯಾಯಿನಿಯ ಗಂಡ ಬಂದಿರುವ ಸಂದರ್ಭ. ಅವನಿಗೆ ಒಳ್ಳೆಯ ಅಡಿಗೆ ಮಾಡಬೇಕು. ಹೋಟೆಲಿನ ಊಟದ ಕಷ್ಟಗಳನ್ನು ಕುರಿತು ಮಾತನಾಡುವುದನ್ನು ಅವಳು ಕೇಳಿದ್ದಳು. ಎಷ್ಟು ದಿನಗಳು ಹಾಗೆ ಕಳೆಯುವುದು? ಕೇಶವ ಪಿಳ್ಳೆಗೆ ಇಷ್ಟವಾದ ಅಡಿಗೆ ಏನು ಎಂದು ಕುಟ್ಟಿಯಮ್ಮ ಹೇಳುವುದನ್ನು ಕೇಳಿದ್ದಳು. ರುಚಿಯಾದ ಅಡಿಗೆ ಸಿದ್ಧಪಡಿಸುವ ಸಡಗರದಲ್ಲಿದ್ದಳು.

ಆದರೂ ಅವಳಿಗೆ ಆ ಕಟ್ಟಿನೊಳಗೆ ಏನೇನು ಇದೆ ಎಂದು ತಿಳಿಯುವ ಕುತೂಹಲ ವಿತ್ತು. ಅವಳಿಗೋಸ್ಕರ ತಂದಿರುವುದನ್ನು ನೋಡಲು ತುಂಬ ಆಶೆಯೂ ಇತ್ತು. ತಿರುವನಂತಪುರದಿಂದ ತನಗೆ ತಂದಿರುವುದೇನು ಎಂದು ಅವಳಿಗೆ ತಿಳಿಯಬೇಕೆನಿಸುವುದಿಲ್ಲವೆ? ಆ ಆಶೆ ಹೆಚ್ಚಾಗಿದ್ದರೂ ನಾಚಿಕೆಯಿಂದಾಗಿ ಅವಳು ಆ ಬಟ್ಟೆಯ ಗಂಟನ್ನು ನೋಡಲು ಹೋಗಲಿಲ್ಲ. ಕುಟ್ಟಿಯಮ್ಮನೇ ಆ ಬಟ್ಟೆಗಳನ್ನು ಅಡಿಗೆಮನೆಗೆ ತೆಗೆದು ಕೊಂಡು ಹೋದಳು. ನಿಜವಾಗಿಯೂ ಕಾತ್ಯಾಯಿನಿ ತನ್ನ ಕಣ್ಣನ್ನು ತಾನೇ ನಂಬದಾದಳು. ಅಷ್ಟೊಂದು ಒಳ್ಳೆಯ ಬಟ್ಟೆಗಳನ್ನು ಅವಳು ನೋಡೇ ಇರಲಿಲ್ಲ. ನಾಣಿಕುಟ್ಟಿಯೂ ನೋಡುತ್ತ ನಿಂತುಕೊಂಡಳು. ಅಷ್ಟೊಂದು ಒಳ್ಳೆಯ ವಸ್ತ್ರಗಳನ್ನು ಅವಳೂ ನೋಡಿರ ಲಿಲ್ಲ. ಮದುವೆ ಆದ ಮೇಲೆ ಕೇಶವ ಪಿಳ್ಳೆ ಬರುತ್ತಿರುವುದು ಈ ದಿನವೇ ಆದರೂ ಕೊರತೆ ಏನು?

ಕುಟ್ಟಿಯಮ್ಮ ಹೇಳಿದಳು: "ಅಮ್ಮನಿಗೂ ಅಕ್ಕನಿಗೂ ಬೇರೆ ಬಟ್ಟೆ ತಂದಿದ್ದಾನೆ. ಇದು ನಿನಗೆ."

ಆ ಮಾತಿನಲ್ಲಿ ಒಂದು ಪ್ರತ್ಯೇಕವಾದ ಅರ್ಥವಿತ್ತು. ಅಷ್ಟು ದಿನ ಊರಿನವರು ಮಾತಾಡಿದ್ದೂ ಒಂದು ವೇಳೆ ಕಾತ್ಯಾಯಿನಿ ಭಾವಿಸಿದ್ದದ್ದೂ ಎಲ್ಲವೂ ಅಬದ್ಧವೆಂದು ತಿಳಿಯಲಿ ಎಂದು. ಅದಾದ ಮೇಲೆ ನಾಣಿಕುಟ್ಟಿಯ ಹತ್ತಿರ ಬಾಯಿಬಿಟ್ಟು ಹೇಳಿದಳು:

"ಏನೆಲ್ಲ ಮಾತಾಡಿದರಪ್ಪ ಈ ದ್ರೋಹಿಗಳು! ಅವನು ಬರೋದಿಲ್ಲ. ಅವನಿಗೆ ಈ ಹೆಣ್ಣು ಒಪ್ಪಿಗೆಯಿಲ್ಲ. ಅವನಿಗೆ ತಿರುವನಂತಪುರದಲ್ಲಿ ಯಾವಳೋ ಇದ್ದಾಳೆ— ಏನೆಲ್ಲ ಮಾತಾಡಿದರು! ಈಗ ಅವರೆಲ್ಲ ಇದನ್ನ ಒಂದು ಸಲ ನೋಡಲಿ!"

ಆ ಸಮಯದಲ್ಲಿ ಕಿಟ್ಟುಮಾಮ ಅದು ಒಳ್ಳೆಯ ದಿನವೇ ಎಂದು ನೋಡುತ್ತಿದ್ದರು. ಈ ದಿವಸ ಕೇಶವ ಪಿಳ್ಳೆ ಬರುತ್ತಾನೆಂದು ತಿಳಿದಿರಲಿಲ್ಲ. ಎರಡು ದಿನದ ಮಟ್ಟಿಗೆ ಕಷ್ಟ ಪಟ್ಟು ರಜ ತೆಗೆದುಕೊಂಡು ಬಂದಿದ್ದದ್ದು, ಬೇಗ ಓಡಿಹೋಗಬೇಕಾಗಿತ್ತು. ಕಿಟ್ಟುಮಾಮ ಪಂಚಾಂಗ ನೋಡುತ್ತ ಲೆಕ್ಕ ಹಾಕುತ್ತಿದ್ದುದನ್ನು ಕಂಡು ಕೇಶವ ಪಿಳ್ಳೆ ಹೇಳಿದ:

"ನಾನು ಜೋಯಿಸರನ್ನು ಕಂಡು ಒಳ್ಳೆ ದಿನ ನೋಡಿಸಿ ಇಲ್ಲಿಗೆ ಬಂದದ್ದು" ಎಂದು.

ಕಿಟ್ಟುಮಾಮನಿಗೆ ಅತ್ಯಧಿಕ ಸಂತೋಷವಾಯಿತು. "ಹಾಗಾದರೆ ನಿನಗೆ ಜ್ಯೋತಿಷ್ಯ ದಲ್ಲಿ ನಂಬಿಕೆ ಹುಟ್ಟಿತು ಅನ್ನು! ಪರವಾಯಿಲ್ಲ. ಅದು ಒಳ್ಳೆಯದು. ಆದರಿಂದ ಕೆಟ್ಟ ಕಾಲ ಬರುವಾಗ ಬರುತ್ತದೆ ಎಂದು ತಿಳಿದು ಎಚ್ಚರಿಕೆಯಿಂದ ಇರಬಹುದು. ಹಾಗೇ

ಇರಬೇಕಾದದ್ದು. ಏನು ಮಾಡಬೇಕಾದರೂ ದೈವಾನುಗ್ರಹ, ಒಳ್ಳೆಯ ದಿನ ನೋಡಿ ಮಾಡಬೇಕು."

ಕೇಶವ ಪಿಳ್ಳೆ ತಿರುವನಂತಪುರದ ವಿಚಾರ ಹೇಳಿದ. ಅಲ್ಲಿ ಜವಾನನಿಂದ ದಿವಾನನ ವರೆಗೆ ಎಲ್ಲರೂ ಜ್ಯೋತಿಷ್ಯದಲ್ಲಿ ನಂಬಿಕೆಯಿರುವವರು. ಎಲ್ಲರಿಗೂ ಜೋಯಿಸ ರಿದ್ದಾರೆ. ಪ್ರತಿಯೊಂದು ತಿಂಗಳಿನ ಜ್ಯೋತಿಷ್ಯವನ್ನೂ ಮೊದಲೇ ನೋಡಿಸಿರ್ತಾರೆ.

"ಸರ್ಕಾರದ ಕೆಲಸ ಅಲ್ಲವಾ ಮಾವಾ? ಯಾವಾಗ ಮನೆಗೆ ಕಳಿಸುವ ಆರ್ಡರ್ ಬರುತ್ತದೆ ಅನ್ನೋದು ಗೊತ್ತಿರೋದಿಲ್ಲ. ಅದಕ್ಕೇ ಒಳ್ಳೇ ಕಾಲ ಕೆಟ್ಟ ಕಾಲ ಮೊದಲೇ ನೋಡಿಸೋದು." ಕಿಟ್ಟುಮಾವನ ಅಭಿಪ್ರಾಯ ಸರ್ಕಾರದ ನೌಕರರು ಓದಿ ತಿಳಿದವ ರಾದ್ದರಿಂದ ಹಾಗೆ ಮಾಡುವುದು ಎಂದು. ಈಗ ತಿರುವನಂತಪುರದಲ್ಲಿ ಪ್ರಾರಂಭಿಸಿರುವ ಮತ್ತೊಂದು ಕೆಲಸವನ್ನೂ ಕೇಶವ ಪಿಳ್ಳೆ ಹೇಳಿದ:

"ನಾನು ಓದುತ್ತಿದ್ದ ಕಾಲದಲ್ಲಿ ತಿರುವನಂತಪುರದಲ್ಲಿ ಶಬರಿಮಲೆ ಅಷ್ಟೊಂದು ಪ್ರಚಾರದಲ್ಲಿರಲಿಲ್ಲ. ಆಗ ಯಾರೂ ಆ ಮಲೆಗೆ ಹೋಗುತ್ತಿರಲಿಲ್ಲ. ಇವತ್ತು ಸೆಕ್ರೆಟರಿಯೇಟ್‌ನ ಎಷ್ಟೋ ಜನರು ಮಂಡಲಕಾಲದಲ್ಲಿ ಮಾಲೆ ಹಾಕಿ ಗಡ್ಡಬಿಟ್ಟಿರೋ ದನ್ನ ಕಾಣಬಹುದು. ಈ ವರ್ಷ ದಿವಾನರೂ ಹೋಗ್ತಾರೆ. ಆದ್ದರಿಂದ ತಿರುವನಂತಪುರ ವಿಡೀ ಶಬರಿಮಲೆಗೆ ಅಯ್ಯಪ್ಪ ವಿಳಕ್ಕು ನೋಡುವುದಕ್ಕೆ ಹೊರಟಿದೆ."

ಕಿಟ್ಟುಮಾವನಿಗೆ ಅದೊಂದು ದೊಡ್ಡ ಸಂಗತಿಯಾಗಿತ್ತು. ಈ ದಿನ ಮನೆಮನೆಗೆ ಆ ಸಂಗತಿಯನ್ನು ಮುಟ್ಟಿಸುವುದಕ್ಕಿತ್ತು. "ನೌಕರರೆಲ್ಲ ಅಯ್ಯಪ್ಪನ ಭಕ್ತರಾದರು."

ಕೇಶವ ಪಿಳ್ಳೆ ಕೂಡಲೆ ಹೇಳಿದ ಒಂದು ವಿಷಯ ನಿಜ. ಶಬರಿಮಲೆಯ ವಿಷಯ ನಂಬದೇ ಇರೋದಕ್ಕೆ ಸಾಧ್ಯವಿಲ್ಲ.

ಕಿಟ್ಟುಮಾವ ಅದನ್ನು ಒಪ್ಪಿಕೊಂಡರು. ಅಲ್ಲಿಯ ಕೆಲಸ ಅದೇ ರೀತಿ ಅಲ್ಲವಾ?

ಕೇಶವ ಪಿಳ್ಳೆ ಎರಡು ಮೂರು ಮಂದಿ ನೌಕರರ ಅನುಭವವನ್ನು ಹೇಳಿದ. ಪ್ರೊಮೋಶನ್ ಸಿಕ್ಕಿದರೆ ಮಲೆಗೆ ಹೋಗ್ತೀನಿ ಅಂತ ಒಬ್ಬ ಹರಕೆ ಹೇಳಿಕೊಂಡ. ಪ್ರೊಮೋಶನ್ ಸಿಕ್ಕಿತು. ವ್ರತ ಆಚರಿಸಿ ಅವನು ಮಲೆಗೆ ಹೋಗಿ ಬಂದ. ಮತ್ತೊಬ್ಬನಿಗೆ ಡಿಮೋಶನ್ ಆಗಿತ್ತು. ಅವನೂ ಮಲೆಗೆ ಹೋಗಿ ಬಂದ. ಮತ್ತೆ ಅವನಿಗೂ ಪ್ರೊಮೋ ಶನ್ ಸಿಕ್ಕಿತು. ದೂರುಗಳು, ಮೇಲು ಉದ್ಯೋಗಸ್ಥನ ಕೋಪವೆಲ್ಲ ಅಷ್ಟೊಂದು ಪರಿಣಾಮಕಾರಿಯಾಗದೆ ಹೋದ ಕಥೆಗಳಿದ್ದುವು. ಕೇಶವ ಪಿಳ್ಳೆ ಹೇಳಿದ:

"ಸರ್ಕಾರದ ಕೆಲಸವಲ್ಲವಾ ಕಿಟ್ಟುಮಾವಾ? ಖರ್ಚಿಗೆ ಸಾಕಾಗದೆ ಎಲ್ಲರೂ ಕೈ ಒಡ್ಡುತ್ತಾರೆ. ಅದೆಲ್ಲವೂ ಅವರಿಗೂ ಗೊತ್ತು. ತಾನೂ ಹಾಗೇ ಆಗುವಾಗ ಬೇರೆ ಕೆಲವರು ಶಪಿಸುತ್ತಾರೆ. ಅದೊಂದು ಆಗದೇ ಇರಲಿ ಅಂತ, ದೋಷ ಬರದೇ ಇರಲಿ ಅಂತ ಅವರು ಭಗವಂತನಿಗೆ ಶರಣಾಗುವುದು."

ಕಿಟ್ಟುಮಾವ ಹೇಳಿದರು: "ನೀನೂ ಶಬರಿ ಮಲೆಗೆ ಹೋಗಿಬರಬೇಕು."

ಕೇಶವ ಪಿಳ್ಳೆ ಹೇಳಿದ:

"ನಾನೂ ಹೋಗಿ ಬರ್ತೀನಿ. ನನಗೆ ಒಳ್ಳೆ ಪ್ರೊಮೋಶನ್ ಸಿಕ್ಕಿದರೆ ನಾನೂ ಹೋಗಿ ಬರ್ತೀನಿ. ನಾನು ಪ್ರಾರ್ಥಿಸಿಕೊಂಡಿದ್ದೀನಿ."

"ವ್ರತ ಆಚರಿಸಬೇಕು. ವ್ರತದ ದಾರ ಕಟ್ಟೋದು ಎಲ್ಲಿ?".

"ಅದು ತಿರುವನಂತಪುರದಲ್ಲಾಗಿರಬೇಕು. ಯಜಮಾನರೂ ಸೆಕ್ರೆಟರಿಗಳೂ ದಿವಾನರ ಪ್ರೈವೇಟ್ ಸೆಕ್ರೆಟರಿ ಎಲ್ಲರೂ ಬರುತ್ತಾರೆ. ಕೆಲವು ಸಲ ದಿವಾನರೂ ಕಾಣಿಸ್ತಾರೆ."

ಕಿಟ್ಟುಮಾವ ಸ್ತಬ್ಧನಾಗಿ ಬಾಯಿ ತೆರೆದುಕೊಂಡು ಕುಳಿತಿದ್ದರು. "ಹಾಗಾದರೆ ನಿನಗೆ ದಿವಾನರ ಪರಿಚಯವೂ ಇದೆಯಾ?"

ಕೇಶವ ಪಿಳ್ಳೆಯ ಮುಖದ ಮೇಲೆ ಮಂದಹಾಸ ಮೂಡಿತು. ಅದರ ಅರ್ಥ 'ಹೌದು' ಎಂದಾಗಿತ್ತು. ಆಗ ಮನೆಮನೆಗೆ ಮುಟ್ಟಿಸಲು ಕಿಟ್ಟುಮಾವನಿಗೆ ಮತ್ತೂ ಒಂದು ಸುದ್ದಿ ದೊರೆತಂತಾಯಿತು. ಒಂದು ದಿನ ಅಲ್ಲ, ನಾಲ್ಕೈದು ದಿನಗಳ ವರೆಗೆ ಕಿಟ್ಟುಮಾವನಿಗೆ ಹೇಳಿಕೊಂಡು ತಿರುಗಾಡುವಷ್ಟಿದೆ. ಕೇಶವ ಪಿಳ್ಳೆ ತಂದ ಬಟ್ಟೆಗಳನ್ನು ವಿವರಿಸುತ್ತ ಜೊತೆಯಲ್ಲಿ ತನಗೆ ತಂದಿರುವ ಬಟ್ಟೆಯನ್ನೂ ತೋರಿಸಬಹುದು. ಕೇಶವ ಪಿಳ್ಳೆಗೆ ದಿವಾನರ ಪರಿಚಯವಿದೆ—ಅವನು ಶಬರಿಮಲೆಗೆ ದಾರ ಕಟ್ಟಿಸಿಕೊಳ್ಳುವುದು—ಎಲ್ಲವೂ ತಿರುವನಂತಪುರದಲ್ಲಿ. ಹೀಗೆ ಎಷ್ಟೊಂದು ವಿಷಯ ಹೇಳಿಕೊಂಡು ತಿರುಗಾಡುವುದಕ್ಕಿದ್ದದ್ದು !

ಕೇಶವ ಪಿಳ್ಳೆಯ ಕುರಿತು ದಿವಾನರಿಗೆ ಗೊತ್ತಿದೆ ಎಂದು ಹೇಳಿದಾಗ ಕಿಟ್ಟುಮಾವನಿಗೆ ಒಂದು ವಿಷಯ ಹೇಳುವುದಿತ್ತು: "ಅದೆಲ್ಲ ಅವಳ ಭಾಗ್ಯದಿಂದಾದದ್ದು. ಅವಳು ಭಾಗ್ಯವಂತೆ" ಎಂದು.

ಒಳ್ಳೆಯ ಗುಣದ ನಾಣಿಕುಟ್ಟಿ ಉತ್ಸಾಹದಿಂದ ಎಲ್ಲ ವಿಷಯಗಳನ್ನೂ ತಿಳಿದುಕೊಂಡು ಅಡಿಗೆಯ ಮನೆಯ ಕಡೆಗೆ ಓಡಿಬಂದಳು. ಕಿಟ್ಟುಮಾವನೂ ಕೇಶವ ಪಿಳ್ಳೆಯೂ ತುಂಬ ಹೊತ್ತಿನಿಂದ ಮಾತನಾಡುತ್ತಿದ್ದುದನ್ನು ಅವಳು ಮರೆಯಲ್ಲಿ ನಿಂತು ಕೇಳಿಸಿಕೊಂಡಿದ್ದಳು. ಕೆಲವು ವಿಷಯ ಮಾತ್ರ ಅವಳಿಗೆ ಅರ್ಥವಾದದ್ದು. ಇಲ್ಲದಿದ್ದರೆ ಅವುಗಳನ್ನು ಕೇಳಿಸಿಕೊಳ್ಳಬಹುದಾಗಿತ್ತು. ಅವಳು ಓಡಿಹೋಗಿ ಕಾತ್ಯಾಯಿನಿಯ ಹತ್ತಿರ ಹೇಳಿದಳು—

"ಇವತ್ತು ಒಳ್ಳೇ ದಿನ."

ಕಾತ್ಯಾಯಿನಿಗೆ ಅರ್ಥವಾಗಲಿಲ್ಲ.

"ಮಿಂದು ಮಡಿಯುಟ್ಟು ಸ್ವಲ್ಪ ಚೆನ್ನಾಗಿ ಕಾಣಿಸಿಕೊ."

ಕಾತ್ಯಾಯಿನಿ ನಾಚಿಕೆಯಿಂದ ನಾಣಿಕುಟ್ಟಿಗೆ ಒಂದು ಏಟು ಕೊಟ್ಟಳು. ನಾಣಿಕುಟ್ಟಿ ಅವಳ ಕಿವಿಯಲ್ಲಿ ಏನೋ ಪಿಸುಗುಟ್ಟಿದಳು. ಪರಿಚಯವಿದ್ದವಳಲ್ಲವೇ—ಅವಳು ಉಪದೇಶಿಸುತ್ತಿದ್ದಳು.

ಆಗ ಅಡುಗೆಮನೆಯಲ್ಲಿ ಕಾತ್ಯಾಯಿನಿ ಒಗ್ಗರಣೆ ಹಾಕಿದ ಘಾಟು ಅಲ್ಲೆಲ್ಲ ಪರಡಿತು. ಯಾವುದೋ ಒಳ್ಳೆಯ ಪಲ್ಯದ ಪರಿಮಳ !

ಮಧ್ಯಾಹ್ನ ಕಳೆಯಿತು. ಅಮ್ಮ ಪಕ್ಕದ ಮನೆಗೋ ಎಲ್ಲೋ ಹೋಗಿದ್ದಳು. ಗೌರಿಯಮ್ಮ ಸ್ನಾನಕ್ಕೆ ಹೋಗಿದ್ದಳು. ಮಾವ ಬತ್ತಾಯದ ಮೇಲೆ ಮಲಗಿ ನಿದ್ದೆ ಮಾಡುತ್ತಿದ್ದರು. ಆಗಲೂ ಕಾತ್ಯಾಯಿನಿಗೆ ಅಡುಗೆಮನೆಯಿಂದ ಹೊರಗೆ ಬರಲಾಗಲಿಲ್ಲ. ಸಾಯಂಕಾಲದ ಅಡುಗೆಯ ಸಿದ್ಧತೆಯಲ್ಲಿದ್ದಳು. ಕೇಶವ ಪಿಳ್ಳೆ ಶಬ್ದ ಮಾಡದೆ ಬೆಕ್ಕಿನ ಹಾಗೆ ಅಡುಗೆಮನೆಯೊಳಕ್ಕೆ ಹೋದ.

ಅಂದು ಕಾತ್ಯಾಯಿನಿಯನ್ನು ಮಿಂಚಿನ ಹಾಗೆ ಎರಡು ಮೂರು ಸಲ ಓಡಿಯಾಡಿದ್ದನ್ನು ಮಾತ್ರ ಕೇಶವ ಪಿಳ್ಳೆ ಕಂಡಿದ್ದದ್ದು. ಅಷ್ಟೆ.

ಕೇಶವ ಪಿಳ್ಳೆ ಅಡುಗೆಮನೆಗೆ ಬಂದದ್ದು ಅವಳಿಗೆ ತಿಳಿಯಲಿಲ್ಲ. ಅವಳು ಕಾಫಿಬೀಜ ಹುರಿಯುತ್ತಿದ್ದಳು. ಅವಳ ಗಮನವೆಲ್ಲ ಇದ್ದದ್ದು ಒಲೆಯ ಮೇಲಿದ್ದ ಕಾಫಿ ಬೀಜದ ಮೇಲೆ. ಥಟ್ಟನೆ ಅವಳು ಹಿಂದಿರುಗಿ ನೋಡಿದಳು. ಅವನು ಅಲ್ಲಿ ನಿಂತಿದ್ದ. ಸ್ವಲ್ಪ ಹತ್ತಿರದಲ್ಲಿಯೇ.

ಕಾತ್ಯಾಯಿನಿಯ ಸೀರೆ ವಿಪರೀತ ಮಸಿ. ಅರಸಿನ ಕೊಳೆ ಮುಂತಾದುವುಗಳಿಂದ ತುಂಬಿತ್ತು. ರವಕೆಯ ಹಿಂದೆಯೂ. ಕುತ್ತಿಗೆಯೂ ಕೊಳಕಾಗಿ ಎಣ್ಣೆಯ ಮಯವಾಗಿತ್ತು. ಕೆನ್ನೆಗೂ ಮಸಿ ಅಂಟಿಕೊಂಡಿತ್ತು. ತಲೆಗೂದಲಿನಲ್ಲೆಲ್ಲ ಬೂದಿ ಕುಳಿತಿತ್ತು. ಅವಳು ಬೆಂಕಿಯ ಹತ್ತಿರ ಇದ್ದದ್ದರಿಂದ ಇರಬೇಕು. ಬೆವರಿದ್ದಳು.

ಕಾತ್ಯಾಯಿನಿಯ ಕೈ ಕ್ಷೀಣಿಸಿದಂತಾಯಿತು. ಮಗುಚುವ ಕೈ ಆಡಿಸುತ್ತಿದ್ದದ್ದು ನಿಂತುಹೋಯಿತು. ಅವಳು ತಲೆತಗ್ಗಿಸಿದಳು. ಏನು ಹೇಳಬೇಕೆಂದು ಕೇಶವ ಪಿಳ್ಳೆಗೆ ತಿಳಿಯದು. ಏನಾದರೂ ಮಾತನಾಡಬೇಡವೆ?

"ಅದೇನು ಬೆಟ್ಟಿಯಲ್ಲಿ?"

ಅವಳು ಮಾತನಾಡಲಿಲ್ಲ. ಅವಳಿಗೆ ನಗು ಬರುತ್ತಿತ್ತು. ಅವನು ಮತ್ತೆ ಕೇಳಿದ:

"ಅಡಿಗೆಮನೆಯಿಂದ ಎಷ್ಟು ಹೊತ್ತಿಗೆ ಹೊರಗೆ ಬರ್ತೀಯ?"

ಅದಕ್ಕೂ ಉತ್ತರವಿಲ್ಲ.

"ನೀನು ಸ್ನಾನ ಮಾಡೋದೇ ಇಲ್ಲವಾ?"

ಮೌನ !

ಅದೊಂದು ಪಟ್ಟಣದ ಹುಡುಗಿಯಾಗಿತ್ತು ಎಂದಿಟ್ಟುಕೊಳ್ಳೋಣ.

ತಂಗಮ್ಮನೇ ಆಗಿರಬೇಕೆಂದಿಲ್ಲ. ಅಡಿಗೆಮನೆಯೊಳಕ್ಕೆ ಹೋಗಿ ಕಣ್ಣೆದುರಿಗೆ ಕಾತ್ಯಾಯಿನಿಯನ್ನು ಕಂಡಾಗ, ತಲೆಗೂದಲಿನ ತುದಿಯನ್ನು ಗಂಟುಹಾಕಿ ಸೊಂಟದಿಂದ ಕೆಳಕ್ಕೆ ಇಳಿಬಿಟ್ಟ ತಲೆಗೂದಲೂ, ಹಣೆಗೆ ತಿಲಕವಿಟ್ಟು, ಕಪ್ಪಂಚಿನ ಸೀರೆಯನ್ನುಟ್ಟ— ಹೀಗೆ ಇವೆಲ್ಲವುಗಳಿಂದ ಕೂಡಿದ ತಂಗಮ್ಮನ ರೂಪ ಅಂತಃಚಕ್ಷುಗಳೆದುರಿಗೆ ಗೋಚರಿಸು

ವುದಿಲ್ಲವೆ? ಅದೇನೋ—ಅದಿರಲಿ. ತಂಗಮ್ಮ ಅಲ್ಲದೆ ಬೇರೊಬ್ಬಳೇ ಆಗಿದ್ದಿರಲಿ, ಅವಳು ಹೀಗೆ ಅಲ್ಲಿರುತ್ತಿದ್ದಳೆ?

ಯಾರೂ ಇಲ್ಲದ ಹೊತ್ತನ್ನು ನೋಡಿ ಅವನೇತಕ್ಕೆ ಅಡುಗೆಮನೆಗೆ ಹೋದದ್ದು? ಒಂದು ಸಲ ಬರಸೆಳೆದು ಅಪ್ಪಿಕೊಳ್ಳುವುದಕ್ಕಾಗಿಯೇ? ಒಂದು ಮುತ್ತನ್ನು ಪಡೆಯುವುದಕ್ಕಲ್ಲದಿದ್ದರೂ ಕೊಡುವುದಕ್ಕಿರಬಹುದು. ಅಥವಾ ಏನಾದರೂ ರಸಿಕತೆಯ ಮಾತುಗಳನ್ನಾಡುವುದಕ್ಕಿರಬಹುದು. ಹೇಗೆ ಅವಳನ್ನು ಬರಸೆಳೆದು ಅಪ್ಪಿಕೊಂಡಾನು? ಮಸಿ, ಕೊಳೆ, ಎಣ್ಣೆ, ಬೆವರು—ಇವೆಲ್ಲವುಗಳಿಂದ ತುಂಬಿದ್ದ ಅವಳನ್ನು ಚುಂಬಿಸಿದ ಎಂದಾದಲ್ಲಿ ಅವನ ಮುಖಕ್ಕೂ ಮಸಿ ಅಂಟಿಕೊಳ್ಳುತ್ತದೆ. ಆ ಮೇಲೆ ಒಂದು ಬಿಲ್ಲೆ ಸೋಪು ಉಜ್ಜಿ ಸ್ನಾನ ಮಾಡಬೇಕು.

ಅಂತಹ ಒಂದು ದಿನದಲ್ಲಿ ಒಬ್ಬಳು ಹೆಣ್ಣು ಇರಬೇಕಾದದ್ದು ಹೀಗೇನು? ತನ್ನ ಗಂಡ ಮೊದಲ ಚುಂಬನವನ್ನು ಕೊಡುವುದಕ್ಕೆ ಯಾವಾಗ ಬರುತ್ತಾನೆಂದು ಕಾಯುತ್ತಿರಬಾರದಾಗಿತ್ತೆ? ಒಳ್ಳೆಯ ಸೀರೆ, ರವಕೆ ಉಟ್ಟು ತೊಟ್ಟು ಸಿಲ್ಲಬಾರದೆ? ಹಣೆಗೆ ತಿಲಕ ಇಟ್ಟುಕೊಳ್ಳಬಾರದಾಗಿತ್ತೆ?

ಅವನ ಉತ್ಸಾಹವೆಲ್ಲಾ ಥಟ್ಟನೆ ತಣ್ಣಗಾಯಿತು. ಮನಸ್ಸು ಹಿಮ್ಮೆಟ್ಟಿ ಮುದುರಿಕೊಂಡಿತು. ಆ ರೂಪು ಅಂತಹದ್ದಾಗಿತ್ತು. ಅದಲ್ಲವೇ ಅವಳ ಹತ್ತಿರಕ್ಕೆ ಹೋಗದಂತೆ ಅಡಿಗೆಮನೆಯ ಮಧ್ಯದಲ್ಲೇ ಅವನನ್ನು ನಿಂತುಕೊಳ್ಳುವಂತೆ ಮಾಡಿದ್ದು? ಗಂಡನಿಗೆ ಒಳ್ಳೆಯ ಅಡುಗೆ ತಯಾರಿಸಿಕೊಡುವುದು ಮಾತ್ರ ಹೆಂಡತಿಯ ಕೆಲಸ ಎಂದು ಆ ಹಳ್ಳಿಯ ಹೆಣ್ಣಿನ ತಿಳುವಳಿಕೆ. ಅಂದಿನಿಂದಾಚೆಗೆ ಏನಾದರೂ ಇದ್ದಲ್ಲಿ ಅದನ್ನು ಈ ಹಾಡಿನ ಹಗಲಿನಲ್ಲಿ ಚಿಂತಿಸಿರುವುದಿಲ್ಲ. ಸದ್ದು ಮಾಡದೆ ಅಡುಗೆಮನೆಗೆ ಬರುತ್ತಾನೆಂದು ಅವಳು ಭಾವಿಸಿರಲಿಲ್ಲ.

ಗಂಡನಿಗೆ ಇಷ್ಟವಿಲ್ಲದ ಮದುವೆ ಎಂದು ಅಕ್ಕಪಕ್ಕದವರು ಮಾತನಾಡುವುದನ್ನು ಅವಳು ಕೇಳಿದ್ದಳು. ಅಂತಹ ಗಂಡನ ಮನಸ್ಸನ್ನು ಒಲಿಸಿಕೊಳ್ಳುವ ಮನಸ್ಸು ಎಂತಹ ಹೆಣ್ಣಿಗೂ ಉಂಟಾಗುವುದಿಲ್ಲವೆ? ಓರೆಗಣ್ಣಿನಿಂದ ನೋಡುವುದೇನೂ ಬೇಡ. ಅದು ಸ್ವಲ್ಪ ಹೆಚ್ಚಾಯಿತು ಅಂತಲೇ ಇಟ್ಟುಕೊಳ್ಳೋಣ. ಕಣ್ಣಿನಲ್ಲೇ ಮಾತನಾಡಿಸುವುದಿರಲಿ, ಸ್ವಲ್ಪ ಅಲಂಕಾರ ಮಾಡಿಕೊಂಡಾದರೂ ಇರಬಾರದೆ?

ಒಂದು ರೀತಿಯಲ್ಲಿ ಸಿಟ್ಟಿನಿಂದ ಕೇಶವ ಪಿಳ್ಳೆ ನಿಂತಿದ್ದ ಹಾಗಿತ್ತು. ಆ ಪ್ರಶ್ನೆಯೂ ಹಾಗೆಯೇ ಇತ್ತು. ಇಂಥ ಅನಾಗರಿಕ ಜೀವಿಯೊಡನೆ ಇಡೀ ಬಾಳನ್ನು ಸವೆಸಬೇಕಲ್ಲವೆ? ಖಂಡಿತವಾಗಿಯೂ ಒಂದು ರೀತಿಯ ಬೇಸರವನ್ನುಂಟುಮಾಡುವಂಥಾದ್ದೇ. ಅವನು ಹಾಗೆ ಆಗಾಗ ಬರುತ್ತಿರಲಿಲ್ಲ ಎನ್ನುವುದಿದ್ದರೂ ಅದರಲ್ಲಿ ಆಶ್ಚರ್ಯಪಡುವಂಥಾದ್ದೇನೂ ಇಲ್ಲ.

ಅದೇ ಹೊತ್ತಿನಲ್ಲಿ ನಾಣಕುಟ್ಟಿ ಕುಟ್ಟಿಯಮ್ಮನ ಹತ್ತಿರ ಒಂದು ಗಹನವಾಗಿ

ಏನನ್ನೋ ಹೇಳುತ್ತಿದ್ದಳು. ಕೇಶವ ಪಿಳ್ಳೆ ಅಡುಗೆಮನೆಯಲ್ಲಿರುವುದನ್ನು ತಿಳಿಯದೆ ಕುಟ್ಟಿಯಮ್ಮ ಅಲ್ಲಿಗೆ ಬಂದಳು. ಕೇಶವ ಪಿಳ್ಳೆ ಅಡುಗೆಮನೆಯಿಂದ ಹೊರಗೆ ಬಂದ. ಕುಟ್ಟಿಯಮ್ಮ ಕಾತ್ಯಾಯಿನಿಯನ್ನು ಬಯ್ಯುತ್ತಿದ್ದಳು.

"ಹೀಗೂ ಉಂಟಾ? ಏನೊಂದೂ ತಿಳುವಳಿಕೆ ಇಲ್ಲದ ಹೆಣ್ಣು. ನಾನು ಅವಳ ಹತ್ತಿರ ಬೆಳಗಿನಿಂದಲೂ ಹೇಳ್ತಿದ್ದೀನಿ. ಹೋಗು, ಸ್ನಾನ ಮಾಡಿಕೊಂಡು ಬಾ ಅಂತ. ಅವಳು ಪಲ್ಯ, ಹುಳಿ ಮಾಡಿಕೊಂಡು ಕೂತಿದ್ದಾಳೆ."

ಕುಟ್ಟಿಯಮ್ಮ ಅಡುಗೆಮನೆಗೆ ಬಂದು ಗಲಾಟೆ ಮಾಡಿದಳು. ಕೇಶವ ಪಿಳ್ಳೆ ಹೋದದ್ದನ್ನು ಕಾತ್ಯಾಯಿನಿ ನೋಡಲಿಲ್ಲ. ಭಾಂಡಲಿಯಲ್ಲಿ ಮಗುಚುವ ಕೈ ಇಟ್ಟು ಕೊಂಡು ಮಂಡಿಯ ಮೇಲೆ ಮುಖವನ್ನಿರಿಸಿಕೊಂಡು ಅವಳು ಅದೇ ಸ್ಥಿತಿಯಲ್ಲಿ ಕುಳಿತಿದ್ದಳು. ಕುಟ್ಟಿಯಮ್ಮ ಕೇಳಿದಳು:

"ಇದ್ಯಾಕೆ ಹೀಗೆ ಕೂತಿದ್ದೀಯೆ?"

ಕಾತ್ಯಾಯಿನಿ ತಲೆ ಎತ್ತಿದಳು. ಕಾಫಿ ಬೀಜಗಳು ಸೀದು ಕರಕಾಗಿದ್ದುವು!

"ಅಯ್ಯೋ! ಕಾಫಿಬೀಜ ಹಾಳಾದುವಲ್ಲ. ನಿನಗೇನಾಯ್ತೋ?"

ಅವಳು ಮೌನವಾಗಿದ್ದಳು. ನಡೆದದ್ದನ್ನು ಹೇಳಲು ಸಾಧ್ಯವೆ? ಅವಳು ತಪ್ಪು ಮಾಡದೇ ಇದ್ದರೂ ನಡೆದದ್ದನ್ನು ಹೇಳಲಾಗುತ್ತಿಲ್ಲ.

"ನಿನ್ನ ತಲೆ ಎಲ್ಲಿಹೋಗಿತ್ತೇ?"

ಕುಟ್ಟಿಯಮ್ಮ ದೃಷ್ಟಿಸಿ ನೋಡಿದಳು. ತಲೆ ಸರಿ ಇಲ್ಲದೆ ಆದದ್ದಲ್ಲ. ಮುಖದಲ್ಲಿದ್ದ ನಗು ಮರೆಯಾಗಿರಲಿಲ್ಲ.

ಕುಟ್ಟಿಯಮ್ಮ ಏನನ್ನೋ ಊಹಿಸಿಕೊಂಡಳು. "ನನ್ನ ಮಗಳೇ—ಹೋಗಿ ಸ್ನಾನ ಮಾಡೇ. ಇಂಜದ ನಾರು * ಎಡಕೊಂಡು ಹೋಗು. ತಲೆ ತೀರ ಕೊಳೆಯಾಗಿದೆ. ಇಂಜದ ರಸ ಹಾಕಿ ಉಜ್ಜಿ ಮಿಂದು ಬಾ ಮಗಳೇ."

ಅಷ್ಟು ಹೊತ್ತಿಗೆ ನಾಣಿಕುಟ್ಟಿಯು ಅಲ್ಲಿಗೆ ಬಂದಳು. ದನಿಯನ್ನು ತಗ್ಗಿಸಿ ಕುಟ್ಟಿಯಮ್ಮ ಹೇಳಿದಳು:

"ಅವನಿಗೆ ಕೊಳಕು ವಾಸನೆ ಹೊಡೆಯೋದಿಲ್ವಾ ಮಗಳೇ?"

"ಯಾಕೆ ಹಾಗೆ ನಿಂತಿದ್ದೀಯೆ ಬಾರೇ" ಎಂದಳು ನಾಣಿಕುಟ್ಟಿ.

ಕುಟ್ಟಿಯಮ್ಮ ಕಾತ್ಯಾಯಿನಿಗೆ ಇಂಜದ ನಾರನ್ನು ಎಡೆದು ಕೊಟ್ಟಳು. ತಾಳಿ ನಾರನ್ನೂ ಜಜ್ಜಿಕೊಟ್ಟಳು. ತಾನೇ ಹೋಗಿ ಅವಳಿಗೆ ಸ್ನಾನ ಮಾಡಿಸಿದರೆ ಒಳ್ಳೆಯದು ಎನ್ನುವ ದರೆಗೆ ಆಲೋಚಿಸಿದ್ದಳು. ಆದರೆ ನಾಣಿಕುಟ್ಟಿ ಅವಳನ್ನು ಮಿಂಯಿಸಿಕೊಂಡು ಬರುವ ಕೆಲಸ ವಹಿಸಿಕೊಂಡಳು.

---

* ಸ್ನಾನ ಮಾಡುವಾಗ ಸಾಬೂನಿನ ಬದಲಿಗೆ ಉಪಯೋಗಿಸುವುದು.

ಆ ಸಂಜೆ ಪಡುಭಾಗದ ಗದ್ದೆ ಬಯಲಿನಲ್ಲಿ ಕೇಶವ ಪಿಳ್ಳೆ ತಿರುಗಾಡಿದ. ಅದು ಕುಟುಂಬಕ್ಕೆ ಸೇರಿದ ದೇವಸ್ಥಾನದ ಜಾಗ. ಅಲ್ಲೊಂದು ದೊಡ್ಡ ಸಿಹಿ ಮಾವಿನ ಮರ ಇದೆ. ಭಗ್ನವಾಗಿದ್ದ ಗಂಧರ್ವದೇವಾಲಯದ ಮುಂಭಾಗದಲ್ಲಿದ್ದ ಒಂದು ಮರ. ಅದರಲ್ಲಿ ಹಬ್ಬಿ ಚಿಗುರಿರುವ ಮಲ್ಲಿಗೆಯ ಬಳ್ಳಿ ಇತ್ತು. ಚಿಕ್ಕ ವಯಸ್ಸಿನಲ್ಲಿ ಕೇಶವ ಪಿಳ್ಳೆ ಬುಟ್ಟಿಯ ತುಂಬಾ ಮಲ್ಲಿಗೆಯ ಹೂವುಗಳನ್ನು ಅದರಿಂದ ಬಿಡಿಸಿದ್ದುಂಟು. ಈಗ ಸಮೃದ್ಧವಾಗಿ ಆ ಬಳ್ಳಿ ಹೂಬಿಡುತ್ತಿದೆ. ಈಗ ಒಬ್ಬರೂ ಆ ಮಲ್ಲಿಗೆಯ ಬಳ್ಳಿಯಿಂದ ಒಂದೇ ಒಂದು ಮಲ್ಲಿಗೆಯ ಮೊಗ್ಗನ್ನು ಬಿಡಿಸಿಕೊಂಡು ಹೋಗುತ್ತಿಲ್ಲ. ಪ್ರತಿದಿನವೂ ಆ ಮರದ ಕೊಂಬೆಯನ್ನಾಶ್ರಯಿಸಿ ಚೆನ್ನಾಗಿ ಹಬ್ಬಿದ ಮಲ್ಲಿಗೆ ಬಳ್ಳಿಯಿಂದ ಹೂವುಗಳು ಉದುರುವುದುಂಟು. ಬಾಡಿ ಒಣಗಿದ, ಬಿದ್ದಿರುವ ಮಲ್ಲಿಗೆ ಹೂಗಳನ್ನು ಕಾಣಬಹುದಾಗಿತ್ತು. ಅಯ್ಯೋ! ಈ ಮೊಗ್ಗು ಬಿಡಿಸಿ ಹಾರ ಕಟ್ಟಿ ಮುಡಿದುಕೊಳ್ಳುವ ಒಂದು ಹೆಣ್ಣು ಈ ಊರಿನಲ್ಲಿಲ್ಲವೇ !

ಆ ಕಡೆ ಮನೆಯಲ್ಲಿ ಕುಟ್ಟಿಯಮ್ಮ ಸೊಸೆಯ ಹತ್ತಿರ ಗೊಣಗಾಡುತ್ತಿದ್ದಳು. ಸ್ನಾನ ಮಾಡಿ ಬಂದ ಸೊಸೆಯ ತಲೆಯನ್ನು ಅತ್ತೆ ಬಾಚಿ ಕಟ್ಟಿದಳು. ಕೊಳೆ ಎಣ್ಣೆ ಪೂರ್ತಿ ಹೋಗಿಲ್ಲವೆಂದು ಕುಟ್ಟಿಯಮ್ಮನ ಗೊಣಗಾಟ. ಕತ್ತಿನ ಹಿಂಭಾಗದಲ್ಲಿ ಕೊಳೆ ಇನ್ನೂ ಇದೆ. ಅವಳು ಸರಿಯಾಗಿ ಮೈ ಉಜ್ಜಿ ಸ್ನಾನ ಮಾಡಿಲ್ಲ.

"ನಾನೇನು ಮಾಡಲಿ ದೇವರೇ, ಈ ಹೆಣ್ಣು ಹೀಗಾಗಿಹೋದಳಲ್ಲಾ" ಎಂದು ಅವಳು ಪರಿತಪಿಸಿದಳು.

ಅಂದು ಕೇಶವ ಪಿಳ್ಳೆ ತಂದಿದ್ದ ಒಂದು ಸೀರೆಯನ್ನು ಅವಳಿಗೆ ಉಡಿಸಿದಳು. ಒಳ್ಳೆಯ ರವಕೆ ತೊಡಿಸಿದಳು. ಕೇಶವ ಪಿಳ್ಳೆ ಪಡುಭಾಗದ ಜಿತ್ತಿಲಿನಲ್ಲಿ ಒಬ್ಬನೇ ನಿಂತಿದ್ದುದನ್ನು ಕುಟ್ಟಿಯಮ್ಮ ಕಂಡಳು. ಅವನ ಹತ್ತಿರ ಹೋಗುವಂತೆ ಹೇಳಲು ಅಮ್ಮನಿಗೆ ಸಾಧ್ಯವೆ? ಅವಳಾಗಿಯೇ ಆ ಕಡೆ ಹೋಗಬೇಕಲ್ಲವೆ? ಹಾಗಲ್ಲವೇ ಗಂಡನ ಮನಸ್ಸನ್ನು ಒಲಿಸಿಕೊಳ್ಳಬೇಕಾದದ್ದು? ಪಕ್ಕದ ಮನೆಯ ದೇವಕಿಯಿಂದ ಕುಟ್ಟಿಯಮ್ಮ ಹೇಳಿಸಿ ನೋಡಿದಳು. ದೇವಕಿ ಅದನ್ನು ಹೇಳಿದಾಗ ಕಾತ್ಯಾಯಿನಿ ಬಯ್ದು ರೇಗಿ ಕಳಿಸಿದಳು. ಅಂತೂ ಆ ದಿನ ರಾತ್ರಿ ಕುಟ್ಟಿಯಮ್ಮ ಅವಳನ್ನು ಅಡಿಗೆಮನೆಗೆ ಕಳಿಸಲಿಲ್ಲ. ಗೌರಿಯಮ್ಮನೇ ಆ ಕೆಲಸ ವಹಿಸಿಕೊಂಡದ್ದು.

* * * * *

ಬಡಗು ಭಾಗದ ಕಿರುಕೋಣೆಯಲ್ಲಿ ಕೇಶವ ಪಿಳ್ಳೆ ಊರಿನಲ್ಲಿದ್ದಾಗ ಮಲಗುತ್ತಿದ್ದದ್ದು. ಸಾಯಂಕಾಲದ ಊಟ ಮುಗಿದ ಮೇಲೆ ಅದೇ ರೂಮಿಗೆ ಮಲಗುವುದಕ್ಕೆ ಹೋದ. ಬಾಗಿಲು ಅರ್ಧ ಮುಚ್ಚಿತ್ತು. ಬಾಗಿಲು ತೆರೆದು ಕೇಶವ ಪಿಳ್ಳೆ ಒಳಗೆ ಹೋದ. ಮನೆಯಲ್ಲಿದ್ದ ದೊಡ್ಡ ದೀಪದ ಕಂಬದ ತುಂಬ ಎಣ್ಣೆ ಹುಯ್ದು ಹಚ್ಚಿಟ್ಟಿದ್ದರು.

ಆ ಹಳೆಯ ಮಂಚದ ಮೇಲೆ ಹೊಸ ಹಾಸಿಗೆಯನ್ನು ಹಾಸಿ ಹೊಸ ತಲೆದಿಂಬನ್ನು ಇಡಲಾಗಿತ್ತು. ಅದರ ಮೇಲೆ ಬಿಳಿಯ ಬಟ್ಟೆ ಹಾಸಿತ್ತು.

ಕೆಳಗೆ ನೆಲದ ಮೇಲೆ ಒಂದು ಹಳೆಯ ಚಾಪೆಯನ್ನು ಹಾಸಿ ಬಟ್ಟೆ ಹರಿದು ಹತ್ತಿ ಹೊರಗೆ ಬಂದಿದ್ದ ಎಣ್ಣೆ ಹಿಡಿದಿದ್ದ ತಲೆದಿಂಬನ್ನು ಇಟ್ಟಿತ್ತು. ನೋಡಿದ ತಕ್ಷಣ ಅಲ್ಲಿ ಯಾರೂ ಕಾಣಿಸಲಿಲ್ಲ. ಅದು ಅವಳು ಮಲಗುವ ಸ್ಥಳ. ಹಾಗೆ ಅಣಿಗೊಳಿಸಿಟ್ಟದ್ದು. ಮೇಲೆ ಜೇಡನ ಬಲೆಯಿರಲಿಲ್ಲವೆಂದು ಹೇಳುವಂತಿಲ್ಲ. ಆ ರೂಮಿನಲ್ಲಿ ಸುಗಂಧ ದ್ರವ್ಯಗಳ ಸುವಾಸನೆಯಿಲ್ಲ. ಹಾಸಿಗೆಯ ಮೇಲೆ ಹೂ ಹರಡಿಲ್ಲ. ಹೆಚ್ಚೆಂದರೆ ಒಂದು ಗಿಂಡಿ ಮಾತ್ರ ಇತ್ತು. ಮೂಲೆಯಲ್ಲಿ ಗೋಡೆಯನ್ನು ನೋಡುತ್ತ ಕಾತ್ಯಾಯಿನಿ ನಿಂತಿದ್ದಳು. ಅವನು ಬಾಗಿಲು ಮುಚ್ಚಿ ಚಿಲಕ ಹಾಕಿದ. ಅನಂತರ ಆ ಮಂಚದ ಮೇಲೆ ಕುಳಿತುಕೊಂಡು ಮೆಲ್ಲನೆ ಅವಳನ್ನು 'ಇಲ್ಲಿ ಬಾ' ಎಂದು ಕರೆದ.

ಅವಳು ಅಲುಗಾಡಲಿಲ್ಲ.

"ಇಲ್ಲಿ ಬಾ ಅಂತೀನಿ?"

ಆದರೂ ಅವಳು ಅಲುಗಾಡಲಿಲ್ಲ.

ಕೇಶವ ಪಿಳ್ಳೆ ಮೇಲೆದ್ದು ಅವಳ ಹತ್ತಿರ ಹೋಗಿ ಅವಳ ಕೈಹಿಡಿದುಕೊಳ್ಳಲು ಕೈನೀಡಿದ. ಆದರೆ ಹಿಡಿದುಕೊಳ್ಳಲಿಲ್ಲ. ತನಗರಿಯದಂತೆಯೇ ಅವನು ಕೈಯನ್ನು ಹಿಂದಕ್ಕೆ ತೆಗೆದುಕೊಂಡ. ಬಹುಶಃ ಮೊದಲು ಉಂಟಾಗಿದ್ದ ಬೇಸರದಿಂದಾಗಿರಬಹುದು.

ಆ ಮೇಲೆ ಅವಳ ಕೈಹಿಡಿದುಕೊಂಡು ಬಂದು ಅವನು ಮಂಚದ ಮೇಲೆ ಕುಳ್ಳಿರಿಸಿದ. ಅವಳು ನಿಷ್ಕಳಂಕದಿಂದ ಸಣ್ಣ ಮಕ್ಕಳ ಹಾಗೆ ಕುಲುಕುಲು ನಗುತ್ತಿದ್ದಳು.

ಅವಳ ಕತ್ತಿನ ಸುತ್ತ ತನ್ನ ತೋಳನ್ನು ಬಳಸಲು ಒಂದು ಕ್ಷಣ ಹಿಂದೆಗೆದ ಕೇಶವ ಪಿಳ್ಳೆ ಕೇಳಿದ:

"ನೀನು ಯಾಕೆ ಸ್ನಾನ ಮಾಡೋದಿಲ್ಲ?"

ಅದಕ್ಕೂ ಅವಳು ನಕ್ಕಳು.

ತಿರುವನಂತಪುರದಿಂದ ಬಂದಾಗ ಒಂದು ಸಾವಿರ ಪ್ರಶ್ನೆಗಳನ್ನು ಅವಳು ಕೇಳಬಹುದೆಂದು ಅವನು ಭಯಪಟ್ಟಿದ್ದ. ಅವಳಿಗೆ ಕೇಳಲು ಹಕ್ಕಿರುವ ಪ್ರಶ್ನೆಗಳು—ಅವನು ಉತ್ತರ ಹೇಳಿಯೇ ತೀರಬೇಕು ಎನ್ನುವಂತಹ ಪ್ರಶ್ನೆಗಳು.

ಆ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಕಂಡುಹಿಡಿದು ಅವನು ಸಿದ್ಧನಾಗಿದ್ದ.

"ತಿರುವನಂತಪುರದಲ್ಲಿ ಅವನಿಗೊಬ್ಬಳು ಸುಂದರಿಯಿದ್ದಾಳೆಯೇ?" ಎಂದು ಅವಳು ಕೇಳಬಹುದಾದ ಪ್ರಶ್ನೆ !

"ಯಾಕೆ ಬರದೇ ಇದ್ದದ್ದು? ಅವಳನ್ನು ಪ್ರೀತಿಸಿದ್ದೀರಾ?" ಇಂತಹ ಎಷ್ಟೊಂದು ಪ್ರಶ್ನೆಗಳು. ಒಂದು ಪ್ರಶ್ನೆಯನ್ನೂ ಅವಳು ಕೇಳಲಿಲ್ಲ. ಇನ್ನು ಮೇಲೆ ಅವಳು ಕೇಳುತ್ತಾಳೆ ಎನ್ನುವ ಲಕ್ಷಣವೂ ಕಾಣಿಸಲಿಲ್ಲ.

ಮಾರನೆಯ ದಿನ ಬೆಳಗ್ಗೆ ಅವಳೇ ಅವನಿಗೆ ಕಾಫಿ ತಂದುಕೊಟ್ಟದ್ದು. ಮಧ್ಯಾಹ್ನ ಊಟಕ್ಕೆ ಬಡಿಸಿದ್ದೂ ಅವಳೇ. ಅವನು ಊಟ ಮಾಡಿ ಎದ್ದ ಮೇಲೆ ಆ ತಟ್ಟೆಯಲ್ಲೇ ಅವಳು ಊಟಕ್ಕೆ ಬಡಿಸಿಕೊಂಡದ್ದು.

"ಯಾಕೆ ಈ ಎಂಜಲು ತಟ್ಟೆಯಲ್ಲಿ ಊಟ ಮಾಡ್ತೀ? ಆ ತಟ್ಟೆ ತೊಳೆದು ಊಟ ಮಾಡಬಾರದಾ?"

ಅದಕ್ಕೆ ಅವಳು ಹೇಳಿದಳು:

"ಅಮ್ಮ, ಅಪ್ಪ ಊಟ ಮಾಡೋ ತಟ್ಟೆಯಲ್ಲೇ ಊಟ ಮಾಡೋದು."

ಕುಟ್ಟಿಯಮ್ಮನಿಗೆ ಸಂತೋಷವಾಯಿತು. ಅವಳು ಗಂಡನ ಹತ್ತಿರ ಹೇಳಿದಳು:

"ಅವರು ಒಬ್ಬರಿಗೊಬ್ಬರು ಪ್ರೀತಿಯಿಂದಿದ್ದಾರೆ."

ಪಪ್ಪು ಪಿಳ್ಳೆಗೂ ವಿಶ್ವಾಸ ಮೂಡಿತು. ಅಕ್ಕಪಕ್ಕದ ಮನೆಗಳಲ್ಲೆಲ್ಲ ನಾಣಿಕುಟ್ಟಿ ಆ ಸುದ್ದಿಯನ್ನು ಹರಡಿದಳು. ಅವರು ಪರಸ್ಪರ ಮಾತನಾಡಿಕೊಂಡರು.

ಆ ದಿನ ಸಾಯಂಕಾಲ ಅವನು ಪಡುಭಾಗದ ಜಮೀನಿನ ಕಡೆಗೆ ಅವಳನ್ನೂ ಕರೆದುಕೊಂಡು ಹೋದ. ಅವಳಿಗೆ ಕೈತುಂಬ ಕೆಲಸವಿತ್ತು. ಆದರೂ ಅವಳು ಹೋದಳು.

ಕೆಲವು ಮಂದಿ ಅಕ್ಕಪಕ್ಕದವರೂ ಅದನ್ನು ನೋಡಿದರು. ಅವನು ಕೇಳಿದ:

"ನೀನ್ಯಾಕೆ ಹೀಗೆ ಸ್ನಾನ ಮಾಡದೇ ಇರ್‍ತೀ?"

ಅವಳು ನಿರ್ದುಷ್ಟವಾದ ಉತ್ತರವನ್ನು ಕೊಟ್ಟಳು:

"ಸುಮ್ಮನೆ ಯಾಕೆ ಸ್ನಾನ ಮಾಡಬೇಕು?"

ಅವನು ಒಂದು ಓಡಿ ಮಲ್ಲಿಗೆ ಹೂ ಬಿಡಿಸಿ ಒಂದು ಹಾರ ಕಟ್ಟಿಕೊಡುತ್ತ ಹೇಳಿದ "ನೀನು ಇದನ್ನ ಮುಡಿದುಕೋ."

"ಓ! ಇದೆಲ್ಲ ಯಾಕೆ?"

ಅವನು ಅದಕ್ಕೆ ಏನು ಹೇಳಬೇಕು?

ಆ ಪ್ರೀತಿಯಿದ್ದ ನಾಣಿಕುಟ್ಟಿ ಹಿಂದಿನ ರಾತ್ರಿ ನಡೆದದ್ದನ್ನೆಲ್ಲ ಪರೋಕ್ಷವಾಗಿ ಪ್ರಶ್ನೆ ಹಾಕಿದಳು.

ಕುತೂಹಲದಿಂದ ಮಾತ್ರವಲ್ಲ, ಕೇಶವ ಪಿಳ್ಳೆಗೆ ಕಾತ್ಯಾಯಿನಿ ಇಷ್ಟವಾದಳೇ ಎಂದು ತಿಳಿಯಲು. ಕಾತ್ಯಾಯಿನಿ ಅವಳ ಕಾಟ ತಡೆಯಲಾರದೆ ಸ್ವಲ್ಪ ಸಿಟ್ಟಿನಿಂದ ಹೇಳಿದಳು:

"ನೀನು ಅದನ್ನೆಲ್ಲ ನನ್ನ ಹತ್ರ ಹೇಳಿದ್ದೆಯಾ?"

"ನೀನು ಆಗ ಕೇಳಲಿಲ್ಲ. ಆ ಮೇಲೆ ನಾನೇ ಹೇಳಿದೆನಲ್ಲ!"

"ಆದರೆ ನನಗೆ ಈಗ ಹೇಳೋದಕ್ಕೆ ಇಷ್ಟವಿಲ್ಲ."

"ಕೇಳೋಣ, ಹೇಳೆ ಕಾತ್ಯಾಯಿನೀ."

ಹಾಗಾದರೆ ನಿನಗೆ ಹೇಗಾಯ್ತೋ ನನಗೂ ಹಾಗೇ ಆಯ್ತು." ಕಾತ್ಯಾಯಿನಿ ನಾಚಿಕೆಯಿಂದ ನಕ್ಕಳು.

ಆ ದಿನ ರಾತ್ರಿಯಲ್ಲೂ ಹಿಂದಿನ ರಾತ್ರಿಯಂತೆಯೇ ಅವಳು ಪ್ರಶ್ನೆಗಳನ್ನು ಕೇಳಲಿಲ್ಲ. ಕೇಶವ ಪಿಳ್ಳೆ ಇನ್ನು ಒಮ್ಮೆಯೂ ಆ ಪ್ರಶ್ನೆಗಳನ್ನು ಅವಳು ಕೇಳುವುದಿಲ್ಲ ಎಂದುಕೊಂಡ. ಅಂದು ಅವಳು ಹಾಸಿಗೆಯ ಮೇಲೆ ಮಲ್ಲಿಗೆಯ ಹೂ ಹರಡಿದ್ದಳು.

ಹದಿನಾರನೆಯ ದಿನ ಬೆಳಗ್ಗೆ ಅವನು ಹಿಂದಿರುಗಿದ. ಬಾಗಿಲಿನ ಮರೆಯಲ್ಲಿ ಅವಳು ನೋಡುತ್ತ ನಿಂತಿದ್ದಳು. ಕಣ್ಣುಸನ್ನೆಯಲ್ಲಾದರೂ ಕೇಶವ ಪಿಳ್ಳೆ ಹೋಗಿಬರುತ್ತೇನೆ ಎಂದು ಹೇಳಲಿಲ್ಲ. ಅಲ್ಲಿ ಅಂತಹವಳೊಬ್ಬಳಿದ್ದಾಳೆ ಎಂದೂ ಅವನು ಭಾವಿಸಿದಂತಿರಲಿಲ್ಲ.

ಆ ಸಂಜೆ ಊಟ ಮಾಡುತ್ತಿದ್ದಾಗ ಅವಳು ಕುಟ್ಟಿಯಮ್ಮನ ಹತ್ತಿರ ಕೇಳಿದಳು:

"ಮತ್ತೆ ಯಾವಾಗ ಬರ್‍ತಾರಂತಮ್ಮ?"

ಕುಟ್ಟಿಯಮ್ಮ ಸುಮ್ಮನಿರಿಸಿದಳು:

"ಹೋಗೇ ಹೆಡ್ಡಿ! ಅದನ್ನು ಕೇಳಿ ತಿಳಿದುಕೊಳ್ಳಬೇಕಾಗಿದ್ದೋಳು ನೀನಲ್ಲವಾ?"

"ನಾನು ಕೇಳಲಿಲ್ಲ. ನನ್ನ ಹತ್ತಿರ ಅವರಾಗೇ ಹೇಳ್ಲೂ ಇಲ್ಲ."

ಕುಟ್ಟಿಯಮ್ಮ ಹೇಳಿದಳು. "ಪರವಾಯಿಲ್ಲ. ಒಳ್ಳೆ ಗಂಡ ಹೆಂಡತಿಯರು."

# [13]

## ಸಂಕಟಪಡುವ ತಂದೆ

ಸೆಕ್ರೆಟರಿಯೇಟ್‌ನಿಂದ ಹೋದ ಮೇಲೆ ಕೇಶವ ಪಿಳ್ಳೆ ಎರಡೋ ಮೂರೋ ಸಲ ತಂಗಮ್ಮನನ್ನು ಕಂಡದ್ದು. ಒಂದು ಪುಷ್ಪಾಂಜಲಿ ದಿನದಲ್ಲಿ. ಮತ್ತೊಂದು ದಿನ ಕಾಣಲು ಕಾರಣ, ಗೋವಿಂದನ್ ನಾಯರ್ ಅವಳಿಗೂ ಸೂಪರಿಂಟೆಂಡೆಂಟ್ ರಾಮ ಚಂದ್ರನ್ ನಾಯರಿಗೂ ಇರುವ ಸಂಬಂಧವನ್ನು ಅವನ ಹತ್ತಿರ ಹೇಳಿದ ನಂತರ. ಆ ಎರಡು ಸಲವೂ ಮಾತನಾಡುವ ಸಂದರ್ಭ ಒಂದಿರಲಿಲ್ಲ. ಅವಳನ್ನು ಕಂಡ ಎಂದು ಹೇಳಬಹುದು ಅಷ್ಟೆ. ಅವನ ಹತ್ತಿರ ಅವಳಿಗೆ ಮಾತನಾಡುವುದಿದೆ ಎಂದು ಕೂಡ ತೋರಿ ರಲಿಲ್ಲ. ಅವನಿಗೂ ಮಾತನಾಡಬೇಕಾದ ಆಗತ್ಯವಿರಲಿಲ್ಲ. ಕಂಡದ್ದಾದರೆ, ಅವಳು ಏನಾದರೂ ಹೇಳಿಬಿಟ್ಟರೆ, ಅವನಿಗೂ ಏನಾದರೂ ಹೇಳಬೇಕಾದೀತು ಎಂದು ಅಷ್ಟೆ.

ಏನಿದ್ದರೂ ಬದುಕಿನಲ್ಲಿ ಅಂತ್ಯಗೊಂಡ ಒಂದು ಅಧ್ಯಾಯದಂತಾಗಿತ್ತು ಆ ಸಂಬಂಧ. ಇನ್ನುಳಿದದ್ದು ಒಮ್ಮೆ ಇತ್ಯರ್ಥ ಮಾಡಿ ಅದನ್ನು ಅಂತ್ಯಗೊಳಿಸಬೇಕಾದದ್ದು. ಅದಲ್ಲದೆ ಬೇರೆ ಏನು? ಅವಳು ಕೂಡ ಅದನ್ನು ಹೇಳಲಿಲ್ಲವೆ? ಕಳೆದುಹೋಯಿತು ಎಂದು ಆಲೋಚಿಸಬೇಕು. ಎಷ್ಟೋ ಸಲ ಅವನು ಆ ಸಂಬಂಧವನ್ನು ಕುರಿತು ಆಲೋ ಚಿಸುತ್ತಿದ್ದ. ಒಂದು ಮನಸ್ಸಾಕ್ಷಿಯ ಸಂಬಂಧ ಎಂದು ಹೇಳಬಹುದು. ಸಂಪೂರ್ಣವಾಗಿ ಆ ಸಂಬಂಧ ಸ್ಮೃತಿಯಿಂದ ಮರೆಯಾಗಿಲ್ಲ. ಆಗುವುದೂ ಇಲ್ಲ. ಈ ನೆಲೆಗೆ ಬುನಾದಿ ಅವಳು. ಆದರೆ ಖಚಿತವಾಗಿ ಹಾಗೇದೂ ಅದನ್ನು ಹೇಳುವಂತಿಲ್ಲ. ತನ್ನದೋ ಅಥವಾ ಕಾತ್ಯಾಯಿನಿಯ ಭಾಗ್ಯದಿಂದಲೋ ಅವಳಿಗೆ ತನ್ನ ಬಗ್ಗೆ ಒಂದು ರೀತಿಯ ಆಸಕ್ತಿ ಯುಂಟಾಯಿತು. ಪುತ್ರೀವಾತ್ಸಲ್ಯದಿಂದ ಶೇಖರ ಪಿಳ್ಳೆ ಒಬ್ಬ ಶುಕ್ರಾಚಾರ್ಯನಂತೆ ಕೆಲವು ಕೆಲಸಗಳನ್ನು ಮಾಡಿದರು. ಕಚನಿಗೆ ಆದ ಹಾಗೆ ತನಗೆ ಅದೆಲ್ಲವೂ ಅನುಕೂಲ ವಾಯಿತು. ಹಾಗಲ್ಲವೇ ಆ ಕಥೆ! ಆ ದೃಷ್ಟಿಯಲ್ಲಿ ಆ ಬಂಧವನ್ನು ಕೇಶವ ಪಿಳ್ಳೆ ಕಾಣುವುದು. ಆದರೂ ಶೇಖರ ಪಿಳ್ಳೆಯನ್ನು ಪ್ರತ್ಯೇಕವಾಗಿ ಪ್ರೀತಿಸಬೇಕಾದದ್ದಿದೆ. ಒಬ್ಬ ಮಾನವೀಯತೆಯುಳ್ಳ ವೃದ್ಧನಂತೆ ಅವನು ಕಾಣಬೇಕಾದದ್ದು.

ಸೆಕ್ರೆಟರಿಯೇಟಿನಲ್ಲಿ ಆ ಕುರ್ಚಿಯಲ್ಲಿ ನಯವಿನಯದಿಂದ ಕುಳಿತಿರುತ್ತಿದ್ದಳು ಆ ಹೆಣ್ಣು. ಕೆಲವು ಸಲ ಯಾವ ಗೊತ್ತುಗುರಿಯೂ ಇಲ್ಲದೆ ಅವನ ಮುಂದೆ ಅವಳ ರೂಪು ಕಾಣಸಿಕೊಳ್ಳುತ್ತಿತ್ತು. ಕೇಶವ ಪಿಳ್ಳೆಯನ್ನು ಅವಳು ಹೊರಗೆ ತಳ್ಳಿದಳು. ಅದು ವಿಶಿಷ್ಟವಾದ ಒಂದು ನಡತೆ ಎಂದೇ ಭಾವಿಸೋಣ. ತೃಪ್ತಿಯುಂಟಾಗದ, ಕಾಮಾತುರೆಯ ಸ್ವಭಾವದ ಹೆಣ್ಣು ಎಂದಿಟ್ಟುಕೊಳ್ಳೋಣ. ಕಳೆದದ್ದನ್ನೆಲ್ಲ ಮರೆತು ರಾಮಚಂದ್ರನ

ಕಡೆಗೆ ತಿರುಗಿದುದು ಅರ್ಥಮಾಡಿಕೊಳ್ಳಲೂ ಕಷ್ಟವಾದದ್ದು. ಅದಕ್ಕೂ ಸಮಾಧಾನವನ್ನು ಕಂಡುಹಿಡಿದರೂ ಅವಳ ಭವಿಷ್ಯ ಏನಾಗಿ ಹೋಗಬಹುದು? ರಾಮಚಂದ್ರನ್ ನಾಯರ್ ಅವಳನ್ನು ಮದುವೆ ಮಾಡಿಕೊಳ್ಳುತ್ತಾನೆಯೇ? ರಾಮಚಂದ್ರನ್ ನಾಯರ್‌ಗೆ ಅವಳನ್ನು ತೃಪ್ತಿಪಡಿಸುವುದು ಸಾಧ್ಯವೆ? ರಾಮಚಂದ್ರನ್ ನಾಯರ್ ಅವಳನ್ನು ಸ್ವೀಕರಿಸಲು ತಯಾರಾಗಿದ್ದರೂ ಶೇಖರ ಪಿಳ್ಳೆಯ ಒಪ್ಪಿಗೆಯೂ ಆಶೀರ್ವಾದವೂ ಅದಕ್ಕುಂಟೆ? ಆ ವಿಷಯದಲ್ಲಿ ಕೇಶವ ಪಿಳ್ಳೆಗೆ ಸಂಶಯವಿದೆ. ಶೇಖರ ಪಿಳ್ಳೆ ಅದನ್ನು ಒಪ್ಪುವುದಿಲ್ಲ. ಒಪ್ಪಿದರು ಎಂದೇ ಇಟ್ಟುಕೊಳ್ಳೋಣ. ಅವಳು ಅದಕ್ಕೆ ಒಪ್ಪಿಗೆ ಪಡೆದಳು ಎಂದೂ ಇರಲಿ. ಆದರೂ ಆ ಜೀವನ ಭವಿಷ್ಯದಲ್ಲಿ ಹೇಗಿರಬಹುದು?

ಆ ವಿಷಯವನ್ನು ಇತ್ಯರ್ಥ ಮಾಡುವುದಕ್ಕಾಗಿ ಒಮ್ಮೆ ಅವಳನ್ನು ಕಾಣಬೇಕೆಂದಿದೆ. ಹಾಗೆ ಅದು ಅಂತ್ಯಗೊಳ್ಳುವುದರಲ್ಲಿ ತಂಗಮ್ಮನನ್ನು ಮದುವೆ ಮಾಡಿಕೊಳ್ಳುವವನು ಎಂದೇ ಅಲ್ಲವೆ ಜನರು ತನ್ನನ್ನು ನೋಡುವುದು? ಆ ದೃಷ್ಟಿಯನ್ನು ಹೋಗಲಾಡಿಸಬೇಕು. ಒಂದು ವೇಳೆ ಇದರ ಅಂತ್ಯಕ್ಕಾಗಿ ಅವಳೂ ಕಾದಿರಬಹುದು. ಕೇಶವ ಪಿಳ್ಳೆಯನ್ನು ಮದುವೆ ಮಾಡಿಕೊಳ್ಳುವ ಹೆಣ್ಣು ಎಂದು ಜನರು ಮಾತನಾಡುವುದನ್ನು ಹೋಗಲಾಡಿಸಿಕೊಳ್ಳಬೇಕೆಂದು ಅವಳಿಗೂ ಎನ್ನಿಸಿರಬಹುದು.

ಈಗ ಪಾರ್ಕ್ ವ್ಯೂನಲ್ಲಿ ಕೇಶವ ಪಿಳ್ಳೆಯ ನೆಲೆ ಸುಭದ್ರವಾಗಿತ್ತು. ಲೌಪ್ಲಿಂಗ್ ಕಂಪೆನಿಯ ಜನರ ಹತ್ತಿರವೂ ನೇರವಾಗಿ ಮಾತನಾಡುವುದು ಮುಂತಾದ್ದರಲ್ಲಿ ಈಗ ಆತನಿಗೆ ಸಾಮರ್ಥ್ಯವುಂಟಾಗಿತ್ತು. ಚೀಫ್ ಸೆಕ್ರೆಟರಿಗೆ ಮಾತ್ರವಲ್ಲ, ದಿವಾನರ ಪ್ರೈವೇಟ್ ಸೆಕ್ರೆಟರಿಯ ಹತ್ತಿರವೂ ಅವನು ಮಾತನಾಡಬಲ್ಲ. ಅವನ ನಡೆನುಡಿ ಯಜಮಾನರಿಗೂ ಯಜಮಾನಮ್ಮನಿಗೂ ಸಮಾಧಾನವಾಗುತ್ತದೆ. ದೊಡ್ಡ ಕೆಲಸಗಳೆಷ್ಟೋ ನಡೆಯುವುದು ಕೇಶವ ಪಿಳ್ಳೆಯ ಮೂಲಕ. ಬೇಕಾದ ರೀತಿಯಲ್ಲಿ ಫೈಲುಗಳನ್ನು ಸಿದ್ಧಪಡಿಸಲು ಅವನು ತರಬೇತಿ ಪಡೆದಿದ್ದ. ಆದರೆ ಸಂಶಯಕ್ಕಾಗಲೀ ಅಪವಾದಕ್ಕಾಗಲೀ ತಪ್ಪುಕಲ್ಪನೆಗಾಗಲೀ ಕೇಶವ ಪಿಳ್ಳೆ ಒಮ್ಮೆಯೂ ಅವಕಾಶ ಕೊಡುವುದಿಲ್ಲ. ಕಾಣಿಕೆಯನ್ನಾಗಲೀ ಸಂಭಾವನೆಯನ್ನಾಗಲೀ ಅವನು ಆಸೆಪಟ್ಟು ತೆಗೆದುಕೊಳ್ಳುತ್ತಿರಲಿಲ್ಲ. ಯಾರಾದರೂ ಏನಾದರೂ ಕೊಟ್ಟರೆ ಏನೂ ಮಾತನಾಡದೆ ಅವನು ತೆಗೆದುಕೊಳ್ಳುತ್ತಿದ್ದ. ಆ ವಿಷಯವನ್ನು ಅವನು ಯಜಮಾನಮ್ಮನಿಗೆ ತಿಳಿಸುತ್ತಲೂ ಇದ್ದ. ಸ್ವಂತ ಕೆಲಸಕ್ಕೆ ಯಜಮಾನರ ಹತ್ತಿರ ಅವನು ಹೋಗಿದ್ದೂ ಇಲ್ಲ.

ಅಂತೂ ಪಾರ್ಕ್ ವ್ಯೂನಲ್ಲೂ ಭಕ್ತಿವಿಲಾಸದಲ್ಲೂ ಅವನಿಗೊಂದು ಹಿಡಿತ ಸಿಕ್ಕಿತ್ತು. ಆದರೂ ಇದು ವರೆಗೆ ಅವನಿಗೆ ಪ್ರೊಮೋಷನ್ ಸಿಕ್ಕಿರಲಿಲ್ಲ. ಯಜಮಾನರು ಉತ್ಸಾಹದಲ್ಲಿದ್ದಾಗ ಆ ವಿಷಯವನ್ನು ಒಮ್ಮೆ ಸೂಚಿಸಿದರೇನು ಎಂದು ಅವನು ಎಷ್ಟೋ ಸಲ ಆಲೋಚಿಸಿದ್ದುಂಟು. ಆದರೆ ಹೇಳಿರಲಿಲ್ಲ.

ಒಂದು ದಿನ ಯಜಮಾನಮ್ಮ ಒಂದು ದೊಡ್ಡ ಸುದ್ದಿಯನ್ನು ತಿಳಿಸಿದರು.

ಅವರಿಗೂ ಆ ಸುದ್ದಿಯನ್ನು ತಿಳಿದು ಸ್ವಲ್ಪ ಸಂತೋಷವಾಗಿತ್ತು. ತಂಗಮ್ಮ ಮನೆಯವರ ಹತ್ತಿರ ಜಗಳವಾಡಿಕೊಂಡು ಒಬ್ಬಳೇ ಬೇರೆ ಹೋಗಿ ವಾಸಮಾಡುತ್ತಿದ್ದಾಳೆ. ಪಾಲ್‌ಕುಳಂಗರೆಯಲ್ಲೋ ಪೆರುಂದಾನಿಯಲ್ಲೋ ಎಲ್ಲೋ. ಅನಂತರ ಯಜಮಾನಮ್ಮ ಹೇಳಿದರು:'

"ಕೇಶವ ಪಿಳ್ಳೆಯ ಜವಾಬ್ದಾರಿ ತಪ್ಪಿತು ಅಂತ ಕಾಣುತ್ತೆ. ರಾಮಚಂದ್ರನ್ ನಾಯರ್ ಅನ್ನೋ ಒಬ್ಬ ಸೂಪರಿಂಟೆಂಡೆಂಟ್ ಅವಳನ್ನು ಮದುವೆ ಮಾಡಿಕೊಳ್ತಾನಂತೆ. ಮದುವೆ ಮಾಡಿಕೊಳ್ಳಬೇಕು ಅಂತ ಇನ್ನು ನಿಮ್ಮ ಹತ್ತಿರ ಬರೋದಿಲ್ಲ."

ಆ ಕಥೆಯ ವಿವರಗಳನ್ನು ತಿಳಿಯಲು ಕೇಶವ ಪಿಳ್ಳೆ ಕುತೂಹಲದಿಂದಿದ್ದ. ಬಹುಶಃ ಯಜಮಾನಮ್ಮನಿಗೆ ತಿಳಿದಿರಬಹುದು. ಆದರೂ ಹೇಗೆ ಅವರ ಹತ್ತಿರ ಆ ವಿಷಯವನ್ನು ಕೇಳೋದು?

ಯಜಮಾನಮ್ಮ ಹೇಳಿದರು:

"ಅಭಿಮಾನ, ಅಂತಸ್ತು ಒಂದೂ ಇಲ್ಲದ ಕೆಟ್ಟ ಜನರ ಗುಂಪು ಕೇಶವ ಪಿಳ್ಳೆ! ನಿಮ್ಮ ಅದೃಷ್ಟ ಚೆನ್ನಾಗಿತ್ತು. ಅದು ಕೈತಪ್ಪಿ ಹೋಯ್ತು. ನಿಜವಾಗಿಯೂ ನೀವು ಅದೃಷ್ಟವಂತರು. ಇಲ್ಲದೇ ಇದ್ದಿದ್ದರೆ ಆ ಕೆಟ್ಟ ಗುಂಪಿನಲ್ಲಿ ಸೇರಿಕೊಂಡು ನೀವು ಹಾಳಾಗಿ ಹೋಗ್ತಿದ್ದಿರಿ. ಇಲ್ಲಿ ಯಜಮಾನರಿಗಾದರೋ ಅಣ್ಣನನ್ನು ಕಂಡರೆ ಭಯ. ಅವನು ಬಂದು ಏನಾದರೂ ಹೇಳಿದರೆ ಅದನ್ನು ಮಾಡಿಬಿಡ್ತಾರೆ. ನಾನು ಹತ್ತಿರ ಇದ್ದರೆ ತೊಂದರೆ ಇಲ್ಲ. ಒಂದು ದಿನ ಬಂದು ತಮ್ಮನ ಹತ್ರ ಅವಳನ್ನ ಮದುವೆಮಾಡಿಕೊಳ್ಳೋ ಹಾಗೆ ನಿಮಗೆ ಹೇಳಬೇಕು ಅಂತ ಒತ್ತಾಯ ಮಾಡಿದರೆ ಯಜಮಾನರು ಹೇಳಿಯೇ ಬಿಡುತ್ತಾರೆ. ಆಗ ನಿಮಗೆ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ನೀವು ತೊಂದರೆಗೆ ಸಿಕ್ಕಿಹಾಕಿಕೊಳ್ತಿದ್ದಿರಿ. ಅಂತೂ ನೀವು ಪಾರಾದಿರಿ."

ಅದು ಯಜಮಾನಮ್ಮನ ಅಭಿಪ್ರಾಯ. ಏನಿದ್ದರೂ ಅಂತಹುದು ಸಂಭವಿಸುತ್ತಿತ್ತು. ಅದರಂತೆಯೇ ಅಲ್ಲವೇ ತನಗೆ ಪಾರ್ಕ್ ವ್ಯೂವಿನಲ್ಲಿ ಶೇಖರ ಪಿಳ್ಳೆ ಉದ್ಯೋಗ ಕೊಡಿಸಿಕೊಟ್ಟದ್ದು. ಆ ವೃದ್ಧ ಹೇಳಿದ್ದೇ ಹಾಗೆ.

ತಂಗಮ್ಮನ ಮನೆಯಲ್ಲಿ ನಡೆದದ್ದೇನೆಂದು ತಿಳಿಯಲು ಕೇಶವ ಪಿಳ್ಳೆ ತೀರ ಆಸಕ್ತನಾದ. ಕೇಳದಿರುವುದೇ ಒಳ್ಳೆಯದೆಂದಿದ್ದರೂ ಕುತೂಹಲದ ಒತ್ತಡದಿಂದ ಅವನು ಕೇಳಿದ:

"ತಂಗಮ್ಮ ಏನೇನು ಜಗಳ ಮಾಡಿಕೊಂಡಳೋ ಏನೋ! ತಂದೆಗೆ ಅವಳ ಮೇಲೆ ತುಂಬ ಪ್ರೀತಿಯಿತ್ತು."

ಯಜಮಾನಿ ಸಿಟ್ಟಿನಿಂದ ಹೇಳಿದರು:

"ಹೇಗೋ ಏನೋ ನನಗೆ ತಿಳಿಯದು. ನಾಚಿಕೆಕೇಡು. ಆ ಹೆಂಗಸಿನ ಮಗಳಲ್ಲವೆ ಅವಳು? ಹೆಣ್ಣುಮಗಳು!"

ಆ ವಿವರಗಳನ್ನು ಹೇಗಾದರೂ ತಿಳಿದೇ ತೀರಬೇಕು. ಸೂಕ್ಷ್ಮವಾಗಿ ಯಾವ ರೀತಿಯಲ್ಲಿ ತಿಳಿಯುವುದು ಎಂದು ಕೇಶವ ಪಿಳ್ಳೆ ಆಲೋಚಿಸುತ್ತಿದ್ದ.

ಯಜಮಾನಮ್ಮ ಒಂದು ಸಣ್ಣ ನಗುವಿನೊಂದಿಗೆ ಹೇಳಿದರು: "ನೀವು ಹಾಗೆಲ್ಲ ಕೆಳಮಟ್ಟಕ್ಕಿಳಿಯೋ ಮನುಷ್ಯರಲ್ಲ. ನಿಮಗೆ ತಕ್ಕ ಅಂತಸ್ತಿರುವ ಹುಡುಗಿಯನ್ನು ನಾವು ನೋಡಿದರಾಯ್ತು."

ಕೇಶವ ಪಿಳ್ಳೆ ನಡುಗಿಹೋದ. ಎಲ್ಲ ಅಡಚಣೆಗಳೂ ಹೋಗಿ ಮಾರ್ಗ ಸುಗಮವಾದಾಗ ಒಂದು ದೊಡ್ಡ ಅಡಚಣೆಯ ಕಂತೆಯೇ ಬೀಳುತ್ತಿದೆ. ಆಗ ಮೊದಲು ತಾನು ತಂಗಮ್ಮನನ್ನು ಮದುವೆ ಮಾಡಿಕೊಳ್ಳುವುದು ಅವರಿಗೆ ಇಷ್ಟವಿಲ್ಲ ಎಂದು ಹೇಳಿದುದು ಈ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡಾಗಿರಬಹುದೆ? ಅದು ತುಂಬ ತೊಂದರೆ ಉಂಟುಮಾಡುವಂತಹುದು. ಅವರ ಆಲೋಚನೆಯಲ್ಲಿ ಯಾವುದೋ ಒಂದು ಹೆಣ್ಣಿದೆ. ತನ್ನ ಸತ್ಯಸ್ಥಿತಿಯನ್ನು ಅವರಿಗೆ ತಿಳಿಸಿದರೇನೆಂದು ಕೇಶವ ಪಿಳ್ಳೆಗೆ ತೋರಿತು. ಅದಲ್ಲವೇ ಒಳ್ಳೆಯದು? ಆದ್ದರಿಂದ, ತಾನು ವಿವಾಹಿತನಾಗಿರುವುದರಿಂದ ತನ್ನ ಬಗ್ಗೆ ಇರುವ ಅಭಿಪ್ರಾಯ ಬದಲಾಗಬಹುದಲ್ಲವೆ? ಹೀಗೆ ಹತ್ತಿರದಲ್ಲಿ ಒಡನಾಡುವುದು, ತಾವು ಆಲೋಚಿಸಿಕೊಂಡಿರುವ ಹೆಣ್ಣನ್ನು ಮದುವೆ ಮಾಡಿಸೋಣವೆಂತಲೋ? ಒಟ್ಟಿನಲ್ಲಿ ಕೇಶವ ಪಿಳ್ಳೆಯ ಮನಸ್ಸು ವಿಷಮಸ್ಥಿತಿಗೊಳಗಾಯಿತು. ಅದು ಮಾತ್ರವಲ್ಲ, ಮದುವೆಯಾಗಿದೆ ಎಂದು ತಿಳಿಸಿಬಿಟ್ಟರೆ ಯಾವಾಗ ಯಾರನ್ನು ಎಂದೆಲ್ಲ ಪ್ರಶ್ನೆಗಳೇಳುತ್ತವೆ. ಆ ಪ್ರಶ್ನೆಗಳಲ್ಲಿ ಯಾವಾಗ ಎನ್ನುವುದಕ್ಕೆ ಹೆಚ್ಚು ಮಹತ್ವ. ಇಲ್ಲಿಗೆ ಬರುವುದಕ್ಕೆ ಮೊದಲು ಎಂದಾದಲ್ಲಿ, ತಂಗಮ್ಮನನ್ನೂ ಶೇಖರ ಪಿಳ್ಳೆಯನ್ನೂ ನಂಬಿಸಿ ಮೋಸ ಮಾಡಿದ್ದ ಎನ್ನುವ ದುರಭಿಪ್ರಾಯ ಹುಟ್ಟಿಕೊಳ್ಳಬಹುದು. ಕಾಣಿಸಿಕೊಳ್ಳುವ ಹಾಗಲ್ಲ, ಅಭಿಪ್ರಾಯಕ್ಕೂ ಬರಬಹುದು. ಇಷ್ಟಪಡುವುದೂ ಕಡಿಮೆಯಾದರೂ ಚಿಂತೆಯಿಲ್ಲ. ಈಗಲೇ ಹೇಳುವುದು ಒಳ್ಳೆಯದು. ಆದರೆ ಒಂದು ಪ್ರೊಮೋಷನ್ ಸಿಕ್ಕಿದ ಮೇಲಾಗಿದ್ದರೆ ಒಳ್ಳೆಯದಿತ್ತಲ್ಲವೆ?

ಇನ್ನೊಂದು ನಿಮಿಷ ಯಜಮಾನಮ್ಮ ಅಲ್ಲಿ ನಿಂತಿದ್ದಿದ್ದರೆ ಕೇಶವ ಪಿಳ್ಳೆ ತನಗರಿವಿಲ್ಲದಂತೆಯೇ ಎಲ್ಲವನ್ನೂ ಆ ಕಡೆ ಹೇಳಿಬಿಡುತ್ತಿದ್ದ. ಅಷ್ಟು ಹೊತ್ತಿಗೆ ಯಜಮಾನಮ್ಮ ಒಂದು ಹಾಡನ್ನು ಗುಣುಗುಟ್ಟುತ್ತ ಅಲ್ಲಿಂದ ಹೋಗಿದ್ದರು.

ಎಷ್ಟೋ ಹೊತ್ತು ಕೇಶವ ಪಿಳ್ಳೆ ಪ್ರತಿಮೆಯಂತೆ ಕುಳಿತಿದ್ದ. ಅವನು ನಿಶ್ಚಿಂತನಾಗಿದ್ದ ಎಂದೂ ಹೇಳಬಹುದು. ಅವನ ಬುದ್ಧಿ ಮಂಕಾಗಿತ್ತು.

ಅಷ್ಟರಲ್ಲಿ ತನ್ನ ಮುಂದೆ ಗೋಪಾಲನ್ ನಾಯರ್ ಒಂದು ಪ್ರೇತದ ಹಾಗೆ ನಿಂತಿದ್ದ. ಹೇಗೆ ಪೋಲೀಸಿನವರನ್ನು ವಂಚಿಸಿ ಅವನು ಒಳಗೆ ಬಂದ? ಅದೆಂತಹ ರೂಪು? ಹರಿದುಹೋಗಿದ್ದ ಮುಂಡು, ಷರಟು ತುಂಬ ಕೊಳೆಯಾಗಿದ್ದುವು. ತುಂಬ ಆಳದಲ್ಲಿದ್ದ ಎರಡು ಕಣ್ಣುಗಳು ಪ್ರಕಾಶಿಸುತ್ತಿದ್ದುವು. ಜಡೆಗಟ್ಟಿದ್ದ ತಲೆಗೂದಲು, ಆ ಹಳೆ

ಕೊಡೆಯೂ ಪೇಪರ್ ಕಟ್ಟೂ ಕೈಯಲ್ಲಿತ್ತು. ಕೇವಲ ಅಸ್ಥಿಪಂಜರವಾಗಿದ್ದ. ಒಬ್ಬ ಹುಚ್ಚನಂತೆ ತೋರುತ್ತಿದ್ದ. ಹೌದು, ಹುಚ್ಚ ಎನ್ನುವುದರಲ್ಲಿ ಸಂಶಯವಿಲ್ಲ. ಕೇಶವ ಪಿಳ್ಳೆಗೆ ಆ ದೃಶ್ಯವನ್ನು ನೋಡಿ ಭಯವಾಯಿತು. ಗೇಟಿನಲ್ಲಿ ಕಾವಲು ನಿಂತಿದ್ದ ಪೋಲೀಸಿನವನ ಹತ್ತಿರ ಈ ಹುಚ್ಚನನ್ನು ಯಾಕೆ ಒಳಗೆ ಬಿಟ್ಟೆ ಎಂದು ಕೇಳಬೇಕು ಎನ್ನಿಸಿತು. ಮೇಜಿನ ಮೇಲಿದ್ದ ಫೈಲುಗಳನ್ನು ತೆಗೆದುಕೊಂಡು ಅವನು ಹರಿದು ಹಾಕುವುದೋ ಇಲ್ಲವೇ ಎತ್ತಿಕೊಂಡು ಹೋಗುವುದೋ ನಡೆಯುವುದಕ್ಕೆ ಮೊದಲು ಪೋಲೀಸಿನವನನ್ನು ಕರೆದರೇನು?

ನೋಡೋಣ ! ಎಷ್ಟೊಂದು ಭಾರವಾಗಿ ಉಸಿರುಬಿಡುತ್ತಿದ್ದಾನೆ ! ಪರಿಚಯವನ್ನು ಸೂಚಿಸುತ್ತ ಅವನು ನಗುತ್ತಿದ್ದ. ಅಲ್ಲ, ಅದು ಮನುಷ್ಯನ ನಗುವಲ್ಲ, ಹುಚ್ಚನ ನಗು. ಅವನ ಮೈಯಿಂದ ದುರ್ವಾಸನೆ ಬರುತ್ತಿತ್ತು. ಅಂದೇ ಮರೆತುಬಿಟ್ಟಿದ್ದ ಮನುಷ್ಯ ಅವನು.

ಕೇಶವ ಪಿಳ್ಳೆ ಕೇಳಿದ:

"ಏನಾಗಬೇಕಿತ್ತು?"

ಅವನು ಬಾಗಿ ನಮಸ್ಕರಿಸುತ್ತ ಹೇಳಿದ:

"ಆ ಫೈಲ್ ಅಸಿಸ್ಟೆಂಟ್ ಸೆಕ್ರೆಟರಿ ಅವರ ಹತ್ತಿರ ಇದೆ."

ಇಲ್ಲ. ಅವನಿಗೆ ಹುಚ್ಚು ಹಿಡಿದಿಲ್ಲವೆಂದು ತೋರುತ್ತದೆ.

ಕೇಶವ ಪಿಳ್ಳೆ ಕೇಳಿದ: "ಅದಕ್ಕೆ ನಾನೇನು ಮಾಡಬೇಕು?"

ಏನು ಹೇಳಬೇಕೋ ತಿಳಿಯಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಅವನು ಹೇಳಿದ:

"ನನ್ನ ಮನೆ ಹರಾಜಾಯ್ತು. ಎರಡು ಮಕ್ಕಳೂ ಹಸಿವಿನಿಂದ ಸತ್ತುವು. ನಾನು ಮನೆಗೆ ಹೋಗಲಿಲ್ಲ. ಈ ಹಣ ಸಿಕ್ಕುತ್ತೆ ಅಂತ ಹೇಳ್ತಾರೆ. ಚೀಫ್ ಸೆಕ್ರೆಟರಿ ನೋಡಿದರೆ ಸಾಕು."

ತಾಳ್ಮೆಗೆಟ್ಟು ಕೇಶವ ಪಿಳ್ಳೆ ಪುನಃ ಕೇಳಿದ:

"ಅಸಿಸ್ಟೆಂಟ್ ಸೆಕ್ರೆಟರಿಯ ಹತ್ತಿರದಿಂದ ನಾನು ಆ ಫೈಲ್ ಹೊತ್ತುಕೊಂಡು ಬರಬೇಕಾ?" ಅದನ್ನು ಉದ್ದೇಶಪಟ್ಟು ಕೇಳಿದ ಪ್ರಶ್ನೆಯೆನ್ನುವಂತೆ ಅವನು ಹೇಳಿದ:

"ಹಾಗಲ್ಲ. ಹಾಗಿದ್ದರೆ ನಾನೇ ಹೇಳ್ತಿದ್ದೆ."

ಈ ಒಂದೂವರೆ ವರ್ಷದಿಂದ ಆ ಫೈಲನ್ನು ಅಲ್ಲಿಂದ ಮುಂದಕ್ಕೆ ಕಳಿಸಲು ಸಾಧ್ಯವಾಗಿರಲಿಲ್ಲ. ಅವನು ಸಂಬಂಧಪಟ್ಟವರನ್ನು ಕಾಣದೆ ಅಲ್ಲ, ಕಂಡು ಮಾತನಾಡದೆ ಅಲ್ಲ. ಅವನು ಕಂಡದ್ದುಂಟು. ತನ್ನ ಕಷ್ಟ ಹೇಳಿಕೊಂಡದ್ದೂ ಉಂಟು. ಬೇರೆ ಯಾವ ಕೆಲಸವೂ ಅವನಿಗಿಲ್ಲ. ಅವನು ಹೇಳಿದ: "ಏಲಂ ಆಯ್ತು. ಏಲಂ, ಏಲಂ ಆದ ಮೂವತ್ತು ದಿನದೊಳಗ ಹಣ ಹೊಂದಿಸಿದರೆ ಸಾಕು."

ಕೇಶವ ಪಿಳ್ಳೆ ಎರಡು ರೂಪಾಯಿಗಳನ್ನು ಮೇಜಿನಿಂದ ತೆಗೆದುಕೊಡುವುದಕ್ಕೆ ಹೋದ. ಅಷ್ಟೇ ಗೋಪಾಲನ್ ನಾಯರ್ ಕೊಟ್ಟದ್ದರಲ್ಲಿ ತಾನು ಉಳಿಸಿಕೊಂಡದ್ದು.

ಒಂದು ಕ್ಷಣ ಕಳೆದು ಅದರ ಬಡ್ಡಿ ಎನ್ನುವಂತೆ ಅರ್ಧ ರೂಪಾಯಿಯನ್ನೂ ಅದಕ್ಕೆ ಸೇರಿಸಿ ಕೊಡುವುದಕ್ಕೆ ಹೋದ. ಗೋಪಾಲನ್ ನಾಯರ್ ಹೇಳಿದ:

"ಬೇಡಿ, ಬೇಡಿ. ನನಗಿದು ಬೇಡಿ. ನನ್ನ ಫೈಲ್ ಇಲ್ಲಿ........."

ಅವನಿಗೆ ಹುಚ್ಚು ಹಿಡಿಯುತ್ತದೆ ಎನ್ನಿಸಿತು. ಅವನ ಮಾತು ಹಾಗೆ ತೋರುತ್ತಿತ್ತು. ಅವನ ನೋಟವೂ ಭಾವನೆಯೂ ಥಟ್ಟನೆ ಬದಲಾಯಿಸಿತೋ ಎಂದು ಕೇಶವ ಪಿಳ್ಳೆ ಸಂಶಯಪಟ್ಟ. ಅವನ ದೃಷ್ಟಿ ಒಂದು ಕಡೆಯಲ್ಲಿ ನಿಲ್ಲುತ್ತಿಲ್ಲ. ಕೂಡಲೇ ಇದು ಹೆಚ್ಚ ಬಹುದು.

"ನಾನೆಲ್ಲ ಸರಿಮಾಡ್ತೀನಿ. ಇದನ್ನು ತೆಗೆದುಕೊಂಡು ಹೋಗಿ."

"ಓ! ಓ!"

ಅವನು ಹೊರಟುಹೋದ. ಆ ಹಣವನ್ನು ಅವನು ತೆಗೆದುಕೊಂಡು ಹೋಗಲಿಲ್ಲ. ಅವನು ಹೋದ ಬಳಿಕ ಕೇಶವ ಪಿಳ್ಳೆ ಗೇಟಿನ ಹತ್ತಿರ ಹೋಗಿ ಕಾವಲುಗಾರನ ಹತ್ತಿರ ಕೇಳಿದ:

"ಇವನು ಹೇಗೆ ಒಳಗೆ ಬಂದ?"

ಕಾವಲುಗಾರ ಗಾಬರಿಯಾದ. ಕೇಶವ ಪಿಳ್ಳೆ ಗಂಭೀರವಾಗಿ ಕೇಳಿದ್ದ. ತಪ್ಪುಗಾರ ನಾದ ಪೋಲೀಸಿನವನು ಹೇಳಿದ: "ಅವನು ತುಂಬ ಅತ್ತುಕೊಂಡು ಹೇಳಿದ. ತಮ್ಮನ್ನು ಕಂಡರೆ ಬದುಕ್ತೀನಿ ಅಂತ. ನಾನು ಬಿಟ್ಟುಬಿಟ್ಟೆ."

"ಅವನೊಬ್ಬ ಹುಚ್ಚ."

"ಅದು ನನಗೆ ಗೊತ್ತಿರಲಿಲ್ಲ."

"ಹ್ಞ !" ಕೇಶವ ಪಿಳ್ಳೆ ಅಧಿಕಾರವಾಣಿಯಿಂದ ಹೇಳಿದ: "ಅವನನ್ನ ಇನ್ನು ಮೇಲೆ ಒಳಗೆ ಬಿಡಬೇಡ."

ಹಿಂದೆ ತಾನು ಆ ಗೇಟಿನ ಹತ್ತಿರ ಬಂದು ನಿಂತುಕೊಂಡು ಒಳಗೆ ಹೋಗಿ ಚೀಫ್ ಸೆಕ್ರೆಟರಿಯನ್ನು ಕಾಣಲು ಮಾಡಿದ ಪ್ರಯತ್ನಗಳನ್ನು ಕೇಶವ ಪಿಳ್ಳೆ ಮರೆತಂತೆ ತೋರುತ್ತದೆ.

* * * * *

ತಂಗಮ್ಮನ ಬಗ್ಗೆ ವಿಚಾರಿಸಿದಾಗ ಪಾಲ್‌ಕುಳಂಗರದಲ್ಲಿ ವಾಸಿಸುತ್ತಿರುವುದು ನಿಜವೆಂದು ತಿಳಿಯಿತು. ಒಂದು ವೇಳೆ ಸ್ವತಂತ್ರವಾಗಿ ಹೋಗಿಬರುವುದಕ್ಕಾಗಿ ರಾಮಚಂದ್ರನ್ ನಾಯರ್ ನಿರ್ದೇಶಿಸಿದ ಉಪಾಯವಾಗಿರಬೇಕು ಅದು ಎನ್ನಿಸಿತು. ಆ ಹೆಣ್ಣು ತನ್ನ ಇನಿಯನಿಗೋಸ್ಕರ ಏನು ಬೇಕಾದರೂ ಮಾಡುವಂತಹವಳು. ಅದು ಕೇಶವ ಪಿಳ್ಳೆಗೂ ಗೊತ್ತಿರುವಂಥಾದ್ದೇ. ಹೆಚ್ಚಾದ ವಿವರಗಳನ್ನು ಸಂಗ್ರಹಿಸಲು ಸಾಧ್ಯವಾಗಿಲ್ಲ. ಏನೇನೋ ಕೇಳಿಬರುತ್ತಿದೆ. ನಿಜವಾಗಿ ನಡೆದದ್ದೇನು ಎಂದು ಸರಿಯಾಗಿ ತಿಳಿಯದು.

ತಂಗಮ್ಮ ಮನೆಯವರೊಡನೆ ಜಗಳವಾಡಿಕೊಂಡು ಬೇರೆ ಹೋಗಿ ವಾಸಿಸುತ್ತಿರುವುದು ನಿಜ.

ಒಂದು ದಿನ ಶೇಖರ ಪಿಳ್ಳೆಯ ಒಂದು ಕಾಗದ ಕೇಶವ ಪಿಳ್ಳೆಗೆ ಬಂದಿತು. ಸದ್ಯದಲ್ಲೇ ಅನುಕೂಲ ಮಾಡಿಕೊಂಡು ಚಟ್ಟಿಕುಳಂಗರದ ಮನೆಯ ವರೆಗೆ ಬರಬೇಕೆಂದಿತ್ತು ಆ ಕಾಗದದ ಸಾರಾಂಶ.

ಎಷ್ಟು ಹೊತ್ತಿಗೆ ಎಂದು ತಿಳಿಸಿರಲಿಲ್ಲ. ಶೇಖರ ಪಿಳ್ಳೆಯ ಮನಸ್ಸು ಮತ್ತು ದೇಹಕ್ಕೆ ಸೌಖ್ಯವಿಲ್ಲದಿರುವುದರಿಂದ ಬಂದು ಕೇಶವ ಪಿಳ್ಳೆಯನ್ನು ಕಾಣುವುದು ಸಾಧ್ಯವಾಗಲಿಲ್ಲವೆಂದು ಬರೆಯಲಾಗಿತ್ತು. ಅತ್ಯಾವಶ್ಯಕವಾದ ಕೆಲವು ವಿಷಯಗಳನ್ನು ಶೇಖರ ಪಿಳ್ಳೆ ಮಾತನಾಡುವುದಿತ್ತು.

ಆ ವಿಷಯವೇನಿರಬಹುದು ಎನ್ನುವುದು ಕೇಶವ ಪಿಳ್ಳೆಗೆ ಗೊತ್ತಿತ್ತು. ಶೇಖರ ಪಿಳ್ಳೆಗೆ ತನ್ನಿಂದ ಈಗೇನಾಗಬೇಕಾಗಿದೆ ಎನ್ನುವ ಸಂಶಯವುಂಟಾಗಿತ್ತು. ತಂಗಮ್ಮನನ್ನು ಮದುವೆ ಮಾಡಿಕೊಳ್ಳಬೇಕು ಎಂದು ಹೇಳಬಹುದು. ಹಾಗೆ ಕೇಳಿದರೆ ಖಂಡಿತ ಸಾಧ್ಯವಿಲ್ಲ ಎಂದು ಹೇಳಬಹುದು. ಹಾಗೆ ಹೇಳುವುದಕ್ಕೆ ಕಾರಣವಿದೆ.

ಆ ದಿನ ಅಲ್ಲಿಗೆ ಹೋಗಲು ಸಾಧ್ಯವಾಗಲಿಲ್ಲ. ಮಾರನೆಯ ದಿನ ಹೋದರಾಯಿತು ಎಂದು ತೀರ್ಮಾನಿಸಿದ. ಅಂದು ಮಧ್ಯಾಹ್ನದ ನಂತರ ಸ್ವಲ್ಪ ಬಿಡುವು ಸಿಕ್ಕಿತು. ಕೇಶವ ಪಿಳ್ಳೆ ಹೊರಟ. ಒಂದು ವಿಷಯವನ್ನು ತೀರ್ಮಾನಿಸಲು ಹೋಗುತ್ತಿರುವುದು ಎಂದು ಆತನಿಗೆ ಅನ್ನಿಸಿತು. ಜೀವನದ ಒಂದು ಅಧ್ಯಾಯದ ಸರಿಯಾದ ಲಾಭನಷ್ಟಗಳನ್ನು ಲೆಕ್ಕಹಾಕಿ ಮುಕ್ತಾಯಗೊಳಿಸುವುದಕ್ಕಾಗಿ ಆತ ಹೋಗುತ್ತಿದ್ದ. ಆ ವಿಷಯದಲ್ಲಿ ಒಂದು ನಂಬಿಕೆ ತನಗಿದ್ದರೂ ಆ ಮುದುಕನನ್ನು ಕುರಿತು ಅನುಕಂಪವುಂಟಾಯಿತು. ಎಷ್ಟೋ ರಾತ್ರಿಗಳಲ್ಲಿ ಕೊಟ್ಟಿಯಂಬಲದ ಮೂಲಕ ಪ್ರವೇಶಿಸಿದ್ದುಂಟು.

ವರಾಂಡದಲ್ಲಿ ಶೇಖರ ಪಿಳ್ಳೆ ಕುಳಿತಿದ್ದರು. ಅವರನ್ನು ಕಂಡು ತುಂಬ ದಿನಗಳೇನಾಗಿರಲಿಲ್ಲ. ಆದರೆ ಈಗ ಹತ್ತು ವರ್ಷ ಹೆಚ್ಚಿಗೆ ಆಗಿದ್ದಂತೆ ತೋರಿತು. ಇಷ್ಟು ಬೇಗ ಇಷ್ಟು ಬದಲಾಯಿಸಿದ್ದು ಏಕೆ ಎನ್ನುವುದನ್ನು ಊಹಿಸಿದ.

ಕೇಶವ ಪಿಳ್ಳೆ ಬರುತ್ತಿದ್ದುದನ್ನು ಕಂಡಾಗ ಆ ನೊಂದ ಮುದುಕ ಗಟ್ಟಿಯಾಗಿ ಅತ್ತರು. ಬಿಕ್ಕಿಬಿಕ್ಕಿ ಅತ್ತರು. ಏನು ಹೇಳಬೇಕಾಗಿತ್ತೋ ಅದನ್ನು ಅವರಿಗೆ ಹೇಳಲು ಸಾಧ್ಯವಾಗಿರಲಿಲ್ಲ. ಆ ಮುದುಕನ ಹೃದಯ ಒಡೆದುಹೋಗುತ್ತಿತ್ತು. ಹೇಗೋ ಹೇಳಿ ಮುಗಿಸಿದರು: "ಆ ಮಹಾ ಪಾಪಿ ನಮ್ಮನ್ನು ವಂಚಿಸಿದಳು. ಅವಳಿಗೆ ಒಳ್ಳೆಯತನ ಹಿಡಿಸೋದಿಲ್ಲ."

ಅಷ್ಟು ಹೊತ್ತಿಗೆ ತಂಗಮ್ಮನ ತಾಯಿ ಬಂದು ಬಾಗಿಲಿನ ಮರೆಯಲ್ಲಿ ನಿಂತುಕೊಂಡರು.

ಶೇಖರ ಪಿಳ್ಳೆಯನ್ನು ಸಮಾಧಾನಪಡಿಸುವುದಕ್ಕಾಗಿ ಅವನು ಹೇಳಿದ: "ನೀವು

ಅಳಬಾರದು. ಹೀಗೆ ಅತ್ತರೇನು ಗತಿ?"

ಸಮಾಧಾನ ತಂದುಕೊಳ್ಳಲು ಸ್ವಲ್ಪ ಹೊತ್ತು ಹಿಡಿಯಿತು. ಕಣ್ಣನ್ನೂ ಮುಖವನ್ನೂ ಟವಲಿನ ತುದಿಯಿಂದ ಒರೆಸಿಕೊಂಡು ಶೇಖರ ಪಿಳ್ಳೆ ಹೇಳಿದರು:

"ನನಗೆ ಮುಖ ಹೇಗೆ ನೋಡಲಿ ಅನ್ನಿಸಿತ್ತು. ಅವಳು ನನ್ನ ಮುಖದ ಮೇಲೆ ಮಾತ್ರ ಅಲ್ಲ, ನಿಮ್ಮ ಮುಖದ ಮೇಲೂ ಮಸಿ ಎರಚಿದಳು. ಮಹಾ ಪಾಪಿ. ನಾನು ನನ್ನ ಗಂಡುಮಕ್ಕಳನ್ನು ಅಷ್ಟು ಪ್ರೀತಿಸಲಿಲ್ಲ. ಅಷ್ಟೊಂದು ಗಣಿಸಿದ್ದೂ ಇಲ್ಲ. ಅವಳು ನನ್ನ ಸರ್ವಸ್ವವಾಗಿದ್ದಳು—"

ಶೇಖರ ಪಿಳ್ಳೆ ಒಂದು ನಿಟ್ಟುಸಿರು ಬಿಟ್ಟರು. ಭಾಗೀರಥಿಅಮ್ಮ ತನ್ನನ್ನು ದಿಟ್ಟಿಸಿ ನೋಡುತ್ತಿದ್ದಾರೋ ಎಂದು ಕೇಶವ ಪಿಳ್ಳೆಗೆ ಸಂಶಯವುಂಟಾಯಿತು. ಅವನ ಮುಖದ ಮೇಲೆ ಏನಾದರೂ ಬದಲಾವಣೆಯುಂಟಾಗಿದೆಯೇ ಎಂದು ಗಮನಿಸುತ್ತಿದ್ದಿರಬೇಕು. ಭಾಗೀರಥಿಯಮ್ಮ ಅವನ ಹತ್ತಿರ ಕೇಳಿದರು:

"ಅವರವರೊಳಗೆ ಹೇಗಿತ್ತು?"

ಶೇಖರ ಪಿಳ್ಳೆ ಹೆಂಡತಿಯ ಹತ್ತಿರ ಹೇಳಿದರು:

"ನೀನು ಯಾಕೆ ಮರೆಯಲ್ಲಿ ನಿಂತಿದ್ದೀಯೆ? ಇನ್ನು ಮೇಲೆ ಹಾಗೆ ನಿಂತುಕೊಳ್ಳೋದಕ್ಕೇನಿದೆ?"

ಹಾಗೆ ಹೇಳುವಾಗಲೂ ಶೇಖರ ಪಿಳ್ಳೆ ಬಿಕ್ಕಬಿಕ್ಕಿ ಅತ್ತರು. ಭಾಗೀರಥಿಯಮ್ಮನೂ ಅಳುತ್ತಿದ್ದರು.

ಶೇಖರ ಪಿಳ್ಳೆ ಹೇಳಿದರು—"ಇನ್ನು ಮೇಲೂ ನೀವು ನನಗೆ ಮಗ ಇದ್ದ ಹಾಗೆ. ಒಬ್ಬ ಮಗಳು ಕೈಬಿಟ್ಟುಹೋದರೆ ಒಬ್ಬ ಮಗ ಸಿಕ್ಕಿದ ಅಂತ ತಿಳಿದುಕೊಳ್ಳೋದು. ಅಳಿಯನಲ್ಲ. ಇವರು ನಮ್ಮ ಮಗ. ನೀನು ಈಚೆಗೆ ಬಾ. ಅಳಿಯನಲ್ಲ."

ಗಂಡ ಹೇಳಿದ್ದನ್ನು ಅಂಗೀಕರಿಸಿದಂತೆ ಹೆಂಡತಿ ಬಾಗಿಲಿನಿಂದ ಹೊರಗೆ ಬಂದಳು. ಕೇಶವ ಪಿಳ್ಳೆ ಹತ್ತಿರ ಕೇಳಬೇಕು ಅನ್ನಿಸಿದ್ದನ್ನು ಆಕೆ ಕೇಳಿದಳು:

"ನಿಮನಿಮಗೆ ಏನಾದರೂ ಜಗಳ ಆಯ್ತೇನಪ್ಪಾ?"

ಕೇಶವ ಪಿಳ್ಳೆ 'ಇಲ್ಲ' ಎಂದು ಹೇಳಿ, "ನಮ್ಮನಮ್ಮಲ್ಲಿ ಯಾವ ಜಗಳವೂ ನಡೆದಿರಲಿಲ್ಲ" ಎಂದ.

ಭಾಗೀರಥಿಯಮ್ಮನಿಗೆ ಆಶ್ಚರ್ಯವುಂಟಾಯಿತು.

"ಮತ್ತೆ ಯಾಕೆ ಹೀಗಾಯ್ತು?"

ಒಬ್ಬ ತಾಯಿಗೂ ತಂದೆಗೂ ಆಶ್ಚರ್ಯವುಂಟಾಗುವ ವಿಷಯ ಅದು. ಆದರೆ ಕೇಶವ ಪಿಳ್ಳೆಗೆ ಸಂಬಂಧಿಸಿದಂತೆ ಯಾವ ಆಶ್ಚರ್ಯವೂ ಉಂಟಾಗಲಿಲ್ಲ. ಹೇಗೆ ಅದು ನಡೆಯಿತು ಎಂದು ಅವನು ಊಹಿಸಿಕೊಳ್ಳಬಲ್ಲವನಾಗಿದ್ದ.

ಮನೆಯಿಂದ ಹೊರಟುಹೋದ ಕಥೆಯನ್ನು ಮಾತ್ರ ತಿಳಿದುಕೊಳ್ಳಬೇಕಾಗಿತ್ತು.

ಆ ತಾಯಿ ಹೇಳಿದಳು: "ಪಿಳ್ಳೆ ಅಂದರೆ ಎಷ್ಟೊಂದು ಪ್ರೀತಿ ಇತ್ತು ಅವಳಿಗೆ! ಇಲ್ಲಿ ತಂದೇನ ಸುಮ್ಮನೆ ಕುಳಿತುಕೊಳ್ಳೋದಕ್ಕೆ ಬಿಡ್ತಿರಲಿಲ್ಲ. ಹೇಗೆ ಅವಳಿಗೆ ಈ ಬುದ್ಧಿ ಬಂತು ಅಂತ ನಾನು ಆಲೋಚಿಸೋದು. ನನ್ನ ಮಗಳಿಗೆ ಯಾವುದೋ ಮಾಟ ಮಾಡಿ ಕೈವಶ ಮಾಡಿಕೊಂಡಿದ್ದಿರಬೇಕು. ಥಟ್ಟನೆ ಹೀಗಾಯ್ತಲ್ಲ!"

ಕೇಶವ ಪಿಳ್ಳೆ ಕೇಳಿದ: "ಏನು ನಡೀತು?"

ಉತ್ತರಿಸಿದ್ದು ಶೇಖರ ಪಿಳ್ಳೆ.

"ಅದನ್ನ ಹೇಳ್ತೀನಿ ಪಿಳ್ಳೆ" ಎಂದು ಹೇಳಿ ಆ ಕಥೆಯನ್ನು ವಿವರಿಸತೊಡಗಿದರು.

ಕೆಲವು ದಿವಸಗಳಿಂದ ಕೇಶವ ಪಿಳ್ಳೆಯ ವಿಷಯ ಮಾತನಾಡುವುದನ್ನೇ ಬಿಟ್ಟು ಬಿಟ್ಟಳು. ಅವಳ ಜೀವನವೆಲ್ಲ ತುಂಬಿಕೊಂಡದ್ದು ಕೇಶವ ಪಿಳ್ಳೆ. ಎಲ್ಲವೂ ಕೇಶವ ಪಿಳ್ಳೆ ಮಯವಾಗಿತ್ತು. ಇದ್ದಕ್ಕಿದ್ದ ಹಾಗೆ ಎಂದು ಹೇಳಬಹುದು—ಒಂದು ದಿನ ಕೇಶವ ಪಿಳ್ಳೆ ಮರೆತುಹೋದಂತೆ ತೋರಿತು. ಆ ಅವಸ್ಥೆಯನ್ನು ವಿವರಿಸಿದುದು ಒಂದು ಅಚ್ಚರಿ ಯಿಂದ. ಆದರೆ ಆ ದಿವಸ ಯಾವುದು ಎಂದು ಕೇಶವ ಪಿಳ್ಳೆಗೆ ಗೊತ್ತು. ಅವನನ್ನು ಒದೆದು ನೂಕಿದ ದಿನದ ನಂತರ ಆಗಿರಬೇಕು, ಅವಳ ಜೀವನದಿಂದ ಅಳಿಸಿಹಾಕಿದ್ದು. ಯಾರಾದರೂ ಯಾವುದಾದರೂ ಕಾರಣದಿಂದ ಕೇಶವ ಪಿಳ್ಳೆಯನ್ನು ಕುರಿತು ಮಾತ ನಾಡಿದರೆ ಅವಳು ವಿಷಯ ಬದಲಾಯಿಸುತ್ತಿದ್ದಳು. ಇಲ್ಲದಿದ್ದರೆ ಅಲ್ಲಿಂದ ಎದ್ದು ಹೋಗುತ್ತಿದ್ದಳು. ಅದೊಂದನ್ನೂ ಯಾರೂ ಗಮನಿಸುತ್ತಿರಲಿಲ್ಲ. ಅನಂತರ ಅವಳು ರಾಮಚಂದ್ರನ್ ನಾಯರ ವಿಷಯವಾಗಿ ಮಾತನಾಡತೊಡಗಿದಳು. ಮೊದಲು ಅವನು ಉದ್ಯೋಗದ ವಿಚಾರವಾಗಿ ಅವಳಿಗೆ ತುಂಬ ಕಾಟ ಕೊಡುತ್ತಿದ್ದನಂತೆ. ಅವಳು ಎಷ್ಟೇ ಎಚ್ಚರಿಕೆಯಿಂದ ಮಾಡಿದರೂ ತಪ್ಪು ಹುಡುಕುತ್ತಿದ್ದ ಎಂದು ಹೇಳುತ್ತಿದ್ದಳು. ಅನಂತರ ಅವನು ಸಮರ್ಥ ಉದ್ಯೋಗಸ್ಥ ಎಂದು ಹೇಳುವುದಕ್ಕಾರಂಭಿಸಿದಳು. ಈ ಅಲ್ಪ ಕಾಲ ದಲ್ಲಿ ರಾಮಚಂದ್ರನ್ ನಾಯರ್ ಅವಳ ಜೀವನದಲ್ಲಿ ತುಂಬಿಕೊಂಡ. ಅವನನ್ನು ಕುರಿತೇ ಯಾವಾಗಲೂ ಮಾತನಾಡುತ್ತಿದ್ದದ್ದು. ಇಲ್ಲಿಯ ವರೆಗೆ ಹೇಳಿ ಮುಗಿಸಿದಾಗ ಆ ಕಥೆಯನ್ನು ಮುಂದುವರಿಸಿದುದು ಭಾಗೀರಥಿಯಮ್ಮ.

"ಇಲ್ಲಿ ಕೇಳಪ್ಪ! ಆವತ್ತು ಅವಳು ಹೀಗೆ ಈ ರಾಮಚಂದ್ರನ್ ನಾಯರ್ ವಿಚಾರವಾಗಿ ಯಾವಾಗ್ಲೂ ಮಾತನಾಡುವುದಕ್ಕಾರಂಭಿಸಿದಾಗ ನನಗೆ ಯಾಕೋ ತಡೆ ಯೋದಕ್ಕಾಗಲಿಲ್ಲ. ನಾನು ಒಂದು ದಿನ ಅವಳನ್ನು ಕರೆದುಕೊಂಡು ಗುಟ್ಟಾಗಿ ಕೇಳಿದೆ— 'ಇದೇನೆ ಇದು ನೀನು-ಈ ರಾಮಚಂದ್ರನ್ ನಾಯರನ್ನು ಕುರಿತು ಹೀಗೆಲ್ಲ ಹುಚ್ಚಿಹಾಗೆ ಮಾತಾಡೋದು? ಇದು ಕೇಶವ ಪಿಳ್ಳೆಗೆ ತಿಳಿದರೆ ಎಷ್ಟು ತೊಂದರೆ ಗೊತ್ತಾ?' ಅಂದೆ. ಆಗ ಅವಳು ಯಾವ ಹೆದರಿಕೆಯೂ ಇಲ್ಲದೆ ನನ್ನನ್ನು ಕೇಳಿದಳು: 'ಏನು ಕೇಡುಂಟಾ ಗೋದು' ಅಂತ. ನಾನು ಏನೂ ತಿಳಿಯದ ಹುಡುಗಿ ಹಾಗೆ ಮಾತನಾಡುತ್ತೆ ಅಂದು ಕೊಂಡೆ. ಆ ಮೇಲೂ ರಾಮಚಂದ್ರನ್ ನಾಯರ್ ವಿಚಾರವೇ. ಸತ್ಯ ಹೇಳ್ತೀನಿ ಪಿಳ್ಳೆ.

ನನಗೆ ಹೆದರಿಕೆ ಆಯ್ತು. ನಾನು ಅವಳನ್ನು ಬಯ್ದೆ. ಆಗ ಅವಳು ಹೇಳಿದಳು—'ರಾಮಚಂದ್ರನ್ ನಾಯರ್ ತುಂಬ ಒಳ್ಳೆ ಮನುಷ್ಯ. ಅದರಲ್ಲೇನು ತಪ್ಪು?' ಎಂದು. ನಾನು ಹೇಳಿದೆ—'ಅದು ಸರಿಯಲ್ಲ' ಅಂತ. ಇದೊಂದೂ ಇವರಿಗೆ ಗೊತ್ತಿರಲಿಲ್ಲ. ಗಂಡಸರಿಗೆ ತಿಳಿಸೋ ವಿಷಯವಾ ಇದು?"

ಮುಂದಿನ ಕಥೆ ವಿವರಿಸಿದ್ದು ಶೇಖರ ಪಿಳ್ಳೆ. ಶೇಖರ ಪಿಳ್ಳೆಗೆ ಇದೊಂದೂ ತಿಳಿದಿರಲಿಲ್ಲ. ಭಾಗೀರಥಿಯಮ್ಮ ಇದೊಂದನ್ನೂ ಶೇಖರ ಪಿಳ್ಳೆಗೆ ಹೇಳಿರಲಿಲ್ಲ. ತನಗೆ ಅದು ಗೊತ್ತಿದ್ದರೆ ಮೊಳಕೆಯಲ್ಲೇ ಅದನ್ನು ಕಿತ್ತುಹಾಕಬಹುದಾಗಿತ್ತು ಎಂದು ಶೇಖರ ಪಿಳ್ಳೆ ಹೇಳಿದ್ದು. "ಈ ದಡ್ಡಿಗೆ ಏನಾದರೂ ಗೊತ್ತಾಗುತ್ತೆ? ಬುದ್ಧಿಯಿಲ್ಲದವಳು" ಎಂದು.

ಭಾಗೀರಥಿಯಮ್ಮ ಸಮಾಧಾನವನ್ನು ಹೇಳಿದರು:

"ನಾನು ಅಂದುಕೊಂಡೆ, ಅವಳು ಹೀಗೇನೇ. ಏನೂ ತಿಳಿಯದ ಹೆಣ್ಣು. ಅವಳನ್ನು ಮಾಯ ಮಂತ್ರ ಮಾಡಿ ವಶಪಡಿಸಿಕೊಂಡದ್ದು. ಒಂದು ದಿನ ಅವಳು ನನ್ನ ಹತ್ತಿರ ಹೇಳಿದಳು—'ರಾಮಚಂದ್ರನ್ ನಾಯರ್ ನನ್ನನ್ನು ಮದುವೆ ಮಾಡಿಕೊಳ್ತಾರೆ' ಅಂತ. ಅವನು ಒಳ್ಳೆ ಮನುಷ್ಯ......... ಅರಣ್ಯ ಇಲಾಖೆಯ ಕನ್ಸರ್‌ವೇಟರ ಮಗ......... ಸೂಪರಿಂಟೆಂಡೆಂಟ್......... ಅದು ಇದು ಅಂತ. ನನ್ನ ಆಶೆಯೆಲ್ಲ ಕೈಬಿಟ್ಟು ಹೋಯ್ತು. ನಾನು ಕೇಳಿದೆ—'ಇದೇನೆ ನೀನು ಹೇಳೋದು? ನಿನಗೇನಾದರೂ ಹುಚ್ಚು ಗಿಚ್ಚು ಹಿಡೀತಾ' ಅಂತ. ಆಗ ಅವಳು ಒಂದು ಸಲ ನಕ್ಕಳು. ಆ ನಗು ಪಿಳ್ಳೆ, ಈಗಲೂ ನನ್ನ ಕಣ್ಣಮುಂದೆ ಕಾಣುತ್ತೆ. ಯಾರಿಗೂ ಬೇಡದ ನಗು. ಅದನ್ನ ನಾನು ಹೇಳ್ತಿರೋದು ಅಂಜನ ಹಚ್ಚಿದ್ದೋ ಮಂತ್ರವಾದ ಮಾಡಿಸಿದ್ದೋ ಎಂದು. ಎಂಥ ಇಷ್ಟವಾದ ನಗು ಇತ್ತು ನನ್ನ ಮಗಳ ಮುಖದಲ್ಲಿ! ಇದು ಹಾಗಲ್ಲ. ಬೇಡದ ನಗು. ಕಣ್ಣು ಹಾಗೇ ಉರುಳಾಡ್ತಿದ್ದುವು. ಆಗ ಅವಳನ್ನು ನೋಡಬೇಕಿತ್ತು. ಒಬ್ಬ ಹುಚ್ಚಿ ಹಾಗಿದ್ದಳು. ಅವಳು ಹೇಳಿದಳು—'ನಾನು ಸುಮ್ಮನೇ ಹೇಳಿದೆ ಕಣಮ್ಮ. ಅವರು ನನ್ನ ಹತ್ತಿರ ಹೇಳಿದರು ಮದುವೆ ಮಾಡಿಕೊಳ್ಳೋಣ ಅಂತ. ಅದನ್ನ ನಾನು ಹೇಳಿದೆ ಅಷ್ಟೆ.' ಅದಕ್ಕೆ ನಾನು ಹೇಳಿದೆ—'ಮಗಳೇ, ಸ್ವಪ್ನದಲ್ಲಿ ಕೂಡ ಇದನ್ನು ಆಲೋಚನೆ ಮಾಡಬೇಡ. ಆ ಪಿಳ್ಳೆ ಒಳ್ಳೆಯವನು. ಪ್ರೀತಿಯುಳ್ಳವನು. ಅವನಿಗೆ ಇದು ಗೊತ್ತಾದರೆ ಆತ್ಮಹತ್ಯೆ ಮಾಡಿಕೊಂಡಾನು. ಲಕ್ಷಣವಾದವನನ್ನು ಕಂಡು ಅಪ್ಪ ಅನ್ನುವ ಸಂಪ್ರದಾಯ ನಮ್ಮ ಕುಟುಂಬದಲ್ಲಿಲ್ಲ. ಒಬ್ಬನನ್ನು ನಿಶ್ಚಯಿಸಿದ ಮೇಲೆ ಅವನೇ ಗಂಡ. ಅದೇ ನಮ್ಮ ಕುಟುಂಬದ ನಡತೆ. ನಮ್ಮ ಕುಟುಂಬದಲ್ಲಿ ಯಾವ ಹೆಣ್ಣೂ ಎರಡನೆ ಸಲ ಮದುವೆ ಮಾಡಿಕೊಂಡದ್ದಿಲ್ಲ. ನನ್ನ ಮಗಳು ಅದನ್ನ ನೆನಪಿನಲ್ಲಿಡಬಾರದಾ?"

ಶೇಖರ ಪಿಳ್ಳೆ ಆಗ ಮಧ್ಯೆ ಬಾಯಿಹಾಕಿ ಹೇಳಿದರು:

"ಪಿಳ್ಳೆ ವಿಷಯ ಹಾಗೇ ಇದ್ದರೂ ನನಗೆ ತಿಳಿಸಿದ್ದರೆ ಸಾಕಾಗಿತ್ತು. ನಾನು ಬಯ್ದೋ ಅಂದೋ ಎಲ್ಲ ಸರಿಪಡಿಸ್ತಿದ್ದೆ." ಎಂದು ಹೇಳಿ ಅನಂತರ ಉಳಿದ ಕಥೆಯನ್ನು

ಶೇಖರ ಪಿಳ್ಳೆ ವಿವರಿಸಿದರು. ಒಂದು ದಿನ—ತಿಂಗಳು ಮತ್ತು ತಾರೀಖನ್ನೂ ಶೇಖರ ಪಿಳ್ಳೆ ಹೇಳಿದರು—ರಾತ್ರಿಯಲ್ಲಿ ವಿಪರೀತ ಸೆಕೆಯಿತ್ತು. ನಿದ್ದೆ ಬರಲಿಲ್ಲ. ತುಂಬ ಕತ್ತಲಾಗಿತ್ತು. ಶೇಖರ ಪಿಳ್ಳೆ ವರಾಂಡದಲ್ಲಿ ಕುಳಿತಾಗ ಒಬ್ಬಾತ ಗೇಟು ತೆಗೆದು ಒಳಗೆ ಬಂದದ್ದು ಕಾಣಿಸಿತು. ಅಲ್ಲಿ ಒಬ್ಬರು ನಿಂತಿದ್ದೂ ಕಾಣಿಸಿತು. ಇಬ್ಬರೂ ಮನೆಯ ಹಿಂಭಾಗಕ್ಕೆ ನಡೆದು ಹೋಗುತ್ತಿದ್ದರು. 'ಯಾರು ಅದು' ಎಂದು ಹೇಳಿ ಶೇಖರ ಪಿಳ್ಳೆ ಒಂದೇ ನೆಗೆತಕ್ಕೆ ಹತ್ತಿರ ಹೋದರು. ಶೇಖರ ಪಿಳ್ಳೆ ಕೈ ಎತ್ತಿ ಒಂದು ಏಟು ಕೊಟ್ಟರು. ಏಟು ಬಿದ್ದದ್ದು ತಂಗಮ್ಮನಿಗೆ. ಅವಳು ಅವನ ಮುಂದೆ ಅಡ್ಡಲಾಗಿ ನಿಂತಳು. ಅವನಿಗೆ ಆ ಏಟನ್ನು ತಪ್ಪಿಸುವುದಕ್ಕಾಗಿ. ಅಷ್ಟು ಹೊತ್ತಿಗೆ ಭಾಗೀರಥಿ ದೀಪ ಹಿಡಿದುಕೊಂಡು ಬಂದಳು. ಶೇಖರ ಪಿಳ್ಳೆ ಸಿಟ್ಟಿನಿಂದ ತಮ್ಮನ್ನು ತಾವು ಮರೆತರು. ಅವರು ಅಡ್ಡಾದಿಡ್ಡಿ ಹೊಡೆದರು. ಆದರೆ ಒಂದೇ ಒಂದು ಏಟೂ ರಾಮಚಂದ್ರನ್ ನಾಯರ್‌ಗೆ ಬೀಳಲಿಲ್ಲ. ಅವಳು ಮತ್ತೆ ಮತ್ತೆ ಅವನಿಗೆ ಅಡ್ಡ ನಿಂತು ಆ ಏಟೆಲ್ಲವನ್ನೂ ಸಹಿಸಿದಳು.

ಶೇಖರ ಪಿಳ್ಳೆ ಹೇಳಿದರು: "ಅವಳು ಅವನ ಮೈಮೇಲೆ ಏಟು ಬೀಳದಿರಲಿ ಎಂದು ಏನೆಲ್ಲ ಮಾಡಿದಳು ಗೊತ್ತಾ? ಅವನಿಗೆ ಏಟು ತಪ್ಪಿಸುವುದಕ್ಕಾಗಿ ಅವನ ಸುತ್ತ ತಿರುಗುತ್ತಿದ್ದಳು. ಅದು ನನಗೆ ಇನ್ನೂ ಹೆಚ್ಚು ಸಿಟ್ಟು ತಂದಿತು. ಪಟಪಟ ಅಂತ ಹೊಡೆದೆ. ಸ್ವಲ್ಪ ಹೊತ್ತಾದ ಮೇಲೆ ಅವಳು ಗರ್ಜಿಸುತ್ತ ಹೇಳಿದಳು—"ಇನ್ನು ಹೊಡಿಕೂಡದು. ಒಂದು ಏಟು ಅವರ ಮೇಲೆ ಬಿದ್ದರೆ........" ನಾನು ಕೇಳಿದೆ—"ನೀನು ಏನು ಮಾಡ್ತೀ?" ಅವಳು ನನ್ನ ಮುಖ ನೋಡಿ ಹೇಳಿದಳು—"ನಾನೂ ಹೊಡೀತೀನಿ. ತಂದೆ ಅಂತ ಭಾವಿಸೋದಿಲ್ಲ." ಆ ಮೇಲೆ ನಾನು ಹೊಡಿಲಿಲ್ಲ. ಪಿಳ್ಳೆ. ನಾನು ಒಳಗೆ ಬಂದೆ. ಮಾರನೆ ದಿನ ಸಂಜೆ ಅವಳು ಪೆಟ್ಟಿಗೆ ಸಾಮಾನು ಎಲ್ಲ ತೆಗೆದುಕೊಂಡು ಹೊರಟು ಹೋದಳು." ಕೇಶವ ಪಿಳ್ಳೆ ಏನನ್ನೋ ಆಲೋಚಿಸುತ್ತಿದ್ದ. ಭಾಗೀರಥಿಯಮ್ಮನೂ ಏನೂ ಮಾತಾಡಲಿಲ್ಲ. ಆ ಮುದುಕ ಕುಳಿತಿದ್ದ ದೃಶ್ಯ ಕರುಣಾಜನಕವಾಗಿತ್ತು. ಮಗಳನ್ನು ಕುರಿತು ಯಾವಾಗಲೂ ಚಿಂತಿಸುತ್ತಿದ್ದ ಜೀವವಾಗಿತ್ತು ಅದು. ಈಗ ಎಲ್ಲಾ ಕೈಬಿಟ್ಟು ಹೋಯಿತು—ಶೂನ್ಯವಾಗಿ ಹೋಯಿತು. ನೆನಸಿಕೊಂಡು ನೆನಸಿಕೊಂಡು ಅವರು ಗಟ್ಟಿಯಾಗಿ ಅಳುತ್ತಿದ್ದರು. ಅವರ ಶಕ್ತಿಸಾಮರ್ಥ್ಯಗಳೆಲ್ಲವೂ ಕುಂದಿಹೋಗಿದ್ದುವು. ಈಗ ಆ ಮನುಷ್ಯ ಕ್ಷೀಣಿಸಿ ದುರ್ಬಲನಾದ ವ್ಯಕ್ತಿ.

ಭಾಗೀರಥಿಯಮ್ಮ ಹೇಳಿದಳು—"ಹೀಗೆ ಯಾವಾಗಲೂ ಚಿಂತೆ ಮಾಡಿಕೊಂಡಿದ್ದೇನು ಪ್ರಯೋಜನ? ಕಳೆದದ್ದು ಕಳೆಯಿತು ಅಂತ ಅಂದುಕೊಳ್ಳಬೇಕು. ನಾನು ಈಗ ಅಂದುಕೊಂಡಿರೋದು ನಾನು ಹೆತ್ತದ್ದು ಇಬ್ಬರನ್ನೇ ಅಂತ." ಶೇಖರ ಪಿಳ್ಳೆಗೆ ಅದು ಕೇಳಿಸಿರಬಹುದು. ಆದರೆ ಅದು ತಲೆಯೊಳಕ್ಕೆ ಪ್ರವೇಶಿಸಲಿಲ್ಲ. ಶೇಖರ ಪಿಳ್ಳೆ ತುಂಬಿದ ಕಣ್ಣುಗಳಿಂದ ಕೇಶವ ಪಿಳ್ಳೆಯ ಮುಖವನ್ನು ನೋಡುತ್ತ ಹೇಳಿದರು—"ಕ್ಷಮಿಸಪ್ಪಾ ಕ್ಷಮಿಸು. ಈ ಮುದುಕನನ್ನ ಕ್ಷಮಿಸಿಬಿಡು."

ಕೇಶವ ಪಿಳ್ಳೆ ಶೇಖರ ಪಿಳ್ಳೆಯನ್ನು ಸಮಾಧಾನಪಡಿಸಿದ. "ನೀವು ನನಗೆ ಯಾವ ತಪ್ಪೂ ಮಾಡಿಲ್ಲ."

ಹಾಗಲ್ಲ ಎನ್ನುವಂತೆ ಶೇಖರ ಪಿಳ್ಳೆ ತಲೆ ಅಲ್ಲಾಡಿಸಿದರು. ಗದ್ಗದ ಕಂಠದಿಂದ ಅವರು ಹೇಳಿದರು—"ನಿನ್ನ ಮುಖದ ಮೇಲೂ ಮಸಿ ಎರಚಿ ಅವಮಾನ ಮಾಡಿದಳು."

"ನೀವು ಅದನ್ನ ಅಷ್ಟಾಗಿ ಹಚ್ಚಿಕೊಂಡು ದುಃಖಿಸಬೇಡಿ."

ಶೇಖರ ಪಿಳ್ಳೆಗೆ ಒಂದು ಆಶೆಯಿತ್ತು. ಅವರು ಹೇಳಿದರು—"ನನಗೆ ಈ ಜನ್ಮದಲ್ಲಿ ಒಬ್ಬನೇ ಅಳಿಯ. ಅದು ನೀವು." ಶೇಖರ ಪಿಳ್ಳೆ ಮುಂದುವರಿಸಿದರು: "ಮತ್ತಾರೂ ಇಲ್ಲ. ನೀವು ತಿಂಗಳಿಗೊಂದು ಸಲ ಬಂದು ನನ್ನನ್ನು ಕಾಣಬೇಕು. ಅದು ಹೆಚ್ಚು ದಿನ ಬೇಕಾಗಿ ಬರೋದಿಲ್ಲ ಕಣಪ್ಪ. ನಿಮಗೆ ಎಷ್ಟೇ ಕೆಲಸದ ಗಡಿಬಿಡಿ ಇದ್ದರೂ ಅದನ್ನು ಮಾಡಬೇಕು. ನನಗೆ ಏನೂ ಕೊಡಬೇಡಿ. ಯಾವುದೂ ಬೇಡಿ. ನಾನು ಕಷ್ಟದಲ್ಲಿ ಕಳಿಯಬಲ್ಲೆ. ನನ್ನನ್ನು ಒಂದು ಸಲ ಕಂಡರೆ ಸಾಕು."

ಸ್ವಲ್ಪ ಹೊತ್ತು ಕಳೆದು ಆ ಮುದುಕ ಗಟ್ಟಿಯಾಗಿ ಅಳುತ್ತ ಹೇಳಿದರು—"ನೀವು ಇನ್ನೂ ಒಂದು ಕೆಲಸ ಮಾಡಿಕೊಡಬೇಕಪ್ಪ. ಒಬ್ಬ ಮುದುಕನ ಆಶೆ. ಅಂತ್ಯಕಾಲದಲ್ಲಿ ಈ ಮುದುಕ ಕಣ್ಣುಮುಚ್ಚುವಾಗ ಒಂದು ತೊಟ್ಟು ನೀರು ಈ ಬಾಯಿಗೆ ಹಾಕಬೇಕು. ಆ ದಿನ ನೀವೆಲ್ಲಿದ್ದರೂ ಓಡಿಬರಬೇಕು."

ಕುಳಿತು ಅಳುವುದಕ್ಕೆ ಶಕ್ತಿಯಿಲ್ಲದೆ ಶೇಖರ ಪಿಳ್ಳೆ ಒರಗಿ ಕುಳಿತುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದರು. ಕೇಶವ ಪಿಳ್ಳೆ ಅವರಿಗೆ ಆಸರೆಯಾಗಿ ಒರಗಿಸಿಕೊಂಡ.

ಕೇಶವ ಪಿಳ್ಳೆಗೆ ಏನಾದರೂ ಪ್ರಗತಿ ಉಂಟಾಗುವುದಿದ್ದರೆ ಅದಕ್ಕೆ ತಳಹದಿ ಹಾಕಿ ಕೊಟ್ಟದ್ದು ಶೇಖರ ಪಿಳ್ಳೆ. ಆ ದೊಡ್ಡ ಋಣಕ್ಕೆ ಪ್ರತಿಯಾಗಿ ಬೇಕಾದದ್ದು ಒಂದು ತೊಟ್ಟು ನೀರು. ಅವನು ಖಂಡಿತವಾಗಿಯೂ ಅದಕ್ಕೆ ಸಿದ್ಧನಾಗಿದ್ದ. ಪ್ರತಿಯಾಗಿ ಏನನ್ನೋ ತುಂಬ ಹಿಂದಿರುಗಿಸುವಂತಹ ಋಣ ಅವನದು. ಏನೆಲ್ಲ ಬೇಕಾಗಿತ್ತು? ಆಕಾಶದಲ್ಲಿ ಹರಡಿಕೊಂಡಿದ್ದ ಕಾರ್ಮೋಡಗಳು ಗಾಳಿಯಿಂದ ಎಲ್ಲ ಚದುರಿಹೋದಂತೆ ಎಲ್ಲವೂ ತಿಳಿಯಾಯಿತು. ಅಂದಿನಂತೆ ಮನಸ್ಸಮಾಧಾನ ಹಿಂದೆಂದೂ ಕೇಶವ ಪಿಳ್ಳೆಗೆ ಉಂಟಾಗಿರಲಿಲ್ಲ. ಅಬ್ಬ! ಅಬ್ಬ!

ನಡೆದು ಹೋಗುತ್ತಿದ್ದಾಗ ಅವನ ಕಿವಿಯಲ್ಲಿ ಕಿಟ್ಟುಮಾವನ ಮಾತುಗಳು ಪ್ರತಿಧ್ವನಿಸಿದುವು:

"ಅವಳು ಭಾಗ್ಯವತಿ."

ಮೈಗೆ ಕೊಳೆ ಅಂಟಿಕೊಂಡು, ಎಣ್ಣೆ, ಬೆವರು ಮುಂತಾದುವುಗಳಿಂದ ವಾಸನೆ ಹೊಡೆಯುತ್ತಿದ್ದ ಆ ಹೆಣ್ಣು, ನಾಣಿಕುಟ್ಟಿಯ ಗೆಳತಿ!

# [14]

## ನಾಲಗೆ ತುದಿಯಲ್ಲಿ ಭಾಗ್ಯ

ಅದು ವರೆಗೆ ವ್ಯವಹರಿಸದೆ ಇದ್ದಂತಹ ಫೈಲುಗಳು ಕೇಶವ ಪಿಳ್ಳೆಯ ಕೈಗೆ ಬರ ತೊಡಗಿದುವು. ಅವುಗಳಲ್ಲಿ ಹೆಚ್ಚು ಫೈಲುಗಳು ಸೆಕ್ರೆಟರಿಯೇಟ್‌ಗೆ ಹೋಗಿ ಬರು ವಂತಹವಲ್ಲ. ಅತ್ಯಂತ ಜರೂರಾದುವೂ, ತುಂಬ ರಹಸ್ಯವಾದುವೂ ಆಗಿರುತ್ತಿದ್ದುವು. ಆ ಫೈಲುಗಳನ್ನು ಹೇಗೆ ಸಿದ್ಧಪಡಿಸಬೇಕೆಂಬುದು ಕೇಶವ ಪಿಳ್ಳೆಗೆ ತಿಳಿಯದು. ಅಸಿಸ್ಟೆಂಟ್ ಸೆಕ್ರೆಟರಿಯವರೆಗಿದ್ದ ನೋಟ್‌ಗಳನ್ನು ಅರ್ಥಮಾಡಿಕೊಂಡು ಚೀಫ್ ಸೆಕ್ರೆಟರಿಗೆ ತಿಳಿಸ ಬೇಕಾದದ್ದು ಆತನ ಇತ್ತೀಚಿನ ಕೆಲಸ. ಆ ಫೈಲುಗಳಲ್ಲಿದ್ದ ವಿಷಯಕ್ಕೂ ನೋಟುಗಳಿಗೂ ವ್ಯತ್ಯಾಸವಿದ್ದಲ್ಲಿ ಅದನ್ನು ಅವರ ಗಮನಕ್ಕೆ ತರುವ ಅಧಿಕಾರವೂ ಅವನಿಗಿತ್ತು. ಅಷ್ಟರ ಮಟ್ಟಿಗೆ ಅವನು ಒಂದು ನಿಂತದ್ದರಲ್ಲಿ ಒಂದು ರೀತಿಯ ವಿಶ್ವಾಸ ಮೂಡಿತು. ಆ ಸ್ಥಿತಿ ಯಲ್ಲಿ ಕೇಶವ ಪಿಳ್ಳೆಯ ಇಷ್ಟಾನಿಷ್ಟಗಳ ಅಭಿಪ್ರಾಯಗಳ ನೆಳಲು ಆ ಆರ್ಡರ್‌ಗಳಲ್ಲಿರು ತ್ತಿತ್ತು. ಆ ದೃಷ್ಟಿಯಲ್ಲಿ ಸೆಕ್ರೆಟರಿಯ ಶಿಫಾರಸ್ಸುಗಳನ್ನು ತಳ್ಳಿಹಾಕಲಾದ ಸಂದರ್ಭಗಳು ಒಂದಲ್ಲ ಅನೇಕ. ಆದರೆ ಇತ್ತೀಚಿನ ಪ್ರತ್ಯೇಕ ಫೈಲುಗಳಿಗೆ ಸಂಬಂಧಿಸಿದಂತೆ ಕೇಶವ ಪಿಳ್ಳೆಗೆ ಯಾವ ತಲೆಬುಡವೂ ತಿಳಿಯುತ್ತಿರಲಿಲ್ಲ.

ಜವಾಬ್ದಾರಿಯ ಆಡಳಿತ ಅಗತ್ಯವಾಗಿತ್ತು. ಸ್ಟೇಟ್ ಕಾಂಗ್ರೆಸ್ ತನ್ನ ಗುರಿಯನ್ನು ಸಾಧಿಸುವುದಕ್ಕಾಗಿ ಬಲವಾದ ಹೋರಾಟವನ್ನು ಪ್ರಾರಂಭಿಸಿತ್ತು. ಸರ್ಕಾರ ಆ ಹೋರಾ ಟವನ್ನು ಎದುರಿಸುತ್ತಲೂ ಇತ್ತು. ಅದಕ್ಕೆ ಸಂಬಂಧಪಟ್ಟ ಫೈಲುಗಳು ಅವು. ಆ ಫೈಲು ಗಳನ್ನು ಅದೇ ರೀತಿಯಲ್ಲಿ ಚೀಫ್ ಸೆಕ್ರೆಟರಿಯ ಮುಂದೆ ಇಡುವುದಲ್ಲದೆ, ಬೇರೆ ಏನು ಮಾಡಬೇಕು ಎಂದು ಕೇಶವ ಪಿಳ್ಳೆಗೆ ತಿಳಿಯದು. ಆ ಫೈಲುಗಳನ್ನು ಅರ್ಥಮಾಡಿ ಕೊಳ್ಳಲು ಕೇಶವ ಪಿಳ್ಳೆ ಶ್ರಮಿಸಿದ. ಆದರೆ ಏಷ್ಟೋ ವಿಷಯ ತಿಳಿಯುತ್ತಿದ್ದುವು ಎಂದಲ್ಲದೆ ಯಾವುದೂ ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಏನು ಮಾಡಬೇಕು ಎನ್ನು ವುದು ಚೀಫ್ ಸೆಕ್ರೆಟರಿಗೂ ನಿಶ್ಚಯವಿದ್ದಂತೆ ತೋರುತ್ತಿರಲಿಲ್ಲ. ಫೈಲು ಬಿಡಿಸಿಬಿಟ್ಟು ಕೇಶವ ಪಿಳ್ಳೆ ಮಾತಾಡದೆ ನಿಂತುಕೊಳ್ಳುತ್ತಿದ್ದ.

"ಇದೇನಿದು?"

ಚೀಫ್ ಸೆಕ್ರೆಟರಿಯ ಪ್ರಶ್ನೆ.

ಮೊದಲು ಅಂತಹ ಪ್ರಶ್ನೆಯೇ ಏಳುತ್ತಿರಲಿಲ್ಲ.

ಫೈಲ್ ಬಿಡಿಸುವುದರೊಳಗೆ ಆ ಫೈಲಿನ ಚರಿತ್ರೆಯನ್ನೂ ಒಂದೊಂದು ನೋಟು ಗಳನ್ನೂ ಸಾರಾಂಶವಾಗಿ ಹೇಳುತ್ತಿದ್ದದ್ದು ಪದ್ಧತಿ. ಅನಂತರ ವಿನಯದಿಂದ ಸ್ವರವನ್ನು

ತಗ್ಗಿಸಿ ಹೀಗೆ ಮಾಡಿದರೂ ಸಾಕು ಎನ್ನುವ ವರೆಗೆ ಹೇಳುತ್ತಿದ್ದುದುಂಟು. ಅದೊಂದು ಕಷ್ಟವಾಗಿ ತೋರಿದಾಗ ಚೀಫ್ ಸೆಕ್ರೆಟರಿಯಿಂದ ಈಗ ಪುನಃ ಒಂದು ಬೇಸರದ ಪ್ರಶ್ನೆ.

"ಇದೇನು ಅಂತ?"

ಕೇಶವ ಪಿಳ್ಳೆಗೆ ಏನು ಹೇಳಲೂ ತೋರಲಿಲ್ಲ. ಫೈಲ್ ನೋಡಿದ್ದ. ಆದರೆ ಏನು ಹೇಳಬೇಕೆಂಬುದು ತಿಳಿಯಲಿಲ್ಲ. ಆದರೂ ಕೇಶವ ಪಿಳ್ಳೆ ಹೇಳಿದ:

"ಕಾಂಗ್ರೆಸ್ ವರ್ಕಿಂಗ್ ಕಮಿಟಿ ಮೆಂಬರರ ಹಳೆಯ ಚರಿತ್ರೆ." ಚೀಫ್ ಸೆಕ್ರೆಟರಿ ಕೇಳಿದರು:

"ಅದಕ್ಕೆ?"

ಕೇಶವ ಪಿಳ್ಳೆಯ ಗಂಟಲು ಕಟ್ಟಿತು.

ಚೀಫ್ ಸೆಕ್ರೆಟರಿಗೆ ಸಿಟ್ಟು ಬಂದಿತು. ಅವರು ಬಯ್ದರು:

"ನಿಮ್ಮನ್ನು ಇಲ್ಲಿ ನೇಮಿಸಿರೋದು ಯಾಕೆ?"

ಅವರು ಕೇಶವ ಪಿಳ್ಳೆಯನ್ನು ಒಮ್ಮೆ ತೀಕ್ಷ್ಣವಾಗಿ ನೋಡಿದರು. ಕೇಶವ ಪಿಳ್ಳೆ ಬೆವತುಹೋದ.

ಏನು ಸಮಾಧಾನ ಹೇಳುವುದು? ಈ ಫೈಲುಗಳು ಅರ್ಥವಾಗುವುದಿಲ್ಲವೆನ್ನುವ ಸತ್ಯವನ್ನು ಹೇಳಬೇಕೆ? ಆದರೆ ಅದನ್ನು ಹೇಳಿದರೆ ಈ ಕೆಲಸಕ್ಕೆ ಯೋಗ್ಯನಲ್ಲವೆಂದೇ ಅದರ ಅರ್ಥ. ಯಜಮಾನರು ನಿಜವಾಗಿಯೂ ಕೋಪಗೊಂಡಿದ್ದರು. ಅವರು ಆ ದಪ್ಪ ಫೈಲಿನ ಪೇಪರುಗಳನ್ನು ತಿರುಗಿಸಿ ತಿರುಗಿಸಿ ನೋಡುತ್ತಿದ್ದರು. ಸಿಟ್ಟನ್ನು ಸಹಿಸಲಾರದೆ ತಿರುಗಿ ಕೇಳಿದರು:

"ಹಾಳಾದ್ದು ! ಇದೆಂಥಾದ್ದೊಂತ? ನೀನ್ಯಾಕೆ ಕಂಬದ ಹಾಗೆ ನಿಂತಿದ್ದೀಯೆ?"

ಕೇಶವ ಪಿಳ್ಳೆ ನಡುಗಿಹೋದ. ಆ ನಡುಗುವುದರ ಮಧ್ಯೆ ಒಂದೆರಡು ಮಾತುಗಳು ತನಗೆ ತಿಳಿಯದಂತೆಯೇ ಹೊರಗೆ ಬಂದುವು.

"ಕಾಂಗ್ರೆಸ್ ಪ್ರೆಸಿಡೆಂಟ್ ಜಡ್ಜಿ ಉದ್ಯೋಗವನ್ನು ಹಲವು ಸಲ ಅಪೇಕ್ಷಿಸಿದ್ದಾರೆ. ಮೆಂಬರರಲ್ಲಿ ಸಾಲಕ್ಕೂ ಉದ್ಯೋಗಕ್ಕೂ ಅರ್ಜಿ ಹಾಕಿಕೊಂಡಿದ್ದಾರೆ. ಅದೆಲ್ಲ ಇದೆ."

ಚೀಫ್ ಸೆಕ್ರೆಟರಿ ಗರ್ಜಿಸಿದರು.

ಹೌದು, ಗರ್ಜಿಸಿದರು.

"ಅದಕ್ಕೆ?"

ಆಗಲೂ ಕೇಶವ ಪಿಳ್ಳೆ ಭಯದಿಂದ ಒಂದು ಉತ್ತರವನ್ನು ಹೊರಗೆ ಹಾಕಿದ:

"ನೋಟ್ ಹಾಕಿಲ್ಲ !"

ಕೇಶವ ಪಿಳ್ಳೆಯ ಕೆಲಸವನ್ನು ಸ್ಪಷ್ಟಪಡಿಸುವ ಉತ್ತರವಾಗಿತ್ತು ಅದು. ಆದರೆ ಯಜಮಾನರಿಗೆ ಅದು ಅರ್ಥವಾಗಲಿಲ್ಲ.

ಚೀಫ್ ಸೆಕ್ರೆಟರಿ ಅನಂತರವೂ ಪೇಪರ್ ತಿರುವಿಹಾಕುತ್ತಿದ್ದರು. ಅವರು ಪೇಪರ್ ತಿರುವಿಹಾಕುತ್ತಿದ್ದರು ಅಷ್ಟೆ.

ಮುದುರಿಕೊಂಡಿದ್ದ ಪೇಪರುಗಳಿದ್ದ ಆ ಫೈಲನ್ನು ತೆಗೆದು ಕೆಳಗೆ ಹಾಕಿದರು. ಕೇಶವ ಪಿಳ್ಳೆ ಅದನ್ನು ತೆಗೆದಿಟ್ಟ.

ಮತ್ತೊಂದು ಫೈಲನ್ನು ಕೈಗೆತ್ತಿಕೊಂಡು ಸಾಹೇಬರು ಕೇಳಿದರು:

"ಹ್ಞಂ, ಇದೇನು?"

ಕೇಶವ ಪಿಳ್ಳೆಗೆ ಅದೇನು ಎನ್ನುವುದು ಗೊತ್ತಿತ್ತು. ಅದನ್ನು ಅರ್ಥಮಾಡಿಕೊಂಡಿದ್ದ. ಅದು ಸರಿಯಾಗಿ ಬರಬೇಕಾದ ಮಾರ್ಗವಲ್ಲಿಯೇ ಅಧಿಕಾರಿಗಳ ನೋಟುಗಳೊಡನೆ ಬಂದದ್ದು. ಆದರೆ ಆ ಗೊಂದಲ ಮನಸ್ಸಿನ ಸ್ಥಿತಿಯಲ್ಲಿ ಹೇಳಲಾಗಲಿಲ್ಲ. ಶಬ್ದಗಳೇ ದೊರೆಯುತ್ತಿರಲಿಲ್ಲ. ವಿಷಯಗಳೂ ಮರೆತು ಹೋದಂತಿದ್ದುವು.

ಚೀಫ್ ಸೆಕ್ರೆಟರಿ ಕೇಳಿದರು:

"ನೀನು ಇಲ್ಲಿ ಏನು ಮಾಡ್ತಿದ್ದೆ?"

ಆಗ ಒಂದು ಉತ್ತರ ಹೊರಗೆ ಬಂದಿತು: "ಅದು ಒಂದು ಗೇಣಿಗೆ ಕೊಟ್ಟದ್ದರ ವಿಷಯ. ಮೀನಚ್ಚಿಲದ ಒಬ್ಬ ಕಾಂಗ್ರೆಸ್‌ನವನು ತುಂಬ ಹಣ ಸರ್ಕಾರಕ್ಕೆ ಕೊಡಬೇಕಾಗಿತ್ತು. ಕೂಡಲೇ ಅದನ್ನು ಪೂರ್ತಿ ಸಂಗ್ರಹಿಸಬೇಕೆಂದು ಭಕ್ತಿವಿಲಾಸದಿಂದ ನಿರ್ದೇಶಿಸಿದ ಪ್ರಕಾರ ಕ್ರಮಗಳು ಶೀಘ್ರಗತಿಯಲ್ಲಿ ನಡೆಯುತ್ತಿವೆ."

ವಿವರವಾಗಿ ತಿಳಿಸಲು ಕೇಶವ ಪಿಳ್ಳೆಗೆ ಸಾಧ್ಯವಾಯಿತು. ಅವನು ಹೇಳಿದ:

"ಹೀಗೆ ಕಾಂಗ್ರೆಸ್‌ನವರ ಹೆಸರಿನಲ್ಲಿ ಈಗ ಮೂರು ನಾಲ್ಕು ಕೇಸುಗಳಿವೆ"

ಆ ಫೈಲುಗಳಿಗೆ ಆರ್ಡರ್ ಪಾಸು ಮಾಡಲು ಚೀಫ್ ಸೆಕ್ರೆಟರಿಗೆ ಕಷ್ಟವಾಗಲಿಲ್ಲ. ಸಾಹೇಬರು ಪ್ರಸನ್ನರಾದಂತೆ ತೋರಿತು. ಸಿಟ್ಟು ಇಳಿಯಿತು. ಆದರೂ ಅವರು ಪೂರ್ತಿ ಸಮಾಧಾನಗೊಂಡಿದ್ದಂತೆ ತೋರಲಿಲ್ಲ. ಅದರಿಂದಲೇ ಇರಬೇಕು ಅವನು ತೃಪ್ತನಾಗದೆ ಇದ್ದದ್ದು.

ಮತ್ತೊಂದು ಫೈಲ್! ನಡುಗುವ ಬೆರಳುಗಳಿಂದ ಕಟ್ಟನ್ನು ಬಿಚ್ಚಿದ್ದು. ಆದರೆ ಏನಾದರೂ ಒಂದು ಮಾತು ಹೇಳಬಹುದಾದಂತಹ ಮನಸ್ಥೈರ್ಯ ಕೇಶವ ಪಿಳ್ಳೆಗೆ ಈಗ ಇತ್ತು. ಪದ್ಧತಿಯಂತೆ ಚೀಫ್ ಸೆಕ್ರೆಟರಿ ಕೇಳಿದರು:

ಕೇಶವ ಪಿಳ್ಳೆ ಹೇಳಿದ:

"ಆ ಚಳುವಳಿಕಾರರಾದ ಬ್ಯಾಂಕಿನವರಿಗೆ ಸಂಬಂಧಿಸಿದ್ದು. ಅವರೀಗ ಕಾಂಗ್ರೆಸ್ ನವರು."

"ಅದಕ್ಕೆ?"

ಅದಕ್ಕೆ ಉತ್ತರ ಹೇಳಬೇಕಾಗಿರಲಿಲ್ಲ. ಆದರೂ ಕೇಶವ ಪಿಳ್ಳೆ ಹೇಳಿದ:

"ಆ ಬ್ಯಾಂಕಿನ ಡೈರೆಕ್ಟರುಗಳು ಬ್ಯಾಂಕಿನ ಹಣವನ್ನೆಲ್ಲ ಅಪಹರಿಸಿದ್ದಾರೆ ಎಂದು

ರಿಪೋರ್ಟ್ದೆ."

ಚೀಫ್ ಸೆಕ್ರೆಟರಿ "ಹ್ಞು" ಎಂದರು ಅಷ್ಟೆ.

ಅವಕ್ಕೆ ಏನು ಮಾಡಬೇಕು ಎನ್ನುವ ಪ್ರಶ್ನೆ ಏಳಲಿಲ್ಲ.

ಹಾಗೆ ಯಜಮಾನರಿಗೆ ಯಾವ ರೀತಿಯಲ್ಲೂ ಸಮಾಧಾನವಾಗಿಲ್ಲವೆನ್ನುವ ರೀತಿಯಲ್ಲಿ ಕೇಶವ ಪಿಳ್ಳೆ ಪಾರ್ಕ್ ವ್ಯೂವಿನಿಂದ ಹೋದದ್ದು. ಅದು ಮಾತ್ರ ಅಲ್ಲ, ಎಷ್ಟೋ ದಿನಗಳಿಂದ ಈ ಹಾಳು ಕಾಂಗ್ರೆಸ್ಸಿನವರಿಂದಾಗಿ ಕೇಶವ ಪಿಳ್ಳೆ ಕಷ್ಟಪಡುತ್ತಿದ್ದ. ಬಹುಶಃ ಅವರೂ ಕಷ್ಟಪಡುತ್ತಿರಬಹುದೆಂದು ಕೇಶವ ಪಿಳ್ಳೆಗೂ ಅನ್ನಿಸಿತು.

ಆ ವಿಷಮತೆಯಿಂದ ಅವರಿಗೆ ಸಿಟ್ಟು ಬಂದದ್ದಾಗಿರಬೇಕು.

ಅಂದು ರಾತ್ರಿ ಕೇಶವ ಪಿಳ್ಳೆ ಬಹಳ ಹೊತ್ತು ನಿದ್ದೆ ಮಾಡಲಿಲ್ಲ. ಸ್ಥಾನದಿಂದ ತಾನು ಕೆಳಗಿಳಿಯುತ್ತಿದ್ದಂತೆ ಅವನಿಗೆ ತೋರಿತು. ಆಗಾಗ ಸದಾ ಅಸಮಾಧಾನ ವುಂಟಾಗುತ್ತಿದೆ. ಒಂದು ದಿನ ಸಾಮರ್ಥ್ಯ ಸಾಲದು ಎಂದು ಅವನನ್ನು ಬದಲಾಯಿಸಿದರೂ ಬದಲಾಯಿಸಬಹುದಲ್ಲವೇ! ಅದೂ ಸಂಭವಿಸಬಹುದು. ಹಾಗೆ ಬದಲಾಯಿಸಿದರೆ ಕೇಳುವುದಕ್ಕೆ ಯಾರಿದ್ದಾರೆ? ಹೇಳುವುದಕ್ಕೆ ಯಾರಿದ್ದಾರೆ? ಬಂದ ರೀತಿಯಲ್ಲೇ ಇಳಿದುಹೋಗಬೇಕಾಗುತ್ತದೆ. ಅವರನ್ನೂ ಸಾಮರ್ಥ್ಯ ಸಾಲದು ಎನ್ನುವ ಕಾರಣದಿಂದ ದಿವಾನರು ಬದಲಾಯಿಸಿದರು ಎಂದೂ ಆಗಬಹುದು. ಒಂದು ಕಾಲದಲ್ಲಿ ಎಲ್ಲವೂ ಭದ್ರವಾಯಿತು ಎಂದು ಕೇಶವ ಪಿಳ್ಳೆ ಭರವಸೆ ಹೊಂದಿದ್ದ. ಆ ಭರವಸೆಯ ತಳಹದಿ ಅಲುಗಾಡುತ್ತಿತ್ತು. ಬಹುಶಃ ಈ ಕೆಲಸ ತನಗೆ ಸಾಧ್ಯವಾಗಲಾರದು ಎನ್ನಿಸಿತು. ಅರ್ಹತೆಯಿಲ್ಲದ ಸ್ಥಾನದಲ್ಲಿ ಹೋಗಿ ಕುಳಿತದ್ದಾಗಿರಬೇಕು. ಡಿಗ್ರಿಯ ಬಲ ಇಲ್ಲದ ಹಾಗೆ ಮಾಡಿದವನು ಎಂದ ಪ್ರಸಾದನ ಮಾತುಗಳನ್ನು ಆತ ಜ್ಞಾಪಿಸಿಕೊಂಡ. ಡಿಗ್ರಿ ತೆಗೆದುಕೊಂಡವನಾದರೂ ಅವರ ಯೋಗ್ಯತೆಯೂ ಮಹತ್ವವೂ ಇಲ್ಲದೇ ಹೋಗಿರಬಹುದು. ಆ ಹಳೆಯ ಕ್ಲಾರ್ಕಾಗಿ ಮಾತ್ರ ಕಳೆಯಬೇಕಾದ ಸಾಮರ್ಥ್ಯ ತನಗೆ ಇರಬಹುದೇನೋ!

ಇಲ್ಲಿಂದ ಹೋದರೆ ಪುನಃ ಸೆಕ್ರೆಟರಿಯೇಟ್‌ಗಿರಬಹುದು. ಮತ್ತೊಂದಾದರೂ ಅಲ್ಲಿಂದ ಮೇಲೇರಲು ಸಾಧ್ಯವೆ? ಸಂದರ್ಭ ದೊರೆಯುವುದು ಒಂದೇ ಸಲ. ಇನ್ನು ಮುಂದೆ ತಂಗಮ್ಮನೂ ಇಲ್ಲ. ಶೇಖರ ಪಿಳ್ಳೆಯೂ ಇಲ್ಲ. ಮತ್ತೊಬ್ಬ ತಂಗಮ್ಮನ ಜೊತೆಯಲ್ಲಿ ಮೇಲೆ ಬರಲು ಸಾಧ್ಯವಿಲ್ಲ. ಒಂದು ಹೊರ ಅಪರಾಧವನ್ನು ಹೊತ್ತುಕೊಂಡು ಮುಖ ಕಪ್ಪು ಮಾಡಿಕೊಂಡು ಅಲ್ಲಿಗೆ ಹೋಗಬೇಕು. ಆದರೂ ಹೇಗೆ ಹಿಂದಿನ ಸ್ಥಾನಕ್ಕೆ ಹೋಗುವುದು? ಆದರೆ ಬದುಕಿರುವುದಕ್ಕಾಗಿ ಹೋಗಲೇಬೇಕು. ಭವಿಷ್ಯವನ್ನು ಕುರಿತು ಯಾವ ಸ್ವಪ್ನವನ್ನೂ ಕಾಣದೆ ಅಲ್ಲಿಯೇ ಇರಬಹುದು. ಇಲಿ, ಮತ್ತೆ ಹೆಣ್ಣು ಇಲಿಯೇ ಆಗಬೇಕು. ಆ ಅವಸ್ಥೆಯನ್ನು ಕೇಶವ ಪಿಳ್ಳೆ ಊಹಿಸಿದ. ಆ ಸ್ಥಿತಿಯನ್ನು ಅಷ್ಟೊಂದು ಆಲೋಚಿಸಬೇಕೆ? ಆ ನೆಲೆಯ ವರೆಗೆ ಆಲೋಚಿಸಬೇಕಾದ ಅವಸ್ಥೆಗೆ ಎಂದೂ ತಾನು ತಲುಪಿಲ್ಲ ಎಂದು ಕೇಶವ ಪಿಳ್ಳೆಗೆ ಅನ್ನಿಸಿತು.

ಹಿಡಿದದ್ದು ಕೈಬಿಟ್ಟು ಹೋಗುತ್ತದೆ ಎಂದಲ್ಲವೆ? ಕೇಶವ ಪಿಳ್ಳೆಯ ಆಲೋಚನೆ ಅಲ್ಲಿಗೆ ಮುಟ್ಟಿದಾಗ ತನ್ನನ್ನು ಆ ರೀತಿಯಲ್ಲಿ ಚೀಫ್ ಸೆಕ್ರೆಟರಿಗೂ ಅವರ ಹೆಂಡತಿಗೂ ಕಳುಹಿಸಲು ಸಾಧ್ಯವೇ ಎನ್ನುವ ಪ್ರಶ್ನೆ ಸಹಜವಾಗಿ ಮೂಡಿತು. ಇಲ್ಲ, ಅದಕ್ಕೆ ಅವರಿಗೆ ಧೈರ್ಯ ಬರುವುದಿಲ್ಲ. ಧೈರ್ಯ ವಹಿಸಲು ಸಾಧ್ಯವಿಲ್ಲ. ಹಿಂದಿರುಗಿಸುವ ಆರ್ಡರ್ ಪಾಸ್ ಮಾಡಿ, ಸೈನು ಹಾಕುವಾಗ ಒಂದು ನಿಮಿಷ ಅವರು ಆಲೋಚಿಸುವುದಿಲ್ಲವೆ? ಬೆರಳುಗಳು ನಿಂತುಹೋಗುವುದಿಲ್ಲವೇ? ಅವರ ಹೆಂಡತಿಗೆ ಗೊತ್ತಾದರೆ ಅವರೂ ಇನ್ನೂ ಒಂದು ಸಲ ನೋಡೋಣ ಎಂದು ಹೇಳದೇ ಇರುತ್ತಾರೆಯೆ? ಹಾವು ಚಿಕ್ಕದು ಎಂದು ಅದನ್ನು ನೋಯಿಸಿದರೆ ಅದು ದ್ವೇಷ ಸಾಧಿಸದೇ ಇರುವುದೇ? ಈ ನೀತಿಸಾರ ವಾಕ್ಯವನ್ನು ತಿಳಿಯದವರಿಲ್ಲವೇ?

ಚೀಫ್ ಸೆಕ್ರೆಟರಿಯವರನ್ನು ಕುರಿತು ಎಷ್ಟೋ ಕಥೆಗಳು ಗೊತ್ತಿದ್ದದ್ದರಿಂದ ಕೇಶವ ಪಿಳ್ಳೆ ಜಾಗೃತನಾದ. ಅವನಿಗೆ ಒಂದು ರೀತಿಯ ಧೈರ್ಯವುಂಟಾಯಿತು. ಹಿಡಿದದ್ದನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕು ಅನ್ನಿಸಿತು. ಚೀಫ್ ಸೆಕ್ರೆಟರಿಗೆ ತನ್ನನ್ನು ಹಾಗೆ ಕಳುಹಿಸುವುದಕ್ಕೆ ಧೈರ್ಯ ಬರುತ್ತದೆಯೆ? ಎನ್ನುವ ವರೆಗೆ ಕೇಶವ ಪಿಳ್ಳೆ ನೆನಸಿಕೊಂಡ. ಊರಿಡೀ ಕಾಂಗ್ರೆಸ್ಸಿನವರು ಆಡಳಿತವನ್ನು ಕುರಿತು ದೋಷಾರೋಪಣೆ ಮಾಡುತ್ತಿದ್ದಾರೆ. ದಿವಾನರು ಮತ್ತಿತರರ ಲಂಚ–ಸ್ವಾರ್ಥಬುದ್ಧಿಗಳನ್ನು ಕುರಿತು ಪ್ರಧಾನವಾಗಿ. ಅವರು ಅರಮನೆಯನ್ನು ಕೂಡ ಬಿಡುವುದಿಲ್ಲ. ತಿಳಿದ ರಹಸ್ಯಗಳನ್ನು ಅವರ ಕಿವಿಯಲ್ಲಿ ಹಾಕಿದರೆ...... ಕೇಶವ ಪಿಳ್ಳೆಗೆ ಅಲ್ಲಿಯ ವರೆಗೆ ಇಲ್ಲದಿದ್ದ ಒಂದು ಸಾಮರ್ಥ್ಯವುಂಟಾಯಿತು. ಪ್ರತೀಕಾರ ಮಾರ್ಗದ ಮೂಲಕ ಕಾರ್ಯ ಸಾಧಿಸುವ ಸಾಮರ್ಥ್ಯ! ಮರುಕ್ಷಣದಲ್ಲಿ ಕೇಶವ ಪಿಳ್ಳೆ ತನಗೆ ತಾನೇ ಹೇಳಿಕೊಂಡ: "ಅಲ್ಲಿಂದ ಹಿಂದಕ್ಕೆ ಕಳುಹಿಸುವುದಿದ್ದರೆ ಕಳಿಸಲಿ." ಅವನು ಆ ಮಾತನ್ನು ಸ್ವಲ್ಪ ಗಟ್ಟಿಯಾಗಿ ಹೇಳಿದ. ತಕ್ಷಣ ಅದನ್ನು ಯಾರಾದರೂ ಕೇಳಿರಬಹುದೇ ಎಂದು ಅವನು ಭಯಪಟ್ಟು ಸುತ್ತಲೂ ನೋಡಿದ. ಇಲ್ಲ, ಆ ರೂಮಿನಲ್ಲಿ ಬೇರೆ ಯಾರೂ ಇಲ್ಲ. ಪಕ್ಕದ ರೂಮಿನ ವರೆಗೆ ಈ ಮಾತು ಕೇಳಿಸಿರಬಹುದೆ? ರಾತ್ರಿ ಎರಡು ಗಂಟೆ, ಎಲ್ಲರೂ ಮಲಗಿದ್ದಾರೆ.

ಆದರೆ ಅದಕ್ಕೂ ಭವಿಷ್ಯಗಳಿವೆ. ಮುಂದೆ ಏನು ಮಾಡಬೇಕು ಎನ್ನುವ ಆಲೋಚನೆಗಳು ಒಂದೊಂದಾಗಿ ಕೇಶವ ಪಿಳ್ಳೆಯ ಬುದ್ಧಿಗೆ ಹೊಳೆದುವು. ಆ ಪ್ರತೀಕಾರ ದ್ವೇಷವನ್ನು ತರುತ್ತದೆ. ಯಾರಾದರೂ ಮೇಲಧಿಕಾರಿ ಅವನನ್ನು ನಂಬಿಯಾನೆ? ಭವಿಷ್ಯದಲ್ಲಿ ಅಂತಹ ಸಂದರ್ಭ ಬಂದೀತೆ? ಕೆಲಸವೇ ಇಲ್ಲವೆಂದೂ ಆಗಬಹುದು. ಮೇಲಧಿಕಾರಿಗೆ ಕೆಳಗಿನ ನೌಕರನನ್ನು ಹಿಂದಕ್ಕೆ ಕಳುಹಿಸುವುದು ಅಷ್ಟೊಂದು ಸುಲಭವೆ?

ಹಾಳಾದ್ದು ಈ ಕಾಂಗ್ರೆಸ್ಸಿನವರು ತಂದೊಡ್ಡಿದ ತೊಂದರೆ. ಅವರು ಈ ಗೊಂದಲ ಎಬ್ಬಿಸದೇ ಇದ್ದಿದ್ದರೆ ಯಾವ ತೊಂದರೆಯೂ ಇಲ್ಲದೆ ಎಲ್ಲವೂ ಸರಿಯಾಗಿ ನಡೆಯುತ್ತಿತ್ತು. ಎದುರಿಗೆ ಸ್ಪಷ್ಟವಾಗಿ ಕಾಣುವ ಮಾರ್ಗದ ಮೂಲಕ ಸುಗಮವಾಗಿ ಮುಂದೆ

ಹೋಗಬಹುದಾಗಿತ್ತು. ಈ ತೊಂದರೆಗಳು ಬದುಕನ್ನು ಎಲ್ಲಿಗೆ ತೆಗೆದುಕೊಂಡು ಹೋಗಿಬಿಡುವುವೋ ಏನೋ !

ಈ ಕಾಂಗ್ರೆಸ್‌ನವರಿಗೆ ಬೇಕಾದದ್ದೇನು ಎಂದು ಕೇಶವ ಪಿಳ್ಳೆಗೆ ಅರ್ಥವಾಗುತ್ತಿಲ್ಲ. ಉತ್ತರ ಇಂಡಿಯದಲ್ಲಿ ಗಾಂಧೀಜಿಯ ನೇತೃತ್ವದಲ್ಲಿ ಸ್ವಾತಂತ್ರ್ಯ ಸಮರ ನಡೆಯುತ್ತಿದೆ. ತಂದೆ ಮತ್ತು ಕಿಟ್ಟುಮಾವನಂತೆ ವಯಸ್ಸಾದವರು ಅದಕ್ಕೆ ವಿರೋಧವಾಗಿ ಮಾತಾಡು ವುದನ್ನು ಕೇಶವ ಪಿಳ್ಳೆ ಕೇಳಿಸಿಕೊಂಡಿದ್ದ. ಆದರೂ ಪರದೇಶದವರು ನಮ್ಮನ್ನು ಆಳ ಬೇಕು ಎನ್ನುವ ವಿಷಯ ಕೇಶವ ಪಿಳ್ಳೆಗೂ ಇಷ್ಟವಿಲ್ಲ. ಇಂಗ್ಲೀಷಿನವರು ಇಂಡಿಯವನ್ನು ಬಿಟ್ಟು ಹೋಗಲೇಬೇಕು. ಆ ಹೋರಾಟದ ಉದ್ದೇಶವನ್ನು ಕೇಶವ ಪಿಳ್ಳೆ ಅರ್ಥಮಾಡಿ ಕೊಳ್ಳಬಲ್ಲ. ಆದರೆ ತಿರುವನಂತಪುರದ ಕಾಂಗ್ರೆಸ್ಸಿನವರು ಹೇಳುವುದು ಕೇಶವ ಪಿಳ್ಳೆಗೆ ಸರಿಯಾಗಿ ಅರ್ಥವಾಗುವುದಿಲ್ಲ. ಮಹಾರಾಜರ ಅಧಿಕಾರದೊಂದಿಗೆ ಜವಾಬ್ದಾರಿ ಆಡಳಿತ ಸರಕಾರ ಬರಬೇಕು ಎಂದು. ಆಗ ರಾಜರು ಇರುವುದರಿಂದ ಅವರಿಗೆ ತೊಂದರೆ ಯಿಲ್ಲ. ದಿವಾನರಿರುವುದು ಕಾಂಗ್ರೆಸ್ಸಿಗೆ ಇಷ್ಟವಿಲ್ಲ. ಹಾಗಿದ್ದಲ್ಲಿ ಅದನ್ನು ಅವರು ನೇರ ವಾಗಿ ಹೇಳಿದರ ಆಗುವುದಿಲ್ಲವೆ? ನೇರವಾಗಿ ಹೇಳಿದರೆ ಮಹಾರಾಜರು ಅದನ್ನು ಕೇಳಿಸಿಕೊಳ್ಳದೆ ಇರುವುದಿಲ್ಲ. ದಿವಾನರನ್ನು ಹಿಂದಕ್ಕ ಕಳುಹಿಸದಿರುತ್ತಾರೆಯೆ? ಅದನ್ನೂ ಅಷ್ಟೊಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಅರಮನೆಯಲ್ಲೂ ಭಕ್ತಿ ವಿಲಾಸವನ್ನು ಕಡೆಗಣಿಸುವ ಒಂದು ಘಟನೆಯುಂಟಾಗಿತ್ತು. ಕೇಶವ ಪಿಳ್ಳೆಗೆ ಅದು ನೆನಪಾಯಿತು. ಅರಮನೆಯ ಒಪ್ಪಿಗೆ ಬೇಕಾಗಿದ್ದ ಒಂದು ವಿಷಯ ಭಕ್ತಿವಿಲಾಸದ ಒಪ್ಪಿಗೆಯನ್ನು ಮಾತ್ರ ಪಡೆದು ಬಂದಿತು. ಕರ್ತವ್ಯ ನಿಷ್ಠೆಯುಳ್ಳ ಚೀಫ್ ಸೆಕ್ರೆಟರಿ ಆ ವಿಷಯವನ್ನು ದಿವಾನರ ಗಮನಕ್ಕೆ ತಂದರು. ಅದಕ್ಕೆ ಚೀಫ್ ಸೆಕ್ರೆಟರಿಗೆ ದಿವಾನರು ಕಟುವಾದ ಆಜ್ಞೆ ವಿಧಿಸಿದರು. ಚೀಫ್ ಸೆಕ್ರೆಟರಿ ಭಯಪಟ್ಟು ನಡುಗಿಹೋದರು. ಪದ್ಧತಿಯನ್ನು ತಪ್ಪಿಸಿ ಆ ಕೆಲಸವನ್ನು ಮಾಡಿದ್ದು ಇಂದಿಗೂ ಚೀಫ್ ಸೆಕ್ರೆಟರಿಯ ನೆನಪಿ ನಲ್ಲಿ ಉಳಿದಿದೆ.

ಬಹುಶಃ ಮಹಾರಾಜರಿಗೆ ದಿವಾನರ ಹತ್ತಿರ ಹಿಂದಿರುಗಿ ಹೋಗುವಂತೆ ಹೇಳಲು ಧೈರ್ಯವಿಲ್ಲದೇ ಇರಬಹುದು. ಆ ನಿಜ ಸಂಗತಿ ಕಾಂಗ್ರೆಸ್‌ನವರಿಗೆ ತಿಳಿದಿರಬಹುದು. ದಿವಾನರು ಮನೆಗೆ ಹೋಗಬೇಕು ಎಂದು ಅವರು ಮತ್ತೊಂದು ರೀತಿಯಲ್ಲಿ ಹೇಳುವು ದಾಗಿರಬೇಕು. ಒಂದು ವೇಳೆ ಈ ದಿವಾನರು ಮನೆಗೆ ಹೋದರೆ ಕಾಂಗ್ರೆಸ್ಸಿನ ಹೋರಾ ಟವೂ ನಿಂತುಹೋಗಬಹುದು.

ಕೇಶವ ಪಿಳ್ಳೆ ತಾನು ಓದಿದ್ದ ತಿರುವಾಂಕೂರು ಚರಿತ್ರೆಯನ್ನು ನೆನಸಿಕೊಂಡ. ಇಂತಹ ಸ್ಥಿತಿಗಳು ಮೊದಲು ನಡೆದದ್ದುಂಟು. ಆದರೂ ಯಾವಾಗಲೂ ಜನರು ರಾಜಭಕ್ತರಾಗಿದ್ದರು. ಆದರೂ ಈ ಪ್ರಜಾಪ್ರಭುತ್ವದ ವಿಷಯವಾಗಿ ಮಾತನಾಡುವು ದೇತಕ್ಕೆ? ಕಾಂಗ್ರೆಸ್ ನಾಯಕರಲ್ಲಿ ಕೆಲವರು ಅದೇ ವಿಷಯವನ್ನು ಕುರಿತು ಮಾತನಾಡು

ವುದುಂಟು. ಅವರಿಗೂ ಅದು ಹೇಗಿರಬೇಕು ಎಂದು ತಿಳಿದಿದೆಯೇ ಎನ್ನುವುದು ಸಂಶಯ. ಆದರೂ ಎಲ್ಲರೂ ಪ್ರಜಾಪ್ರಭುತ್ವವನ್ನು ಕುರಿತು ಮಾತನಾಡುತ್ತಾರೆ.

ಅದೇನೇ ಇರಲಿ, ಆ ಕಾಲದಲ್ಲೂ ಉದ್ಯೋಗಸ್ಥರಿರುತ್ತಾರೆ. ಈ ಅವಸ್ಥೆಯಲ್ಲಿ ಭದ್ರವಾಗಿ ಕೆಲಸ ನೋಡಿಕೊಂಡು ಹೋಗುವ ಮಾರ್ಗ ಯಾವುದು? ಅದಕ್ಕೆ ಈ ರೀತಿಯ ವಿಷಯಗಳೆಲ್ಲ ತನಗೆ ತಿಳಿದಿರಲೇಬೇಕು ಎಂದು ಕೇಶವ ಪಿಳ್ಳೆಗೆ ಅನ್ನಿಸಿತು. ಇದಕ್ಕೆ ಸಂಬಂಧಪಟ್ಟ ಫೈಲುಗಳು ಪಾರ್ಕ್ ವ್ಯೂಗೆ ಬಂದು ಅಂತ್ಯ ತೀರ್ಮಾನಕ್ಕೆ ಹೋಗಬೇಕಾದದ್ದು, ಪಾರ್ಕ್ ವ್ಯೂ ಮುಖಾಂತರವೇ ಅಂತ್ಯ ತೀರ್ಮಾನಗಳನ್ನು ಕೈಗೊಳ್ಳಬೇಕಾದದ್ದು. ಆಗ ಇಂತಹ ವಿಷಯಗಳ ಬಗ್ಗೆ ತಾನು ಹೆಚ್ಚಾಗಿ ತಿಳಿದಿರಬೇಕು.

ನಿದ್ದೆಯಿಲ್ಲದ ಒಂದು ರಾತ್ರಿಯಾಗಿತ್ತು ಅದು. ಪುಟ್ಟ ದೊಡ್ಡ ಸಂಗತಿಗಳೂ ಅವನ ತಲೆಯಲ್ಲಿ ತುಂಬಿಕೊಂಡಿದ್ದುವು. ಬುದ್ಧಿಯನ್ನು ಅಷ್ಟೊಂದು ತೀವ್ರವಾಗಿ ಮಥಿಸಿದ ಅಂತಹ ಒಂದು ದಿನವನ್ನು ತನ್ನ ಆಯುಷ್ಯದಲ್ಲಿ ಕಂಡದ್ದಿಲ್ಲ. ಭವಿಷ್ಯವನ್ನು ಕುರಿತ ಅನಿಶ್ಚಿತತೆ ಒಂದೊಂದಾಗಿ ಸ್ಪಷ್ಟವಾಗಿ ತಿಳಿಯುತ್ತಿತ್ತು. ಸದ್ಯದಲ್ಲಿ ಪಾರ್ಕ್ ವ್ಯೂನಿಂದ ಹೊರಬರಬೇಕಾಗಬಹುದು. ಇನ್ನು ಮೇಲೆ ಆ ಕಡೆ ಹೋಗಬೇಕಾಗಿಲ್ಲ ಎಂದೂ ಆಗಬಹುದು. ಮನಸ್ಸು ತೀರ ವಿಷಮಗೊಂಡಿತ್ತು. ಆ ಸ್ಥಿತಿಯಲ್ಲಿದ್ದ ಅವನ ಮನಸ್ಸು ಎಲ್ಲೆಲ್ಲಿಯೋ ಅಲೆದಾಡಿತು. ಈ ನಾಡುಪೂರ್ತಿ ನಡೆಯುವ ಮೀಟಿಂಗುಗಳಿಗೆ ಧಕ್ಕೆಯುಂಟುಮಾಡಬೇಕು. ಗಂಟಲು ದೊಡ್ಡದು ಮಾಡಿಕೊಂಡು ಭಾಷಣ ಮಾಡಲು ಅವಕಾಶ ಕೊಡಕೂಡದು. ಈ ಮುಂದಾಳುಗಳೆಲ್ಲ ಉದ್ಯೋಗವನ್ನು ಅಪೇಕ್ಷಿಸಿದವರು. ಅವರಿಗೆಲ್ಲ ಉದ್ಯೋಗವನ್ನು ಕೊಡಬೇಕು. ಅನಂತರವೂ ಗಲಾಟೆ ಮಾಡಿದರೆ ಅಂತಹವರನ್ನು ಹಿಡಿದು ಜೈಲಿಗೆ ಹಾಕಬೇಕು. ಆ ಬ್ಯಾಂಕನ್ನು ಅಂತ್ಯಗೊಳಿಸಬೇಕು. ಹಾಗೆ ಅಪಕ್ವವಾದ ಆಲೋಚನೆಗಳು ಅವನ ತಲೆಯಲ್ಲಿ ನಡೆದಿದ್ದುವು. ಕೇಶವ ಪಿಳ್ಳೆ ನಿದ್ದೆಯಿಲ್ಲದೆ ರಾತ್ರಿಯನ್ನು ಕಳೆಯುತ್ತಿದ್ದಾಗ ಪಾರ್ಕ್ ವ್ಯೂನಲ್ಲೂ ನಿದ್ದೆಯಿಲ್ಲದೆ ಚೀಫ್ ಸೆಕ್ರೆಟರಿ ತಲೆ ಕೆಟ್ಟವರ ಹಾಗೆ ಹೆಂಡತಿಯನ್ನು ದೂಷಿಸುತ್ತಿದ್ದರು.

"ಈ ಕೆಲಸ ನನಗೆ ಹೇಳಿಸಿಕೊಂಡದ್ದಲ್ಲ. ಮನಸ್ಸಿಗೆ ಒಂದು ಸ್ವಲ್ಪವೂ ನೆಮ್ಮದಿ ಯಿರೋದಿಲ್ಲ ಅಂತ ನಾನು ಆಗಲೇ ಹೇಳಿದ್ದೆ."

ಭಗವತಿ ಅಮ್ಮ ಇದೇ ಮಾತನ್ನು ಅನೇಕ ಸಲ ಕೇಳಿದ್ದರು. ಇತ್ತೀಚಿನ ದಿನಗಳಲ್ಲಿ ದಿವಾನರು ಚೀಫ್ ಸೆಕ್ರೆಟರಿಯ ಮೇಲೆ ತುಂಬ ರೇಗಾಡುತ್ತಿದ್ದರು. ಈಗ ಕೆಲಸದಿಂದ ತೆಗೆದುಹಾಕುವ ವರೆಗೂ ಆಗಿತ್ತು ಆ ರೇಗಾಟ. ಅಷ್ಟೇ ಅಲ್ಲ, ಹಿಂದಿರುಗಿಸಿದರೂ ನೆಮ್ಮದಿಯಿಂದಿರುವುದಕ್ಕೆ ಬಿಡುವುದಿಲ್ಲವೆಂದೂ ಹೇಳುವುದುಂಟು. ವಿಷಯ ಅಲ್ಲಿಯ ವರೆಗೆ ಬಂತು ಎಂದೂ ಕೃಷ್ಣನ್ ನಾಯರ್ ಹೇಳುತ್ತಿದ್ದರು. ಆ ಅಪಾಯವನ್ನು ತಂದೊಡ್ಡಿದುದು ಭಗವತಿ ಕುಟ್ಟಿಅಮ್ಮ. ಚೀಫ್ ಸೆಕ್ರೆಟರಿಯ ಹೆಂಡತಿಯಾಗಿ ಪಾರ್ಕ್ ವ್ಯೂನಲ್ಲಿ ವಾಸಮಾಡಬೇಕಾಗಿತ್ತು ಆಕೆಗೆ. ಆ ಆಶೆ ಕೈಗೆಟುಕದ ಆಶೆಯೆಂದು ಕೃಷ್ಣನ್

ನಾಯರ್ ಹೇಳುತ್ತಿದ್ದರು. ಅವರು ಕೇಳಿದರು:

"ನೀನು ಈ ಹುಲಿಬಾಲಕ್ಕೆ ಎಷ್ಟೊಂದು ಬೆಲೆ ತೆತ್ತೆ! ಇದುವರೆಗೆ ಸಂಪಾದಿಸಿದ್ದನ್ನೆಲ್ಲ ಇದಕ್ಕಾಗಿ ಮುಡುಪಾಗಿಟ್ಟೆ ಅಲ್ಲವಾ? ಇನ್ನು ಬಾಕಿ ಇರೋದೇನು?"

ಸಿಡಿಮಿಡಿಗೊಂಡು ಭಗವತಿ ಅಮ್ಮ ಅದಕ್ಕೆ ಉತ್ತರ ಕೊಟ್ಟರು:

"ಇಂಥ ಮಣ್ಣಾಂಗಟ್ಟಿ ಅಂತ ನನಗೆ ಗೊತ್ತಿತ್ತಾ?"

ಆ ದೂಷಣೆಯನ್ನು ಕೃಷ್ಣನ್ ನಾಯರ್ ಒಪ್ಪಿಕೊಂಡರು.

"ನಾನು ಅದನ್ನ ನಿನ್ನ ಹತ್ರ ಹೇಳಿದ್ದಲ್ಲವಾ? ಸೆಕ್ರೆಟರಿಯೇಟ್‌ನಲ್ಲೋ ಇಲ್ಲವೆ ಹೊರಗೆ ಯಾವುದಾದರು ಬೇರೆ ಡಿವಿಜನ್‌ನಲ್ಲೋ ಪೇಷ್ಕಾರ್ ಆಗಿ ಕಳೆದಿದ್ದರೆ ಸಾಕಾಗಿತ್ತಲ್ಲವಾ? ಜೀವನದಲ್ಲಿ ಮುಖ್ಯವಾಗಿ ಬೇಕಾದದ್ದು ನೆಮ್ಮದಿ. ಶಾಂತಿ!"

ಒಂದು ಕ್ಷಣ ಬಿಟ್ಟು ಪುನಃ ಕೃಷ್ಣನ್ ನಾಯರ್ ಕೇಳಿದರು:

"ಯಾಕಾಗಿ ಇಷ್ಟೊಂದು ಒದ್ದಾಡಬೇಕು?"

ಯಜಮಾನಿಗೆ ವಿಪರೀತ ಸಿಟ್ಟು ಬಂದಿತು. ಯಾವುದೋ ಒಂದು ಕಟುವಾದ ಮಾತು ಗಂಟಲಿನ ವರೆಗೆ ಬಂದಿತು. ಆದರೆ ಆಕೆ ತಮ್ಮನ್ನು ತಾವು ಸ್ತಿಮಿತದಲ್ಲಿಟ್ಟುಕೊಂಡರು.

"ನನ್ನ ಹತ್ತಿರ ಏನೂ ಹೇಳಬೇಡಿ."

ಅಷ್ಟು ಹೇಳಿ ಆಕೆ ಸುಮ್ಮನಾಗಲಿಲ್ಲ. ಹೇಳಬೇಕು ಅನ್ನಿಸಿದ್ದನ್ನು ತಡೆದುಕೊಳ್ಳುವುದಕ್ಕಾಗಲಿಲ್ಲ. ಆಕೆ ಗಂಡನನ್ನು ಸಿಟ್ಟಿನಿಂದ ನೋಡುತ್ತಿದ್ದರು.

'ನಾನು ಅದನ್ನು ಸಂಪಾದಿಸಿ ಕೊಟ್ಟೆ. ಅದನ್ನು ನೋಡಿಕೊಂಡು ಹೋಗೋದಕ್ಕೆ ಸಾಧ್ಯವಿಲ್ಲದಿದ್ದರೆ ಅತ್ತಲಾಗಿ ಕೈಬಿಡಬೇಕು' ಎಂದು ಹೇಳುವಂತಿತ್ತು. ಆ ನೋಟದಲ್ಲಿ ಮತ್ತೇನೋ ಅಡಗಿತ್ತು. ಸೈನ್ಯದ ಸಿಪಾಯಿಯ ಮಗ ಪಾರ್ಕ್ ವ್ಯೂ ಪ್ರವೇಶಿಸುವುದಕ್ಕೆ ಸಾಧ್ಯವಿಲ್ಲ ಎನ್ನುವುದು ಆಕೆಯ ತುಟಿಯಲ್ಲಿ ಎದ್ದು ಕಾಣುತ್ತಿತ್ತು.

ಕೃಷ್ಣನ್ ನಾಯರ್ ಮೌನವಾಗಿ, ಅಸಹಾಯಕರಾಗಿ ತಲೆಗೆ ಕೈಕೊಟ್ಟುಕೊಂಡು ಕುಳಿತಿದ್ದರು. ಆ ಮನುಷ್ಯನ ಸ್ಥಿತಿ ಕರುಣಾಜನಕವಾಗಿತ್ತು. ಅವರಿಗೆ ಏನು ಹೇಳುವುದಕ್ಕೂ ತೋರಲಿಲ್ಲ. ಚೀಫ್ ಸೆಕ್ರೆಟರಿಯ ಹುದ್ದೆಯನ್ನು ಅವರು ಆಶಿಸಿರಲಿಲ್ಲ. ಅದನ್ನು ಬೇಡ ಎಂದು ಹೇಳಿರಲಿಲ್ಲ ಅಷ್ಟೆ. ಅದಕ್ಕೂ ಒಂದು ಕಾರಣವಿದೆ. ಸಾಧಾರಣ ರೀತಿಯಲ್ಲಿ ಬುದ್ಧಿವಂತಿಕೆಯಿಂದ ಆ ಉದ್ಯೋಗವನ್ನು ನೋಡಿಕೊಂಡು ಹೋಗಬಹುದಾಗಿತ್ತು. ಅದಕ್ಕೆ ಬೇಕಾದ ತಿಳುವಳಿಕೆಯೂ ಪರಿಚಯವೂ ಅವರಿಗಿತ್ತು. ಆದರೆ ಈ ಅಸಾಮಾನ್ಯ ಸ್ಥಿತಿ ಉಂಟಾಗುವುದೆಂದು ಅವರು ಊಹಿಸಿರಲಿಲ್ಲ. ಹಾಗೇನಾದರೂ ಅದು ತಿಳಿದಿದ್ದಲ್ಲಿ ಖಡಾ ಖಂಡಿತವಾಗಿ ಬೇಡವೆಂದು ಹೇಳುತ್ತಿದ್ದರು. ಪ್ರಾರಂಭ ಅಲ್ಲಿಯೇ ಹೆಂಡತಿಯ ಪ್ರಯತ್ನವನ್ನು ತಡೆಗಟ್ಟುತ್ತಿದ್ದರು. ಅಸಹಕಾರ ಚಳವಳಿದಷ್ಟೊಂದು ಮುಖ್ಯವಾಗಿ ಕಾಣಿಸಿಕೊಂಡಿರಲೂ ಇಲ್ಲ. ಅವರ ಲೆಕ್ಕಾಚಾರ ಹಾಗಿತ್ತು.

ಈಗಲೂ ತಾವು ಏನು ಮಾಡಬೇಕು ಎನ್ನುವುದು ಕೂಡ ತಿಳಿಯದು. ದಿವಾನರು ಅವರಿಂದ ಏನೋ ನಿರೀಕ್ಷಿಸುತ್ತಿದ್ದರು.

ಅವರು ತಮ್ಮ ಕಷ್ಟವನ್ನು ಹತ್ತನೆಯ ಸಲ ಹೇಳಿಕೊಳ್ಳುತ್ತಿದ್ದದ್ದು.

"ನನ್ನ ಮೇಲೆ ದಿವಾನರಿಗೆ ಸಿಟ್ಟಿದೆ. ನನ್ನಲ್ಲಿ ಅವರಿಗೆ ವಿಶ್ವಾಸವಿಲ್ಲ. ಇವತ್ತು ನಾನು ಹಿಂದಿರುಗಿ ಹೋಗುತ್ತೇನೆ ಎಂದೆ."

ಭಗವತಿಯಮ್ಮನಿಗೂ ಏನೋ ನೆಮ್ಮದಿಯಿರಲಿಲ್ಲ. ತಿರುವನಂತಪುರದ ಒಬ್ಬ ಸಾಧಾರಣ ಸೆಕ್ರೆಟರಿಯ ಪತ್ನಿಯಾದ ತಾನು ಗಂಡ ಚೀಫ್ ಸೆಕ್ರೆಟರಿಯಾಗುವುದನ್ನು ಬಯಸುತ್ತಿದ್ದಳು. ಅವರಲ್ಲಿ ತಪ್ಪೇನು? ತಿರುವನಂತಪುರದಲ್ಲಿ ಸಮರ್ಥಳಾದ ಉದ್ಯೋಗಸ್ಥನ ಹೆಂಡತಿ ಗಂಡನ ಉದ್ಯೋಗಕ್ಕಾಗಿ ಶ್ರಮಿಸುತ್ತಿದ್ದಳು ಅಷ್ಟೆ. ಅದು ಮೊದಲಿನಿಂದಲೂ ನಡೆದುಬಂದ ಆಚರಣೆಯಾಗಿತ್ತು. ಆಫೀಸಿನ ಜವಾನ ರೆಕಾರ್ಡ್ ಕೀಪರ್ ಆಗಲು ಪ್ರಯತ್ನಿಸುತ್ತಿದ್ದ; ಕಾಪಿಯಿಸ್ಟ್ ಗುಮಾಸ್ತನಾಗುವುದಕ್ಕೆ ಪ್ರಯತ್ನಿಸುತ್ತಿದ್ದ; ಗುಮಾಸ್ತ ಸೂಪರಿಂಟೆಂಡೆಂಟಾಗುವುದಕ್ಕೆ. ಇಂತಹ ದಾರಿಗಳನ್ನು ತಿಳಿದಿದ್ದ ಭಗವತಿ ಕುಟ್ಟಿಯಮ್ಮ ಕಾಲಾವಸ್ಥೆಯನ್ನೂ ಪರಿಸ್ಥಿತಿಯನ್ನೂ ತಿಳಿದುಕೊಂಡು ಶ್ರಮಿಸಿದ್ದದ್ದು. ಗಂಡ ಆ ಕೆಲಸಕ್ಕೆ ಹೇಳಿಸಿಕೊಂಡ ವ್ಯಕ್ತಿಯಲ್ಲ ಎಂದು ಆಕೆಗನ್ನಿಸಿರಲಿಲ್ಲ. ಅವರ ಸ್ವತಃ ಸ್ವಲ್ಪ ಚೂಟಿ ಕಡಿಮೆ ಎಂದು ಆಕೆಗೆ ಗೊತ್ತಿತ್ತು. ಮೊದಲು ಹಾಗಿದ್ದವರೇ ದಿವಾನರಾಗಲಿಲ್ಲವೆ? ಒಂದು ವಿಷಯ ಅವರ ಮನಸ್ಸನ್ನು ಬಾಧಿಸುತ್ತಿತ್ತು. ಈ ಅಭ್ಯುದಯಕ್ಕೆ ತೆತ್ತ ಬೆಲೆ ಅಪಾರವಾದದ್ದು. ಅದು ವರೆಗೆ ಸಂಪಾದಿಸಿದ್ದನ್ನೆಲ್ಲ ಕಾಣಿಕೆ ಕೊಟ್ಟದ್ದು ಎನ್ನುವುದೂ ನಿಜ. ಆದರೆ ಇಷ್ಟು ಬೇಗ ಕೆಳಗಿಳಿಯಬೇಕಾಗಿ ಬಂದಿತ್ತು. ಕೈತುಂಬ ತೆತ್ತದ್ದನ್ನೆಲ್ಲಾ ಹಿಂದಕ್ಕೆ ಪಡೆಯುವುದಕ್ಕೂ ಸಾಧ್ಯವಾಗಲಿಲ್ಲ. ಗಂಡನಿಗೆ ಸಾಮರ್ಥ್ಯವಿಲ್ಲ ಎಂಬ ಅರಿವೂ, ಸಂಕೋಚವೂ ಒಂದು ಕಡೆ; ಸರ್ವಸ್ವವನ್ನೂ ತೆತ್ತರೂ ಭಕ್ತಿವಿಲಾಸ ಅದನ್ನು ಸ್ಮರಿಸುತ್ತಿಲ್ಲ ಎನ್ನುವ ಚಿಂತೆ ಒಂದು ಕಡೆ, ಭವಿಷ್ಯತ್ತನ್ನು ಕುರಿತ ಚಿಂತೆ ಮತ್ತೊಂದು ಕಡೆ—ಎಲ್ಲವೂ ಭಗವತಿ ಕುಟ್ಟಿಅಮ್ಮನಿಗೆ ಸ್ಪಷ್ಟವಾಗಿ ಅರ್ಥವಾಗುತ್ತಿತ್ತು. ಅವರು ಕೇಳಿದರು:

"ಪ್ರೈವೇಟ್ ಸೆಕ್ರೆಟರೀನ ಕಂಡಿದ್ರಾ?"

ಚೀಫ್ ಸೆಕ್ರೆಟರಿ ಹೇಳಿದರು:

"ಅವನೇ ಆ ದ್ರೋಹಿ; ಕಳ್ಳ!"

ಆ ಮಾತು ನಿಜವಾಗಿರಲು ಸಾಧ್ಯವಿಲ್ಲ ಎಂದು ಭಗವತಿ ಕುಟ್ಟಿಯಮ್ಮನ ಅಭಿಪ್ರಾಯ. ಪ್ರೈವೇಟ್ ಸೆಕ್ರೆಟರಿ ವಂಚಿಸುತ್ತಾರೆ ಎನ್ನುವುದರಲ್ಲಿ ಆಕೆಗೆ ನಂಬಿಕೆಯಿಲ್ಲ. ತುಂಬಾ ಹಣಕ್ಕಾಗಿ ಭಯಪಡಿಸುತ್ತಿದ್ದಾರೋ ಎಂದು ಆಕೆಗೆ ಸಂಶಯವುಂಟಾಯಿತು. ಅದನ್ನು ಆಕೆ ಗಂಡನ ಹತ್ತಿರ ಕೇಳಿದರು. ತಾಳ್ಮೆ ತಪ್ಪಿದವರಂತೆ ಚೀಫ್ ಸೆಕ್ರೆಟರಿ ಹೇಳಿದರು:

"ನನಗ್ಗೊತ್ತಿಲ್ಲ."

ಭಗವತಿ ಕುಟ್ಟಿಯಮ್ಮನಿಗೆ ಸಿಟ್ಟು ಬಂದಿತು. ನಿಜವಾದ ಸಂಗತಿಯನ್ನು ಆಕೆ ತಿಳಿದುಕೊಳ್ಳಬೇಕಾಗಿತ್ತು. ಕಾರಣವನ್ನು ತಿಳಿದು ಪರಿಹಾರವನ್ನು ಕಂಡುಹಿಡಿಯುವುದಕ್ಕಾಗಿ ಆಕೆ ಆಲೋಚಿಸುತ್ತಿದ್ದದ್ದು. ಅಂತಹ ಸ್ಥಿತಿಯಲ್ಲಿ ಗಂಡ ಸಹಾಯ ಮಾಡುತ್ತಿಲ್ಲ. ಆಕೆಯ ಪ್ರಶ್ನೆ:

"ಮತ್ತೇನು ಗೊತ್ತು?"

"ನನಗೆ ಹೇಗೆ ಗೊತ್ತಾಗಬೇಕು? ದಿವಾನರಿಗೂ ಪ್ರೈವೇಟ್ ಸೆಕ್ರೆಟರಿಗೂ ನನ್ನಲ್ಲಿ ವಿಶ್ವಾಸವಿಲ್ಲ. ಅದೇ ಸಂಗತಿ. ಯಾರಲ್ಲೂ ನಂಬಿಕೆ ಇಲ್ಲ."

"ವಿಶ್ವಾಸ ಇಲ್ಲ ಅಂತಲಾ?"

"ಹೌದು; ವಿಶ್ವಾಸ ಇಲ್ಲ."

ಭಗವತಿ ಕುಟ್ಟಿಯಮ್ಮನಿಗೆ ಪರಿಹಾರ ಮಾರ್ಗವೊಂದು ಹೊಳೆದಂತಾಯಿತು. ಅವರು ಕೇಳಿದರು:

"ಅಂದರೆ?"

"ಅಂದರೆ, ದಿವಾನರು ಒಬ್ಬ ಹುಚ್ಚನ ಹಾಗಾಗಿದ್ದಾರೆ. ಅದೇ ಸಂಗತಿ. ಅವರನ್ನು ಹಾಗೆ ಮಾಡಿದ್ದಾರೆ."

"ಯಾರು?"

"ಪ್ರೈವೇಟ್ ಸೆಕ್ರೆಟರಿ."

"ವಿಶ್ವಾಸ ಇಲ್ಲಾಂತ ಹೇಳಿದ್ದು ಯಾಕೆ?"

ಚೀಫ್ ಸೆಕ್ರೆಟರಿಗೆ ಸಿಟ್ಟು ಬಂದಿತು. ಅವರು ಹೇಳಿದರು:

"ವಿಶ್ವಾಸ ಇಲ್ಲ ಅಷ್ಟೆ."

ಭಗವತಿಯಮ್ಮನೂ ಬಿಡಲಿಲ್ಲ:

"ಅದು ಯಾಕೆ ಅಂತ ನಾನು ಕೇಳಿದ್ದು."

"ಅದು ಹಾಗಿರೋದರಿಂದ. ಈ ದೇಶದಲ್ಲಿ ಹುಟ್ಟಿದ ಎಲ್ಲರೂ ಕಾಂಗ್ರೆಸಿನೋರು ಅಂತ ಬೋಧಿಸಿದ್ದಾರೆ."

ಬುದ್ಧಿವಂತೆಯಾದ ಆಕೆಗೆ ಒಂದು ಪರಿಹಾರ ಮಾರ್ಗ ಹೊಳೆಯಿತು. ಗಂಡ ಸಾಗಬೇಕಾದ ದಾರಿಯನ್ನು ತೋರಿಸಿಕೊಟ್ಟರು.

"ಹಾಗಲ್ಲಾಂತ ಅವರಿಗೆ ತಿಳಿಸಿಕೊಡಬೇಕು. ಮನದಟ್ಟು ಮಾಡಿಕೊಡಬೇಕು."

"ಅನಿಷ್ಟ! ಅದನ್ನು ಹೇಳದೇ ಸುಮ್ಮನಿದ್ದೀನಾ? ಅವರಿಗೆ ತಿಳಿಸಿಕೊಡದೆ ಸುಮ್ಮನಿದ್ದೀನಾ? ನಿನಗೆ ಇದೊಂದೂ ಅರ್ಥವಾಗೋದಿಲ್ಲ."

ಭಗವತಿ ಕುಟ್ಟಿಯಮ್ಮ ಅದಕ್ಕೇನೂ ಮಾತಾಡಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಚೀಫ್ ಸೆಕ್ರೆಟರಿ ಅವರಿಗೆ ಬೇರೆ ದಾರಿಯಿಲ್ಲದ್ದರಿಂದ ಪುನಃ ಹೇಳತೊಡಗಿದರು:

"ಪ್ರತಿದಿನ ಒಂದು ಐನೂರು ಮೀಟಿಂಗುಗಳ ಮಂತ್ರಾಲೋಚನೆಯ ರಿಪೋರ್ಟುಗಳು ಬರುತ್ತವೆ. ಎಲ್ಲಾ ನೇರವಾಗಿ ಬರುತ್ತವೆ. ತೆರಿಗೆ ಕೊಡಕೂಡದು, ಶಾಲೆಗೆ ಮಕ್ಕಳನ್ನು ಕಳುಹಿಸಕೂಡದು, ಸರ್ಕಾರದ ಆಫೀಸಿನ ಮುಂದೆ ಪಿಕೆಟಿಂಗ್ ಮಾಡಬೇಕು ......... ಇವು ಅವರ ಕಾರ್ಯಕ್ರಮಗಳು. ಅವೆಲ್ಲಾ ಒಟ್ಟಾಗಿ ಸದ್ಯದಲ್ಲೇ ನಡೆಯುತ್ತವೆ. ಇದನ್ನೆಲ್ಲ ಎದುರಿಸಬೇಕು. ಇವುಗಳಿಗೆಲ್ಲ ಏನನ್ನಾದರೂ ಬರೆದು ಕಳಿಸೋದೇ ಕಳಿಸದೆ ಇರೋದೇ, ಎರಡೂ ಸಾಧ್ಯವಿಲ್ಲ. ಬರೆದು ಕಳಿಸಿದರೆ ಒಂದು ತೊಂದರೆ. ಕಳಿಸದಿದ್ದರೆ ಮತ್ತೊಂದು ತೊಂದರೆ. ಇಲ್ಲದಿದ್ದರೆ ತಲೆಮರೆಸಿಕೊಂಡು ಕುಳಿತಿದ್ದಾರೆ ಎನ್ನುವಂತಾಗುತ್ತದೆ. ನನಗೆ ಹುಚ್ಚು ಹಿಡಿಯುತ್ತಿದೆ."

ತಮ್ಮ ತಲೆಗೂದಲನ್ನು ತಾವೇ ಕಿತ್ತುಕೊಳ್ಳುತ್ತ ಹಲ್ಲು ಕಚ್ಚಿಕೊಂಡು ಹೇಳಿ ಮುಗಿಸಿದರು.

"ಓ! ಹಾಳಾದ್ದು ಇದು ಬೇಡವಾಗಿತ್ತು. ನೀನೇ ತಂದೊಡ್ಡಿದ ಕಷ್ಟ. ನಾಳೆ ಭಕ್ತಿ ವಿಲಾಸಕ್ಕೆ ಕಳಿಸಬೇಕಾದ ಕಾಗದ ಪತ್ರಗಳೊಂದೂ ಸಿದ್ಧವಾಗಿಲ್ಲ. ನನ್ನಿಂದೇನೂ ಮಾಡೋದಕ್ಕಾಗ್ತಾ ಇಲ್ಲ."

ಭಗವತಿ ಕುಟ್ಟಿಯಮ್ಮ ಆಲೋಚನೆಯಲ್ಲಿ ಮುಳುಗಿದ್ದರು. ಗಂಡನ ಮಾತಿಗೆ ಆಕೆ ಕಿವಿಗೊಟ್ಟಿದ್ದಂತೆ ತೋರಲಿಲ್ಲ. ಯಥಾಸ್ಥಿತಿಯನ್ನು ಕುರಿತು ಆಕೆ ಆಲೋಚಿಸುತ್ತಿದ್ದಳು. ಗಂಡನ ಅಸಾಮರ್ಥ್ಯತೆ ಆಕೆಗೆ ಗೊತ್ತಿದ್ದದ್ದೇ. ಒಂದು ವಿಷಯ ಸತ್ಯ. ಕೃಷ್ಣನ್ ನಾಯರ್ ಈ ಕೆಲಸಕ್ಕೆ ತಕ್ಕ ವ್ಯಕ್ತಿ ಅಲ್ಲ. ಬಹುಶಃ ಅವರ ಅಸಾಮರ್ಥ್ಯತೆ ತಿಳಿದದ್ದು ಬೇರೆಯವರಿಗಿಂತ ಹೆಚ್ಚಾಗಿ ಅವರ ಪತ್ನಿಗೆ. ದೇಶದಲ್ಲಿ ಹಿಂದೆಂದೂ ಇಲ್ಲದ ರೀತಿಯಲ್ಲಿ ಗೊಂದಲವುಂಟಾಗತೊಡಗಿತ್ತು. ಈಗಿನ ಸ್ಥಿತಿಯಲ್ಲಿ ತಮ್ಮನ್ನು ಯಾವ ಅಲೆ ಬೇಕಾದರೂ ಬಂದು ಅಪ್ಪಳಿಸಬಹುದಾಗಿತ್ತು. ಭದ್ರವಾಗಿ ನಿಲ್ಲುವ ಸಾಮರ್ಥ್ಯ ಬೇಕಾಗಿತ್ತು. ಖಂಡಿತವಾಗಿಯೂ ತನ್ನ ಗಂಡನಿಗೆ ಅದಿರಲಿಲ್ಲ. ಅವರು ಹೆದರುವುದರಲ್ಲಿ ಸತ್ಯವಿದೆ. ಯಾವ ನಿಮಿಷದಲ್ಲಿಯಾದರೂ ಉರುಳಿಬಿದ್ದು ತೇಲಿಹೋಗಬಹುದು. ದಿವಾನರು ಕೂಡ ನಡುಗುತ್ತಿದ್ದಾರೆ. ಇನ್ನು ಈ ದುರ್ಬಲ ವ್ಯಕ್ತಿಯಲ್ಲಿ ಶಕ್ತಿ ಸಾಮರ್ಥ್ಯಗಳು ಇರುವುದಕ್ಕೆ ಸಾಧ್ಯವೆ? ಅದುವರೆಗೆ ಸಂಪಾದಿಸಿದ್ದನ್ನೆಲ್ಲಾ ಕೃಷ್ಣನ್ ನಾಯರ್ ಹೇಳಿದಂತೆ ಕಾಣಿಕೆ ಅರ್ಪಿಸಿ ಆಯಿತು. ಧನಕನಕ ಮಾತ್ರವನ್ನೇ ಏನು ಕಾಣಿಕೆ ಅರ್ಪಿಸಿದ್ದು? ಭಗವತಿ ಕುಟ್ಟಿಯಮ್ಮ ಅದನ್ನು ಜ್ಞಾಪಿಸಿಕೊಂಡರು. ಅಷ್ಟೊಂದು ಇಷ್ಟಪಟ್ಟಿಲ್ಲ. ಅಂತೂ ಮತ್ತೂ ಕೆಲವನ್ನು ಕಾಣಿಕೆ ಅರ್ಪಿಸಿದ್ದಾಯಿತು. ಅದನ್ನು ಕುರಿತು ಸ್ವಲ್ಪ ಅಸಹನೀಯವಾಗಿ ಭಗವತಿ ಕುಟ್ಟಿಯಮ್ಮ ನೆನಸಿಕೊಳ್ಳುತ್ತಿದ್ದರು. ಆ ತಮಿಳನವನು ಒಂದು ಮೃಗ ಇದ್ದ ಹಾಗೆ. ಅವನ ಮೈ ಬೆವರಿನ ವಾಸನೆಯನ್ನು ಕೂಡ ಅವರು ಇಷ್ಟಪಟ್ಟಿರಲಿಲ್ಲ. ಅವನಿಗೆ ದೇಶ ಕಾಲಗಳ ಬಗ್ಗೆ ಗಮನವಿಲ್ಲ. ಒಂದು ಹೆಣ್ಣನ್ನ ಪ್ರೀತಿಸಿ ಅವಳನ್ನ ರಮಿಸಲು ಅವನಿಗೆ ಸಾಧ್ಯವೆ ಎನ್ನುವುದು ಕೂಡಾ ಸಂಶಯ. ನಾಲ್ಕು

ಜನರ ಪರಿಚಯ ಇರಬೇಕು ಎನ್ನುವುದು ಆ ಮೃಗಕ್ಕೆ ಬೇಕಾಗಿದ್ದದ್ದು. ಅದು ಅವನಿಗೆ ಇಷ್ಟವಾಗಿತ್ತು. ಒಂದು ಹೊಸ ಭಯಾನಕ ಸ್ಥಿತಿಯನ್ನು ಅವಳು ಎದುರಿಸಬೇಕಾಗಿತ್ತು. ಯಾರೋ ಅವನ ಸ್ನೇಹಿತರು ತಮಿಳುನಾಡಿನಿಂದ ಬರಲಿದ್ದರು. 'ಅಯ್ಯೋ' ಎಂದು ಭಗವತಿ ಕುಟ್ಟಿಯಮ್ಮ ಹೇಳಿದಾಗ ಅವನು ಹೇಳಿದ ಒಂದು ಮಾತು ಎಂದೆಂದಿಗೂ ಅವನ ಬಗ್ಗೆ ವಿಪರೀತ ಸಿಟ್ಟುಂಟುಮಾಡಿತ್ತು.

"ಹೇಗಿದ್ದರೂ ನೀನೊಬ್ಬಳು ಮಲೆಯಾಳಿ ಹೆಣ್ಣಲ್ಲವಾ?"

ಭಗವತಿ ಕುಟ್ಟಿಯಮ್ಮನಿಗೆ ಆಗ ಮುಖದ ಮೇಲೆ ಒಂದು ಕೃತಕನಗುವನ್ನು ಮಾತ್ರ ತರಲು ಸಾಧ್ಯವಾಗಿದ್ದದ್ದು. ಆದರೆ ಈಗ ತಮಿಳುನಾಡಿನಿಂದ ಅವನ ಸ್ನೇಹಿತ ಬಂದರೆ? ತುಂಬ ದಿನಗಳಿಂದ ಭಗವತಿ ಕುಟ್ಟಿಯಮ್ಮನನ್ನು ಬಾಧಿಸುತ್ತಿದ್ದ ಒಂದು ವಿಷಯ ಅದು. ಯಾವ ದಿನ ಬೇಕಾದರೂ ದಿವಾನರ ಪ್ರೈವೇಟ್ ಸೆಕ್ರೆಟರಿ ಆ ಸ್ನೇಹಿತನ ಜೊತೆಯಲ್ಲಿ ಬರಬಹುದು. ಅಂತಹ ಸಂದರ್ಭವನ್ನು ಹೇಗೆ ಎದುರಿಸುವುದು ಎಂದು ಆಕೆ ಆಲೋಚಿಸುತ್ತಿದ್ದದ್ದು. ಆಕೆಗೆ ಯಾವ ತೀರ್ಮಾನವನ್ನೂ ಕೈಗೊಳ್ಳಲು ಸಾಧ್ಯವಿರಲಿಲ್ಲ. ಅಪರಿಚಿತ ಧಾಂಡಿಗ ತಮಿಳನ ಜತೆಯಲ್ಲೂ ಇರಬೇಕಾಗಿ ಬರಬಹುದು. ನಂತರದ ಸಂಗತಿಗಳನ್ನು ಊಹಿಸಲೂ ಸಾಧ್ಯವಿಲ್ಲ.

ಗಂಡ ಹೇಳಿದ್ದಂತೆ ಅದು ಬೇಡವಾಗಿತ್ತು. ಹಾಗೆ ದುರಾಸೆಪಟ್ಟದ್ದು ತಪ್ಪಾಗಿ ಹೋಯಿತು. ಸಣ್ಣ ಹುಡುಗಿಯಾಗಿದ್ದಾಗಲೂ ಆ ಸೌಧದ ಒಳಗೆ ಹೇಗಿರಬಹುದು ಎಂದು ಕಲ್ಪಿಸಿಕೊಳ್ಳುತ್ತಿದ್ದುದುಂಟು. ಅದೇತಕ್ಕೆ ಮನಸ್ಸಿನ ಒಳಹೊಕ್ಕಿತು ಎನ್ನುವುದು ಸ್ಪಷ್ಟವಾಗಿ ತಿಳಿಯದು. ಮೃಗಾಲಯದ ಮಾರ್ಗವಾಗಿ ಹೋಗುವಾಗಲೂ ಆ ರಸ್ತೆಯ ಮೂಲಕ ನಡೆಯುತ್ತಿದ್ದಾಗಲೂ ಆ ಕಟ್ಟಡದ ಕಡೆಗೆ ಅಚ್ಚರಿಗೊಂಡು ನೋಡುತ್ತಾ ನಿಂತದ್ದನ್ನು ಭಗವತಿ ಕುಟ್ಟಿಯಮ್ಮ ಸ್ಮರಿಸಿಕೊಂಡರು. ಅದೂ ಒಂದು ಕೌತುಕವಾಗಿತ್ತು. ಅದರ ಬೇರನ್ನು ಕಂಡುಹಿಡಿಯಲಾಗದ ಒಂದು ರೀತಿಯ ಉತ್ಸಾಹ. ಭಗವತಿ ಕುಟ್ಟಿಯಮ್ಮ ಕಳೆದ ದಿನಗಳ ಕಡೆಗೆ ದೃಷ್ಟಿ ಹಾಯಿಸಿದರು. ಆ ಕುತೂಹಲವೇ ಆಕೆಗೆ ಆ ಶಕ್ತಿಯನ್ನು ಕೊಟ್ಟದ್ದು. ಆದರೆ ಅದು ಆಕೆಯನ್ನು ತಪ್ಪು ಹಾದಿಗೂ ತಳ್ಳಿದ್ದುಂಟು. ಎಲ್ಲಕ್ಕಿಂತ ದೊಡ್ಡ ಅನಾಹುತ ಸಂಭವಿಸಿದ್ದು ಈಗ. ಇನ್ನು ಮೇಲೂ ಈ ಸ್ಥಾನಕ್ಕಾಗಿ ಏನೆಲ್ಲ ಮಾಡಬೇಕಾಗಿ ಬರಬಹುದು? ಬಹುಶಃ ಇಡೀ ಜೀವನದಲ್ಲಿ ಕಳೆದ ದಿನಗಳನ್ನು ಕುರಿತು ನೆನಸಿಕೊಂಡದ್ದು ಇಂದಾಗಿರಬೇಕು. ಇಂತಹ ಗಂಭೀರವಾದ ಪರಿಸ್ಥಿತಿ ಹಿಂದೆಂದೂ ಉಂಟಾಗಿರಲಿಲ್ಲ. ಇದಕ್ಕಿಂತ ಮೊದಲು ಜೀವನದ ದಿನಗಳು ಶೀಘ್ರಗತಿಯಲ್ಲಿ ಕಳೆಯುತ್ತಿದ್ದುವು. ಆ ವೇಗದಲ್ಲಿ ಗಂಡನನ್ನು ಜೊತೆಯಲ್ಲಿ ಹಿಡಿದು ಎಳೆದುಕೊಂಡು ಹೋಗುತ್ತಿದ್ದರು. ಇಂದು ಅತ ಮಾತ್ರವಲ್ಲ, ಭಗವತಿ ಕುಟ್ಟಿಯಮ್ಮನೂ ಅಶಕ್ತಳಾಗಿದ್ದರು. ಆ ದೌರ್ಬಲ್ಯದಲ್ಲೇ ಇರಬೇಕು ತಮಗರಿವಿಲ್ಲದಂತೆಯೇ ಆತ್ಮಪರಿಶೋಧನೆ ಮಾಡಿಕೊಂಡದ್ದು. ಜೀವಿಸಿದ ರೀತಿ ಸರಿಯಾದದ್ದೇ? ಒಂದು ಹೆಣ್ಣಿಗೆ

ಹೇಳಿಸಿಕೊಂಡದ್ದೆ ಅದು? ದಾರಿತಪ್ಪಿ ಜಾರಿದ ಘಟನೆಗಳನ್ನು ಒಂದೊಂದಾಗಿ ಸ್ಮರಿಸಿಕೊಂಡರು. ಈ ಬುದ್ಧಿ ಹಿಂದೆ ಎಂದಾದರೂ ಇದ್ದಿದ್ದರೆ......... ಎಂದು ಆಕೆ ಆಲೋಚಿಸಿದ್ದರು. ಗಂಡ ಒಬ್ಬ ಸಾಧು ಮನುಷ್ಯ. ಮೇಜಿನ ಮೇಲೆ ತಲೆ ತಗ್ಗಿಸಿ ಕುಳಿತಿದ್ದರು. ಪಾಪ, ಎಳೆದಾಟದಲ್ಲಿ ಬಳಲಿ ಹೋದರು. ಈ ದಾರಿಯಿಂದ ವಿಮುಕ್ತರಾಗಲು ಅವರಿಗೆ ಸಾಧ್ಯವಾಗಿರಲಿಲ್ಲ. ಹೆಂಡತಿಯನ್ನು ಒಮ್ಮೆಯೂ ಬೈದವರಲ್ಲ. ಯಾವ ವಿಷಯದಲ್ಲೂ ತನ್ನನ್ನು ತಡೆದಿರಲಿಲ್ಲ. ಹೆಂಡತಿಯ ನಡವಳಿಕೆಯ ಬಗ್ಗೆ ಸೂಕ್ಷ್ಮವಾಗಿ ನೋಡುತ್ತಾರೆ ಎನ್ನುವುದು ಕೂಡ ಹೆಂಡತಿಗೆ ಸಂಶಯವನ್ನುಂಟು ಮಾಡಿಲ್ಲ. ಆತನನ್ನು ಹೆದರಿಸುವಂತಹ ಸಂದರ್ಭವೂ ಬಂದಿರಲಿಲ್ಲ, ಅಂತಹ ಸಂದರ್ಭಗಳಿದ್ದರೂ. ಒಂದು ವೇಳೆ ಒಂದು ಕಣ್ಣು, ಒಂದು ಕಿವಿ ಮುಚ್ಚಿಕೊಂಡು ಆತ ಕಾಲ ಕಳೆದದ್ದಿರಬೇಕು. ಇಲ್ಲದಿದ್ದಲ್ಲಿ ಎಲ್ಲವನ್ನೂ ತಿಳಿದಿದ್ದರೂ ತಿಳಿಯದವನಂತೆ ಜೀವಿಸಿದ್ದೇಕೆ? ಭಗವತಿ ಕುಟ್ಟಿಯಮ್ಮ ಕೃಷ್ಣನ್ ನಾಯರನ್ನು ನೋಡುತ್ತ ಕುಳಿತರು.

ಹಾಗೆ ತಪ್ಪು ಮಾಡಿದ ಸಂದರ್ಭಗಳು ಕಡಿಮೆಯೇನಲ್ಲ. ಆದರೆ ತಪ್ಪು ಮಾಡಿದುದೆಲ್ಲ ಯಾಕಾಗಿ? ಅಭ್ಯುದಯಕ್ಕಾಗಿ. ಅದಕ್ಕಾಗಿ ಮಾತ್ರವೆ? ಹಾಗೂ ಭಗವತಿಯಮ್ಮನಿಗೆ ಹೇಳುವುದಕ್ಕೆ ಸಾಧ್ಯವಿಲ್ಲ. ಆಕೆ ಒಬ್ಬಾತನನ್ನು ಪ್ರೇಮಿಸಿದ್ದಳು. ಅದು ಇದೆಲ್ಲಕ್ಕೂ ಮೊದಲು. ಆ ಆವೇಶದ ಮಧುರ ಸ್ಮೃತಿಗಳು ಇನ್ನೂ ತನ್ನ ದೇಹದ ಕಣಕಣಗಳಲ್ಲಿ ಉಳಿದಿವೆ. ಆಕೆ ದೀರ್ಘವಾಗಿ ಒಮ್ಮೆ ಉಸಿರುಬಿಟ್ಟರು.

ಪುನಃ ಆ ತಮಿಳರವನ ತೋಳಿನಲ್ಲಿ ಬಂಧಿಯಾಗಬೇಕೇ ಎಂದು ಆಕೆ ಹೆದರಿದ್ದದ್ದು. ಎಲ್ಲವೂ ವ್ಯರ್ಥವಾಯಿತು. ಆ ತೋಳುಗಳ ಸೆರೆಯಾಗದಂತಿರುವುದಕ್ಕೆ ಬೇರೆ ಯಾವ ದಾರಿಯೂ ಇಲ್ಲ. ಬೇಡ ಎಂದು ಹೇಳಿಬಿಟ್ಟರೆ ಆತ ಒಂದು ಸರ್ಪವಾಗಿ ಬದಲಾಯಿಸಿಯಾನು.

ಅಲ್ಲಿಯ ವರೆಗೆ ಯೋಚನೆ ತಲಪಿದಾಗ ಭಗವತಿ ಕುಟ್ಟಿಯಮ್ಮನಿಗೆ ಅನ್ನಿಸಿತು ಈ ದಿವಾನ ಹೋಗುತ್ತಾನೆ. ಜೊತೆಗೇ ಆ ತಮಿಳನೂ ಹೋಗುತ್ತಾನೆ. ಆದರೆ ಅದಕ್ಕೆ ಮೊದಲೆ ಬುಡಮೇಲಾಗುತ್ತಿದೆಯಲ್ಲ !

ಮರುದಿನ ಹೊತ್ತಿಗೆ ಮುಂಚೆ ಕೇಶವ ಪಿಳ್ಳೆ ಪಾರ್ಕ್ ವ್ಯೂ ತಲಪಿದ. ಚೀಫ್ ಸೆಕ್ರೆಟರಿ ಫೈಲುಗಳನ್ನು ನೋಡುತ್ತಿದ್ದರು. ಭಗವತಿ ಕುಟ್ಟಿಯಮ್ಮ ಹತ್ತಿರದಲ್ಲೇ ಕುಳಿತಿದ್ದರು. ಆಕೆ ಮ್ಲಾನವದನೆಯಾಗಿದ್ದರು. ಸ್ವಲ್ಪ ಹೊತ್ತು ಕೇಶವ ಪಿಳ್ಳೆ ಅಲ್ಲಿ ನಿಂತ. ಚೀಫ್ ಸೆಕ್ರೆಟರಿ ಏನೂ ಮಾತನಾಡುವುದಿಲ್ಲ ತನಗೇನೂ ಮಾಡುವುದಕ್ಕಿಲ್ಲವೋ ಎನ್ನಿಸಿತು ಕೇಶವ ಪಿಳ್ಳೆಗೆ. ಆತನನ್ನು ಯಜಮಾನ ಕೆಲಸದಿಂದ ತೆಗೆದುಹಾಕಿದ ಹಾಗಿತ್ತು. ಆ ಆರ್ಡರನ್ನು ಒಂದು ತುಂಡು ಕಾಗದದಲ್ಲಿ ಬರೆದರೆ ಆಯ್ತು ಅಷ್ಟೆ ಎನ್ನುವ ಹಾಗಿತ್ತು.

ಕೇಶವ ಪಿಳ್ಳೆಗೆ ಆ ನಿಶ್ಶಬ್ದತೆಯನ್ನು ಸಹಿಸುವುದಕ್ಕಾಗಲಿಲ್ಲ. ಆ ಸ್ಥಿತಿಯಲ್ಲೇ ಒಂದು ಮಾತು ಹೇಳಿದ:

"ಒಂದು ವಿಷಯ ಹೇಳೋದಿದೆ."

ಚೀಫ್ ಸೆಕ್ರೆಟರಿ ತಲೆ ತಿರುಗಿಸಿ ಕೇಳಿದ:

"ಹ್ಞೂಂ."

"ಕಾಂಗ್ರೆಸ್ಸಿನವರು ಈಗ ಎಲ್ಲೆಲ್ಲೂ ಸಭೆ ನಡೆಸ್ತಾ ಇದ್ದಾರೆ. ಆ ಸಭೆ ನಡೆಯದಂತೆ ಮಾಡಬೇಕು. ಭಾಷಣಗಳು ನಡೆಯದ ಹಾಗೆ ಮಾಡಬೇಕು."

ಯಜಮಾನರೂ ಯಜಮಾನಮ್ಮನೂ ಆಲೋಚಿಸುತ್ತಿದ್ದಂತೆ ತೋರಿತು. ಅವರ ಬುದ್ಧಿ ಅದನ್ನು ಗ್ರಹಿಸಿತು. ಕೇಶವ ಪಿಳ್ಳೆ ಆ ಏರ್ಪಾಡನ್ನು ಅವರು ಒಪ್ಪಿದ್ದಾಗಿ ಹೇಳುವ ವರೆಗೆ ಸುಮ್ಮನಿರಲಿಲ್ಲ. ಆತ ಮುಂದುವರಿಸಿದ:

"ಮುಂದಾಳುಗಳೆಲ್ಲಾ ಉದ್ಯೋಗಕ್ಕೆ ಆಶೆಪಟ್ಟವರು. ಅವರಿಗೆಲ್ಲರಿಗೂ ಉದ್ಯೋಗ ಕೊಡಿಸಿದರಾಯ್ತು."

ಮತ್ತೊಂದು ದಾರಿ ಯಜಮಾನರಿಗೆ ತೋರಿದಂತಾಯಿತು. ಕೇಶವ ಪಿಳ್ಳೆ ಮುಂದುವರಿದ:

"ಇನ್ನು ಉಳಿದವರನ್ನು ಜೈಲಿಗೆ ಹಾಕಿಸ್ಬೇಕು. ಎಲ್ಲರಿಗೂ ಗೊತ್ತಾಗೋ ಹಾಗೆ ಪೋಲೀಸರಿಂದ ಹೊಡೆಸಬೇಕು."

ಯಜಮಾನರ ಮತ್ತು ಯಜಮಾನಮ್ಮನ ಮುಖಗಳು ಪ್ರಸನ್ನವಾದಂತೆ ತೋರಿತು. ಅವರು ಪರಸ್ಪರ ಮುಖ ನೋಡಿಕೊಂಡರು. ಆ ಮೇಲೆ ಕೇಶವ ಪಿಳ್ಳೆಗೆ ಥಟ್ಟನೆ ಹೇಳುವುದಕ್ಕೇನೂ ಇಲ್ಲದಾಯಿತು. ಹೇಳಬೇಕಾದದ್ದು ಮರೆತುಹೋದಂತೆ ತೋರಿತು.

ಥಟ್ಟನೆ ಆತ ನೆನಪು ಮಾಡಿಕೊಂಡ: "ಕಾಂಗ್ರೆಸ್‌ಗೆ ಹಣ ಕೊಡ್ತೋದನ್ನ ಸದೆ ಬಡಿಯಬೇಕು. ಅಂಥ ಜನರ ಒಂದು ದೊಡ್ಡ ಪಟ್ಟಿ ಪೋಲೀಸ್ ಕಮಿಷನರ್ ಆಫೀಸ್ನಿಂದ ಬಂದಿದೆ."

ಸ್ವಲ್ಪ ಹೊತ್ತು ಯಜಮಾನರು ಆಲೋಚಿಸುತ್ತಿದ್ದರು. ಕೇಶವ ಪಿಳ್ಳೆಯ ಸಲಹೆಗಳು ಅವರಿಗೆ ಆಲೋಚಿಸುವುದಕ್ಕೆ ಎಡೆಮಾಡಿಕೊಟ್ಟುವು.

ಅವರು ಕೇಳಿದರು: "ನಿಮಗೆ ಈ ಉಪಾಯಗಳೆಲ್ಲ ಹೇಗೆ ಹೊಳೆದುವು?"

ಸದ್ಯ ! ಕೇಶವ ಪಿಳ್ಳೆಗೆ ಸಮಾಧಾನವಾಯಿತು.

"ನಿನ್ನೆ ರಾತ್ರಿ ಆಲೋಚಿಸಿದಾಗ ಹೊಳೆದದ್ದು."

ಹೆಂಡತಿಯ ಜೊತೆ ಚೀಫ್ ಸೆಕ್ರೆಟರಿ ಹೇಳಿದರು:

"ಅದೆಲ್ಲಾ ಸರಿ. ಆದರೆ ಈಗ ರಂಗಪ್ರವೇಶ ಮಾಡಿಸಬೇಕು."

ಭಗವತಿ ಕುಟ್ಟಿಯಮ್ಮ ಹೇಳಿದರು:

"ರಂಗಕ್ಕಿಳಿಸಬೇಕು. ಇಲ್ಲದೆ ಹೋದರೆ ಆದೀತಾ?"

ಒಂದು ಕ್ಷಣ ಬಿಟ್ಟು ಚೀಫ್ ಸೆಕ್ರೆಟರಿ ಹೇಳಿದರು:

"ನ್ಯಾಯ ನೀತಿಗೆ ವಿರುದ್ಧ ಆಗುತ್ತೆ."

ಭಗವತಿ ಕುಟ್ಟಿಯಮ್ಮನಿಗೆ ಕೋಪ ಬಂದಿತು. ಅವರು ಬಯ್ದರು: "ನೀತಿ ನ್ಯಾಯ ನೋಡ್ತಾ ಕುಳಿತರೆ ಮುಳುಗಿ ಸಾಯಬೇಕಾಗುತ್ತೆ."

ಕೃಷ್ಣನ್ ನಾಯರ್ ಏನೋ ಆಲೋಚಿಸಿಕೊಂಡಿದ್ದರು.

ಭಗವತಿ ಕುಟ್ಟಿಯಮ್ಮ ಹೇಳಿದರು:

"ಚೆನ್ನಾಗಿ ಆಲೋಚನೆ ಮಾಡಿ ಒಂದು ವಿವರವಾದ ರಿಪೋರ್ಟು ಕಳಿಸಬೇಕು. ಆಗ ನಮ್ಮ ಕೆಲಸ ಸರಿಯಾದೀತು."

ತನಗರಿವಿಲ್ಲದಂತೆ ಕೇಶವ ಪಿಳ್ಳೆಯೂ ಹೇಳಿದ:

"ಹೌದು."

ಅವಳು ಭಾಗ್ಯವತಿಯೆಂದು ಕಿಟ್ಟುಮಾಪ ಹೇಳಿದ್ದದ್ದು ಆಗಲೂ ಕೇಶವ ಪಿಳ್ಳೆಯ ಕಿವಿಯೊಳಗೆ ಪ್ರತಿಧ್ವನಿಸಿತು.

●

# [15]

## ರಂಗಕ್ಕಿಳಿದ

ಜೀವನದಲ್ಲಿ ಸಾಮಾನ್ಯವಾಗಿ ತೊಂದರೆಯನ್ನುಂಟುಮಾಡುವ ಘಟನೆಗಳು ಕೆಲವರನ್ನು ಭೂಮಿಗಿಳಿಸಿಬಿಡುತ್ತವೆ, ಮತ್ತೆ ಕೆಲವರಿಗೆ ಸುಗ್ಗಿಯ ಕಾಲವಾಗುತ್ತದೆ. ಯುದ್ಧ, ಲಕ್ಷಾಂತರ ಕುಟುಂಬಗಳನ್ನು ನಿರ್ಗತಿಕರನ್ನಾಗಿ ಮಾಡಿದಾಗ ಕೆಲವರಿಗೆ ಸಂಪತ್ತು ಐಶ್ವರ್ಯ ತಂದುಕೊಡುವುದಿಲ್ಲವೆ? ಅದರಂತೆ. ಹಾಗಿರುವವರಿಗೆ ಯುದ್ಧ ಒಂದು ವಿನೋದದ ಆಟ. ಸರ್ಕಾರ, ರಾಜ್ಯದಲ್ಲೆಲ್ಲ ಸಭೆ ಮೆರವಣಿಗೆಗಳನ್ನು ಬಹಿಷ್ಕರಿಸಿತು. ಅದಕ್ಕೆ ಕಾರಣವನ್ನು ಸರ್ಕಾರ ಹೇಳಲು ಸಾಧ್ಯವಿತ್ತು. ಕಾಂಗ್ರೆಸ್ ಆಹ್ವಾನ ಕೊಟ್ಟ ಸಭೆಗಳಲ್ಲೆಲ್ಲ ಕಲ್ಲು ಎಸೆದಾಟ, ಗಲಭೆಗಳುಂಟಾದುವು. ಕಾಂಗ್ರೆಸ್ಸಿನ ಕಾರ್ಯಕ್ರಮಗಳನ್ನು ಎದುರಿಸುವವರಿದ್ದರು. ಪೋಲೀಸಿನವರಿಗೆ ಕಾನೂನನ್ನು ಪಾಲಿಸಬೇಕಾಗಿ ಬಂದಿತು, ಲಾಠಿಚಾರ್ಜು, ಗೋಲಿಬಾರ್‌ಗಳು ನಡೆದುವು. ಹಲವಾರು ಕಡೆಗಳಲ್ಲಿ ಮರಣಗಳು ಸಂಭವಿಸಿದುವು. ಕಾಂಗ್ರೆಸ್ ಕೂಡ ಸುಮ್ಮನಾಗಲಿಲ್ಲ. ಅವರು ಆ ಬಹಿಷ್ಕಾರವನ್ನು ಉಲ್ಲಂಘಿಸಿದರು. ಅನೇಕ ಮುಂದಾಳುಗಳು ಕಾರಾಗೃಹ ಸೇರಿದರು. ಕೈಗೆ ಸಿಕ್ಕಿದವರನ್ನು ಸರ್ಕಾರವೂ ಸುಮ್ಮನೆ ಬಿಡಲಿಲ್ಲ. ರಾಜ್ಯದಲ್ಲಿ ನೆಮ್ಮದಿಯ ಜೀವನ ಇಲ್ಲದಂತಾಯಿತು. ಆದರೆ ಕೇಶವ ಪಿಳ್ಳೆಗೆ ಅದೊಂದು ಒಳ್ಳೆಯ ಕಾಲದ ಉದಯವಾದಂತೆ ತೋರಿತು.

ಪ್ರಸಾದನನ್ನು ತನ್ನ ಪಕ್ಷಕ್ಕೆ ತೆಗೆದುಕೊಳ್ಳಲು ಕೇಶವ ಪಿಳ್ಳೆಗೆ ಸಾಧ್ಯವಾಯಿತು. ಅದು ಹೇಗೆ ಸಾಧ್ಯವಾಯಿತು ಎಂದು ಕೇಳಿದರೆ, ಕಿಟ್ಟುಮಾವ ಹೇಳುವ ಅವಳ ಭಾಗ್ಯದಿಂದ ಎಂದು ಮಾತ್ರ ಹೇಳಬಹುದು—ಎಂದು ಕೇಶವ ಪಿಳ್ಳೆಗೆ ಅನಿಸಿತು. ಆ ಬಹು ದೊಡ್ಡ ವಿಪ್ಲವಕಾರಿಯ ಭಾಗ್ಯದಿಂದಾಗಿ ಕಾಂಗ್ರೆಸ್ಸನ್ನು ಎದುರಿಸಿ ಮಾತನಾಡಲು ದೊಡ್ಡ ಕಷ್ಟವೇನೂ ಆಗಲಿಲ್ಲ. ಅದೊಂದು ಬರಿಯ ಕ್ಲೇಶರಹಿತವಾದ ಕಾರ್ಯವೆಂದು ಕೇಶವ ಪಿಳ್ಳೆಯ ಅನುಭವಕ್ಕೆ ಬಂದಿತು. ಪ್ರಸಾದನ ಜೊತೆಯಲ್ಲಿ ವಿದ್ಯಾರ್ಥಿ ಸಮೂಹದ ಮುಂದಾಳುಗಳಾದ ನಾಲ್ಕಾರು ಮಂದಿ ಬಂದರು. ಹಾಗೆ ಆ ಕಾರ್ಯ ತಾತ್ಕಾಲಿಕವಾಗಿ ನಿಂತಿತು. ಮುಖಂಡನನ್ನು ಹಿಡಿದು ಚೀಫ್ ಸೆಕ್ರೆಟರಿಯ ಮೂಲಕ ದಿವಾನರ ಹತ್ತಿರಕ್ಕೆ ಕಳಿಸಲಾಯಿತು. ದಿವಾನರೇ ಆ ರಿಪೋರ್ಟನ್ನು ಬರೆದದ್ದು. ಕಾಂಗ್ರೆಸ್ಸಿನ ನಿಜವಾದ ಸ್ವರೂಪ ಮತ್ತು ಕಾಂಗ್ರೆಸ್ಸಿನಲ್ಲಿದ್ದ ರಹಸ್ಯಗಳನ್ನೆಲ್ಲ ತಿಳಿದಿದ್ದವನೊಬ್ಬ ಬರೆದ ಮೊದಲ ಬರವಣಿಗೆಯಾಗಿತ್ತು.

ಆ ದಿನ ಕೇಶವ ಪಿಳ್ಳೆಯ ಜೀವನದಲ್ಲಿ ಬಹು ಮುಖ್ಯವಾದ ದಿನವಾಗಿತ್ತು. ಅದರಲ್ಲಿ ಸಂಶಯವಿರಲಿಲ್ಲ. ಕೇಶವ ಪಿಳ್ಳೆಯದು ಮಾತ್ರವಲ್ಲ ಚೀಫ್ ಸೆಕ್ರೆಟರಿ

ಯದೂ ಭಗವತಿ ಕುಟ್ಟಿಯಮ್ಮನದೂ ಕೂಡ. ದಿವಾನರು ಸಂತೋಷಪಟ್ಟರು. ಒಂದು ವಿಷಯವನ್ನು ಪ್ರತ್ಯೇಕವಾಗಿ ಚೀಫ್ ಸೆಕ್ರೆಟರಿಯನ್ನು ಕುರಿತು ಸ್ಮರಿಸಿಕೊಳ್ಳಬೇಕಾದದ್ದಿದೆ. ಪ್ರಸಾದನನ್ನೂ ಅವನ ಜೊತೆಯವರನ್ನೂ ಸ್ವಾಧೀನಪಡಿಸಿಕೊಂಡದ್ದು ತನ್ನ ಸಾಮರ್ಥ್ಯದಿಂದ ಎಂದು ಚೀಫ್ ಸೆಕ್ರೆಟರಿ ಹೇಳಲಿಲ್ಲ. ಭಾವಿಸಿದ್ದೂ ಇಲ್ಲ. ಮತ್ತೊಬ್ಬ ಮೇಲಿನ ನೌಕರನಾಗಿದ್ದಲ್ಲಿ ಹಾಗೆ ಹೇಳುತ್ತಿದ್ದ, ಹಾಗೆ ಭಾವಿಸುತ್ತಿದ್ದ. ಆದರ ಕೀರ್ತಿಯೂ ಹೊಣೆಗಾರಿಕೆಯೂ ಕೇಶವ ಪಿಳ್ಳೆಗೆ ದೊರೆಯಿತು. ಒಂದು ವೇಳೆ ಆತ ಹೆದರಿದ್ದಾಗಿರಬೇಕು. ಆ ನಡವಳಿಕ ತಪ್ಪಿಹೋಯಿತೆಂದು ದಿವಾನರು ದೋಷಾರೋಪಣೆ ಮಾಡುತ್ತಾರೆ ಎಂದು ವಿಚಾರಿಸಿದ್ದಾಗಿರಬಹುದು. ಅಂತು ದಿವಾನರು ಸಂತುಷ್ಟರಾಗಿದ್ದರು. ಅವರಿಗೆ ಕೇಶವ ಪಿಳ್ಳೆಯ ಮೇಲೆ ವಿಶ್ವಾಸ ಮೂಡಿತು.

ಮತ್ತೊಂದು ರೀತಿಯಲ್ಲಿ ಕೇಶವ ಪಿಳ್ಳೆ ಚರಿತ್ರಾರ್ಹನಾದ. ಅಂತಹ ಒಂದು ಮನಸ್ಸಮಾಧಾನ, ನೆಮ್ಮದಿ ಹಿಂದೆಂದೂ ದೊರೆತಿರಲಿಲ್ಲ. ಪ್ರಸಾದ್ ಕೇಶವ ಪಿಳ್ಳೆಯ ಮನಸ್ಸನ್ನು ವೇದನೆಪಡಿಸಿದ್ದ. ಯೂನಿವರ್ಸಿಟಿ ಡಿಗ್ರಿಯ ಅಂತಸ್ತನ್ನು ಮೂರು ಕಾಸಿಗೆ ಮಾರಿದವನೆಂದು ಮುಖದ ಮೇಲೆ ಹೊಡೆದ ಹಾಗೆ ಮಾತಾಡಿದ್ದ. ಅಂದು ಮನಸ್ಸಿಗೆ ಉಂಟಾದ ಸಿಟ್ಟು ಇನ್ನೂ ಹೋಗಿರಲಿಲ್ಲ. ಯಾಕೋ ಏನೋ ಪ್ರತಿದಿನವೂ ಅದು ನೆನಪಾಗುತ್ತಿತ್ತು. ಆಗ ಒಂದು ರೀತಿಯ ನೋವುಂಟಾಗುತ್ತಿತ್ತು. ಮೂರು ಕಾಸಿಗೆ ಡಿಗ್ರಿ ಮಾರಿಕೊಂಡವನೇ ಬೇಕಾಗಿ ಬಂದಿತು; ಡಿಗ್ರಿಯ ಸರಿಯಾದ ಬೆಲೆಯನ್ನು ಕೇಶವ ಪಿಳ್ಳೆ ತೋರಿಸಿಕೊಡಲು. ಆದರೆ ಆ ಆಶೆ ಕೇಶವ ಪಿಳ್ಳೆಗುಂಟಾಗಲಿಲ್ಲ. ಪ್ರಸಾದನಿಗೆ ಒಂದು ಉದ್ಯೋಗವನ್ನು ದೊರಕಿಸಿಕೊಡಲು ಸಾಧ್ಯವಾಯಿತಲ್ಲ ಎನ್ನಿಸಿತು. ಅದು ಪ್ರಸಾದನ ಮೇಲಿನ ಸ್ನೇಹದಿಂದಲ್ಲ. ಅವನು ಕ್ರಾಂತಿಕಾರನಾಗಿ ಹೊರಟು ಜೈಲು ಸೇರಿ ಬಿಡುಗಡೆಯಾಗಿ ಬದುಕನ್ನು ವ್ಯರ್ಥಗೊಳಿಸಿಕೊಳ್ಳುತ್ತಿದ್ದಾನೆ ಎನ್ನುವುದಕ್ಕಾಗಿಯೂ ಅಲ್ಲ. ತನ್ನನ್ನು ಅವಮಾನಿಸಿದ್ದಕ್ಕೆ ಪ್ರತೀಕಾರವನ್ನೆಸಗಬೇಕು ಎಂದೂ ಅಲ್ಲ. ತನ್ನ ಒಳ್ಳೆಯ ಗುಣದಿಂದ ಅವನು ಮಾಡಿದ್ದು. ಆ ನಿಜವಾದ ಗುಣವೇ ಅವನಿಗೆ ಅಸಮಾಧಾನವನ್ನು ತಂದುಕೊಟ್ಟದ್ದು. ದಿವಾನರನ್ನು ಕಂಡು ಹಿಂದಿರುಗುವಾಗ ಕೇಶವ ಪಿಳ್ಳೆ ಪ್ರಸಾದನ ಹತ್ತಿರ ಹೀಗೆ ಹೇಳಿದ: "ಪ್ರಸಾದ, ಬೇಗ ಬೇಗ ಮೇಲೆ ಬರ್ತೀಯೆ. ಒಂದು ವಿಷಯ: ಆಗ ನನ್ನನ್ನೂ ನೋಡಿಕೊಳ್ಳಬೇಕು, ಕೈಹಿಡಿಯಬೇಕು."

ಹಾಗೆ ಹೇಳುವುದಕ್ಕೆ ಕಾರಣವೂ ಇತ್ತು. ದಿವಾನರು ಅವನಿಗೆ ಕುಳಿತುಕೊಳ್ಳುವುದಕ್ಕೆ ಸ್ಥಳ ಕೊಟ್ಟರು. ಅವರು ಆತ್ಮೀಯತೆಯಿಂದ ಮಾತನಾಡಿದರು. ಪ್ರಸಾದನೂ ಸಭ್ಯನಂತೆ ನಡೆದುಕೊಂಡ. ಪ್ರಸಾದನಿಗೆ ಸೂಪರಿಂಟೆಂಡೆಂಟ್ ಗ್ರೇಡಿನ ಉದ್ಯೋಗವನ್ನು ಕೊಡಲಿದ್ದದ್ದು. ಕೇಶವ ಪಿಳ್ಳೆಯ ಸ್ಥಿರವಾದ ಸ್ಥಾನ ಇನ್ನೂ ಕೆಳದರ್ಜೆಯ ಕ್ಲಾರ್ಕಿನದು. ಕೇಶವ ಪಿಳ್ಳೆಯ ನೀತಿಯನ್ನು ಚೀಫ್ ಸೆಕ್ರೆಟರಿಯೂ ಸ್ವೀಕರಿಸಿದರು. ಅವರೂ ಅದರಲ್ಲಿ ಜಯಿಸಿದರು. ಕಾಂಗ್ರೆಸ್ಸಿನ ಇಬ್ಬರು ಕಾರ್ಯಕಾರಿ ಸಮಿತಿಯ ಮುಖಂಡರನ್ನು ಬಲಿಬೀಸಿ

ಹಿಡಿಯಲು ಸಾಧ್ಯವಾಯಿತು. ಅವರು ಶಕ್ತಿ ಸಾಮರ್ಥ್ಯವಿದ್ದ ಮುಂದಾಳುಗಳಾಗಿದ್ದರು. ಅನಂತರ ಕೇಶವ ಪಿಳ್ಳೆಗೆ ಕೆಲವು ಕೆಳದರ್ಜೆಯ ಮುಂದಾಳುಗಳು ಸಿಕ್ಕಿದರು. ಅವರು ಕಾಂಗ್ರೆಸ್ಸಿನಲ್ಲಿ ಎರಡನೆಯ ದರ್ಜೆಯ ಮುಂದಾಳುಗಳಾಗಿದ್ದರು.

ಕಾಂಗ್ರೆಸ್ಸಿನವರು ಅಕ್ರಮ ನಿವಾರಣೆಯ ಕುರಿತು ಮಾತನಾಡುತ್ತಿದ್ದರೂ ಅವರ ಚಳವಳಿಯ ಮಾರ್ಗ ಅದಲ್ಲ ಎಂದು ಭಾವಿಸಿರಬೇಕಾಗಿತ್ತು. ಅವೆಲ್ಲವು ಚೀಫ್ ಸೆಕ್ರೆಟರಿ ಸಮರ್ಪಿಸಿದ ರಿಪೋರ್ಟ್ ದಿವಾನರು ಅಂಗೀಕರಿಸಿದ ನಂತರವೇ ಕೈಗೊಳ್ಳಬೇಕಾಗಿದ್ದ ಕಾರ್ಯಕ್ರಮಗಳಾಗಿದ್ದುವು. ಅದನ್ನು ಕೈಗೊಳ್ಳಬೇಕಾಗಿದ್ದ ಜವಾಬ್ದಾರಿ ಚೀಫ್ ಸೆಕ್ರೆಟರಿಯದು. ಪೇಷ್ಕಾರರು, ಪೋಲೀಸಿನ ಉನ್ನತ ಅಧಿಕಾರಿಗಳು ಇಂತಹ ಆಳು ಗಳನ್ನು ಬರಮಾಡಿದ ಬಳಿಕ ಚೀಫ್ ಸೆಕ್ರೆಟರಿ ಆಲೋಚಿಸಿ ಕಾರ್ಯಕ್ರಮಗಳನ್ನು ಸಿದ್ಧಮಾಡುತ್ತಿದ್ದರು.

ನೆಯ್ಯಾಟಿಂಕರದಲ್ಲಿ ಒಂದು ಬಹುದೊಡ್ಡ ಮೆರವಣಿಗೆಯೂ ಕಾಂಗ್ರೆಸ್ ಸಮ್ಮೇಳನವೂ ನಡೆಯುತ್ತಿತ್ತು. ಅಲ್ಲಿಗೆ ಹೋಗಿ ಮೊತ್ತಮೊದಲಾಗಿ ಆ ಕಾರ್ಯಕ್ರಮವನ್ನು ಪರೀಕ್ಷಿಸುವುದಕ್ಕಾಗಿ ಚೀಫ್ ಸೆಕ್ರೆಟರಿ ತೀರ್ಮಾನಿಸಿದರು. ಎಲ್ಲ ಏರ್ಪಾಡುಗಳನ್ನೂ ಇತರ ಅಧಿಕಾರಿಗಳು ಮಾಡುವುದಿದ್ದರೂ ಚೀಫ್ ಸೆಕ್ರೆಟರಿಗೆ ಮನಸ್ಸಮಾಧಾನವಿಲ್ಲ. ಪ್ರತ್ಯೇಕವಾಗಿ ಫಸ್ಟ್ ಕ್ಲಾಸ್ ಮ್ಯಾಜಿಸ್ಟ್ರೇಟ್ ಮತ್ತು ಇನ್ಸ್‌ಪೆಕ್ಟರ್ ಕ್ರಿಶ್ಚಿಯನ್ನರು. ಅವರು ಒಂದು ರೀತಿಯ ಸಿ. ಐ. ಡಿ.ಯಂತೆ ಕೇಶವ ಪಿಳ್ಳೆಯನ್ನು ನಿಯೋಗಿಸಿದರು.

ನಿಜವಾಗಿಯೂ ಕೇಶವ ಪಿಳ್ಳೆಗೆ ಪ್ರಾಧಾನ್ಯ ದೊರೆಯುವ ಒಂದು ಕಾರ್ಯಕ್ರಮ ವಲ್ಲವೆ ಅದು? ಮೇಲಿನ ಉದ್ಯೋಗಸ್ಥರನ್ನು ಪರೀಕ್ಷಿಸಬೇಕೆಂದು ಹೇಳಲಾಗದಿದ್ದರೂ ಅವರ ಕಾರ್ಯ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ತಿಳಿಯಲು ನಿಯೋಜಿಸಲಾಗದ ಒಂದು ಸಣ್ಣ ಜವಾಬ್ದಾರಿ. ಅವನು ನೀಡುವ ವಿವರಗಳನ್ನು ಪಾರ್ಕ್ ವ್ಯಾನಲ್ಲೂ ಭಕ್ತಿವಿಲಾಸದಲ್ಲೂ ಸ್ವೀಕರಿಸಲಾಗುತ್ತದೆ. ಅದಕ್ಕೆ ಬೇಕಾಗಿ ಬರುವ ಹಣವನ್ನು ಕೊಟ್ಟು ಕಳುಹಿಸಿದ್ದದ್ದು ಕೇಶವ ಪಿಳ್ಳೆಯ ಹತ್ತಿರ. ಅದಕ್ಕೆ ಅರ್ಥವಿಲ್ಲವೆ? ಈ ರೀತಿಯಲ್ಲಿ ಮೇಲಿನ ಉದ್ಯೋಗಸ್ಥರ ಮಧ್ಯೆ ಅವನಿಗೆ ಪ್ರಾಧಾನ್ಯತೆಯೇ ದೊರೆಯಿತು. ಆದರೆ ಕೇಶವ ಪಿಳ್ಳೆ ಹಾಗೆ ಭಾವಿಸಲಿಲ್ಲ. ಅವನು ಒಂದು ಕೆಳದರ್ಜೆಯ ಕ್ಲಾರ್ಕ್ ಆಗಿಯೇ ಪಂಚೆಯನ್ನು ಮೇಲೆತ್ತಿ ಕಟ್ಟಿ ಅವರ ಮುಂದೆ ನಿಂತಿದ್ದ. 'ಜೀ ಹುಜೂರ್' ಹೇಳಲು ಅವನಿಗೆ ಯಾವ ಸಂಕೋಚವೂ ಇರಲಿಲ್ಲ, ಕೇಶವ ಪಿಳ್ಳೆ 'ಮಿಸ್ಟರ್ ಕೇಶವ ಪಿಳ್ಳೆ' ಆಗಿದ್ದರೂ.

ಸರ್ಕಾರದ ಹಣವನ್ನು ಕೊಟ್ಟು ತುಂಬ ಜನರನ್ನು ಸಂಘಟಿಸಿದ್ದ. ಮೆರವಣಿಗೆಯ ಮೇಲೆ ಕಲ್ಲು ಎಸೆದಾಟ ಪ್ರಾರಂಭವಾಯಿತು. ಮೆರವಣಿಗೆ ಹೊರಟಿದ್ದವರೂ ಅಕ್ರಮ ವನ್ನೆಸಗಿದರು. ಎಷ್ಟೋ ಜನ ಪೋಲೀಸಿನವರಿಗೆ ಏಟುಬಿದ್ದಿತು. ಪೋಲೀಸಿನವರು ಗೋಲಿಬಾರ್ ಮಾಡಬೇಕಾಗಿ ಬಂದಿತು. ಗೋಲಿಬಾರಿನಲ್ಲಿ ಮೂವರು ಸತ್ತರು. ತುಂಬ

ಜನರಿಗೆ ಗುಂಡಿನೇಟು ತಗಲಿತ್ತು. ಸರ್ಕಾರಕ್ಕೆ ಜಯವುಂಟಾಯಿತು.

ಚೀಫ್ ಸೆಕ್ರೆಟರಿ ಸಂತೋಷದಿಂದ ಕುಣಿದಾಡಿದರು. ಅವರು ಕೇಶವ ಪಿಳ್ಳೆಯನ್ನು ಆಲಿಂಗಿಸಿಕೊಂಡರು. ನಿಜವಾಗಿಯೂ ಈ ಘಟನೆಯ ಸನ್ಮಾನ ಕೇಶವ ಪಿಳ್ಳೆಗೆ ದೊರೆಯ ಬೇಕಾದದ್ದೇ. ಭಗವತಿ ಕುಟ್ಟಿಯಮ್ಮ ಅಸಂದಿಗ್ಧವಾದ ಅಭಿಪ್ರಾಯವುಳ್ಳವರಾಗಿದ್ದರು.

ಗಂಡನ ಹತ್ತಿರ ಕೇಳಿದರು:

"ಇದೆಲ್ಲ ಆದದ್ದು ನಿಮ್ಮ ಸಾಮರ್ಥ್ಯದಿಂದಲಾ?"

ಸಂಕೋಚದಿಂದ ಚೀಫ್ ಸೆಕ್ರೆಟರಿ ಅದಕ್ಕೆ ಉತ್ತರ ಹೇಳಿದ್ದು: "ನಾನು ಹಾಗಂದೆನೆ?"

ಅದರಿಂದಲ್ಲ ಎನ್ನುವ ರೀತಿಯಲ್ಲಿ ಭಗವತಿ ಕುಟ್ಟಿಯಮ್ಮ ಹೇಳಿದರು: "ಕೇಶವ ಪಿಳ್ಳೆಯ ತಲೆಗೆ ಆಗ ಈ ಕಾರ್ಯಕ್ರಮ ಹೊಳೆಯದೇ ಇದ್ದಿದ್ದರೆ ಈಗ ಗೊತ್ತಾಗ್ತಿತ್ತು."

ಒಂದು ಕ್ಷಣ ಬಿಟ್ಟು ಆಕೆ ಕೇಳಿದರು: "ಸ್ವಂತ ಸಾಮರ್ಥ್ಯದಿಂದಲೇನಾ ದಿವಾನ ರನ್ನು ಕೈಲಿಟ್ಟುಕೊಂಡಿರುವುದು?"

ಅದನ್ನು ಅಲ್ಲ ಎನ್ನಲಾಗದೆ ಕೃಷ್ಣನ್ ನಾಯರ್ ಹೇಳಿದರು:

"ದಿವಾನರಿಗೆ ಕೇಶವ ಪಿಳ್ಳೆಯ ಸಾಮರ್ಥ್ಯ ಗೊತ್ತಿದೆ. ಸಮರ್ಥನಾದ ಯುವಕ ಅಂತ ಅವರು ಹೇಳಿದರು. ದಿವಾನರಿಂದ ಅಂತಹ ಒಂದು ಅಭಿಪ್ರಾಯವನ್ನು ಪಡೆಯೋ ದಕ್ಕೆ ಸಾಧ್ಯವಿಲ್ಲ. ಒಳ್ಳೆ ಅಭಿಪ್ರಾಯವಿದ್ದರೂ ಅದನ್ನು ಹೇಳ್ತಾರಾ? ಒಳ್ಳೆಯ ಕೆಲಸ!"

ಭಗವತಿ ಕುಟ್ಟಿಯಮ್ಮ ಕೇಳಿದರು: "ಅದಕ್ಕೆ ಈಗ ಅವನಿಗಾಗಿ ಏನು ಮಾಡ್ತಾರೆ?"

"ಪ್ರೊಮೋಷನ್ ಕೊಡ್ತಾರೆ. ಅವನೀಗ ಕೆಲಸಕ್ಕೆ ಸೇರಿದ್ದು ಅಷ್ಟೇ ಅಲ್ಲವಾ?"

ಅದು ವರೆಗೂ ಜಯಪ್ರದವಾಗಿತ್ತು ಎಂದು ಕೇಶವ ಪಿಳ್ಳೆಗೆ ಗೊತ್ತಿತ್ತು. ಕೇವಲ ವಿಜಯವೆಂದು ಮಾತ್ರ ಹೇಳಿದರೆ ಸಾಲದು. ಒಂದು ಅಸಾಧಾರಣವಾದ ವಿಜಯ ವಾಗಿತ್ತು ಅದು. ದಿವಾನರ ವರೆಗೆ ಅವನ ವಿಷಯವಾಗಿ ಸಂತೃಪ್ತಿಯಿತ್ತು. ತನ್ನನ್ನು ತಾನು ರಕ್ಷಿಸಿಕೊಂಡದ್ದು ಮಾತ್ರವಲ್ಲ, ಚೀಫ್ ಸೆಕ್ರೆಟರಿಯೂ ಅವನಿಂದಾಗಿ ಉಳಿದು ಕೊಂಡರು. ಅನುಭವವೂ ಬುದ್ಧಿಯೂ ಇರುವ ಚೀಫ್ ಸೆಕ್ರೆಟರಿಯ ವರೆಗೆ ಅಡಚಣೆ ಗಳುಂಟಾಗಿದ್ದಾಗ ತನಗೆ ತನ್ನ ಬುದ್ಧಿಗೆ ಹೇಗೆ ಹೊಳೆದುವು ಎಂದು ಕೇಶವ ಪಿಳ್ಳೆ ಆಶ್ಚರ್ಯಪಟ್ಟ. ಅದು ಒಂದು ಮಿಂಚಿನ ಹಾಗೆ ಹೊಳೆದಿತ್ತು. ಅಷ್ಟೊಂದು ಬುದ್ಧಿಶಕ್ತಿ ತನಗಿದೆಯೆ? ಹೇಗಾದರೂ ಸ್ಟೇಟ್ ಕಾಂಗ್ರೆಸಿನ ಚಳುವಳಿಯನ್ನು ಎದುರಿಸಬೇಕು ಎನ್ನುವ ಆಲೋಚನೆಯಲ್ಲಿ ಅಂತಹ ಉಪಾಯ ಹೊಳೆಯಿತು.

ದೈವಾನುಗ್ರಹದಿಂದ ನಡೆದದ್ದು ಎಂದು ಮಾತ್ರ ಕೇಶವ ಪಿಳ್ಳೆ ಇದನ್ನು ವ್ಯಾಖ್ಯಾ ನಿಸಬಲ್ಲವನಾಗಿದ್ದ ಅಷ್ಟೆ. ಅದರ ಜೊತೆಗೆ ಕಿಟ್ಟುಮಾವ ಹೇಳುತ್ತಿದ್ದ, "ಅವಳು ಭಾಗ್ಯವತಿ" ಎನ್ನುವುದೂ ಆಗಿರಬಹುದು. ಇಲ್ಲದಿದ್ದಲ್ಲಿ ಕೈಹಿಡಿದ ಕೆಲಸಗಳು ಈ ರೀತಿ

ಯಲ್ಲಿ ನಡೆಯುತ್ತಿರಲಿಲ್ಲ. ಯಾವುದೋ ಒಂದು ಅತೀತ ಶಕ್ತಿ ತನ್ನನ್ನು ಕೈಹಿಡಿದು ನಡೆಸುತ್ತಿದೆ. ಅದೇ ಶಕ್ತಿ ಅಪಾಯಗಳಿಂದ ರಕ್ಷಿಸುತ್ತಿದೆ. ಪ್ರಧಾನ ಘಟ್ಟಗಳಲ್ಲಿ ಭಾಗ್ಯೋನ್ಮುಖನನ್ನಾಗಿ ಬದುಕನ್ನು ಬದಲಾಯಿಸುತ್ತಿದೆ—ಇನ್ನು ಮೇಲೂ ಆ ಶಕ್ತಿಯೇ ಕೈಹಿಡಿದು ನಡೆಸುತ್ತದೆ ಎಂದು ಅವನಿಗೆ ವಿಶ್ವಾಸವಿದೆ.

ಕೇಶವ ಪಿಳ್ಳೆಗೆ ಪ್ರೊಮೋಷನ್ ಸಿಕ್ಕಿತು. ಸಾಮರ್ಥ್ಯವನ್ನು ಪರಿಗಣಿಸಿಕೊಟ್ಟ ಪ್ರೊಮೋಷನ್ ಅದು. ಮೂರು ನಾಲ್ಕು ಮುಖ್ಯ ಸ್ಥಳಗಳಲ್ಲಿ ನೈಯಾಟಿಕರದಂತಹ ಪ್ರಕರಣಗಳು ನಡೆದುವು. ಎಲ್ಲ ಕಡೆಗಳಲ್ಲೂ ಜನಸಮೂಹ ಅಕ್ರಮವನ್ನೆಸಗುತ್ತಿತ್ತು. ದ್ವೇಷಗೊಂಡ ಸ್ಟೇಟ್ ಕಾಂಗ್ರೆಸ್ ಮುಂದಾಳುಗಳ ದೂಷಣೆಗಳು ದಿವಾನರ ಎದುರಿನಲ್ಲೇ ನಡೆದುವು. ಅವೆಲ್ಲವೂ ವೈಯಕ್ತಿಕ ದೂಷಣೆಗಳಾಗಿದ್ದುವು. ಚಳವಳಿಯನ್ನು ನಿಲ್ಲಿಸ ಬೇಕೆಂದು ಗಾಂಧೀಜಿ ಪ್ರಾರ್ಥಿಸಿದರು. ಹಾಗೆ ಚಳವಳಿ ನಿಂತಿತು.

ಕಳೆದ ಕೆಲವಾರು ವಾರಗಳಿಂದ ಎಂದಲ್ಲ, ತಿಂಗಳುಗಳಿಂದಲೂ ಕೇಶವ ಪಿಳ್ಳೆಗೆ ಕೈತುಂಬ ಕೆಲಸ ಇತ್ತು. ಎಲ್ಲವನ್ನೂ ಸಮರ್ಪಕವಾಗಿ ಮಾಡಿ ಮುಗಿಸಿದ. ಉದ್ದೇಶ ವನ್ನು ಸಾಧಿಸಿಯೂ ಇದ್ದ. ಅವನ ದೃಷ್ಟಿಯಲ್ಲಿ ಕಾಂಗ್ರೆಸ್ ಸತ್ತಿತು. ಕೆಲವು ದಿನಗಳ ರಜದಲ್ಲಿ ಕೇಶವ ಪಿಳ್ಳೆ ಊರಿಗೆ ಹೋದ. ಮೊದಲು ಅಲ್ಲಿಗೆ ಹೋದ ಕೇಶವ ಪಿಳ್ಳೆಯಲ್ಲ, ಈಗ ಅಲ್ಲಿಗೆ ಹೋಗುತ್ತಿರುವುದು. ಹಾಗೆ ಹೋಗುತ್ತಿರುವುದಕ್ಕೆ ಒಂದು ಉದ್ದೇಶವಿತ್ತು.

ಮಗ ಒಂದು ಹೋರಾಟ ನಡೆಸಿ ಜಯಿಸಿ ಬರುತ್ತಿದ್ದಾನೆ. ಅವನು ಇಂದು ದೇಶ ಕ್ಕೆಲ್ಲ ಗೊತ್ತಿರುವವನು. ಉದ್ಯೋಗ ದೊಡ್ಡದಲ್ಲದೇ ಇದ್ದರೂ ಎಲ್ಲ ಪೇಷ್ಕಾರರೂ ಡಿಪಾರ್ಟ್‌ಮೆಂಟ್‌ಗಳ ಮುಖ್ಯಾಧಿಕಾರಿಗಳೂ ಗಣನೀಯವಾದ ಒಂದು ಸ್ಥಾನವನ್ನು ಕೊಟ್ಟರು. ಈ ಮಧ್ಯೆ ಮನೆಯ ಮುಂಭಾಗದ ಜಮೀನು ತೆಗೆದುಕೊಂಡ. ಕಾಂಗ್ರೆಸ್ಸಿನ ಎದುರು ಹೋರಾಟ ನಡೆಸಿದ್ದರ ಹಣದಲ್ಲಿ ಸಂಪಾದಿಸಿದ್ದಾಗಿತ್ತು ಅದು.

ಆದರೆ ಅಮ್ಮ ಈಗಲೂ ಗಾಬರಿಯಿಂದಲೇ ಇದ್ದಳು. ತಂದೆಗೂ ಗಾಬರಿ ಇತ್ತು. ಆದರೂ ಹೊರಗೆ ತೋರಿಸಿಕೊಳ್ಳದೆ ಇದ್ದರು. ಕಾಂಗ್ರೆಸ್ ಚಳುವಳಿಯ ಕಾಲದಲ್ಲಿ ಮಗ ಮೊದಲು ಏನು ಮಾಡುತ್ತಿದ್ದನೆಂದು ಆ ತಂದೆ ತಾಯಿಗಳಿಗೆ ತಿಳಿದಿರಲಿಲ್ಲ. ಒಬ್ಬ ಕ್ಲಾರ್ಕಿಗೆ ಇದರಲ್ಲೇನು ಕೆಲಸ ಎಂದು ಪಪ್ಪು ಪಿಳ್ಳೆ ಕೇಳುತ್ತಿದ್ದರು. ಅದೆಲ್ಲ ಪೋಲೀಸಿ ನವರಿಗೆ ಬಿಟ್ಟದ್ದು. "ಭಗವಂತಾ, ನನ್ನ ಮಗನಿಗೆ ಪೋಲೀಸಿನಲ್ಲಿ ಕೆಲಸ ಸಿಕ್ಕದೇ ಹೋದದ್ದು ನನ್ನ ಭಾಗ್ಯ" ಎಂದು ಕುಟ್ಟಿಯಮ್ಮ ಆ ಗೋಲಿಬಾರ್ ವಿಷಯ ಮಾತನಾಡಿ ದಾಗ ಹೇಳಿದ್ದು. ಆದರೆ ಅನಂತರ ಅವರು ಸ್ವಲ್ಪ ಸ್ವಲ್ಪವಾಗಿ ವಿಷಯವನ್ನು ತಿಳಿದರು. ಮಗ ಮನೆಗೆ ಬಂದ ಒಡನೆಯೇ ತಾಯಿಗೆ ಕೇಳಬೇಕೆನಿಸಿದ್ದದ್ದು ಇದು.

"ಯಾಕಪ್ಪ, ಕರುಣೆಯಿಲ್ಲದೆ ದ್ರೋಹ ಮಾಡಿಸಿದೆ?" ಅದು ಅಧಿಕಾರದ ಮತ್ತು ಇಷ್ಟದ ಸ್ವರದಲ್ಲಿ ಕೇಳಿದ್ದು. ಮಗ ಮಾಡಿದ್ದೆಲ್ಲ ತಪ್ಪು ಎನ್ನಿಸಿತ್ತು.

"ನಾನೇನು ದ್ರೋಹ ಮಾಡಿದೆನಮ್ಮ?" ಇದು ಮಗನ ಉತ್ತರ.

ತಿಳಿದಿದ್ದ ಸಂಗತಿಗಳೆಲ್ಲ ಒಂದೊಂದಾಗಿ ಹೊರಗೆ ಬರತೊಡಗಿದುವು. ಕುಟ್ಟಿಯಮ್ಮ ಹೇಳತೊಡಗಿದಳು:

"ಈ ಜನರನ್ನೆಲ್ಲ ಗುಂಡು ಹೊಡೆಸಿ ಕೊಲ್ಲಿಸಿದ್ದು. ಹೊಡೆಸಿ ಹೊಡೆಸಿ ಕ್ಷಯ ರೋಗ ಬರಿಸಿದ್ದು...... ಕೈಕಾಲು ಮುರಿಸಿದ್ದು."

ಅದಕ್ಕೆ ಕೇಶವ ಪಿಳ್ಳೆ ಸುಮ್ಮನೆ ನಗಾಡಿದ ಅಷ್ಟೆ. ಕುಟ್ಟಿಯಮ್ಮ ಹೇಳಿದಳು:

"ಅದು ತೀರ ದ್ರೋಹ. ಶ್ರೀ ಪದ್ಮನಾಭನ ಮುದ್ರೆಯ ಹತ್ತು ನಾಣ್ಯ ಸಂಪಾದಿಸೋದು ಅದಕ್ಕಲ್ಲ. ಜನರನ್ನು ಕಾಪಾಡೋದಕ್ಕೆ."

ಅಷ್ಟು ಆದ ಮೇಲೆ ಪಪ್ಪು ಪಿಳ್ಳೆಗೂ ಮಾತನಾಡಬೇಕೆನಿಸಿತು.

"ಅದು ಹೋಗಲಿ. ಪ್ರಜೆಗಳಿಗೆ ರಾಜನ ಮೇಲೆ ಪ್ರೀತಿ ಇಲ್ಲದೇ ಹೋದರೋ?"

ಕುಟ್ಟಿಯಮ್ಮ ಸಿಟ್ಟಿನಿಂದ ಹೇಳಿದಳು: "ಪ್ರಜೆಗಳು ಹಾಗಲ್ಲವಲ್ಲ. ನನಗೇನೂ ಪಾಠ ಕಲಿಸಬೇಡಿ ಗೊತ್ತಾಯ್ತಾ? ದಿವಾನರ ಹತ್ರ ಪ್ರಜೆಗಳಿಗೆ ದ್ವೇಷ."

ಪಪ್ಪು ಪಿಳ್ಳೆ ರೇಗಿದರು: "ಹೋಗೇ ಹಾಳಾದೋಳೇ. ನಿನಗೇನು ಗೊತ್ತು?"

ಅದಕ್ಕೆ ಕುಟ್ಟಿಯಮ್ಮ ಕಿವಿಗೊಡಲಿಲ್ಲ. ಅವಳು ಮಗನ ಹತ್ತಿರ ಹೇಳಿದಳು:

"ಕುಟುಂಬಕ್ಕೆ ಶಾಪ ಹಾಕೋ ಹಾಗೆ ಮಾಡಬೇಡಪ್ಪ. ಅದೂ ಆ ಹೆಣ್ಣು ಬಸುರಿಯಾಗಿರುವಾಗ."

ಆ ಮಾತನ್ನು ಅಂಗೀಕರಿಸಿ ಪಪ್ಪು ಪಿಳ್ಳೆ ಅರ್ಥಪೂರ್ಣವಾಗಿ ಒಂದು ರೀತಿಯಲ್ಲಿ ಕ್ರಾಸ್ ಮಾಡುವವರಂತೆ ಪ್ರಾರಂಭಿಸಿದರು:

"ನಿನ್ನ ಕೆಲಸ ಪೋಲೀಸ್‌ನಲ್ಲೇನೋ?"

ಕೇಶವ ಪಿಳ್ಳೆ ಏನೂ ಮಾತನಾಡಲಿಲ್ಲ.

ಪಪ್ಪು ಪಿಳ್ಳೆ ಪುನಃ ಕೇಳಿದರು:

"ಹೌದೇನೋ?"

"ಅಲ್ಲ" ಎಂದು ಯಾಂತ್ರಿಕವಾಗಿ ಕೇಶವ ಪಿಳ್ಳೆ ಹೇಳಿದ. ಪಪ್ಪು ಪಿಳ್ಳೆಯ ಮತ್ತೊಂದು ಗಡುಸಾದ ಪ್ರಶ್ನೆ:

"ಮತ್ತೆ ಯಾಕೆ ನೀನು ಇದನ್ನೆಲ್ಲ ಮಾಡಿಸಿದೆ?"

ಹೇಳುವುದಾದರೆ ಏನೆಲ್ಲ ಹೇಳುವುದಿತ್ತು!

ಪಾರ್ಕ್ ವ್ಯೂನ ಕೆಲಸದ ರೀತಿ......... ಅದರಲ್ಲಿ ತಾನು ಪಾಲುಗೊಂಡ ಬಗೆ .........ಅದನ್ನೆಲ್ಲ ಹೇಳಬೇಕಾಗುತ್ತದೆ. ಹೇಳುವುದಕ್ಕೆ ಹೊರಟರೆ ಒಂದು ದಿನ ಸಾಲದು. ಅವನು ಹೇಳಿದ:

"ಇದು ಒಳ್ಳೆಯದಕ್ಕೆ. ದಿವಾನರು ನನ್ನನ್ನು ತುಂಬ ಮೆಚ್ಚಿಕೊಂಡಿದ್ದಾರೆ."

ಪಪ್ಪು ಪಿಳ್ಳೆ ಒಬ್ಬ ನ್ಯಾಯಾಧೀಶರಂತೆ ಮುಂದಿನ ಪ್ರಶ್ನೆ ಕೇಳಿದರು:

"ಅದಕ್ಕೆ ನೀನು ಇದನ್ನೆಲ್ಲ ಮಾಡಿಸಿದೆ ಅಲ್ಲವಾ? ಒಪ್ಪಿಕೊಳ್ತೀಯಾ?"

ಕೇಶವ ಪಿಳ್ಳೆ ತಂದೆಗೆ ಸಮಾಧಾನವನ್ನು ಹೇಳಬೇಕಾಗಿತ್ತು.

"ಈ ದೇಶದ್ರೋಹಿಗಳಿಗೆ ಮತ್ತೇನು ಮಾಡಬೇಕು?"

ಈ ಕಾಂಗ್ರೆಸ್‌ನವರು ಮಾಡಿದ್ದು ಕೂಡ ದೇಶದ್ರೋಹ ಮತ್ತು ಅಪರಾಧ ಎನ್ನುವುದರಲ್ಲಿ ಪಪ್ಪು ಪಿಳ್ಳೆಗೆ ಅಭಿಪ್ರಾಯ ವ್ಯತ್ಯಾಸವಿಲ್ಲ. ರಾಜ ಪ್ರತ್ಯಕ್ಷ ದೇವತೆ. ರಾಜನಿಲ್ಲದಿದ್ದರೆ ಗತಿಯೇನು? ಆದರ ಜೊತೆಗೆ ಅಸ್ಪೃಶ್ಯತೆ ಇರಬಾರದೆಂದು ಹೇಳುತ್ತಿದ್ದ ಗಾಂಧೀಜಿಯನ್ನು ಕುರಿತೂ ಹೇಳುವುದಿತ್ತು. ಸರ್ಕಾರ ಈ ವಿಷಯದಲ್ಲಿ ಬಲವಾಗಿ ನಿಂತುಕೊಳ್ಳದೆ ಹೋದರೆ ಮನೆಮಠಕ್ಕೆ ಯಾವ ರಕ್ಷಣೆ? ಆದರೆ ಪಪ್ಪು ಪಿಳ್ಳೆ ಕೇಳುವ ಪ್ರಶ್ನೆಯಲ್ಲ.

"ಅದೆಲ್ಲ ಸರಿಕಣೋ. ಇರುವೆ ಹೋಮ ಮಾಡೋದಕ್ಕೆ ಕಾಲಟಿಯೇ ಆಗ ಬೇಕಾ? ಇದನ್ನೆಲ್ಲ ಮಾಡಿಸೋದಕ್ಕೆ ನೀನೇ ಆಗಬೇಕಾ? ಇಂಥ ಕಠಿಣ ಪರಿಸ್ಥಿತಿಯಲ್ಲಿ ಕಂಡರೂ ಕಾಣದ ಹಾಗೆ ಮರೆಯಾಗಿರಬೇಕು."

ಕೇಶವ ಪಿಳ್ಳೆಗೆ ಆಗ ಒಂದು ವಿಷಯ ತಿಳಿದುಕೊಳ್ಳಬೇಕಾಗಿತ್ತು.

"ಇದನ್ನೆಲ್ಲ ಇಲ್ಲಿ ಬಂದು ನಿಮಗೆ ಹೇಳಿದ್ದು ಯಾರು?"

ಅದಕ್ಕೆ ಉತ್ತರ ಹೇಳಿದ್ದು ಕುಟ್ಟಿಯಮ್ಮ :

"ಅದೇ ಆ ತೋಟ್ಟುಂಕರದಲ್ಲಿ ಒಂದು ಅಂಗಡಿ ಇಲ್ಲವಾ? ಮೊದಲು ದೇವಸಿ ಮಾಪಿಳ್ಳೆ ವ್ಯಾಪಾರ ಮಾಡ್ತಿದ್ದದ್ದು. ಅಲ್ಲಿ ಈಗ ವ್ಯಾಪಾರ ಇಲ್ಲ. ಅಲ್ಲಿ ಈಗೇನು ಅಂತ.........?"

ಗಂಡನ ಹತ್ತಿರ ಕುಟ್ಟಿಯಮ್ಮ ಕೇಳಿದಳು:

"ಅದೇನು ಹೇಳಿ?"

ಅದಕ್ಕೆ ಉತ್ತರ ಹೇಳಿದ್ದು ಕಿಟ್ಟುಮಾವ:

"ವಾಚನಾಲಯ."

ಕುಟ್ಟಿಯಮ್ಮ ಹೇಳಿದಳು:

"ಅಲ್ಲಿ ಈ ಊರಿನ ಹುಡುಗರ್ನೆಲ್ಲ ಸಂಜೆಹೊತ್ತಿನಲ್ಲಿ ನೋಡಬಹುದು. ಈಡಿಗರು, ಹೊಲೆಯರು, ಮಾಪಿಳ್ಳೆಗಳು ಎಲ್ಲರೂ ಇರ್ತಾರೆ. ಈ ಮಧ್ಯೆ ದೊಡ್ಡ ಮೀಟಿಂಗ್ ನಡೆದಿತ್ತು. ಭಾಷಣ ಮಾಡೋದಕ್ಕೆ ಜನ ಬರ್ತಿದ್ದರು. ಒಬ್ಬ ಊರಿನವಲ್ಲೆಲ್ಲ ಹೇಳಿದ—ನೀನೇ ಗೋಲಿಬಾರ್ ಮಾಡಿಸಿದ್ದು, ಮನುಷ್ಯರನ್ನು ಕೊಲ್ಲಿಸಿದ್ದು ಅಂತ. ಅವನು ನಿನ್ನನ್ನು ಸಿಕ್ಕಾಬಟ್ಟೆ ಬಯ್ದು ಹೋದ. ಇನ್ನೊಬ್ಬ ಹೇಳಿದ—ನಿನ್ನನ್ನು ಗಲ್ಲು ಕಂಬಕ್ಕೇರಿಸಬೇಕು ಅಂತ. ನಾವು ಜಮೀನು ತೆಗೆದದ್ದು ನೀನು ಸರ್ಕಾರದ ಹಣ ಕದ್ದದ್ದರಿಂದಲಂತೆ."

ಅನಂತರ ಕಿಟ್ಟುಮಾವನ ಹತ್ತಿರ ಕುಟ್ಟಿಯಮ್ಮ ಕೇಳಿದಳು: "ಅವರ ಹೆಸರೇನು ಕಿಟ್ಟುಮಾವ?"

"ಚೆಂಗನೂರಿನ ಮ್ಯಾಥ್ಯೂ. ಕೇಶವ ಪಿಳ್ಳೆಯೇ ಗೋಲಿಬಾರ್ ಮಾಡಿಸಿದ್ದು ಅಂತ ಅವನೇ ಹೇಳಿದ್ದು. ಅವನು ಭಾಷಣ ಮಾಡಿದರೆ ಜನ ತಮ್ಮನ್ನು ತಾವು ಮರೆತು ಅವನ ವಶವಾಗಿ ಹೋಗ್ತಾರೆ. ಅವನು ದಿವಾನರನ್ನು ಸಿಕ್ಕಾಬಟ್ಟೆ ಬಯ್ದ."

ಕೇಶವ ಪಿಳ್ಳೆ ಕೇಳಿದ: "ಗಲ್ಲು ಕಂಬದಲ್ಲಿ ತೂಗುಹಾಕಬೇಕು ಅಂದವನು ಯಾರು?"

"ಒಬ್ಬ ಗೋಪಿ, ಮತ್ತೊಬ್ಬ ನಾರಾಯಣನ್ ನಾಯರ್."

ಕಿಟ್ಟುಮಾವ ಒಂದು ಸಂಗತಿ ಹೇಳಿದರು:

"ಒಂದೇ ಒಂದು ಭಾಷಣ. ಇಡಿ ಊರು ಅವನ ವಶವಾಗಿ ಹೋಯ್ತು."

ಪಪ್ಪು ಪಿಳ್ಳೆ ಹೇಳಿದರು: "ಇವನನ್ನ ಸಾಯೋ ವರೆಗೆ ಜೈಲಿನಲ್ಲಿರಿಸಬೇಕು. ಭಾಷಣ ಮಾಡೋದಕ್ಕೆ ಬಿಡಬಾರದು."

ಊರು ಕೇರಿ ತಿರುಗುವ ಕಿಟ್ಟುಮಾವ ಹೇಳಿದರು: "ಭಾಷಣಕಾರರು ಎಷ್ಟೋ ಜನರಿದ್ದಾರೆ. ಅವರನ್ನೆಲ್ಲ ಹಿಡಿದು ಜೈಲಿನಲ್ಲಿ ಹಾಕ್ಸೋದಕ್ಕಾಗುತ್ತಾ?"

"ಹಾಕಬೇಕು. ಅದೇ ಮಾಡಬೇಕಾದದ್ದು."

ಕುಟ್ಟಿಯಮ್ಮ ಹೇಳಬೇಕಾದದ್ದು ಇನ್ನೂ ಇತ್ತು.

"ಊರಿನಲ್ಲಿ ನಮ್ಮನ್ನು ಕಂಡರೆ ಯಾರಿಗೂ ಆಗದು ಕಣಪ್ಪ. ನಿನ್ನನ್ನು ಇಷ್ಟೆಲ್ಲ ಬಯ್ತಾ ಇದ್ದಾಗ ಒಬ್ಬನಾದರೂ ನಮ್ಮ ಊರಿನವನನ್ನು ಕುರಿತು ಯಾಕೆ ಹಾಗೆಲ್ಲ ಅಂತೀರಿ ಅಂತ ಕೇಳಲಿಲ್ಲ. ನೇಣು ಹಾಕಬೇಕು ಅಂದರೂ ಒಬ್ಬನೂ ಮಾತಾಡಲಿಲ್ಲ."

ಪಪ್ಪು ಪಿಳ್ಳೆ ಆ ಮಾತನ್ನು ಹೇಳಿ ಮುಗಿಸಿದ್ದು.

"ಹಾಗೆಲ್ಲ ಹೇಳುವಾಗ ಊರಿನವರು ಚಪ್ಪಾಳೆ ತಟ್ಟುತ್ತಿದ್ದರು."

ಕುಟ್ಟಿಯಮ್ಮ ಮತ್ತೂ ಒಂದು ವಿಶೇಷ ಸಂಗತಿಯನ್ನು ಹೇಳಿದಳು:

"ಮೊನ್ನೆ ಮೂರು ಜನರು ಬಾವುಟ ಹಿಡಿದುಕೊಂಡು ಕೂಗಿಕೊಂಡು ಹೋದರು. ಅವರು ನಮ್ಮ ಮನೆ ಮುಂದೆ ಹೋಗುವಾಗ ನಿನ್ನನ್ನು ನೇಣು ಹಾಕಬೇಕು ಅಂತ ಕೂಗಿ ಕೊಂಡು ಹೋದರು."

ತನ್ನನ್ನು ಕುರಿತು ಊರಿನಲ್ಲಿ ಯಾವ ಅಭಿಪ್ರಾಯವಿದೆ ಎಂದು ಕೇಶವ ಪಿಳ್ಳೆಗೆ ಮೊದಲಾಗಿ ತಿಳಿದದ್ದು. ಲಾಠಿ ಚಾರ್ಜಿನಲ್ಲೂ, ಗೋಲಿಬಾರಿನಲ್ಲೂ ವಹಿಸಿದ್ದ ಪಾತ್ರ ಯಾರಿಗೂ ತಿಳಿದಿಲ್ಲವೆಂದು ಕೇಶವ ಪಿಳ್ಳೆ ಭಾವಿಸಿದ್ದದ್ದು. ತನ್ನ ಹುಟ್ಟೂರಿಗೆ ಬಂದಾಗ ಊರಿನ ಜನರು ತನ್ನ ವಿಚಾರವಾಗಿ ಈ ರೀತಿಯಲ್ಲಿ ಮಾತನಾಡಿಕೊಳ್ಳುತ್ತಿರುವಾಗ ಊರಿನ ಎಲ್ಲ ಕಡೆಗಳಲ್ಲೂ ಹಳ್ಳಿಗಳಲ್ಲೂ ತನ್ನ ಬಗ್ಗೆ ಯಾವ ಅಭಿಪ್ರಾಯವಿದ್ದಿರಬಹು ದೆಂದು ಅವನು ಊಹಿಸಿದ. ಕೇಶವ ಪಿಳ್ಳೆಯ ಮನಸ್ಸಿಗೆ ಮಂಕು ಕವಿದಂತೆ ತೋರಿತು. ಒಂದು ರೀತಿಯ ಭಯವೂ ಉಂಟಾಯಿತು.

ಅಮ್ಮ ಹೇಳುತ್ತಲೇ ಇದ್ದಳು:

"ಎಲ್ಲರಿಗೂ ನಮ್ಮನ್ನ ಕಂಡರೆ ಅಸೂಯೆ ಕಣಪ್ಪ. ಅದೂ ಈ ಜಮೀನು ತಕ್ಕೊಂಡ ಮೇಲೆ. ಇನ್ನು ಒಂದು ಮನೆ ಅಂತ ಕಟ್ಟಿಸಿದರೆ ಅವರಿಗೆ ತೀರ ಸಹಿಸೋದಕ್ಕಾಗೋದಿಲ್ಲ. ಈ ಕಾಂಗ್ರೆಸ್‌ನವರು ಆಳಿದರೆ ನಮ್ಮ ಜಮೀನನ್ನು ಅವರು ಆಕ್ರಮಿಸಿಕೊಳ್ಳಬಹುದು ಅಂತ ಆ ನಾಣಿ ಗಂಡ ಮೊನ್ನೆ ಬಂದು ಹೇಳಿದ."

ನಿಜವಾದ ಸಂಶಯವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿಯೇ ಕಿಟ್ಟುಮಾವ ಕೇಳಿದರು:

"ಅದು ನಡೆದೀತೇನಯ್ಯ?"

ನಿರ್ಲಕ್ಷ್ಯವಾಗಿ ಕೇಶವ ಪಿಳ್ಳೆ ಹೇಳಿದ: "ಓ! ಹಾಗೇನಾಗೋದಿಲ್ಲ. ಅದೆಲ್ಲ ಸುಮ್ಮನೆ."

ಅಂತು ಒಂದು ರೀತಿಯ ಭಯ ಈಗ ಕೇಶವ ಪಿಳ್ಳೆಗೆ ಉಂಟಾಗಲಿಲ್ಲ ಎಂದು ಹೇಳಲಾಗುವುದಿಲ್ಲ.

ಕಾಂಗ್ರೆಸ್ಸಿನ ಮುಂದಾಳುಗಳೂ ಹಾಗೆ ಮಾತನಾಡುವುದನ್ನು ಕೇಳಿದ್ದ. ಕಾಂಗ್ರೆಸ್ ವರ್ಕಿಂಗ್ ಪಾಸು ಮಾಡಿದ ಸಂದರ್ಭದಲ್ಲಿ ಜವಾಬ್ದಾರಿ ಆಡಳಿತ ಸರ್ಕಾರ ಬಂದ ಮೇಲೆ ಏನೆಲ್ಲ ಮಾಡುವುದಕ್ಕೆ ಹೊರಟಿದ್ದಾರೆ ಎಂದು ಹೇಳುವುದರ ಜೊತೆಗೆ ಮನುಷ್ಯರ ಮೇಲೆ ಗೋಲಿಬಾರ್ ಮಾಡಿಸಿ ಕೊಂದ ಜನದ್ರೋಹಿಗಳನ್ನು ಕ್ರೂರವಾಗಿ ಶಿಕ್ಷಿಸುತ್ತೇವೆ ಎಂದೂ ತಲಾಂತರದಿಂದ ಬಂದ ಜಮೀನನ್ನೂ ಅಪಹರಿಸಿ, ಲಂಚ ತೆಗೆದುಕೊಂಡು ಸಂಪಾದಿಸಿದ ಜಮೀನನ್ನೂ ವಾಪಸ್ಸು ಪಡೆಯುತ್ತೇವೆ ಎಂದೂ ಹೇಳಿದ್ದರು. ಈಗ ತನ್ನ ಊರಿನವರೂ ಹಾಗೇ ಹೇಳುತ್ತಾರೆ. ಕೈಗೂಡುವಂತಹ ಕಾರ್ಯವೇ ಇದು?

ಪಪ್ಪು ಪಿಳ್ಳೆ ಆ ಮಧ್ಯೆ ಒಂದು ಪ್ರಶ್ನೆ ಹಾಕಿದರು: "ಇವರೆಲ್ಲ ಹೀಗೆಲ್ಲ ಬೊಬ್ಬೆ ಹಾಕಿದರೂ ಬ್ರಿಟಿಷರು ಬಿಟ್ಟುಕೊಡ್ತಾರೇನಯ್ಯ?"

ಕೇಶವ ಪಿಳ್ಳೆ ಅದಕ್ಕೂ ಅಲಕ್ಷ್ಯವಾದ ಉತ್ತರವನ್ನು ಹೇಳಿದ್ದು.

"ಓ! ಅಂಥಾದ್ದೇನೂ ಸಂಭವಿಸೋದಿಲ್ಲ."

ಕುಟ್ಟಿಯಮ್ಮನಿಗೆ ತಿಳಿದಿದ್ದ ಸಂಗತಿಗಳೆಲ್ಲವೂ ಹೊರಗೆ ಬರುತ್ತಿದ್ದುವು.

"ಆ ಮೇಲೆ ಅವರು ತೀರ್ಮಾನಿಸಿದ್ದು ಏನು ಅಂತೀ? ನಮ್ಮನ್ನು ಒಂಟಿ ಮಾಡಬೇಕು—ಇಲ್ಲಿಗೆ ಯಾರೂ ಬರಬಾರದು. ಮನೆಕೆಲಸಕ್ಕೂ ಆಳುಗಳು ಹೋಗಬಾರದು.........."

ಪಪ್ಪು ಪಿಳ್ಳೆಗೆ ಆ ವಿಷಯದಲ್ಲಿ ಅಷ್ಟೊಂದು ಭಯವೇನೂ ಇರಲಿಲ್ಲ.

"ಅವರಾಗಿಯೇ ಕೆಲಸ ಏನಾದರೂ ಇದ್ದರೆ ಕೊಡಿ ಅಂತ ಕೇಳಿಕೊಂಡು ಬರ್ತಾರೆ. ಬರದೇ ಎಲ್ಲಿಗೆ ಹೋದಾರು? ನಮ್ಮನ್ನು ಒಂಟಿ ಮಾಡೋದಕ್ಕೆ ಆಗೋದಿಲ್ಲ."

ಕುಟ್ಟಿಯಮ್ಮ ಕೇಳಿದಳು:

"ಹಾಗಂತೀರಲ್ಲ. ಇಲ್ಲಿಗೆ ಆ ಗೋವಿಂದನೂ, ಪದ್ಮನಾಭನೂ ಜೌಸೇಪೂ ಎಲ್ಲ

ಬರ್‍ತಿದ್ದರಲ್ಲ—ಅವರೀಗ ಈ ಮನೆ ಮುಂದೆ ಹೋಗುವಾಗ ಈ ಕಡೆಗೆ ತಿರುಗಿ ನೋಡ್ತಾರಾ? ಒಬ್ಬನೇ ಒಬ್ಬ ಈ ಕಡೆಗೆ ಬರೋದಿಲ್ಲ ಕಣಪ್ಪ. ಹಿಂದೆ ನಿನ್ನ ಜೊತೆಗಾರನಾಗಿದ್ದ ಪಾಚ್ಚು ಇಲ್ಲವಾ? ಅವನೀಗ ಎಷ್ಟು ದೂರ ಆಗಿದ್ದಾನೆ! ಹೆಂಗಸರೂ ಈ ಕಡೆ ಬರೋದಿಲ್ಲ. ಆ ಕೊಚ್ಚು ನಾಣಿ ಮಾತ್ರ ಬರ್‍ತಾಳೆ. ಅವಳು ಕಾತ್ಯಾಯಿನಿ ಹತ್ರ ಮಾತುಕತೆ ಆಡಿಕೊಂಡಿರ್‍ತಾಳೆ. ಅದೇ ಒಂದು ದೊಡ್ಡ ಸಂಗತಿ. ಅವಳಿಗೆ ಒಬ್ಬಳು ಜೊತೆಗಾತಿ ಇರೋದು. ಎಲ್ಲರಿಗೂ ಅಸೂಯೆ ಕಣಪ್ಪ, ಅಸೂಯೆ."

ಊರಿನಲ್ಲಿ ಎಲ್ಲರಿಗೂ ತಮ್ಮನ್ನು ಕಂಡರೆ ಅಸೂಯೆ ಎನ್ನುವ ವಿಷಯದಲ್ಲಿ ಪಪ್ಪು ಪಿಳ್ಳೆಗೂ ಸಂಶಯವಿಲ್ಲ.

ಕುಟ್ಟಿಯಮ್ಮ ಹೇಳಿದಳು—

"ಈ ಕಿಟ್ಟಣ್ಣ, ಗೋಪಾಲ ಕುರುಪ್ ಮಾತ್ರ ಇಲ್ಲಿಗೆ ಬರ್‍ತಾರೆ."

ಅದನ್ನೆಲ್ಲ ಕೇಳಿಸಿಕೊಂಡ ಒಳಿಕ ಕೇಶವ ಪಿಳ್ಳೆ ಕೇಳಿದ: "ಈ ಸಂಗ್ತಿನೆಲ್ಲ ನಿಮಗೆ ಹೇಳಿದ್ದು ಯಾರು?"

"ಗೋಪಾಲ ಕುರುಪ್ಪನೂ ಅಂಥೋಣಿ ಮಾಪಿಳ್ಳೆಯೂ. ಅವರು ಎಲ್ಲರ ಮನೆಗೂ ಹೋಗೋ ಜನರು. ಅವರು ವಾಚನಾಲಯಕ್ಕೂ ಹೋಗ್ತಾರೆ—" ಕುಟ್ಟಿಯಮ್ಮ ಮುಂದುವರಿಸಿದಳು—

"ನೀನು ಕಾತ್ಯಾಯಿನಿ ಹತ್ರ ಕೇಳಿನೋಡು. ಅವಳೇ ಹೇಳ್ತಾಳೆ. ಕೊಚ್ಚು ನಾಣಿ ಎಲ್ಲಾನೂ ಹೇಳಿದ್ದಾಳೆ. ಹೆಂಗಸರೂ ಹಾಗೇ ತೀರ್ಮಾನ ಮಾಡಿದ್ದಾರೆ. ಒಬ್ಬಳೂ ನಮ್ಮ ಜೊತೇಲಿ ಮಾತಾಡೋದಿಲ್ಲ. ನಾನು ಈಗ ಆ ಕಡೆ ಹೋಗೋದೂ ಇಲ್ಲ. ನಾನು ಸತ್ತು ಬಿದ್ದಿದ್ದರೂ ಒಬ್ಬಳೂ ಖಂಡಿತ ಈ ಮನೆಗೆ ಕಾಲು ಹಾಕೋದಿಲ್ಲ. ಆಗ ನೀನೇನು ಮಾಡ್ತಿ?"

ಅಷ್ಟು ಹೇಳಿ ನಂತರ ಕುಟ್ಟಿಯಮ್ಮ ಮುಂದುವರಿಸಿದಳು:

"ಇಲ್ಲಿಗೆ ಬರೋ ಆ ಕೊಚ್ಚುನಾಣೀಗೂ ಅವಳ ಗಂಡ ಸಿಕ್ಕಾಬಟ್ಟೆ ಹೊಡೆದ. ಆದರೂ ಆ ಹುಡುಗಿ ಅದನ್ನು ಲೆಕ್ಕಕ್ಕೆ ಹಾಕಿಕೊಳ್ಳಲಿಲ್ಲ. ಅವಳು ಸಾಧು ಹುಡುಗಿ. ಅವಳಿಲ್ಲದೇ ಹೋಗಿದ್ದರೆ ಮಾತಾಡೋಕೆ ಯಾರೂ ಇಲ್ಲದೆ ಕಾತ್ಯಾಯಿನಿ ಹುಚ್ಚು ಹಿಡಿಕೆ ಆಗಿಹೋಗ್ತಿದ್ಲು. ಅವಳು ಒಳ್ಳೆ ಹುಡುಗಿ."

ಪಾಪ! ಕುಟ್ಟಿಯಮ್ಮನದೊಂದು ಪ್ರಾರ್ಥನೆಯಿತ್ತು. "ನನ್ನಪ್ಪಾ! ನೀನು ಹಿಂಗೆಲ್ಲ ಮಾಡಬೇಡ. ಅದು ಪಾಪ. ಅವಳಿಗೆ ಬರೋ ತಿಂಗಳಿಗೆ ಹತ್ತು ತುಂಬ್ತದೆ. ನಿನ್ನ ಮಗು ಹೊಟ್ಟೇಲಿರುವಾಗ ನೀನು ಗುಂಡು ಹೊಡೆಸಿದೆ. ಹಂಗೆ ಸತ್ತವರಿಗೆ ಅಪ್ಪ ಅಮ್ಮ, ಹೆಂಡತಿ ಮಕ್ಕಳಿಲ್ಲವಾ?"

ನಾಡಿನ ಜನರ ರೋಷ, ಕೇಶವ ಪಿಳ್ಳೆಗೆ ಅರ್ಥವಾಯಿತು. ಇದಾಗಿರಬೇಕು ಎಲ್ಲ ಊರಿನಲ್ಲೂ ಸುದ್ದಿ. ತನ್ನ ಮೇಲೆ ಯಾಕೆ ಇವರಿಗೆಲ್ಲ ಇಷ್ಟೊಂದು ಸಿಟ್ಟು ಬಂದಿದೆ

ಎನ್ನಿಸಿತು. ತಾನು ಒಂದು ದಾಳವಾಗಿದ್ದೆ ಅಷ್ಟೆ. ಅದನ್ನು ಮಾಡಿದವರು ಪೋಲೀಸಿನವರು. ಎಷ್ಟೋ ಹಣ ತೆಗೆದುಕೊಂಡಿದ್ದ. ಅವರೆಲ್ಲ ಏನು ಮಾಡುತ್ತಾರೆ ಎನ್ನುವ ಸುದ್ದಿಯನ್ನು ತಿಳಿದು ಬರಲು ಹೋಗಿದ್ದ ಅಷ್ಟೆ. ಒಂದೇ ಒಂದು ಗೋಲಿಬಾರಾಗಲೀ ಲಾಠಿ ಚಾರ್ಜಾಗಲೀ ಅವನ ಅಪ್ಪಣೆಯಂತೆ ನಡೆದಿಲ್ಲ. ಅವನು ಅಲ್ಲಿ ಹಾಜರಿದ್ದ ಎನ್ನುವುದು ನಿಜ. ಅವನು ಅಲ್ಲಿ ನಿಂತಿದ್ದುದನ್ನು ನೋಡಿ ಹೆಚ್ಚು ಸ್ಫೂರ್ತಿಯಿಂದ ಹೋರಾಡಿದರು ಎನ್ನಿಸಿಕೊಳ್ಳುವುದಕ್ಕಾಗಿ. ಅವರು ಉಗ್ರವಾಗಿಯೇ ಹೋರಾಡಿದ್ದರು. ತಾನು ಮೇಲಧಿಕಾರಿಗಳ ಆಜ್ಞೆಯನ್ನು ಅನುಸರಿಸಿದ್ದ ಅಷ್ಟೇ. ತನ್ನ ಸ್ಥಾನದಲ್ಲಿ ಮತ್ತಾರೇ ಆಗಿದ್ದರೂ ಇದನ್ನೇ ಮಾಡುತ್ತಿದ್ದರು. ಯಾಕೆ ಜನರಿಗೆ ಇಷ್ಟೊಂದು ಸಿಟ್ಟು?

ಕಿಟ್ಟುಮಾವ ಒಂದು ಸತ್ಯಸಂಗತಿಯನ್ನು ಹೇಳಿದರು:

"ಮೊದಲು ಎಲ್ಲರಿಗೂ ಒಂದು ರೀತಿಯ ಚೇತನವುಂಟಾಗಿತ್ತು. ಯಾವಾಗ ನೋಡಿದರೂ ಮೆರವಣಿಗೆ ಸಭೆಗಳು ಇರುತ್ತಿದ್ದುವು. ಈಗ ಗಾಂಧಿ ಹೇಳಿದರಲ್ಲ; ಅದೊಂದೂ ಬೇಡ ಅಂತ. ಆ ಮೇಲೆ ಕುಣಿಯೋದಕ್ಕೆ, ಗಲಭೆಗೆ ಅವಕಾಶ ಇಲ್ಲದ ಹಾಗಾಯ್ತು. ಆಗ ಉಂಟಾದ ಸಿಟ್ಟು. ಇದು ಸ್ವಲ್ಪ ಕಾಲ ಕಳೆದ ಮೇಲೆ ಹೋಗುತ್ತೆ."

ಕೇಶವ ಪಿಳ್ಳೆಗೆ ಅದೂ ಸರಿಯೆನ್ನಿಸಿತು. ಜನರ ಆವೇಶಕ್ಕೆ ಕೈಕಟ್ಟಿದ ಹಾಗಾಯ್ತು. ಆಗ ಅದು ದ್ವೇಷವಾಗಿ ಪರಿಣಮಿಸಿತು.

ಪಪ್ಪು ಪಿಳ್ಳೆಯ ಮನಸ್ಸನ್ನು ವ್ಯಾಕುಲಪಡಿಸಿದ್ದು ಮತ್ತೊಂದು ಸಂಗತಿ. ನಿಜವಾಗಿಯೂ ಮಾಡಬಾರದ್ದನ್ನು ಯಾರೂ ಮಾಡಬಾರದು. ಊರಿಡೀ ಜನರೆಲ್ಲ ರೊಚ್ಚುಗೊಂಡಿದ್ದಾರೆ. ಈಗಿನ ಸ್ಥಿತಿಯನ್ನು ದೃಷ್ಟಿಯಲ್ಲಿಟ್ಟುಕೊಳ್ಳುವುದು ಬೇಡ. ಈ ಆವೇಶದಿಂದ ಲಂಗುಲಗಾಮು ಒಂದೂ ಇಲ್ಲದೆ ಹೋದವರು ಇರಬಹುದು. ಅವರು ಏನಾದರೂ ಮಾಡಿಬಿಟ್ಟಾರೇ ಎನ್ನುವ ಭಯ.

ಪಪ್ಪು ಪಿಳ್ಳೆ ಕುಟ್ಟಿಯಮ್ಮನ ಹತ್ತಿರ ಹೇಳಿದರು: "ನೀನು ಹೋಗಿ ಅವನ ಹೊಟ್ಟೆಗೆ ಏನಾದರೂ ಒಂದಿಷ್ಟು ಕೊಡು."

ಕುಟ್ಟಿಯಮ್ಮ ಅದನ್ನು ಕೂಡ ಮರೆತು ನಿಂತಿದ್ದಳು. ಅವಳು ಹೋದ ಮೇಲೆ ಪಪ್ಪು ಪಿಳ್ಳೆ ಕೇಳಿದರು:

"ನಿಮ್ಮಮ್ಮ ಕೇಳಿಸಿಕೊಳ್ಳೋದು ಬೇಡ. ಅವರೆಲ್ಲ ವಿಪರೀತ ಸಿಟ್ಟಾಗಿದ್ದಾರೆ. ಈಗ ನಿನಗೆ ಅವಮಾನ ಮಾಡಿದರೋ?"

ಅವಮಾನ ಮಾಡುತ್ತಾರೆ ಎನ್ನುವುದನ್ನು ಬೇರೆ ರೀತಿಯಲ್ಲಿ ಹೇಳುತ್ತಿದ್ದರು. ಮನಸ್ಸಿನಲ್ಲಿದ್ದ ಭೀತಿಯನ್ನು ತಿಳಿಸಲು ಆ ಮುದುಕನ ನಾಲಗೆ ಮುಂದೆ ಬರಲಿಲ್ಲ.

"ಓ! ಅಂಥಾದ್ದೇನೂ ಆಗೋದಿಲ್ಲ" ಎಂದ ಕೇಶವ ಪಿಳ್ಳೆ. ಆಗ ಅವನು ಜ್ಞಾಪಿಸಿಕೊಂಡದ್ದೂ ಅದೇ. ಊರಿಡೀ ಹಗೆತನದಿಂದ ಅವನನ್ನು ನೋಡುತ್ತಿದೆ. ಒಬ್ಬ ಕೊಲೆ ಮಾಡುವುದಕ್ಕೆ ಸಿದ್ಧನಾದರೋ? ದೈವಶಾಪವೂ ಇದೆ ಎಂದು ತಂದೆ

ತಾಯಿಗಳು ಹೇಳುವುದು. ಇದರ ಪರಿಣಾಮವನ್ನು ಕೇಶವ ಪಿಳ್ಳೆ ಆಲೋಚಿಸಿರಲಿಲ್ಲ.

ಕಾಂಗ್ರೆಸ್ಸಿನವರು ಜಯಿಸಿಯಾರೆ? ದೇಶವಿಡೀ ಅವರ ಪಕ್ಷದಲ್ಲಿದೆ. ಜಯಿಸದೇ ಇರುವುದಕ್ಕೆ ಸಾಧ್ಯವಿಲ್ಲ. ಮೊತ್ತಮೊದಲಾಗಿ ಆ ರೀತಿಯಲ್ಲಿ ಕೇಶವ ಪಿಳ್ಳೆಯ ಆಲೋಚನೆ ನಡೆದದ್ದು. ಇನ್ನು ಮೇಲೂ ಚಳವಳಿ ನಡೆಯಬಹುದು. ಹಾಗೆ ನಡೆದು ಕಾಂಗ್ರೆಸ್ ಜಯಿಸಿದರೆ ಕೇಶವ ಪಿಳ್ಳೆಯೇ ಪ್ರಧಾನ ಶತ್ರು. ಚೀಫ್ ಸೆಕ್ರೆಟರಿಯೂ ಉಳಿದುಕೊಳ್ಳುತ್ತಾರೆ. ಯಾರೂ ಇಲ್ಲದಂತಾಗುವುದು ಕೇಶವ ಪಿಳ್ಳೆಗೆ. ಇನ್ನು ಮೇಲೂ ತಾನು ಮಾಡಬೇಕಾದ ಕೆಲಸ ಇದೇ ಆಗಿರಬಹುದು.

ದೊರೆತದ್ದರಲ್ಲೇ ತೃಪ್ತನಾದರೇನು? ಆಗ ಅವನ ಒಳಗಿನಿಂದ ಯಾರೋ ಕೇಳಿದಂತಾಯಿತು:

"ಏನು ದೊರೆತದ್ದು ?"

ನಡೆದದ್ದೆಲ್ಲ ಭಾಗ್ಯದಿಂದ. ಅದೇ ಭಾಗ್ಯ ಇನ್ನು ಮೇಲೂ ತನ್ನನ್ನು ಸಂರಕ್ಷಿಸುವುದಿಲ್ಲವೆ?

●

# [16]

## ಮೊದಲ ನಡುಕ

ಕೇಶವ ಪಿಳ್ಳೆ ಪಟ್ಟಣದಲ್ಲಿ ಒಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡ. ಅಡಿಗೆಯವನೂ ಅವನೂ ಅದರಲ್ಲಿ ವಾಸಿಸತೊಡಗಿದರು. ಹಾಗೆ ಕೆಲವು ದಿನಗಳು ಕಳೆದುವು. ಅವನು ಕಾಂಗ್ರೆಸಿನ ಪ್ರಧಾನ ಶತ್ರುವಾಗಿ ಹೋಗಿದ್ದ ಎನ್ನುವ ವಿಷಯ ಸರ್ಕಾರಕ್ಕೂ ತಿಳಿದಿತ್ತು. ಸಿ. ಐ. ಡಿ. ರಿಪೋರ್ಟುಗಳಿದ್ದದ್ದು ಆ ರೀತಿಯಲ್ಲಿ. ಸರ್ಕಾರದ ರಕ್ಷಣೆ ದೊರೆಯಬೇಕಾಗಿದ್ದವರ ಲಿಸ್ಟಿನಲ್ಲಿ ಕೇಶವ ಪಿಳ್ಳೆಯೂ ಇದ್ದ. ಊರಿನಲ್ಲಿ ತಿಳಿದುಕೊಂಡು ಬಂದಿದ್ದ ವಿಷಯಗಳೆಲ್ಲವನ್ನೂ ದಿವಾನರ ಹತ್ತಿರ ಹೇಳಿಕೊಂಡ.

ದಿವಾನರು ಕೇಳಿದರು:

"ನಿಮಗೆ ಭಯವಾಗುತ್ತಾ?"

"ಇಲ್ಲ" ಎಂದೇ ಹೇಳಿದ ಕೇಶವ ಪಿಳ್ಳೆ.

ಪ್ರತ್ಯೇಕವಾದ ಪೋಲೀಸು ರಕ್ಷಣೆಯನ್ನು ಕೇಶವ ಪಿಳ್ಳೆಗೆ ಕೊಡಲಾಗಿತ್ತು. ಆದರೂ ಒಳಗೊಳಗೇ ಇದ್ದ ಭೀತಿ ಅವನ ಉತ್ಸಾಹವನ್ನು ತಗ್ಗಿಸಿತ್ತು. ಕೇಶವ ಪಿಳ್ಳೆ ಈಗ ಸೂಪರಿಂಟೆಂಡೆಂಟ್ ಗ್ರೇಡಿನಲ್ಲಿ ಹೊಸದಾಗಿ ಸಂಘಟಿತವಾದ ಪೊಲಿಟಿಕಲ್ ವಿಭಾಗದ ಹೊಣೆಗಾರಿಕೆಯನ್ನು ಹೊತ್ತ ಮನುಷ್ಯನಾಗಿದ್ದ.

ಆದರೂ ಒಳಹೊಕ್ಕಿದ್ದ ಭೀತಿ ಕೇಶವ ಪಿಳ್ಳೆಯನ್ನು ಒಟ್ಟಿನಲ್ಲಿ ಚಿಂತೆಗೀಡು ಮಾಡಿತ್ತು. ಚಿಂತಿಸಿ ಚಿಂತಿಸಿ ಕಡೆಗೆ ಅವನು ಒಂದು ತೀರ್ಮಾನಕ್ಕೆ ಬಂದ. ವಿಧಿ ಅವನನ್ನು ನಿಯೋಜಿಸಿತ್ತು. ಇಲ್ಲದಿದ್ದಲ್ಲಿ ತೇಲಿಹೋಗುತ್ತಿದ್ದ ಅವನು ಬಂದು ಸೇರಿದುದು ಈ ಕೆಲಸಕ್ಕೆ. ಇದರಿಂದ ಅಡಗಿಕೊಳ್ಳುವ ಆವಶ್ಯಕತೆಯಿಲ್ಲ. ಔದ್ಯೋಗಿಕ ನೆಲೆಯಲ್ಲಿ ಮಾತ್ರವಲ್ಲ ಸ್ವಂತ ನೆಲೆಯಲ್ಲೂ ನಿಯೋಜಿತವಾದ ಕೆಲಸದಲ್ಲಿ ನೂರಕ್ಕೆ ನೂರರಷ್ಟು ತಲ್ಲೀನನಾಗಿ ನಿರ್ವಹಿಸಬೇಕು. ಕಾಂಗ್ರೆಸ್ಸನ್ನು ನಾಶಗೊಳಿಸಬೇಕು. ಒಮ್ಮೆಯೂ ಅವರು ಜಯಿಸಬಾರದು. ಅವರು ಜಯಿಸುವುದು ಎಂದರೆ ಕೇಶವ ಪಿಳ್ಳೆ ನಾಶವಾಗುವುದು ಎಂದರ್ಥ. "ಕೇಶವ ಪಿಳ್ಳೆಯನ್ನು ನೇಣುಹಾಕಬೇಕು", "ಆ ಭೂಮಿಯನ್ನೆಲ್ಲ ದೋಚಿಕೊಳ್ಳಬೇಕು" ಇವೇ ಮುಂತಾದುವು ಅವರ ಘೋಷಣೆಗಳು. ಕಾಂಗ್ರೆಸ್ ಜಯಿಸುತ್ತದೆಯೋ ಎಂದು ಸಂಶಯಪಡುವುದು ಕೂಡ ಬೇಡ. ಅವರು ಸೋಲಲೇ ಬೇಕು.

ಹಾಗೆ ಕಾಂಗ್ರೆಸ್ಸಿನ ಜೊತೆಯಲ್ಲಿ ಹೋರಾಡುವುದೇ ಬದುಕಿನ ಪ್ರಶ್ನೆಯಾದಾಗ ಕೃತ್ಯ ನಿರ್ವಹಣೆಯನ್ನು ಬಿಟ್ಟು ಅದನ್ನೇ ಪ್ರಧಾನ ಉದ್ದೇಶವಾಗಿಟ್ಟುಕೊಂಡ ಅವನ

ಬುದ್ಧಿಶಕ್ತಿಗೆ ಚೇತನವುಂಟಾಯಿತು. ಎಷ್ಟೆಷ್ಟೋ ಯೋಜನೆಗಳು ತಲೆಯಲ್ಲಿ ಸ್ವರೂಪ ವನ್ನು ತಾಳಿದುವು. ಎನ್. ಎಸ್. ಎಸ್. ಹಾಗು ಎಸ್. ಎನ್. ಡಿ. ಪಿ. ಮುಂತಾದ ಸಾಮಾಜಿಕ ಸಂಘಟನೆಗಳನ್ನು ಸರ್ಕಾರ ಕೈವಶಕ್ಕೆ ತೆಗೆದುಕೊಳ್ಳಬೇಕು. ಅದಕ್ಕಾಗಿ ಬುದ್ಧಿಪೂರ್ವಕವಾಗಿ ಕೆಲಸ ಮಾಡಿಯೇ ತೀರಬೇಕು. ಅದರ ಜೊತೆಗೆ ಕಾಂಗ್ರೆಸ್ಸನ್ನು ಎತ್ತಿ ನಿಲ್ಲಿಸುತ್ತಿರುವ ಬ್ಯಾಂಕನ್ನು ನಾಶಗೊಳಿಸಬೇಕು. ಅದನ್ನೂ ಮುಖ್ಯವಾಗಿ ಮಾಡಲೇಬೇಕಾಗಿದೆ. ಕಾಂಗ್ರೆಸ್ಸಿನ ಮುಂದಾಳುಗಳಿಗೆ ಇರುವುದು ದೇಶಪ್ರೇಮವಲ್ಲ. ದಿವಾನರ ಮೇಲಿರುವ ಹಗೆತನ ಎನ್ನುವುದನ್ನು ಸ್ಪಷ್ಟವಾಗಿ ತಿಳಿಸಿಕೊಡಬೇಕು. ಅದಕ್ಕಾಗಿ ರಾಜ್ಯದಲ್ಲೆಲ್ಲ ನಿರಂತರವಾಗಿ ಪ್ರಚಾರ ಮಾಡಬೇಕು. ಪ್ರಚಾರದ ತಳಹದಿಯೇ ಅದಾಗಿರಬೇಕು. ಅದಕ್ಕೆ ಕೇಶವಪಿಳ್ಳೆಯ ಬುದ್ಧಿಭಂಡಾರದಲ್ಲಿ ವಾದಿಸುವ ಮುಖಗಳು ಕಾಣಿಸಿಕೊಂಡುವು. ಗಾಂಧೀಜಿಯನ್ನು ನಿಂದಿಸುತ್ತ ಬ್ರಿಟಿಷ್ ಗೌರ್ಮೆಂಟಿನೊಡನೆ ಮತದ ಹೆಸರಿನಲ್ಲಿ ಸ್ನೇಹ ಸಂಪಾದಿಸುವ ಒಂದು ವಿಭಾಗದ ಜನಗಳು ಸ್ಟೇಟ್ ಕಾಂಗ್ರೆಸ್ಸನ್ನು ಹಿಡಿತದಲ್ಲಿಟ್ಟುಕೊಂಡಿರುವುದು. ಕಾಂಗ್ರೆಸ್ ಅವರ ಪಕ್ಷದಲ್ಲಿದೆ. ಅವರಿಗೆ ದಿವಾನರ ಮೇಲೆ ಹಗೆತನವಿದೆ. ಅದಕ್ಕೆ ಬೇಕಾದ ಆಧಾರಗಳಿವೆ. ಒಂದು ಗುಂಪಿನ ಜನರು ಹಾಗೆ ಆ ವಿಭಾಗದ ಜೊತೆ ಸೇರಿದರು. ವಿವರವಾದ ಒಂದು ರಿಪೋರ್ಟನ್ನು ಅವನು ದಿವಾನರಿಗೆ ಸಮರ್ಪಿಸಿದ. ಒಂದು ಹೊಸದಾದ ಸಂಘಟನೆಯನ್ನುಂಟುಮಾಡಬೇಕಾಗಿರುವ ಅಗತ್ಯ ವನ್ನೂ ಅವನು ಒತ್ತಿ ಹೇಳಿದ್ದ. ರಿಪೋರ್ಟ್ ದಿವಾನರನ್ನು ಆಕರ್ಷಿಸಿತು.

ಕೇಶವ ಪಿಳ್ಳೆಯನ್ನು ಭಕ್ತಿವಿಲಾಸದಲ್ಲಿ ನೇಮಿಸಿಕೊಳ್ಳಲಾಯಿತು. ಇದ್ದಕ್ಕಿದ್ದ ಹಾಗೆ ಚೀಫ್ ಸೆಕ್ರೆಟರಿಯ ಹತ್ತಿರ ಕೂಡ ಆಲೋಚಿಸದೆ ಆ ಆರ್ಡರ್ ಪಾಸಾದದು. ದಿವಾನರಿಗೆ ಹಾಗೆ ಮಾಡಬೇಕೆನ್ನಿಸಿತು, ಮಾಡಿದರು. ಆರ್ಡರ್ ಬಂದಾಗ ಕೃಷ್ಣನ್ ನಾಯರ್ ಕುಸಿದು ಕುಳಿತರು. ಏನು ಮಾಡಬೇಕೆಂಬುದೇ ಅವರಿಗೆ ತೋರದಾಯಿತು. ಅವರು ಹೆಂಡತಿಯ ಮೇಲೆ ದೋಷಾರೋಪಣೆ ಹೊರಿಸಿದರು.

"ಮೇಲೆ ಮೇಲೆ ತಂದದ್ದರ ಫಲ ನೋಡಿದೆಯಾ? ಈಗ ಕೈಬಿಟ್ಟುಹೋದ. ಅವನ ವಿಚಾರವಾಗಿ ದಿವಾನರಿಗೆ ಹೇಳಿಸಬೇಕು ಅಂತ ಯಾವಾಗಲೂ ಹೇಳ್ತಿದ್ದೆಯಲ್ಲ, ಈಗ ನೋಡಿದೆಯಾ? ಅನುಭವಿಸು!"

ಭಗವತಿ ಕುಟ್ಟಿಯಮ್ಮ ಆ ತಪ್ಪನ್ನು ಒಪ್ಪಿಕೊಳ್ಳದೆ ಇರಲು ಸಾಧ್ಯವಿರಲಿಲ್ಲ. ನೋಡಿಕೊಳ್ಳಬೇಕಾದದ್ದಕ್ಕಿಂತ ಹೆಚ್ಚಿಗೆ ನೋಡಿಕೊಂಡು ಸಾಕಿದ್ದೇ ಈಗ ಕೈಬಿಟ್ಟು ಹೋಗುವುದಕ್ಕೆ ಅವಕಾಶವಾದದ್ದು. ಅದೊಂದು ದೊಡ್ಡ ನಷ್ಟವಾಗಿತ್ತು. ಆಕೆ ತಮ್ಮಷ್ಟಕ್ಕೇ ಹೇಳಿಕೊಂಡರು:

"ನಮಗೆ ಎಷ್ಟೋ ವಿಷಯಗಳಲ್ಲಿ ನಷ್ಟವೇ ಆದದ್ದು. ಅವನು ಧರ್ಮವಾಗಿ ಎಷ್ಟೋ ಕೆಲಸ ಮಾಡಿಯೂ ಕೊಟ್ಟಿದ್ದಾನೆ."

ಕೃಷ್ಣನ್ ನಾಯರ್ ಗುಣದೋಷಗಳನ್ನು ಪರಾಮರ್ಶಿಸುತ್ತ ಹೇಳಿದರು:

"ಇನ್ನು ಮೇಲಾದರೂ ಯಾವ ಕೆಲಸ ಮಾಡಬೇಕಾದರೂ ಸರಿಯಾಗಿ ಒಂದು ಸಲ ಆಲೋಚನೆ ಮಾಡಿ ಮಾಡು."

ಅದಕ್ಕೆ ಭಗವತಿ ಕುಟ್ಟಿಯಮ್ಮ ಸುಮ್ಮನಾಗಲಿಲ್ಲ.

"ನಾನು ಮಾತ್ರವೇ ಏನು ತಪ್ಪು ಮಾಡಿದ್ದು? ಎಲ್ಲರಿಗೂ ಹಾಗನ್ನಿಸಿತ್ತು. ನೆಯ್ಯಾಟಿಂಕರದಲ್ಲಿ ಗೋಲಿಬಾರ್ ಆದ ಮೇಲೆ ಅವನನ್ನು ಹಿಡಿದಿಟ್ಟುಕೊಳ್ಳಬಾರದಾಗಿತ್ತಾ?"

ಕೇಶವ ಪಿಳ್ಳೆ ಚೀಫ್ ಸೆಕ್ರೆಟರಿಗೆ ಒಬ್ಬ ದೊಡ್ಡ ಸಹಾಯಕನಾಗಿದ್ದ. ಅದನ್ನು ಅವರು ಜ್ಞಾಪಿಸಿಕೊಂಡರು. ಹೈಡ್ರೋ ಇಲೆಕ್ಟ್ರಿಕ್ ಪ್ರಾಜೆಕ್ಟ್, ಬಸ್ಸು ಕಂಪೆನಿಗಳು— ಇವುಗಳ ವಿಚಾರವಾಗಿ ಬುದ್ಧಿಶಕ್ತಿಯನ್ನುಪಯೋಗಿಸಿ ವ್ಯವಹರಿಸಿದ ವಿಷಯವನ್ನು ಭಗವತಿ ಕುಟ್ಟಿಯಮ್ಮನೂ ಜ್ಞಾಪಿಸಿಕೊಂಡರು. ಭಗವತಿ ಕುಟ್ಟಿಯಮ್ಮ ಹೇಳಿದರು:

"ಇಷ್ಟೊಂದು ಪ್ರೀತಿ, ವಿನಯ, ಸತ್ಯಸಂಧತೆಯಿರುವ ಮತ್ತೊಬ್ಬ ಸಿಕ್ಕುವುದಿಲ್ಲ. ಅದು ಖಂಡಿತ."

ಅದು ಸರಿಯೆಂದು ಚೀಫ್ ಸೆಕ್ರೆಟರಿಯೂ ಸಮ್ಮತಿಸಿದರು. ಅವರು ಹೇಳಿದರು: "ಅವನು ದಿವಾನರಿಗೆ ಕಳುಹಿಸಿದ ರಿಪೋರ್ಟನ್ನು ನನ್ನ ರಿಪೋರ್ಟ್ ಆಗಿ ಮಾಡಿ ಕಳಿಸಿದ್ದರೆ ಸಾಕಾಗಿತ್ತು."

ಒಂದು ಕ್ಷಣ ಬಿಟ್ಟು ಮತ್ತೆ ಹೇಳಿದರು: "ಆಗಿಹೋದ ಅನರ್ಥವನ್ನು ಕುರಿತು ಮಾತನಾಡೋದು ಬೇಡ."

ಆದರೆ ಇಂಥವನು ಇನ್ನೊಬ್ಬ ಸಿಕ್ಕುವುದಿಲ್ಲವೆಂದು ಭಗವತಿ ಕುಟ್ಟಿಯಮ್ಮನ ಅಭಿಪ್ರಾಯ. ಒಬ್ಬನನ್ನು ಕಂಡುಹಿಡಿದೇ ತೀರಬೇಕಾಗಿದ್ದದ್ದು ಚೀಫ್ ಸೆಕ್ರೆಟರಿಗೆ ಆವಶ್ಯಕವಾಗಿತ್ತು. ಅವನು ಏನೇ ಆದರೂ ಎಲ್ಲಿದ್ದರೂ ಕೇಡು ಮಾಡುವುದಿಲ್ಲ ಎನ್ನುವ ವಿಷಯದಲ್ಲಿ ಇಬ್ಬರಿಗೂ ಸಂಶಯವಿರಲಿಲ್ಲ.

ಕೇಶವ ಪಿಳ್ಳೆಯ ನೇಮಕ ದಿವಾನರ ಪ್ರೈವೇಟ್ ಸೆಕ್ರೆಟರಿಯನ್ನು ಕೂಡ ನಡುಗಿಸಿದ್ದ ವಿಷಯ. ದಿವಾನರ ಹತ್ತಿರ ಅಸಾಮಾನ್ಯವಾದ ಹಿಡಿತವಿದ್ದ ಮನುಷ್ಯನಾಗಿದ್ದ ಆತ. ಆತನಿಗೆ ಒಂದು ಅಭಿಪ್ರಾಯವನ್ನೂ ತಿಳಿಸಲು ಸಾಧ್ಯವಿಲ್ಲದ ರೀತಿಯಲ್ಲಿ ಆರ್ಡರ್ ಕಳುಹಿಸಿದ್ದರು. ಎಷ್ಟರ ಮಟ್ಟಿಗೆ ಸ್ವಾಧೀನಪಡಿಸಿಕೊಂಡಿದ್ದಾನೆ ಎಂದು ಆ ಮನುಷ್ಯ ಆಶ್ಚರ್ಯಗೊಂಡಿದ್ದ. ಎಷ್ಟೊಂದು ಆಲೋಚಿಸಿದ್ದರೂ ಅದರ ಸುಳಿವೂ ಸಿಕ್ಕಿರಲಿಲ್ಲ. ಇದು ಹೇಗೆ ಸಂಭವಿಸಿತು? ಪ್ರೈವೇಟ್ ಸೆಕ್ರೆಟರಿ ಅಭಿನಂದನೆಯನ್ನು ತಿಳಿಸಿದ್ದು ಅಷ್ಟೊಂದು ಆತ್ಮೀಯತೆಯಿಂದಲೇ ಎನ್ನುವುದು ಸಂಶಯವಾಗಿತ್ತು. ತನ್ನ ಗಮನಕ್ಕೆ ಬರದೆ ಒಬ್ಬ ಮನುಷ್ಯ ಭಕ್ತಿವಿಲಾಸವನ್ನು ಪ್ರವೇಶಿಸುವುದು ಆತನಿಗೆ ಇಷ್ಟವಿಲ್ಲದ ಕಾರ್ಯವಾಗಿರಬಹುದು.

ಆ ಬ್ಯಾಂಕಿಗೆ ಸಂಬಂಧಪಟ್ಟ ವಿಷಯಕ್ಕೆ ಕೇಶವ ಪಿಳ್ಳೆಯ ದೃಷ್ಟಿ ಹೋದದ್ದು.

ಅದಕ್ಕೋಸ್ಕರ ಕೇಶವ ಪಿಳ್ಳೆ ಕೆಲವು ಯಾತ್ರೆ ಕೈಗೊಳ್ಳಬೇಕಾಗಿತ್ತು. ಮೊದಲು ಕಾಂಗ್ರೆಸ್ ಚಳವಳಿಗೆ ಸಂಬಂಧಿಸಿದಂತೆ ಸಂಚರಿಸಿದ ಒಬ್ಬ ಮನುಷ್ಯನಲ್ಲ ಇಂದು ಕೇಶವ ಪಿಳ್ಳೆ. ಇಂದು ಪೇಷ್ಕಾರರು ಕೂಡ ಕೇಶವ ಪಿಳ್ಳೆಗಾಗಿ ಕಾದಿರುತ್ತಾರೆ. ಡಿಪಾರ್ಟ್ ಮೆಂಟಿನ ಮೇಲಧಿಕಾರಿಗಳನ್ನು ನೋಡಲು ಕೇಶವ ಪಿಳ್ಳೆಯ ಅನುಕೂಲವನ್ನು ಕೇಳು ತ್ತಿದ್ದರು. ಎಲ್ಲಿಯೂ ಕೇಶವ ಪಿಳ್ಳೆ ಮಾಡುವ ಕೆಲಸಕ್ಕೇ ಹೆಚ್ಚು ಪರಿಗಣನೆಯಿರು ತ್ತಿದ್ದದ್ದು. ಕೇಶವ ಪಿಳ್ಳೆ ಕೈಗೆತ್ತಿಕೊಂಡ ವಿಷಯ ಹಿಂದೇದೂ ಇಲ್ಲದಂತಹುದು— ಮುಖ್ಯವಾದದ್ದು. ಆದರೆ ಕೇಶವ ಪಿಳ್ಳೆ ಒಬ್ಬ ಸೂಪರಿಂಟೆಂಡೆಂಟ್ ಗ್ರೇಡಿನಲ್ಲಿದ್ದ ಉದ್ಯೋಗಸ್ಥನಾಗಿ ಬದಲಾಯಿಸಿದ. ಒಬ್ಬ ಪೇಷ್ಕಾರನ ಮುಂದೆಯೂ ಆತ ಕುಳಿತದ್ದಿಲ್ಲ. ಇಂದು 'ಜೀ ಹುಜೂರ್' ಎಂದು ಹೇಳುವುದಿಲ್ಲ ಸರಿ. ಮೇಲಿನ ಉಡುಪು ಹಾಕಿಕೊಳ್ಳ ಬೇಕಾಗಿರಲಿಲ್ಲ. ಅದೊಂದು ವ್ಯತ್ಯಾಸ ಇದ್ದದ್ದು. ಅಧಿಕಾರವನ್ನೂ ಸಾಮರ್ಥ್ಯವನ್ನೂ ಪ್ರಯೋಗಿಸದೆಯೇ ಔದ್ಯೋಗಿಕ ಕಾರ್ಯವನ್ನು ನಡೆಸಬೇಕಾದಂತಹ ಕಾರ್ಯಗಳು ಅನಿರೀಕ್ಷಿತವಾಗಿ ನಡೆದುಹೋದುವು.

ಅಂತೂ ಕೇಶವ ಪಿಳ್ಳೆಯ ಬದುಕು ಸುಖವಾಗಿತ್ತು ಎಂದು ಹೇಳಲಾಗುವುದಿಲ್ಲ. ಅವನು ಕಣ್ಣು ತುಂಬ ನಿದ್ದೆ ಮಾಡಿ ಕೆಲವು ದಿನಗಳಾಗಿದ್ದುವು. ಆಲೋಚಿಸುತ್ತಾ ಬಿದ್ದು ಕೊಂಡಿರುತ್ತಿದ್ದದ್ದು. ಹೋಗಲಿ, ಎಲ್ಲಿಯಾದರೂ ನಿದ್ದೆಹೋದರೆ ದುಃಸ್ವಪ್ನವನ್ನು ಕಂಡು ನಡುಗಿ ಎಚ್ಚರವಾಗುತ್ತಿದ್ದ. ಯಾರನ್ನು ನಂಬಬೇಕು ಎನ್ನುವುದೇ ನಿಶ್ಚಯವಿರ ಲಿಲ್ಲ. ಯಾರಲ್ಲಿ ನಿಸ್ವಾರ್ಥವಿದೆ ಎಂದು ತಿಳಿಯದು. ಅವನಿಗೆ ಒಬ್ಬನೇ ಒಬ್ಬ ಸ್ನೇಹಿ ತನೂ ಇರಲಿಲ್ಲ. ಸ್ವಲ್ಪ ಹೊತ್ತು ಮಾತನಾಡುವುದಕ್ಕಾದರೂ ಒಬ್ಬ ಸ್ನೇಹಿತನಿರಲಿಲ್ಲ. ಅಡುಗೆಯವನೂ ವಿಷ ಹಾಕಿಬಿಡುತ್ತಾನೋ ಎಂಬ ಭಯ. ಕಾತ್ಯಾಯಿನಿಯನ್ನು ಕರೆದು ಕೊಂಡು ಬಂದರೇನು ಎಂದು ಅವನು ಯಾವಾಗಲೂ ಆಲೋಚಿಸುತ್ತಿದ್ದ. ಆದರೆ...... ಆ ಆದರೆಯ ಹಿಂದೆ ತುಂಬ ಭಯ ಅಡಗಿತ್ತು. ಈ ಸಂಕಟಗಳಲ್ಲಿ ಪಾಲುಗೊಳ್ಳಲು ಯಾರಾದರೊಬ್ಬರು ಬೇಕಾಗಿತ್ತು. ಅದಕ್ಕಾಗಿ ಅವನು ಚಡಪಡಿಸುತ್ತಿದ್ದ.

ಜೀವನದಲ್ಲಿ ಭಾಗ್ಯದ ಎಲ್ಲ ಹಂತಗಳಿಗೂ ತನಗರಿವಿಲ್ಲದಂತೆಯೇ ಏರುತ್ತಿದ್ದ. ಕಾಂಗ್ರೆಸ್ ಚಳವಳಿ ಇಲ್ಲದೇ ಇದ್ದಿದ್ದರೆ ತಾನು ಈ ಸ್ಥಿತಿಗೆ ಬರಲು ಸಾಧ್ಯವಿತ್ತೇ ಎಂದು ಕೇಶವ ಪಿಳ್ಳೆ ಸಂದೇಹಪಟ್ಟಿದ್ದ. ಕಾಂಗ್ರೆಸ್ ಹುಟ್ಟಿಕೊಂಡದ್ದು ಒಂದು ರೀತಿಯಲ್ಲಿ ಕೇಶವ ಪಿಳ್ಳೆಯ ಒಳ್ಳೆಯ ಕಾಲದಲ್ಲಿ. ನಾಡಿನ ಜನರು ದಂಗೆಯೆದ್ದಿದ್ದ ಸಂಗತಿಯೊಂದೂ ಅವನಿಗೆ ತಿಳಿಯದು. ಸರ್ಕಾರ ಅದನ್ನು ಹೇಗೆ ಎದುರಿಸಬೇಕು ಎನ್ನುವುದೂ ತಿಳಿದಿರ ಲಿಲ್ಲ. ಆದರೂ ಚೀಫ್ ಸೆಕ್ರೆಟರಿಗೆ ಅಂದು ಮಾರ್ಗದರ್ಶನ ಮಾಡಲು ಸಾಧ್ಯವಾಗಿತ್ತು. ಅದೃಷ್ಟ ಅವನ ನಾಲಗೆಗೆ ನುಗ್ಗಿ ಬಂದು ಆ ಮಾತನ್ನು ಹೇಳಿಸಿದ್ದು ಅಷ್ಟೆ. ಅದಲ್ಲದೆ ಅವನು ತಿಳಿದು ಹೇಳಿದ್ದಲ್ಲ. ಅದರಂತೆಯೇ ತಾನಾಗಿ ತಯಾರಿಸಿ ಕಳಿಸಿದ ರಿಪೋರ್ಟ್ ತನ್ನ ಒಳ್ಳೆಯ ಸ್ಥಿತಿಗೋಸ್ಕರ ಕಾಂಗ್ರೆಸ್ ಸೋತೇ ತೀರಬೇಕು ಎಂದು ಭಾವಿಸಿದಾಗ

ತನಗರಿವಿಲ್ಲದಂತೆಯೇ ಬರೆದುಬಿಟ್ಟಿದ್ದ. ಆ ಗೋಲಿಬಾರಿನಲ್ಲೂ ಜಯಿಸಿದ್ದು ಅದೃಷ್ಟ ದಿಂದಲ್ಲದೆ ಬೇರೆ ಯಾವುದರಿಂದ?

ಆದರೆ ಕಡಲಿನ ಅಲೆಗಳಂತೆ ಭಾಗ್ಯಗಳು ಒಂದೊಂದಾಗಿ ಉರುಳಿಬರುತ್ತಿದ್ದುದು ಅವನನ್ನು ಭಯಗೊಳಿಸಿತ್ತು. ಹಾಗೆ ಒಳ್ಳೆಯ ಕಾಲ ಬರಬಾರದು. ಅದು ಸರಿಯಾದ ದ್ದಲ್ಲ; ದುರ್ಲಕ್ಷಣ. ಆ ರೀತಿಯಲ್ಲಿ ಅದೃಷ್ಟ ಬರುವುದು ದುರದೃಷ್ಟಕ್ಕಾಗಿ. ಆ ಭಾಗ್ಯ-ದೋಷವೇನಿರಬಹುದು? ಅದೂ ಕೇಶವ ಪಿಳ್ಳೆಯ ಮನಸ್ಸನ್ನು ಮಥಿಸುತ್ತಿದ್ದ ಸಂಗತಿಯಾಗಿತ್ತು. ಕೆಲವು ಸಲ ಕೇಶವ ಪಿಳ್ಳೆಗೆ ಮಿಂಚಿನ ಹಾಗೆ ಹೊಳೆಯುತ್ತಿತ್ತು. ನಾಡಿನ ಇಡೀ ಶತ್ರುಗಳು. ಒಂದು ದಿನ ಬೆಳಗ್ಗೆ ಕೇಶವ ಪಿಳ್ಳೆ ಬಾಗಿಲು ತೆರೆದು ಹೊರಗೆ ನೋಡಿದಾಗ ಕಂಡ ದೃಶ್ಯ ಭಯಂಕರವಾಗಿತ್ತು. ಅವನು ನಡುಗಿಹೋದ. ಎದುರಿಗೆ ಇದ್ದ ಮಾವಿನ ಮರದ ಕೊಂಬೆಗೆ ಒಬ್ಬ ನೇಣುಹಾಕಿಕೊಂಡಿದ್ದ. ಹರಿದು ಚಿಂದಿಯಾಗಿದ್ದ ಷರಟು, ಜಡೆಗಟ್ಟಿದ್ದ ತಲೆಗೂದಲು. ಉಟ್ಟಿದ್ದ ಪಂಚೆಯಿಂದಲೇ ತೂಗುಹಾಕಿಕೊಂಡಿದ್ದದ್ದು. ಒಂದು ಹರಿದ ಕೊಡೆಯನ್ನು ಮಾವಿನ ಮರಕ್ಕೆ ಒರಗಿಸಿಡಲಾಗಿತ್ತು. ಒಂದು ಕಾಗದದ ಕಟ್ಟು ಕೊಡೆಯೊಳಗಿನಿಂದ ಹೊರಕ್ಕೆ ಇಣುಕಿ ನೋಡುತ್ತಿತ್ತು. ಕೇಶವ ಪಿಳ್ಳೆ ಗಟ್ಟಿಯಾಗಿ ಕೂಗಿದ.

ಜನರು ಬಂದು ಸೇರಿದರು. ತೂಗುಹಾಕಿಕೊಂಡಿದ್ದವನು ಗೋಪಾಲನ್ ನಾಯರ್. ಆ ಕಾಗದದ ಕಟ್ಟನ್ನು ಪೋಲೀಸರು ಪರಿಶೋಧಿಸಿದರು. ಒಂದು ಜಮೀನನ್ನು ತುಂಬ ಬೆಲೆಗೆ ತೆಗೆದುಕೊಳ್ಳುವ ಆರ್ಡರ್‌ನಿಂದ ಹಿಡಿದು ಎಲ್ಲ ವಿವರಗಳೂ ಅದರಲ್ಲಿದ್ದುವು. ಒಂದು ಲೆಕ್ಕದ ಪುಸ್ತಕದಲ್ಲಿ ಎಷ್ಟೋ ವರ್ಷಗಳಿಂದ ಆ ಹಣ ಪಡೆಯುವುದಕ್ಕೋಸ್ಕರ ಮಾಡಿದ ಖರ್ಚನ್ನು ಬರೆದಿಡಲಾಗಿತ್ತು. ಖಂಡಿತವಾಗಿಯೂ ಆ ಲೆಕ್ಕಗಳ ಗುಂಪಿನಲ್ಲಿ "ಸೂಪರಿಂಟೆಂಡೆಂಟ್‌ಗೆ ಕೊಡುವುದಕ್ಕಾಗಿ ಕೇಶವ ಪಿಳ್ಳೆಯ ಕೈಯಲ್ಲಿ ಕೊಟ್ಟದ್ದು ರೂಪಾಯಿ ಹದಿಮೂರು" ಎಂದೂ ಇರಬಹುದು. ಇಂದಿಗೂ ಆ ಫೈಲ್ ಅಸಿಸ್ಟೆಂಟ್ ಸೆಕ್ರೆಟರಿಯ ಮೇಜಿನ ಮೇಲೆಯೇ ಇರಬಹುದು. ಈ ಕಾಗದದ ಕಟ್ಟನ್ನು ತನ್ನ ಮಗ ಮುಕುಂದನಿಗೆ ತಲಪಿಸಬೇಕೆಂದು ಗೋಪಾಲನ್ ನಾಯರ್ ಬರೆದಿಟ್ಟಿದ್ದ. ತಂದೆ ಮಗನಿಗಾಗಿ ಉಳಿಸಿಹೋಗಿದ್ದ ಸಂಪಾದನೆ ಅದು!

ಕಳೆದ ಕೆಲವಾರು ದಿನಗಳಿಂದ ಪಾರ್ಕ್ ವ್ಯೂನಲ್ಲೂ ಭಕ್ತಿವಿಲಾಸದಲ್ಲೂ ಗೇಟಿನ ಒಳಗೆ ಪ್ರವೇಶಿಸಲು ಗೋಪಾಲನ್ ನಾಯರ್ ಸುತ್ತಾಡುತ್ತಿದ್ದ ಎಂದು ಪೋಲೀಸರು ಹೇಳಿದರು. ಅವನನ್ನು ಎಷ್ಟೋ ಸಲ ಪೋಲೀಸಿನವರು ಗದರಿಸಿದ್ದರು. ಸ್ವಲ್ಪ ತಲೆಸರಿಯಿಲ್ಲದವನಂತಿದ್ದ ಅಷ್ಟೆ.

ಕೇಶವ ಪಿಳ್ಳೆಯ ಮನೆಯ ಪರಿಸರದಲ್ಲಿ ಯೂನಿಫಾರಂ ಇಲ್ಲದೆ ರಾತ್ರಿಯ ಹೊತ್ತು ಸಂಚರಿಸುವ ಸೆಕ್ಯುರಿಟಿ ಗಾರ್ಡ್ ಹೇಳಿದುದು: "ರಾತ್ರಿ ಎಂಟು ಗಂಟೆಯಲ್ಲಿ ಅವನು ಆ ಮಾರ್ಗವಾಗಿ ಹೋಗುವುದನ್ನು ನೋಡಿದೆ" ಎಂದು. ಕೇಶವ ಪಿಳ್ಳೆಯನ್ನು

ಕಾಣಲು ಅವನು ನಡೆದಾಡುತ್ತಿದ್ದುದಾಗಿರಬೇಕು. ಆ ಪ್ರಯತ್ನದಲ್ಲಿ ಸೋತು ಆತ್ಮ ಹತ್ಯೆ ಮಾಡಿಕೊಂಡದ್ದಾಗಿರಬೇಕು. ಅಷ್ಟೊಂದು ಭೀಕರವಾದ ಒಂದು ದೃಶ್ಯವನ್ನು ಆಯುಷ್ಯದಲ್ಲಿ ಇದು ವರೆಗೆ ಕಂಡದ್ದಿಲ್ಲ. ನಾಲಗೆ ಕಚ್ಚಿಕೊಂಡು, ದುರುಗುಟ್ಟಿಕೊಂಡಿದ್ದ ಕಣ್ಣುಗಳೊಡನೆ ತಲೆ ಇಳಿಬಿಟ್ಟುಕೊಂಡು ಅವನು ಕೇಶವ ಪಿಳ್ಳೆಯ ಕಡೆಗೆ ನೋಡುತ್ತಿದ್ದ. ಒಹ್! ಆ ದೃಶ್ಯವನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ.

ತಂಬಾನೂರ್ ಲಾಡ್ಜಿನಲ್ಲಿ ವಾಸಿಸುತ್ತಿದ್ದ ಕಾಲದಲ್ಲಿ ಅವನು ಕುಟ್ಟನ್ ಪಿಳ್ಳೆಯ ಕಾಗದವನ್ನು ತೆಗೆದುಕೊಂಡು ಬಂದಿದ್ದ. ಕರೆದು ಎಬ್ಬಿಸಿ ಆ ಕಾಗದವನ್ನು ಕೊಟ್ಟಿದ್ದ. ಕೈಯಲ್ಲಿ ಬಿಡಿಗಾಸೂ ಇಲ್ಲದಿದ್ದ ಕಾಲ. ಒಂದು ಸಣ್ಣ ಆಶೆ ಅಂದು ಕೇಶವ ಪಿಳ್ಳೆಗೆ ಹುಟ್ಟಿತ್ತು. ತತ್ಕಾಲದಲ್ಲಿ ಮೂರು ರೂಪಾಯಿಯಷ್ಟು ಆ ವ್ಯವಹಾರದಲ್ಲಿ ಸಿಕ್ಕಿತ್ತು. ಅನಂತರ ಅದನ್ನು ಹಿಂದಿರುಗಿಸಬೇಕಾಗಿ ಬಂದಿದ್ದರೋ! ಗತಿಗೆಟ್ಟ ಕಾಲದಲ್ಲಿ ದೇವರೇ ತೋರಿಸಿದ ಮಾರ್ಗವಾಗಿತ್ತು ಅದು. ಅದು ಜೀವನದಲ್ಲಿ ಎಂದೂ ಮರೆಯಲು ಸಾಧ್ಯ ವಿಲ್ಲದ ಒಂದು ಭೀಕರ ಸ್ವಪ್ನವಾಗಿ ಪರಿಣಮಿಸಿತ್ತು. ಏತಕ್ಕಾಗಿ ಆ ಮನುಷ್ಯ ತನ್ನ ಮನೆಯ ಮುಂದೆ ಬಂದು ಆತ್ಮಹತ್ಯೆ ಮಾಡಿಕೊಂಡ? ಆ ಮೂರು ರೂಪಾಯಿಗಳಿ ಗಾಗಿದ್ದಲ್ಲಿ! ಅದಕ್ಕೆ ಹಿಂದೆ, ಅದರ ನಂತರ ಅವನು ಎಲ್ಲೆಲ್ಲ ಯಾರಿಗೆಲ್ಲ ಲಂಚ ಕೊಟ್ಟಿದ್ದಾನೆ! ಇದಕ್ಕಿಂತಲೂ ಹೆಚ್ಚು ರೂಪಾಯಿಯನ್ನು ಪ್ರಯೋಜನವಿಲ್ಲದೆ ಕೊಟ್ಟ ಕಡೆಯಲ್ಲಲ್ಲವೇ ಹೋಗಿ ಆತ್ಮಹತ್ಯೆ ಮಾಡಿಕೊಳ್ಳಬೇಕಾದದ್ದು? ಒಂದು ತಪ್ಪು ಮಾಡಿದ ಸ್ಥಿತಿ ಕೇಶವ ಪಿಳ್ಳೆಯ ಮನಸ್ಸನ್ನು ವೇದನೆಗೊಳಗುಮಾಡಿತು. ಅವನನ್ನು ರಕ್ಷಿಸಬಹು ದಾಗಿತ್ತು. ಹೀಗೆ ಕರುಣಾಜನಕವಾಗಿ ಆ ಬದುಕನ್ನು ಅಂತ್ಯಗೊಳಿಸಿಕೊಳ್ಳಬೇಕಾಗಿರಲಿಲ್ಲ. ಮಾವನ ಕಾಗದವನ್ನು ತೆಗೆದುಕೊಂಡು ಬಂದಾಗ ಕಾರ್ಯಸಾಧನೆ ಆಯಿತು ಎನ್ನುವ ವಿಶ್ವಾಸದಿಂದ ಅವನು ಬಂದಿದ್ದದ್ದು. ಅಂತಹ ವಿಶ್ವಾಸ ಕೈಬಿಟ್ಟುಹೋಗಿ ಆ ಜೀವನ ವನ್ನು ಅಂತ್ಯಗೊಳಿಸಿಕೊಂಡದ್ದಾಗಿರಬೇಕು.

ಗೋಪಾಲನ್ ನಾಯರ್ ಎನ್ನುವ ಮನುಷ್ಯ ಕೇಶವ ಪಿಳ್ಳೆಯ ಮನೆಯ ಮುಂದಿದ್ದ ಮಾವಿನ ಮರಕ್ಕೆ ಸಂಶಯಾತ್ಮಕವಾಗಿ ನೇಣುಹಾಕಿಕೊಂಡಿದ್ದುದು ಕಂಡುಬಂದಿತು, ಎಂದು ಕಾಂಗ್ರೆಸ್ಸನ್ನು ಬೆಂಬಲಿಸುತ್ತಿದ್ದ ಪತ್ರಿಕೆಗಳಲ್ಲಿ ವಾರ್ತೆ ಬಂದಿತು. ಆ ಸುದ್ದಿಯನ್ನು ಪೂರ್ತಿ ಓದಿದರೆ ಕೇಶವ ಪಿಳ್ಳೆಯೇ ಗೋಪಾಲನ್ ನಾಯರನ್ನು ಕೊಂದದ್ದು ಎಂದು ತೋರುತ್ತಿತ್ತು. ಯಾವುದೋ ಕೆಟ್ಟ ಕಾಲದ ಪ್ರಾರಂಭ ಅದು ಎಂದು ಅವನಿಗೆ ಅನ್ನಿಸಿತು. ಅದರ ಛಾಯೆ ಮೊದಲೇ ಹರಡಿತ್ತು. ಈಗ ಆ ಕಾಲ ಬಂತೋ ಎಂದು ಕೇಶವ ಪಿಳ್ಳೆ ಸಂಶಯಪಟ್ಟ. ಒಂದೊಂದು ನಿಮಿಷವೂ ಅವನು ಯಾವುದೋ ಕೆಟ್ಟ ಸುದ್ದಿಯನ್ನು ನಿರೀಕ್ಷಿಸುತ್ತಿದ್ದ. ಕೇಶವ ಪಿಳ್ಳೆಯ ಆಲೋಚನೆ ಎಲ್ಲೆಲ್ಲಿಗೋ ಹೋಯಿತು. ಯಾವ ನಾದರೂ ಒಬ್ಬ ಕಾಂಗ್ರೆಸ್ಸಿನವನು ತನ್ನನ್ನು ಕೊಲ್ಲಲು ಸಮಯ ಸಾಧಿಸುತ್ತಿಲ್ಲ ಎಂದು ಹೇಳುವುದು ಹೇಗೆ? ಸೆಕ್ಯುರಿಟಿ ಗಾರ್ಡ್ ಇದ್ದರೂ ಗೋಪಾಲನ್ ನಾಯರ್ ಮನೆಯ

ಮುಂದೆ ಬಂದು ತೂಗು ಹಾಕಿಕೊಂಡಿದ್ದ. ಆ ಭಯಾನಕವಾದ ಚಿಂತೆ ಗೋಪಾಲನ್ ನಾಯರ್ ಸತ್ತ ರಾತ್ರಿಯಲ್ಲಿ ಡ್ಯೂಟಿ ಮಾಡುತ್ತಿದ್ದವರನ್ನು ಡಿಸ್‌ಮಿಸ್ ಮಾಡುವುದರಲ್ಲಿ ಅಂತ್ಯಗೊಂಡಿತ್ತು. ಅವರು ತಮ್ಮ ಕೆಲಸ ಸರಿಯಾಗಿ ಮಾಡಿಲ್ಲ ಎಂದು ಕೇಶವ ಪಿಳ್ಳೆ ಬರೆದು ಕಳುಹಿಸಿದ. ಹಾಗೆ ಎರಡು ಕುಟುಂಬಗಳು ಬೀದಿಯ ಪಾಲಾದುವು. ಅವರಿಬ್ಬರೂ ಮಕ್ಕಳುಮರಿ ಕಟ್ಟಿಕೊಂಡು ಬಂದು ಕೇಳಿದರು:

"ಈ ಮಕ್ಕಳನ್ನೆಲ್ಲ ಎಲ್ಲಿಗೆ ಕಳಿಸೋದು ಸ್ವಾಮಿ?"

ಆ ರೀತಿಯಲ್ಲಿ ಒಂದು ಗುಂಪು ಶತ್ರುಗಳಾದರು ಎಂದು ಕೇಶವ ಪಿಳ್ಳೆಗೆ ತೋರಿತು. ಅವರು ಶತ್ರುಗಳಾಗುವುದರಲ್ಲಿ ಆಶ್ಚರ್ಯವುಂಟೆ?

ಹೀಗೆ ದೇಶವಿಡೀ ಎಷ್ಟು ಕುಟುಂಬಗಳು ಶತ್ರುಗಳಾಗಿರಬಹುದು? ಎಷ್ಟೋ ಇರಬಹುದು. ಗೋಲಿಬಾರಿನಲ್ಲಿ ಸತ್ತವರ ಹೆಸರುಗಳನ್ನು ಕೇಶವ ಪಿಳ್ಳೆ ನೆನಸಿಕೊಂಡ. ಅವರ ಮಕ್ಕಳು, ತಂದೆ ತಾಯಿಗಳು, ಪತ್ನಿಯರು......... ಹಾಗೆ ಅವರನ್ನು ನಂಬಿ ಬದುಕುತ್ತಿದ್ದವರೆಲ್ಲ ಬಂದು ನೇಣುಹಾಕಿಕೊಂಡು ಸತ್ತರೆ! ಎಂದೆಂದೂ ನೇಣುಹಾಕಿಕೊಂಡು ಸತ್ತವರ ಪ್ರೇತ ಮನೆಯ ಮುಂದೆ ಕಾಣಬಹುದು. ಕೇಶವ ಪಿಳ್ಳೆಗೆ ಆ ರೀತಿಯಲ್ಲಿ ಭಯವುಂಟಾಯಿತು.

ಆದರೆ ಎಲ್ಲದಕ್ಕೂ ಎಂದಲ್ಲ, ಯಾವುದಕ್ಕಾದರೂ ನಾನು ತಪ್ಪಿತಸ್ಥನೆ? ಅವರು ಯಾಕೆ ಶತ್ರುಗಳಾದರು? ತಾನು ತನ್ನ ಕರ್ತವ್ಯ ನೆರವೇರಿಸಿದೆ. ಅಷ್ಟೇ ಅಲ್ಲವೆ? ತಾನಲ್ಲದಿದ್ದರೆ ಮತ್ತೊಬ್ಬ ಅದನ್ನು ಮಾಡುತ್ತಿದ್ದ.

'ಕುಟುಂಬಕ್ಕೆ ಶಾಪ ತರಬೇಡ'—ಎನ್ನುವ ತಾಯಿಯ ಮಾತುಗಳನ್ನು ಅವನು ಆಗಾಗ ನೆನಸಿಕೊಳ್ಳುತ್ತಿದ್ದ. ಕಾತ್ಯಾಯಿನಿಗೆ ತಿಂಗಳು ತುಂಬುತ್ತ ಬಂದಿದೆ. ಯಾವ ರೀತಿಯ ಸುದ್ದಿ ಕಾತ್ಯಾಯಿನಿಯನ್ನು ಕುರಿತು ಬರಬಹುದು ಎಂದೂ ಆತ ಚಿಂತಿಸುತ್ತಿದ್ದ. ಯಾವ ಅಪಾಯ ಬೇಕಾದರೂ ಸಂಭವಿಸಬಹುದಾಗಿತ್ತು ಎಂದಾಗಿತ್ತು ಅವನ ಭಯ.

ಕೇಶವ ಪಿಳ್ಳೆ ಶಾಸ್ತಮಂಗಲದಲ್ಲಿದ್ದ ಸಾಧಾರಣ ದೊಡ್ಡದಾಗಿದ್ದ ಕಟ್ಟಡಕ್ಕೆ ವಾಸವನ್ನು ಬದಲಾಯಿಸಿದ. ಮೊದಲು ಅಲ್ಲಿ ಒಬ್ಬ ಗೌರ್ಮೆಂಟ್ ಸೆಕ್ರೆಟರಿ ವಾಸಿಸುತ್ತಿದ್ದರು. ನಾಲ್ಕು ಕಡೆಯಲ್ಲಿಯೂ ಎತ್ತರವಾದ ಕಾಂಪೌಂಡು ಇದ್ದ ಬಂದುಬಸ್ತಾದ ಕಟ್ಟಡ ಅದು. ಆದರೆ ಮನೆ ಬದಲಾಯಿಸಿದ್ದರೂ ಅವನ ಭೀತಿ ಹೋಗಿರಲಿಲ್ಲ. ಅಷ್ಟು ಬೇಗ ಮರೆಯಾಗದ ಒಂದು ಚಿತ್ರವನ್ನು ಸ್ಮೃತಿಫಲಕದಲ್ಲಿ ಚಿತ್ರಿಸಿ ಹೋಗಿದ್ದ ಆ ಗೋಪಾಲನ್ ನಾಯರ್.

ಜೋಯಿಸರು ಹೇಳುವುದು ಕೇಶವ ಪಿಳ್ಳೆಗೆ ಶನಿಕಾಟವಿದೆ ಎಂದು. ಸ್ಥಾನ ಚಲನೆ, ಮಾನಹಾನಿ—ಇಂತಹ ಹಲವು ಕೆಟ್ಟ ಫಲಗಳನ್ನು ಜೋಯಿಸರು ತಿಳಿಸಿದ್ದರು. ಆದರೆ ಅದರ ಜೊತೆಗೆ ಧನಾಗಮನವೂ ಇತ್ತು. ಈ ದೋಷಗಳೆಲ್ಲ ಇದ್ದರೂ ಜಾತಕದ

ಪ್ರಕಾರ ಯಾವ ದೋಷವೂ ಉಂಟಾಗುವುದಿಲ್ಲ. ಶನಿಪೂಜೆ ಮಾಡಿಸುವುದು ಮುಂತಾದ ಕೆಲವು ವ್ರತಗಳನ್ನು ಜೋಯಿಸರು ತಿಳಿಸಿದರು.

ಆಫೀಸಿನ ಕೆಲಸವನ್ನು ಯಥಾಸ್ಥಿತಿಯಲ್ಲಿ ಮಾಡಿಕೊಂಡು ಹೋಗುತ್ತಿದ್ದ. ಅದಕ್ಕಿಂತಲೂ ಹೆಚ್ಚು ಮಾಡಲು ಬಾಧ್ಯತೆಯುಳ್ಳವನಾಗಿದ್ದ ಕೇಶವ ಪಿಳ್ಳೆ. ಗಾಂಧೀಜಿಯ ನಿರ್ದೇಶನದಂತೆ ಕಾಂಗ್ರೆಸ್ ಚಳವಳಿಯನ್ನು ನಿಲ್ಲಿಸಿತ್ತು. ಆದರೂ ಸರ್ಕಾರ ವಿಧಿಸಿದ್ದ ಬಹಿಷ್ಕಾರವನ್ನು ಹಿಂತೆಗೆದುಕೊಂಡಿರಲಿಲ್ಲ. ಕಾಂಗ್ರೆಸ್ಸಿನವರು ಕೊಟ್ಟಿಯನ್ನು ತಲಪಿದರು. ಅಲ್ಲಿಂದ ಪ್ರಕಟಣಾ ಪತ್ರಿಕೆಯನ್ನು ಹೊರಡಿಸಿ ಗುಟ್ಟಾಗಿ ತಿರುವಾಂಕೂರಿನಲ್ಲಿ ಪ್ರಚಾರ ಮಾಡಬೇಕು ಎಂದಾಗಿತ್ತು ಕಾಂಗ್ರೆಸ್ ಹಾಕಿಕೊಂಡಿದ್ದ ಕಾರ್ಯಕ್ರಮ. ಹಲವು ಮುಂದಾಳುಗಳ ಹೆಸರಿನಲ್ಲೂ ವಾರೆಂಟುಗಳಿದ್ದುವು. ಹೆಚ್ಚು ತಡಮಾಡದೆ ಆಡಳಿತ ಸುಧಾರಣೆಯನ್ನು ಕೈಗೆತ್ತಿಕೊಂಡು ಒಂದು ಚುನಾವಣೆ ನಡೆಸಿ ರಾಜ್ಯದ ಜನತೆ ಸರ್ಕಾರದ ಪರವಾಗಿದೆ ಎಂದು ತಿಳಿಸುವುದಾಗಿತ್ತು ದಿವಾನರ ಕಾರ್ಯಕ್ರಮ. ಅದಕ್ಕೆ ಮೊದಲು ಕೇಶವ ಪಿಳ್ಳೆ ನಿರ್ದೇಶಿಸಿದ್ದ ಸಂಘಟನೆಯನ್ನು ವ್ಯಾಪಕವಾಗಿ ವ್ಯವಸ್ಥೆಗೊಳಿಸಬೇಕು. ಅನಂತರ ಚುನಾವಣೆ ನಡೆಸಬೇಕು. ಆದರೆ ಕೆಲವು ದಿನಗಳಿಂದ ಕೇಶವ ಪಿಳ್ಳೆ ಯಾವ ಕೆಲಸವನ್ನೂ ಕೈಗೆತ್ತಿಕೊಂಡಿರಲಿಲ್ಲ.

ಕೇಶವ ಪಿಳ್ಳೆಗೆ ಹೇಗೆ ಮುಂದಡಿಯಿಡಬೇಕೆಂದು ತಿಳಿಯುತ್ತಿಲ್ಲ. ಮನಸ್ಸಿನಲ್ಲಿ ಆ ಬಗ್ಗೆ ಲವಲವಿಕೆಯೂ ಇರಲಿಲ್ಲ. ಮಾಡಬೇಕಾಗಿದ್ದ ಕೆಲಸ ಕಠಿಣವಾದದ್ದು ಎಂದು ಗೊತ್ತಿತ್ತು. ಆದರೆ ಪ್ರಾರಂಭಿಸುವುದು ಹೇಗೆ ಎಂದು ತಿಳಿಯದು. ಪ್ರಾರಂಭ ಮಾಡಬೇಕಾಗಿದ್ದದ್ದು ತಡವಾಯಿತೆಂದೂ ಇರಬಹುದು. ದಿವಾನರಿಂದಲೂ ಚೀಫ್ ಸೆಕ್ರೆಟರಿಯಿಂದಲೂ ಸಮರ್ಥನೆಂದು ಹೇಳಿಸಿಕೊಂಡದ್ದು ತನ್ನ ಬುದ್ಧಿಶಕ್ತಿಯಿಂದಲೇ ಎನ್ನುವ ವಿಶ್ವಾಸ ಅವನಿಗಿರಲಿಲ್ಲ. ಆದರೆ ಒಂದು ವಿಷಯ ಸ್ಪಷ್ಟವಾಗಿತ್ತು. ಬೆನ್ನಿಗೆ ಏಟು ಬೀಳಬಹುದಾದ ಸಂದರ್ಭದಲ್ಲಿ ಮಾತ್ರ ಬಾಯಿ ತೆರೆಯುತ್ತಿದ್ದ. ತನ್ನ ಭಾಗ್ಯೋದಯವಾಗುತ್ತಿದ್ದುದು ಆಗ. ಆಗಲೇ ತನಗರಿವಿಲ್ಲದಂತೆ! ಅಂತಹ ಒಂದು ಘಟ್ಟದಲ್ಲಿ ಒಂದುವೇಳೆ ದಿವಾನರು ಬರಹೇಳಿ ನಿಮಗೆ ನಿಲ್ಲಿಸಿಕೊಂಡು ಕೆಲಸದಿಂದ ತೆಗೆದುಹಾಕುತ್ತಿದ್ದೇನೆ ಎಂದು ಹೇಳುವುದಾದಲ್ಲಿ ಪುನಃ ಅಂತಹ ಕಷ್ಟಕಾಲದಲ್ಲೂ ಭಾಗ್ಯವಿದ್ದಲ್ಲಿ ಆಗ ಏನಾದರೂ ಹೊಳೆಯಬಹುದು. ಅದರಂತೆ ನಡೆದೀತು. ಇಲ್ಲದಿದ್ದಲ್ಲಿ ಅಸಮರ್ಥನೆನ್ನುವ ಹೆಸರಿನಿಂದ ಹೊರಗೆ ಹೋಗಬೇಕಾಗಬಹುದು. ಅದೇ ಸಂಭವಿಸುವುದಿದ್ದಲ್ಲಿ ಹಾಗೇ ಆಗಲಿ.

ನೌಕರರ ವರ್ಗದಲ್ಲಿಯೂ ಕೇಶವ ಪಿಳ್ಳೆಯ ಸ್ಥಾನ ಅಷ್ಟೊಂದು ಸಂತೋಷದಾಯಕವಾಗಿರಲಿಲ್ಲ. ಅವನು ಈ ಸ್ಥಾನವನ್ನು ಪಡೆಯಲು ಅತ್ಯಾಗ್ರಹಿಯಾಗಿದ್ದವನಲ್ಲವೆ? ಎಷ್ಟೋ ಜನರ ತಲೆಯ ಮೇಲೆ ಹಾಯ್ದು ಈ ಸ್ಥಾನಕ್ಕೇರಿದುದು. ದಿವಾನರೊಡನೆ ನಿತ್ಯ ಸಂಪರ್ಕವನ್ನಿರಿಸಿಕೊಂಡು ಅವನಿಗೆ ಹತ್ತಿರದವನಾಗಿದ್ದುದನ್ನು ಕುರಿತು

ಎಲ್ಲರೂ ಅರ್ಥಪೂರ್ಣವಾಗಿ ನಗುತ್ತಿದ್ದರು. ಆದರೆ ಅವರು ಹಾಗೆ ನಗುತ್ತಿದ್ದಾಗ ಹಾಗೆಯೇ ಹಲ್ಲುಕಡಿಯುತ್ತಿದ್ದರು. ಅಸೂಯೆ, ಬರೀ ಅಸೂಯೆ. ಕೇಶವ ಪಿಳ್ಳೆಯನ್ನೂ ಕಂಡರೆ ಅವರಿಗೆ ತಾತ್ಸಾರ. ದಿವಾನರ ಪ್ರೈವೇಟ್ ಸೆಕ್ರೆಟರಿ ಕೂಡ ಗಿಡುಗನ ಹಾಗೆ ಒಂದು ಸಂದರ್ಭವನ್ನು ಕಾಯುತ್ತಾ ಇದ್ದರು. ಅವರಿಗೆ ತಿಳಿಯದಂತೆ ಬಹು ಮುಖ್ಯವಾದ ಸ್ಥಾನಕ್ಕೆ ಒಬ್ಬ ವ್ಯಕ್ತಿ ನೇಮಕಗೊಂಡಿದ್ದ. ಇದು ವರೆಗೆ ಆ ರೀತಿ ನಡೆದಿರಲಿಲ್ಲ. ಎದುರೆದುರು ಹೇಳಲು ಶಕ್ತಿಯಿಲ್ಲದ್ದರಿಂದ ಆತ ಬಾಯಿಮುಚ್ಚಿಕೊಂಡಿದ್ದ. ದಿವಾನರಲ್ಲಿದ್ದ ಅಪರೂಪವಾದ ದೌರ್ಬಲ್ಯವೋ ಅಥವಾ ಮತ್ತೊಂದೋ ಆ ನೇಮಕಕ್ಕೆ ಕಾರಣವಾಗಿತ್ತು. ಆತನಿಗೆ ಅದು ಸರಿಯಾಗಿ ತಿಳಿಯದು. ದೌರ್ಬಲ್ಯವೇ ಇರಬೇಕು ಎನ್ನಿಸುತ್ತಿತ್ತು. ಒಂದು ಸಂದರ್ಭ ಸಿಕ್ಕಿದರೆ ಆತ ವಿಪರೀತ ತೊಂದರೆ ಮಾಡುತ್ತಾನೆ ಎನ್ನುವುದರಲ್ಲಿ ಸಂಶಯವಿಲ್ಲ.

ಅದು ಸಂಭವಿಸಿತು. ಒಂದು ದಿನ ದಿವಾನರು ಕೇಶವ ಪಿಳ್ಳೆಯನ್ನು ಕರೆದು ಬೈದರು. ಇಷ್ಟು ದಿನವೂ ಏನು ಮಾಡುತ್ತಿದ್ದೆ ಎಂದು ಕೇಳಿದರು. ಅದೊಂದು ಎಚ್ಚರಿಕೆ ಕೊಟ್ಟದ್ದಾಗಿತ್ತು. ಹೆಣ್ಣಿಲಿ ಹೆಣ್ಣಿಲಿಯೇ ಎನ್ನುವ ಅರ್ಥ ಅದರಲ್ಲಿ ಅಡಗಿತ್ತು. ಕೇಶವ ಪಿಳ್ಳೆಗೆ ಅವರನ್ನು ಯಾವ ರೀತಿಯಲ್ಲಿ ಸಮಾಧಾನಪಡಿಸಬೇಕು ಎನ್ನುವುದು ತಿಳಿಯಲಿಲ್ಲ. ಹೇಳಬೇಕಾದದ್ದನ್ನು ಹೇಳಿಬಿಡಲೆ? ತಾನು ಹೆದರುತ್ತಿದ್ದೇನೆ ಎಂದಲ್ಲವೇ ಹೇಳಬೇಕಾದದ್ದು?

ಪ್ರೈವೇಟ್ ಸೆಕ್ರೆಟರಿ ಹೀಗೆಲ್ಲಾ ಮಾಡಿದ್ದು ಎಂದಾಗಿತ್ತು ಕೇಶವ ಪಿಳ್ಳೆಯ ನಂಬಿಕೆ. ಅದು ಅಂತಹ ತಪ್ಪು ಎಂದು ಹೇಳಲು ಸಾಧ್ಯವಿಲ್ಲ. ಪ್ರೈವೇಟ್ ಸೆಕ್ರೆಟರಿ ಒಂದು ಸಲ ಕೇಶವ ಪಿಳ್ಳೆಯನ್ನು ಅಲುಗಾಡಿಸಿ ನೋಡಿದ ಅಷ್ಟೆ. ಆ ಮನುಷ್ಯನ ಕೆಲಸವೇ ಅದು.

ದಿವಾನರ ಕೊಠಡಿಯಿಂದ ಹೊರಗೆ ಬಂದ ಕೂಡಲೇ ಪ್ರೈವೇಟ್ ಸೆಕ್ರೆಟರಿ ಕೇಶವ ಪಿಳ್ಳೆಯ ಹತ್ತಿರ ಬಂದರು. ತಾನೇನೋ ಉಪಕಾರ ಮಾಡುತ್ತಿದ್ದೇನೆ ಎನ್ನುವ ರೀತಿಯಲ್ಲಿ ಅವರು ಮಾತನಾಡಲು ಪ್ರಾರಂಭಿಸಿದ್ದು.

"ದಿವಾನರು ತುಂಬಾ ಸಿಟ್ಟುಮಾಡಿಕೊಂಡಿದ್ದ ಹಾಗಿತ್ತು. ಏನು ನಡೆಯಿತು ಮಿ॥ ಕೇಶವ ಪಿಳ್ಳೆ?"

ಥಟ್ಟನೆ ಉತ್ತರಿಸಲು ಕೇಶವ ಪಿಳ್ಳೆಗೆ ಸಾಧ್ಯವಾಗಲಿಲ್ಲ. ಆದರೆ ಏನಾದರೊಂದನ್ನು ಹೇಳಲೇಬೇಕಾಗಿತ್ತು. ಹೇಳದೆ ಹೋದರೆ ಅವರನ್ನೂ ಅವಗಣಿಸಿದ ಎನ್ನಿಸಬಹುದು. ಅಷ್ಟೇ ಅಲ್ಲ ದಿವಾನರ ಹತ್ತಿರ ಹೇಳಿದಂತೆಯೆ ಅವರ ಹತ್ತಿರವೂ ಸಮಾಧಾನಕರವಾದ ಉತ್ತರವನ್ನು ಹೇಳಬೇಕಾಗಿತ್ತು. ಚೀಫ್ ಸೆಕ್ರೆಟರಿ, ಡಿಪಾರ್ಟ್‌ಮೆಂಟಿನ ಮೇಲಧಿಕಾರಿಗಳೆಲ್ಲ ಹೇಗೆ ಆ ಮನುಷ್ಯನ ಮುಂದೆ ನಿಲ್ಲುತ್ತಾರೆ ಎನ್ನುವುದು ಕೇಶವ ಪಿಳ್ಳೆಗೆ ಗೊತ್ತಿತ್ತು. ಎಲ್ಲ ಸೂತ್ರಗಳೂ ಇರುವುದು ಆ ಮನುಷ್ಯನ ಕೈಯಲ್ಲಿ. ಅವರ ಮನಸ್ಸಂತೋಷಕ್ಕಾಗಿ ಅತ್ಯಧಿಕ ಧನಿಕರು ತಮ್ಮ ಸರ್ವಸ್ವವನ್ನೂ ಅರ್ಪಿಸುತ್ತಿದ್ದರು.

ಈಗಲೋ ಬೆಕ್ಕು ಇಲಿಯನ್ನು ಹಿಡಿಯುವಂತೆ ಆ ಮನುಷ್ಯ ತನ್ನನ್ನು ಹಿಡಿದು ನಿಲ್ಲಿಸಿದ್ದಾರೆ.

ಬಾಗಿ ನಮಸ್ಕರಿಸಿ ಗಂಟಲು ಕಟ್ಟಿದ ಸ್ವರದಲ್ಲಿ ಕೇಶವ ಪಿಳ್ಳೆ ಕ್ಷಮೆ ಯಾಚಿಸಿದ:

"ನನ್ನನ್ನು ತಾವು ಕಾಪಾಡಬೇಕು."

ಅಬ್ಬ! ಸಮಾಧಾನವಾಯಿತು. ಹೌದು, ಅದೇ ಮಾತನ್ನು ಹೇಳಬೇಕಾದದ್ದು. ಆ ಮಾತೇ ನಾಲಿಗೆಯಿಂದ ಹೊರಬಿದ್ದದ್ದು. ಅಲ್ಲಿಯೂ ಅದೃಷ್ಟದೇವತೆ ಉಳಿಸಿಕೊಂಡಳು. ಕೇಶವ ಪಿಳ್ಳೆಯ ಕಣ್ಣುಗಳು ನೀರಿನಿಂದ ತುಂಬಿಕೊಂಡುವು. ಮಾಡಿದ್ದನ್ನೆಲ್ಲ ಒಪ್ಪಿಕೊಂಡ. ನಂತರ ಪ್ರೈವೇಟ್ ಸೆಕ್ರೆಟರಿ ಹೇಳಿದರು:

"ನಾನು ಏನು ಕಾಪಾಡಬೇಕು ಕೇಶವ ಪಿಳ್ಳೆ? ದಿವಾನರು ಸ್ವತಃ ನೋಡಿಕೊಳ್ಳುವ ಡಿಪಾರ್ಟ್‌ಮೆಂಟು. ಎಲ್ಲವೂ ಅವರ ಸ್ವಂತ ಅಭಿಪ್ರಾಯದಂತೆಯೇ ನಡೆಯುತ್ತವೆ. ಬೇರೆಯವರ ಅಭಿಪ್ರಾಯವನ್ನೂ ಅವರು ಒಪ್ಪಿಕೊಳ್ಳೋದಿಲ್ಲ."

ಅವೆಲ್ಲವೂ ಮತ್ತೊಂದು ರೀತಿಯಲ್ಲಿ ನಡೆಯುತ್ತಿದ್ದದ್ದು. ಅದನ್ನು ಕೇಶವ ಪಿಳ್ಳೆ ನೋಡುತ್ತಿದ್ದ.

"ಕೆಲವು ತಿಂಗಳುಗಳಿಂದ ಮನಸ್ಸಿಗೆ ಯಾವ ಸಮಾಧಾನವೂ ಇರಲಿಲ್ಲ. ಸ್ವಂತ್ರವಾದ ಕೆಲವು ವಿಷಯಗಳು ಮನಸ್ಸನ್ನು ತುಂಬ ಬಾಧಿಸುತ್ತಿದ್ದುವು. ಇದೋ ಇವತ್ತಿನಿಂದ ನಾನು ರಂಗಕ್ಕೆ ಧುಮುಕುತ್ತಿದ್ದೇನೆ."

ಒಂದು ಕ್ಷಣ ಬಿಟ್ಟು ಕೇಶವ ಪಿಳ್ಳೆ ಅರ್ಥವತ್ತಾಗಿ ಹೇಳಿದ:

"ನಾನು ಒಮ್ಮೆ ಕೂಡ ತಮ್ಮನ್ನು ಬಂದು ಕಂಡಿಲ್ಲ. ನನಗೆ ಅದು ನೆನಪಿದೆ. ಏನೂ ತಿಳಿಯದವನೊಬ್ಬ ಹೇಗೋ ಜೀವಿಸಿಕೊಂಡಿದ್ದಾನೆ. ಗೌರವವಾಗಿ ಬಂದು ನೋಡುವುದಕ್ಕೆ ಸಾಧ್ಯವಾಗಿರಲಿಲ್ಲ."

ಪ್ರೈವೇಟ್ ಸೆಕ್ರೆಟರಿಗೆ ವಿಷಯ ಅರ್ಥವಾಯಿತು. ಅವರು ಹೇಳಿದರು:

"ಛೆ! ಛೆ! ಅದಕ್ಕಾಗಿ ನಾನು ಹೇಳಿದ್ದಲ್ಲ."

ಅನಂತರ ಅವರು ಎಷ್ಟೋ ಹೊತ್ತು ಮಾತಾಡಿಕೊಂಡಿದ್ದರು. ಕೇಶವ ಪಿಳ್ಳೆಯನ್ನು ಮುಂದೆ ಏನು ಮಾಡುತ್ತೀಯಾ ಎಂದು ಕೇಳಿದರು. ಬೇರೊಂದು ರಾಜಕೀಯ ಪಕ್ಷವನ್ನು ತಾನು ರೂಪೀಕರಿಸುವುದಾಗಿ ಹೇಳಿದ. ಅನಂತರ ಅದರ ಸ್ವರೂಪ, ಘೋಷಣೆಗಳನ್ನು ಕುರಿತ ಚರ್ಚೆಯನ್ನೂ ನಡೆಸಿದರು.

ಪ್ರೈವೇಟ್ ಸೆಕ್ರೆಟರಿ ಸಲಹೆ ಮಾಡಿದರು:

"ದೇಶದ ಅಂತಸ್ತು ಅಭಿಮಾನದ ಅರಿವುಳ್ಳ ಜನರ ಪಕ್ಷವಾಗಿರಬೇಕು ಅದು. ಮೊದಲು ಒಂದು ಲಿಸ್ಟ್ ತಯಾರು ಮಾಡಬೇಕು."

ಅದನ್ನು ಕೇಶವ ಪಿಳ್ಳೆ ತಯಾರಿಸಿಟ್ಟಿದ್ದ. ಇನ್ನು ಕೆಲಸ ಪ್ರಾರಂಭಿಸಿದರೆ ಸಾಕು.

ಪ್ರೈವೇಟ್ ಸೆಕ್ರೆಟರಿ ಕೇಳಿದರು:

"ಕೇಶವ ಪಿಳ್ಳೆಗೆ ಮದುವೆ ಆಗಿದೆಯಲ್ವಾ?"

ಅಕಾರಣವಾದ ಆ ಪ್ರಶ್ನೆ ಕೇಶವ ಪಿಳ್ಳೆಯನ್ನು ನಡುಗಿಸಿತು. ಮರುಕ್ಷಣದಲ್ಲೇ ಅವನು ಆಲೋಚಿಸಿದ, ಯಾಕೇ ಮನುಷ್ಯ ಈ ಪ್ರಶ್ನೆ ಕೇಳಿದ್ದು? ಆತನ ಸ್ವಭಾವ ಕೇಶವ ಪಿಳ್ಳೆಗೆ ಗೊತ್ತಿತ್ತು.

ಪ್ರೈವೇಟ್ ಸೆಕ್ರೆಟರಿ ಕೇಳಿದರು:

"ಸರ್ಕಾರದ ಕೆಲಸ ಸರಿಯಾಗಿ ನಡೆಯಬೇಕಾಗಿದ್ದರೆ ಬದುಕು ಉಲ್ಲಾಸದಿಂದಿರ ಬೇಕು. ಅದಕ್ಕೆ ಹೆಂಡತಿ ಜೊತೆಯಲ್ಲಿ ವಾಸಮಾಡಬೇಕು."

ಮುಖದ ಮೇಲೆ ನಗು ತಂದುಕೊಂಡು ಪ್ರೈವೇಟ್ ಸೆಕ್ರೆಟರಿ ಹೇಳಿದರು:

"ಯಾವಾಗಲಾದರೂ ಮನೆಗೆ ಬಂದರೆ ಒಂದು ಕಪ್ ಕಾಫಿ ಕುಡಿಯಬಹುದಲ್ಲ?"

ಕೇಶವ ಪಿಳ್ಳೆಯೂ ಒಂದು ಹುಸಿನಗು ನಕ್ಕ.

ಪ್ರೈವೇಟ್ ಸೆಕ್ರೆಟರಿಯನ್ನು ಸದ್ಯದಲ್ಲೇ ಭೇಟಿ ಮಾಡಬೇಕಾಗಿ ಬರುವ ಹಾಗಿತ್ತು.

ಇನ್ನು ಮೇಲೆ ಬರುವುದು ಬರಲಿ. ಎದೆ ಗಟ್ಟಿಮಾಡಿಕೊಂಡು ತಲೆಯೆತ್ತಿ ರಂಗಕ್ಕೆ ಧುಮುಕುವುದು. ಆ ರಂಗದಲ್ಲಿ ಮರಣವೇ ಸಂಭವಿಸುವುದಿದ್ದಲ್ಲಿ ಅದೇ ಸಂಭವಿಸಲಿ. ಅದಕ್ಕಾಗಿ ಆಲೋಚಿಸುತ್ತ ಕುಳಿತುಕೊಳ್ಳುವುದು ಸರಿಯಲ್ಲ. ಕಾಂಗ್ರೆಸ್ಸಿನ ಪರಮಶತ್ರು ವಾಗಿಯೇ ಎಂದೆಂದೂ ಕಳೆಯಬೇಕಾಗಿದ್ದಲ್ಲಿ ಹಾಗೂ ಆಗಲಿ. ಔದ್ಯೋಗಿಕ ಜೀವನದಲ್ಲಿ ತಾನು ಏನು ಮಾಡಿದೆ ಎಂದು ಕೇಳಿದಲ್ಲಿ ಕಾಂಗ್ರೆಸ್ಸನ್ನು ಎದುರಿಸಿದೆ ಎಂದು ಹೇಳಿದ ರಾಯಿತು.

ಇನ್ನು ಮುಂದೆ ನಡೆಯುವ ಚಳವಳಿಯನ್ನು ಶಕ್ತಿಯಿಂದ ಎದುರಿಸಲು ಸರ್ಕಾರ ಅಣಿಮಾಡಿಕೊಳ್ಳುತ್ತಿತ್ತು. ಕೇಶವ ಪಿಳ್ಳೆಯೂ ಸಿದ್ಧನಾಗುತ್ತಿದ್ದ. ಒಂದು ದಿನ ಮುದುರಿ ಕೊಳಕಾದ ಒಂದು ಕವರ್ ಮೆಯಿಲ್‌ನಲ್ಲಿ ಬಂದಿತು. ಕೇಶವ ಪಿಳ್ಳೆ ಅದನ್ನು ತಿರುಗಿಸಿ ಮುರುಗಿಸಿ ನೋಡಿದ.

ಪ್ರೈಮರಿ ಸ್ಕೂಲ್ ವಿದ್ಯಾರ್ಥಿಯ ಹಸ್ತಾಕ್ಷರದಲ್ಲಿ ವಿಳಾಸವನ್ನು ಬರೆಯ ಲಾಗಿತ್ತು. ಅದು ಕೇಶವ ಪಿಳ್ಳೆಯ ಗಮನವನ್ನು ಅತಿಯಾಗಿ ಸೆಳೆಯಿತು. ಅದನ್ನು ಒಡೆದ. ಮುದುರಿ ಕೊಳಕಾಗಿದ್ದ ಕಾಗದದಲ್ಲಿ ಒಂದು ಅರ್ಜಿ ಬರೆಯಲಾಗಿತ್ತು. ಸಾಲುಗಳೆಲ್ಲ ಎತ್ತೆತ್ತಲಾಗಿಯೋ ಇದ್ದುವು. ಅಲ್ಲಲ್ಲಿ ಶಾಯಿ ಬಿದ್ದು ಚಿತ್ತಾಗಿತ್ತು. ಎಷ್ಟೋ ಅಕ್ಷರಗಳನ್ನು ತಿದ್ದಿ ಬರೆಯಲಾಗಿತ್ತು. ಒಟ್ಟಿನಲ್ಲಿ ಓದುವುದಕ್ಕೆ ಕಷ್ಟವಾಗಿತ್ತು. ನಿಜವಾಗಿಯೂ ಅದೊಂದು ಸಣ್ಣ ಹುಡುಗನ ಬರವಣಿಗೆಯಾಗಿತ್ತು. ಒಂದು ಪುಟ ಪೂರ್ತಿ ಬರೆದಿದ್ದರೂ ಇದ್ದ ವಿಷಯ ಸ್ವಲ್ಪವೇ. ಆ ಅರ್ಜಿಯನ್ನು ಹೀಗೆ ಬರೆದಿತ್ತು:

"ನನ್ನ ತಂದೆ ನಾರಾಯಣನ್ ನಾಯರ್ ಎನ್ನುವ ಕಾಂಗ್ರೇಸಿನಲ್ಲಿ. ತಂದೆ ಇರೂ ವುದು ಎರಣಕುಳಾದಲ್ಲಿ. ಅಮ್ಮ ಹಾಸಿಗೆಯಲ್ಲಿ ಮಲಗಿ ಈದ್ದಾಳೆ. ಏನು ಮಾಡೋಕೂ ಆಗದೆ, ಜರ, ಕೆಮ್ಮು. ತಂದೆ ಬರೋಹಂಗಿಲ್ಲ ಪೋಲೀಸಿನೋರು ಹೊಡೀತಾರೆ.

ನಮಗೆ ಯಾರೂ ಇಲ್ಲ. ನಾನು ಸ್ಕೂಲಿಗೆ ಹೋಗಿಲ್ಲ. ಅಮ್ಮನ ಹತ್ತಿರ ಕುಳಿತಿದ್ದೀನಿ. ತಂಗಿಗೆ ತುಂಬ ಬೇಧಿ. ತಂದೆ ಬನ್ನಿ ಅಂತಾ ಬರೆದಿದ್ದೀನಿ. ತಂದೆಯನ್ನು ಪೋಲಿಸಿನವರು ಹಿಡಿದು ಹೊಡೆಯಬಾರದು. ಇತಿ ವಾಸು."

ಆ ಕಾಗದವನ್ನು ಓದಿದಾಗ ಆ ಮನೆಯ ಕರುಣಾಜನಕವಾದ ದೃಶ್ಯವನ್ನು ಕಾಣಲು ಸಾಧ್ಯವಾಯಿತು. ಆದರೆ ಅದರ ಜೊತೆಯಲ್ಲಿ ಒಂದು ಉಪಾಯವೂ ಹೊಳೆಯಿತು. ಅಂತಹವರು ಏತಕ್ಕೆ ಕಾಂಗ್ರೆಸ್ಸಿಗೆ ಸೇರುವುದಕ್ಕೆ ಹೋದರು? ಹೆಂಡತಿಮಕ್ಕಳ ಮೇಲೆ ಪ್ರೀತಿಯಿಲ್ಲದ ಮನುಷ್ಯನಾಗಿರಬೇಕು ಅವನು.

ಆ ಕಾಗದ ಬಂದದ್ದೆಲ್ಲಿಂದ? ಬರೆದವರು ಯಾರು? ಎಂದು ಕೇಶವ ಪಿಳ್ಳೆ ನೋಡಿದ. ಒಬ್ಬ ಹುಡುಗ ಅದನ್ನು ಬರೆದಿದ್ದ. ಅದು ಬಂದದ್ದು ಮಾವೇಲಿಕ್ಕರದಿಂದ. ಥಟ್ಟನೆ ಕೇಶವ ಪಿಳ್ಳೆಗೆ 'ನಾರಾಯಣನ್ ನಾಯರ್' ಎನ್ನುವ ಹೆಸರು ಜ್ಞಾಪಕಕ್ಕೆ ಬಂದಿತು. ನಾರಾಯಣನ್ ನಾಯರ್! "ಕೇಶವ ಪಿಳ್ಳೆಯನ್ನು ನೇಣುಹಾಕಬೇಕು" ಎಂದು ಘೋಷಣೆ ಮಾಡಿದವನು. ಊರಿನಲ್ಲಿ ಸಾವಿರಾರು ಕೊರಳುಗಳು ಅದನ್ನು ಗಟ್ಟಿಯಾಗಿ ಘೋಷಿಸುವಂತೆ ಮಾಡಿದ ಒಬ್ಬ ನಾರಾಯಣನ್ ನಾಯರ್ ಇದ್ದಾನೆ— ತಾಯಿ ಅವನ ವಿಷಯವಾಗಿ ಹೇಳಿದ್ದಳು. ತಾಯಿ ಹೇಳಿದ್ದುದನ್ನೂ ಜ್ಞಾಪಿಸಿಕೊಂಡ. ಚಂಗನೂರಿನ ಮ್ಯಾಥ್ಯೂ, ಮಾವೇಲಿಕ್ಕರದ ನಾರಾಯಣನ್ ನಾಯರ್!

ಕೇಶವ ಪಿಳ್ಳೆ ಮತ್ತೂ ಒಂದು ಸಲ ಆ ಕಾಗದವನ್ನು ಓದಿದ.

ಅದು ಹೇಳಿಬರೆಯಿಸಿದ ಕಾಗದವಲ್ಲ. ರೋಗಿಯಾದ ತಾಯಿಯ ಪಕ್ಕದಲ್ಲಿ ಕುಳಿತು ಸ್ವಂತ ಪ್ರೇರಣೆಯಿಂದ ಬರೆದದ್ದು. ಅವನಿಗೆ ಬೇಕಾಗಿರುವುದು ಒಂದೇ ಒಂದು. ಅದು ಆ ಕುಟುಂಬಕ್ಕೆ ಅಗತ್ಯವಿದ್ದದ್ದು. ಎರ್ನಾಕುಲಂನಲ್ಲಿ ಅಡಗಿ ಜೀವಿಸುತ್ತಿರುವ, ಕೆಮ್ಮಿ ಕೆಮ್ಮಿ ಜೀವನದ ಕೊನೆಯ ನಿಮಿಷಗಳನ್ನು ಎದುರುನೋಡುತ್ತಿರುವ ರೋಗಿಯಾದ ಸ್ತ್ರೀಗೂ ಭೇದಿಯಿಂದ ಕಷ್ಟಪಡುತ್ತಿರುವ ಅವನ ತಂಗಿಗೂ ಅವನಿಗೂ ಆ ದೇಶದ್ರೋಹಿ ಬಂದು ಕಾಣುವುದು ಅಗತ್ಯವಿದೆ. ಅದು ಮಾತ್ರ ಆವಶ್ಯಕವಿರುವುದು. ನಾರಾಯಣನ್ ನಾಯರ್ ಬಂದರೆ ಎಲ್ಲವೂ ಸರಿಹೋಗುತ್ತದೆ. ಧೈರ್ಯವುಂಟಾಗುತ್ತದೆ. ಆದರೆ ಅವನಿಗೆ ಹೇಗೆ ಕೇಶವ ಪಿಳ್ಳೆಗೆ ಬರೆದು ಕೇಳಿಕೊಳ್ಳಬೇಕು ಎಂದು ತೋರಿತು? ಅವನ ಊರಿನ ಜನರು ಮಾತ್ರವಲ್ಲ ಆ ರೋಗಿಣಿಯೂ ಭಾವಿಸಿರುವುದು. ತಿರುವಾಂಕೂರಿನ ಗಡಿಪ್ರದೇಶದಲ್ಲಿ, ತಿರುವಾಂಕೂರಿನ ಎಲ್ಲ ಕಡೆಗಳಲ್ಲಿ ನಾರಾಯಣನ್ ನಾಯರನ್ನು ಪೋಲೀಸಿನವರು ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಹುಡುಕುತ್ತಿರುವುದು ಕೇಶವ ಪಿಳ್ಳೆಯ ಕಾರಣದಿಂದಾಗಿ ಎಂದು ತಿಳಿದದ್ದಾಗಿರಬೇಕು. ಕೇಶವ ಪಿಳ್ಳೆ ಒಪ್ಪಿದರೆ ನಾರಾಯಣನ್ ನಾಯರನ್ನು ಬಂಧಿಸುವುದಿಲ್ಲ ಎಂದೂ ಭಾವಿಸಿದ್ದಾಗಿರಬೇಕು. ಆ ಮನೆಗೆ ಹೋಗಿ ಬರುವ ಅಕ್ಕಪಕ್ಕದ ಮನೆಯ ಹೆಂಗಸರು ಹಾಗೆ ಮಾತಾಡಿಕೊಳ್ಳುತ್ತಿದ್ದಿರಬೇಕು. ಅವನ ತಾಯಿ ಕೆಮ್ಮನ್ನು ಸಹಿಸದೆ ಒದ್ದಾಡುತ್ತಿದ್ದಾಗ, ಮಕ್ಕಳು ಉಪವಾಸ ಬಿದ್ದಿದ್ದಾಗ—

ಖಾಯಿಲೆಯಿಂದ ನರಳುವ ಹೆಣ್ಣು ತಲೆಸುತ್ತು ಬಂದು ಬಿದ್ದಿರುವಾಗ, ಕೇಶವ ಪಿಳ್ಳೆ ಎನ್ನುವ ರಾಕ್ಷಸನನ್ನು ಎಟಿಸುತ್ತಿರುವಾಗ ಅವನ ಅಡ್ರೆಸ್ ಸಿಕ್ಕಿರಬೇಕು. ಎಷ್ಟು ಜನ ವಾಸು ಎನ್ನುವವರು ಈ ತಿರುವಾಂಕೂರಿನಲ್ಲಿದ್ದಾರೆ—ಅವರ ಶಾಪ! ಅಮ್ಮ ಒತ್ತಿ ಹೇಳಿದ್ದ ಅವರ ಶಾಪ! ಅವರು ಹೇಗೆ ಶಪಿಸುತ್ತಾರೆ ಎನ್ನುವುದು ಕೇಶವ ಪಿಳ್ಳೆಯ ಜೀವನದಲ್ಲಿ ಮೊಟ್ಟಮೊದಲು ಅನುಭವಕ್ಕೆ ಬಂದದ್ದು. ಇದಕ್ಕೆ ಮೊದಲು ಹೋರಾಟಕ್ಕಿಳಿದು ತೊಂದರೆಗೊಳಗಾದ ಕುಟುಂಬಗಳ ಕಥೆಗಳನ್ನು ಕೇಳಿದ್ದ. ಆ ಮ್ಯಾಥ್ಯೂವಿನ ಕುಟುಂಬ ನಶಿಸಿಹೋಯಿತು. ಅದೇ ರೀತಿ ಎಷ್ಟೊಂದು ಕುಟುಂಬಗಳು! ಆದರೆ ಅವುಗಳೂ ಇದೇ ರೀತಿಯಲ್ಲಿ ಎಂದು ಅರಿತಿರಲಿಲ್ಲ. ಇಂತಹ ಕುಟುಂಬಗಳು ಹೇಗಿರುತ್ತವೆ ಎಂದು ತಿಳಿಯಲು ಶ್ರಮಿಸಿರಲಿಲ್ಲ. ಅದನ್ನು ಕುರಿತು ಆಲೋಚಿಸಿಯೂ ಇರಲಿಲ್ಲ.

ಆದರೂ ನಾರಾಯಣನ್ ನಾಯರ ಘೋಷಣೆ ಕೇಶವ ಪಿಳ್ಳೆಯ ಕಿವಿಯಲ್ಲಿ ಮೊಳಗುತ್ತಿದ್ದಂತೆ ತೋರಿತು. ಕಣ್ಣು ಕೆಂಪಗೆ ಮಾಡಿಕೊಂಡು ಮುಷ್ಟಿಯನ್ನು ಮೇಲಕ್ಕೆತ್ತಿ ಗಂಟಲು ಒಡೆಯುವ ಹಾಗೆ ಅವನು ಕಿರುಚಿಕೊಳ್ಳುತ್ತಾನೆ:

"ಕೇಶವ ಪಿಳ್ಳೆಯನ್ನು ನೇಣುಹಾಕಬೇಕು!"

ಕೇಶವ ಪಿಳ್ಳೆ ಆ ದೃಶ್ಯವನ್ನು ಕಣ್ಣೆದುರಿಗೆ ತಂದುಕೊಂಡ. ಆಗ ಮತ್ತೊಬ್ಬ ಮ್ಯಾಥ್ಯೂ ಕಿರುಚುತ್ತಾನೆ.

"ಲಂಚ ಹೊಡೆದು ಸಂಪಾದಿಸಿದ ಜಮೀನನ್ನು ಕಸಿದುಕೊಳ್ಳಬೇಕು." ಆದರೆ ಮ್ಯಾಥ್ಯೂವಿನ ಆಸ್ತಿಯನ್ನು ಕಸಿದುಕೊಂಡದ್ದಾಯಿತು. ಅವನ ಮಕ್ಕಳು ಬೀದಿಯ ಪಾಲಾದುವು, ಅವರ ತಾಯಿಯಮನೆ ಅವರಿಗೆ ಅಭಯ ನೀಡುವುದಿದ್ದರೂ.

ಹೀಗೆ ಆಲೋಚಿಸುತ್ತ ಸ್ವಲ್ಪ ಹೊತ್ತು ಕುಳಿತಿದ್ದ. ಉಳಿದ ಕವರುಗಳನ್ನು ಒಡೆದಿರಲಿಲ್ಲ. ಅವನು ಆ ಕಾಗದವನ್ನು ತೆಗೆದು ಬೇರೆ ಇರಿಸಿದ. ಆದರೆ ಉಳಿದ ಕವರುಗಳನ್ನು ಒಡೆದು ಓದಿದರೂ ಒಂದೂ ಅರ್ಥವಾಗುತ್ತಿಲ್ಲ. ಏನು ಮಾಡುವುದು? ಪುನಃ ಕೇಶವ ಪಿಳ್ಳೆ ವಾಸುವಿನ ಕಾಗದವನ್ನು ಕೈಗೆತ್ತಿಕೊಂಡ. ಈ ಕಾಗದದ ವಿಚಾರವಾಗಿ ಒಂದು ತೀರ್ಮಾನಕ್ಕೆ ಬಂದು ಆ ಮೇಲೆ ಉಳಿದದ್ದನ್ನು ನೋಡು ಎಂದು ಆ ಕಾಗದ ಹೇಳಿದಂತಿತ್ತು. ಆ ಹುಡುಗನೂ ಆ ಖಾಯಿಲೆಯ ಹೆಣ್ಣೂ ಕಣ್ಣೆದುರಿಗೆ ನಿಂತಿದ್ದಂತಿತ್ತು. ಅವರು ಬಂದು ಕೈಹಿಡಿದುಕೊಂಡು ಕೇಳುತ್ತಿದ್ದಂತಿತ್ತು.

ನಾರಾಯಣನ್ ನಾಯರ್ ಹೊರಗೆ ಬಂದರೆ ಅವನನ್ನು ಅರೆಸ್ಟ್ ಮಾಡಬೇಡಿ ಎಂದು ಪೋಲೀಸಿನವರಿಗೆ ನಿರ್ದೇಶಿಸಿದರೂ? ಅವನು ಹೊರಗೆ ಬಂದು ಮಕ್ಕಳಿಗೆ ಧೈರ್ಯ ಕೊಟ್ಟುಕೊಂಡು ಕಾಪಾಡಿಕೊಂಡು ಹೋಗಲಿ.........! ಆದರೆ ತನ್ನನ್ನು "ನೇಣುಹಾಕಬೇಕು" ಎಂದು ಘೋಷಣೆ ಮಾಡುತ್ತಾ ಇದ್ದವನು ಅವನು. ಮನುಷ್ಯನಲ್ಲಿ ಸಾಮಾನ್ಯವಾಗಿರುವಂತಹ ಪ್ರತೀಕಾರಬುದ್ಧಿ ಕೇಶವ ಪಿಳ್ಳೆಯಲ್ಲೂ ತಲೆಯೆತ್ತಿತು. ಆಗ ತನ್ನೊಳಗೆ ಯಾರೋ ಮಾತನಾಡುತ್ತಿದ್ದಂತೆ ತೋರಿತು.

'ಎಷ್ಟೆಷ್ಟು ಜನರು ಹಾಗೆ ಕೂಗಿರುತ್ತಾರೆ ! ಯಾರ ಮೇಲೆಲ್ಲ ನೀನು ಪ್ರತೀಕಾರ ತೀರಿಸಿಕೊಳ್ಳುವುದಕ್ಕೆ ಹೋಗುತ್ತೀಯೆ? ಅದನ್ನೆಲ್ಲ ಮಾಡುವುದಕ್ಕೆ ನೀನು ಯಾರು? ಜೀವಿಸುವುದಕ್ಕೆ ಬೇರೆ ಮಾರ್ಗವಿಲ್ಲದೆ ಯಾಚಕನಂತೆ ನಡೆದಾಡಿದ್ದ ನೀನು ಪ್ರತೀಕಾರ ತೀರಿಸಿಕೊಳ್ಳುವಷ್ಟು ಬೆಳೆದುಬಿಟ್ಟಿದ್ದೀಯೆ. ಅಲ್ಲವೆ?'

ಅದೊಂದು ದೊಡ್ಡ ಪ್ರಶ್ನೆಯಾಗಿತ್ತು. ಮತ್ತೊಂದು ಪ್ರಶ್ನೆ ಜೊತೆಗೂಡಿತು.

'ನೀನು ಎಷ್ಟೋ ಜನರನ್ನು ಬಲಿಗೈ ಮಾಡಿದೆಯಲ್ಲವೆ? ಎಷ್ಟೋ ಹಣ ಸಂಪಾದಿಸಿದೆಯಲ್ಲವೆ? ಸಂಕಟಪಡುವವರು ಹಾಗೆ ಘೋಷಿಸುವುದಕ್ಕೂ ಅವಕಾಶವಿಲ್ಲವೆ? ನೀನು ಅಷ್ಟೊಂದು ಬೆಳೆದೆ ಅಲ್ಲವೆ? ಇದನ್ನು ಇಷ್ಟೊಂದು ದೊಡ್ಡದು ಮಾಡಬೇಡ.'

ಕೇಶವ ಪಿಳ್ಳೆ ಟೆಲಿಫೋನ್ ಕೈಗೆತ್ತಿಕೊಂಡ. ಆಗ ಯಾರೋ ತನ್ನ ಕೈಯನ್ನು ಹಿಡಿದುಕೊಂಡಂತೆ ತೋರಿತು. 'ನಾಳೆ ನಾಡಿದ್ದರಲ್ಲಿ ಇಂಥ ಅಸಂಖ್ಯಾತ ಅರ್ಜಿಗಳು ಬರುತ್ತವೆ ಎಂದಿಟ್ಟುಕೊ. ಆಗೇನು ಮಾಡುತ್ತೀ? ಒಮ್ಮೆ ತಪ್ಪು ಮಾಡಿದರೆ ಪುನಃ ತಪ್ಪು ಮಾಡುತ್ತಲೇ ಇರಬೇಕಾಗುತ್ತದೆ. ಹಾಗೆ ಅವಕಾಶ ಮಾಡಿಕೊಂಡು ಊರು ಬಿಟ್ಟವರೆಲ್ಲರೂ ಹಿಂದಿರುಗಿ ಬರುತ್ತಾರೆ.'

ಅವನು ಟೆಲಿಫೋನನ್ನು ಕೆಳಗಿಟ್ಟ. ಕಾಂಗ್ರೆಸ್ ಹುಟ್ಟನ್ನಡಗಿಸಲು ಹೊರಟಿದ್ದ ಅವನು ಆಗ ತಲೆಯೆತ್ತಿದ. ಅವನು ಹೊರಗೆ ಬರುವಂತೆ ಮಾಡಲು ಪೋಲೀಸಿನವರಿಗೆ ನಿರ್ದೇಶನ ನೀಡುವುದು. ಮನೆಗೆ ಬಂದಾಗ ಅರೆಸ್ಟ್ ಮಾಡುವುದು.

ಓಹ್ ! ಅದೆಂತಹ ಕಷ್ಟ ! ಮೃತ್ಯುಮುಖಿಳಾದ ಹೆಂಡತಿಯ ಸಮೀಪದಿಂದ ಗಂಡನನ್ನು ಸೆರೆಹಿಡಿದು ತರಿಸುವುದು ! ಅನಾಥರಾದ ಮಕ್ಕಳು ಗಟ್ಟಿಯಾಗಿ ಅಪ್ಪಿಕೊಳ್ಳುತ್ತಾರೆ. ಪೋಲೀಸಿನವರು ಆ ಮಕ್ಕಳನ್ನು ದುರುಗುಟ್ಟಿಕೊಂಡು ನೋಡುತ್ತ ಹಿಡಿದು ಎಳೆದು ಒಂದು ಕಡೆಗೆ ತಳ್ಳಿ ಅವರನ್ನು ಬೇರ್ಪಡಿಸುತ್ತಾರೆ !

ಕೇಶವ ಪಿಳ್ಳೆ ಕುರ್ಚಿಯನ್ನೊರಗಿ ಏನು ಮಾಡಬೇಕು ಎಂದು ಆಲೋಚಿಸುತ್ತ ಕುಳಿತಿದ್ದ.

ಮಾರನೆಯ ದಿನವೂ ವಾಸುವಿನಿಂದ ಒಂದು ಕಾಗದ ಬಂದಿತ್ತು.

"ಅಮ್ಮ ಮಾತಾಡೋದಿಲ್ಲ. ತಂಗಿ ನಿನ್ನೆ ತಲೆಸುತ್ತಿ ಬಿದ್ದಳು. ಅವಳೂ ಮಾತಾಡೋದಿಲ್ಲ. ತಂದೆ ಬಂದಿಲ್ಲ."

# [17]

## ದಾರಿ ತಪ್ಪಿದವಳು

ಶೇಖರ ಪಿಳ್ಳೆಯ ಆರೋಗ್ಯ ತೀರ ಕೆಟ್ಟಿತ್ತು. ಸಾಮಾನ್ಯವಾಗಿ ಎಲ್ಲ ದಿನಗಳಲ್ಲಿಯೂ ಕೇಶವ ಪಿಳ್ಳೆ ಹೋಗಿ ನೋಡಿಕೊಂಡು ಬರುತ್ತಿದ್ದ. ಶೇಖರ ಪಿಳ್ಳೆ ಆ ಖಾಯಿಲೆಯಿಂದ ಮೇಲೇಳುವ ಹಾಗೆ ತೋರಲಿಲ್ಲ. ತಾನು ಹೆಚ್ಚು ದಿನ ಬಿದ್ದುಕೊಂಡು ನರಳಿ ಸಾಯುವುದಕ್ಕಿಂತ ಬೇಗ ಕಣ್ಣುಮುಚ್ಚಿದರೆ ಸಾಕೆನ್ನಿಸಿತ್ತು.

ಶೇಖರ ಪಿಳ್ಳೆ ತಂಗಮ್ಮನನ್ನು ಕಾಣಬೇಕು ಎಂದರು. ಅವಳು ಬಂದಳು.

ರಾಮಚಂದ್ರನ್ ನಾಯರ್‌ಗೆ ಕೊಚ್ಚಿ ಸ್ಟೇಟ್‌ನಲ್ಲಿ ಯಾವುದೋ ಒಂದು ಹುಡುಗಿಯ ಜೊತೆಯಲ್ಲಿ ವಿವಾಹ ನಡೆದುಹೋಗಿತ್ತು. ನರ್ತನ ಸಂಗೀತಗಳನ್ನು ಬಲ್ಲ ಒಬ್ಬ ಸುಂದರಿಯೊಡನೆ. ಅವಳು ಐಶ್ವರ್ಯವಂತನ ಮಗಳು. ತನ್ನನ್ನು ಮದುವೆ ಮಾಡಿಕೊಳ್ಳಬೇಕು ಎಂದು ತನ್ನೊಡನೆ ಒಮ್ಮೆಯೂ ತಂಗಮ್ಮ ಹೇಳಲಿಲ್ಲ ಎಂದು ರಾಮಚಂದ್ರನ್ ನಾಯರ್ ಹೇಳುತ್ತಿರುವುದು. ಅವಳಿಗೆ ಸ್ನೇಹ ಮಾತ್ರ ಸಾಕಾಗಿತ್ತು ಅಷ್ಟೆ. ಅಂತಹ ಸಂದರ್ಭದಲ್ಲಿ ತಂದೆ ಒತ್ತಾಯ ಮಾಡಿದಾಗ ಅವನು ಮದುವೆ ಮಾಡಿಕೊಳ್ಳಬೇಕಾಯಿತು. ತಂಗಮ್ಮ ಮದುವೆ ಮಾಡಿಕೊಳ್ಳುತ್ತೇನೆ ಎಂದು ಒಂದು ಹೇಳಿದ್ದಿದ್ದರೆ ಏನೇ ಆಗಿದ್ದಿದ್ದರೂ ತಂದೆ ಏರ್ಪಡಿಸಿದ ಮದುವೆಗೆ ಒಪ್ಪಿಕೊಳ್ಳುತ್ತಿರಲಿಲ್ಲವೆನ್ನುವವರೆಗೂ ಮಾತನಾಡುತ್ತಿದ್ದ. ಅದೆಷ್ಟರ ಮಟ್ಟಿಗೆ ನಿಜವೋ ಏನೋ ! ಅಂತೂ ಹತ್ತಿರದ ಗೆಳೆಯರ ಹತ್ತಿರ ರಾಮಚಂದ್ರನ್ ನಾಯರ್ ಹೇಳುತ್ತಿದ್ದದ್ದು ಈಗಲೂ ನಾನು ಅವಳನ್ನು ಪ್ರೀತಿಸುತ್ತೇನೆ ಎಂದು. ಅವಳನ್ನು ಪ್ರೀತಿಸದೆ ಇರುವುದಕ್ಕೆ ಸಾಧ್ಯವೇ ಇಲ್ಲ ಎಂದೂ ಹೇಳುತ್ತಿದ್ದ.

ಹಾಗೆ ತಂಗಮ್ಮ ಮದುವೆ ಬೇಡದ, ಪ್ರೇಮಿಸುವುದರಲ್ಲಿ ಮಾತ್ರ ತೃಪ್ತಿಪಡುವ ಹೆಣ್ಣಾಗಿ ಕಾಲಕಳೆಯುತ್ತಿದ್ದಳು. ಅವಳಿಗೆ ನಿಯಮ ಪ್ರಕಾರ ದೊರೆಯಲೇ ಬೇಕಾಗಿದ್ದ ಪ್ರೊಮೋಷನ್ ದೊರೆಯಿತು. ಅದರಲ್ಲಿ ಅವಳು ಹೇಗೋ ಕಾಲಕಳೆಯಬಹುದಾಗಿತ್ತು.

ಮಗಳನ್ನು ಕಂಡ ಶೇಖರ ಪಿಳ್ಳೆ ಗಳಗಳನೆ ಅತ್ತುಬಿಟ್ಟರು. ಆ ಅಳುವಿನಿಂದಾಗಿ ಅವರ ಪ್ರಾಣ ಹೋಗಿಬಿಡುವುದೋ ಏನೋ ಎನ್ನುವಷ್ಟು ಭೀತಿಯುಂಟಾಯಿತು. ಆ ಸಂದರ್ಭದಲ್ಲಿ ಕೇಶವ ಪಿಳ್ಳೆಯೂ ಅಲ್ಲಿದ್ದ.

ಮಂಚದ ಮೇಲೆ ಕುಳಿತುಕೊಳ್ಳುವಂತೆ ಮಗಳಿಗೆ ಕೈಸನ್ನೆ ಮಾಡಿದರು. ಕೇಶವ ಪಿಳ್ಳೆಯನ್ನು ಹತ್ತಿರ ಬರುವಂತೆ ಕರೆದರು. ಭಾಗೀರಥಿಯಮ್ಮನೂ ಹತ್ತಿರ ನಿಂತಿದ್ದಳು.

ಮಗಳ ತಲೆಯನ್ನು ನೇವರಿಸುತ್ತ, ಕೇಶವ ಪಿಳ್ಳೆಯ ಮುಖದ ಕಡೆಗೆ ನೋಡುತ್ತ ಅವರು ಅಳುತ್ತಿದ್ದರು. .

ಆ ದೃಶ್ಯ ತನ್ನನ್ನು ವಿಷಮಸ್ಥಿತಿಗೆ ಕೊಂಡುಹೋಗುತ್ತಿದೆಯೋ ಎಂದು ಕೇಶವ ಪಿಳ್ಳೆ ಹೆದರಿದ. ಮಗಳ ವಿಷಯದಲ್ಲಿ ಒಂದು ಪರಿಹಾರವನ್ನು ಮರಣಶಯ್ಯೆಯಲ್ಲಿ ಶೇಖರ ಪಿಳ್ಳೆ ನೆರವೇರಿಸುತ್ತಿದ್ದಾರೋ ಎನ್ನುವಂತೆ ತೋರಿತು ಭಾಗೀರಥಿಯಮ್ಮನಿಗೆ. ಮಗಳ ಕೈ ಹಿಡಿದುಕೊಂಡು ಕೇಶವ ಪಿಳ್ಳೆಯ ಕೈಯಲ್ಲಿಟ್ಟು, "ಇವಳನ್ನು ನಿನ್ನ ಕೈಯಲ್ಲಿಟ್ಟಿದ್ದೇನೆ" ಎಂದು ಶೇಖರ ಪಿಳ್ಳೆ ಹೇಳಿದರೆ—ಕೇಶವ ಪಿಳ್ಳೆ ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಾನೆಯೆ? ಭಾಗೀರಥಿಯಮ್ಮ ಇಲ್ಲ ಎಂದುಕೊಂಡಳು. ಕೇಶವ ಪಿಳ್ಳೆ ತುಂಬ ಒಳ್ಳೆಯವನು. ಕೃತಜ್ಞತೆಯುಳ್ಳವನು. ತಂಗಮ್ಮನನ್ನು ಪ್ರೀತಿಸಿದ್ದವನು. ಅವಳೂ ಅವನನ್ನು ಒಮ್ಮೆ ಪ್ರೀತಿಸಿದ್ದಳು. ಆ ವಿಚಾರವಾಗಿ ಕೇಶವ ಪಿಳ್ಳೆಗೆ ಯಾವ ಸಂಶಯವೂ ಇಲ್ಲ. ಈ ಮಧ್ಯೆ ಅವಳಿಗೆ ಒಂದು ಗ್ರಹಚಾರ ಕಾಡಿತು. ಅವಳು ನಿಜವಾಗಿಯೂ ಕೆಟ್ಟ ಹಾದಿ ತುಳಿಯುವುದಕ್ಕೆ ಹೋದವಳಲ್ಲ. ಮಗಳು ಕೆಟ್ಟುಹೋದಳು ಎಂದು ಯಾವ ತಾಯಿಗಾದರೂ ಅನ್ನಿಸೀತೆ? ಯಾವುದೋ ಮಾಯ ಮಂತ್ರದಿಂದ ಬುದ್ಧಿಭ್ರಮೆಯಾಗಿ ಅವಳು ಹೋದದ್ದಲ್ಲವೆ, ಅವನ ಜೊತೆಯಲ್ಲಿ ಹೋಗಿ ಹಾಳಾಗಬೇಕು ಎಂದು ಬುದ್ಧಿ ತಿಳಿದು ಹೋದಾಳೆ? ಅಂಥ ಸಂದರ್ಭದಲ್ಲಿ ಅವಳ ತಪ್ಪನ್ನು ಮರೆತು ಈಗಲೂ ಕೇಶವ ಪಿಳ್ಳೆ ಅವಳನ್ನು ಸ್ವೀಕರಿಸುತ್ತಾನೆಯೆ.........? ಕೇಶವ ಪಿಳ್ಳೆ ತುಂಬ ಒಳ್ಳೆಯವನೆಂದು ಭಾವಿಸಿ ಅವನ ಬಗ್ಗೆ ಆ ಸ್ತ್ರೀ ಹಾಗೆಲ್ಲ ವಿಶ್ವಾಸಪಟ್ಟಳು. ಆ ರೀತಿಯಲ್ಲಿ ಸಂಭವಿಸಿದಲ್ಲಿ ಆ ಮುದುಕ ಸಮಾಧಾನದಿಂದ ಕಣ್ಣುಮುಚ್ಚುತ್ತಾನೆ. ಮೃತ್ಯುಶಯ್ಯೆಯಲ್ಲಿ ನಡೆಯುವ ಆ ವಿವಾಹವನ್ನು ಪ್ರತಿನಿಮಿಷದಲ್ಲಿಯೂ ಭಾಗೀರಥಿ ಅಮ್ಮ ನಿರೀಕ್ಷಿಸುತ್ತಿದ್ದಳು.

ಒಂದು ವೇಳೆ ಹಾಗೆ ಸಂಭವಿಸಿದಲ್ಲಿ ಏನು ಮಾಡುವುದು? ಎಂದು ಕೇಶವ ಪಿಳ್ಳೆ ಆಲೋಚಿಸುತ್ತಿದ್ದ. ಕೈ ಹಿಂದಕ್ಕೆ ತೆಗೆದುಕೊಳ್ಳುವುದೆ? ಅವಳು ಕೈ ಹಿಂದಕ್ಕೆಳೆದುಕೊಳ್ಳುತ್ತಾಳೆ. ಅವಳು ಅವನ ಕಡೆಗೆ ನೋಡುತ್ತಲೂ ಇಲ್ಲ. ಅವಳಿಗೆ ತನ್ನ ಬಗ್ಗೆ ಒಂದು ರೀತಿಯ ಸಿಟ್ಟಿರಬಹುದಲ್ಲವೇ ಎಂದುಕೊಂಡ. ಈಗಲೂ ಇಬ್ಬರೂ ಕೈ ಹಿಂದಕ್ಕೆಳೆದುಕೊಳ್ಳಲಿಲ್ಲ ಎಂದಾದರೆ ಅದಕ್ಕೆ ಯಾವ ಮಹತ್ವವಿದ್ದೀತು?

ಶೇಖರ ಪಿಳ್ಳೆ ಹೇಳುತ್ತಿದ್ದದ್ದು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲವಾದರೂ ಅದನ್ನು ಅರ್ಥ ಮಾಡಿಕೊಳ್ಳಬಹುದಾಗಿತ್ತು. ಕೇಶವ ಪಿಳ್ಳೆಯ ಹತ್ತಿರ ಅವರು ಹೇಳಿದರು:

"ನೀನೆಲ್ಲವನ್ನೂ ಮರೆತುಬಿಡಪ್ಪ."

ಕೇಶವ ಪಿಳ್ಳೆ ಅದಕ್ಕೇನೂ ಮಾತಾಡಲಿಲ್ಲ.

"ಸಾಯೋ ಮನುಷ್ಯನ ಕೊನೆ ಆಸೆ. ನೀನು ಒಳ್ಳೆಯವನು. ನೀನು ಅವಳ ಕೈ ಹಿಡಿದು ಕಾಪಾಡಪ್ಪ."

ತಂಗಮ್ಮ ತಲೆತಗ್ಗಿಸಿ ಕುಳಿತಿದ್ದಳು.

ಕೇಶವ ಪಿಳ್ಳೆ ಆ ಮಾತಿಗೆ ಏನಾದರೂ ಹೇಳಬೇಕಾಗಿತ್ತು. ಶೇಖರ ಪಿಳ್ಳೆ ಕಷ್ಟ ಪಟ್ಟು ಮಾತಾಡುತ್ತಿದ್ದರು. "ಅವಳಿಗೆ ಅದು ಯಾವುದೋ ಒಂದು ರೀತಿಯ ಬುದ್ಧಿ ಭ್ರಮಣೆಯಾಗಿತ್ತು. ಅದರಿಂದ ಹಾಗೆಲ್ಲ ಆಗಿಹೋಯ್ತು. ವಿಧವೆಯರು ದಾಂಪತ್ಯ ವಿಚ್ಛೇದನ ಪಡೆದವರು ಮುಂತಾದವರೆಲ್ಲ ಮದುವೆ ಮಾಡಿಕೊಳ್ಳೋದಿಲ್ಲವೇ? ಹಾಗೆಯೇ ಅವಳೊಬ್ಬಳು ವಿಧವೆ ಅಂತ ಭಾವಿಸಿಕೊಂಡು ಕಳೆದುಹೋದದ್ದನ್ನೆಲ್ಲ ಮರೆತುಬಿಡು."

ಕೇಶವ ಪಿಳ್ಳೆ ಅಸಹಾಯಕನಾಗಿ ತಗ್ಗಿದ ಸ್ವರದಲ್ಲಿ ಹೇಳಿದ: "ನನಗೆ ಮದುವೆ ಆಗಿದೆ. ಒಂದು ಮಗು ಇದೆ."

ಅದನ್ನು ಕೇಳಿ ಭಾಗೀರಥಿಯಮ್ಮ ನಡುಗಿಹೋದರು. ಅವರಿಗೆ ಅದು ತಿಳಿದಿರ ಲಿಲ್ಲ. ತಂಗಮ್ಮ ಅದು ಕೇಳಿಯೂ ಕೇಳಿಸದವಳಂತಿದ್ದಳು. ಆದರೆ ಶೇಖರ ಪಿಳ್ಳೆಯನ್ನು ಆ ಮಾತು ಭಯಗೊಳಿಸಲಿಲ್ಲ. ಭಾಗೀರಥಿಯಮ್ಮ ಹೇಳಿದಳು:.

"ಪಿಳ್ಳೆ, ಅದನ್ನ ನಮ್ಮ ಹತ್ರ ಹೇಳಲೇ ಇಲ್ಲವಲ್ಲ. ಯಾವಾಗಾಯ್ತು?"

"ಸುಮಾರು ದಿನ ಆಯ್ತು."

ಭಾಗೀರಥಿಅಮ್ಮ ಕೇಳಿದಳು: "ಇವಳು ಮನೆಬಿಟ್ಟು ಹೋದಮೇಲಾ?"

ಅವನು ಹೌದೆನ್ನುವಂತೆ ತಲೆಯಾಡಿಸಿದ. ಭಾಗೀರಥಿಯಮ್ಮನ ಮಾತಿನಲ್ಲಿ ಅನುಮಾನ ಸುಳಿದಾಡಿತ್ತು. ಆ ಮಾತನ್ನು ಪೂರ್ತಿ ನಂಬಿರಲಿಲ್ಲ. ಅವರ ಪ್ರಶ್ನೆಗೆ ಅವನು ಕೊಟ್ಟ ಉತ್ತರ ಹಾಗಿತ್ತು.

ಭಾಗೀರಥಿಯಮ್ಮ ಮತ್ತೆ ಕೇಳಿದಳು: "ಹುಡುಗಿ ಎಲ್ಲೀದು?"

"ನಮ್ಮ ಊರಿನದು."

"ಯಾವಾಗ ನಡೀತು? ನಮ್ಮ ಹತ್ರ ಪಿಳ್ಳೆ ಯಾಕೆ ಹೇಳದೇಹೋದದ್ದು?"

"ಓ! ಹೇಳಲಿಲ್ಲ."

ಶೇಖರ ಪಿಳ್ಳೆ ನಿರಾಸೆಗೊಂಡು ಹೇಳಿದರು:

"ಕರ್ಮ! ಕರ್ಮವೇ ಆಯ್ತು."

ಸ್ವಲ್ಪ ಹೊತ್ತು ಬಿಟ್ಟು ಭಾಗೀರಥಿಯಮ್ಮನ ಹತ್ತಿರ ಶೇಖರ ಪಿಳ್ಳೆ ಹೇಳಿದರು: "ಯಾವಾಗಲೂ ಕಾದು ಕುಳಿತಿರೋದಕ್ಕೆ ಸಾಧ್ಯವಾ? ಹೋಗಲಿ ಬಿಡು."

ಆದರೂ ಭಾಗೀರಥಿಯಮ್ಮನ ಸಂಶಯ ಹೋಗಿರಲಿಲ್ಲ. ಅವರು ಕೇಳಿದರು: "ಇದ್ದಕ್ಕಿದ್ದ ಹಾಗೆ ಏರ್ಪಾಡಿಸಿದ್ದಾ?"

"ಹೌದು."

ಕೇಶವ ಪಿಳ್ಳೆ ಹೇಳುತ್ತಿರುವುದು ಸುಳ್ಳು ಎಂದು ತಿರುಗಮುರುಗ ಪ್ರಶ್ನೆ ಹಾಕು ವುದಕ್ಕೆ ಧೈರ್ಯ ಸಾಲದಾಗಿತ್ತು.

ಇಷ್ಟೆಲ್ಲ ಮಾತುಕತೆ ನಡೆಯುತ್ತಿದ್ದರೂ ತಂಗಮ್ಮ ಅದನ್ನು ಕೇಳಿಸಿಕೊಳ್ಳದವಳಂತೆ

ಕುಳಿತಿದ್ದಳು. ಮದುವೆ ಕಳೆಯಿತು. ಮಗುವಿದೆ ಎಂದು ಹೇಳಿದರೂ ಅವಳಿಗೆ ಯಾವ ವೇದನೆಯೂ ಉಂಟಾಗಲಿಲ್ಲ. ಅದು ಅವಳನ್ನು ಬಾಧಿಸುವಂತಹವೂ ಅಲ್ಲ. ಎಲ್ಲೆಲ್ಲೋ ಯಾರ್ಯಾರೋ ಮದುವೆ ಮಾಡಿಕೊಂಡರೆ ಅವಳಿಗೇನಂತೆ?

ತಂಗಮ್ಮ ಆ ಭಾವನೆ ತಾಳಿಕೊಂಡು ಕುಳಿತದ್ದು ಆಶ್ಚರ್ಯಕರವಾಗಿತ್ತು. ಈಗ ಅವನು ತಂಗಮ್ಮನಿಗೆ ಯಾರೂ ಅಲ್ಲ. ಅವನಿಗೂ ತಂಗಮ್ಮ ಯಾರೂ ಅಲ್ಲ. ಆದರೆ ಮೊದಲು ಹಾಗಿತ್ತೆ? ಅವನ ಮದುವೆಯ ಸುದ್ದಿ ಆಶ್ಚರ್ಯದ ಸಂಗತಿಯಾಗಿಯಾದರೂ ತೋರಬಾರದೆ? ಕೇವಲ ಒಬ್ಬ ಪರಿಚಯಸ್ಥ ಮದುವೆ ಮಾಡಿಕೊಂಡದ್ದನ್ನು ಹೇಳಿದರೂ ಯಾರೂ ಆಸಕ್ತಿಯಿಂದ ಕೇಳುತ್ತಾರೆ.

ಕೇಶವ ಪಿಳ್ಳೆ ಆ ಹಳೆಯ ಕಥೆಯನ್ನೆಲ್ಲ ನೆನಸಿಕೊಂಡ. ಅವೆಲ್ಲವೂ ಮುಖ್ಯ ಸಂಗತಿಗಳಾಗಿ ನೆನಪಾದುವು. ಅವಳು ಹಿಂದಿನಂತೆ ಮತ್ತೊಮ್ಮೆ ನಗುವುದನ್ನು ನೋಡಿದ್ದರೆ ಚೆನ್ನಾಗಿತ್ತು ಎಂದು ಕೇಶವ ಪಿಳ್ಳೆ ಆಶೆಪಟ್ಟ. ಆ ಕೆನ್ನೆಗುಳಿಯ ಕಪೋಲಗಳ. ಆ ತುಟಿಗಳ ಆ ನಗು ! ಹತ್ತಿರ ಹತ್ತಿರ ಕುಳಿತು ಹಿಂದಿನಂತೆ ಎಷ್ಟೋ ಹೊತ್ತು ಹರಟುತ್ತ ಕುಳಿತಿರುವ ಆಶೆಯುಂಟಾಯಿತು. ಇದೇ ಕೊಟ್ಟಿಯಂಬಲದ ಮೂಲಕ ಒಳಗೆ ಬಂದು ಅನಂತರ ಅವಳ ರೂಮಿಗೆ ಬಂದು ಮತ್ತೊಂದು ರಾತ್ರಿ ಕಳೆಯಬೇಕೆನ್ನುವ ಆಶೆಯುಂಟಾಯಿತು. ಆದರೆ ಹಿಂದಿನ ದಿನಗಳು ಮತ್ತೆಂದೂ ಬಾರದಂತಾದುವು. ತಲೆ ತಗ್ಗಿಸಿ ಆ ಮಂಚದ ಮೇಲೆ ಕುಳಿತುಕೊಂಡು ಅವಳು ಏನನ್ನು ಯೋಚಿಸುತ್ತಿರಬಹುದು? ತಾನು ಆಶಿಸಿದಂತೆಯೇ ಆಶಿಸುತ್ತಿರಬಹುದು. ಅವಳಿಗೆ ಅದನ್ನೆಲ್ಲ ಮರೆಯಲು ಸಾಧ್ಯವೆ? ಖಂಡಿತವಾಗಿಯೂ ಸಾಧ್ಯವಿಲ್ಲ.

ಕೇಶವ ಪಿಳ್ಳೆಗೆ ಅವಳ ಜೊತೆಯಲ್ಲಿ ಒಮ್ಮೆ ಮಾತಾಡಿದ್ದರಾಗಿತ್ತು ಎನ್ನಿಸಿತ್ತು. ಹೇಗೆ ಮಾತಿಗೆ ಪ್ರಾರಂಭಿಸಬೇಕು? ಏನು ಮಾತಾಡಬೇಕು? ಎನ್ನುವುದೇ ಹೊಳೆಯುತ್ತಿಲ್ಲ. ಅವಳನ್ನೊಮ್ಮೆ ಸ್ಪರ್ಶಿಸಬೇಕು ಎನ್ನುವ ಅಭಿಲಾಷೆಯೂ ಮೂಡಿತ್ತು.

ಅವನು ಹೊರಡುವ ಸಮಯವಾಯಿತು. ಅಂದು ಸಂಜೆಯ ಹೊತ್ತಿಗೆ ದಿವಾನರಿಗೆ ಒಂದು ರಿಪೋರ್ಟ್ ಸಿದ್ಧಮಾಡಿ ಒಪ್ಪಿಸಬೇಕಾಗಿತ್ತು. ಕೇಶವ ಪಿಳ್ಳೆ ಶೇಖರ ಪಿಳ್ಳೆಯ ಹತ್ತಿರ ಹೇಳಿದ:

"ನಾನಿನ್ನು ಬರಲಾ?"

ಶೇಖರ ಪಿಳ್ಳೆ "ಹ್ಞು" ಎಂದರು.

ಕೇಶವ ಪಿಳ್ಳೆ ಹೇಳಿದ: "ನಾನು ನಾಳೆ ಬೆಳಗ್ಗೆ ಒಂದು ಸಲ ಬರ್ತೀನಿ" ಎಂದು ಹೇಳಿ ಬಳಿಕ ತಂಗಮ್ಮನ ಹತ್ತಿರ ಹೇಳಿದ:

"ನಾನಿನ್ನು ಬರ್ತೀನಿ ತಂಗಮ್ಮ ! ನಾಳೆ ಬೆಳಗ್ಗೆ ಬರ್ತೀನಿ." ತಂಗಮ್ಮ ಅಳುತ್ತಿದ್ದಳು. ತಲೆಯೆತ್ತಿ "ಹ್ಞು" ಎಂದಳು ಅಷ್ಟೆ.

ಕೇಶವ ಪಿಳ್ಳೆಗೆ ಪುನಃ ತಾನು ಅವಳಿಗೆ ಹತ್ತಿರದವನಾಗುತ್ತಿದ್ದೇನೆ ಎನ್ನಿಸಿತು.

ಯಾರನ್ನೇ ಆಗಲಿ, ಹಿಡಿದು ಹತ್ತಿರದವರನ್ನಾಗಿ ಮಾಡಿಕೊಳ್ಳುವ ಒಂದು ರೀತಿಯ ಶಕ್ತಿ ಅವಳಿಗಿದೆ. ಸಹಜವಾಗಿ ಅವಳು ಸುಂದರಿಯಲ್ಲವೆ? ಆ ಸೌಂದರ್ಯ ಅನುಭವಿಸುವುದಕ್ಕಾಗಿರುವಂಥಾದ್ದು. ಪುರುಷನನ್ನು ಹಿಡಿದು ನಿಲ್ಲಿಸುವ ಶಕ್ತಿಯುಳ್ಳದ್ದು. ಹೆಂಡತಿಯಿದ್ದೂ ಮತ್ತೊಬ್ಬಳನ್ನು ಪ್ರೀತಿಸುವಂತಹ ಪುರುಷರಿಲ್ಲವೆ? ಅವಳನ್ನೇ ಪ್ರೀತಿಸಿದರೇನಂತೆ ಎನ್ನಿಸಿತು. ಯಾವ ನಿಮಿಷದಲ್ಲಿ ಬೇಕಾದರೂ ಅವಳ ಕಾಲಿಗೆ ಬಿದ್ದು ಅವಳನ್ನು ಬಯಸಬೇಕಾಗಬಹುದು.

ಮಾರನೆಯ ದಿನ ಶೇಖರ ಪಿಳ್ಳೆಯ ಖಾಯಿಲೆ ಜಾಸ್ತಿಯಾಗಿದೆ ಎನ್ನುವ ಸುದ್ದಿ ತಿಳಿಯಿತು. ಕೇಶವ ಪಿಳ್ಳೆ ಅಲ್ಲಿಗೆ ಹೋಗುವಷ್ಟರಲ್ಲಿ ಚೀಫ್ ಸೆಕ್ರೆಟರಿ, ಅವರ ಪತ್ನಿ, ತಂಗಮ್ಮ ಎಲ್ಲರೂ ಅಲ್ಲಿ ಸೇರಿದ್ದರು. ಶೇಖರ ಪಿಳ್ಳೆಗೆ ಇನ್ನೂ ಸ್ಮರಣಶಕ್ತಿ ಇತ್ತು. ಉಸಿರಾಡುವುದು ಸ್ವಲ್ಪ ಕಷ್ಟವಾದರೂ ಮಾತನಾಡುತ್ತಿದ್ದರು. ಕೇಶವ ಪಿಳ್ಳೆಯನ್ನು ಹತ್ತಿರ ಬಂದು ಕುಳಿತುಕೊಳ್ಳುವಂತೆ ಕೈಸನ್ನೆ ಮಾಡಿದರು. ಕೇಶವ ಪಿಳ್ಳೆಯ ಕೈಯನ್ನು ತೆಗೆದು ತಮ್ಮ ಎದೆಯ ಮೇಲಿರಿಸಿಕೊಂಡರು.

ಅದು ನಿಜವಾಗಿಯೂ ಪ್ರತಿಯೊಬ್ಬನ ಹತ್ತಿರ 'ಹೋಗಿಬರುತ್ತೇನೆ' ಎಂದು ಹೇಳುವ ದೃಶ್ಯದಂತಿತ್ತು. ಭಗವತಿ ಕುಟ್ಟಿಯಮ್ಮನನ್ನು ಹತ್ತಿರ ಕರೆದು ಶೇಖರ ಪಿಳ್ಳೆ 'ಹೋಗಿಬರುತ್ತೇನೆ' ಎಂದರು. ಬದುಕಿದ್ದಾಗ ಏನಾದರೂ ಬೇಸರ ತರುವಂಥಾದ್ದನ್ನು ಆಡಿದ್ದರೆ ಅದನ್ನು ಕ್ಷಮಿಸಬೇಕೆಂದು ಕೇಳಿಕೊಂಡರು. ತಮ್ಮನನ್ನು ಸರಿಯಾಗಿ ನೋಡಿಕೊಳ್ಳುವಂತೆ ಹೇಳಿದರು. ಅವನು ಒಳ್ಳೆಯ ಮನುಷ್ಯ ಎಂದರು. ಭಗವತಿಕುಟ್ಟಿಯಮ್ಮನ ಕಣ್ಣುಗಳು ನೀರಾಡಿದುವು. ಮರಣ ಸಮೀಪಿಸುತ್ತಿದ್ದಾಗಿನ ಶೈತ್ಯವನ್ನು ಸಹಿಸಲಿಕ್ಕಾಗದೆ ಶಾಖ ದೊರೆಯುವುದಕ್ಕಾಗಿ ಭಾಗೀರಥಿಯಮ್ಮನಿಗೆ ತಮ್ಮನ್ನು ಅಪ್ಪಿ ಮಲಗಿಕೊಳ್ಳುವಂತೆ ಹೇಳಿದರು. ಗಂಡುಮಕ್ಕಳಿಗೆ ಅಮ್ಮನನ್ನು ಸಾಕುವ ಭಾರವನ್ನು ವಹಿಸಿದರು. ತಂಗಮ್ಮನ ಕೈಹಿಡಿದು ಕೇಶವ ಪಿಳ್ಳೆಯ ಪಕ್ಕದಲ್ಲಿ ಕೂರಿಸಿದರು. ಅವರು ಹತ್ತಿರ ಹತ್ತಿರ ಕುಳಿತಿದ್ದುದನ್ನು ಸ್ವಲ್ಪ ಹೊತ್ತು ನೋಡುತ್ತಾ ಮಲಗಿದರು. ಮದುವೆಯಾದ ಮಗಳು ಗಂಡನ ಜೊತೆಯಲ್ಲಿ ಬಂದು ತನ್ನ ಮರಣಶಯ್ಯೆಯ ಹತ್ತಿರ ಕುಳಿತಿದ್ದಾಳೆ ಎಂದು ಅವರು ಭಾವಿಸಿದಂತಿತ್ತು. ಬಾಳಿನಲ್ಲಿ ಮತ್ತೊಬ್ಬ ಅಳಿಯ ತನಗಿಲ್ಲ ಎಂದು ಶೇಖರ ಪಿಳ್ಳೆ ಹಿಂದೆ ಹೇಳಿಯೂ ಇದ್ದರು.

ಶೇಖರ ಪಿಳ್ಳೆಗೆ ತಂಗಮ್ಮನ ಹತ್ತಿರ ಹೇಳಬೇಕಾದದ್ದು ಏನೋ ಇತ್ತು. ಬಿಕ್ಕಳಿಕೆ ಹೆಚ್ಚತೊಡಗಿತು. ಅದರ ಮಧ್ಯೆ ಹೇಳಿದರು:

"ಈ ಜನ್ಮದಲ್ಲಿ ಇಲ್ಲದೆ ಇದ್ದರೆ ಹೋಗಲಿ ಮಗಳೆ, ಮುಂದಿನ ಜನ್ಮಕ್ಕಾದರೂ ಪ್ರಾರ್ಥಿಸಿಕೊ."

ಶೇಖರ ಪಿಳ್ಳೆ ಬಾಯಿ ತೆರೆದರು. ಮೊದಲು ನೀರು ಬಿಟ್ಟವನು ಕೇಶವ ಪಿಳ್ಳೆ. ಆಮೇಲೆ ಆ ಲೋಟವನ್ನು ತಂಗಮ್ಮನ ಕೈಯಲ್ಲಿ ಕೊಟ್ಟ.

ಆ ರೀತಿಯಲ್ಲಿ ಶೇಖರ ಪಿಳ್ಳೆಯ ಬಾಳು ಮುಕ್ತಾಯಗೊಂಡಿತು. ಯಾರ ಜೊತೆಯಲ್ಲೂ ಹಗೆತನವನ್ನು ಕಟ್ಟಿಕೊಳ್ಳದೆ, ಯಾರನ್ನೂ ವಂಚಿಸದೆ ಬಾಳಿದ್ದರು. ನಿಜವಾಗಿಯೂ ಶೇಖರ ಪಿಳ್ಳೆ ಸತ್ತದ್ದು ಮಗಳಿಂದ ಬಂದೊದಗಿದ ಸಂಕಟದಿಂದಾಗಿರಬೇಕು.

ಕೇಶವ ಪಿಳ್ಳೆ ಒಂದು ರೀತಿಯಲ್ಲಿ ಕೃತಕೃತ್ಯನಾಗಿದ್ದ. ಸಾಯುವ ಕಾಲದಲ್ಲಿ ಬಾಯಿಗೆ ನೀರು ಬಿಟ್ಟಿದ್ದ. ತನ್ನ ಎಲ್ಲ ಅಭ್ಯುದಯಕ್ಕೂ ಕಾರಣನಾದ ಆ ಮನುಷ್ಯನ ಅಂತ್ಯದ ಆಶೆಯನ್ನು ಈಡೇರಿಸಿದ್ದ. ಆದರೆ ಕರ್ತವ್ಯವನ್ನು ಸಂಪೂರ್ಣವಾಗಿ ನೆರವೇರಿಸಿದೆ ಎನ್ನುವ ತೃಪ್ತಿಯಿದ್ದಂತೆ ತೋರಲಿಲ್ಲ. ಮತ್ತೂ ಏನನ್ನೋ ಮಾಡಿ ಮುಗಿಸಬೇಕಾಗಿದೆ. ಅದು ತಂಗಮ್ಮನಿಗೋಸ್ಕರ.

ದಹನ ಕ್ರಿಯೆ ಕಳೆದ ಮೇಲೆ ಎಲ್ಲರೂ ಅವರವರ ಮನೆಗೆ ಹಿಂದಿರುಗಿದರು. ಕೇಶವ ಪಿಳ್ಳೆ–ತಂಗಮ್ಮ ಮಾತ್ರ ಇನ್ನೂ ಇದ್ದರು. ಕೇಶವ ಪಿಳ್ಳೆ ತಂಗಮ್ಮನ ಹತ್ತಿರ ಮಾತನಾಡುವುದಕ್ಕಾಗಿ ಕಾಯುತ್ತಿದ್ದ.

ಆ ಪ್ರಶ್ನೆಯನ್ನು ಅವನು ನೇರವಾಗಿ ಕೇಳಿದ: "ತಂಗಮ್ಮ, ನಾನೇನಾದರೂ ಮಾಡಬೇಕಾದದ್ದು ಬಾಕಿ ಇದೆಯಾ?"

ಒಂದು ಕ್ಷಣ ಬಿಟ್ಟು ಅವಳು ಉತ್ತರ ಹೇಳುವ ಮೊದಲೇ ಅವನೇ ಮಾತಿಗಾರಂಭಿಸಿದ: "ತಪ್ಪಾಗಿ ತಿಳಿದುಕೊಳ್ಳಬೇಡ. ನಾನೊಬ್ಬ ದೊಡ್ಡ ಮನುಷ್ಯನಾಗಿ ಕೇಳ್ತಿದ್ದೇನೆ ಅಂತಲೂ ಭಾವಿಸಬೇಡ. ನಾನು......ನಾನು ಹೊತ್ತ ಋಣ ಮರೆತಿಲ್ಲ. ನಾನು ಏನಾದರೂ ಮಾಡಬೇಕಾದದ್ದಿದ್ದರೆ ಹೇಳಬೇಕು."

ಅವಳು ನಿರ್ವಿಕಾರಳಾಗಿ ಹೇಳಿದಳು:

"ಇಲ್ಲ; ಮಾಡಬೇಕಾದದ್ದೇನೂ ಇಲ್ಲ."

ಅವನು ಹೇಳಿದ: "ನನ್ನ ಬಗ್ಗೆ ದ್ವೇಷವುಂಟಾ?"

"ಅದೂ ಇಲ್ಲ."

ಕೇಶವ ಪಿಳ್ಳೆಯ ಹತ್ತಿರ ಹೆಚ್ಚು ಮಾತನಾಡಲು ಇಷ್ಟಪಡದವಳಂತೆ ಅವಳು ಅಲ್ಲಿಂದ ಹೊರಟುಹೋದಳು. ಭಾಗೀರಥಿಯಮ್ಮ ಅದನ್ನು ನೋಡುತ್ತ ನಿಂತಿದ್ದಳು. ಅವಳು ಮಗಳ ಹತ್ತಿರ ಕೇಳಿದಳು: "ಯಾಕೇ ಕೇಶವ ಪಿಳ್ಳೆ ಅದೇನೋ ಕೇಳ್ತಿದ್ದರೆ ನೀನು ಸಿಟ್ಟುಮಾಡಿಕೊಂಡವಳ ಹಾಗೆ ಬಂದೆ?"

ತಂಗಮ್ಮ ಅದಕ್ಕೂ ಉತ್ತರ ಹೇಳಲಿಲ್ಲ. ಕೇಶವ ಪಿಳ್ಳೆ ಭಾಗೀರಥಿಯಮ್ಮನ ಹತ್ತಿರ 'ಹೋಗಿಬರುತ್ತೇನೆ' ಎಂದು ಹೇಳಿ ಅಲ್ಲಿಂದ ಹೊರಟ.

ಭಾಗೀರಥಿಯಮ್ಮನ ಆಶೆ ಕೈಬಿಟ್ಟು ಹೋಗಿರಲಿಲ್ಲ. ಕೇಶವ ಪಿಳ್ಳೆಗೆ ಮದುವೆಯಾಗಿದೆ ಎನ್ನುವುದನ್ನು ಸಂಪೂರ್ಣವಾಗಿ ನಂಬಿರಲಿಲ್ಲ. ಎಲ್ಲವನ್ನೂ ಮರೆತು ಅವನು ತಂಗಮ್ಮನನ್ನು ಸ್ವೀಕರಿಸಬಹುದು ಎಂದು ಆ ಸ್ತ್ರೀ ಆಶಿಸುತ್ತಿದ್ದದ್ದು. ಆದರೆ ತಂಗಮ್ಮನ ಸ್ವಭಾವ ಬದಲಿಸಿದಂತಿಲ್ಲ. ಅದಕ್ಕಾಗಿ ಅವಳು ಸಂಕಟಪಟ್ಟಳು.

ಪ್ರತಿ ದಿನವೂ ಕೇಶವ ಪಿಳ್ಳೆ ಚಿಟ್ಟಿಕುಳಂಗರದಲ್ಲಿ ತಂಗಮ್ಮನ ಮನೆಗೆ ಹೋಗಿಬರುತ್ತಿದ್ದ. ತಂಗಮ್ಮ ಕೆಲವು ದಿನಗಳ ವರೆಗೆ ರಜ ತೆಗೆದುಕೊಂಡಿದ್ದಳು. ಅಲ್ಲಿಗೆ ಹೋಗುವುದೆಂದರೆ ಅವನಿಗೆ ಅದೊಂದು ರೀತಿಯ ಉತ್ಸಾಹವುಂಟಾಗುತ್ತಿತ್ತು. ಹೋದಾಗ ತುಂಬ ಹೊತ್ತು ಅಲ್ಲಿ ಕಾಲಕಳೆಯುತ್ತಿದ್ದ. ಮೊದಮೊದಲು ಅವಳು ಅದನ್ನು ಅಷ್ಟಾಗಿ ಪರಿಗಣಿಸುತ್ತಿರಲಿಲ್ಲ. ಅವನ ಬಯಕೆಯ ನೋಟವನ್ನು ಅವಳು ಕಂಡಂತೆಯೂ ತೋರಿಸಿಕೊಂಡಿರಲಿಲ್ಲ. ಬೇರೆಯವನೊಬ್ಬ, ಯಾವ ಪರಿಚಯವೂ ಇಲ್ಲದ ಒಬ್ಬ ಮನುಷ್ಯ ಬಂದಿದ್ದಾನ ಅಷ್ಟೆ! ಎಂದಾಗಿತ್ತು ಅವಳ ಭಾವನೆ.

ಒಂದು ದಿನ ಅವಳೇ ಕಾಫಿ ತೆಗೆದುಕೊಂಡು ಬಂದದ್ದು. ಅಂದು ಮೊದಲನೆಯ ಸಲ ಅವರ ನೋಟಗಳು ಒಂದಾದುವು. ಆ ಕಣ್ಣುಗಳಲ್ಲಿ ಅನ್ಯತ್ವವೂ ಇಲ್ಲ; ಕೋಪದ ಕಿಡಿಗಳೂ ಇಲ್ಲ. ಯಾವುದೋ ದೂರು ಹೇಳಿಕೊಳ್ಳುತ್ತಿದ್ದಂತೆ ತೋರಿದುವು. ಅದು ಒಂದು ರೀತಿಯ ಆಶ್ವಾಸನೆಯನ್ನುಂಟುಮಾಡಿತು. ಅವನ ಎದೆ ತಂಪಾದ ಹಾಗೆ ತೋರಿತು.

ಅವಳು ಕಾಫಿಯನ್ನು ಮೇಜಿನ ಮೇಲೆ ತಂದಿಟ್ಟು ಲೋಟಕ್ಕೆ ಹಾಕಿದಳು. ಆಗ ಅವಳು ತಲೆ ತಗ್ಗಿಸಿದಳು. ಲೋಟಕ್ಕೆ ಕಾಫಿ ಹಾಕಿ ಆದ ಮೇಲೆ ಒಂದು ನಿಮಿಷ ಅವಳು ಸುಮ್ಮನೆ ನಿಂತಿದ್ದಳು. ಕೇಶವ ಪಿಳ್ಳೆ ಹೇಳಿದ:

"ಅದನ್ನು ತಂದು ಕೈಗೆ ಕೊಡೋದಾದರೆ ಕುಡೀತೇನೆ."

ಅವಳು ಅವನ ಮುಖದ ಕಡೆಗೊಮ್ಮೆ ನೋಡಿದಳು. ತುಟಿಗಳಲ್ಲಿ ತುಂಟತನವಿರಲಿಲ್ಲ. ಮುಖ ವಿಷಾದಗೊಂಡು ಕರುಣಾಜನಕವಾಗಿತ್ತು. ಕಣ್ಣುಗಳಲ್ಲಿ ಅಸಹಾಯಕತೆ ಎದ್ದುಕಾಣುತ್ತಿತ್ತು. ನಿಜವಾಗಿಯೂ ದೂರು ಹೊರಿಸುವವಳ ಮುಖದಂತಿತ್ತು.

ಕಾಫಿ ಲೋಟವನ್ನು ತೆಗೆದು ಅವನ ಮುಂದೆ ಹಿಡಿದಳು. ಅವಳ ಮುಖವನ್ನೇ ನೋಡುತ್ತ ಕುಳಿತಿದ್ದ ಅವನ ತುಟಿಗಳು ಅರಳಿದುವು. ಅವಳು ಲೋಟವನ್ನು ತುಟಿಗೆ ಹಿಡಿದಳು. ಅವನು ಒಂದು ಗುಟುಕು ಕುಡಿದ. ತಂಗಮ್ಮ ಲೋಟವನ್ನು ಕೆಳಗಿರಿಸಿದಳು.

ಅವಳು ಇನ್ನೇನು ಅಲ್ಲಿಂದ ಹೋಗುವುದರಲ್ಲಿದ್ದಳು. ಅವನು ಥಟ್ಟನೆ ಅವಳ ಕೈ ಹಿಡಿದುಕೊಂಡ. ಅವಳು ಪ್ರತಿಭಟಿಸಲಿಲ್ಲ.

ಅವನು ಕೇಳಿದ: "ನನ್ನ ಮೇಲೆ ಸಿಟ್ಟಾ? ನನ್ನನ್ನು ಬಯ್ತೀಯಾ?"

ಸುತ್ತಲೂ ಕಣ್ಣಾಡಿಸಿ ನೋಡಿ ಅವಳನ್ನು ಎಳೆದು ಅಪ್ಪಿಕೊಂಡ. ಅವಳು ವಶಳಾದಳು.

ಹೆಚ್ಚು ಹೊತ್ತು ಹಾಗೆ ನಿಂತಿರಲಿಲ್ಲ. ಅವನು ಪುನಃ ಏನನ್ನೂ ಕೇಳಲಿಲ್ಲ. ಅವಳೂ ಏನೂ ಮಾತಾಡಿರಲಿಲ್ಲ. ಅವನು ಕೈ ಸಡಲಿಸಿದ. ಅವಳು ಅಲ್ಲಿಂದ ಹೊರಟುಹೋದಳು.

ಮಾರನೆಯ ದಿನ ಅವಳು ಹಣೆಗೆ ಬೊಟ್ಟಿಟ್ಟು ಅಲಂಕರಿಸಿಕೊಂಡು ಪ್ರಸನ್ನಳಾಗಿ ಕಾಣಿಸುತ್ತಿದ್ದಳು. ಅವಳ ಕಣ್ಣುಗಳಲ್ಲಿ ಒಂದು ರೀತಿಯ ಕಾಂತಿಯುಂಟಾಗಿತ್ತು; ಹಿಂದಿನ ತಂಗಮ್ಮನಾಗಿ ಕಾಣಿಸುತ್ತಿದ್ದಳು.

ತಂಗಮ್ಮನ ಆಕ್ಷೇಪ, ಅವನು ಅವಳನ್ನು ಪ್ರೀತಿಸಿರಲಿಲ್ಲ ಎಂದು. ಕೇಶವ ಪಿಳ್ಳೆ ಅದು ತನಗೆ ಅರ್ಥವಾಗದವನಂತೆ ನಟಿಸಿದ. ಅವಳು ಖಡಾ ಖಂಡಿತವಾಗಿ ಹೇಳಿದಳು:

"ನನ್ನನ್ನು ಕಂಡರೆ ಇಷ್ಟವಿರಲಿಲ್ಲ. ನನ್ನ ಹತ್ತಿರ ಮಾತಾಡುವಾಗ, ನನ್ನ ಹತ್ತಿರ ಇದ್ದಾಗ, ಮನಸ್ಸಿನಲ್ಲಿ ಬೇರೆ ಯಾವುದೋ ಆಲೋಚನೆಯಲ್ಲಿರ್‍ತಿದ್ದಿರಿ. ನನ್ನ ಜೊತೆಯಲ್ಲಿ ನಡೆದುಕೊಳ್ಳುವಾಗಲೆಲ್ಲ ನಿಸ್ವಾರ್ಥತೆ ನಿಮಗಿರಲಿಲ್ಲ."

ಆ ಅಭಿಪ್ರಾಯ ಸರಿಯಲ್ಲ ಎಂದು ಅವನು ವಾದಿಸಿದ. ಅವನು ಅವಳಲ್ಲೇ ವಿಲೀನಗೊಂಡಿದ್ದವನೆಂದು ಹೇಳಿದ:

"ಅದು ನಿನಗೆ ಹಾಗನ್ನಿಸಿರಬೇಕು ಅಷ್ಟೆ."

ತಂಗಮ್ಮ ಅದನ್ನು ಒಪ್ಪಿಕೊಳ್ಳಲಿಲ್ಲ. ಆ ರೂಮಿನಲ್ಲೂ, ಆಫೀಸಿನಲ್ಲೂ ಅವಳಿಗೆ ಅದರ ಅನುಭವವಾಗಿತ್ತು. ಅವನ ಶರೀರ ಮಾತ್ರ ಅವಳಿಗೆ ದೊರೆತಿದ್ದದ್ದು. ಅವನ ಹೃದಯ ಮನಸ್ಸು ಅವಳಿಗೆ ಲಭಿಸಿರಲಿಲ್ಲ. ನಗು, ವಿನೋದಗಳೆಲ್ಲವೂ ಕೃತಕವಾಗಿದ್ದುವು. ಎಲ್ಲವೂ ಕೇವಲ ಅಭಿನಯವಾಗಿದ್ದುವು. ಚುಂಬನದಲ್ಲಿ ಬಿಸಿಯಿರಲಿಲ್ಲ. ಆಲಿಂಗನದಲ್ಲಿ ಶಕ್ತಿಯಿರಲಿಲ್ಲ. ಅವಳು ಕೇಳಿದಳು: "ನನ್ನ ಹತ್ರ ಸತ್ಯ ಹೇಳಬೇಕು. ಇಲ್ಲಿಗೆ ಬರ್‍ತಿದ್ದದ್ದು ಗತ್ಯಂತರವಿಲ್ಲದೆ ಅಲ್ಲ? ಹಾಳಾದವಳು ಬರಹೇಳಿದ್ದಾಳೆ. ಹೋಗದೇ ಇದ್ದರೆ ಸಿಟ್ಟು ಮಾಡಿಕೊಳ್ತಾಳೆ ಅಂತ ಅನ್ನಿಸಿರಲಿಲ್ಲವೇ?"

"ಇಲ್ಲ."

ಅವನಿಗೆ ಅದಕ್ಕಿಂತ ಹೆಚ್ಚೇನೂ ಹೇಳಲಾಗಲಿಲ್ಲ. ಅವಳು ಹೇಳಿದಳು:

"ನೋಡಿ, ನೋಡಿ. ಈಗಲೂ ಕೂಡ ಅದಿಲ್ಲ. ನಿಮ್ಮಿಂದ ನಾನು ಏನು ಬಯಸು ತ್ತೇನೋ ಅದಿಲ್ಲ. ಔಪಚಾರಿಕವಾಗಿ ಮಾತಾಡ್ತಿದ್ದೀರಿ ಅಷ್ಟೆ."

ಅವನು ಹೇಳಿದ: "ನಿನಗೆ ಹಾಗನ್ನಿಸುತ್ತೆ ಅಷ್ಟೆ."

"ಅಲ್ಲ" ಎಂದು ಅವಳು ತಲೆಯಲ್ಲಾಡಿಸಿ ಹೇಳಿದಳು:

"ನಾನು ತಪ್ಪು ಮಾಡಿದೆ, ನಿಜ. ನನ್ನನ್ನು ಕ್ಷಮಿಸಬೇಕು ಅಂತ ಕೇಳ್ತಿದ್ದಾಳೆ ಅಂದು ಕೊಳ್ಳಬೇಡಿ. ಒಂದು ವೇಳೆ ಕ್ಷಮೆಗೆ ನಾನು ಅನರ್ಹಳಾಗಿರಬಹುದು. ಆ ದ್ರೋಹಿ ನನ್ನನ್ನು ವಂಚಿಸಿದ. ನಾನು ಅವನಲ್ಲೂ ಪ್ರೀತಿ ನಿಸ್ವಾರ್ಥಗಳನ್ನು ಕಾಣಲಿಲ್ಲ. ನೀವು ನನ್ನನ್ನು ಮನಸಾರೆ ಪ್ರೀತಿಸುತ್ತಿದ್ದೀರಿ ಅಂದುಕೊಂಡಿದ್ದೆ. ಅದು ಕಾಣದೇ ಹೋದಾಗ ಮತ್ತೊಬ್ಬನ ಇಂಪಾದ ಮಾತು ಕೇಳಿ ನಾನು ವಶಳಾದೆ."

ಸ್ವಲ್ಪ ಹೊತ್ತು ಬಿಟ್ಟು ಅವಳು ಮತ್ತೆ ಹೇಳಿದಳು: "ಇವತ್ತೂ ನನಗೆ ಗೊತ್ತಿದೆ. ನಿಮ್ಮ ಮನಸ್ಸಿನಲ್ಲಿ ಬೇರೆ ಆಲೋಚನೆ ನಡೀತಿದೆ. ನನ್ನ ಹತ್ತಿರ ಮಾತಾಡುವಾಗ, ಬೇರೊಂದು ವ್ಯಕ್ತಿಯನ್ನು ಕುರಿತು ಆಲೋಚಿಸ್ತಾ ಇರ್‍ತೀರಿ ಅಂತ."

ಅದನ್ನು ಒಪ್ಪಿಕೊಳ್ಳದಂತಹ ಆರೋಪವಾಗಿರಲಿಲ್ಲ ಅದು ಕೇಶವ ಪಿಳ್ಳೆಗೆ. ಒಮ್ಮೆಯೂ ಅವಳೊಡನೆ ನಿರ್ಮಲ ಮನಸ್ಸಿನಿಂದ ವ್ಯವಹರಿಸಿರಲಿಲ್ಲ. ಒಂದಲ್ಲ ಒಂದು

ಸ್ವಾರ್ಥ ಒಂದೊಂದು ಸಂದರ್ಭದಲ್ಲಿಯೂ ಮನಸ್ಸಿನಲ್ಲಿರುತ್ತಿತ್ತು. ಅವಳು ಹೇಳಿದಳು:

"ನಾವು ಪರಸ್ಪರ ಯಾವುದನ್ನೂ ರಹಸ್ಯವಾಗಿಟ್ಟಿರಬೇಕಾಗಿರಲಿಲ್ಲ ಅಲ್ಲವೆ? ನೀವು ತುಂಬು ಪ್ರೀತಿಯಿಂದ ನನ್ನನ್ನು ಚುಂಬಿಸಿದ್ದುಂಟೆ? ನಾನು ನನ್ನ ಸರ್ವಸ್ವವನ್ನೂ ನಿಮಗರ್ಪಿಸಿದ್ದೆ. ನೀವು ನನಗೆ........."

ಅವಳು ಥಟ್ಟನೆ ಮಾತು ನಿಲ್ಲಿಸಿದಳು. ಮುಂದುವರಿಸಲು ಅವಳಿಗೆ ಗಂಟಲು ಕಟ್ಟುತ್ತಿತ್ತು.

ಆಗ ಅವನಿಗೆ ಒಂದು ಪ್ರಶ್ನೆ ಕೇಳುವ ಧೈರ್ಯ ಮೂಡಿತು.

"ನೀನು, ಆ ದಿನ, ಕೊನೆಯ ದಿನ—ಆ ರೂಮಿನಲ್ಲಿ ಭೇಟಿಯಾಗಿದ್ದಾಗ—ನನ್ನನ್ನು ನೀನು ಒದೆ ಕೊಟ್ಟು ಆಚೆಗೆ ತಳ್ಳಿದ್ದಲ್ಲವೆ?"

ಅದನ್ನು ಒಪ್ಪಿಕೊಳ್ಳಲು ತಂಗಮ್ಮ ಸಿದ್ಧಳಾಗಿದ್ದಳು.

"ನಾನು ಹಾಗೆ ಮಾಡಿದ್ದೇನೆ. ಆ ದಿನ ನಿಮಗೆ ಒಬ್ಬ ಗಂಡಸಿನ ಚೈತನ್ಯವಿರಲಿಲ್ಲ. ನೀವು ಕೈಯಲ್ಲಾಗದವರಾಗಿದ್ದಿರಿ. ನನ್ನನ್ನು ಸ್ವಲ್ಪವೂ ಇಷ್ಟಪಟ್ಟಿರಲಿಲ್ಲ. ನಿಮ್ಮ ಮನಸ್ಸೆಲ್ಲ ಬೇರೆ ಏನೋ ಆವರಿಸಿಕೊಂಡಿತ್ತು. ನನಗೆ ಹುಚ್ಚು ಹಿಡಿಸಿದ್ದಿರಿ—ನನಗೆ ಸಹಿಸೋದಕ್ಕೆ ಆಗದೆ ಹೋದಾಗ ನಾನು ಹಾಗೆ ಮಾಡಿದ್ದುಂಟು."

ಎಂದು ಹೇಳಿ ಪುನಃ ಮುಂದುವರಿಸಿದಳು: "ನೀವು ನನ್ನನ್ನು ಒಮ್ಮೆಯೂ ಪ್ರೀತಿಸಿರಲಿಲ್ಲ. ಇನ್ನು ಮೇಲೆ ನಿಮಗೆ ಪ್ರೀತಿಸುವುದಕ್ಕಾಗುವುದೂ ಇಲ್ಲ. ನಿಮಗೆ ಹೆಂಡತಿ ಇದ್ದಾಳೆ. ಮಗು ಇದೆ."

ಅವಳ ಮಾತು ಮುಗಿದಾಗ ನಿಶ್ಶಬ್ದತೆ ಆವರಿಸಿತು. ಹೇಳಬೇಕೆನ್ನಿಸಿದ್ದನ್ನೆಲ್ಲ ಹೇಳಿ ಮುಗಿಸಿದ್ದಳು. ಮನೋವಿಕಾರಕ್ಕೊಳಗಾದವಳೊಬ್ಬಳು ಅವಳಿಗೆ ಹೇಳಬೇಕು ಎನ್ನಿಸಿದ್ದನ್ನೆಲ್ಲ ಹೇಳುತ್ತಿದ್ದಳು. ಅದೆಲ್ಲವೂ ನಿಜವಾಗಿತ್ತು. ಈಗ ತಪ್ಪು ಮಾಡಿರುವವನು ಕೇಶವ ಪಿಳ್ಳೆ. ಇದುವರೆಗೆ ಅವಳು ತಪ್ಪು ಮಾಡಿದವಳಾಗಿದ್ದಳು.

ಕೇಶವ ಪಿಳ್ಳೆ ಕೇಳಿದ: "ನನಗೆ ಪ್ರೀತಿಸುವಷ್ಟು ಶಕ್ತಿಯಿಲ್ಲ, ಒಪ್ಪಿದೆ. ನಿನಗೋ?"

"ನಾನು ಎಂದೆಂದೂ ಪ್ರೀತಿಸಬಲ್ಲೆ. ಆದರೆ, ನನ್ನ ಪ್ರೀತಿಗೇ ಬೆಲೆಯಿಲ್ಲ. ಅದರ ಬೆಲೆ ಪುನಃ ದೊರೆಯುವುದೂ ಇಲ್ಲ."

"ನನ್ನ ಮನಸ್ಸಿನಲ್ಲಿ ನನ್ನ ಹೆಂಡತಿ ಮಗು ಇರೋ ಹಾಗೆ ನಿನ್ನ ಮನಸ್ಸಿನಲ್ಲಿ ಈಗ ರಾಮಚಂದ್ರನ್ ನಾಯರ್ ಇಲ್ಲವಾ?"

"ಇಲ್ಲ. ನಾನು ಅವನನ್ನು ಮರೆತು ಯಾವುದೋ ಕಾಲ ಆಯ್ತು."

"ಅವನಿಗೂ ನಿನ್ನ ಹೃದಯದಲ್ಲಿ ಶಾಶ್ವತವಾದ ಒಂದು ಮುದ್ರೆ ಒತ್ತುವುದಕ್ಕಾಗಲಿಲ್ಲ ಅಂತಲಾ?"

ಅವಳ ಮುಖಭಾವ ಸ್ವಲ್ಪ ಬದಲಾಯಿಸಿತು. ಆ ಮುಖದ ಕಡೆಗೆ ನೋಡುತ್ತ ಸ್ವಲ್ಪ ಗಂಭೀರವಾಗಿ ಕೇಳಿದಳು: "ನನಗೆ ಕ್ರಾಸ್ ಕೊಶ್ಚನ್ ಹಾಕ್ತಿದ್ದೀರಾ?"

ಆ ಮುಖಭಾವದಲ್ಲಿ ಒಂದು ಹೊಸತನವಿತ್ತು. ಹಾಗಿದ್ದ ಮುಖಭಾವವನ್ನು ಮೊದಲು ಒಮ್ಮೆಯೂ ಕಂಡದ್ದಿಲ್ಲ. ಅವಳು ಎದುರೆದುರೇ ಕೇಳುತ್ತಿದ್ದಳು. ಅಷ್ಟಕ್ಕೇ ನಿಲ್ಲಿಸದೆ ಪುನಃ ಕೇಳಿದಳು:

"ನಾನು ನಿಮ್ಮ ಹೆಂಡತಿ ವಿಷಯವಾಗಿ ಏನಾದರೂ ಕೇಳಿದೆನಾ? ಅವಳಿಗೆ ನಿಮ್ಮ ಹೃದಯದಲ್ಲಿ ಯಾವ ಸ್ಥಾನ ಕೊಟ್ಟಿದ್ದೀರಿ ಅಂತ ಕೇಳಿದೆನಾ?"

ಕೇಶವ ಪಿಳ್ಳೆ ನಗುವನ್ನು ತಂದುಕೊಂಡ. ಅವಳಿಗೆ ನಗು ಬರಲಿಲ್ಲ. ನಗುವನ್ನು ತಂದುಕೊಳ್ಳಲೂ ಇಲ್ಲ. ಹಾಗೆ ಪ್ರಶ್ನೋತ್ತರಗಳಾದ ಬಳಿಕ ಇಬ್ಬರ ಮನಸ್ಸುಗಳೂ ಭಾರವಾದಂತೆ ತೋರಿದುವು. ಇಬ್ಬರೂ ಅವರವರ ಮನಸ್ಸಿನಲ್ಲಿಯೇ ಆಲೋಚಿಸುತ್ತ ನಿಂತಿದ್ದರು. ಅದರಲ್ಲಿಯೇ ಮುಳುಗಿದ್ದರು. ಒಂದು ತೀರ್ಮಾನಕ್ಕೆ ಬರಲು ಇಬ್ಬರಿಗೂ ಸಾಧ್ಯವಾಗಿರಲಿಲ್ಲ. ಒಂದು ವೇಳೆ ಅವಳನ್ನು ತನ್ನ ಒಳ ಸೇರಿಕೊಳ್ಳಲು ಅವಳು ಒಪ್ಪಿಗೆ ನೀಡಲೂ ಬಹುದು ಎನ್ನಿಸಿತು ಕೇಶವ ಪಿಳ್ಳೆಗೆ. ಒಂದು ಚುಂಬನಕ್ಕಾಗಿ ಕೂಡ ಅವಳು ಆಸಕ್ತಿ ತೋರಿಸಿದಂತಿರಲಿಲ್ಲ. ಅವಳು ಇಷ್ಟಪಡುವ ಬಿಸಿ ಅದರಲ್ಲಿಲ್ಲ, ಅವಳು ಇಷ್ಟ-ಪಡುವ ಗಾಢಾಲಿಂಗನವೂ.

ಅವನು ಕೇಳಿದ: "ನಾನಿನ್ನು ಹೋಗಲಾ?"

ಕೂಡಲೇ ಹೇಳಿದಳು: "ಹೋಗಬೇಕು ಅನ್ನಿಸಿದರೆ ಹೋಗಿ."

ಹೊರಗೆ ಕಾಲಿರಿಸಿ ಹೇಳಿದ: "ನನಗೆ ಒಂದು ರೀತಿಯ ಹೊಸ ಚೈತನ್ಯ ಬಂದಿದೆ."

ಅವಳು ಒಮ್ಮೆ ನಕ್ಕಳು ಅಷ್ಟೆ.

"ನಾನು ನಾಳೆ ಬರ್ತೀನಿ."

"ಸರಿ."

ಅವನು ಹೋದ. ಅವಳು ಮನೆಯೊಳಕ್ಕೆ ಹೋದಳು.

# [18]

## ಚುನಾವಣೆ

ತಂಗಮ್ಮನಿಗೋಸ್ಕರ ಎದ್ದು ಕಾಣುವಂತಹದನ್ನೇನಾದರೂ ಮಾಡಬೇಕು ಎಂದು ಕೇಶವ ಪಿಳ್ಳೆ ತೀರ್ಮಾನಿಸಿದ. ಜೀವನದಲ್ಲಿ ಅದು ತೀರಿಸಬೇಕಾದ ಋಣವಾಗಿತ್ತು. ಆ ಋಣವನ್ನು ತೀರಿಸಲೇಬೇಕಾಗಿತ್ತು. ಅವಳಿಗೊಂದು ಒಳ್ಳೆಯ ಮನೆ. ಸ್ವಲ್ಪ ಜಮೀನು ಮಾಡಿಕೊಟ್ಟರೇನು ಎನ್ನುವುದು ಅವನಿಗೆ ಮೊದಲು ಹೊಳೆದ ಆಲೋಚನೆ. ಅವಳ ಹತ್ತಿರ ಆ ವಿಚಾರವನ್ನು ಪ್ರಸ್ತಾಪಿಸಿದ. ಬೇಕು ಅನ್ನುವುದಾಗಲೀ ಬೇಡ ಅನ್ನುವುದಾಗಲೀ ಅವಳಿಗಿಲ್ಲ. ತನಗೊಂದು ಮನೆ ಕಟ್ಟಿಸಿಕೊಡುತ್ತಾನೆ ಎಂದು ಮುಖ ಅರಳಿಸಿದ್ದಾಗಲೀ ವಿರಕ್ತಿಯಿಂದ ನನಗೇಕೆ ಮನೆಮಠ? ಎಂದು ಹೇಳಿದ್ದಾಗಲೀ ಅವಳಲ್ಲಿ ಕಂಡು ಬರಲಿಲ್ಲ. ಅವಳಿಗೆ ಆಗಲೂ ಬೇಕಾಗಿದ್ದದ್ದು ಪ್ರೀತಿ ಮಾತ್ರ. ಅವಳ ಪ್ರೀತಿ ಎಂತಹುದು ಎಂದು ಅವನಿಗೆ ಅರ್ಥವೇ ಆಗಿರಲಿಲ್ಲ.

ಕೇಶವ ಪಿಳ್ಳೆಯ ಹತ್ತಿರ ಹಣ ಧಾರಾಳವಾಗಿತ್ತು. ಏನೇ ಇದ್ದರೂ ಅವಳಿಗೊಂದು ಮನೆ ಒಂದಿಷ್ಟು ಭೂಮಿ ಮಾಡಿಕೊಡಬೇಕಾಗಿದ್ದರೆ ಅವಳ ಒಪ್ಪಿಗೆಯನ್ನು ಪಡೆದೇ ತೀರಬೇಕಿತ್ತು. ಭಾಗೀರಥಿ ಅಮ್ಮನಿಗೂ ಅವಳ ನಿಲುವು ಅರ್ಥವಾಗಿರಲಿಲ್ಲ. ಕೇಶವ ಪಿಳ್ಳೆಯ ಸಂಪತ್ತು ಅಭ್ಯುದಯಗಳೆಲ್ಲವೂ ಅವಳ ಕಾರಣದಿಂದಾಗಿ ಲಭಿಸಿದ್ದು. ಅದಕ್ಕೆ ಪ್ರತಿಯಾಗಿ ಏನನ್ನೂ ಅವಳಿಗೆ ಹಿಂದಿರುಗಿಸಿಲ್ಲ. ಒಂದು ಮನೆ ಒಂದಿಷ್ಟು ಭೂಮಿಯಾದರೂ ಅವಳದಾಗಿರಲಿ ಎನ್ನಿಸಿತ್ತು. ಆದ್ದರಿಂದ ಅದಕ್ಕೆ ಅವಳನ್ನು ಒಪ್ಪಿಕೊಳ್ಳುವಂತೆ ತಾಯಿ ಒತ್ತಾಯಪಡಿಸಿದಳು. ತಂಗಮ್ಮ ಒಪ್ಪಿಗೆ ನೀಡಿದಳು. ಆ ರೀತಿಯಲ್ಲಿ ಭೂಮಿ ಕೊಂಡದ್ದಾಯ್ತು. ಒಂದು ಒಳ್ಳೆಯ ಮನೆಯ ಪ್ಲಾನ್ ಕೂಡ ತಯಾರಿಸಿ ಆಯ್ತು.

ಇದೇ ಸಂದರ್ಭದಲ್ಲಿ ರಾಜ್ಯದ ಶಾಸನ ಸಭೆಯ ಚುನಾವಣೆ ಪ್ರಾರಂಭವಾದದ್ದು. ಕಾಂಗ್ರೆಸ್ಸಿನ ಕೂಗನ್ನು ಸರ್ಕಾರ ಪರಿಗಣಿಸುತ್ತಿತ್ತು. ದಿವಾನರು ಕೇಶವ ಪಿಳ್ಳೆಯನ್ನು ಕರೆದು ಚುನಾವಣೆಗೆ ಸಂಬಂಧಪಟ್ಟ ಕಾರ್ಯವನ್ನು ಕೈಗೆತ್ತಿಕೊಳ್ಳೋಣವೇ ಎಂದು ಕೇಳಿದರು. ಕೇಶವ ಪಿಳ್ಳೆ ಕಳೆದುಕೊಂಡಿದ್ದ ಪ್ರೀತಿಯನ್ನು ಸಂಪಾದಿಸುವುದಕ್ಕೆ ಒಳ್ಳೆಯ ಅವಕಾಶ ದೊರೆಯಿತು ಎಂದು ಭಾವಿಸಿದ.

ಅವನು ಹೇಳಿದ: "ತಮಗೆ ಒಪ್ಪಿಗೆಯಿದ್ದರೆ ಮಾಡೋಣ."

ಅವನಿಗೆ ಸ್ವಲ್ಪ ಧೈರ್ಯ ಮೂಡಿದೆ ಎನ್ನಿಸಿತು ದಿವಾನರಿಗೆ. ಹಾಗೆ ರಂಗ ಪ್ರವೇಶಕ್ಕೆ ಅವನಿಗೆ ಮತ್ತೊಂದು ಸಂದರ್ಭ ದೊರೆಯಿತು.

ರಾಜ್ಯವಿಡೀ ಸುತ್ತಿದ್ದು, ಕೇಶವ ಪಿಳ್ಳೆ ಮೊದಲು ಕೈಗೆತ್ತಿಕೊಂಡ ಕೆಲಸ. ಎನ್.

ಎಸ್. ಎಸ್.ಅನ್ನೂ ಎಸ್. ಎನ್. ಡಿ. ಪಿ.ಯನ್ನೂ ಸ್ವಾಧೀನಪಡಿಸಿಕೊಂಡರೆ ಮುಗಿಯಿತು. ಆ ರೀತಿಯಲ್ಲಿ ಹಣವಂತರ, ಜಮೀನ್ದಾರರ ವಿಶ್ವಾಸವನ್ನು ಸಂಪಾದಿಸಲು ಅವನಿಗೆ ಸಾಧ್ಯವಾಯಿತು. ಹೊಸದಾದ ಸಂಘಟನೆಯೂ ರೂಪುಗೊಂಡಿತು. ದಿವಾನರು ಅವನ ಪ್ರಾರಂಭದ ಕಾರ್ಯಕ್ರಮಗಳನ್ನು ಕಂಡೇ ಸಂತುಷ್ಟರಾದರು.

ನಾಮಪತ್ರಗಳ ಪರಿಶೀಲನೆಗೆ ತೊಡಗುವುದು ಒಂದು ಒಳ್ಳೆಯ ಘಟಕವೆಂದು ಕೇಶವ ಪಿಳ್ಳೆ ಭಾವಿಸಿದ. ತುಂಬ ಜನ ಕಾಂಗ್ರೆಸ್ ಮುಂದಾಳುಗಳ ನಾಮಪತ್ರಗಳನ್ನು ಕೆಲವಾರು ಸಣ್ಣಸಣ್ಣ ಕಾರ್ಯಗಳಿಂದಾಗಿ ತಳ್ಳಿಹಾಕಲಾಯಿತು. ಅವರು ಜೈಲುವಾಸವನ್ನನುಭವಿಸಿದವರು. ಮತ್ತೆ ಕೆಲವರು ಉಮೇದುವಾರಿಕೆಯನ್ನು ಹಿಂತೆಗೆದುಕೊಂಡರು. ಹಾಗೆ ಎರಡನೆಯ ಹಂತದಲ್ಲಿಯೂ ಕೇಶವ ಪಿಳ್ಳೆಗೆ ಜಯ ಲಭಿಸಿತ್ತು.

ಹಿಂದಿನಂತೆಯೇ ಧಾರಾಳ ಹಣ ಖರ್ಚು ಮಾಡುವುದಕ್ಕೆ ಅನುಮತಿಯೂ ಇತ್ತು. ಅವನಿಗೆ ಹಣದ ಬಗ್ಗೆ ಅಷ್ಟೊಂದು ಚಿಂತೆಯೂ ಇರಲಿಲ್ಲ.

ತಂಗಮ್ಮನ ಕಟ್ಟಡ ಮೇಲೆ ಬರುತ್ತಿತ್ತು. ಕೆಲಸ ಮುಗಿದಾಗ ತಿರುವನಂತಪುರದ ಬಹುದೊಡ್ಡ ಬಂಗಲೆಗಳಲ್ಲಿ ಒಂದು ಎನ್ನಿಸಿಕೊಳ್ಳುತ್ತದೆ. ಎಷ್ಟು ಖರ್ಚು ಮಾಡಿಕೊಳ್ಳುವುದಕ್ಕೂ ಕೇಶವ ಪಿಳ್ಳೆ ಹಿಂದೆಗೆಯುವುದಿಲ್ಲ.

ಮತ್ತೊಮ್ಮೆ ರಾಜ್ಯದಲ್ಲೆಲ್ಲ ಕೇಶವ ಪಿಳ್ಳೆ ಸಂಚಾರ ಮಾಡಿದ. ಕಾಂಗ್ರೆಸ್ ಮಂಡಲಗಳಲ್ಲೆಲ್ಲ, ಈ ಒಬ್ಬಾತನ ಅಧರ್ಮ ಪ್ರವೃತ್ತಿಗಳನ್ನು ಕುರಿತು ಮುಂದಾಳುಗಳು ಮಾತನಾಡಿಕೊಳ್ಳುತ್ತಿದ್ದರು. ಎಲ್ಲಿ ನೋಡಿದರೂ ಈ ಪ್ರಶ್ನೆ ಏಳುತ್ತಿತ್ತು.

"ಈ ಮನುಷ್ಯ ಇಲ್ಲೇ ವಾಸ ಮಾಡೋ ಉದ್ದೇಶವೋ ಅಥವಾ ಸಹ್ಯಾದ್ರಿ ತುದಿಗೆ ಹೋಗೋದಕ್ಕೋ?"

ಕೇಶವ ಪಿಳ್ಳೆಗೆ ಸದಾ ಅನಾಮಧೇಯ ಪತ್ರಗಳು ಬರತೊಡಗಿದುವು. ಕೈಕಾಲು ಮುರಿದುಹಾಕುತ್ತೇವೆ, ಕತ್ತರಿಸಿ ಚೂರುಚೂರು ಮಾಡಿಹಾಕುತ್ತೇವೆ ಎಂದು ಮುಂತಾಗಿ. ಆಗಲೂ ಪ್ರಜಾಪ್ರಭುತ್ವ ದೊರೆತಲ್ಲಿ ಅವನ ಆಸ್ತಿಪಾಸ್ತಿಯನ್ನು ದೋಚಿಕೊಳ್ಳುತ್ತೇವೆಂದೂ ದೇಶದ್ರೋಹ ಎನ್ನುವುದನ್ನು ಮರೆತಿದ್ದಾನೆ ಎಂದೂ ಎಚ್ಚರಿಕೆಗಳು ಬರತೊಡಗಿದ್ದುವು. ಹಿಂದಿನಂತೆಯೇ 'ಕೇಶವ ಪಿಳ್ಳೆಯನ್ನು ನೇಣುಹಾಕಬೇಕು' ಎನ್ನುವ ಘೋಷಣೆಯೂ ಕೇಳಿಬರುತ್ತಿತ್ತು. ಕೇಶವ ಪಿಳ್ಳೆ ಜನಸಾಮಾನ್ಯರ ಬಹುದೊಡ್ಡ ಶತ್ರುವಾಗಿದ್ದ.

ಕೇಶವ ಪಿಳ್ಳೆ ಹೆದರಲಿಲ್ಲ. ಅವನು ಬದಲಾಯಿಸಿಹೋಗಿದ್ದ. ಹಳೆಯ ಕೇಶವ ಪಿಳ್ಳೆಯಲ್ಲ. ಅವನ ಬುದ್ಧಿಶಕ್ತಿ ಜಾಗೃತಗೊಂಡಿತ್ತು. ಆಡಳಿತಯಂತ್ರದ ಒಂದು ಅಂಗವೇ ಆಗಿ ಪರಿವರ್ತನೆ ಹೊಂದಿದ.

ಎರಡು ಮೂರು ಸ್ಥಳಗಳಲ್ಲಿ ಆಕ್ರಮಣದ ಉದ್ದೇಶದಿಂದ ಜನರ ಗುಂಪು ಅವನನ್ನು ಬಳಸುತ್ತಿತ್ತು. ನಿರ್ಭಯತೆಯೇ ಅವನನ್ನು ರಕ್ಷಿಸಿದ್ದು ಎಂದು ಹೇಳಬಹುದು.

ಆದರೆ ಒಂದು ಕಾಗದ ಅವನನ್ನು ಹಿಡಿದು ಅಲುಗಾಡಿಸಿತು. ಆದರೆ ಆ ನಡುಕ ಅವನು ಕುಸಿದು ಬೀಳುವಂತೆ ಮಾಡಲಾಗಲಿಲ್ಲ. ಒಂದು ದಿನ ಅವನಿಗೆ ಒಂದು ಕಾಗದ ಸಿಕ್ಕಿತು. ಮುಕುಂದನ್ ಎನ್ನುವ ಒಬ್ಬಾತ ಬರೆದಿದ್ದ ಕಾಗದ ಅದು. ಏತಕ್ಕಾಗಿ ತನ್ನ ತಂದೆಯನ್ನು ಹೊಡೆದು ಸಾಯಿಸಿ ಮರಕ್ಕೆ ತೂಗುಹಾಕಿದ್ದು ಎಂದು ಆ ಕಾಗದದಲ್ಲಿ ಕೇಳಿದ್ದ. ಆ ಕಾಗದ ಬರೆದಿದ್ದಾತ ನಂಬಿದ್ದು ಕೇಶವ ಪಿಳ್ಳೆಯೇ ಹೊಡೆದು ಸಾಯಿಸಿದ್ದು ಎಂದು. ಅವನು ಭಯಪಡಿಸಿ ಏನೂ ಬರೆದಿರಲಿಲ್ಲ. ಯಾವುದಾದರೂ ಪ್ರತೀಕಾರ ವನ್ನೆಸಗುತ್ತೇನೆ ಎಂದೂ ಅಲ್ಲ. ಆದರೆ ಅವನು ತನ್ನ ತಂದೆಯನ್ನು ಕೊಂದದ್ದು ಕೇಶವ ಪಿಳ್ಳೆ ಎಂದು ನಂಬಿದ್ದ. ಅದೇತಕ್ಕೆ ಎಂದು ತಿಳಿಯಬೇಕಾಗಿತ್ತು. ಅಷ್ಟು ಮಾತ್ರ ಅವನಿಗೆ ಬೇಕಾಗಿದ್ದದ್ದು.

ತಂದೆಯ ಸಂಪಾದನೆಯಾಗಿ ಕೇಸಿನಲ್ಲಿ ದೊರೆತ ಮನೆಯ ಮಾಲೀಕನಾಗಿ ಹಾಗೆ ಅಲೆದಾಡುತ್ತಿದ್ದ ಒಬ್ಬ ಮನುಷ್ಯನಂತೆ ಆ ಕಾಗದವ್ಯಕ್ತಿ ಕೇಶವ ಪಿಳ್ಳೆಗೆ ಕಂಡುಬಂದದ್ದಲ್ಲ. ಒಂದು ಆಯುಧವನ್ನು ಹಿಡಿದು ತನ್ನ ಮುಂದೆ ನಿಂತಿದ್ದಂತೆ. ತಾನು ಹೋದಲ್ಲೆಲ್ಲಾ, ಜನಗಳ ಗುಂಪಿನಲ್ಲಿ, ಜನರಿಲ್ಲದ ಕಡೆಗಳಲ್ಲಿ. ಮನೆಯಲ್ಲಿರುವಾಗ. ಮನೆಯ ಹೊರ ಗಿದ್ದಾಗ ಸಮಯ ಕಾಯುತ್ತಾ ತಲೆಮರೆಸಿಕೊಂಡು ಹಿಂಬಾಲಿಸುತ್ತಿರುವ ಒಬ್ಬಾತ ನಿದ್ದಾನೆಂದು ಕೇಶವ ಪಿಳ್ಳೆಗೆ ತೋರಿತು. ಜೀವನದಲ್ಲಿ ಅದೊಂದೇ ಒಂದು ಉದ್ದೇಶ ವನ್ನಿಟ್ಟುಕೊಂಡಿದ್ದ ಒಬ್ಬಾತ. ಅಂತಹ ಒಬ್ಬಾತನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆ ಭಯ ತನ್ನನ್ನು ಹೇಗೆ ಆವರಿಸಿತು ಎನ್ನುವುದು ತಿಳಿಯದು. ಅನಾಮಧೇಯ ಪತ್ರಗಳು ಅವನನ್ನು ಭಯಪಡಿಸಿರಲಿಲ್ಲ. ಆದರೆ ಆ ಕಾಗದ ಅವನಿಗೆ ಭಯವನ್ನುಂಟುಮಾಡಿತು.

ಒಂದು ನಿಮಿಷ ಏನು ಮಾಡುವುದಕ್ಕೂ ತೋರದೆ ಸುಮ್ಮನೆ ಕುಳಿತಿದ್ದ. ತನ್ನ ಸುತ್ತಮುತ್ತ ಎಲ್ಲಿಯಾದರೂ ಇರಬಹುದೇ ಎಂದು ಸುತ್ತಲೂ ಕಣ್ಣಾಡಿಸಿದ. ಆಗ ಅವನಿಗೆ ಒಂದು ದಾರಿ ತೋರಿತು. ಎಷ್ಟು ಕಾಲದ ವರೆಗೆ ಈ ಮುಕುಂದ ಎನ್ನುವ ವ್ಯಕ್ತಿ ಯನ್ನು ಜೈಲಿನಲ್ಲಿ ಹಾಕಬೇಕಾಗಿತ್ತೋ ಅಷ್ಟು ಕಾಲದ ಶಿಕ್ಷೆ ವಿಧಿಸುವಂತಹ ಅಪರಾಧ ದಲ್ಲಿ ಅವನನ್ನು ಸಿಕ್ಕಿಸಬೇಕೆಂದು ಪೋಲೀಸಿನವರಿಗೆ ಬರೆದು ತಿಳಿಸಬೇಕು ಎಂದು ಆಲೋ ಚಿಸಿ ಕೂಡಲೇ ಒಂದು ಕಾಗದ ಬರೆದು ತಿಳಿಸಿದ. ಆದರೆ ಆ ಕೆಲಸವನ್ನು ಕೇಶವ ಪಿಳ್ಳೆ ಆತ್ಮಸಾಕ್ಷಿಯಾಗಿ ಮಾಡಿದುದಲ್ಲ. ಅವನ ಮನಸ್ಸಮಾಧಾನಕ್ಕಿದ್ದ ಬೇರೆ ದಾರಿ ಮತ್ತಾವುದು?

ಕೆಲಸದ ಒತ್ತಡದಲ್ಲಿ ಆ ಘಟನೆ ಹಾಗೆಯೇ ಮರೆಯಿತು.

ನಾಡಿಡೀ ಓಡಾಡಿಕೊಂಡಿದ್ದ ಕಾಲದಲ್ಲಿ ಒಂದು ದಿನ ಕೇಶವ ಪಿಳ್ಳೆ ಊರಿಗೆ ಹೋದ. ತಂದೆ ತಾಯಿಗಳು ಮಗನನ್ನು ಕಾಣುವ ಕಾತರದಿಂದಿದ್ದರು. ಆ ಹಳ್ಳಿಯ ಮುದುಕಿಗೆ ಒಂದು ಸಾವಿರ ಪ್ರಶ್ನೆಗಳನ್ನು ಕೇಳುವುದಿತ್ತು. ಮಗನ ಅಭ್ಯುದಯದಲ್ಲಿ ಸಂತೃಪ್ತಳಾದವಳಂತೆ ತಾಯಿ ಕೇಳಿದಳು:

"ಇನ್ಮೇಲೆ ಈ ನೌಕರಿ ಬೇಡ ಅಂತ ಕೈಬಿಟ್ಟು ಊರಿಗೆ ಬಂದು ಹಾಯಾಗಿ ಇರಬಾರದೇನಪ್ಪ?"

"ಯಾಕಮ್ಮಾ?"

"ನೀನು ತಿರುವನಂತಪುರದಲ್ಲಿ ಒಂದು ದೊಡ್ಡ ಮನೆ ಕಟ್ಟಿಸ್ತಿದ್ದೀಯಾ?" ಮುಖಭಾವವನ್ನು ಬದಲಿಸದೆ ಕೇಶವ ಪಿಳ್ಳೆ ಉತ್ತರಿಸಿದ:

"ಇಲ್ಲ. ನಾನು ತಿರುವನಂತಪುರದಲ್ಲಿ ಮನೆ ಕಟ್ಟಿಸ್ತಿದ್ದೀನೀಂತಲಾ? ಯಾತಕ್ಕೆ?"

ಕುಟ್ಟಿಯಮ್ಮ ಕೇಶವ ಪಿಳ್ಳೆಯನ್ನು ಅಡಿಯಿಂದ ಮುಡಿಯ ವರೆಗೆ ತೀಕ್ಷ್ಣವಾಗಿ ಒಮ್ಮೆ ನೋಡಿದಳು. ಆ ನೋಟವನ್ನು ಕಂಡಾಗ ಕೇಶವ ಪಿಳ್ಳೆ ಹತ್ತೋ ಹನ್ನೆರಡೋ ವರ್ಷದ ಹುಡುಗನಂತಾದಂತೆ ತೋರಿತು. ಶಿಕ್ಷಿಸುವುದಕ್ಕೋಸ್ಕರ ಅವಳು ಕೇಳಿದಂತಿತ್ತು. ಮಗ ಒಂದು ತಪ್ಪು ಮಾಡಿದ್ದಾನೆ; ಸುಳ್ಳು ಹೇಳುತ್ತಿದ್ದಾನೆ—ಎನ್ನುವಂತೆ. ಕೇಶವ ಪಿಳ್ಳೆ ಸ್ವಲ್ಪ ತಾತ್ಸಾರವಾಗಿಯೇ ಇದ್ದ. ಅವಳು ಅಧಿಕಾರ ವಾಣಿಯಲ್ಲೇ ಕೇಳಿದಳು:

"ಹ್ಞೂಂ. ನೀನು ಕಟ್ಟಿಸ್ತಾ ಇಲ್ಲ. ಅಲ್ವಾ? ಏನೋ ನೀನು ಎದುರಿಗೇ ಸುಳ್ಳು ಹೇಳೋದು ಕಲ್ತಿಯಾ?"

ನಂತರ ಗಂಡನ ಹತ್ತಿರ ಹೇಳಿದ್ಳು:

"ನೋಡಿದಿರಾ ಇವನ್ನ! ಎದುರುಗಡೆಯಲ್ಲೇ ಸುಳ್ಳುಹೇಳೋದನ್ನ!"

ಪಪ್ಪು ಪಿಳ್ಳೆ ವೇದನೆಯಿಂದ ಹೇಳಿದರು:

"ನಾನೆಲ್ಲ ನೋಡಿದೆ."

ಕೇಶವ ಪಿಳ್ಳೆ ತಾನು ನಿರಪರಾಧಿ ಎಂದು ಹೇಳಿದ:

"ಅಮ್ಮನೂ ಅಪ್ಪನೂ ಇದೇನು ಹೇಳುತ್ತಿರೋದು?"

"ನಾನು ಏನು ಹೇಳಿದೆ ಅಂತ?"

ಒಂದು ಕ್ಷಣ ಬಿಟ್ಟು ಅಮ್ಮ ಪ್ರಾರಂಭಿಸಿದಳು:

"ನೀನು ಶ್ರೀ ಪದ್ಮನಾಭನ ಹತ್ತು ನಾಣ್ಯ ಸಂಪಾದಿಸಲಿ ಅಂತ ನಾವಿಬ್ಬರೂ ದೇವರಲ್ಲಿ ಪ್ರಾರ್ಥಿಸಿಕೊಳ್ತಿದ್ದೆವು. ಅದಕ್ಕಾಗಿ ನಾವು ಕಷ್ಟಪಟ್ಟೆವು. ದೇವರು ಅದನ್ನು ನಡೆಸಿಯೂ ಕೊಟ್ಟ. ನಾವು ಯಾಕೆ ದೇವರಲ್ಲಿ ಪ್ರಾರ್ಥಿಸಿದೆವು ಅಂತ ನಿನಗೆ ಗೊತ್ತ? ಅದಕ್ಕೆ ಒಂದು ಅಂತಸ್ತಿದೆ, ಶ್ರೀಮಂತಿಕೆಯಿದೆ. ಕದಿಯೋದೋ ವಂಚನೆಯೋ ಇಲ್ಲವಲ್ಲ ಅಂತ ನಾನು ಭಾವಿಸಿದ್ದೆ. ಆ ಹಣ ಪರಿಶುದ್ಧವಾದ ಹಣ. ಈಗ ನೀನು ಮಾಡ್ತಿರೋ ಕೆಲಸ ಅದಕ್ಕೆ ವಿರುದ್ಧವಾಗಿ ಅಲ್ವೇನಪ್ಪಾ?"

ಪಪ್ಪು ಪಿಳ್ಳೆಗೆ ಆ ಸಂಗತಿಯನ್ನು ಕುರಿತು ತಾನೂ ಸ್ವಲ್ಪ ಮಾತನಾಡಬೇಕೆನ್ನಿಸಿತು.

"ಸಂಬಳ ಅಲ್ಲದೆ ಬೇರೆ ರೀತಿಯಲ್ಲಿ ನಾಲಕ್ಕಾಸು ತೆಗೆದುಕೊಳ್ಳುವುದಾದರೂ ತೊಂದರೆಯಿಲ್ಲ. ಅದು ಸರ್ಕಾರಿ ಕೆಲಸಕ್ಕೆ ಹೇಳಿದ್ದೇ. ಆದರೆ ದ್ರೋಹಮಾಡಬಾರದು."

ಆಗಿನ ಮನಸ್ಥಿತಿಯಲ್ಲಿ ಕೇಶವ ಪಿಳ್ಳೆಗೆ ಈ ರೀತಿಯ ಮಾತುಕತೆಗಳು ಇಷ್ಟವಾಗಲಿಲ್ಲ. ಅವನ ಪ್ರಶ್ನೆಯಲ್ಲಿ ಅದು ಸ್ವಲ್ಪ ಸೂಚ್ಯವಾಗಿ ಕಂಡುಬಂದಿತು.

"ಅಪ್ಪ ಅಮ್ಮ ಹೇಳ್ತಾ ಇರೋದೇನು? ದೇಶ ಇಡೀ ಬಾಯಿಗೆ ಬಂದ ಹಾಗೆ ಅನ್ನಿದೆ. ಈಗ ನೀವೂ ಪ್ರಾರಂಭಿಸಿದ್ದೀರಾ? ನಾನೇನು ಮಾಡಬೇಕು ಅಂತ?"

ಅಮ್ಮ ಹೇಳಿದಳು:

"ನೀನು ಇದಕ್ಕಿಂತ ಹೆಚ್ಚಾಗಿ ಏನೂ ಮಾಡಬೇಕಾದ್ದಿಲ್ಲ. ಪತ್ರಿಕೆಗಳು ಹಾಗೇ ಹೇಳುತ್ತಿವೆ. ದೇಶವೂ ಹಾಗೇ ಹೇಳ್ತಿದೆ. ನಾನು ಯಾವುದನ್ನೂ ನೋಡೋದೂ ಇಲ್ಲ ಕೇಳೋದೂ ಇಲ್ಲ. ನನಗೇನಾದರೂ ಓದೋದಕ್ಕೆ ಬರುತ್ತಾ? ಎಲ್ಲರೂ ಹೇಳೋದನ್ನ ಕೇಳಿಸ್ಕೊಳ್ತೀನಿ ಅಷ್ಟೆ. ಅದನ್ನು ಕೇಳಿದಾಗ ನನ್ನ ಗಂಟಲು ದೊಡ್ಡದಾಗುತ್ತೆ ಅಷ್ಟೆ."

ಅಮ್ಮ ಮಗನಿಗೆ. ಮಗನ ಈ ಪ್ರಾಯದಲ್ಲೂ ಮನಮುಟ್ಟುವಂತೆ ಧರ್ಮೋಪದೇಶ ಮಾಡಿದಳು. "ಮಗನೇ, ಸತ್ಯ ಧರ್ಮ ನೀತಿ ಇವು ಯಾವುವೂ ಇಲ್ಲದಿದ್ದರೆ ಮನುಷ್ಯ ಶೋಭಿಸೋದಿಲ್ಲ."

ಕುಟ್ಟಿಯಮ್ಮ ಅವನ ಮುಖವನ್ನೇ ನೋಡುತ್ತಾ ಕೇಳಿದಳು:

"ನೀನು ಒಂದು ಹೆಣ್ಣಿಗೋಸ್ಕರನಾ ತಿರುವನಂತಪುರದಲ್ಲಿ ದೊಡ್ಡ ಕಟ್ಟಡ ಕಟ್ಟಿಸ್ತಿರೋದು?"

ಆ ಪ್ರಶ್ನೆಯನ್ನು ಎದುರಿಸಲು ಸಾಧ್ಯವಾಗಲಿಲ್ಲ. ನಿಷ್ಕಳಂಕತೆಯನ್ನು ವ್ಯಕ್ತಪಡಿಸಲು ಸಾಧ್ಯವಾಗಲಿಲ್ಲ. ಅಮ್ಮ ಮತ್ತೆ ಕೇಳಿದಳು:

"ಅವಳಾ ನಿನಗೆ ಕೆಲಸ ಕೊಡಿಸಿಕೊಟ್ಟದ್ದು? ಯಾವುದೋ ದೊಡ್ಡ ಉದ್ಯೋಗಸ್ಥನ ಮಗಳಂತೆ!"

ತನಗರಿವಿಲ್ಲದಂತೆಯೇ ಅವನಿಗೆ ಅಳು ಬಂದಿತು. "ಅಮ್ಮನಿಗದೆಲ್ಲಾ ಯಾಕೆ? ಬೇಡದ್ದಕ್ಕೆಲ್ಲಾ ತಲೆಹಾಕಬಾರದು."

ಪಪ್ಪು ಪಿಳ್ಳೆ ಥಟ್ಟನೆ ಎದ್ದು ನಿಂತರು.

"ಲೋ ಲೋ. ನೀನು ದೊಡ್ಡ ಮನುಷ್ಯನಾದೆ. ನನಗೆ ಅರ್ಥವಾಯ್ತು. ಸಿಟ್ಟನ್ನೆಲ್ಲ ಆಚೇಲಿಟ್ಟು ಮಾತಾಡು."

ಕುಟ್ಟಿಯಮ್ಮ ಸುಮ್ಮನಾಗಲಿಲ್ಲ.

"ಹಾಗಾದರೆ ಈ ಹೆಂಗಸರು ಮಾತಾಡ್ಕೊಳ್ತಿದ್ದದ್ದು ನಿಜಾ ಅನ್ನು. ನೀತಿಕೆಟ್ಟವನೆ! ನೀನು ಅದನ್ನ ಮೊದಲೇ ಹೇಳಿದ್ದರೆ ಎರಡು ಹೆಣ್ಣುಮಕ್ಕಳು ಹಾಳಾಗೋದು ತಪ್ಪಿತ್ತಲ್ಲೋ?"

ಕೇಶವ ಪಿಳ್ಳೆ ವಿವೇಕವನ್ನು ಕಳೆದುಕೊಂಡ. ಇದೆಲ್ಲಾ ಅವನು ತಿಳಿದಿರಬೇಕಾದದ್ದು. ಇದನ್ನು ಕುರಿತು ಆಲೋಚಿಸಿರಲೂ ಬೇಕಾದದ್ದು. ಆದರೆ ಅಮ್ಮ ಮುಖ ನೋಡುತ್ತಾ ಆ ಪ್ರಶ್ನೆಯನ್ನು ಕೇಳುತ್ತ ಅಷ್ಟೆಲ್ಲಾ ಮಾತನಾಡಿದಾಗ ಅವನಿಗೆ ಅದನ್ನು ಸಹಿಸಲಾಗ

ಲಿಲ್ಲ. ಈ ಸ್ಥಿತಿ ಅವನಿಗೆ ಹಿಂದೆಂದೂ ಬಂದಿರಲಿಲ್ಲ. ಮಾಡಿದ ತಪ್ಪನ್ನು ತಿಳಿದು ಅದನ್ನು ಸಹಿಸಿಕೊಂಡು ಜೀವನವಿಡೀ ನಡೆದಾಡಬೇಕಾಗಬಹುದು. ಆದರೆ ಅದನ್ನು ಕುರಿತು ಯಾರಾದರೂ ಜ್ಞಾಪಿಸಿದಾಗ ಅಪರಾಧಿ ಎನ್ನುವ ಪ್ರಜ್ಞೆ ಉಂಟಾಗಬಹುದು. ಅದ ರಿಂದುಂಟಾದ ಸಿಟ್ಟಿನಿಂದಾಗಿ ಮನೋನಿಯಂತ್ರಣವಿಲ್ಲದಂತಾಗಬಹುದು. ಆ ಸಂದರ್ಭ ದಲ್ಲಿ ಬುದ್ಧಿ ಕೆಟ್ಟಂತೆಯೂ ಆಗಬಹುದು. ಕೇಶವ ಪಿಳ್ಳೆ ಸ್ವಲ್ಪ ಧ್ವನಿಯನ್ನು ಎತ್ತರಿಸಿ ಕೇಳಿದ:

"ಒಮ್ಮೆಯೂ ನನ್ನನ್ನ ಮೇಲೆ ಬರೋದಕ್ಕೆ ಬಿಡೋದಿಲ್ಲ. ಈಗಲೂ ಬಿಡ್ತಾ ಇಲ್ಲ ಅಲ್ಲವಾ?"

ಆ ರೀತಿಯಲ್ಲಿ ಮಾತನಾಡುವ ಒಬ್ಬ ಮಗನನ್ನೂ ಆ ತಂದೆಯೂ ತಾಯಿಯೂ ಕೇಳಿದ್ದೂ ಇಲ್ಲ, ಕಂಡದ್ದೂ ಇಲ್ಲ. ಅವನು ಹಾಗೆ ಹಿಂದೆಂದೂ ಮಾತನಾಡಿದ್ದೂ ಇಲ್ಲ. ಅವರು ಸ್ತಂಭೀಭೂತರಾಗಿಹೋದರು. ಆ ಮೂಕತೆಯಿಂದ ಮೊದಲು ಎಚ್ಚರ ಗೊಂಡದ್ದು ಪಪ್ಪು ಪಿಳ್ಳೆ.

"ನಿಲ್ಲೋ, ನಿಲ್ಲೋ. ನೀನೇನ್ಹೇಳಿದ್ದು?"

ಕುಟ್ಟಿಯಮ್ಮ ಆ ಮಾತನ್ನು ಪೂರೈಸಿದಳು. "ಹೌದಪ್ಪಾ, ನಾವು ನಿನಗೆ ಒಳ್ಳೇ ದಾಗೋದಕ್ಕೆ ಅಡ್ಡಿಯಾಗಿದ್ದೆವು."

ಗಟ್ಟಿಯಾಗಿ ಅಳುತ್ತಾ ಅವಳು ಹೇಳಿದಳು:

"ಹೌದಪ್ಪಾ ಅಡ್ಡಿಯಾಗಿದ್ದೆವು. ನಿನಗದನ್ನು ಹೇಳೋದಕ್ಕೆ ಹೇಗೆ ನಾಲಗೆ ಬಂತು?" ಎಂದು ಕೇಳಿದಳು ಆ ಹಳ್ಳಿಯ ಮುದುಕಿ.

"ಅಯ್ಯೋ ದೇವರೇ, ಇದನ್ನೂ ಕೇಳಬೇಕಾಗಿ ಬಂತಲ್ಲಪ್ಪಾ" ಎಂದು ಹೇಳುತ್ತಾ ಕೈಮುಷ್ಟಿಯಿಂದ ಎದೆ ಬಡಿದುಕೊಳ್ಳುತ್ತಿದ್ದಳು. ಪಪ್ಪು ಪಿಳ್ಳೆ ಓಡಿಹೋಗಿ ಅವಳ ಕೈ ಹಿಡಿದುಕೊಂಡರು. ಅವರೂ ಅಳುತ್ತಿದ್ದರು.

"ಅಯ್ಯೋ ಚಂಡಾಲ! ನೀನು ಹಾಗನ್ನೋದೇನೋ?"

ಇಂತಹ ಒಂದು ದೃಶ್ಯವನ್ನು ಕೇಶವ ಪಿಳ್ಳೆ ನಿರೀಕ್ಷಿಸಿರಲಿಲ್ಲ. ಅವನು ಆ ಸ್ಥಳ ವನ್ನು ಬಿಟ್ಟು ಬೇರೆ ಕಡೆಗೆ ಹೋದ.

ಅನಂತರ ರೂಮಿನೊಳಕ್ಕೆ ಹೋಗಿ ಬಿದ್ದುಕೊಂಡ. ಅವನ ಮಗಳು ತೊಟ್ಟಿಲಿನಲ್ಲಿ ಮಲಗಿದ್ದಳು. ಹೊರಗೆ ಪಡಸಾಲೆಯಲ್ಲಿ ಅಮ್ಮ ಬಿಕ್ಕಿಬಿಕ್ಕಿ ಅಳುವ ಶಬ್ದ ಕೇಳಿಬರು ತ್ತಿತ್ತು. ತಂದೆ ಸಮಾಧಾನಪಡಿಸುತ್ತಿದ್ದರು. ಮಧ್ಯೆ ಮಧ್ಯೆ ಕೇಶವ ಪಿಳ್ಳೆಯನ್ನು ಬಯ್ಯುತ್ತಲೂ ಇದ್ದರು. "ಹೊಗೆಯಾಡೋ ಕೊಳ್ಳಿ ಹೊರಗೆ ಹೋಗಲಿ ಬಿಡೆ. ನಮ ಗಾಗೊ ಅಷ್ಟು ಇದೆ. ಅವನ ಅರಮನೆ, ಭೂಮಿ, ಹಣ, ಅವನ ಪ್ರತಾಪ ಯಾವುದೂ ನಮಗೆ ಬೇಡ. ಅವನ್ನ ಇಲ್ಲಿಂದ ಹೋಗು ಅಂತ ಹೇಳು" ಎಂದು ಪಪ್ಪು ಪಿಳ್ಳೆ ಹೇಳು ತ್ತಿದ್ದರು.

ತಂದೆಯ ಸ್ವಭಾವ ಅವನಿಗೆ ಗೊತ್ತಿತ್ತು. ಒಂದು ಸಲ ಬೇಡವೆಂದಾದರೆ ಅದು ಯಾವ ಕಾಲಕ್ಕೂ ಬೇಡ. ಅದೇ ಆ ದೃಢ ಸ್ವಭಾವವುಳ್ಳ ವ್ಯವಸಾಯಗಾರನ ಸ್ವಭಾವ.

ಆ ಗಲಾಟೆಯನ್ನು ಕೇಳಿ ಅಕ್ಕಪಕ್ಕದ ಮನೆಯವರೆಲ್ಲಿ ಬಂದು ಸೇರಿಬಿಡುತ್ತಾರೋ ಎಂದು ಕೇಶವ ಪಿಳ್ಳೈ ಹೆದರಿದ. ಯಾರಿಗಾದರೂ ಗೊತ್ತಾದರೆ ಆ ಕತೆಯನ್ನು ಬಣ್ಣಕಟ್ಟಿ ಹರಡುತ್ತಾರೆ. ನಾಳೆಯ ಪತ್ರಿಕೆಯಲ್ಲಿ ತಾಯಿಯನ್ನೂ ಹೊಡೆದವನು ಎಂದೂ ಬರಬಹುದು.

ಕೇಶವ ಪಿಳ್ಳೈ ತಾನು ಯಾವ ರೀತಿಯಲ್ಲಿ ವಿವೇಕವನ್ನು ಕಳೆದುಕೊಂಡೆ ಎಂದು ಆಲೋಚಿಸಿದ. ತಾನು ಹೇಳಿದುದು ಕಟುವಾಯಿತೆ? ಅಷ್ಟೊಂದು ಮನಸ್ಸು ನೋಯಿಸುವಂಥದೇನು ಹೇಳಿದೆ? ಅಭಿವೃದ್ಧಿಗೆ ಅಡ್ಡಿಮಾಡುತ್ತೀರಿ ಎಂದಷ್ಟೇ ಅಲ್ಲವೇ ತಾನು ಹೇಳಿದ್ದು? ಅದರಲ್ಲಿ ಅಷ್ಟೊಂದು ನೊಂದುಕೊಳ್ಳುವುದೇನಿದೆ? ತಾನು ಹಾಗೆ ಹೇಳುವಾಗ ತನ್ನ ಮನಸ್ಸಿನಲ್ಲೇನಿತ್ತೆಂದು ಆಲೋಚಿಸಿದ. ಮದುವೆಯೆ? ತಂಗಮ್ಮನಿಗೂ ತನಗೂ ಇರುವ ಸಂಬಂಧವನ್ನು ಕುರಿತೂ ಇರುವ ಒಂದು ಪುನರಾಲೋಚನೆಯನ್ನು ತನಗರಿವಿಲ್ಲದಂತೆಯೇ ಅವನು ಮಾಡಿದ್ದ. ಅಂದು ಈ ಮದುವೆಯ ಗಂಟು ಬೀಳದೆ ಇದ್ದಿದ್ದರೆ ಬದುಕು ಇದಕ್ಕಿಂತಲೂ ಉನ್ನತವಾಗಿರುತ್ತಿತ್ತೋ ಅಥವಾ ಆಗಿರುತ್ತಿರಲಿಲ್ಲವೊ? ಯಾವುದನ್ನೂ ಹೇಳಲು ಸಾಧ್ಯವಿಲ್ಲ. ಈ ಮದುವೆ ಅವನ ಅಭ್ಯುದಯಕ್ಕೆ ಅಡ್ಡಿಪಡಿಸದೆ ಇರಬಹುದು. ತಂಗಮ್ಮನನ್ನು ಮದುವೆ ಮಾಡಿಕೊಳ್ಳದ್ದರಿಂದ ಉಂಟಾದ ದೋಷವಾದರೂ ಏನು? ದೋಷವೇನೂ ಇಲ್ಲ. ಆದರೆ ಇದಕ್ಕಿಂತಲೂ ಹೆಚ್ಚಾದ ಅನುಕೂಲ ದೊರೆಯುತ್ತಿತ್ತು ಎಂದಾಗುತ್ತಿರಲಿಲ್ಲವೆ? ಇಂದು ಅದನ್ನು ನೋಡಲು ಸಾಧ್ಯವಿಲ್ಲ. ಒಂದು ವೇಳೆ, ಆ ಒಡನಾಟ ಹೆಚ್ಚಾಗಿ ಅನುಕೂಲತೆಗಳನ್ನು ಒದಗಿಸಿಕೊಡುತ್ತಿತ್ತು ಎಂದೂ ಆಗಬಹುದು. ಸೆಕ್ರೆಟರಿಯ ಸ್ಥಾನ ಶಾಶ್ವತವಾಯಿತು ಎಂದೂ ಆಗುತ್ತಿತ್ತು.

ಆ ಪ್ರವಾಹದಲ್ಲಿ ತೇಲಿಹೋಗಲು ತಾನಾಗಿ ಸಮ್ಮತಿಸಿದ್ದ. ಆ ಕಡೆ ಪಡಸಾಲೆಯಲ್ಲಿ ತಾಯಿ ಮಾತನಾಡುತ್ತಿದ್ದುದನ್ನು ನಿಲ್ಲಿಸಿದಂತೆ ತೋರಿತು. ತಂದೆ ತಾಯಿ, ತನ್ನ ಪುರೋಭಿವೃದ್ಧಿಗೆ ಅಡ್ಡಿ ಮಾಡುತ್ತಿರಲಿಲ್ಲವೆಂದೇ ಇಟ್ಟುಕೊಳ್ಳೋಣ. ಆದರೂ ಏನೋ ಅವರಿಂದ ತಡೆಯುಂಟಾಗುತ್ತಿದೆ ಎನ್ನಿಸುತ್ತಿತ್ತು. ಜೀವನದಲ್ಲಿ ಪರಿಪೂರ್ಣತೆಯನ್ನು ಸಾಧಿಸಿದಂತೆ ಅವನಿಗೆ ಒಮ್ಮೆಯೂ ತೋರಿರಲಿಲ್ಲ. ಆ ಪೂರ್ಣತೆಯನ್ನು ಪಡೆಯುವುದಕ್ಕಾಗಿಯೂ ಅಲ್ಲ ತಾನು ಪುನಃ ತಂಗಮ್ಮನಿಗೆ ಹತ್ತಿರದವನಾಗುತ್ತಿರುವುದು. ಕೇಶವ ಪಿಳ್ಳೈ ಜೀವನವನ್ನು ಕುರಿತು ಅಷ್ಟೊಂದು ಆಳವಾಗಿ ಚಿಂತಿಸಿರಲೂ ಇಲ್ಲ.

ಕಾತ್ಯಾಯಿನಿ ತನ್ನ ಜೀವನದಲ್ಲಿ ಪ್ರವೇಶಿಸದೆ ಇದ್ದಿದ್ದರೆ ಈ ಹೃದಯವನ್ನು ಸಂಪೂರ್ಣವಾಗಿ ತಂಗಮ್ಮನಿಗಾಗಿ ಸಮರ್ಪಿಸಬಹುದಾಗಿತ್ತಲ್ಲವೇ ಎಂದು ಕೇಶವ ಪಿಳ್ಳೈ ಆಲೋಚಿಸಿದ. ತಂಗಮ್ಮನಿಗೆ ತನ್ನ ಪ್ರೀತಿ ದೊರೆಯಲಿಲ್ಲ. ಅವಳು ಹೇಳುವುದು ಸತ್ಯ.

ಮೊತ್ತಮೊದಲು ತನ್ನ ಹೃದಯವನ್ನು ಪ್ರವೇಶಿಸಿದವಳು ಅವಳು. ತಂಗಮ್ಮ! ಅವಳಿಗೆ ಅನಂತರ ತನ್ನ ಹೃದಯದಲ್ಲಿ ಸ್ಥಾನವಿಲ್ಲದಾಯಿತು.

ಒಂದೊಂದು ದಿನವೂ ಅವಳು ಹೊಸದಾಗಿ ಕಾಣಿಸುತ್ತಾಳೆ. ಅದಕ್ಕೆ ಕಾರಣವೂ ಇದೆ. ಅವಳು ಹತ್ತಿರ ಇದ್ದರೆ ಹೊತ್ತುಹೋಗುವುದೇ ತಿಳಿಯುವುದಿಲ್ಲ ಎನ್ನಿಸಿತು ಅವನಿಗೆ. ಬಾಳಿನಲ್ಲಿ ಮಂಕು ಕವಿದ ಈ ಹೊತ್ತಿನಲ್ಲೂ ಅವಳನ್ನು ನೋಡುತ್ತಾ ನೋಡುತ್ತಾ ಇರಬೇಕು ಎನ್ನಿಸುತ್ತದೆ. ಒಂದು ಪಕ್ಷ ಅವಳು ಬಾಳಿನ ಸಂಗಾತಿಯಾಗಿದ್ದಿದ್ದರೆ, ತನ್ನ ಬಾಳಿನ ಗತಿಯೇ ಬದಲಿಸುತ್ತಿತ್ತೋ ಏನೋ! ಒಮ್ಮೆಯೂ ಆಸಕ್ತಿ ಕುಂದದೆ ಶಕ್ತಿಹೀನವಾಗದೆ ಎಂದೆಂದೂ ಹೊಸ ಹೊಸ ಉತ್ಸಾಹದಿಂದ ಮೇಲೇರಬಹುದಾಗಿತ್ತು. ಬದುಕೆಲ್ಲ ಆನಂದದಿಂದ ತುಂಬಿರುತ್ತಿತ್ತು. ಆ ರೀತಿಯಲ್ಲಿ ಸ್ವಂತವಾದ ಪ್ರಯತ್ನವಿಲ್ಲದೆಯೇ ಜೀವನ, ಇದಕ್ಕಿಂತ ಹೆಚ್ಚು ಒಳ್ಳೆಯದಾಗಿರುತ್ತಿತ್ತು.

ಈ ಜೀವನದಲ್ಲಿ ಯಾವುದೋ ಒಂದು ತರಹದ ಅನಾಸಕ್ತಿ. ತನಗೊಬ್ಬಳು ಹೆಂಡತಿಯಿದ್ದಾಳೆಯೇ ಎಂದು ಕೇಶವ ಪಿಳ್ಳೆ ಆಲೋಚಿಸಿದ. ಮನೆಯಲ್ಲಿ ತಾನು ಕೈ ಹಿಡಿದ ಹೆಂಡತಿಯಿದ್ದಾಳೆ ಎನ್ನುವುದನ್ನು ತಿಂಗಳುಗಟ್ಟಲೆ ಮರೆತಿರುತ್ತಿದ್ದ. ಯಾವಾಗಲೋ ಒಮ್ಮೆ ನೆನಪು ಬರುತ್ತಿದ್ದುದು ಪುಳಿಮೂಟ್ಟಿನ ಜೋಯಿಸರು. "ಹೆಂಡತಿ ಭಾಗ್ಯವಂತೆ" ಎಂದು ಹೇಳಿದ್ದುದುಂಟು. ಆ ಹೆಣ್ಣಿನ ಮೈ ಬೆವರು ಅಸಹ್ಯವನ್ನು ತರುತ್ತದೆ. ಅವಳನ್ನು ಮುಟ್ಟುವುದಕ್ಕೂ ಇಷ್ಟವಾಗುವುದಿಲ್ಲ. ಅಂಥವಳೂ ಒಬ್ಬಳು ಹೆಂಡತಿ! ನಿಜವಾಗಿಯೂ ತನ್ನ ಜೀವನವನ್ನು ಹಾಳು ಮಾಡಿಕೊಂಡದ್ದಲ್ಲವೆ?

ಇಷ್ಟೊಂದು ತೀವ್ರವಾದ ಆಸಕ್ತಿ ಕೇಶವ ಪಿಳ್ಳೆಗೆ ತಂಗಮ್ಮನ ಬಗ್ಗೆ ಹಿಂದೆಂದೂ ಉಂಟಾಗಿರಲಿಲ್ಲ.

ಮಸಿ ಹಿಡಿದು ಕೊಳಕಾದ ಮುಂಡು ಉಟ್ಟು, ಬೆವರಿನ ವಾಸನೆಯ ಶರೀರದ, ತಲೆಗೂದಲನ್ನು ಒಂದು ಪಕ್ಕದಲ್ಲಿ ಗಂಟುಹಾಕಿಕೊಂಡಿದ್ದ ಕಾತ್ಯಾಯಿನಿ ಆ ಕೋಣೆಯನ್ನು ಪ್ರವೇಶಿಸಿದಳು. ಅವಳ ಕೈಯಲ್ಲಿ ಒಂದು ಪಾತ್ರೆಯಿತ್ತು.

ಕಾತ್ಯಾಯಿನಿ ಸ್ವಲ್ಪ ದಪ್ಪಕ್ಕಾಗಿದ್ದಳು. ಮೈಬಣ್ಣವೂ ಸ್ವಲ್ಪ ಬದಲಾಯಿಸಿತ್ತು. ತಲೆಗೂದಲೂ ಧಾರಾಳವಾಗಿ ಬೆಳೆದಿತ್ತು. ಎರಡು ಕೈಗಳಲ್ಲೂ ಏಳೆಂಟು ಬಳೆಗಳೂ ಕೊರಳಿನಲ್ಲಿ ಒಡವೆಗಳೂ ಇದ್ದುವು. ಇಂದು ಹಿಂದಿನ ಕಾತ್ಯಾಯಿನಿಯಲ್ಲ. ಅವಳು ಕೇಳಿದಳು: "ಅಮ್ಮ ಅಪ್ಪನ ಹತ್ರ ಏನಂದಿರಿ?"

ಅವನ ಉತ್ತರ ಅದನ್ನು ತಣ್ಣಗೆ ಮಾಡುವ ಮರುಪ್ರಶ್ನೆಯಾಗಿತ್ತು.

"ಹ್ಞು, ಏನು?"

ಅವಳು ಕೇಳಿದಳು: "ಅದು ಸರಿಯಾ? ಅಮ್ಮ ಅಪ್ಪನ ಹತ್ರ ಹಾಗೆಲ್ಲ ಮಾತಾಡೋದಾ?"

"ನೀನು ಬುದ್ಧಿ ಹೇಳೋದಕ್ಕೆ ಬಂದಿದ್ದೀಯಾ?"

ಅವಳಿಗೆ ಆತನ ಮನಸ್ಥಿತಿ ಅರ್ಥವಾಗಿಲ್ಲವೆಂದು ತೋರುತ್ತಿತ್ತು.

"ಇದೆಲ್ಲ ಸರಿಯಲ್ಲ."

ತೊಟ್ಟಿಲಿನಲ್ಲಿ ಮಲಗಿದ್ದ ಮಗುವನ್ನು ತೋರಿಸುತ್ತ ಅವಳು ಕೇಳಿದಳು:

"ಈ ಮಗು ಬೆಳೆದ ಮೇಲೆ ಇದೂ ಹೀಗೇ ನಮ್ಮ ಹತ್ರ ಮಾತಾಡಿದರೆ ನಮಗೆಷ್ಟು ನೋವಾಗೋದಿಲ್ಲ? ಅದನ್ನ ಯಾಕೆ ನೀವು ಆಲೋಚಿಸಬಾರದು?"

ಆ ಪ್ರಶ್ನೆ ಕೇಶವ ಪಿಳ್ಳೆಯ ಮನಸ್ಸನ್ನು ಹೊಕ್ಕು ಎಲ್ಲಿಯೋ ಅಡಗಿ ಕುಳಿತಿತು. ಕಾತ್ಯಾಯಿನಿ ಮತ್ತೆ ಕೇಳಿದಳು: "ತಿರುವನಂತಪುರದಲ್ಲಿ ಒಬ್ಬಳು ಹೆಣ್ಣು ಇದ್ದಾಳಾ ಅಂತ ಅಮ್ಮ ಕೇಳಿದಾಗ 'ಇಲ್ಲ' ಅಂತ ಹೇಳಿದ್ದರೆ ಆಗ್ತಿರಲಿಲ್ಲವಾ? ಇತ್ತೀಚೆಗೆ ಅಮ್ಮ ನನ್ನ ಹತ್ರ ಕೇಳೋದುಂಟು. ಆಗ ನಾನು ಹೇಳೋದು 'ಇಲ್ಲ' ಅಂತ. ಪತ್ರಿಕೆಗಳಲ್ಲಿ ಅಲ್ಲಿ ಅವನಿಗೊಬ್ಬಳಿದ್ದಾಳೆ, ಮನೆ ಕಟ್ಟಿಸೋ ಅಷ್ಟು ಹಣ ಉಂಟು ಅಂತ ಬಂದಿದೆ ಅಂತ ಹೆಂಗಸರು ಮಾತಾಡಿಕೊಳ್ಳೋದು. ಆಗ ನಾನು ಅವರಿಗೆ ಹೇಳ್ತಿದ್ದದ್ದು—'ಸರಿ ಹೋಯ್ತು. ಅದರಿಂದ ನಿಮಗೇನೂ ನಷ್ಟವಿಲ್ಲ' ಅಂತ. ಈ ಜನರಿಗೆ ಅಸೂಯೆ. ಹಾಗೆ 'ಇಲ್ಲ' ಅಂತ ಹೇಳಿದ್ದರೆ ಆಗ್ತಿರಲಿಲ್ಲವಾ?"

ಕೇಶವ ಪಿಳ್ಳೆ ಅವಳನ್ನು ಸೂಕ್ಷ್ಮವಾಗಿ ನೋಡುತ್ತ ಪ್ರತಿಮೆಯಂತೆ ಬಿದ್ದಿದ್ದ. ಅವಳು ಹೇಳುವುದನ್ನು ಅವನಿಗೆ ನಂಬಲು ಸಾಧ್ಯವಾಗಲಿಲ್ಲ. ಅದನ್ನು ಅವಳಾಗಿಯೇ ಹೇಳುತ್ತಿರಬಹುದೇ ಅಥವಾ ಅದೊಂದು ಸ್ವಪ್ನವೇ?

ಕಾತ್ಯಾಯಿನಿ ಹೇಳಿದಳು: "ಈಗಲೂ ಅಮ್ಮ ಕೇಳಿದರೆ ನಾನೇನು ಹೇಳಬೇಕು? ಈ ನೆರೆಹೊರೆ ಹೆಂಗಸರು ಕೇಳಿದರೂ 'ಇಲ್ಲ' ಅಂತ ಹೇಳಿದರೆ ಸಾಕಾಗಿತ್ತು."

ಒಂದು ಕ್ಷಣ ಬಿಟ್ಟು ಮತ್ತೆ ಹೇಳಿದಳು:

"ಈಗಲೂ ಹೋಗಿ ಅಪ್ಪ ಅಮ್ಮನ್ನ ಸಮಾಧಾನ ಮಾಡಿ ಬನ್ನಿ. ನಾನು ಹೋಗ್ತೀನಿ. ಅಡಿಗೆ ಸೀದು ಹೋಯ್ತೋ ಏನೋ!" ಅವಳು ಹೋದಳು. ಆ ಸ್ತ್ರೀ ಆಕೃತಿಯನ್ನು ನೋಡುತ್ತ ಕೇಶವ ಪಿಳ್ಳೆ ಆಶ್ಚರ್ಯಪಟ್ಟ. ಥಟ್ಟನೆ ಮಗು ಎದ್ದು ಅಳ ತೊಡಗಿತು. ಕೇಶವ ಪಿಳ್ಳೆ ಮೇಲೆದ್ದು ತೊಟ್ಟಿಲನ್ನು ತೂಗುತ್ತಿದ್ದ. ಕಾತ್ಯಾಯಿನಿ ಬಾಗಿಲಿನ ಹತ್ತಿರ ಬಂದಾಗ ಅವನು ಮಗುವನ್ನು ಮಲಗಿಸುತ್ತಿದ್ದ. ಪ್ರಸನ್ನಳಾಗಿ ಅವಳು ಕೇಳಿದಳು:

"ಮಲಗಿತಾ?"

"ಮಲಗ್ತಿದೆ."

"ನಾನೀಗ ಬರ್ತೀನಿ. ಒಲೆ ಮೇಲೆ ಹಪ್ಪಳ ಕಾಯಿಸೋದಕ್ಕೆ ಒಳ್ಳೆಣ್ಣೆ ಇಟ್ಟಿದ್ದೀನಿ."

ಅಂದು ರಾತ್ರಿಯಲ್ಲಿ ಕಾತ್ಯಾಯಿನಿ ಒತ್ತಾಯ ಮಾಡಿ ಹೇಳಿದಳು. ಅಪ್ಪ ಅಮ್ಮನ ಹತ್ತಿರ ಕ್ಷಮೆ ಕೇಳಬೇಕು ಎಂದು. ಕೇಳಿಯೇ ಹೊರಡಬೇಕು. ಕೇಶವ ಪಿಳ್ಳೆಗಿದ್ದ ಭಯ ತಂದೆಯ ಎದುರಿಗೆ ನಿಂತರೆ ಅವರು ಶಾಪ ಹಾಕಿಯಾರು ಎಂದು. ಆ ಶಾಪವನ್ನು ಪಡೆಯದೇ ಹೋಗುವುದಲ್ಲವೇ ಒಳ್ಳೆಯದು? ಕಾತ್ಯಾಯಿನಿ ಒಪ್ಪಲಿಲ್ಲ. "ಕಾಲಿಗೆ ಬಿದ್ದು ಕ್ಷಮೆ ಕೇಳಿಕೊಂಡು ಹೋಗಿ. ಶಾಪಗೀಪ ಏನೂ ಹಾಕೋದಿಲ್ಲ. ನಿಮಗೆ ಹಾಗನ್ನಿಸುತ್ತೆ ಅಷ್ಟೆ. ನಮಗೂ ನಮ್ಮ ಮಗೂಗೆ ಒಳ್ಳೆಯದಾಗಬಾರದು ಅಂತ ಇರುತ್ತಾ? ಅಲ್ಲದೆ ತಂದೆ ತಾಯಿ ಶಪಿಸಿದರೂ ಅದು ತಾಗೋದಿಲ್ಲ. ಹಾಗೆ ಒಳಗೇನೋ ಇಟ್ಟುಕ್ಕೊಂಡು ಶಾಪ ಹಾಕ್ತಾರಾ?"

ಅಂತಹ ಇಕ್ಕಟ್ಟಾದ ಸಂದರ್ಭ ಅವನಿಗೆ ಹಿಂದೆಂದೂ ಬಂದೊದಗಿರಲಿಲ್ಲ. ನಿಷ್ಕಳಂಕವಾದ ಒಂದು ನಗುವಿನೊಡನೆ ಅವಳು ಕೇಳಿದಳು:

"ಇರಲಿ, ಬೇಸರ ಮಾಡಿಕೊಳ್ಳಬೇಡಿ. ನನ್ನ ಹತ್ರ ಸಿಟ್ಟು ಮಾಡಿಕೊಳ್ಳಬೇಡಿ. ತಿರುವನಂತಪುರದಲ್ಲಿ ಈ ಪತ್ರಿಕೆಗಳೂ ಈ ಹೆಂಗಸರೂ ಹೇಳೋ ಹಾಗೆ ನಿಮಗೆ ಯಾವ್ಳೋ ಳಾದರೂ ಇದ್ದಾಳಾ?"

ನಿಷ್ಕಳಂಕತೆಯನ್ನು ಸರಿಯಾಗಿ ಅಭಿನಯಿಸುತ್ತ ಅವನು ಹೇಳಿದ: "ಇಲ್ಲ, ಅದೆಲ್ಲ ಈ ಕಾಂಗ್ರೆಸ್ಸಿನವರು ಹಾಗೆ ಹೇಳೋದು."

"ಮತ್ತೆ ಯಾಕೆ ಅವರ ಹತ್ರ ಹಾಗೆ ಹೇಳದೇ ಹೋದದ್ದು?"

"ನಾನು ಹೇಳಲಿಲ್ಲ ಅಷ್ಟೆ."

ಕಾತ್ಯಾಯಿನಿ ಅವನ ಮಾತನ್ನು ನಂಬಿದಳು.

"ಅಮ್ಮ ಅಪ್ಪ ಹೇಳೋವಕ್ಕೆ ಹಿಡಿದು ಎಷ್ಟು ದಿನ ಆಯ್ತು! ಅವರು ಒಂದು ಸಲ ತಿರುವನಂತಪುರ ನೋಡಬೇಕು ಅಂತ! ಯಾಕೆ ಕರೆದುಕೊಂಡು ಹೋಗದೇ ಇದ್ದೀರಿ?"

"ಕರೆದುಕೊಂಡು ಹೋಗೋದಕ್ಕೆ ಸಮಯ ಸಿಕ್ಕಿಲ್ಲ."

ನಂತರ ಅವಳು ಹೇಳಿದಳು:

"ನಾನೂ ತಿರುವನಂತಪುರ ನೋಡಬೇಕು."

ಅದು ಕಾತ್ಯಾಯಿನಿಯ ಆಶೆ. ಆದರೆ ಅದು ಸಾಧ್ಯವೆ? ಆ ದಿವಾನರ ಪ್ರೈವೇಟ್ ಸೆಕ್ರೆಟರಿ!

ತೊಟ್ಟಿಲನ್ನು ತೂಗುತ್ತಿದ್ದ ಅವಳನ್ನು ಸೂಕ್ಷ್ಮವಾಗಿ ನೋಡುತ್ತಾ ಅವನು ಕೇಳಿದ:

"ನೀನು ಯಾಕೆ ಅಚ್ಚುಕಟ್ಟಾಗಿಲ್ಲದೇ ಹೀಗಿದ್ದೀ? ನಿನ್ನ ಬೆವರು ನಾರುತ್ತೆ!"

ಅವಳು ಹೇಳಿದಳು: "ನನಗೆ ವಿಪರೀತ ಬೆವರು. ಯಾವಾಗಲೂ ಬೆವರು ಬರುತ್ತೆ. ಮನೇಲಿ ಕೆಲಸ ಇರೋದಿಲ್ಲವಾ? ಸುಮ್ಮನೆ ಕುಳಿತು ಮಲಗಿ ಕಾಲ ಕಳೆಯೋದಕ್ಕಾಗುತ್ತಾ?"

ಒಂದು ಕ್ಷಣ ಬಿಟ್ಟು ಮತ್ತೆ ಹೇಳಿದಳು: "ಆಸ್ತಿ ಹೆಚ್ಚಿದ ಹಾಗೆ ಕೆಲಸವೂ ಹೆಚ್ಚಾಯ್ತು."

ಆ ನಿಷ್ಕಳಂಕ ಜೀವಿಯನ್ನು ನೋಡುತ್ತಾ ಕೇಶವ ಪಿಳ್ಳೆ ಹೇಳಿದ: "ಅಂತು ನೀನು ಭಾಗ್ಯವಂತೆ."

ಅಭಿಮಾನದಿಂದ ಹಸನ್ಮುಖಿಯಾಗಿ ಕಾತ್ಯಾಯಿನಿ ಹೇಳಿದಳು: "ಕಿಟ್ಟುಮಾಮ ಯಾವಾಗಲೂ ಹಾಗಂತ ಹೇಳ್ತಾ ಇರ್ತಾರೆ."

ಮತ್ತೆ ಹೇಳಿದಳು: "ನಮ್ಮ ಮಗಳ ಜಾತಕ ತೆಗೆದುಕೊಂಡು ಬಂದೆ. ಅವಳು ತುಂಬ ಭಾಗ್ಯವಂತೆ ಅಂತ ಹೇಳುತ್ತೆ. ಇದರಂತ ಜನ್ಮವೇ ಬೇರೆ ಇಲ್ಲ ಅಂತ."

ಆ ಘಟನೆಯ ಕಾರಣದಿಂದಾಗಿ ಮಾರನೆಯ ದಿನವಷ್ಟೇ ಹಿಂದಿರುಗಲು ಸಾಧ್ಯವಾದದ್ದು.

ತಂದೆ ತಾಯಿಯರ ಹತ್ತಿರ ಹೋಗಿ ಕೇಶವ ಪಿಳ್ಳೆ ಕ್ಷಮಾಯಾಚನೆ ಮಾಡಿದ. ಅದು ಅವನಿಗೆ ಯಾವ ಮನಸ್ಸಮಾಧಾನವೂ ಇಲ್ಲದಿದ್ದ ಕಾಲ. ಕಾಂಗ್ರೆಸ್ಸಿನವರು ಸಮಾಧಾನದಿಂದ ಇರುವುದಕ್ಕೆ ಬಿಡುವುದಿಲ್ಲ. ದಿವಾನರು ಅವನ ಮುಂದೆ ಚಾವಟಿ ಹಿಡಿದು ನಿಂತಿರುತ್ತಾರೆ. ಆ ಸ್ಥಿತಿಯಲ್ಲಿ ತನಗರಿವಿಲ್ಲದಂತೆ ಹಾಗೆ ಹೇಳಿದ್ದು. ಅಂತು ಆ ವೃದ್ಧ ತಂದೆತಾಯಿಗಳು ಬಿಕ್ಕಿಬಿಕ್ಕಿ ಅತ್ತರು.

ಅನಂತರದ ಗಂಟೆಯಿಂದ ಪುನಃ ಚುನಾವಣೆಯ ಕಾರ್ಯದಲ್ಲಿ ತೊಡಗಿದ.

ಕಾಂಗ್ರೆಸ್ಸಿನವರಿಗೆ ನಿಜವಾಗಿಯೂ ಕೇಶವ ಪಿಳ್ಳೆ ಒಂದು ತಲೆನೋವಾಗಿದ್ದ. ಹಲವು ಕಡೆಗಳಲ್ಲಿ ಕಾಂಗ್ರೆಸ್ಸಿನವರ ಮಧ್ಯೆ ತೀವ್ರವಾದ ಒಡಕನ್ನು ಉಂಟುಮಾಡುವುದಕ್ಕೆ ಸಮರ್ಥನಾದ. ಎಲೆಕ್ಷನ್‌ನಲ್ಲಿ ಶೇಕಡ ಇಪ್ಪತ್ತೈದರಷ್ಟು ಸ್ಥಾನವನ್ನು ಕೂಡ ಕಾಂಗ್ರೆಸ್ಸಿನವರಿಗೆ ಪಡೆಯಲು ಸಾಧ್ಯವಾಗಲಿಲ್ಲ. ಸರ್ಕಾರದ ಬೆಂಬಲವಿದ್ದ ಉಮೇದುವಾರರ ಪೆಟ್ಟಿಗೆಗಳಲ್ಲಿ ರಹಸ್ಯವಾಗಿ ಬ್ಯಾಲೆಟ್ ಪೇಪರ್ ಇಟ್ಟು, ಎಣಿಸುವ ಮೊದಲು ಇಟ್ಟದ್ದು ಎನ್ನುವ ಆರೋಪಣೆಯನ್ನು ಅನಂತರ ಹೊರಿಸಿದ್ದು.

ಕೇಶವ ಪಿಳ್ಳೆಯನ್ನು ದಿವಾನರು ಮುಕ್ತಕಂಠದಿಂದ ಅಭಿನಂದಿಸಿದರು. ಕೇಶವ ಪಿಳ್ಳೆ ಈಗ ಒಂದು ಸೆಕ್ರೆಟರಿ ಸ್ಥಾನಕ್ಕೆ ಅರ್ಹ ಎಂದು ಪರೋಕ್ಷವಾಗಿ ಸಮ್ಮತಿಸಿದರು. ಮೊದಲು ಅದಕ್ಕೆ ಬೇಕಾದ ಅರ್ಹತೆಯಿರಲಿಲ್ಲ.

ಆ ಎಲೆಕ್ಷನ್ ಮುಗಿಯುವ ಹೊತ್ತಿಗೆ ತಂಗಮ್ಮನ ಮನೆಯ ಕೆಲಸವೂ ಪೂರ್ತಿಯಾಗಿತ್ತು. ತಂಬಾನೂರು ಭಾಗದಲ್ಲಿ ಒಳ್ಳೆಯ ಕಟ್ಟಡವಾಗಿತ್ತು. ಅದಕ್ಕೆ 'ಶೇಖರ ವಿಲಾಸ' ಎಂದು ಕೇಶವ ಪಿಳ್ಳೆ ನಾಮಕರಣ ಮಾಡಿದ. ತಂಗಮ್ಮ ಅಲ್ಲಿಗೆ ತನ್ನ ವಾಸಸ್ಥಾನವನ್ನು ಬದಲಾಯಿಸಿದಳು.

# [19]

## ಜಯಭೇರಿ

ಸರ್ಕಾರ ಕೆಲವು ಆಡಳಿತ ಸುಧಾರಣೆಗಳನ್ನು ಪ್ರಕಟಿಸಿತು. ಸ್ಟೇಟ್ ಕಾಂಗ್ರೆಸ್ಸಿನ ಚಳವಳಿಗಳ ಅನೇಕ ದೃಷ್ಟಿಗಳನ್ನು ಎದುರಿಸುವ ಪ್ರಕಟಣೆಯಾಗಿತ್ತು ಅದು. ಕೇಶವ ಪಿಳ್ಳೆ ತಯಾರಿಸಿದ ಒಂದು ರಿಪೋರ್ಟನ್ನನುಸರಿಸಿ ಸರ್ಕಾರ ಆಡಳಿತ ಸುಧಾರಣೆ ಮಾಡಲು ಸಿದ್ಧವಾದದ್ದು. ಕೇಶವ ಪಿಳ್ಳೆಯ ರಿಪೋರ್ಟ್ ಫಸ್ಟ್ ಕ್ಲಾಸ್ ರಿಪೋರ್ಟಾಗಿತ್ತು ಎಂದು ದಿವಾನರೇ ಸಮ್ಮತಿಸಿದರು. ಸರಿಯಾಗಿ ವಿಷಯವನ್ನು ತಿಳಿದು, ಆಲೋಚಿಸಿ, ಎಲ್ಲವನ್ನೂ ವಿವರವಾಗಿ ಬರೆದಿದ್ದ ರಿಪೋರ್ಟಾಗಿತ್ತು ಅದು. ಅವನಿಗೆ ನೇರವಾಗಿ ಪರಿಚಯವಿದ್ದ ಕಾರಣಗಳಲ್ಲವೆ ಅವು? ದಿವಾನರು ಕೇಶವ ಪಿಳ್ಳೆಯ ಬುದ್ಧಿಯನ್ನೂ, ವಸ್ತುನಿಷ್ಠವಾಗಿ ವಿಷಯಗಳನ್ನು ಅರಿಯುವ ಸಾಮರ್ಥ್ಯವನ್ನೂ ಪ್ರತ್ಯೇಕವಾಗಿ ಹೊಗಳಿದರು. ಸಮರ್ಥನಾದ ಒಬ್ಬ ಅಧಿಕಾರಿ ಎಂದು ಪರೋಕ್ಷವಾಗಿಯೂ ಹೊಗಳಿದ್ದರು.

ಆಡಳಿತ ಸುಧಾರಣೆಯಲ್ಲಿ ಮೊದಲನೆಯದು ಪಬ್ಲಿಕ್ ಸರ್ವಿಸ್ ಆಗಿತ್ತು. ಪಬ್ಲಿಕ್ ಸರ್ವಿಸ್‌ಗೆ ನೇಮಕ ಮಾಡುವ ಕಾರ್ಯಕ್ರಮಗಳಿಗಾಗಿ ಸರ್ಕಾರ ಒಂದು ಕಮಿಟಿಯನ್ನು ರಚಿಸಿತು. ಎರಡನೆಯದಾಗಿ ಅಕ್ರಮ ನಿಯಂತ್ರಣಕ್ಕೆ ಒಂದು ಹೊಸ ಶಾಖೆಯನ್ನು ತೆರೆಯಬೇಕಾಗಿತ್ತು. ಮೂರನೆಯದು ವ್ಯವಸಾಯಾಭಿವೃದ್ಧಿ. ಇವಕ್ಕೂ ಪ್ರಧಾನವಾಗಿ ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್ ತುಂಬ ಬೇಗ ಆರಂಭಿಸಿ ಪೂರೈಸಬೇಕಾಗಿತ್ತು. ನಂತರವೂ ಕೆಲವು ವ್ಯವಸಾಯಗಳನ್ನು ಪ್ರಾರಂಭಿಸುವುದು. ವಿದ್ಯಾಭ್ಯಾಸ ರಂಗದಲ್ಲಿ ಪರಿಷ್ಕಾರಗಳನ್ನು ಮಾಡಬೇಕಾಗಿತ್ತು.

ಈ ಪ್ರಕಟಣೆಯಿಂದ ರಾಜಧಾನಿಯ ಉದ್ಯೋಗಮಂಡಲ ಸಜೀವಗೊಂಡಿತು. ಉನ್ನತ ಮಟ್ಟದಲ್ಲಿ ಕೆಲವು ಬದಲಾವಣೆಗಳುಂಟಾಗುತ್ತವೆ ಎನ್ನುವುದು ಖಂಡಿತ. ಆ ಬದಲಾವಣೆಗಳಲ್ಲಿ ಒಳ್ಳೆಯ ಸ್ಥಾನಗಳಿಗೆ ಹೋಗಿ ಸೇರುವ ಪ್ರಯತ್ನ ಪ್ರಾರಂಭವಾಯಿತು. ವ್ಯವಸಾಯಾಭಿವೃದ್ಧಿ ಶಾಖೆಯ ಸೆಕ್ರೆಟರಿ ಸ್ಥಾನದ ಕಡೆಗಿತ್ತು ಉನ್ನತ ಸ್ಥಾನದಲ್ಲಿದ್ದ ಎಲ್ಲರ ದೃಷ್ಟಿ.

ಸಕಲರೂ ಶ್ರಮಿಸುತ್ತಿದ್ದರು. ಒಬ್ಬೊಬ್ಬರೂ ಆ ಕಡೆಗೆ ದೃಷ್ಟಿಯಿಟ್ಟಿದ್ದರು. ಕೇಶವ ಪಿಳ್ಳೆ ಮಾತ್ರ ಆ ಕಡೆಗೆ ದೃಷ್ಟಿ ಹಾಯಿಸಲಿಲ್ಲ. ಆ ಚಿತ್ರದಲ್ಲಿ ಕೇಶವ ಪಿಳ್ಳೆಯಿಲ್ಲ. ದಿವಾನರು ಅಭಿನಂದಿಸಿದ್ದುದರಿಂದ ಶ್ರಮವಿಲ್ಲದೆ ಡೆವಲಪ್‌ಮೆಂಟ್ ಸೆಕ್ರೆಟರಿಯ ಸ್ಥಾನ ಕೈಸೇರುತ್ತದೆ ಎನ್ನುವ ನಂಬಿಕೆಯಲ್ಲಿ ಅವನು ಶ್ರಮಿಸದೆ ಇದ್ದದ್ದಲ್ಲ. ಆ ಉದ್ಯೋಗ ಬೇಡವೆಂದೂ ಅವನಿಗಿಲ್ಲ. ಅದು ಒಳ್ಳೆಯ ಉದ್ಯೋಗವೆಂದು ಅವನಿಗೆ ಗೊತ್ತಿತ್ತು. ಅವನಿಗ ತಿಳಿದಿದ್ದರೂ ಶ್ರಮಿಸುತ್ತಿರಲಿಲ್ಲ. ಇಂದು

ಆತನಿಗಾಗಿ ಹೇಳಲು ಯಾರಿದ್ದಾರೆ? ಸಾಮರ್ಥ್ಯವಿಲ್ಲದವನೆಂದು ಚೀಫ್ ಸೆಕ್ರೆಟರಿಯನ್ನು ಕುರಿತು ಅಲ್ಲಿ ಪ್ರತಿದಿನ ಹತ್ತು ಸಲ ಹೇಳುವುದುಂಟು. ಆ ಮನುಷ್ಯನನ್ನು ಕಂಡರೆ ಎಲ್ಲರಿಗೂ ತಾತ್ಸಾರ. ಒಂದು ಬೊಂಬೆಯಂತೆ ಆ ಕುರ್ಚಿಯಲ್ಲಿ ಕುಳಿತಿದ್ದಾರೆ ಅಷ್ಟೆ. ಅಲ್ಲ, ಹಾಗೆ ಕೂರಿಸಿರುವುದು, ತಲೆ ನರೆತಿದ್ದರೂ ಭಗವತಿಯಮ್ಮನ ಕಾರಣದಿಂದ. ಚೀಫ್ ಸೆಕ್ರೆಟರಿ ನಿರುಪದ್ರವಿಯೂ ಹೌದು. ಆ ಸ್ಥಿತಿಯಲ್ಲಿ ಆತ ಹೇಳಿದರೂ ತನ್ನ ಕಾರ್ಯಸಾಧನೆಯಾಗುವುದಿಲ್ಲ. ಈಗ ಭಗವತಿ ಕುಟ್ಟಿಯಮ್ಮನಿಗೂ ಬೆಲೆಯಿಲ್ಲ. ಮತ್ತಾರಿದ್ದಾರೆ? ಸೆಕ್ರೆಟರಿ ಜಿ. ಎನ್. ನಾಯರ್, ಮದರಾಸಿನಲ್ಲಿ ದಿವಾನರಿಗೆ ನಿಷೇಧಿಸಲಾರದಂತೆ, ಸ್ವಾಧೀನಪಡಿಸಿಕೊಂಡ ಮನುಷ್ಯನೊಬ್ಬನನ್ನು ಹಿಡಿದಿಟ್ಟಿದ್ದಾನೆ. ಸೆಕ್ರೆಟರಿ ಅಲೆಗ್ಸಾಂಡರ್ ರೂಮಿನಲ್ಲಿ ವಾಸಮಾಡುತ್ತಿದ್ದ ಒಬ್ಬ ಪುರೋಹಿತನ ಸಹೋದರನ ಮುಖಾಂತರ ಪೋಪ್‌ನಿಂದ ವೈಸ್‌ರಾಯಿಗೆ ಕಾಗದ ಬರೆದಿದ್ದಾರೆ ಅಷ್ಟೆ. ತಂಬಿ ಅರಮನೆಗೆ ಸೇರಿದವರು—ಈ ಪ್ರತಾಪವುಳ್ಳವರ ಮಧ್ಯೆ ಕೇಶವ ಪಿಳ್ಳೆಗಾಗಿ ಶಿಫಾರಸ್ಸು ಹೇಳುವವರು ಯಾರಿದ್ದಾರೆ? ಯಾರೂ ಇಲ್ಲ. ಅವನು ಸ್ವತಃ ಪ್ರಯತ್ನಿಸುವುದಕ್ಕೂ ಸಾಧ್ಯವಿಲ್ಲ.

ಮೊದಲಾಗಿದ್ದಿದ್ದರೆ ಸಣ್ಣ ಸಣ್ಣ ಸ್ಥಾನಗಳಿಗಾಗಿ ಪ್ರಯತ್ನಿಸುತ್ತಿದ್ದದ್ದು. ಇಂದು ಹಾಗಲ್ಲ. ನೇರವಾಗಿ ದಿವಾನರ ಹತ್ತಿರ ಕೇಳುವುದು. ಏಕೆಂದರೆ ಅವರು ಅಭಿನಂದಿಸಿದ್ದರು. ಏನಾಗಿರಬಹುದು ಅವರ ಪ್ರತ್ಯುತ್ತರ ಎಂದೂ ಹೇಳಲು ಸಾಧ್ಯವಿಲ್ಲ. ಆ ಸ್ಥಿತಿಗೆ ಆ ಸ್ಥಾನವನ್ನು ಆಗ್ರಹಿಸದೆ ಯಾವ ಪ್ರಯತ್ನವನ್ನೂ ಮಾಡದಿರುವುದು ಒಳ್ಳೆಯದೆಂದು ಕೇಶವ ಪಿಳ್ಳೆಯ ವಿವೇಚನೆ ಅವನನ್ನು ಉಪದೇಶಿಸಿತು.

ದಿವಾನರ ಅಭಿನಂದನೆಯಿಂದ ಕೇಶವ ಪಿಳ್ಳೆಗೆ ಒಂದು ಸಂತೃಪ್ತಿಯುಂಟಾಗಿತ್ತು. ಅಭ್ಯುದಯ ಸಾಕು ಎಂದಲ್ಲ. ಮನೆ, ಭೂಮಿ ಊರಿನಲ್ಲಿದೆ. ಮೂವಾಟ್ಟಿನ ಭೂಮಿ ಅರ್ಧದಷ್ಟು ತೋಟವಾಯಿತು. ಉಳಿದದ್ದೂ ಆಗುತ್ತಿದೆ. ಕೈಯಲ್ಲಿ ಧಾರಾಳವಾಗಿ ಹಣವೂ ಇದೆ. ಸಮರ್ಥನಾದ ಅಧಿಕಾರಿ ಎನ್ನುವ ಹೆಸರು ಸಂಪಾದಿಸಿದ್ದಾಯಿತು. ತಾತ್ಕಾಲಿಕವಾಗಿಯಾದರೂ ಸಂತೃಪ್ತಿಪಟ್ಟುಕೊಳ್ಳಬಹುದಲ್ಲವೆ? ಎಲ್ಲರಂತೆ ಫಲವಿಲ್ಲದೆ ಏಕೆ ಸುತ್ತಾಡಬೇಕು? ಹಾಗೆ ಕೇಶವ ಪಿಳ್ಳೆ ಆಲೋಚಿಸಿದ್ದದ್ದು.

ಒಂದು ರೀತಿಯ ಮನಸ್ಸಮಾಧಾನ ಆತನ ಜೀವನದಲ್ಲಿ ಕೆಲವು ಕಾಲದಿಂದ ಬಂದಿತ್ತು. ಅದು ಸಂತೃಪ್ತಿಯ ಒಂದು ಲಕ್ಷಣವಾಗಿತ್ತು. ಪ್ರತಿ ದಿನ ಶಾಸ್ತ್ರಾವು ದೇವಸ್ಥಾನಕ್ಕೆ ಹೋಗಿಬರುತ್ತಿದ್ದ. ರಾತ್ರಿಗಳನ್ನು ಕಳೆಯುವುದು 'ಶೇಖರ ವಿಲಾಸ'ದಲ್ಲಿ. ತಿಂಗಳಿಗೊಮ್ಮೆ ಊರಿಗೆ ಹೋಗುತ್ತಿದ್ದ. ಜೋಯಿಸರನ್ನು ಆಗಾಗ ಬರಮಾಡುತ್ತಿಲ್ಲ. ಕೇಶವ ಪಿಳ್ಳೆ ಈಗ ಸುಖವಾಗಿ ನಿದ್ದೆ ಮಾಡುತ್ತಿದ್ದಾನೆ.

ಯಾವ ಬದಲಾವಣೆಯೂ ಕೇಶವ ಪಿಳ್ಳೆಯ ಮನಸ್ಸಿನಲ್ಲಿಲ್ಲ, ಆಗ್ರಹವಿರಲಿಲ್ಲ. ಒಂದು ವಾರ ರಜೆ ತೆಗೆದುಕೊಂಡು ಅವನು ಊರಿಗೂ ಮೂವಾಟ್ಟುಪುಳಕ್ಕೂ ಹೋದ. ಆ ದಿನಗಳಲ್ಲೇ ಹೊಸ ನೇಮಕಗಳು ನಡೆಯಲಿದ್ದದ್ದು.

ಎಲ್ಲರನ್ನೂ ಅದ್ಭುತಗೊಳಿಸುವಂತಹ ನೇಮಕದ ಪ್ರಕಟಣೆ ಹೊರಬಂದಿತು. ಅಂದು ಬೆಳಗ್ಗೆ ಕೇಶವ ಪಿಳ್ಳೆ ಹಿಂದಿರುಗಿ ಬಂದದ್ದು. ಕೇಶವ ಪಿಳ್ಳೆಯನ್ನು ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿ ನೇಮಿಸಲಾಗಿತ್ತು. ಕೇಶವ ಪಿಳ್ಳೆಗೂ ಅದನ್ನು ನಂಬಲು ಸಾಧ್ಯವಾಗಲಿಲ್ಲ. ಒಂದು ನಿಮಿಷ ಅವನು ಮೌನವಾಗಿ ಕುಳಿತುಬಿಟ್ಟ.

ಕೇಶವ ಪಿಳ್ಳೆಗೆ ಕುಣಿದಾಡಬೇಕು ಎನ್ನಿಸಿತು. ಗಟ್ಟಿಯಾಗಿ ಕೂಗಬೇಕು ಎನ್ನಿಸಿತು. ಆ ಮನೆಯಲ್ಲಿ ಮಾಧು ಪಿಳ್ಳೆ ಎನ್ನುವ ಅಡಿಗೆಯವನು ಮಾತ್ರ ಇದ್ದದ್ದು. ಎಲ್ಲವನ್ನೂ ಮರೆತು. ತನ್ನನ್ನು ತಾನು ಮರೆತು ಅವನು ಅಡಿಗೆಮನೆಗೆ ಹೋದ: "ಮಾಧು ಪಿಳ್ಳೆ, ಅದೃಷ್ಟ! ದೊಡ್ಡ ಅದೃಷ್ಟ! ನನ್ನನ್ನು ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿ ನೇಮಿಸಿದ್ದಾರೆ."

ಏನೂ ತಿಳಿಯದ ಆ ಮುದುಕ ಬಾಯಿಬಿಟ್ಟುಕೊಂಡು ನಿಂತಿದ್ದ. ಅವನಿಗೆ ಒಂದೂ ಅರ್ಥವಾಗಲಿಲ್ಲ. ಯಜಮಾನರಿಗೆ ಅದೃಷ್ಟ ಕೂಡಿಬಂದಿತು ಎಂದು ಮಾತ್ರ ತಿಳಿಯಿತು. ಥಟ್ಟನೆ ಕೇಶವ ಪಿಳ್ಳೆ ಪೆಚ್ಚಾದಂತೆ ತೋರಿತು. ಹಾಗೆಂದೂ ಇದಕ್ಕೆ ಮೊದಲು ಕೇಶವ ಪಿಳ್ಳೆ ಮಾಧೂ ಪಿಳ್ಳೆಯ ಹತ್ತಿರ ಮಾತಾಡಿಲ್ಲ. ತೀರ ಕೆಳಮಟ್ಟದಲ್ಲಾಗಿತ್ತು ಅವನು ನಡೆದುಕೊಂಡದ್ದು. ಅವನ ಈ ಆಹ್ಲಾದದಲ್ಲಿ ಪಾಲುಗೊಳ್ಳಲು ಬೇರೆ ಯಾರಿದ್ದಾರೆ? ಯಾರೂ ಇಲ್ಲ. ನಿತ್ಯಪರಿಚಯವಿದ್ದ ಆ ಮನೆಯ ಕಂಬಗಳಿದ್ದುವು. ಅವುಗಳ ಹತ್ತಿರವೇ ಹೇಳಬೇಕು ಎನ್ನಿಸಿತು. "ನನ್ನನ್ನ ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿ ನೇಮಿಸಿದ್ದಾರೆ" ಎಂದ. ಕೂಡಲೇ ಅವನು ಕಾತ್ಯಾಯಿನಿಯನ್ನು ನೆನಸಿಕೊಂಡ. ಅವಳಿಗೆ ಇದೇನು ಎಂದು ತಿಳಿದೀತೇ? ಅವಳಿಗೆ ಅವನ ಜೊತೆಯಲ್ಲಿ ಆಹ್ಲಾದಿಸಲು ಸಾಧ್ಯವೇ ಹೀಗೆ ಆಡಿ ಹಾಡಿ ಕುಣಿದಾಡಲು? ಅವನು ಆಹ್ಲಾದದಿಂದ ಹಾಡಿ ಕುಣಿದಾಡುವಾಗ ಅವಳು ಕೇಳಿಯಾಳು: "ಇದೇನು, ನಿಮಗೇನಾದರೂ ಹುಚ್ಚು ಹಿಡಿಯಿತಾ?" ಎಂದು.

ನಂತರ ಕೇಶವ ಪಿಳ್ಳೆ ಮತ್ತೆ ಕೆಲವರನ್ನು ನೆನಸಿಕೊಂಡ. ಹರಿಹರಯ್ಯರ್. ಗೋವಿಂದನ್ ನಾಯರ್. ಮ್ಯಾಥ್ಯೂ. ಮಾದೇವನ್ ಪಿಳ್ಳೆ! ಅವರು ಅವನನ್ನು ಒಂದು ಕಾಲದಲ್ಲಿ ಹೃದಯಪೂರ್ವಕವಾಗಿ ಅಭಿನಂದಿಸಿದವರು. ಆದರೆ ಅವರಿಗೆ ಆಹ್ಲಾದಿಸಲು ಸಾಧ್ಯವೆ? ಸಾಧ್ಯವಿಲ್ಲ. ಅಂತೂ ಅವರು ಸಂತೋಷಪಡುತ್ತಾರೆ. ಕೂಡಲೇ ಕೇಶವ ಪಿಳ್ಳೆಗೆ ತನ್ನ ಪ್ರಾಮಾಣಿಕತೆಯನ್ನು ಕುರಿತು ನೆನಪಾಯಿತು. ಮಾಧು ಪಿಳ್ಳೆಯ ಹತ್ತಿರ ತನ್ನನ್ನು ತಾನು ಮರೆತು ಹೇಳಿದಂತೆ ತಾಲ್ಲೂಕು ಆಫೀಸಿನಲ್ಲಿರುವ ಕೆಳ ನೌಕರರ ಹತ್ತಿರ ಹೇಳಿದರೋ! ಅವನಿಗೆ ಬೇಕಾಗಿದ್ದದ್ದು ಅವನಂತೆ ಎಲ್ಲವನ್ನೂ ಮರೆತು ಕುಣಿದಾಡುವವರು!

ತಂಗಮ್ಮ!

ಟೆಲಿಫೋನ್ ಗಂಟೆ ಬಾರಿಸುತ್ತಿತ್ತು. ಅವನು ಓಡಿಹೋಗಿ ರಿಸೀವರನ್ನು ಕೈಗೆತ್ತಿಕೊಂಡ. ಚೀಫ್ ಸೆಕ್ರೆಟರಿಯ ಹೆಂಡತಿ ಮಾತನಾಡುತ್ತಿದ್ದದ್ದು. ಅವರು ಕೇಶವ ಪಿಳ್ಳೆಯನ್ನು ಅಭಿನಂದಿಸುತ್ತಿದ್ದರು. ಅದು ಕೇವಲ ಮಾತಿನ ಅಭಿನಂದನೆಯಲ್ಲ. ಹೃದಯ

ದಿಂದ ಬರುತ್ತಿದ್ದ ಅಭಿನಂದನೆ. ಈ ಅಭ್ಯುದಯಕ್ಕೆಲ್ಲ ಕಾರಣ ನೀವೇ ಎಂದು ಕೇಶವ ಪಿಳ್ಳೆ ಹೇಳಿದ.

ಆದರೆ ಅವನ ಸಂತೋಷವೆಷ್ಟಿತ್ತು ಎನ್ನುವುದನ್ನು ಅರಿಯಲು ಅವರಿಗೂ ಸಾಧ್ಯವಾಗಿರಲಿಲ್ಲ. ಎಷ್ಟೊಂದು ಜನರು ಎಷ್ಟೆಲ್ಲ ಶ್ರಮಪಟ್ಟರು. ಅವರೊಬ್ಬರಿಗೂ ದೊರೆಯಲಿಲ್ಲ. ಅವರ ಹತ್ತಿರ ಟೆಲಿಫೋನಿನಲ್ಲಿ ತಿಳಿಸಿದರೇನಂತೆ! ಅವರಿಗೆ ಇದು ಗೊತ್ತಾಗಿರಬಹುದು. ಅಂತು ಅಲೆಗ್ಸಾಂಡರನ್ನೂ ಜಿ. ಎನ್. ನಾಯರನ್ನೂ, ತಂಬಿಯನ್ನೂ ಫೋನಿನಲ್ಲಿ ಕರೆದು ತಿಳಿಸಬೇಕು. ಅದೊಂದು ವಿನೋದವಾಗಿ ತೋರಿತು. ಅದರಲ್ಲಿ ಹಾಸ್ಯದ ಸುಖವಿತ್ತು. ದಿವಾನರ ಬಂಧು ಎಲ್ಲಿ ಹೋದ? ವ್ಯಸರಾಯಿಗಳ ಶಿಫಾರಸ್ ಎಲ್ಲಿ ಹೋಯಿತು? ಎಂದೆಲ್ಲ ಕೇಳುವುದಕ್ಕೆ ತಕ್ಕ ಸಮಯ ಇದು! ಅವರು ಈಗ ಹೇಗಿರಬಹುದು?

ಥಟ್ಟನೆ ಒಂದು ಟೆಲಿಫೋನ್ ಕಾಲ್. ಅದು ಭಕ್ತಿವಿಲಾಸದಿಂದ. ಕೇಶವ ಪಿಳ್ಳೆಯನ್ನು ದಿವಾನರು ಕರೆಯುತ್ತಿದ್ದರು. ಉಕ್ಕಿಬರುತ್ತಿದ್ದ ಸಂತೋಷ ಒಂದು ನಿಮಿಷದಲ್ಲಿ ತಣ್ಣಗಾದಂತಾಯಿತು. ಒಂದು ಕ್ಷಣದಲ್ಲಿ ಒಂದು ಜಟಕಾ ಬಂದಿತು. ಅವನು ಕೂಡಲೇ ಹೊರಟ.

ಕರೆದದ್ದು ಯಾಕೆ? ಅದೂ ಒಂದು ಭಯವಾಗಿತ್ತು. ಕೊಲ್ಲುವುದಕ್ಕೋ ಕಾಪಾಡುವುದಕ್ಕೋ? ಏನಾದರೂ ಒಂದು ಬೇಡವಾದದ್ದು ಬಾಯಿನಿಂದ ಬಂದರೆ ಎಲ್ಲ ಮುಗಿಯಿತು. ಇಂದು ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿ ನೇಮಕ ಮಾಡಿರುವ ಆರ್ಡರ್ ಹೊರಡಿಸಿದರು. ಅದನ್ನು ಬದಲಾಯಿಸಬೇಕು ಎಂದು ಪುನಃ ತೋರಿರಬಹುದು. ಬರುವುದಕ್ಕೆ ಹೇಳಿಕಳುಹಿಸಿ ಮಾತನಾಡುವಾಗ ಯಾರನ್ನೂ ಇಕ್ಕಟ್ಟಿಗೆ ಸಿಕ್ಕಿಸುವ ಸಾಮರ್ಥ್ಯವೂ ಬುದ್ಧಿಶಕ್ತಿಯೂ ದಿವಾನರಿಗಿದೆ. ಹಾಗೆ ಬುದ್ಧಿಯಿಲ್ಲದವನನ್ನಾಗಿ ಅಪ್ರಯೋಜಕನನ್ನಾಗಿ ಮಾಡಿ ಈ ಆರ್ಡರ್ ರದ್ದು ಮಾಡುವುದಕ್ಕಾಗಿರಬಹುದೇ ತನ್ನನ್ನು ಬರಹೇಳಿರುವುದು? ಕೇಶವ ಪಿಳ್ಳೆಯ ಮನಸ್ಸು ಹಾಗೆ ಆಲೋಚಿಸುತ್ತಿತ್ತು. ಉಪವಾಸವಿದ್ದವನನ್ನು ಬರಹೇಳಿ ಊಟದ ಮುಂದೆ ಕೂರಿಸಿ, ಹಾಗೇ ಎದ್ದುಹೋಗು ಎಂದು ಹೇಳಿದಂತಾಗಿದ್ದರೆ?

ಕೇಶವ ಪಿಳ್ಳೆಯ ಮನಸ್ಸೂ ಹೃದಯವೂ ಶಾಸ್ತಾವು ದೇವರಲ್ಲಿ ಪ್ರಾರ್ಥನೆಮಾಡಿಕೊಂಡುವು. ಇತ್ತೀಚೆಗೆ ಆ ಜೋಯಿಸರನ್ನು ಬರಮಾಡಿ ಕೇಳುತ್ತಾ ಇರಲಿಲ್ಲ. ಆಗ ಕಿಟ್ಟುಮಾಮನ ಮಾತುಗಳು ಕಿವಿಗಳೊಳಗೆ ಮೊಳಗಿದುವು.

"ಅವಳು ಭಾಗ್ಯವಂತೆ."

ಒಂದು ಆತ್ಮವಿಶ್ವಾಸ ಅವನಿಗುಂಟಾಯಿತು. ಈ ಪದವಿ ಆತನಿಗುಂಟಾದದ್ದಲ್ಲ. ಅದು ಅವನಿಗೆ ಕೈಗೂಡಿತು. ಇನ್ನು ಮೇಲೆ ಅದು ಕೈಬಿಟ್ಟು ಹೋಗುವುದಿದ್ದರೆ ಹೋಗಲಿ! ಬೇರೆ ಏನು ಮಾಡುವುದಕ್ಕಾಗುತ್ತದೆ! ಆದರೆ ಹಾಗೇ ಆಗಿಬಿಟ್ಟರೆ ಅದನ್ನು

ಸಹಿಸುವುದಕ್ಕೆ ಅವನಿಗೆ ಸಾಧ್ಯವಿಲ್ಲ.

ಆ ಉತ್ಸಾಹದ ಹುಚ್ಚನ್ನು ತೋರಿಸ್ತಿಕೊಂಡದ್ದು ಮಾಧವ ಪಿಳ್ಳೆಯ ಹತ್ತಿರ ಮಾತ್ರ. ಅವನು ಮಾತ್ರ ಅದನ್ನು ಕಂಡದ್ದು. ಒಂದು ವೇಳೆ ಪರಾಜಯ ಹೊಂದಿ ಹಿಂದಿರುಗಿದಾಗ ಕಂಬಗಳು ತನ್ನನ್ನು ಕಂಡು ನಗಬಹುದು! ಜಿ. ಎನ್. ನಾಯರನ್ನೂ ಅಲೆಗ್ಸಾಂಡರನನ್ನೂ ಫೋನಿನಲ್ಲಿ ಕರೆದು ಹೇಳದೇ ಹೋದದ್ದು ಒಳ್ಳೆಯದಾಯಿತು. ಭಗವತಿ ಕುಟ್ಟಿಯಮ್ಮ ಹಾಗೆ ಸಂಭವಿಸಿದರೆ ದುಃಖಿಸಬಹುದು! ಇಲ್ಲ, ಹಾಗೇನೂ ಆಗುವುದಿಲ್ಲ. ಶಾಸ್ತಾವು ದೇವರು ಹಾಗೆ ಮಾಡುವುದಿಲ್ಲ. ಕಾತ್ಯಾಯಿನಿಯ ಭಾಗ್ಯ ತನ್ನನ್ನು ಎಂದೆಂದೂ ಹಾಗೆಯೇ ಕಾಪಾಡಿಕೊಂಡು ಹೋಗುತ್ತದೆ. ದಿವಾನರ ಮುಂದೆ ಬೆವರದಂತೆ ಹೋಗಿ ನಿಂತುಕೊಳ್ಳಬೇಕಾದರೆ ಅವನು ಸ್ವಲ್ಪ ಶ್ರಮಿಸಬೇಕಾಯಿತು. ಅವರ ಮುಖಭಾವ ಭರವಸೆ ನೀಡುವುದಾಗಿತ್ತು. ಆದರೆ ಆತ್ಮದ ಆಳಕ್ಕಿಳಿಯುತ್ತಿದ್ದ ಆ ನೋಟವನ್ನು ಎದುರಿಸಲು ಸಾಧ್ಯವಿರಲಿಲ್ಲ.

ದಿವಾನರು ಕೇಳಿದರು: "ಆರ್ಡರ್ ಪಾಸು ಮಾಡಿದ್ದು ಗೊತ್ತಿರಬೇಕಲ್ಲವೆ?"

ವಿನೀತನಾಗಿ ಕೇಶವ ಪಿಳ್ಳೆ ಹೇಳಿದ:

"ಹ್ಞು! ಗೊತ್ತಾಯ್ತು."

ಒಂದು ಕ್ಷಣ ಬಿಟ್ಟು ಅವರು ಹೇಳಿದರು: "ನಿಮ್ಮ ರಿಪೋರ್ಟಿನ ಆಧಾರದ ಮೇಲೆ ಮಾಡಿದ ಏರ್ಪಾಟು ಅದು. ಸರ್ಕಾರದ ಪ್ರಕಟಣೆಯನ್ನು ತುಂಬ ಫಲಪ್ರದವಾಗಿ ಬೇಗ ಮಾಡಿ ಮುಗಿಸಲು ಸಾಧ್ಯವಿರುವ ಎಷ್ಟೋ ಸಂಗತಿಗಳ ಜವಾಬ್ದಾರಿಯನ್ನು ನಿಮಗೆ ವಹಿಸಲಾಗಿದೆ. ನಿಮಗೆ ವಹಿಸಿರುವ ಕೆಲಸದ ಪ್ರಾಧಾನ್ಯತೆಯೇನು ಅಂತ ನಿಮಗ ಗೊತ್ತಲ್ಲ?"

ಕೇಶವ ಪಿಳ್ಳೆ ಶ್ರದ್ಧೆಯಿಂದ ಕೇಳಿಸಿಕೊಳ್ಳುತ್ತ ಹೇಳಿದ:

"ಗೊತ್ತುಂಟು."

ದಿವಾನರು ಹೇಳಿದರು: "ಸರಿ, ನಿಮ್ಮ ಹಾದಿಯಲ್ಲಿ ಯಾವ ಅಡ್ಡಿಯೂ ಬರುವುದಿಲ್ಲ. ಅಗತ್ಯವಿರುವ ಹಣ ನಿಮಗೆ ಕೊಡಲಾಗುತ್ತದೆ. ಯಾವುದರಲ್ಲೂ ತಡವಾಗುವುದಾಗಲೀ, ಉಪೇಕ್ಷಿಸುವುದಾಗಲೀ ಇರುವುದಿಲ್ಲ. ಒಂದು ಬ್ಲ್ಯಾಂಕ್ ಚೆಕ್ ನಿಮ್ಮ ಕೈಯಲ್ಲಿ ಕೊಟ್ಟಿದೆ ಎಂದು ಭಾವಿಸಿ, ನಿಮಗೆ ಇಷ್ಟ ಬಂದ ಹಾಗೆ ವಿನಿಯೋಗಿಸಬಹುದು."

ದಿವಾನರಿಗೆ ಅದಕ್ಕಿಂತ ಹೆಚ್ಚಿಗೆ ಹೇಳಬೇಕಾದದ್ದೇನೂ ಇರಲಿಲ್ಲ. ಕೇಶವ ಪಿಳ್ಳೆ ಹೋಗಲು ಅನುಮತಿ ನೀಡಿದರು. ಅವನು ಸರಿಯಾಗಿ ಉಸಿರಾಡುವಂತಾದ. ದಿವಾನರು ಹೇಳಿದ್ದರ ತಿರುಳೆಲ್ಲ ಅವನಿಗೆ ಪೂರ್ತಿ ಅರ್ಥವಾಯಿತೇ ಎನ್ನುವುದು ಅವನಿಗೆ ಸಂಶಯವಾಗಿತ್ತು. ಹೊರಗೆ ಬಂದಾಗ ಅವನನ್ನು ಮುಕ್ತಕಂಠದಿಂದ ಅಭಿನಂದಿಸಲು ಪ್ರೈವೇಟ್ ಸೆಕ್ರೆಟರಿ ಹೊರಗೆ ಕಾಯುತ್ತ ನಿಂತಿದ್ದರು.

ತುಂಬ ಸಂತೋಷದಿಂದ ಕೇಶವ ಪಿಳ್ಳೆ ಹಿಂದಿರುಗಿದುದು. ಈ ಸಂಸ್ಥಾನದಲ್ಲಿ ಇಷ್ಟೊಂದು ಭಾಗ್ಯವಂತರು ಬೇರೆ ಯಾರಿದ್ದಾರೆ? ದೂರದಲ್ಲಿ ಕಾಣುವ ಮುಕ್ಕುನ್ನಿ ಪರ್ವತ ಅವನನ್ನು ಕೈಬೀಸಿ ಕರೆಯುತ್ತಿತ್ತು. ಏತಕ್ಕೆಂದೇ? ಮೇಲೆ ಹತ್ತಿ ನಿಂತು ಲೋಕವನ್ನೆಲ್ಲ 'ಇಷ್ಟೊಂದು ಭಾಗ್ಯವಂತರು ಯಾರಿದ್ದಾರೆ?' ಎಂದು ಕೇಳಲು. 'ನಾನುಂಟು' ಎಂದು ಧೈರ್ಯವಾಗಿ ಉತ್ತರ ಹೇಳಲು ಮನುಷ್ಯ ಮಾತ್ರನಾದವರು ಯಾರಾದರೂ ಇದ್ದಾರೆಯೇ? ಇಲ್ಲ. ಎಂತಹ ತೇಜೋಮಯವಾದ ಜಗತ್ತು! ಎಲ್ಲಿ ನೋಡಿದರೂ ನಗು, ಲಾಸ್ಯಗಳೇ ಕಂಡುಬರುತ್ತಿವೆ. ಅಂಗಡಿ ಮುಂದಿನ ಜಗಲಿ ಮೇಲೆ ಕುಳಿತಿರುವ ಭಿಕ್ಷುಕಿಯರೂ ನಗುತ್ತಿದ್ದಾರೆ—ತಲೆಯ ಮೇಲೆ ಕುಕ್ಕೆ ಹೊತ್ತುಕೊಂಡು ಹೋಗುತ್ತಿರುವ ತರಕಾರಿಯವಳೂ ಅವಳ ಜೊತೆಯಲ್ಲಿ ಹಾರೆ ಪಿಕಾಸಿ ಹಿಡಿದುಕೊಂಡು ಹೋಗುತ್ತಿರುವವನೂ ಮಾತನಾಡುತ್ತಿರುವುದೇನು? ನಿಜವಾಗಿಯೂ ಏನೋ ಸ್ವಾರಸ್ಯದ ವಿಷಯ. ಅವರೂ ನಗುತ್ತಿದ್ದಾರೆ. ಅಂಗಡಿಗಳಲ್ಲೆಲ್ಲ ತುಂಬ ಜನರು ಗುಂಪುಗುಂಪಾಗಿದ್ದಾರೆ. ಅಂದು ಯಾವುದೋ ಒಂದು ವಿಶೇಷ ದಿನವೆಂದು ತೋರಿತು. ಅದನ್ನು ಆಚರಿಸಲು ಸಾಮಾನು ಕೊಳ್ಳುತ್ತಿರಬೇಕು!

ಕೇಶವ ಪಿಳ್ಳೆ ತಾನು ವಾಸಮಾಡುತ್ತಿದ್ದ ಸ್ಥಳಕ್ಕೆ ಬಂದ. ಅವನಿಗೆ ಸುಮ್ಮನೆ ಕುಳಿತಿರುವುದಕ್ಕಾಗಲಿಲ್ಲ. ಅವನ ಸಂತೋಷ ಹೆಚ್ಚುತ್ತಲೇ ಇತ್ತು. ಅದರಲ್ಲಿ ಪಾಲುಗೊಳ್ಳಲು ಯಾರಿದ್ದಾರೆ? ಎಲ್ಲಿಗೆ ಹೋಗುವುದು?

ಆತ 'ಶೇಖರ ವಿಲಾಸ'ಕ್ಕೆ ಟೆಲಿಫೋನ್ ಮಾಡಿದ. ಭಾಗೀರಥಿಅಮ್ಮ ಉತ್ತರ ಹೇಳಿದ್ದು. ತಂಗಮ್ಮ ಮನೆಯಲ್ಲಿಲ್ಲ. ಆ ದಿನ ಆಫೀಸಿಲ್ಲದಿದ್ದರೂ ಬೆಳಗ್ಗೆ ಹೊತ್ತಿಗೆ ಮುಂಚೆ ಎಲ್ಲಿಗೋ ಹೋಗಿದ್ದಳು. ಎಲ್ಲಿಗೆ ಎಂದು ತಿಳಿಯದು.

ಕೇಶವ ಪಿಳ್ಳೆ ಹೇಳಿದ: "ಒಂದು ಒಳ್ಳೆ ಸುದ್ದಿ. ನನ್ನನ್ನು ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿ ನೇಮಿಸಿದ್ದಾರೆ." ಭಾಗೀರಥಿಅಮ್ಮನಿಗೆ ಅದು ಅರ್ಥವಾಗಲಿಲ್ಲ. ಅವರು ಕೇಳಿದರು:

"ಆ ಕೆಲಸ ಯಾವುದು ಪಿಳ್ಳೆ?"

ಕೇಶವ ಪಿಳ್ಳೆ ಏನೂ ಹೇಳದೆ ರಿಸೀವರ್ ಕೆಳಗಿಟ್ಟ. ತಂಗಮ್ಮನಿಗಾಗಿದ್ದರೆ ಅರ್ಥವಾಗುತ್ತಿತ್ತು. ಒಂದು ಬ್ಲ್ಯಾಂಕ್ ಚೆಕ್ಕನ್ನು ದಿವಾನರು ಕೊಟ್ಟಿದ್ದಾರೆ ಎಂದು ಹೇಳಿದರೆ, ಅದರ ಮಹತ್ವ ಅವಳಿಗೆ ತಿಳಿಯುತ್ತಿತ್ತು. ಆದರೆ ಅವಳು ಹಾಳಾಗಿಹೋಗಿದ್ದಾಳೆ!

ಆ ಸಣ್ಣ ಮನೆಯೊಳಗೆ ಸುಮ್ಮನೆ ಕುಳಿತಿರಲು ಸಾಧ್ಯವಿಲ್ಲದೆ ಅವನು ಜಟಕದಲ್ಲಿ ಕುಳಿತು ಹೊರಟ. ಅಂದು ಇಡೀ ದಿನ ಆ ಜಟಕದಲ್ಲಿ ಕುಳಿತು ನಗರದಲ್ಲೆಲ್ಲ ಓಡಾಡಿದ. ಕಡಲ ದಂಡೆಯಲ್ಲಿ ಮಾತ್ರ ಸ್ವಲ್ಪ ಹೊತ್ತು ಆ ಜಟಕ ನಿಂತಿತ್ತು. ಕುದುರೆಗೆ ವಿಶ್ರಾಂತಿ ಬೇಕೆಂದು ಕುದುರೆಯವನು ಹೇಳಿದಾಗ ಅದು ಸತ್ತರೆ ಸಾಯಲಿ ಎಂದಾಗಿತ್ತು ಕೇಶವ ಪಿಳ್ಳೆಯ ಉತ್ತರ. ಅವನು ಒಂದು ಕಾರನ್ನು ಕೊಂಡುಕೊಳ್ಳಲು ತೀರ್ಮಾನಿಸಿದ.

ಸಂಜೆಯಾದ ಮೇಲೆ ಪಳುಪಕ್ಕಾಡ್ ರಾಮವರ್ಮ ಕ್ಲಬ್ ಮೂಲಕ ಆ ಜಟಕ ಹೋಗುತ್ತಿತ್ತು. ಡಿಪಾರ್ಟ್‌ಮೆಂಟಿನ ಮುಖ್ಯಸ್ಥರು, ಸೆಕ್ರೆಟರಿಗಳು, ಅವರ ಹೆಂಡತಿಯರು—ಎಲ್ಲರನ್ನೂ ಅಲ್ಲಿ ಕಾಣಬಹುದಾಗಿತ್ತು. ಆ ಕಟ್ಟಡದಲ್ಲೂ ಪರಿಸರದಲ್ಲೂ ಬೆಳಕೋ ಬೆಳಕು. ಆ ಕಾಂಪೌಂಡಿನೊಳಕ್ಕೆ ಜಟಕ ಕೊಂಡುಹೋಗುವಂತೆ ಹೇಳಿದ.

ಕೇಶವ ಪಿಳ್ಳೆ ಕ್ಲಬ್ಬಿನ ಮೆಂಬರಲ್ಲ. ಅದರ ಮೆಂಬರಾಗಲು ಸೆಕ್ರೆಟರಿ ಎಷ್ಟೋ ವರ್ಷಗಳಿಂದ ಪ್ರಯತ್ನಿಸುತ್ತಿದ್ದರು. ಆದರೆ ಆವರು ಮೆಂಬರರಾಗಿಲ್ಲ. ಅದು ದೊಡ್ಡ ಉದ್ಯೋಗಸ್ಥರ ಒಂದು ಏರ್ಪಾಡೆಂದು ಅವರು ಹೇಳುವುದು. ಕೇಶವ ಪಿಳ್ಳೆಯೂ ಎಷ್ಟೋ ವರ್ಷಗಳಿಂದ ತಿರುವನಂತಪುರದಲ್ಲಿ ಒಬ್ಬ ಪ್ರಧಾನ ಉದ್ಯೋಗಸ್ಥ. ಆದರೂ ಅವನು ವ್ಯಾಖ್ಯಾನಿಸುತ್ತಿದ್ದದ್ದು. ಅವನು ಹೇಗೆ ಆದ ಎಂದು. ಆ ಸ್ಥಾಪನೆ ದೊಡ್ಡ ಉದ್ಯೋಗಸ್ಥರಾಗಲು ಜನಿಸಿದವರಿಗೆ, ಹಾಗಿರುವವರಿಗೋಸ್ಕರ ಇರುವಂಥಾದ್ದು. ಅಲ್ಲಿ ಅವನು ಅಪ್ರಯೋಜಕ. ಅದರಿಂದಾಗಿ ಇದುವರೆಗೆ ಅಲ್ಲಿಯ ಮೆಂಬರನಾಗಿಲ್ಲ.

ಪಾರ್ಕಿನ ಹುಲ್ಲುನೆಲದ ಮೇಲೆ ಮೂರು ನಾಲ್ಕು ಜನರು ಅಲ್ಲಲ್ಲಿ ಕುಳಿತು ಮಾತನಾಡುತ್ತಿದ್ದರು. ಅಲ್ಲಿಂದ ಸ್ವಲ್ಪ ದೂರದಲ್ಲಿ ಕೆಲವರು ಟೆನ್ನಿಸ್ ಆಡುತ್ತಿದ್ದರು. ಒಳಗೆ ಅಧಿಕಾರಿಗಳ ಪತ್ನಿಯರು. ಅವರು ಕೇರಂ ಆಡುತ್ತಿದ್ದರು. ಟೇಬಲ್ ಟೆನ್ನಿಸ್ ಆಡುತ್ತಿದ್ದರು ಕೆಲವರು. ಮಾವಿನ ಮರದ ನೆರಳಿನಲ್ಲಿ ಕೆಲವರು ಕುಳಿತಿದ್ದರು. ಅವರು ರಾತ್ರಿಯ ಪಾನೀಯವನ್ನು ಕುಡಿಯುತ್ತಿದ್ದರು. ಬಿಳಿಯ ಉಡುಪು ತೊಟ್ಟು, ತಲೆಯ ಮೇಲೆ ಪೇಟ ಧರಿಸಿದ್ದ ಸೇವಕರು ಭರದಿಂದ ಓಡಾಡುತ್ತಿದ್ದರು. ಖಂಡಿತವಾಗಿಯೂ ಅಂದಿನ ಸಂಭಾಷಣೆಯ ವಿಷಯ ಕೇಶವ ಪಿಳ್ಳೆಯ ಕುರಿತಾಗಿತ್ತು. ಆ ಜಟಕ ಒಳಗೆ ಕುಳಿತ ಸ್ತ್ರೀಯರ ಗಮನವನ್ನು ಸೆಳೆಯಿತು. ಕೆಳಗಿಳಿದಾಗ ಎಲ್ಲರೂ ಕೇಶವ ಪಿಳ್ಳೆಯನ್ನು ಗುರುತಿಸಿದರು. ಹೊರಗೆ ಪಾರ್ಕಿನಲ್ಲಿ ಕುಳಿತಿದ್ದವರು ಮೊದಲು ಕಂಡದ್ದು. ಅದೊಂದು ಅನಿರೀಕ್ಷಿತ ಸಂಭವವಾಗಿತ್ತು. ಥಟ್ಟನೆ ಸ್ತ್ರೀಯರು, ಟೆನ್ನಿಸ್ ಆಡುತ್ತಿದ್ದವರು, ಎಲ್ಲರೂ ಕೇಶವ ಪಿಳ್ಳೆಯ ಸುತ್ತ ಸೇರಿದರು. ಅಂದು ತಿರುವನಂತಪುರದಲ್ಲೆಲ್ಲ ಮಾತನಾಡುತ್ತಿದ್ದ ವಿಷಯ ಕೇಶವ ಪಿಳ್ಳೆಯದಾಗಿತ್ತು. ಮೊದಲಾಗಿ ಅಂತಹ ಒಂದು ಜನಸಮೂಹದ ಮುಂದೆ ಕೇಶವ ಪಿಳ್ಳೆಗೆ ಯಾವ ವಿಷಮತೆಯೂ ಉಂಟಾಗಲಿಲ್ಲ. ಆ ಸಂತೋಷದ ಮಧ್ಯೆ ಅವನಿಗೇನೋ ಒಂದು ರೀತಿಯ ಚೈತನ್ಯವುಂಟಾಗಿತ್ತು. ಎಲ್ಲರೂ ಅವನ ಕೈ ಕುಲುಕಿ ಅವನನ್ನು ಅಭಿನಂದಿಸುತ್ತಿದ್ದರು. ಅವನು ಎಲ್ಲರಿಗೂ ಪ್ರಸನ್ನವದನನಾಗಿ ಕೃತಜ್ಞತೆಯನ್ನು ತಿಳಿಸಿದ.

ಕ್ಲಬ್ ಸೆಕ್ರೆಟರಿ ಆ ಸಂದರ್ಭವನ್ನು ಪ್ರಯೋಜನಪಡಿಸಿಕೊಂಡ: "ಹಾಗಾದರೆ ಈ ಶುಭಮುಹೂರ್ತದಲ್ಲಿ ಇದರ ಮೆಂಬರಾಗಬಹುದಲ್ಲ !"

ನಗುತ್ತ ಕೇಶವ ಪಿಳ್ಳೆ ಒಪ್ಪಿದ.

ಅಲ್ಲಿ ಸೇರಿದ್ದವರೆಲ್ಲರೂ ಕೇಶವ ಪಿಳ್ಳೆಗೆ ಪರಿಚಯವಿರಲಿಲ್ಲ. ಥಾಮಸ್

ಅವರೆಲ್ಲರನ್ನೂ ಪರಿಚಯ ಮಾಡಿಕೊಡುತ್ತ ಹೇಳಿದ್ದು: "ಇಲ್ಲಿ ಆಫೀಸರರ ಹೆಂಡತಿಯರೂ ಮೆಂಬರುಗಳು."

ಕೇಶವ ಪಿಳ್ಳೆಯ ಮುಖ ಸ್ವಲ್ಪ ಬಿಳುಚಿಕೊಂಡಿತು ಎಂದು ಹೇಳದಿರಲು ಸಾಧ್ಯವಿಲ್ಲ. ಅವನ ಮುಖ ಹಾಗೆ ಬಿಳುಚಿಕೊಂಡದ್ದರಿಂದ ಮುಖಭಾವನೆ ವ್ಯತ್ಯಾಸಗೊಂಡಿತ್ತು.

"ನನ್ನ ಹೆಂಡತಿ ಇಲ್ಲಿಲ್ಲ. ಇದ್ದರೂ ಕ್ಲಬ್‌ಗೆ ಸೇರುವಂಥವಳಲ್ಲ, ಹಳ್ಳಿಹೆಣ್ಣು."

ಅಸಿಸ್ಟೆಂಟ್ ಸೆಕ್ರೆಟರಿ ರಾಮಕೃಷ್ಣ ಪಿಳ್ಳೆಯ ಹೆಂಡತಿಯೂ ಸೂಪರಿಂಟೆಂಡೆಂಟ್ ಗೌರಿಯಮ್ಮನೂ ಪರಸ್ಪರ ಅರ್ಥವತ್ತಾಗಿ ನೋಡುತ್ತ ನಗುತ್ತಿದ್ದದ್ದು ಕೇಶವ ಪಿಳ್ಳೆಯ ದೃಷ್ಟಿಗೆ ಬಿದ್ದಿತು. ಖಂಡಿತವಾಗಿಯೂ ಅವರ ಮನಸ್ಸಿನಲ್ಲಿ ತಂಗಮ್ಮನ ಕಥೆ ನೆನಪಾಗಿರಬೇಕು.

ಗೌರ್ನ್ಮೆಂಟ್ ಸೆಕ್ರೆಟರಿ ಜಾನ್ ಕೇಳಿದರು:

"ದಿವಾನರನ್ನು ಕಂಡಿರಾ?"

ಕೇಶವ ಪಿಳ್ಳೆ ಹೇಳಿದ: "ಕಂಡೆ. ಇವತ್ತು ಬೆಳಿಗ್ಗೆ ನಾನು ಊರಿನಿಂದ ಬಂದದ್ದು. ಒಂದು ವಾರ ರಜದಲ್ಲಿದ್ದೆ. ಬೆಳಗ್ಗೆ ಬಂದ ಕೂಡಲೇ ಭಕ್ತಿವಿಲಾಸದಿಂದ ಟೆಲಿಫೋನ್‌ನಲ್ಲಿ ಕರೆದು ಹೇಳಿದರು."

ಅವನು ಹೇಳುವುದನ್ನು ಯಾರೂ ನಂಬುವುದಿಲ್ಲ ಎನ್ನಿಸಿತು.

ಆಗ ಸೆಕ್ರೆಟರಿಗಳಾದ ಜಿ. ಎನ್. ನಾಯರ್, ಅಲೆಗ್ಸಾಂಡರ್, ತಂಬಿ—ಮೂವರೂ ಮತ್ತೊಂದು ಕಡೆಯಿಂದ ಇಳಿದು ಬಂದರು. ಅವರ ಕೈಯಲ್ಲಿ ವಿಸ್ಕಿಯೂ ಗ್ಲಾಸೂ ಇದ್ದುವು. ಮೂವರೂ ಸಾಧಾರಣವಾಗಿ ಕುಡಿದಿದ್ದರು. ಕೇಶವ ಪಿಳ್ಳೆ ಎದ್ದು ನಿಂತು ಮೂವರಿಗೂ ನಮಸ್ಕರಿಸಿದ. ಅಲೆಗ್ಸಾಂಡರ್ ಮೊದಲು ಮಾತನಾಡಿಸಿದ್ದು. ಆತ ಕೇಶವ ಪಿಳ್ಳೆಯನ್ನು ಅಭಿನಂದಿಸಿದರು. ಎಲ್ಲರೂ ಪರಸ್ಪರ ಒಂದು ಹುಸಿನಗೆಯಿಂದ ಮುಖಮುಖ ನೋಡಿಕೊಂಡರು. ಒಂದು ಸ್ಪರ್ಧೆಯ ಸೋತ ಮನುಷ್ಯ ಪರಾಜಯವನ್ನು ಮರೆತಂತ ಭಾವಿಸಿ ಅಭಿನಂದಿಸುತ್ತಿದ್ದಾನಲ್ಲ !

ಅಲೆಗ್ಸಾಂಡರ್ ಹೇಳಿದರು:

"ಒಂದು ಗುಟುಕು ಕುಡಿದರೇನು ಪಿಳ್ಳೆ?"

ಒಂದು ವಿಸ್ಕಿ ಬಾಟಲನ್ನೂ ಸೋಡವನ್ನೂ ತರುವಂತೆ ಆಜ್ಞಾಪಿಸಿದರು. ಸ್ವಲ್ಪ ಗಾಬರಿಯಿಂದ ಕೇಶವ ಪಿಳ್ಳೆ ಹೇಳಿದ: "ಥ್ಯಾಂಕ್ಸ್. ನಾನು ಕುಡಿಯೋದಿಲ್ಲ. ಇದುವರೆಗೆ ಕುಡಿದಿಲ್ಲ."

ತಂಬಿ ಅದಕ್ಕೆ ಉತ್ತರ ಹೇಳಿದ್ದು:

"ಮತ್ತೆಂಥ ಡೆವಲಪ್‌ಮೆಂಟ್ ಸೆಕ್ರೆಟರಿ?"

ಎಲ್ಲರೂ ಗಟ್ಟಿಯಾಗಿ ನಕ್ಕರು.

ಜಿ. ಎನ್. ನಾಯರ್ ಸ್ವಲ್ಪ ಪರಿಹಾಸ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಿದರು:

"ಮಿಸ್ಟರ್ ಪಿಳ್ಳೆಗೆ ಒಳ್ಳೆಯ ಶೇಂದಿ ಇಷ್ಟವಾಗಿರಬೇಕು."

"ಇಲ್ಲ, ನಾನು ಯಾವ ಮದ್ಯಪಾನವನ್ನೂ ಮಾಡುವುದಿಲ್ಲ.

ಆಗ ಕೇಶವ ಪಿಳ್ಳೆಗೆ ಒಂದು ರೀತಿ ಆಯಿತು. ಆ ಸಭೆಯಲ್ಲಿ ಸೇರುವ ಒಬ್ಬ ಮನುಷ್ಯ ತಾನಲ್ಲ ಎನ್ನಿಸಿತು. ಅಲ್ಲಿ ಸೇರಿದ್ದ ಸ್ತ್ರೀಯರು ಅವನನ್ನು ಹೆಚ್ಚಾಗಿ ಬೇಸರ ಪಡಿಸಿದ್ದು. ಅವರಲ್ಲಿ ಹಲವರ ನಗುವಿನಲ್ಲಿ ಯಾವುದೋ ಒಂದು ರೀತಿಯ ಪರಿಹಾಸ್ಯ ಛಾಯೆಯಿದ್ದಂತೆ ತೋರಿತು. ಯಾವುದೋ ಒಂದು ಅನೀತಿಯನ್ನು ಅವರು ಕೇಶವ ಪಿಳ್ಳೆಗೆ ಕಲ್ಪಿಸುತ್ತಿದ್ದರು. ಆ ಗುಂಪಿನಲ್ಲಿ ಒಬ್ಬರು ಹೇಳಿದರು: "ಹೊಸ ಮೆಂಬರ್ ಸೇರಿದ ದಿನ. ಇವತ್ತು-ಎಲ್ಲರಿಗೂ ಒಂದು ಗುಟುಕು ಸಿಕ್ಕಬೇಕು."

ಮತ್ತೊಬ್ಬರು ಅದಕ್ಕೆ ದನಿಗೂಡಿಸಿದರು. ಅಷ್ಟರಲ್ಲಿ ವೈಟರ್ ವಿಸ್ಕಿಯನ್ನೂ ಸೋಡವನ್ನೂ ತೆಗೆದುಕೊಂಡು ಬಂದ.

ತಂಬಿ ಆಗ ಒಂದು ಸಲಹೆ ಮಾಡಿದ:

"ಹೊಸದಾಗಿ ಸೇರಿದ್ದಕ್ಕೆ ಸತ್ಕರಿಸಬೇಕು. ಹೊಸದಾಗಿ ಸೇರಿದ ವ್ಯಕ್ತಿಗೆ ಒಂದು ಮಹಾಭಾಗ್ಯ ಕೈಸೇರಿದೆ. ಆದ್ದರಿಂದ ಅವರು ಚಿಕ್ಕದಾಗಿಯಾದರೂ ಒಂದು ಪಾರ್ಟಿ ನಡೆಸಲಿ !"

ಆ ಸಲಹೆ ಹೆಚ್ಚು ಜನರಿಗೆ ಇಷ್ಟವಾಗಲಿಲ್ಲ. ಆತನನ್ನು ಕುಡಿಯುವಂತೆ ಅನುಮೋದಿಸಬೇಕು ಎಂದು ಹೆಚ್ಚು ಜನರ ಅಭಿಪ್ರಾಯ. ಕೇಶವ ಪಿಳ್ಳೆ ವಿಸ್ಕಿ ಕುಡಿಯುಲಿಲ್ಲ. ಹಿಂದೆ ಎರಡೋ ಮೂರೋ ಸಲ ಬೀರ್ ಕುಡಿದದ್ದುಂಟು. ಆದ್ದರಿಂದ ಒಂದು ಗ್ಲಾಸ್ ಬೀರನ್ನು ಆತ ಕೈಗೆತ್ತಿಕೊಂಡ. ಸ್ತ್ರೀಯರಲ್ಲಿ ಕೆಲವರು ಬೀರ್ ಕುಡಿಯುತ್ತಿದ್ದರು. ಆ ಪಾರ್ಟಿ ಹಾಲ್‌ನಿಂದ ಪಾರ್ಕಿಗೂ, ಮಾವಿನ ಮರದ ಹತ್ತಿರಕ್ಕೂ ಚಿಕ್ಕಚಿಕ್ಕ ಗುಂಪುಗಳಾಗಿ ಆ ಜನರು ಬೇರ್ಪಟ್ಟರು. ಕೇಶವ ಪಿಳ್ಳೆಯೂ ಫಾರೆಸ್ಟ್ ಕನ್ಸರ್ವೇಟರ್ ಮರಕತಂ ಪಿಳ್ಳೆಯೂ ಅವರವರ ಗ್ಲಾಸುಗಳೊಡನೆ ಪಾರ್ಕಿಗೆ ಬಂದರು. ಸೀಮೆ ದನ ಮರದ ಅಡಿಯಲ್ಲಿ ಗೌರಿಯಮ್ಮನೂ ಅಸಿಸ್ಟೆಂಟ್ ಸೆಕ್ರೆಟರಿಯ ಹೆಂಡತಿಯೂ ಮಾತನಾಡುತ್ತಿದ್ದರು. ನಿಜವಾಗಿಯೂ ಅವರು ಮಾತನಾಡುತ್ತಿದ್ದದ್ದು ತಂಗಮ್ಮನ ವಿಚಾರವಾಗಿರಬೇಕು ಎನ್ನಿಸಿತು.

ಕೇಶವ ಪಿಳ್ಳೆ ನೇರವಾಗಿ ಅವರ ಹತ್ತಿರ ಹೋದ. ಆತ ನೇರವಾಗಿ ಕೇಳಲು ಸಂಕೋಚಪಟ್ಟುಕೊಳ್ಳಲಿಲ್ಲ. "ನೀವು ನನ್ನ ವಿಚಾರ ತಾನೇ ಮಾತಾಡ್ತಿರೋದು?"

ಆತನಿಗೆ ಒಂದು ರೀತಿಯ ಧೈರ್ಯ ಬಂದಿತ್ತು. ಮೇಲಧಿಕಾರಿ ಬಂದರು ಎನ್ನುವ ವಿನಯದಿಂದ ಗೌರಿಯಮ್ಮ ಸ್ವಲ್ಪ ದೂರ ಸರಿದು ನಿಂತಳು.

ಉತ್ತರಿಸಿದ್ದು ಭಾನುಮತಿಯಮ್ಮ. ಆಕೆ ಮೋಹಕವಾದ ನಗುವಿನಿಂದ ಹೇಳಿದರು: "ಮಾತಾಡೋದೇನಿದೆ?"

"ನನಗೆ ತೋರೋದು ಏನೂ ಇಲ್ಲ ಅಂತ."

"ಅಂದರೆ ಏನೂ ಮಾತಾಡಲಿಲ್ಲ."

ಗೌರಿಯಮ್ಮ ಭಾನುಮತಿಯಮ್ಮನ ಮರೆಯಲ್ಲಿ ನಿಂತುಕೊಂಡು ಹೇಳಿದಳು:

"ಅಂತು ಮಕ್ಕಳನ್ನೂ ಅವರ ತಾಯಿಯನ್ನೂ ಮುಚ್ಚಿಟ್ಟಿರೋದು ತಪ್ಪು."

ಕೇಶವ ಪಿಳ್ಳೆ ಒಮ್ಮೆ ನಕ್ಕು ಹೇಳಿದ:

"ಅವರಿಗೆ ಹಳ್ಳಿ ಅಂದರೆ ಇಷ್ಟ."

ಭಾನುಮತಿಯಮ್ಮ ಸುಮ್ಮನಿರಲಿಲ್ಲ.

"ಅದಲ್ಲ. ಇದು ಅಡಗಿಸಿಡೋ ಆಟ."

ಆ ಹೊತ್ತಿಗೆ ಎಕ್ಸೈಜ್ ಕಮಿಷನರೂ ಅಸಿಸ್ಟೆಂಟ್ ಸೆಕ್ರೆಟರಿಯೂ ಬಂದರು. ಆಗ ಆ ಮಾತುಕತೆ ನಿಂತಿತು.

ಮರಕತಂ ಪಿಳ್ಳೆಯೂ ಎಕ್ಸೈಜ್ ಕಮಿಷನರೂ ಸ್ವಲ್ಪ ಪ್ರಾಯಸ್ಥರು. ಅವರಿಗೆ ಹೊಸ ಪ್ರಕಟಣೆಯನ್ನು ಕುರಿತು ಕೆಲವು ವಿಷಯ ಹೇಳುವುದಿತ್ತು. ಅಸಿಸ್ಟೆಂಟ್ ಸೆಕ್ರೆಟರಿ ಕೃಷ್ಣ ಪಿಳ್ಳೆ, ಸರ್ಕಾರದ ಪ್ರಕಟಣೆ ಸ್ಟೇಟ್ ಕಾಂಗ್ರೆಸ್ಸಿನ ಹುಟ್ಟಡಗಿಸಿತು ಎಂದು ಹೇಳಿದರು. ಕೇಶವ ಪಿಳ್ಳೆಗೆ ಹೇಳುವುದೇನೂ ಇರಲಿಲ್ಲ.

ಒಳಗೆ ಹಾಲ್‌ನಲ್ಲಿ ಗೌರ್ಮೆಂಟ್ ಸೆಕ್ರೆಟರಿ, ಅಲೆಗ್ಸಾಂಡರ್, ಜಿ. ಎನ್. ನಾಯರ್, ತಂಬಿ ಗಟ್ಟಿಯಾಗಿ ಮಾತನಾಡುತ್ತ ವಾದಿಸುತ್ತ ಇದ್ದರು. ಅವರು ಚೆನ್ನಾಗಿ ಕುಡಿದಿದ್ದರು. ಸ್ಟೇಟ್ ಕಾಂಗ್ರೆಸ್ ಅಧಿಕಾರದಲ್ಲಿ ಬರುತ್ತದೆ ಎಂದು ಅಲೆಗ್ಸಾಂಡರ್ ಹೇಳುತ್ತಿದ್ದದ್ದು. ನಾಯರರು ಸೇರಿದರೆ ಮಾತ್ರ ಚಳವಳಿಗೆ ವಿಜಯ ದೊರೆಯುತ್ತದೆ ಎನ್ನುವುದು ನಾಯರರ ಅಭಿಪ್ರಾಯ. ಅದು ಇಂದಲ್ಲದಿದ್ದರೆ ನಾಳೆ ಉಂಟಾಗುತ್ತೆ. ತಂಬಿ ಏನೋ ತಲೆಬುಡ ಇಲ್ಲದೆ ಹೇಳುತ್ತಿದ್ದರು. ಅವರು ಹಾಗೆ ಪ್ರಜ್ಞೆತಪ್ಪಿ ಮಾತನಾಡುತ್ತಿದ್ದರು.

ಕೇಶವ ಪಿಳ್ಳೆ ಎಲ್ಲರಿಗೂ ಹೋಗಿಬರುವುದಾಗಿ ತಿಳಿಸಿ ಜಟಕ ಹತ್ತಿದ. ಮತ್ತಾರೂ ಅಲ್ಲಿಂದ ಹೊರಡಲಿಲ್ಲ. ಇನ್ನೂ ಅಲ್ಲಿ ಕುಡಿಯುವುದು ನಡೆದಿತ್ತು.

ಅದೊಂದು ಹೊಸ ಅನುಭವವಾಗಿತ್ತು. ಯಾಕೆ ಎಂದು ನಿರ್ಧರಿಸಿ ಹೇಳಲಾಗುವುದಿಲ್ಲ. ಗೌರಿಯಮ್ಮನ ರೂಪು ಅವನ ಮನಸ್ಸಿನಲ್ಲಿ ಬಂದುಹೋಯಿತು. ಆ ಸ್ತ್ರೀಗೆ ಯಾವುದೋ ಒಂದು ತೆರನಾದ ವಿಶಿಷ್ಟತೆಯಿದೆ. ಇನ್ನೂ ಸ್ವಲ್ಪ ಹೊತ್ತು ಆಕೆಯ ಹತ್ತಿರ ಮಾತನಾಡುತ್ತಾ ನಿಂತಿರಬೇಕು ಎನ್ನಿಸಿತ್ತು. ಆದರೆ ಆ ಸ್ವಾರಸ್ಯವನ್ನು ಕೆಡಿಸಲು ಆ ಇಬ್ಬರು ಬಂದದ್ದು.

ಅವನು ನೇರವಾಗಿ ಶೇಖರ ವಿಲಾಸಕ್ಕೆ ಹೋದ. ಎಂದಿಗಿಂತ ತಡವಾಗಿತ್ತು. ಯಾವಾಗಲೂ ಅವನು ಅಲ್ಲಿಗೆ ಹೋಗುವುದುಂಟು. ತಂಗಮ್ಮ ಅವನಿಗೆ ವಶಳಾಗಿದ್ದಳು. ಅಂತೂ ಆ ಸಂಬಂಧ ತೆರೆದುಹೇಳಿದಂತಿತ್ತು. ಇಬ್ಬರಿಗೂ ಆ ಸಂಬಂಧವನ್ನು ಕುರಿತು ಯಾವ ಸಂಶಯವೂ ಇಲ್ಲ. ತನ್ನ ಜೀವನದಲ್ಲಿ ಅತ್ಯಾವಶ್ಯಕವಾದ ಒಬ್ಬ ಮನುಷ್ಯ

ಸನ್ನಾಗಿ ಅವಳು ಕೇಶವ ಪಿಳ್ಳೆಯನ್ನು ಪರಿಗಣಿಸಿದ್ದಾಳೆಯೆ? ಅದು ಕೇಶವ ಪಿಳ್ಳೆಗೂ ಸಂಶಯ. ಆದರೆ ಕೇಶವ ಪಿಳ್ಳೆಗೆ ಅವಳು ಬೇಕಾಗಿತ್ತು. ಅವಳು ಅವನಿಗೆ ವಿಧೇಯಳಾಗಿದ್ದಳು. ಕೇಶವ ಪಿಳ್ಳೆ ತಡವಾಗಿ ಮನೆಗೆ ಹೋದರೂ ಯಾಕೆ ತಡವಾಯಿತು ಎಂದು ಕೇಳುವುದಿಲ್ಲ. ಅವಳು ಕಾಯುತ್ತಿರಬಹುದು. ಅವಳು ತನ್ನವಳು ಎನ್ನುವ ಭಾವನೆ ಅವನಿಗೆ ಇದುವರೆಗೂ ತೋರಿಲ್ಲ. ಆದರೆ ಆಗ ಅವನಿಗೆ ಯಜಮಾನನ ಹಕ್ಕನ್ನು ಸ್ಥಾಪಿಸುವ ಒಂದು ಆಗ್ರಹ ತೋರುತ್ತಿತ್ತು. ಅವಳು ತನ್ನವಳಾಗಿರಬೇಕು. ತನ್ನವಳು ಮಾತ್ರ. ಯಾಕೆ ಸಾಧ್ಯವಿಲ್ಲ? ಆ ಮನೆ ಅವನು ಕಟ್ಟಿಸಿಕೊಟ್ಟದ್ದು. ದಾರಿ ತಪ್ಪಿಹೋಗಿದ್ದರೂ ಅವಳನ್ನು ಪುನಃ ಸ್ವೀಕರಿಸಿದ್ದೇನೆ. ಅವಳು ಋಣಿಯಾಗಿರಬೇಕು. ಆ ದೃಷ್ಟಿಯಲ್ಲಿ ಅವನವಳೇ ಆಗಿ ಉಳಿದಿರಬೇಕು.

ಕ್ಲಬ್ಬಿನಲ್ಲಿ ಎಲ್ಲರೂ ಅಭಿನಂದಿಸಿದರು. ಅದು ಕೇವಲ ಗೌರವಕ್ಕಾಗಿಯಷ್ಟೆ. ಹಾರ್ದಿಕವಾಗಿಯಲ್ಲ. ಹಾಗೆ ಹಾರ್ದಿಕವಾಗಿ ಸಂತೋಷದಲ್ಲಿ ಪಾಲುಗೊಳ್ಳಲು ಯಾರಿದ್ದಾರೆ? ಬೆಳಗ್ಗೆ ಇದ್ದ ಆ ಆಸೆ ಪುನಃ ಶಕ್ತಿಯುತವಾಗಿ ಮೂಡಿಬಂದಿತು. ಹಾಗಾದರೆ ಅವನು ಜೀವನದಲ್ಲಿ ಒಂಟಿಯೆ? ಅವನ ಸಂತೋಷದಲ್ಲಿ ಪಾಲುಗೊಳ್ಳುವ ಒಂದೇ ಒಂದು ವ್ಯಕ್ತಿಯಿಲ್ಲ. ದುಃಖದಲ್ಲಿ ಪಾಲುಗೊಳ್ಳುವುದಕ್ಕೂ ಯಾರೂ ಇಲ್ಲವೆ? ಇಲ್ಲ ! ಅವನು ಒಂಟಿ !

ಒಂದು ಕಾಲದಲ್ಲಿ ತಂಗಮ್ಮ ಅವನ ಜೊತೆಯಲ್ಲಿ ಸಂತೋಷವಾಗಿ ಕಾಲಕಳೆದಿದ್ದಳು. ಕೇಶವ ಪಿಳ್ಳೆ ಮೇಲೆ ಬಂದದ್ದರಿಂದ 'ಶೇಖರ ವಿಲಾಸ' ಅವಳಿಗಾಗಿ ನಿರ್ಮಾಣಗೊಂಡದ್ದು. ಆತ ಇನ್ನಷ್ಟು ಉನ್ನತ ಸ್ಥಿತಿಗೆ ಬಂದರೆ ಇನ್ನೂ ಹೆಚ್ಚು ಪ್ರಯೋಜನವನ್ನು ಪಡೆದುಕೊಳ್ಳಬೇಕು ಎನ್ನುವ ಅಭಿಪ್ರಾಯ ಅವಳಿಗೆ ಉಂಟಾಗುವುದಿಲ್ಲವೆ? ಕಾರ್ಯಸಾಧನೆಯ ದೃಷ್ಟಿಯಿಂದಲ್ಲದಿದ್ದರೂ ಅವಳು ಅವನ ಜೊತೆಯಲ್ಲಿ ಸಂತೋಷಪಡುವುದಿಲ್ಲವೇ?

ಗೇಟು ದಾಟಿ ಜಟಕಾ ಮನೆಯ ಮುಂದೆ ಬಂದು ನಿಂತಿತು. ಮನೆಯ ಮುಂಭಾಗದಲ್ಲಿ ಅವಳಿಲ್ಲ. ಅವನು ರಿಸೆಪ್ಷನ್ ರೂಮಿಗೆ ಹೋದ. ಅಲ್ಲಿ ಒಬ್ಬ ಯುವಕ ನಿಂತಿದ್ದ. ಅವನನ್ನು ಒಮ್ಮೆ ಕೇಶವ ಪಿಳ್ಳೆ ದಿಟ್ಟಿಸಿ ನೋಡಿದ. ಆತ ಸುಂದರನಾಗಿದ್ದ; ಆರೋಗ್ಯವಂತನಾಗಿದ್ದ. ಕೇಶವ ಪಿಳ್ಳೆಯ ಮನಸ್ಸು ಒಳಗೊಳಗೇ ಆಲೋಚಿಸಿತು. ಅವನು ಕೇಳಿದ:

"ನೀವು ಯಾರು? ನಿಮಗಿಲ್ಲೇನು ಕೆಲಸ?"

ಆ ಯುವಕ ಸ್ವಲ್ಪ ಹೆದರಿದಂತಿತ್ತು.

ಅಷ್ಟರಲ್ಲಿ ತಂಗಮ್ಮ ಅಲ್ಲಿಗೆ ಬಂದಳು. ಅದಕ್ಕೆ ಉತ್ತರ ಕೊಟ್ಟದ್ದು ತಂಗಮ್ಮ :

"ನನ್ನ ನೆಂಟ."

"ಹೂಂ" ಎಂದ ಅಷ್ಟೆ.

ಭಾಗೀರಥಿಯಮ್ಮ ಅಲ್ಲಿಗೆ ಬಂದರು. ಹಸನ್ಮುಖದಿಂದ ಅವರು ಕೇಳಿದರು:

"ಪಿಳ್ಳೆಗೆ ಯಾವುದೋ ದೊಡ್ಡ ಉದ್ಯೋಗ ಸಿಕ್ತೂಂತ ಕೇಳಿದೆ. ನಿಜವಾ?"

ಅಷ್ಟಾದರೂ ಆತ್ಮೀಯತೆಯನ್ನು ಮತ್ತಾರಲ್ಲೂ ಆತ ಕಾಣಲಾಗಿರಲಿಲ್ಲ. ಸಂತೋಷಪಡುವವರು ಒಬ್ಬರಾದರೂ ಇದ್ದಾರೆ. ಹಾಗೊಬ್ಬರನ್ನು ಹುಡುಕುತ್ತ ಅವನು ಬಂದದ್ದಾದರೂ ಈಗ ಮತ್ತೊಂದು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದ. ಭಾಗೀರಥಿಯಮ್ಮನಿಗೆ ಅದು ಅರ್ಥವಾಯಿತು. ಕೇಶವ ಪಿಳ್ಳೆ ಯಾವ ಉತ್ತರವನ್ನೂ ಹೇಳಲಿಲ್ಲ. ಸಂದರ್ಭ ಗಂಭೀರವಾದದ್ದು ಎಂದು ಅವರಿಗೆ ತಿಳಿಯಿತು. ತಂಗಮ್ಮನಿಗೂ ಕೇಶವ ಪಿಳ್ಳೆಗೂ ಒಂದು ವಾಗ್ಯುದ್ಧ ಯಾವ ಕ್ಷಣದಲ್ಲಿ ಬೇಕಾದರೂ ನಡೆಯಬಹುದು. ಇಬ್ಬರೂ ಮುಖಮುಖ ನೋಡುತ್ತಾ ನಿಂತಿದ್ದರು. ಆ ಸ್ಫೋಟದಲ್ಲಿ ಅವರು ಬೇರೆ ಬೇರೆಯಾಗಲೂ ಬಹುದು. ಒಂದು ದೊಡ್ಡ ವಿಷಮ ಸನ್ನಿವೇಶವಾಗಿತ್ತು ಅದು. ಆ ಸಂದಿಗ್ಧ ಪರಿಸ್ಥಿತಿಯನ್ನು ಸಡಿಲಿಸುವುದಕ್ಕಾಗಿ ಅವರು ಹೇಳಿದರು:

"ಪಿಳ್ಳೆ ಯಾಕೆ ಬಂದೋರು ಬಂದ ಹಾಗೇನೇ ನಿಂತಿದ್ದೀರಿ? ಕೂತುಕೊಳ್ಳಿ. ಈಗ ಸಿಕ್ಕಿದ ನೌಕರಿ ಯಾವುದು? ಸಂಬಳ ಎಷ್ಟು? ಎಲ್ಲಾ ಹೇಳಬಾರದಾ?"

ನಿರ್ಧಾರವಾಗಿ ಹೇಳುವವನಂತೆ ಕೇಶವ ಪಿಳ್ಳೆ ನಿಂತಿದ್ದ. ಅದನ್ನು ಸ್ವೀಕರಿಸಲು ಅವಳೂ ತಯಾರಾಗಿರಬಹುದು. ಅದರಿಂದ ಅವಳಿಗೆ ಯಾವ ಕ್ಷೋಭೆಯೂ ಉಂಟಾಗುವುದಿಲ್ಲ. ಸಿಟ್ಟೂ ಇಲ್ಲ. ಅಷ್ಟರಲ್ಲಿ ಅಲ್ಲಿದ್ದ ಯುವಕ ಎಲ್ಲಿಯೋ ಮರೆಯಾಗಿದ್ದ.

ಒಬ್ಬ ಯುವಕನ ಮುಂದೆ ನಿಂತದ್ದು ಅವನ ಮನಸ್ಸನ್ನು ಇಷ್ಟೊಂದು ಕ್ಷೋಭಿಸುವಂಥಾದ್ದೇ? ಅಲ್ಲಿಗೆ ಗಂಡಸರು ಕಾಲಿರಿಸಲೇ ಬಾರದೆ? ಸಂಶಯ ಪಡಬೇಕಾದದ್ದೇಕೆ? ಒಂದು ವೇಳೆ ಅವಳು ಹೇಳಿದ ರೀತಿಯಲ್ಲಿ ಅವನು ಅವಳ ನಂಟನಾಗಿರಬಹುದು. ಹಾಗೆ ತನ್ನನ್ನು ತಾನು ನಿಯಂತ್ರಿಸಿಕೊಳ್ಳಬೇಕಾದ ಸಂದರ್ಭವನ್ನು ತಂಗಮ್ಮ ಜೀವನದಲ್ಲಿ ಖಂಡಿತವಾಗಿಯೂ ಉಂಟುಮಾಡಿಕೊಡುವುದಿಲ್ಲ. ಅವಳ ಇಂದಿನ ಬದುಕು ಯಾವ ವ್ಯವಸ್ಥೆಯೂ ಇಲ್ಲದಂಥಾದ್ದು. ಹಿಂದಿನದೆಲ್ಲಾ ಮರೆಯಬೇಕು ಎಂದು ಅವಳು ಆಸೆಪಟ್ಟಿಲ್ಲ. ಇನ್ನು ಮುಂದೆ ಇಂತಹ ತಪ್ಪುಗಳನ್ನು ಮಾಡುವುದಿಲ್ಲ ಎಂದು ಅವಳು ಶಪಥ ಮಾಡಿದ್ದೂ ಇಲ್ಲ. ಅವನ ವ್ಯಕ್ತಿಯೇ ಆಗಿ ಇರುತ್ತೇನೆ ಎಂದೂ ಪ್ರತಿಜ್ಞೆ ಮಾಡಿಲ್ಲ. ಅವನಿಗೂ ಅದಾವುದೂ ಅಗತ್ಯವಿರಲಿಲ್ಲ. ಅಷ್ಟೇಕೆ, ತನಗೊಂದು ಮನೆ ಬೇಕು ಎಂದು ಕೂಡ ಅವಳು ಆಸೆಪಟ್ಟಿರಲಿಲ್ಲ. ಹಾಗಿರುವಾಗ ಆ ಸಿಟ್ಟು ಬೇಸರವನ್ನು ಪ್ರಕಟಿಸುವ ಸ್ಥಳ ಅದಲ್ಲ ತಾನೆ?

ಒಂದು ಅಕ್ಷರವನ್ನೂ ಉಚ್ಚರಿಸದೆ ಕೇಶವ ಪಿಳ್ಳೆ ಹೊರಟು ಹೋದ. ತಂಗಮ್ಮನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಉಂಟಾಗಲಿಲ್ಲ. ಭಾಗೀರಥಿಯಮ್ಮ ಪೇಚಾಟಕ್ಕೆ ಸಿಕ್ಕಿದರು. ಆತ ಸಿಟ್ಟು ಮಾಡಿಕೊಂಡು ಹೋಗಿದ್ದ.

"ಯಾಕೇ, ಕೇಶವ ಪಿಳ್ಳೆ ಏನೂ ಮಾತಾಡದೆ ಹೋದದ್ದು? ಜಗಳವಾಡಿಕೊಂಡು

ಹೋದದ್ದು?"

ಅಲಕ್ಷ್ಯವಾಗಿ ತಂಗಮ್ಮ ಉತ್ತರ ಹೇಳಿದಳು:

"ಹೂಂ......... ಇರಬಹುದು."

ಒಂದು ಕ್ಷಣ ಬಿಟ್ಟು ಸಹಿಸುವುದಕ್ಕಾಗದ ದ್ವೇಷ—ನಿರಾಶೆಯೊಡನೆ ಅವರು ಕೇಳಿದರು:

"ಏನೇ ನೀನು ಹಾಗೆ ಮಾಡ್ತಿದ್ದೀ. ಅಯ್ಯೋ ದೇವರೇ!"

ಅಲಕ್ಷ್ಯವಾಗಿ ತಂಗಮ್ಮ ಕೇಳಿದಳು:

"ಹ್ಞೂಂ. ಏನು?"

"ಏನೂಂತಲೇ? ಮರ್ಯಾದೆಯಾಗಿ ಬಾಳೋದಕ್ಕೆ ನಿನಗೆ ಗೊತ್ತಿಲ್ಲ ಅಂತ. ಅದೇ. ಈ ಹುಡುಗ ಇಲ್ಲಿಗೆ ಬರುವುದಕ್ಕೆ ತೊಡಗಿದಾಗಲೇ ನಾನು ಹೇಳಲಿಲ್ಲವಾ? ಇದು ನಡೆಯೋ ಅಂಥಾದ್ದಲ್ಲ, ಗಲಾಟೆಯಾದೀತು ಅಂತ? ಈಗ ತಿಳೀತಾ? ನಾಚಿಕೆಯೂ ಮಾನವೂ ಇಲ್ಲದ ಹಾಗೆ ಆಗಿಹೋಯ್ತಲ್ಲೇ—ನಿನಗೆ? ನಾನಿದು ಯಾವುದನ್ನೂ ನೋಡಲಾರೆ, ಕೇಳಲಾರೆ. ನಾನು ಎಲ್ಲಾದರೂ ಹೋಗ್ತೀನಿ."

ತಂಗಮ್ಮ ಮುಖಭಾವನೆಯ ವ್ಯತ್ಯಾಸವನ್ನು ತಂದುಕೊಳ್ಳದೆ ಹೇಳಿದಳು:

"ಹೋಗೋದಾದ್ರೆ ಹೋಗಬಹುದು."

ಬಾಗೀರಥಿಯಮ್ಮನಿಗೆ ಸಹಿಸುವುದಕ್ಕೆ ಆಗದೆ ಹೋಯಿತು.

"ಹಾಗಾದ್ರೆ ನಿನಗೆ ನಿನ್ನ ಮನಸ್ಸಿನ ಹಾಗೆ ನಡೆಯೋದಕ್ಕೆ ತಡೆ ಏನೂ ಇರೋದಿಲ್ಲ. ಅಲ್ಲವಾ? ಪರವಾಯಿಲ್ಲ ಕಣೇ. ನೀನು ನಿನ್ನ ತಂದೇನ ಹೊಡೆಯೋದಕ್ಕೆ ಹೋದವಳೂಂತ ಗೊತ್ತು. ನನ್ನ ಶ್ರೀ ಪದ್ಮನಾಭಾ! ಇವಳ್ಯಾಕಪ್ಪಾ ಹೀಗಾದಳು?"

ಭಾಗೀರಥಿಯಮ್ಮ ಅಳಲಾರಂಭಿಸಿದರು. ಆದರಿಂದ ತಂಗಮ್ಮ ಒಂದಿಷ್ಟೂ ವಿಚಲಿತಳಾಗಲಿಲ್ಲ.

ಆ ರಾತ್ರಿಯೇ ಭಾಗೀರಥಿಯಮ್ಮ ಗಂಟುಮೂಟೆ ಕಟ್ಟಿಕೊಂಡು ಆ ಮನೆಯಿಂದ ಹೊರಟರು. ಹೋಗುವುದು ಬೇಡ ಎಂದು ತಂಗಮ್ಮ ಹೇಳಲಿಲ್ಲ.

ಭಾಗೀರಥಿಯಮ್ಮ ಹೊರಟುಹೋದ ಮೇಲೆ ಆ ಯುವಕ ಪ್ರತ್ಯಕ್ಷನಾದ. ಆತ ಗಾಬರಿಗೊಂಡಿದ್ದ. ಶೋಭಾಯಮಾನವಾದ ಒಂದು ಮಂದಹಾಸದೊಡನೆ ಅವನ ಹತ್ತಿರಕ್ಕೆ ನಡೆದು ತಂಗಮ್ಮ ಹೇಳಿದಳು:

"ಅಡ್ಡಿ ಆತಂಕಗಳೆಲ್ಲ ನಿವಾರಣೆಯಾಯಿತು!"

# [20]

## ಸ್ವತಂತ್ರ ತಿರುವಾಂಕೂರು

ತುಂಬ ಗಂಭೀರವಾದ ನಿಮಿಷಗಳಾಗಿದ್ದುವು ಅವು. ಕೇಶವ ಪಿಳ್ಳೆ ರೂಮಿನಲ್ಲಿ ಅತ್ತ ಇತ್ತ ಅಡ್ಡಾಡುತ್ತಿದ್ದ. ಉಳಿದವರು ನಿಶ್ಶಬ್ದರಾಗಿದ್ದರು. ಸಂಪೂರ್ಣವಾಗಿ ಮೌನ ಆವರಿಸಿತ್ತು. ಹೊರಗಿನಿಂದ ಹಾರಿ ಬಂದ ಒಂದು ದುಂಬಿಯ ಶಬ್ದ ಮೌನವನ್ನು ಭೇದಿಸಿತು.

ಒಬ್ಬ ಅಧಿಕಾರಿಯ ಗಾಂಭೀರ್ಯವೂ ಬಿಗುಮಾನವೂ ಭಾವನೆಯೂ ಕೇಶವ ಪಿಳ್ಳೆಯಲ್ಲಿ ಕಂಡುಬಂದುವು. ಇಂದು ಆತ ಹಳೆಯ ಕೇಶವ ಪಿಳ್ಳೆಯಲ್ಲ. ಹಿಂದಿನ ಕಾಲದಲ್ಲಾಗಿದ್ದರೆ ಸ್ವಲ್ಪ ಹುಡುಗಾಟಿಕೆಯಿತ್ತು. ಆ ಕಾಲ ದಾಟಿತು. ಒಂದು ರೀತಿಯ ಗಾಂಭೀರ್ಯವೂ ಇಚ್ಛಾಶಕ್ತಿಯೂ ಅಧಿಕಾರಪ್ರಜ್ಞೆಯೂ ಆತನಲ್ಲಿದ್ದುವು. ಆತ ದಕ್ಷ ಆಡಳಿತಗಾರ. ಆದುದರಿಂದಲೇ ಆಜ್ಞಾಶಕ್ತಿಯುಳ್ಳವನಾಗಿದ್ದ. ಅಲ್ಲಿ ನಿಂತಿದ್ದವರ ಹತ್ತಿರ ಯಾವುದೋ ಗಂಭೀರವಾದ ವಿಷಯವನ್ನು ಆಜ್ಞಾಪಿಸಿದ್ದ. ಹಾಗೆ ಆಜ್ಞಾಪಿಸಲು ಆತನಿಗೆ ಸಾಧ್ಯವಿತ್ತು. ಆಗ ಕೇಶವ ಪಿಳ್ಳೆಯ ಧ್ವನಿಯಲ್ಲೂ ವ್ಯತ್ಯಾಸವಿತ್ತು.

ಕೇಶವ ಪಿಳ್ಳೆ ತಲೆಯೆತ್ತಿ ಅವರನ್ನು ದುರುಗುಟ್ಟಿಕೊಂಡು ನೋಡುತ್ತಾ ಕೇಳಿದ:

"ಏನು ಹೇಳ್ತೀರಿ ಮಿಸ್ಟರ್ ಮ್ಯಾಥ್ಯೂ? ಒಂದು ತೀರ್ಮಾನಕ್ಕೆ ಬರಬೇಕಾದ ಸಂದರ್ಭ ಇದು."

ಆ ನಾಲ್ಕು ಜನರು ದಿಕ್ಕು ತೋರದೆ ನಿಂತಿದ್ದರು. ಅವರಿಗೆ ನಿಜವಾಗಿಯೂ ಯಾವ ತೀರ್ಮಾನವನ್ನು ಕೈಗೊಳ್ಳಲೂ ಸಾಧ್ಯವಾಗಿರಲಿಲ್ಲ. ಅವರ ಇಚ್ಛಾಶಕ್ತಿ ನಷ್ಟಗೊಂಡಿತ್ತು. ಜೀವಚ್ಛವಗಳಾಗಿ ಅವರು ನಿಂತಿದ್ದರು. ಅದು ಕೇಶವ ಪಿಳ್ಳೆಗೂ ಅರ್ಥವಾಗಿತ್ತು.

ಕೇಶವ ಪಿಳ್ಳೆ ಹೇಳತೊಡಗಿದ:

"ಸರ್ಕಾರ ಅಂತಿಮವಾಗಿ ತೀರ್ಮಾನಿಸಿದ ಕೆಲಸ. ದೇಶಪ್ರೇಮವೆಂದರೇನು ಎಂದು ಜನರಿಗೆ ಸರಿಯಾಗಿ ತಿಳಿದಿದೆಯೋ ಎಂದು ತಿಳಿಯಬೇಕಾಗಿತ್ತು. ಸಿಕ್ಕಿದ ಕಡೆಯಲ್ಲೆಲ್ಲಾ "ದೇಶಪ್ರೇಮ" ಎಂದು ಗಟ್ಟಿಯಾಗಿ ಕೂಗಿಕೊಂಡು ಹೋಗುವುದಲ್ಲ ದೇಶಪ್ರೇಮ. ಅದು ಖೋಟಾ ನಾಣ್ಯ ಇದ್ದ ಹಾಗೆ. ನಿಜವಾದ ದೇಶಪ್ರೇಮ ಯಾರಿಗೆಲ್ಲ ಇದೆ ಎನ್ನುವುದನ್ನು ತಿಳಿಯಪಡಿಸಬೇಕು. ಅದಕ್ಕೆ ತಕ್ಕ ಸಮಯ ಇದು."

ಸ್ವಗತವೋ ಎನ್ನುವಂತೆ ಒಂದು ಕ್ಷಣ ಬಿಟ್ಟು ಆತ ಹೇಳಿದ: "ರಾಜ ಮತ್ತು ರಾಜ್ಯದ ಮೇಲೆ ಯಾರಿಗೆಲ್ಲಾ ನಿಜವಾದ ಪ್ರೀತಿಯಿದೆ ಎಂದು ತಿಳಿಯಬೇಕು. ಇಂದು ಇದು ಎಲ್ಲ ಮೂಲೆಮೂಲೆಗಳಲ್ಲೂ ಕೇಳಿಬರುತ್ತಿದೆ."

ಮತ್ತೆಯೂ ಸ್ವಲ್ಪ ಹೊತ್ತು ಮೌನ ಆವರಿಸಿತು. ಮರುಕ್ಷಣ ಉತ್ತರ ಸಿಗಬೇಕು ಎಂಬ ನಿರ್ಧಾರದಲ್ಲಿ ಕೇಶವ ಪಿಳ್ಳೆ ಹೇಳಿದ:

"ಹೂಂ. ಏನು ಹೇಳ್ತೀರಿ?"

ಯಥಾರ್ಥವಾಗಿ ಆ ನಾಲ್ಕು ಜನರಿಗೂ ಏನೂ ಹೇಳಲು ತೋರದೆ ನಾಲಗೆ ಕಟ್ಟಿ ಹೋಗಿ ನಿಂತಿದ್ದರು. ಯಾರಿಗೂ ಏನೂ ಹೇಳಲಾಗುತ್ತಿಲ್ಲ. ಅವರಿಗೆ ಬುದ್ಧಿ, ಪ್ರಜ್ಞೆ, ಶಕ್ತಿ—ಯಾವುದೂ ಇರಲಿಲ್ಲ. ಆದರೆ ಸೆಕ್ರೆಟರಿಯವರ ಆಜ್ಞೆ ಉಗ್ರತರವಾಗಿತ್ತು. ಏನಾದರೂ ಹೇಳಲೇಬೇಕಾಗಿತ್ತು. ಮ್ಯಾಥ್ಯೂ ಹೇಳಿದ:

"ನಾವು ಏನು ಹೇಳೋದು?"

ಅದನ್ನು ಕೇಳಿಸಿಕೊಳ್ಳಲಿಲ್ಲ, ಅರ್ಥವಾಗಲಿಲ್ಲ ಎನ್ನುವಂತೆ ನಟಿಸುತ್ತ ಕೇಶವ ಪಿಳ್ಳೆ ಹೇಳಿದ:

"ಏನು? ಏನು?"

ಆ ನಾಲ್ಕು ಜನರೂ ಒಮ್ಮೆ ನಡುಗಿದರು. ಮಂತ್ರಮುಗ್ಧರಾದವರಂತೆ ಅವರು ನಿಂತಿದ್ದರು. ಆತ ಏನು ಹೇಳಿದರೂ ಅವರು ಮಾಡುತ್ತಿದ್ದರು. ಆದರೆ ಅದು ಸ್ವಂತ ಬುದ್ಧಿಯಿಂದ, ಸ್ವಂತ ಆಲೋಚನೆಯಿಂದಾಗಿರುವುದಿಲ್ಲ. ಕೇಶವ ಪಿಳ್ಳೆಯ ವ್ಯಕ್ತಿತ್ವ ಆ ದೃಷ್ಟಿಯಲ್ಲಿ ವಿಕಾಸವನ್ನು ಪಡೆದಾಗಿತ್ತು. ಅವನಿಗೆ ಸಾಮರ್ಥ್ಯವಿದೆ. ಯಾರಿಂದ ಏನು ಬೇಕಾದರೂ ಮಾಡಿಸಬಲ್ಲವನಾಗಿದ್ದ.

ಕೆಲವು ವರ್ಷಗಳಿಗೆ ಮೊದಲು, ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿ ಹೆಚ್ಚು ಸಮಯ ಕಳೆದಿರಲಿಲ್ಲ. ಆಗ ನಡೆದದ್ದು. ಸರ್ಕಾರದ ವಿಕಾಸ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಪ್ರಕಟಣೆಯ ಫಲ ದೊರೆಯಲಿಲ್ಲ ಎಂದು ಹೇಳಲಾಗುವುದಿಲ್ಲ. ಅದೂ ವಿದ್ಯಾಭ್ಯಾಸ ಸುಧಾರಣೆಯಲ್ಲಿ ಸೌಜನ್ಯತೆಯುಳ್ಳದ್ದೂ ಕಡ್ಡಾಯವೂ ಆದ ಪ್ರಾಥಮಿಕ ವಿದ್ಯಾಭ್ಯಾಸವನ್ನು ಸರ್ಕಾರ ವಹಿಸಿಕೊಳ್ಳಬೇಕಾಗುವ ಕಾರ್ಯಕ್ರಮ. ಸ್ಟೇಟ್ ಕಾಂಗ್ರೆಸ್ಸಿನಲ್ಲಿ ದೊಡ್ಡ ಒಡಕನ್ನುಂಟು ಮಾಡಿತು. ಆ ಸಂಘಟನೆಯಲ್ಲಿ ಜಾತಿಗನುಸರಿಸಿ ಬೇರೆ ಬೇರೆ ವಿಭಾಗಗಳಾದುವು. ಶಕ್ತಿವಂತರಾದ ಪುರೋಗಮನವಾದಿಗಳು ಕಾಂಗ್ರೆಸ್ಸಿನೊಳಗೆ ಮೊದಲೇ ವಾಮಪಕ್ಷದವರಾಗಿ ಪ್ರವರ್ತಿಸುತ್ತಿದ್ದರು. ಅವರು ವಿದ್ಯಾಭ್ಯಾಸ ಸುಧಾರಣೆಯ ವಿಷಯವಾಗಿ ಕಾಂಗ್ರೆಸ್ ತತ್ವವನ್ನು ಅಂಗೀಕರಿಸದೆ ಇದ್ದುದರ ಕಾರಣ ಕಾಂಗ್ರೆಸ್ ಸಂಸ್ಥೆಯನ್ನು ಬಿಟ್ಟು ಕಾರ್ಮಿಕ ವರ್ಗಕ್ಕೆ ಸೇರಿದರು—ಅವರು ಕಾರ್ಮಿಕರನ್ನು ಸಂಘಟಿಸಲು ತೊಡಗಿದರು. ಹಾಗೆ ಗಮನಾರ್ಹ ರೀತಿಯಲ್ಲಿ ಕಾಂಗ್ರೆಸ್ಸು ದುರ್ಬಲಗೊಂಡಿತು. ಈ ಸಂದರ್ಭವನ್ನು ಸರ್ಕಾರ ಸದುಪಯೋಗಪಡಿಸಿಕೊಳ್ಳದೆ ಬಿಡಲಿಲ್ಲ. ತುಂಬ ಕಾಲದಿಂದ ಸೆಕ್ರೆಟರಿಯೇಟಿನ ಮೂಲೆಗಳಲ್ಲಿ ಜಿರಳೆ, ಹುಳು ತಿಂದು ಪುಡಿಪುಡಿಯಾಗಿ ಬಿದ್ದಿದ್ದ ಫೈಲುಗಳನ್ನು ಕೇಶವ ಪಿಳ್ಳೆ ಹುಡುಕಿ ತೆಗೆದ. ಮಿಸ್ಟರ್ ಫಿಲಿಪ್ಸ್ ಮುಂತಾದ ಸೆಕ್ರೆಟರಿಗಳಿಂದ ಯಾವಾಗಲೂ ಎಲ್ಲಕ್ಕೂ ತಡೆಯುಂಟಾಗಿತ್ತು. ಆದರೆ ಯಾರಿಗೂ ಧೈರ್ಯ

ವಾಗಿ ಕೇಶವ ಪಿಳ್ಳೆಯನ್ನು ತಡೆಯಲು ಸಾಧ್ಯವಾಗಿರಲಿಲ್ಲ. ಕೇಶವ ಪಿಳ್ಳೆ ಏನು ಬರೆದರೂ ಅದನ್ನು 'ಭಕ್ತಿವಿಲಾಸ' ಹಾಗೆಯೇ ಅಂಗೀಕರಿಸುತ್ತಿತ್ತು. ರಾಮಚಂದ್ರನ್ ನಾಯರ್ ಮುಂತಾದ ನಾಲ್ಕು ಜನರನ್ನು ಸಸ್ಪೆಂಡ್ ಮಾಡಿದ್ದು ಕೇಶವ ಪಿಳ್ಳೆಯ ರಿಪೋರ್ಟಿನಿಂದಾಗಿ ಎನ್ನುವ ವದಂತಿಯಿತ್ತು. ಅನಂತರ ಎಲ್ಲರಿಗೂ ಭಯವಾಯಿತು. ಕೆಲವಾರು ತಿಂಗಳೊಳಗೆ ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟಿನ ಕೆಲಸ ತೀವ್ರಗತಿಯಲ್ಲಿ ಆರಂಭವಾಯಿತು, ಅಲ್ಲದೆ ಒಂದು ಗೊಬ್ಬರದ ಕಾರ್ಖಾನೆಯೂ. ಅದರಂತೆಯೇ ಮೂರು ನಾಲ್ಕು ದೊಡ್ಡ ಕಾರ್ಖಾನೆಗಳೂ ಪ್ರಾರಂಭವಾದುವು. ಎಲ್ಲವೂ ಸರಿಯಾಗಿ ನಡೆಯುವಂತೆ ಮಾಡಲು ಕೇಶವ ಪಿಳ್ಳೆಗೆ ಸಾಧ್ಯವಾಯಿತು.

ಕೇಶವ ಪಿಳ್ಳೆಗೆ ವಿರುದ್ಧವಾಗಿ ಕಾಂಗ್ರೆಸ್ ಅನೇಕ ಆರೋಪಗಳನ್ನು ಹೊರಿಸಿತು. ಫರ್ಟಿಲೈಸರ್ ಫ್ಯಾಕ್ಟರಿಯ ದೊಡ್ಡ ಷೇರುಗಳು ಕೇಶವ ಪಿಳ್ಳೆಯ ಹೆಸರಿನಲ್ಲೂ ಅವನ ಹೆಂಡತಿಯ ಹೆಸರಿನಲ್ಲೂ ಇದ್ದುವು. ಅದಕ್ಕೆ ಅವನು ಹಣ ಕೊಡಬೇಕಾಗಿಲ್ಲ. ಯಂತ್ರಗಳನ್ನು ಸಪ್ಲೈ ಮಾಡುವ ಕಂಪೆನಿಯ ಕಮಿಷನ್ನಿಗೆ ಪ್ರತಿಯಾಗಿ ಆ ಷೇರುಗಳು! ರಬ್ಬರ್ ಫ್ಯಾಕ್ಟರಿಯಲ್ಲಿ ಭಾವನಿಗೆ ಪಾಲಿದೆ. ನಾಂಜುನಾಟ್ಟಿನಲ್ಲಿ ಜಮೀನು ತೆಗೆದುಕೊಂಡ ಹಣ ಎಲ್ಲಿಂದ ಬಂತು? ವ್ಯವಸಾಯಾಭಿವೃದ್ಧಿಗೆ ಬರಮಾಡಿದ ತಜ್ಞರ ಸಾಮರ್ಥ್ಯಗಳನ್ನೂ ಅವರ ಪೂರ್ವ ಜೀವನದ ಘಟನೆಗಳನ್ನೂ ಕುರಿತ ಮಾಹಿತಿ ಒದಗಿಸಬೇಕೆಂದು ಕಾಂಗ್ರೆಸ್ ವಾದಿಸಿತು. ಹಲವರು ಅಕ್ರಮಕಾರರಾಗಿದ್ದರಂತೆ! ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್ ಕೂಡ ಪರಾಜಯ ಹೊಂದಿದೆ. ಅದಕ್ಕೆ ಖರ್ಚು ಮಾಡುವ ಹಣ ನಷ್ಟವಾಗುತ್ತಿದೆ. ಅಲ್ಲಲ್ಲಿ ನಿರ್ಮಿಸುವ ಚಿಕ್ಕ ಜಲಾಶಯಗಳೂ ಅಸ್ತವ್ಯಸ್ತ. ಒಟ್ಟಿನಲ್ಲಿ ಕಾಂಗ್ರೆಸ್ ಎಲ್ಲವನ್ನೂ ವಿರೋಧಿಸಿತು. ಅಂತು ಏನೋ ನಡೆಯುತ್ತಿದೆ ಎಂದು ಜನರು ಭಾವಿಸಿದರು.

ಅಂದು ದೇಶದಲ್ಲೆಲ್ಲ ಸಂಚರಿಸಿ ತೀವ್ರವಾದ ಆವೇಶದಿಂದ ಕೇಶವ ಪಿಳ್ಳೆಯ, ಅವನ ಸಂಬಂಧಿಗಳ ಆಸ್ತಿಪಾಸ್ತಿಯನ್ನು ಕುರಿತು ಅನ್ವೇಷಣೆ ನಡೆಸಿ ನಿರ್ಧರಿಸಬೇಕು ಎಂದು ವಾದಿಸಿದ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಮೆಂಬರ್ ಮ್ಯಾಥ್ಯೂ; ಇಂದು ಶಕ್ತಿಗುಂದಿ ಕೇಶವ ಪಿಳ್ಳೆಯ ಮುಂದೆ ನಿಂತಿದ್ದ. ಆ ಮ್ಯಾಥ್ಯೂಗೆ ಒಂದೇ ಒಂದು ಉದ್ದೇಶ ಇದ್ದದ್ದು—ಕೇಶವ ಪಿಳ್ಳೆಯ ಅಕ್ರಮಗಳನ್ನು ಹೊರಗೆಡಹಬೇಕು ಎನ್ನುವುದು. ಮ್ಯಾಥ್ಯೂ ಕಂಡದ್ದು ಒಬ್ಬನೇ ಒಬ್ಬ ಶತ್ರುವನ್ನು. ಅದು ಕೇಶವ ಪಿಳ್ಳೆ! ಆದರೆ ಕೇಶವ ಪಿಳ್ಳೆ ಸಮರ್ಥನೆಂದು ದಿವಾನರಿಗೆ ಅರ್ಥವಾಗಿತ್ತು. ಕೇಶವ ಪಿಳ್ಳೆಯ ಬುದ್ಧಿಶಕ್ತಿ, ಸಾಮರ್ಥ್ಯಗಳನ್ನೆಲ್ಲ ಕಾಣಲು ಸಾಧ್ಯವಾದದ್ದು ಈಗ.

ಈ ಕಾಲದಲ್ಲಿ ಕಾಂಗ್ರೆಸ್ಸಿನಲ್ಲಿ ಒಂದು ದೊಡ್ಡ ಅಲುಗಾಟ ಪ್ರಾರಂಭವಾಗಿತ್ತು. ಆ ಸಂಘಟನೆಯ ದೀರ್ಘವಾದ ಹೋರಾಟದ ಚರಿತ್ರೆಯಲ್ಲಿ ಎಷ್ಟೋ ಜನರು ಅನೇಕ ಕಷ್ಟನಷ್ಟಗಳನ್ನನುಭವಿಸಬೇಕಾಗಿ ಬಂದಿತ್ತು: ಅದನ್ನು ಸಂಘಟನೆ ಎಂದು ಕರೆಯುವುದಕ್ಕಿಂತಲೂ ಒಂದು ಬಹುಜನ ಪ್ರಸ್ಥಾನ ಎಂದು ಕರೆಯುವುದೇ ಸರಿ. ಅಷ್ಟು ದೇಶವ್ಯಾಪಕ

ವಾದ, ಹಿಡಿದರೆ ಕೈಗೆ ಸಿಕ್ಕದ ರೀತಿಯಲ್ಲಿ ಹರಡಿಕೊಂಡ, ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಹೋಗಲಾಗದ, ಸಡಿಲತೆಯಿಂದ ಕೂಡಿದ ಆ ಸಂಘಟನೆಯಲ್ಲಿ ಏನೇನೋ ನಡೆದಿತ್ತು. ಕಾಂಗ್ರೆಸ್ಸಿನ ಆದಾಯ, ವೆಚ್ಚಗಳಿಗೆ ಸಂಬಂಧಪಟ್ಟ ಲೆಕ್ಕಪತ್ರಗಳೇ ಇಲ್ಲದಾಗಿದ್ದುವು. ಒಬ್ಬೊಬ್ಬರೂ ಸಂಪತ್ತು ಮಾಡಿಕೊಂಡರು. ಮುಂದಾಳುಗಳಿಗೆ ಹೆಚ್ಚಿಗೆ ಸಿಕ್ಕುತ್ತಿತ್ತು. ಬಾವುಟ ಹಿಡಿದವನಿಗೂ ಸ್ವಲ್ಪ. ಒಂದಿಷ್ಟು ಹಣ ಸಂಚಾರಕ್ಕೆ ಖರ್ಚಾಗಿರಬಹುದು. ಅದಕ್ಕಾಗಿ ದುಡಿಯುವವರಲ್ಲಿ ಕೆಲವರು. ಉಪಜೀವನದ ಮಾರ್ಗವನ್ನು ಉಪೇಕ್ಷಿಸಿ, ಆದರ್ಶದ ಕರೆ ಕೇಳಿಬಂದವರೂ ಇದ್ದರು. ಸರ್ವಸ್ವವನ್ನೂ ಕಳೆದುಕೊಂಡವರಿದ್ದರು. ಅವರಿಗೆ ಜೀವಿಸುವುದಕ್ಕಾದರೂ ಏನಾದರೂ ತಿನ್ನಬೇಡವೆ? ಬದುಕಬೇಡವೆ? ಹಾಗೆ ಲಾಭ ಮಾಡಿಕೊಂಡವರಲ್ಲಿ ಕೆಲವರಿದ್ದರು. ಇದರಲ್ಲೇ ಸಂಪಾದನೆ ಮಾಡಿದವರಿದ್ದರು. ಆದರೆ ಒಂದಕ್ಕೂ ಲೆಕ್ಕಪತ್ರವಿರಲಿಲ್ಲ. ಮೊದಲಿನಿಂದಲೂ ಹಾಗೆಯೇ ಇತ್ತು.

ಎಲೆಕ್ಷನ್ನಿನ ಕಲೆಕ್ಷನ್ ಕುರಿತು ದೊಡ್ಡ ಆರೋಪಗಳುಂಟಾದುವು. ಯಾವನೋ ಮುಂದಾಳು ಮನೆ ಕಟ್ಟಿಸಿದನಂತೆ. ಮತ್ತೊಬ್ಬ ಮುಂದಾಳು ಭೂಮಿ ಕೊಂಡ. ಇನ್ನೊಬ್ಬ ಮುಂದಾಳು ಮಗನನ್ನು ವಿದೇಶ ವಿದ್ಯಾಭ್ಯಾಸಕ್ಕೆ ಕಳಿಸಿದ್ದ. ಎಲೆಕ್ಷನ್ ಕಳೆದ ಮೇಲೆ ಒಂದು ವರ್ಕಿಂಗ್ ಕಮಿಟಿ ಸಭೆಯಲ್ಲೂ ಈ ವಿಷಯದ ಮೇಲೆ ತುಂಬ ಗಲಾಟೆ ನಡೆಯಿತು. ಸೋತ ಅಭ್ಯರ್ಥಿಗಳು ದೊಡ್ಡ ಆರೋಪವನ್ನು ಹೊರಿಸಿದ್ದರು. ಅವರಿಗಾಗಿ ಏನೂ ಮಾಡಿರಲಿಲ್ಲ ಅಷ್ಟೆ. ಪತ್ರಿಕೆಗಳಲ್ಲಿ ಆರೋಪಣೆ ಪ್ರತ್ಯಾರೋಪಣೆಗಳು ಪ್ರಕಟವಾದುವು. ಅದೊಂದು ಅಸಹ್ಯ ಕಾರ್ಯವಾಗಿತ್ತು. ಕಾಂಗ್ರೆಸ್‌ನವರು ಹಣ ನುಂಗಿದ್ದು ಮನೆಮನೆಯ ಮಾತಾಯಿತು. ಯಾರಿಗೂ ಯಾರ ಬಗ್ಗೆಯೂ ವಿಶ್ವಾಸವಿಲ್ಲ. ಖಾದಿ ಧರಿಸಿ ತಿರುಗಾಡುವವರನ್ನು ಜನರು ಗೌರವಿಸುತ್ತಿರಲಿಲ್ಲ. ಗತಿಗೆಟ್ಟು ಹಣ ಸಂಗ್ರಹ ಮಾಡುವುದಕ್ಕೆ ಬಂದವನು ಎನ್ನುವುದಕ್ಕೆ ಪರ್ಯಾಯವಾದರು ಕಾಂಗ್ರೆಸ್‌ನವರು. ಈ ಅವಸ್ಥೆ ಕಾಂಗ್ರೆಸ್‌ನ ಕೆಲವರನ್ನು ವಿಷಮಸ್ಥಿತಿಗೊಳಗುಮಾಡಿತು. ಅಂಥವರಲ್ಲಿ ಒಬ್ಬ ಮ್ಯಾಥ್ಯು.

ಮ್ಯಾಥ್ಯು ಒಳ್ಳೆಯ ಹಣವಂತನಾಗಿದ್ದ. ಒಳ್ಳೆ ಕಡೆಯಿಂದ ಸಂಬಂಧವೂ ದೊರಕಿತ್ತು. ಕಾಂಗ್ರೆಸ್ಸಿನಲ್ಲಿ ಮೊದಲಿನಿಂದಲೂ ಪ್ರಭಾವಶಾಲಿಯಾದ ಒಬ್ಬ ಸದಸ್ಯನಾಗಿದ್ದ. ವರ್ಕಿಂಗ್ ಕಮಿಟಿಯಲ್ಲಿ ಬಹಳ ಕಾಲ ಇದ್ದ. ಹೆಂಡತಿಯ ಕಡೆಯ ಜನರಾರಿಗೂ ಮ್ಯಾಥ್ಯು ಕಾಂಗ್ರೆಸ್ಸಿಗೆ ಸೇರಿದುದು ಇಷ್ಟವಾಗಿರಲಿಲ್ಲ. ಅವರಲ್ಲಿ ಕೆಲವರು ಕೇರಳದ ಹೊರಗೆ ದೊಡ್ಡ ದೊಡ್ಡ ಅಧಿಕಾರದಲ್ಲಿದ್ದರು. ಮತ್ತೆ ಕೆಲವರು ಬ್ರಿಟಿಷರ ಕಂಪೆನಿಗಳಲ್ಲಿ ಕೈತುಂಬ ಸಂಬಳ ತೆಗೆದುಕೊಳ್ಳುತ್ತಿದ್ದರು. ಹೆಂಡತಿಗೂ ಗಂಡ ರಾಜಕೀಯದಲ್ಲಿ ತಲೆಕೆಡಿಸಿಕೊಳ್ಳುವುದು ಇಷ್ಟವಾಗಿರಲಿಲ್ಲ. ಆದರೆ ಆ ದೇಶಪ್ರೇಮಿ ಅದಾವುದನ್ನೂ ಗಣನೆಗೆ ತಂದುಕೊಂಡಿರಲಿಲ್ಲ. ಎಷ್ಟೋ ಸಲ ಮ್ಯಾಥ್ಯೂ ಜೈಲಿಗೆ ಹೋದದ್ದುಂಟು. ಏಟು ತಿಂದದ್ದಕ್ಕೂ ಲೆಕ್ಕವಿಲ್ಲ. ಮ್ಯಾಥ್ಯುವಿನ ಕಥೆ ಆ ಹೋರಾಟ ಕಾಲದ ಇತಿಹಾಸ.

ನಿಯಮವನ್ನು ಉಲ್ಲಂಘಿಸಿದ್ದಕ್ಕೂ ತಲೆ ತಪ್ಪಿಸಿಕೊಂಡು ತಿರುಗಿದ್ದಕ್ಕೂ ಮ್ಯಾಥ್ಯುವಿನ ಆಸ್ತಿಯನ್ನು ವಶಪಡಿಸಿಕೊಳ್ಳಲಾಯಿತು. ಮ್ಯಾಥ್ಯು ಎನ್ನುವ ಹೆಸರನ್ನು ಜನರು ಕೇಳಿದಾಗ ರೋಮಾಂಚನವುಂಟಾಗುತ್ತಿತ್ತು, ಅಷ್ಟೆ. ಎಷ್ಟೆಷ್ಟೋ ಕಥೆಗಳನ್ನು ಆ ದೇಶಾಭಿಮಾನಿಯ ಕುರಿತು ಹೇಳುತ್ತಿದ್ದರು !

ಒಂದು ದೀರ್ಘವಾದ ಜೈಲು ವಾಸದ ನಂತರ ಆರೋಗ್ಯ ಕೆಟ್ಟು ಮ್ಯಾಥ್ಯು ಹೊರಗೆ ಬಂದ. ಅಷ್ಟರಲ್ಲಿ ಅವನ ಹೆಂಡತಿ, ಮಕ್ಕಳನ್ನು ಕರೆದುಕೊಂಡು ತೌರುಮನೆಗೆ ಹೋಗಿಯಾಗಿತ್ತು. ಎಲ್ಲವೂ ಸರ್ಕಾರದ ಸ್ವಾಧೀನವಾಗಿತ್ತು. ಹೆಂಡತಿಯ ಮನೆಯವರು ಭಿಕ್ಷುಕನ ಜೊತೆಯಲ್ಲಿ ತಮ್ಮ ಮಗಳನ್ನು ಕಳಿಸಲು ಸಿದ್ಧರಿರಲಿಲ್ಲ. ಆ ದರಿದ್ರದವನು ಅವಳನ್ನು ಎಲ್ಲಿಗೆ ಕರೆದುಕೊಂಡು ಹೋದಾನು? ಮತ್ತೆ ಯಾವಾಗ ಜೈಲಿಗೆ ಹೋಗಬೇಕಾಗಬಹುದು ಎನ್ನುವುದು ಅವಳಿಗೂ ತಿಳಿಯದು; ಅವನಿಗೂ ತಿಳಿಯದು. ಎಲ್ಲರೂ ಒಂದು ತೀರ್ಮಾನಕ್ಕೆ ಬಂದರು. ಹೆಂಡತಿಯನ್ನು ಸಂರಕ್ಷಿಸಲು ನಿಶ್ಚೈಸುವ ವರೆಗೆ, ಆ ಶಕ್ತಿ ಅವನಿಗೆ ಬಂದ ಕಾಲಕ್ಕೆ ಅನ್ನಮ್ಮನನ್ನು ಕಳಿಸಿಕೊಡುತ್ತೇವೆ ಎಂದು ಭಾವಂದಿರೂ ಮಾವನೂ ಹೇಳಿದರು. ಅಂದು ಖಂಡಿತವಾಗಿಯೂ ಅನ್ನಮ್ಮ ಜೊತೆಯಲ್ಲಿ ಬರುತ್ತಾಳೆ. ಅವರ ಆ ನಿಲುವನ್ನು ನಿರಾಕರಿಸುವಂತಿರಲಿಲ್ಲ. ಸರಿ ತಾನೆ? ಎಲ್ಲಿ ಜೀವಿಸುವುದು? ಏನು ತಿನ್ನುವುದು? ತಿನ್ನುವುದಕ್ಕೇನಿದೆ? ಪೋಲೀಸಿನವರು ಯಾವಾಗ ಕರೆದುಕೊಂಡು ಹೋಗುತ್ತಾರೆ ಎಂದು ಗೊತ್ತಿದೆಯೆ? ಒಂದು ದಿನ ಬೆಳಗ್ಗೆ ಅವನು ಹೋದರೆ ನಂತರ ತಿಂಗಳುಗಳೋ ವರ್ಷಗಳೋ ಕಳೆದ ಮೇಲೆಯೇ ಅವನು ಹಿಂದಿರುಗುವುದು. ಮ್ಯಾಥ್ಯೂಗೆ ಅದು ಅರ್ಥವಾಯಿತು. ಅವನಿಗೆ ಅವರ ಮೇಲೆ ಸಿಟ್ಟು ಬರಲಿಲ್ಲ.

ಇನ್ನು ನೋಡಬೇಕಾದದ್ದೇನೂ ಇಲ್ಲ. ಏನೂ ಮಾಡಬಹುದು. ಸ್ವತಂತ್ರ. ಆದರೆ—ಅದೊಂದು ಭಾರವಾದ 'ಆದರೆ'—ಯಾಗಿತ್ತು. ಆ ಎಡಬಲಗಳನ್ನು ನೋಡುವುದಕ್ಕಿಲ್ಲದೆ ಜನಸೇವೆಯ ಆವೇಶದ ಮಧ್ಯೆ ಕೆಲವು ಸಲ ಇದ್ದಕ್ಕಿದ್ದ ಹಾಗೆ ಬುದ್ಧಿಗೆ ಮಂಕು ಕವಿಯುತ್ತಿತ್ತು......... ಅನ್ನಮ್ಮ ಪ್ರೇಮಮಯಿ, ವಿನಯವತಿ. ಆದರೆ ಅವಳಿಗೂ ಹೇಳಬೇಕಾದ ಎಷ್ಟೊ ಸಂಗತಿಗಳಿದ್ದುವು. ಅದು ನಿಜವೂ ಹೌದು. ಪಾಪ ! ಅವಳು ಹಾಗೆ ಏನೇನೋ ಮಾತಾಡಿಯೂ ಇದ್ದಳು. ಹೇಳುವವರ ಜೊತೆಯಲ್ಲಿ ಹೇಳಿಬಿಟ್ಟಿದ್ದಳು. ಅವನನ್ನು ಮುಖ ಅಡಿ ಮಾಡಿ ಮಲಗಿಸಿ ಶರೀರದ ಒಂದೊಂದು ಇಂಚಿಗೂ ಪೋಲೀಸರು ಲಾಠಿಯಿಂದ ಹೊಡೆದಿದ್ದರು. ಯಾತಕ್ಕೆಂದರೆ ಕಾಂಗ್ರೆಸ್ ಪ್ರೆಸಿಡೆಂಟು ಕಳ್ಳನೆಂದು ಹೇಳಿಸುವುದಕ್ಕಾಗಿ. ಅದನ್ನು ಹೇಳಲಿಲ್ಲ. ಇನ್ನು ಮೇಲೂ ಪೋಲೀಸರು ಹಾಗೆ ಶ್ರಮಿಸಿದರೆ ಅನ್ನಮ್ಮ ತನ್ನನ್ನು ಕೈಬಿಟ್ಟ ಹಾಗೆಯೇ ! ತಾನೂ ತನ್ನ ಮುಂದಾಳುಗಳ ಬಗ್ಗೆ ರಹಸ್ಯವನ್ನೆಲ್ಲಾ ಹೊರಗೆ ಹಾಕಿದ ಎಂದಾಗುವುದಿಲ್ಲವೆ? ಮ್ಯಾಥ್ಯೂವಿಗೆ ಒಂದು ಸಂಶಯ. ಆ ಸಂಶಯ ಕೆಲವು ಸಲ ಭಯವನ್ನುಂಟುಮಾಡುತ್ತಿತ್ತು. ಅವನಿಗೆ ತನ್ನ ಬಗ್ಗೆಯೇ ವಿಶ್ವಾಸವಿಲ್ಲ. ಅನ್ನಮ್ಮನ ಕಣ್ಣೀರು ತುಂಬಿದ ಕಣ್ಣುಗಳನ್ನು ಆತ

ಕಾಣುತ್ತಿದ್ದ. ಮಕ್ಕಳು ಅವನ ಹತ್ತಿರ ಬರುತ್ತಿರಲಿಲ್ಲ. ಇಲ್ಲ, ಆತ ದುರ್ಬಲನಾಗುವುದಿಲ್ಲ.

ಮ್ಯಾಥ್ಯೂವಿಗೆ ಶಕ್ತಿಯಿದೆ. ಮನಃಪೂರ್ವಕವಾಗಿ ಸಾಕಿ ಸಲಹುವ ಶಕ್ತಿ—ಅದು ಲಂಗುಲಗಾಮಿಲ್ಲದೆ ಅವನನ್ನು ಬೇರೊಂದು ಅವಸ್ಥೆಗೆ ತಳ್ಳುತ್ತಿತ್ತು. ಭವಿಷ್ಯವನ್ನು ಕುರಿತು ಚಿಂತಿಸುವುದಕ್ಕೆ ಅವನಿಗೆ ಸಾಧ್ಯವಾಗಲಿಲ್ಲ. ಅವನ್ ಏನು ಮಾಡಲೂ ಸಿದ್ಧವಾಗಿದ್ದ. ಅದೂ ಒಂದು ರೀತಿಯ ಹುಚ್ಚು. ಅವನು ಆ ಸ್ಥಿತಿಯಲ್ಲಿ ಹಿಂದೆ ಮುಂದೆ ಆಲೋಚಿಸುವುದಿಲ್ಲ. ಆಲೋಚಿಸುವುದಕ್ಕೂ ಅವನ ಮನಸ್ಸೊಪ್ಪುತ್ತಿರಲಿಲ್ಲ. ಆ ಧೈರ್ಯ ಹೊರಟುಹೋಗುತ್ತಿತ್ತು. ಅದು ಹೋದ ಬಳಿಕ ಮತ್ತೆ ಮ್ಲಾನನಾಗುತ್ತಿದ್ದ.

ಹಾಗೆ ಎಲೆಕ್ಷನ್ ಕಾಲದಲ್ಲೂ ಅದರ ನಂತರವೂ ಆತ ಬಿರುಗಾಳಿಯಂತೆ ಪ್ರವರ್ತಿಸಿದ. ಆತನ ಭಾಷಣ ಕೇಳುವುದಕ್ಕೆ ಯಾವ ಗ್ರಾಮದಲ್ಲೇ ಆದರೂ ಸಾವಿರ ಗಟ್ಟಲೆಯಲ್ಲಿ ಜನ ಸೇರುತ್ತಿದ್ದರು. ಮ್ಯಾಥ್ಯೂ ಏನು ಬೇಕಾದರೂ ಹೇಳುತ್ತಿದ್ದ. ಕಠಿಣವಾಗಿಯೇ ಆತನಿಗೆ ಹೇಳಲು ಸಾಧ್ಯವಾಗುತ್ತಿತ್ತು. ಹಾಗೆ ಕೇಶವ ಪಿಳ್ಳ ಆತನನ್ನು ಗಮನಿಸುವಂತಾದದ್ದು. ಪ್ರತ್ಯೇಕವಾದ ವಿರೋಧದಿಂದೇನೂ ಅಲ್ಲ. ಉದ್ಯೋಗಸ್ಥರ ಪ್ರಪಂಚದಲ್ಲಿ ಅವನಿಗೆ ಗೊತ್ತಿರುವುದು ಕೇಶವ ಪಿಳ್ಳೆ ಮಾತ್ರ. ಕಾಂಗ್ರೆಸ್‌ನ ಒಂದನೇ ನಂಬರ್ ಶತ್ರುವಾಗಿ ಪ್ರತ್ಯಕ್ಷವಾದದ್ದು ಕೇಶವ ಪಿಳ್ಳೆಯೇ.

ಎಲೆಕ್ಷನ್ ಕಳೆದ ಮೇಲೆ ಹಣ ಸಂಗ್ರಹದ ವಿಚಾರ ಬಂದಾಗ ಹಣ ಅಪಹರಿಸಿದ್ದನ್ನು ಕುರಿತಾದ ಆರೋಪಗಳು ಬಂದುವು. ಮ್ಯಾಥ್ಯುವಿಗೆ ಧೈರ್ಯವಾಗಿ ತಪ್ಪುಗಾರರನ್ನು ಟೀಕಿಸಬಹುದಾಗಿತ್ತು. ಆ ಟೀಕೆ ತೀರ ಕಠಿಣವಾದರೆ ಅದು ಸ್ವಾಭಾವಿಕವಲ್ಲವೆ? ಎಲ್ಲವನ್ನೂ ದೇಶಕ್ಕಾಗಿ ತ್ಯಜಿಸುವ ಒಂದು ದೊಡ್ಡ ಹೋರಾಟವನ್ನು ಹಣ ಸಂಪಾದಿಸುವ ಮಾರ್ಗವಾಗಿ ಬದಲಾಯಿಸಿ ಹೆಂಡತಿ ಮಕ್ಕಳಿಗಾಗಿ ಆಸ್ತಿ ಮಾಡಿಕೊಂಡವನನ್ನು ಸುಮ್ಮನೆ ಬಿಡುತ್ತಾರೆಯೆ? ಮ್ಯಾಥ್ಯುವಿನ ಧೈರ್ಯವೂ ವಿದ್ವೇಷವೂ ಉಗ್ರತರವಾಗಿತ್ತು. ಕಳ್ಳರ ಜೊತೆ ಸೇರಿಹೋದೆ ಎಂದು ಅವನಿಗ ಅನ್ನಿಸಿತು.

ಮ್ಯಾಥ್ಯು ರಾಜಿನಾಮೆ ಸಲ್ಲಿಸಿದ. ಆಕಸ್ಮಿಕವಾಗಿ ಆ ಕಾಲದಲ್ಲೊಮ್ಮೆ ಮ್ಯಾಥ್ಯು ಕೇಶವ ಪಿಳ್ಳೆಯನ್ನು ಭೇಟಿ ಮಾಡಿದ. ಮ್ಯಾಥ್ಯು ಹೆಚ್ಚು ತಡ ಮಾಡದೆ ಹೈಡ್ರೋ ಎಲೆಕ್ಟ್ರಿಕಲ್ ಯೋಜನೆಯಲ್ಲಿ ಸರ್ಕಾರಕ್ಕೆ ಅನುಕೂಲನಾದ ಒಬ್ಬ ಕಂಟ್ರಾಕ್ಟರ್ ಆದ.

ಕೈಬಿಟ್ಟು ಹೋದ ಆಸ್ತಿಯನ್ನು ಪುನಃ ಪಡೆಯಬೇಕಾದ ಹಣ ಸಂಪಾದಿಸುವುದಕ್ಕೆ ಹೆಚ್ಚು ಕಾಲ ಬೇಕಾಗಲಿಲ್ಲ. ಅನ್ನಮ್ಮನೂ, ಮಕ್ಕಳೂ ಪುನಃ ಮ್ಯಾಥ್ಯೂವಿನ ಜೊತೆಗೆ ಬಂದು ಸೇರಿಕೊಂಡರು.

ಆಲುವಾ ಟಿ.ಬಿ.ಯ ರೂಮಿನಲ್ಲಿ ಕುಳಿತುಕೊಳ್ಳುವ ಆಸನವನ್ನು ಕೊಡದೆ ನಿಲ್ಲಿಸಿಕೊಂಡು ಯಾರೊಡನೆ ಸೆಕ್ರೆಟರಿ ಕೇಶವ ಪಿಳ್ಳೆ ಮಾತನಾಡುತ್ತಿದ್ದನೋ ಅವರಲ್ಲಿ ಮ್ಯಾಥ್ಯುವಲ್ಲದೆ ಬೇರೆ ಹಳೆಯ ಚರಿತ್ರೆಯುಳ್ಳವರೂ ಇದ್ದರು. ಅವರು ಸ್ಟೇಟ್

ಕಾಂಗ್ರೆಸ್ ಚಳವಳಿಯಲ್ಲಿ ಗಣನೀಯವಾಗಿ ದುಡಿದವರು. ಮುಂದಾಳುಗಳು. ಇಂದೂ ಅವರ ಕಷ್ಟಗಳ ಚರಿತ್ರೆಯನ್ನು ಊರಿನವರು ಹೇಳುತ್ತಿದ್ದಾರೆ. ಅವರಲ್ಲೊಬ್ಬ ನಾರಾಯಣನ್ ನಾಯರ್. ಮತ್ತೊಬ್ಬ ಲೂಕೋಸ್. ಲಾಕಪ್ಪಿನಲ್ಲಿ ಬಲವಾಗಿ ಏಟು ತಿಂದು ಆತ ಕ್ಷಯರೋಗಿಯಾದ. ಅವನ ಚಿಕಿತ್ಸೆ ಮಾಡುವುದಕ್ಕೆ ಯಾರೂ ಇರಲಿಲ್ಲ. ಮತ್ತೊಬ್ಬ ಗೋಪೀನಾಥ. ಮುದುಕರಾದ ತಂದೆ ತಾಯಿಗಳಿಗೋಸ್ಕರ ಆತ ಕಾಂಗ್ರೆಸ್ಸನ್ನು ಬಿಟ್ಟ. ಆತನ ತಮ್ಮ ಪೋಲೀಸಿನವರು ನಡೆಸಿದ ಗೋಲೀಬಾರಿನಲ್ಲಿ ಸತ್ತದ್ದು.

ಹಾಗೆ ಇತಿಹಾಸಗಳಿದ್ದವರು ಕೇಶವ ಪಿಳ್ಳೆಯ ಪ್ರಶ್ನೆಯನ್ನು ಕೇಳಿ ನಡುಗುತ್ತಿದ್ದದ್ದು. ಅವರ ಹಿಂದಿನ ಸ್ಥಿತಿಯನ್ನು ನೆನಸಿಕೊಂಡು ಅವರು ನಡುಗುವುದನ್ನು ನೋಡಿದಾಗ ಆಶ್ಚರ್ಯವುಂಟಾಗುತ್ತದೆ. ಅವರು ಎಂದೂ ಹೆದರಿದವರಲ್ಲ; ನಡುಗಿದವರೂ ಅಲ್ಲ. ಭಯವೆಂದರೇನೆಂಬುದೇ ಅವರಿಗೆ ತಿಳಿಯದಾಗಿತ್ತು. ಎಂತೆಂತಹ ಸಾಹಸಕೃತ್ಯಗಳನ್ನು ಅವರು ಮಾಡಿರುವುದು !

ಇದು ಹೇಗೆ ಸಂಭವಿಸಿತು? ಒಂದು ವೇಳೆ ಅವರು ಇದೇ ಸುಖ ಎಂದು ತಿಳಿದಿರಬಹುದು. ಆಗ ದುಃಖದ ಕಹಿ ಏನು ಎನ್ನುವುದೂ ಅರ್ಥವಾಯಿತು. ಮೊದಲು ದುಃಖವೆಂದರೆ ಕಹಿಯಾಗಿರುತ್ತದೆ ಎಂದು ತೋರದೆ ಹೋಗಿದ್ದಿರಬಹುದು. ಹಣ ಮುಂತಾದುವು ಅವರಿಗಿದೆ. ಅವನ್ನೆಲ್ಲ ಅವರು ಪ್ರೀತಿಸುತ್ತಿರಬಹುದು. ಸಾಮರ್ಥ್ಯಗಳೆಲ್ಲಾ ನಶಿಸಿಹೋಗಿರಬಹುದು. ಆ ನಾಲ್ಕು ಜನರಿಗೂ ಕೇಶವ ಪಿಳ್ಳೆಯ ಹತ್ತಿರ ಅಲ್ಲಗಳೆಯಲು ಸಾಧ್ಯವಿಲ್ಲದ ಋಣಭಾರವಿದೆ.

ಆದರೂ ಆತ ಬಯಸುತ್ತಿದ್ದುದನ್ನು ಕಣ್ಣು ಮುಚ್ಚಿ ಮಾಡಿಕೊಡುವುದಕ್ಕೆ ಅವರ ಮನಸ್ಸೊಪ್ಪುವುದಿಲ್ಲ. ಆತ ಅವಶ್ಯಪಡುವುದು ಯಾತಕ್ಕೋಸ್ಕರ ಅವರು ಜೀವನ ಪೂರ್ತಿ ತಲೆಮರೆಸಿಕೊಂಡು ಬಾಳುತ್ತಿದ್ದರೋ ಆ ಉದ್ದೇಶವನ್ನೇ ಹೋಗಲಾಡಿಸುವುದಕ್ಕಾಗಿ. ಕಾಂಗ್ರೆಸ್ಸಿನಿಂದ ಅವರು ಹೊರ ಬಂದರು. ಆದರೆ ಯಾವ ಉದ್ದೇಶಕ್ಕೋಸ್ಕರ ಕಾಂಗ್ರೆಸ್ಸಿಗೆ ಸೇರಿದರೋ ಆ ಆದರ್ಶ ಅವರಿಗೆ ದೊಡ್ಡದಾಗಿತ್ತು. ಕೈಯಲ್ಲಿ ಹಣವಿದ್ದಾಗ ಅವರು ಕೈ ತಡೆಯದೆ ಕಾಂಗ್ರೆಸ್ಸಿಗೆ ಕೊಟ್ಟದ್ದುಂಟು. ಗಾಂಧೀಜಿಯನ್ನು ದೂರಬೇಕು ಅದು ಅವರಿಗೆ ಸಾಧ್ಯವಿಲ್ಲ.

ಭಾರತ ಸ್ವತಂತ್ರವಾಗುವುದು ಖಂಡಿತ ಎನ್ನುವ ಸಮಯವಾಗಿತ್ತು ಅದು. ಬ್ರಿಟಿಷರು ಹೋಗುತ್ತಾರೆ. ಅದಕ್ಕೆ ಬೇಕಾದ ಸಿದ್ಧತೆಗಳೆಲ್ಲವೂ ಆಗಿವೆ. ತಿರುವಾಂಕೂರು ಇಂಡಿಯದ ಬೇರೆ ಭಾಗಗಳಿಂದ ಬೇರ್ಪಟ್ಟು ಒಂದು ಪರಮಾಧಿಕಾರ ಸ್ವತಂತ್ರ ರಾಷ್ಟ್ರವಾಗಿ ಅಸ್ತಿತ್ವಕ್ಕೆ ಬರಬೇಕು. ಅದಕ್ಕೆ ಅನುಕೂಲ ಮಾಡಬೇಕು. ಅದನ್ನು ಕೇಶವ ಪಿಳ್ಳೆ ಬಯಸುತ್ತಿದ್ದದ್ದು.

ಮ್ಯಾಥ್ಯು ಮುಂತಾದವರ ಮನಃಪ್ರಯಾಸ ಕೇಶವ ಪಿಳ್ಳೆಗೆ ಅರ್ಥವಾಗುತ್ತಿತ್ತು. ಆತ ಹೇಳಿದ:

"ಒಂದು ತೀರ್ಮಾನಕ್ಕೆ ಬರಬೇಕು."

ಯಾರೂ ಆ ಪ್ರಶ್ನೆಯನ್ನು ಕುರಿತು ಚರ್ಚಿಸಲಿಲ್ಲ. ಅವರಿಗೆ ವಾದಿಸಲು ವಿಷಯ ಗಳಿರಲಿಲ್ಲವೋ ಶಕ್ತಿ ಸಾಲದೆ ಹೋಯಿತೋ ವಾದಿಸಬಾರದು ಎಂತಲೋ ಏನೋ ಅದಕ್ಕೆ ತೊಡಗಲಿಲ್ಲ.

ಮ್ಯಾಥ್ಯು ಹೇಳಿದ: "ಊರಿನವರು ನಮ್ಮನ್ನು ಸುಮ್ಮನೆ ಬಿಡೋದಿಲ್ಲ."

ಕೂಡಲೆ ಕೇಶವ ಪಿಳ್ಳೆ ಹೇಳಿದ:

"ಹೌದು. ತಿರುವಾಂಕೂರನ್ನು ಪ್ರೇಮಿಸೋದನ್ನ ನೀವು ಕಲಿತಿಲ್ಲ. ಆ ಪಾಪದ ಫಲ ಅನುಭವಿಸಬೇಕು." ಒಂದು ಕ್ಷಣ ಕಳೆದು ಆತ ಹೇಳಿದ:

"ಇದೊಂದು ಒಳ್ಳೆಯ ಸಂದರ್ಭ. ಸಣ್ಣ ಕೆಲಸವೇನೂ ಅಲ್ಲ. ಪ್ರಾಣ ಸುರಕ್ಷಿತ ವಾಗಿರೋದಿಲ್ಲ. ನನಗೆ ಗೊತ್ತಿದೆ. ಯಾವನೋ ಒಬ್ಬ ನನ್ನ ಮೇಲೆ ದೃಷ್ಟಿಯಿಟ್ಟು ಕೊಂಡು ತಿರುಗಾಡ್ತಿದ್ದಾನೆ. ಯಾರು ಅಂತ ತಿಳಿಯದು. ಕಮ್ಯೂನಿಸ್ಟ್ ಕಡೆಯವನೋ ಕಾಂಗ್ರೆಸ್ಸಿನವನೋ ಆಗಿರಬೇಕು. ಅವುಗಳನ್ನೆಲ್ಲ ಎದುರಿಸಬೇಕು. ಸಂಪದ್ಭರಿತವಾದ ಈ ಸಣ್ಣ ರಾಜ್ಯ ಸ್ವತಂತ್ರವಾಗುವುದನ್ನು ಆಲೋಚಿಸಿ ನೀವೆಲ್ಲ ಆ ವಿಚಾರವಾಗಿ ಆಲೋಚನೆ ಮಾಡದೇ ಇರೋದು ಯಾಕೆ? ನಮಗೆ ನಮ್ಮ ಕೆಲಸ ನೋಡಿಕೊಳ್ಳೋದಕ್ಕೆ ಶಕ್ತಿ ಯಿಲ್ಲವೆ? ನಮ್ಮ ಹಾಗೆ ಚಿಕ್ಕದಾದ ಸ್ವತಂತ್ರ ರಾಷ್ಟ್ರಗಳು ಭೂಮಿಯಲ್ಲಿ ಬೇರೆ ಇಲ್ಲವೆ? ಇಲ್ಲೆಲ್ಲ ನಮ್ಮ ಕಡೆ ಪರಂಪರಾಗತವಾಗಿ ಪ್ರಜೆಗಳನ್ನು ಮಕ್ಕಳಂತೆ ಪ್ರೀತಿ ಸುವ ರಾಜವಂಶ ನಮಗಿದೆ. ಅವರ ಜೀವನ ಎಷ್ಟೊಂದು ಸರಳವಾದದ್ದು. ಅವರಿಗಾಗಿ ಈ ರಾಜ್ಯದಲ್ಲಿ ಯಾವ ಖರ್ಚಿದೆ? ಹೇಳುವುದಕ್ಕೇನೂ ಇಲ್ಲ. ಆ ರಾಜವಂಶ ಶಾಶ್ವತ ವಾಗಿರಲಿ. ನಾವು ನಮ್ಮ ನಾಡನ್ನೂ ನಮ್ಮ ರಾಜನನ್ನೂ ಪ್ರೀತಿಸೋಣ."

ಕೂಡಲೇ ನಿರ್ಧರಿಸಿ ಹೇಳಲು ಮ್ಯಾಥ್ಯುವಿಗೂ ಜೊತೆಯವರಿಗೂ ಸಾಧ್ಯವಿರ ಲಿಲ್ಲ. ಅವರಲ್ಲಿ ತುಂಬ ವಿನಯವಂತನಾದ ಲೂಕೋಸ್ ಹೇಳಿದ: "ತಾವು ಹೇಳೋ ದೇನೋ ನಿಜ. ಯಾವುದನ್ನೂ ಆ ಕಡೆ ನಿಸ್ಸಾರವಾಗಿ ತಳ್ಳುವಂತಹ ವಾದಗಳೂ ಅಲ್ಲ. ಆದರೆ ಥಟ್ಟನೆ ಈ ಪ್ರಶ್ನೆ ಕೇಳಿದಾಗ ಒಂದು ಸಿಡಿಲು ಹೊಡೆದ ಹಾಗಾಯ್ತು."

ಕೇಶವ ಪಿಳ್ಳೆ ಅದು ಸರಿಯೆಂದು ಹೇಳಿದ. ಯಾರಿಗೂ ಹಾಗನ್ನಿಸುತ್ತದೆ. ಯಾರನ್ನೂ-ಹೊಟ್ಟೆಮೊದಲಿಗೆ ನಡುಗಿಸುವಂತಹುದು ತಿರುವಾಂಕೂರು ಒಂದು ಸ್ವತಂತ್ರ ರಾಜ್ಯವಾಗುವುದು ! ಮತ್ತೆ ಹೇಳಿದ:

"ಕಾಂಗ್ರೆಸ್ಸಿನವರು ಹೇಳುವ ಸ್ವಾತಂತ್ರ್ಯವೋ ಅಥವಾ ಕಮ್ಯೂನಿಷ್ಟಿನವರು ಹೇಳುವ ಸ್ವಾತಂತ್ರ್ಯವೋ ಯಾವುದು ಯಥಾರ್ಥವಾದ ಸ್ವಾತಂತ್ರ್ಯವೆಂದು ನಮಗೆ ಅರ್ಥವಾಗಿದೆ. ಇಂದು ನಿಮಗುಂಟಾದ ಆ ನಡುಕವುಂಟಿಲ್ಲ. ಅದರ ನಂತರ ಚಿಂತಿಸು ವಾಗ ದೇಶ ಪ್ರೇಮಿಗೆ ಸ್ವತಂತ್ರ ತಿರುವಾಂಕೂರ್ ಎನ್ನುವುದರ ಮಹತ್ವ ಅರ್ಥವಾಗು ತ್ತದೆ. ಮೊದಲು ನಮ್ಮ ಮನೆಯನ್ನು ಪ್ರೀತಿಸುವುದಲ್ಲವೆ?"

ಆ ಪ್ರಶ್ನೆಯನ್ನು ಕೇಶವ ಪಿಳ್ಳೈ ಅರ್ಥವತ್ತಾಗಿ ಕೇಳುತ್ತಿದ್ದ. ಆತ ಒಂದು ಕ್ಷಣಕಾಲ ಅವರ ಮುಖಭಾವವನ್ನು ನೋಡಿದ. ನಂತರ ಹೇಳಿದ:

"ನಮ್ಮ ಮನೆಯೇ ನಮ್ಮ ರಾಜ್ಯ. ನಮ್ಮ ತಿರುವಾಂಕೂರು."

ಏನೂ ಮಾತನಾಡದೆ ನಿಂತಿದ್ದ ನಾರಾಯಣನ್ ನಾಯರ್ ಹತ್ತಿರ ಕೇಶವ ಪಿಳ್ಳೈ ಕೇಳಿದ: "ಯಾಕೆ ನಾರಾಯಣನ್ ನಾಯರ್ ಏನೂ ಮಾತಾಡೋದೇ ಇಲ್ಲವಲ್ಲ?"

ತನಗರಿಯದಂತೆಯೇ ನಾರಾಯಣನ್ ನಾಯರ್ ಹೇಳಿದ: "ದೇಶದಲ್ಲಿ ಇದುವರೆಗೆ ಉಂಟಾಗದಂತಹ ತೊಂದರೆಗಳುಂಟಾಗಬಹುದು."

ನೀರಸವಾಗಿ ಕೇಶವ ಪಿಳ್ಳೈ ನಕ್ಕ ಅಷ್ಟೆ. "ಓ! ಅದು ಚಿಂತೆಯಲ್ಲ. ಅದನ್ನು ಎದುರಿಸೋದಕ್ಕೆ ಈ ಸರ್ಕಾರಕ್ಕೆ ಶಕ್ತಿಯಿದೆ. ಬಡಿದು ಕೂರಿಸ್ತೀವಿ. ಅದರಲ್ಲಿ ಯಾವ ದಯೆ ದಾಕ್ಷಿಣ್ಯವೂ ಇಲ್ಲ. ವಿರೋಧಿಸುವವನು ತಿರುವನಂತಪುರದಲ್ಲಿ ಜೀವಿಸುವ ಹಾಗಿಲ್ಲ. ಅವನು ಸಹ್ಯಾದ್ರಿ ಆಚೆಗೆ ಹೋಗಲಿ. ಅವನು ಈ ದೇಶಕ್ಕೆ ಹೇಳಿಸಿಕೊಂಡವನಲ್ಲ. ತಿರುವಾಂಕೂರಿನ ಸಂತಾನವೂ ಅಲ್ಲ."

ಒಂದು ಸ್ವಲ್ಪ ಹೊತ್ತು ಬಿಟ್ಟು ಆತ ಹೇಳಿದ: "ಆದರೆ ಅದೊಂದೂ ಸಂಭವಿಸೋದಿಲ್ಲ. ದೇಶದ ಜನರಿಗೆ ಬುದ್ಧಿಯಿದೆ. ವಿಷಯ ಅರ್ಥಮಾಡಿಕೊಳ್ಳೋ ಅಷ್ಟು ಶಕ್ತಿಯಿದೆ. ಕಾಂಗ್ರೆಸ್‌ನವರು ಅವರನ್ನೀಗ ಕಾಡುದಾರಿಯಲ್ಲಿ ಕೈಬಿಟ್ಟಿದ್ದಾರೆ. ಜನರಿಗೆ ನೇರವಾದ ಮಾರ್ಗವೂ ಬೆಳಕೂ ಸಿಕ್ಕಿದರೆ ಸಾಕಾಗಿದೆ. ದೇಶದ ಜನರನ್ನು ಕುರಿತು ಸರ್ಕಾರಕ್ಕೆ ಯಾವ ಭಯವೂ ಇಲ್ಲ. ಮೊದಲು ನಿಮಗೆ ಉಂಟಾದ ರೀತಿಯಲ್ಲೇ ಯಾರಿಗೂ ಒಂದು ನಡುಕವುಂಟಾಗುತ್ತದೆ. ಅದು ಚಿಂತೆಯಿಲ್ಲ. ಅದನ್ನ ಎದುರಿಸಲೇಬೇಕಾಗಿ ಬರುತ್ತದೆ."

ಎದುರಾಳಿಗಳನ್ನು ಎದುರಿಸುವ ಯೋಜನೆಯನ್ನು ಕುರಿತು ಚಿಂತಿಸುವವನಂತೆ ಸ್ವಲ್ಪ ಹೊತ್ತು ನಿಶ್ಶಬ್ದನಾಗಿ ನಿಂತಿದ್ದ ಕೇಶವ ಪಿಳ್ಳೈ ಹೇಳಿದ:

"ಪುನ್ನಪ್ರದಲ್ಲೂ ವಯಲಾರಿನಲ್ಲೂ ಎಷ್ಟೋ ಜನರು ಸತ್ತಿಲ್ಲವೆ? ಅದೇ ರೀತಿ ಅಲ್ಲಿಯೂ ಇಲ್ಲಿಯೂ ಎಷ್ಟೋ ಜನ ಗಲ್ಲಿಗೇರಬೇಕಾಗಬಹುದು. ಚಿಂತೆಯಿಲ್ಲ. ಇಂಥ ಒಂದು ಒಳ್ಳೆಯ ಕೆಲಸಕ್ಕೆ ಬಲಿದಾನದ ಅಗತ್ಯವಿದೆ."

ಒಂದು ಗಂಟೆಗಿಂತ ಹೆಚ್ಚಾಗಿ ಅನಂತರವೂ ಕೇಶವ ಪಿಳ್ಳೈ ಮಾತನಾಡಿದ. ಸ್ವತಂತ್ರ ತಿರುವಾಂಕೂರಿನಲ್ಲಿ ಆ ನಾಲ್ಕು ಜನರ ಸಹಕಾರ ದೊರೆಯುವುದೆಂದು ಆತ ನಿರೀಕ್ಷಿಸುತ್ತಿದ್ದ. ಅಂದು ಅವರು ಹಿಂದಿರುಗಿ ಹೋಗುವುದಿಲ್ಲ. ಆ ರಾತ್ರಿ ಅವರಿಗೆ ಆಲೋಚಿಸುವುದಕ್ಕೆ ಬಿಟ್ಟುಕೊಟ್ಟಿದ್ದ. ಟಿ.ಬಿ.ಯಲ್ಲಿ ಆ ನಾಲ್ಕು ಜನರೂ ಉಳಿದುಕೊಂಡದ್ದು. ಮಾರನೆಯ ದಿನ ಆಗುಹೋಗುಗಳನ್ನು ಕುರಿತು ಚೆನ್ನಾಗಿ ಆಲೋಚಿಸಿದ ಬಳಿಕ ಪ್ರತಿಜ್ಞಾಪತ್ರದಲ್ಲಿ ಸಹಿ ಹಾಕಿದರೆ ಸಾಕು. ಹಾಗೆ ಆ ರೂಮಿನಿಂದ ಅವರು ಹೊರಟು ಬಂದರು.

ಅಂತಹ ಒಂದು ಸ್ಥಿತಿ ಅವರ ಜೀವನದಲ್ಲಿ ಎಂದೂ ಉಂಟಾಗಿರಲಿಲ್ಲ. ಸ್ವತಂತ್ರ

ತಿರುವಾಂಕೂರು! ಅದನ್ನು ನಾರಾಯಣನ್ ನಾಯರ್‌ಗೂ ಗೋಪಿಗೂ ಊಹಿಸಲೂ ಸಾಧ್ಯವಾಗಲಿಲ್ಲ. ತಿರುವಾಂಕೂರು ಒಂದು ಸ್ವತಂತ್ರ ರಾಜ್ಯವಾಗಿ ನಿಲ್ಲಬೇಕು. ಅದು ಹೇಗಿರಬೇಕು ಎಂದಾಗಲೀ ಹೇಗೆ ಸಾಧ್ಯ ಎಂದಾಗಲೀ ಅಲ್ಲ. ಹಾಗೆಂದರೇನು ಎನ್ನುವುದೇ ಅವನಿಗೆ ತಿಳಿಯದೇ ಇದ್ದದ್ದು.

ಮ್ಯಾಥ್ಯುವಿಗೆ ಅದರ ಅರ್ಥ ತಿಳಿಯಿತು. ತಿರುವಾಂಕೂರಿಗೆ ಗಡಿಗಳಿರಬೇಕು. ಅಲ್ಲಿ ಸೈನಿಕರು ಆಕ್ರಮಣವುಂಟಾಗದಂತೆ ಕಾಪಲು ನಿಲ್ಲಬೇಕು. ವಿಮಾನ ಪಡೆ, ನೌಕಾ ಪಡೆ, ಇರಬೇಕು. ನಮ್ಮ ಪ್ರತಿನಿಧಿಗಳನ್ನು ವಿದೇಶಕ್ಕೆ ಕಳುಹಿಸಬೇಕು. ಹಾಗಾಗಿರಬೇಕು ಸ್ವತಂತ್ರ ತಿರುವಾಂಕೂರು. ಎಷ್ಟೋ ಸಲ ಮದರಾಸಿನ ಜೊತೆಯಲ್ಲೂ ಯುದ್ಧಮಾಡಬೇಕಾಗಿ ಬರಬಹುದು. ಆತ ಕೇಳಿದ: "ಅದೇಕೆ ಎಂದು ಕೇಳಿದರೇನು?"

ಲೂಕೋಸಿಗೆ ಅದಲ್ಲದೆ ಮತ್ತೊಂದು ಆಲೋಚನೆಯಿತ್ತು. "ತಿರುವಾಂಕೂರು ಸ್ವತಂತ್ರವಾದರೇನು ದೋಷ?"

ಲೂಕೋಸ್ ಆಲೋಚಿಸುತ್ತಿದ್ದ. ಆದರೆ ಮ್ಯಾಥ್ಯುವಿಗೆ ಅಷ್ಟರ ವರೆಗೆ ಹೋಗಲು ಸಾಧ್ಯವಿಲ್ಲ. ದೋಷವಿದೆ. ಇಂಡಿಯ ಒಂದು. ತಿರುವಾಂಕೂರು ಆ ಇಂಡಿಯದ ಒಂದು ಭಾಗ. ಪ್ರತ್ಯೇಕವಾಗಿ ನಿಂತರೆ ಹೇಗೆ ಒಳ್ಳೆಯದಾಗುತ್ತದೆ? ಅವನು ಕೇಳಿದ:

"ಹೇಗೆ ಗಾಂಧೀಜಿಯನ್ನು ನಿಂದಿಸಿ ಮಾತನಾಡುವುದು?"

ನಾರಾಯಣನ್ ನಾಯರ್ ಸ್ವಲ್ಪ ವಿಕಾರಕ್ಕೊಳಗಾದ. "ನನ್ನಿಂದ ಸಾಧ್ಯವಿಲ್ಲ. ಜೀವನವಿಡೀ ಹೇಳಿಕೊಂಡು ತಿರುಗಿದ್ದು. ಅದು ಜೀವಕ್ಕೆ ಸಮನಾಗಿತ್ತು. ನಮಗೆ ಇಂದು ಕ್ಷಮೆಗೆ ಅವಕಾಶವಿದೆ. ದೇಶದ ಜನ ನಮ್ಮನ್ನು ಕ್ಷಮಿಸಿಯೂ ಕ್ಷಮಿಸ್ತಾರೆ. ಆಗೋದಿಲ್ಲ, ಆಗೋದಿಲ್ಲ. ನನ್ನಿಂದಾಗೋದಿಲ್ಲ."

ಗೋಪಿಯೂ ಹಾಗೆಯೇ ಹೇಳಿದ:

"ಆಗ ನಾನು ಅಲ್ಲೇ ಹೇಳಬೇಕು ಅಂದುಕೊಂಡಿದ್ದೆ. ನನಗೆ ಸಾಧ್ಯವಿಲ್ಲ. ನಾನೊಬ್ಬ ಭಾರತದ ಪ್ರಜೆಯಾಗಿ ಹುಟ್ಟಿದೆ. ಭಾರತದ ಪ್ರಜೆಯಾಗಿ ಸಾಯಬೇಕು."

ಲೂಕೋಸ್ ಆ ತೀರ್ಮಾನದ ಭವಿಷ್ಯತ್ತನ್ನು ಕುರಿತು ಹೇಳಿದ್ದು.

"ಆ ಮನುಷ್ಯ ನಮ್ಮನ್ನು ಒಡಿದು ಹಾಕಿಯಾನು. ನಮ್ಮ ಮೇಲೆ ಅವನಿಗೆ ವಿಪರೀತ ಸಿಟ್ಟಿದೆ."

ಮ್ಯಾಥ್ಯುವಿಗೆ ಆ ವಿಷಯದಲ್ಲಿ ಸಂಶಯವಿಲ್ಲ. "ಹಾಗೆಯೇ ಸ್ಪಷ್ಟವಾಗಿ ಅವನು ಹೇಳಿದನಲ್ಲ. ಅವನು ಮುಚ್ಚಿಕೊಂಡು ಹೇಳಲಿಲ್ಲ. ನಮ್ಮ ಸರ್ವನಾಶ ಮಾಡೋದಕ್ಕೂ ಅವನು ಹೇಸೋದಿಲ್ಲ."

ಸ್ವಲ್ಪ ಹೊತ್ತಿನ ವರೆಗೆ ಯಾರೂ ಏನೂ ಮಾತಾಡಲಿಲ್ಲ. ಗಂಭೀರವಾದ ನಿಮಿಷಗಳು ದಾಟುತ್ತಿದ್ದುವು. ಲೂಕೋಸ್ ಅನಂತರ ಮಾತನಾಡಿದ್ದು.

"ಮ್ಯಾಥ್ಯುವಿಗೆ ಎಷ್ಟೋ ಭೂಮಿಯೂ ಮನೆಯೂ ಉಳಿದಿರಬಹುದು. ನನಗಿರೋದು ಕಲ್ಲು, ಮರಳು. ಅದು ಮೂಡುಗುಡ್ಡದಲ್ಲಿ ಬಿದ್ದಿದೆ."

ಮ್ಯಾಥ್ಯು ಹೇಳಿದ: "ಭೂಮಿಯೂ ಸಿಕ್ಕಿತು ಅಂತ ಆದರೋ? ಎದುರಿಸಿದರೆ ನಾವು ಯಾರೂ ಉಳಿಯೋ ಹಾಗಿಲ್ಲ."

ನಾರಾಯಣನ್ ನಾಯರ್ ಒಂದು ತೀರ್ಮಾನಕ್ಕೆ ಬಂದಂತೆ ತೋರಿತು. "ನನಗೆ ಒಂದು ಕಾಲದಲ್ಲಿ ಸಂಸಾರವಿತ್ತು. ಅದು ಇಲ್ಲದಂತಾದದ್ದನ್ನು ನಾನು ಅನುಭವಿಸಿದವನು. ಆ ಮೇಲೆ ಒಂದು ಕುಟುಂಬ ಸಾಗಿಸಿಕೊಂಡು ಬರ್‍ತಿದ್ದೇನೆ. ಅದೂ ಹೋದರೆ ನನಗೆ ಅದೊಂದು ಹೊಸ ದುಃಖವಲ್ಲ."

ಗೋಪಿಯೂ ಹೆಚ್ಚು ಕಡಿಮೆ ಇದೇ ರೀತಿಯಲ್ಲಿದ್ದ. ತೀರ್ಮಾನವನ್ನು ಕೈಗೊಂಡಂತೆ ತೋರಿತು. ಕಿರಿಯ ಮಗ ಸತ್ತ ದುಃಖವನ್ನು ಅವನ ತಂದೆ ತಾಯಿಗಳು ನೋಡಿದರು. ಹಿರೀ ಮಗ ಸತ್ತದ್ದನ್ನು ಅವರು ನೋಡಲಿ. ಅವನು ಹೇಳಿದ:

"ನನ್ನ ತಮ್ಮನೂ ಇದನ್ನು ಸಹಿಸೋದಿಲ್ಲ."

ಲೂಕೋಸ್ ಈ ಪ್ರಶ್ನೆಯನ್ನು ನಾಲ್ಕು ಕಡೆಯಿಂದಲೂ ಚಿಂತಿಸುತ್ತಿದ್ದ. "ಈ ಸ್ವತಂತ್ರ ತಿರುವಾಂಕೂರು ಕಾರ್ಯರೂಪಕ್ಕೆ ಬರುತ್ತಾ ಮ್ಯಾಥ್ಯೂ?" ಎಂದು ಅವನು ಕೇಳಿದ.

ಮ್ಯಾಥ್ಯು ಉತ್ತರ ಹೇಳಿದ: "ನನಗೆ ಸಂಶಯ. ಇದನ್ನ ಒಪ್ಪಿಕೊಳ್ಳೋದಕ್ಕೆ ಜನರು ಸಿದ್ಧರಾಗೋದಿಲ್ಲ."

"ಮತ್ತೆ?"

"ದೇಶದಲ್ಲಿ ಎಷ್ಟೋ ಗೊಂದಲಗಳು ನಡೆಯುತ್ತಿವೆ. ಎಷ್ಟೋ ಜನ ಸಾಯ್ತಾರೆ!"

ಲೂಕೋಸಿನ ಪ್ರಾಯೋಗಿಕ ಬುದ್ಧಿ ಚುರುಕಾಗುವುದಕ್ಕೆ ತೊಡಗಿತು. "ಹಾಗಿದ್ದರೆ ಹಾಗೇ ಒಪ್ಪಿಕೊಳ್ತೇನೆ ಅಂತ ಹೇಳಿ ತಟಸ್ಥರಾಗಿ ನಿಂತರೇನು? ನಷ್ಟವೂ ಇಲ್ಲ. ಲಾಭವೂ ಇಲ್ಲ. ಕಾರ್ಯ ನಡೆಯೋದೂ ಇಲ್ಲ. ಅದಲ್ಲವೇ ಉಪಾಯ?"

ಮ್ಯಾಥ್ಯು ತನಗರಿವಿಲ್ಲದಂತೆ ಹೇಳಿದ: "ನಿನ್ನ ತಲೆ!"

ಲೂಕೋಸ್ ಅಭಿಪ್ರಾಯಪಟ್ಟ: "ಈ ತೊಂದರೆ ಗೊಂದಲದಿಂದ ಬೇರೆಯಾಗಿ ನಿಂತುಕೊಳ್ಳೋಣ. ಎದ್ದು ಕಾಣೋ ಹಾಗೆ ಒಂದರಲ್ಲೂ ಸೇರಬಾರದು. ಹಾಗೆ ನಿಲ್ಲಬಲ್ಲ ಸಾಮರ್ಥ್ಯವಿದ್ದರೆ ಸಾಕು. ಏನು ನಾರಾಯಣನ್ ನಾಯರೇ?"

ನಾರಾಯಣನ್ ನಾಯರ್‌ಗೆ ಆ ಪ್ರಶ್ನೆ ಕೇಳಿಸಲಿಲ್ಲವೆಂದು ತೋರಿತು. ಗೋಪಿಯೂ ಉತ್ತರ ಹೇಳಲಿಲ್ಲ. ಲೂಕೋಸ್ ಕೇಳಿದ:

"ಆದರೆ ನಾವು ಪ್ರತಿಜ್ಞಾಪತ್ರದಲ್ಲಿ ಸಹಿಹಾಕ ಸುಮ್ಮನಿದ್ದರೆ ಹೇಗೆ?"

ಮ್ಯಾಥ್ಯು ನೇರವಾಗಿ ಆ ಮಾತಿಗೆ ಉತ್ತರ ಹೇಳಲಿಲ್ಲ.

"ಒಂದು ವಿಷಯ ನಿಜ. ಬೆಳಗ್ಗೆ ನಾವು ಆ ಮನುಷ್ಯನನ್ನು ಕಂಡಾಗ ಪ್ರತಿಜ್ಞಾಪತ್ರ

ದಲ್ಲಿ ಸಹಿಹಾಕಲೇಬೇಕಾಗುತ್ತೆ. ನನ್ನ ಜೊತೆಯಲ್ಲಿ ಓದಿದ ಆ ಸಾಧಾರಣ ಹುಡುಗ ಹೀಗಾದದ್ದೂ ಆಶ್ಚರ್ಯವೇ! ಇದಕ್ಕೆ ಮೊದಲೂ ನನಗೆ ಅನುಭವವಾಗಿದೆ. ಅವನಿಗೆ ಯಾವುದೋ ಒಂದು ಶಕ್ತಿಯಿದೆ. ನಮಗೆ ಅವನನ್ನು ಎದುರಿಸುವುದಕ್ಕೇ ಸಾಧ್ಯವಿಲ್ಲ."

ಗೋಪಿ ಖಡಾಖಂಡಿತವಾಗಿ ಹೇಳಿದ:

"ನಾನು ನಾಳೆ ಬೆಳಿಗ್ಗೆ ಆ ಮನುಷ್ಯನನ್ನು ಕಾಣುವುದಿಲ್ಲ."

ನಾರಾಯಣನ್ ನಾಯರೂ ಹೇಳಿದ:

"ನಾನೆಲ್ಲ ಕೈಬಿಟ್ಟಾಯ್ತು. ನಾನೂ ಇಲ್ಲ."

ಲೂಕೋಸ್ ಮುನ್ಸೂಚನೆ ಕೊಟ್ಟ: "ನಾಳೆಯೇ ಆ ಮನುಷ್ಯ ನಿಮ್ಮ ಸರ್ವನಾಶ ಮಾಡಿಬಿಡ್ತಾನೆ. ಆ ಕಾರ್ಯಕ್ರಮವನ್ನಿಟ್ಟುಕೊಂಡೇ ಅವನು ನಮ್ಮನ್ನು ಇಲ್ಲಿಗೆ ಬರಮಾಡಿರೋದು."

ನಾರಾಯಣನ್ ನಾಯರೂ ಗೋಪಿಯೂ ತೀರ್ಮಾನಿಸಿಯಾಗಿತ್ತು. ಬರಲಿರುವುದನ್ನು ಕುರಿತು ಅವರಿಗೆ ಸಂಶಯವಿರಲಿಲ್ಲ. ಅನ್ಯೋನ್ಯವಾಗಿದ್ದ ಅವರು ಭಿನ್ನಾಭಿಪ್ರಾಯಗಳಿಂದ ಬೇರೆಯಾಗುವುದಕ್ಕೆ ಹೊರಟಿದ್ದರು. ಒಟ್ಟಿಗೆ ಕಾಂಗ್ರೆಸ್ಸನ್ನು ಬಿಟ್ಟವರು. ಇದುವರೆಗೂ ಒಟ್ಟಿಗೇ ಭಾಗವಹಿಸುತ್ತಿದ್ದವರು. ಕಂಟ್ರಾಕ್ಟುಗಳು. ಕಾಡಿನಲ್ಲಿ ಕೂಪ್ರಗಳನ್ನು ತೆಗೆದುಕೊಳ್ಳುವುದು—ಎಲ್ಲದರಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಸಂಪಾದಿಸುತ್ತಿದರೂ ಒಟ್ಟಿಗೆ ನಡೆದಾಡುತ್ತಿದ್ದದ್ದು. ಆ ನಾಲ್ಕು ಜನರನ್ನೂ ಒಟ್ಟಿಗೆ ಕಾಣುತ್ತಿದ್ದದ್ದು. ಇಂದು ಅವರು ಬೇರೆ ಬೇರೆಯಾಗುವ ಸ್ಥಿತಿ ಬಂದಿತ್ತು. ಲೂಕೋಸ್ ಆ ವಿಷಯವನ್ನು ತಿಳಿಸಿದ್ದ. "ಹಾಗಿದ್ದರೆ ನಾವು ನಮ್ಮ ನಮ್ಮ ಲೆಕ್ಕಾಚಾರ ತೀರ್ಮಾನ ಮಾಡಬಹುದಲ್ಲ?"

ಮ್ಯಾಥ್ಯೂ ಒಂದು ಸಲಹೆ ನೀಡಿದ:

"ಸರಿ. ಆಲೋಚಿಸುವುದಕ್ಕಾಗಿ ಕೆಲವು ದಿನಗಳನ್ನು ಕೇಳಿಕೊಂಡರೇನು?"

ಅತಿ ಭಯಂಕರವಾದ ಒಂದು ಗರ್ಜನೆ ಟಿ.ಬಿ.ಯ ಯಾವುದೋ ಒಂದು ರೂಮಿನಿಂದ ಕೇಳಿಸಿತು. ನಡುಗಿಸುವಂತಹ ಗರ್ಜನೆ. ಎಲ್ಲ ರೂಮುಗಳಲ್ಲಿದ್ದ ಜನರೂ ಎದ್ದು ದೀಪ ಹತ್ತಿಸಿದರು. ವಾಚ್‌ಮನ್‌ಗಳೆಲ್ಲ ಎದ್ದು ಓಡಾಡಿದರು.

ಕೇಶವ ಪಿಳ್ಳೆಯ ರೂಮಿನಿಂದ ಆ ಗರ್ಜನೆ ಕೇಳಿದ್ದು. ಕೇಶವ ಪಿಳ್ಳೆ ಹಾಗೆಯೇ ಒರಗಿದ್ದ. ತೆರೆದಿಟ್ಟಿದ್ದ ಕಿಟಕಿಯಲ್ಲಿ ಯಾರೋ ನಿಂತಿದ್ದಂತೆ ತೋರಿತು. 'ಯಾರು ಅದು' ಎಂದು ಆತ ಕೇಳುತ್ತಿದ್ದ. ಆ ಶಬ್ದ ಕೇಳಿಸಿದ್ದು!

ಸ್ವಪ್ನ ಕಂಡದ್ದಾಗಿರಬೇಕು ಎಂದು ಎಲ್ಲರೂ ಅಭಿಪ್ರಾಯಪಟ್ಟದ್ದು. ಆದರೆ ಮತ್ತೊಂದು ರೂಮಿನಲ್ಲುಳಿದುಕೊಂಡಿದ್ದವನೊಬ್ಬ ಹೇಳಿದ್ದು, ಯಾರೋ ಒಬ್ಬ ಗೋಡೆ ನೆಗೆದು ಓಡಿಹೋಗುತ್ತಿದ್ದುದನ್ನು ನೋಡಿದೆ ಎಂದು. ಶಬ್ದ ಕೇಳಿ ಮೊದಲು ಎದ್ದು ಹೊರಗೆ ಬಂದದ್ದು ಆ ಮನುಷ್ಯ. ಹಾಗಿದ್ದಲ್ಲಿ ಯಾರೋ ಕಿಟಕಿಯ ಹತ್ತಿರ

ಬಂದದ್ದು ಸರಿ ಎಂದು ಆ ಮನುಷ್ಯನ ಅಭಿಪ್ರಾಯ. ಯಾರೋ ಕಳ್ಳನಿರಬೇಕು ಎಂದು ಮತ್ತೊಬ್ಬರ ಅಭಿಪ್ರಾಯ.

ಅಂತು ಕೇಶವ ಪಿಳ್ಳೆ ಯಾವ ಗಾಬರಿಯನ್ನೂ ತೋರಿಸದೆ ರೂಮಿನ ಹೊರಗೆ ನಿಂತಿದ್ದ. ರೂಮಿನೊಳಕ್ಕೆ ಹಿಂದಿರುಗಿ ಬಂದಾಗ ಗೋಪಿ ಹೀಗೆ ಅಭಿಪ್ರಾಯಪಟ್ಟ:

"ಒಂದು ಕಾಲದಲ್ಲಿ ಕಾಂಗ್ರೆಸ್ಸಿನೊಳಗಿನ ಜನರಲ್ಲೇ ಒಂದು ಭಾಗದವರು ಇವನಿಗೆ ಹೊಡೆಯಬೇಕು ಅಂತ ತೀರ್ಮಾನಿಸಿದ್ದಲ್ಲವೇ? ಅದನ್ನು ಹೇಗೋ ಪ್ರೆಸಿಡೆಂಟ್ ತಿಳಿದು ತಡೆದದ್ದಲ್ಲವೇ?"

ಮ್ಯಾಥ್ಯು ಹೇಳಿದ: "ನಾನು ಒಬ್ಬಂಟಿಗನಾಗಿ ಆ ಕೆಲಸ ಮಾಡಿದರೇನು ಎಂದು ಆಲೋಚಿಸಿರೋದುಂಟು."

ಲೂಕೋಸ್ ಹೇಳಿದ:

"ಈಗಲೂ ಯಾರೋ ವ್ಯಪ್ಪಿಯಿಟ್ಟಿರಬೇಕು. ಓ! ಹಾಗೆ ಮಾಡಿದ್ದರೆ ನಾವು ಬದುಕುತ್ತಿದ್ದೆವು."

ನಾರಾಯಣನ್ ನಾಯರ್ ಕೇಳಿದ:

"ಹೇಗೆ? ಅವನು ಹೋದರೆ ಸರ್ಕಾರ ಇಲ್ಲವಾ?"

"ಓ! ಅದು ದೊಡ್ಡದಲ್ಲ. ಇವನದೇ ಇರೋದು! ಮತ್ತೆ ಯಾರು ಬಂದರೂ ಸುಳಿವು ಕೊಡದೆ ಬಾಳಬಹುದು."

# [21]

## ಪರೀಕ್ಷೆಗಳು

ಭಾರತದ ವಿಭಜನೆಗೆ ಸಂಬಂಧಿಸಿದಂತೆ ಬ್ರಿಟಿಷರ ಘೋಷಣೆಯೂ ಹೊರ ಬಂದಿತು. ನಂತರ ಬ್ರಿಟಿಷರು ಇಂಡಿಯವನ್ನು ಬಿಡುವ ತಾರೀಖನ್ನೂ ನಿಶ್ಚಯಿಸಿದ್ದರು. ಸ್ವತಂತ್ರ ತಿರುವಾಂಕೂರು ಎನ್ನುವ ಯಾತ್ರೆಯನ್ನು ಕೈಗೊಂಡ ಮೇಲೆ ಎಷ್ಟೋ ದಿನಗಳಿಂದ ಅಂತಹ ಹೆಚ್ಚಿನ ಕೆಲಸವೇನೂ ಇಲ್ಲದೇ ಇದ್ದ ಸ್ಟೇಟ್ ಕಾಂಗ್ರೆಸ್ಸಿಗೆ ಜೀವ ಬಂದಿತು. ಹಣವನ್ನು ಅಪಹರಿಸಿದ್ದು ಮುಂತಾದ ಅಪಖ್ಯಾತಿಗಳನ್ನು ಎಲ್ಲರೂ ಮರೆತರು. ದೇಶವಿಡೀ ಎಚ್ಚರಗೊಂಡಿತು. ಉಗ್ರವಾದ ಪ್ರತಿಭಟನೆಯ ಪ್ರಕಟಣೆಗಳನ್ನು ಆರಂಭಿಸಲಾಯಿತು. ದೊಡ್ಡ ಪ್ರತಿಭಟನಾ ಪ್ರದರ್ಶನಗಳೂ ಪ್ರಕಟಣೆಗಳೂ ಪಟ್ಟಣ. ತಾಲೂಕು-ಗ್ರಾಮಗಳಲ್ಲಿ ಕೂಡ ಸಂಘಟಿತವಾದುವು. ಪುನಃ ಡೆವಲಪ್‌ಮೆಂಟ್ ಸೆಕ್ರೆಟರಿ ಪೊಲಿಟಿಕಲ್ ಖಾತೆಯನ್ನು ನೋಡಿಕೊಳ್ಳಬೇಕಾಗಿ ಬಂದಿತು.

ಕೊಟ್ಟಾಯವಲ್ಲಿ ಪ್ರತಿಭಟನಾ ರ್‍ಯಾಲಿಯನ್ನು ನಡೆಸಿದ್ದು ನಾರಾಯಣನ್ ನಾಯರ್. ಹೈಡ್ರೋ ಇಲೆಕ್ಟ್ರಿಕಲ್ ಪ್ರಾಜೆಕ್ಟಿನಲ್ಲಿ ಕೆಲಸ ಮಾಡುತ್ತಿದ್ದವರಲ್ಲಿ ಕೆಲವರನ್ನು ಬಿಟ್ಟು ಹೆಚ್ಚು ಮಂದಿ ಕಲ್ಲು ಎಸೆದರು. ಪೋಲೀಸಿನವರ ಸಹಾಯದಿಂದ ಕಲ್ಲು ಎಸೆದಾಟ ನಡೆದದ್ದು. ಕಲ್ಲು ಎಸೆದ ಆಳುಗಳಲ್ಲಿ ಎಷ್ಟೋ ಜನರನ್ನು ಗುರುತಿಸಲಾಯಿತು. ಅವರೆಲ್ಲ ಲೂಕೋಸಿನ ಕೆಲಸಗಾರರು. ಅವರಲ್ಲಿ ಕೆಲವರು ನಾರಾಯಣನ್ ನಾಯರ್ ಗಮನಿಸುತ್ತಿದ್ದುದನ್ನು ನೋಡಿ ಅವಿತುಕೊಂಡರು. ಮ್ಯಾಥ್ಯೂವಿನ ನಾಲ್ಕು ಲಾರಿಗಳು ಸ್ವಲ್ಪ ದೂರದಲ್ಲಿ ನಿಂತಿದ್ದುವು. ಅವುಗಳಲ್ಲಿ ಕೆಲಸದವರನ್ನು ಕರೆದುಕೊಂಡು ಬಂದದ್ದು. ಗೋಪಿ ಕೊಲ್ಲದಲ್ಲಿ ಒಂದು ಸಭೆಯಲ್ಲಿ ಮಾತನಾಡಿದ. ಸ್ಥಳೀಯ ರೇಷನ್ ವ್ಯಾಪಾರಿಗಳು ಸಂಘಟಿಸಿದ ಒಂದು ಗುಂಪಿನ ಜನರೂ ಕಲ್ಲು ಎಸೆದು ಆ ಮೆರವಣಿಗೆಯನ್ನು ಚೆದುರಿಸಿದರು. ಗಲಭೆಯುಂಟಾಗುವ ಹಾಗೆ ತೋರಿತು. ಮೆರವಣಿಗೆಗೆ ಸಂಬಂಧಪಟ್ಟವರ ಉದ್ರಿಕ್ತತೆ ಹತೋಟಿ ತಪ್ಪಿದ ಸ್ಥಿತಿಯನ್ನು ತಲುಪಿತ್ತು. ದೂರದಲ್ಲಿ ಗೋಲಿಬಾರಿಗಾಗಿ ಪೋಲೀಸರು ಕೋವಿ ತೋರಿಸುತ್ತ ನಿಂತಿದ್ದರು. ಗೋಪಿಯ ಭಾಷಣ ನಡೆಯುತ್ತಿತ್ತು. ಸಭೆಯ ಜನರನ್ನು ಸಮಾಧಾನ ಪಡಿಸಲು ಗೋಪಿಗೆ ಸಾಧ್ಯವಾಯಿತು. ದೇಶವಿಡೀ ಎಲ್ಲ ಕಡೆಗಳಲ್ಲೂ ಗುಂಪನ್ನು ಚೆದುರಿಸುವುದು ಮತ್ತು ಕಲ್ಲು ಎಸೆದಾಟ ನಡೆಯಿತು. ಕೆಲವು ಕಡೆಗಳಲ್ಲಿ ಗಲಭೆಯೂ ನಡೆಯಿತು. ಲಾಠಿ ಚಾರ್ಜ್ ನಡೆಯಿತು. ಒಂದೆರಡು ಕೊನೆಯಲ್ಲಿ ಗೋಲಿಬಾರ್ ಸಹ ನಡೆಯಿತು. ಕೆಲವರು ಸತ್ತರು.

ಹಾಗೆ ನಾರಾಯಣನ್ ನಾಯರ್ ಮತ್ತು ಗೋಪಿ ಗೊಂದಲದ ಮಧ್ಯೆ ಸಿಕ್ಕಿಹಾಕಿ

ಕೊಂಡರು. ಅವರ ಜೀವನದಲ್ಲಿ ಉಂಟಾಗಿದ್ದ ಕಳಂಕ ಮಾಯವಾಯಿತು. ಇಂದು ಅವರು ಧೀರರಾದ ಸೈನಿಕರು.

ನಿರೀಕ್ಷಿಸಿದ್ದಂತೆಯೇ ಆಯಿತು. ಹೈಡ್ರೋ ಎಲಿಕ್ಟ್ರಿಕ್ ಪದ್ಧತಿಗಿದ್ದ ರೋಡ್ ನಿರ್ಮಾಣಮಾಡಿದ್ದು ಗೋಪಿ. ಮತ್ತು ಕೆಲವು ಜಮೀನುಗಳ ಮೇಲಧಿಕಾರವೂ ಆತನ ನೇತೃತ್ವದಲ್ಲಿದ್ದಿತು. ಸಾಂಕೇತಿಕವಾದ ನ್ಯೂನತೆಯನ್ನೂ ಕಂಟ್ರಾಕ್ಟ್ ವ್ಯವಸ್ಥೆಯನ್ನೂ ಉಲ್ಲಂಘಿಸಿದ್ದಕ್ಕಾಗಿ ಸರ್ಕಾರ ಗೋಪಿಗೆ ನೋಟೀಸು ಕಳಿಸಿತು. ಒಂದು ಹೋರಾಟಕ್ಕಿಳಿದಿದ್ದ ಗೋಪಿ ಅದನ್ನು ಗಮನಿಸಲಿಲ್ಲ. ಆ ಮುವತ್ತು ಸಾವಿರ ರೂಪಾಯಿ ಹೋದ ಹಾಗೆಯೇ ಎಂದು ತೀರ್ಮಾನಿಸಿದ್ದ. ನೌಕರರಿಗೆ ಮತ್ತಿತರರಿಗೆ ವಾಸಮಾಡುವ ಕಟ್ಟಡಗಳು, ಅಣೆಕಟ್ಟಿನ ಒಂದು ಭಾಗ ನಾರಾಯಣನ್ ನಾಯರ ಕಂಟ್ರಾಕ್ಟಿನಲ್ಲಾಗಿತ್ತು. ನಾರಾಯಣನ್ ನಾಯರ್‌ಗೂ ನೋಟೀಸ್ ಕಳಿಸಿದ್ದಾಗಿತ್ತು. ನಾರಾಯಣನ್ ನಾಯರ್ ಒಂದು ಸಿವಿಲ್ ಕೇಸಿಗೆ ಸಿದ್ಧನಾಗಿದ್ದ. ದೇಶವಿಡೀ ಶಾಂತವಾಗಿದ್ದ ಒಂದು ಸಂದರ್ಭದಲ್ಲಿ ಈ ಗಲಭೆ ನಡೆದದ್ದು. ಸ್ವತಂತ್ರ ತಿರುವಾಂಕೂರು ಎನ್ನುವ ಒಂದು ತತ್ವ ರೂಪುಗೊಳ್ಳುತ್ತದೆಂದು ಯಾರೂ ತಿಳಿದಿರಲಿಲ್ಲ. ಮಹಾರಾಜರ ಆಡಳಿತದ ಕೆಳಗೆ ಜವಾಬ್ದಾರಿ ಆಡಳಿತ ಬರಬೇಕೆನ್ನುವ ಘೋಷಣೆಯಲ್ಲಿ ಇಂತಹ ಒಂದು ಅಪಾಯ ಅಡಗಿದ್ದುದನ್ನು ಯಾರೂ ಕಂಡಿರಲಿಲ್ಲ. ಯಾವುದನ್ನೂ ನೆನಸಿಕೊಳ್ಳದೆ ಇದ್ದಾಗ ದೇಶ ಈ ಅಪಾಯವನ್ನು ಕಂಡದ್ದು.

ಕಾಂಗ್ರೆಸ್ಸಿನ ಚಳುವಳಿಯಲ್ಲಿ ಸಾವಿರಾರು ಸಮರ ವೀರರ ಮನೆಗಳಲ್ಲಿ ಕೆಲವು ಕಾಲದಿಂದ ಸಮಾಧಾನವಿತ್ತು. ಮಕ್ಕಳಿಗೆ ತಂದೆಯ, ಹೆಂಡತಿಗೆ ಗಂಡನ, ತಾಯಿಗೆ ಮಗನ ಸಾನ್ನಿಧ್ಯ ಸುಖವನ್ನು ಅನುಭವಿಸಲು ಸಾಧ್ಯವಾಗಿತ್ತು. ಎಷ್ಟೋ ಕಡೆಗಳಲ್ಲಿ ಆರ್ಥಿಕ ಸ್ಥಿತಿ ಕುಗ್ಗಿತ್ತು. ನಿತ್ಯಜೀವನವೂ ಕಷ್ಟವಾಗಿತ್ತು. ಆದರೆ ಖಾದಿವಸ್ತ್ರಕ್ಕೆ ಒಂದು ಬಗೆಯ ಗೌರವವುಂಟಾಗಿತ್ತು. ಈಗ ಪುನಃ ಅನೇಕ ಸಾವಿರ ಕುಟುಂಬಗಳು ಕಷ್ಟಕ್ಕೊಳಗಾದುವು. ಮನೆಯಿಂದ ಹೊರ ಬಂದ ಮಗ, ಸಹೋದರ, ಗಂಡ, ತಂದೆ ಯಾವಾಗ ಹಿಂತಿರುಗಿ ಬರುತ್ತಾರೆ ಎನ್ನುವುದು ಖಚಿತವಿಲ್ಲ. ಒಮ್ಮೆಯೂ ಬಾರದಿರುವ ಅವಸ್ಥೆಯೂ ಸಂಭವಿಸಬಹುದು. ಏಕೆಂದರೆ ಸರ್ಕಾರ ಗೋಲಿಬಾರ್ ಮಾಡಿಸಲು ಸಂದರ್ಭವನ್ನು ಕಾಯುತ್ತಿತ್ತು. ಲಾಠಿ ಚಾರ್ಜ್ ಬೇಡವೆಂದು ಹೇಳಿ ಗೋಲಿಬಾರನ್ನೇ ನಡೆಸಬೇಕು ಎಂದು ತೀರ್ಮಾನಿಸಿತ್ತು. ಇದೊಂದು ನಿರ್ಣಾಯಕ ಚಳವಳಿಯಾಗಿತ್ತು. ಗುಂಡು ಬೀಳದಂತೆ ತಪ್ಪಿಸಿಕೊಂಡರೂ ಜೈಲಿಗೆ ಹೋದರೆ ಹಿಂದಿರುಗಿ ಬರಲು ಸಾಧ್ಯವಿಲ್ಲ. ಸರ್ಕಾರದ ತೀರ್ಮಾನ ಹಾಗಿತ್ತು.

ಅನ್ನಮ್ಮನಿಗೆ ಇಂದು ಮನೆಯಿದೆ. ಒಳ್ಳೆಯ ಮನೆ. ಮನೆಗೆ ಬೇಕಾದ ಎಲ್ಲಾ ವಸ್ತುಗಳೂ ಇವೆ. ಹಣ ಇದೆ. ಕಾರು. ಬಂಧು—ಬಳಗ—ಎಲ್ಲವೂ ಇವೆ. ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಅವರಿಗೆ ಉತ್ಸಾಹವಿದೆ. ಭವಿಷ್ಯತ್ತನ್ನು ಕುರಿತು ಅನ್ನಮ್ಮನಿಗೂ

ಮ್ಯಾಥ್ಯುವಿಗೂ ಯೋಜನೆಯಿದೆ. ದಿನದಿಂದ ದಿನಕ್ಕೆ ಆ ಕುಟುಂಬ ಅಭಿವೃದ್ಧಿ ಪಡುತ್ತಿದೆ. ನಿರೀಕ್ಷೆಗಿಂತ ಹೆಚ್ಚಾದ ಲಾಭ, ಕಾಂಗ್ರೆಸ್ಸಿಗೆ ಮ್ಯಾಥ್ಯುವಿನಿಂದ ಲಭಿಸುತ್ತಿದೆ. ಆ ಯಜಮಾನಿಯನ್ನೂ ಮಕ್ಕಳನ್ನೂ ಕಂಡು ಸ್ವತಂತ್ರ ತಿರುವಾಂಕೂರು ನಡುಗುತ್ತಿತ್ತು. ಅಲ್ವಾಟಿ.ಬಿ.ಯಲ್ಲಿ ಮ್ಯಾಥ್ಯು ಪ್ರತಿಜ್ಞಾಪತ್ರಕ್ಕೆ ಸಹಿಹಾಕಿದ್ದು ಯಾಂತ್ರಿಕವಾಗಿ. ನಾರಾಯಣನ್ ನಾಯರೂ ಗೋಪಿಯೂ ಬೆಳಗಾಗುವಷ್ಟರಲ್ಲಿ ಹೋಗಿಬಿಟ್ಟಿದ್ದರು. ಅವರು ಹೋದದ್ದನ್ನು ತಿಳಿದು ಅವರನ್ನೇ ಹಿಂಬಾಲಿಸುವ ಆಶೆ ಮ್ಯಾಥ್ಯುವಿಗುಂಟಾಗಿತ್ತು. ಲೂಕೋಸ್ ಅವನನ್ನು ಹಿಡಿದು ನಿಲ್ಲಿಸಿದ. ಕುಟುಂಬ ಎನ್ನುವ ದುರ್ಬಲಸ್ಥಾನವನ್ನು ಲೂಕೋಸ್ ಸ್ಪರ್ಶ ಮಾಡಿಕೊಟ್ಟ. ಕಾಂಗ್ರೆಸ್ಸಿನ ಹೆಸರಿನಲ್ಲಿ ಹಣ ಸಂಪಾದಿಸಿದವರ. ಅದರಿಂದ ಉಪಜೀವನ ಮಾರ್ಗ ನಡೆಸಿದವರ ಪಟ್ಟಿಯನ್ನು ಅವನ ಮುಂದಿರಿಸಿದ. ಸ್ವಾತಂತ್ರ್ಯ ಎನ್ನುವ ಮಹತ್ತಾದ ಆದರ್ಶಕ್ಕಾಗಿ ಅವರು ಯೌವನವನ್ನು ಸಮರ್ಪಿಸಿದರು. ಕುಟುಂಬವನ್ನು ಕಷ್ಟಕ್ಕೊಳಗು ಮಾಡಿದರು. ಆ ಆದರ್ಶಕ್ಕೆ ಜಯವುಂಟಾಗುತ್ತದೆ. ದೇಶಸೇವೆ ಮಾಡುವುದೆಂದರೆ ಬಾವುಟ ಹಿಡಿದು ಘೋಷಣೆ ಮಾಡುವುದು ಮಾತ್ರವಲ್ಲ, ಧನ ಸಹಾಯ ದೊಡ್ಡದು. ಹಣ ಸಂಪಾದಿಸುವುದರೊಂದಿಗೆ ಕಾಂಗ್ರೆಸ್ಸಿನವನಾಗಬಹುದು. ಕುಟುಂಬದ ಬಗ್ಗೆ ಇರುವ ಕರ್ತವ್ಯವನ್ನು ಮರೆಯಲು ಸಾಧ್ಯವೆ? ಅದನ್ನು ನಿಷೇಧಿಸಲು ಸಾಧ್ಯವೆ? ಸ್ವತಂತ್ರ ತಿರುವಾಂಕೂರನ್ನು ಇಲ್ಲದಂತೆ ಮಾಡುವುದಕ್ಕಾದರೂ ಹಣ ಬೇಡವೆ? ಹೀಗೆ ಹೋಯಿತು ಆ ಆಲೋಚನೆ. ಇದುವರೆಗೆ ಸಂಪಾದಿಸಿದ್ದೆಲ್ಲ ಬೇಡವೆಂದು ಹೇಳಿದರೆ ಕುಟುಂಬದ ಸ್ಥಿತಿ ಏನಾಗಬಹುದು? ತೌರುಮನೆಯಲ್ಲಿ ಅನ್ನಮ್ಮ ಆಶ್ರಯ ಬೇಡಿದಳು. ಪುನಃ ಅನ್ನಮ್ಮ ಅಲ್ಲಿಗೆ ಹೋದಾಳೆ? ಮ್ಯಾಥ್ಯುವಿನ ಮಕ್ಕಳಿಗೆ ಆ ಮನೆ ತಮ್ಮ ಮನೆಯಾಗಿರುತ್ತದೆಯೇ? ಮಾತ್ರವಲ್ಲ ಆ ಮನೆಯೊಳಕ್ಕೆ ಅನ್ನಮ್ಮನ ನಾದಿನಿಯರು ಬಿಡುತ್ತಾರೆಯೆ? ಯಾವ ನಿಶ್ಚಯ? ಮ್ಯಾಥ್ಯುವಿನ ಆಲೋಚನೆ ಹಾಗೆಯೇ ಮುಕ್ತಾಯಗೊಂಡಿತು. ಇದಕ್ಕೆ ಪ್ರತಿಯಾಗಿ ಏನನ್ನೋ ಹೇಳಬೇಕು ಎನ್ನಿಸಿತ್ತು ಅವನಿಗೆ. ಆದರೆ ಏನು ಹೇಳಬೇಕು ಎನ್ನುವುದು ತಿಳಿಯದು. ಪ್ರತಿಯೊಂದು ವಿಷಯದಲ್ಲಿಯೂ ವಿರೋಧವಿದೆ. ಒಂದು ವಿಷಯದಲ್ಲಿ ಮಾತ್ರ ವಿರೋಧವಿಲ್ಲ. ಮಕ್ಕಳು ಮತ್ತು ಹೆಂಡತಿಗೆ ಸಂಬಂಧಪಟ್ಟ ವಿಷಯದಲ್ಲಿ ಮಾತ್ರ.

ಲೂಕೋಸ್ ಕೇಶವ ಪಿಳ್ಳೆಯ ಹತ್ತಿರಕ್ಕೆ ಮ್ಯಾಥ್ಯುವನ್ನು ಕರೆದುಕೊಂಡು ಹೋದದ್ದು. ಬುದ್ಧಿಶೂನ್ಯವಾಗಿ ನಿಂತಿದ್ದ ಮ್ಯಾಥ್ಯುವನ್ನು ಕೇಶವ ಪಿಳ್ಳೆ ನೋಡಿದ. ಮ್ಯಾಥ್ಯುವಿನ ವಿಷಮತೆ ತನಗೆ ಅರ್ಥವಾಗುತ್ತದೆ ಎಂದು ಕೇಶವ ಪಿಳ್ಳೆ ಹೇಳಿದ. ಮ್ಯಾಥ್ಯು ಸಾಮಾನ್ಯವಾದ ಆದರ್ಶಕ್ಕೆ ಭ್ರಾಂತನಾಗುವವನು. ಪ್ರಾಯೋಗಿಕ ಜೀವನಕ್ಕೆ ಪ್ರವೇಶಿಸಿದ್ದ ಅಷ್ಟೆ. ಈ ಪ್ರತಿಜ್ಞಾಪತ್ರಕ್ಕೆ ಸಹಿ ಹಾಕುವುದರ ಪ್ರಾಯೋಗಿಕ ಆದರ್ಶ ಏನೆಂದು ಕೇಶವ ಪಿಳ್ಳೆ ವಿವರಿಸಿದ. ಮ್ಯಾಥ್ಯುವಿಗೆ ಅದೊಂದೂ ಅರ್ಥವಾಗಲಿಲ್ಲ. ಅವನು ಸಹಿ ಹಾಕಿದ. ಆಗ ಅವನ ಕೈ ನಡುಗುತ್ತಿತ್ತು.

ಯಾವ ಚೈತನ್ಯವೂ ಇಲ್ಲದೆ ನಿರ್ವೀರ್ಯನಾಗಿ, ಮ್ಲಾನನಾಗಿ ಮ್ಯಾಥ್ಯು ಮನೆಗೆ ಹೋದದ್ದು. ಯಾವುದೋ ಒಂದು ದೊಡ್ಡ ಅಹಿತಕರ ಘಟನೆ ಸಂಭವಿಸಿದಂತೆ ತೋರುತ್ತಿತ್ತು. ಅನ್ನಮ್ಮನೂ ಮಕ್ಕಳೂ ಗಾಬರಿಯಾದರು. ಆ ಮನೆಗೆ ಇದ್ದಕ್ಕಿದ್ದ ಹಾಗೆ ಮಂಕು ಕವಿದು ಹೋಯಿತು. ಮ್ಯಾಥ್ಯು ಅದನ್ನೆಲ್ಲ ಕುರಿತು ಆಲೋಚಿಸುತ್ತಿದ್ದಂತೆ ತೋರಲಿಲ್ಲ. ಆದರೆ ಅವನು ಮತ್ತೇನನ್ನೋ ಕುರಿತು ಚಿಂತಿಸುತ್ತಿದ್ದಂತೆ ತೋರಿತು. ಅವನು ಮಾತನಾಡುತ್ತಿರಲಿಲ್ಲ. ಹೆಂಡತಿ ತುಂಬಾ ಒತ್ತಾಯ ಮಾಡಿದಾಗ 'ನನಗೆ ಹಿಂಸೆ ಮಾಡಬೇಡ' ಎನ್ನುತ್ತಿದ್ದ. ಮಕ್ಕಳನ್ನು ನೋಡುವಾಗ ಆತನ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತಿತ್ತು. ಎರಡು ಮೂರು ದಿನ ಕಳೆದಾಗ ದಿವಾನರಿಂದ ಸ್ವತಂತ್ರ ತಿರುವಾಂಕೂರು ಘೋಷಣೆ ಹೊರಟಿತು. ಅದನ್ನು ಅಂಗೀಕರಿಸಿದ ಅಸಂಖ್ಯಾತ ಜನರಲ್ಲಿ ಮ್ಯಾಥ್ಯುವಿನ ಹೆಸರೂ ಇತ್ತು.

ಅಂದು ಮ್ಯಾಥ್ಯು ಗಟ್ಟಿಯಾಗಿ ಅತ್ತುಬಿಟ್ಟ. ಇದ್ದಕ್ಕಿದ್ದ ಹಾಗೆ ಆತ ಪಡೆದ ಹುಲಿಯ ಹಾಗೆ ಅನ್ನಮ್ಮನ ಎದುರು ಹಾರಾಡಿದ. ಅವನ ಕೋಪವೆಲ್ಲ ಅನ್ನಮ್ಮನ ಮೇಲಾಗಿತ್ತು. ಅವಳೇ ಅವನನ್ನು ನಾಶಗೊಳಿಸಿದ್ದು. ಆ ಸ್ತ್ರೀ ಅವನ ಜೀವನದ ಒಂದು ಶಾಪ. ಅನ್ನಮ್ಮನನ್ನು ಕೈಹಿಡಿದ ದಿನ ಅವನ ಜೀವನದಲ್ಲಿ ಒಂದು ಶಾಪದ ದಿನವಾಗಿತ್ತು! ಆಕೆ ಸರ್ಪಸಂತತಿಯಿದ್ದಂತೆ! ಹಾಗೆ ಒಂದು ಹೆಣ್ಣಿಗೆ ಒಮ್ಮೆಯೂ ಸಹಿಸಲಿಕ್ಕಾಗದ್ದನ್ನೆಲ್ಲ ಮ್ಯಾಥ್ಯು ಹೇಳಿಬಿಟ್ಟ. ಅನ್ನಮ್ಮ ಅತ್ತಳು ಅಷ್ಟೆ.

ಏನೆಲ್ಲಾ ಪರೀಕ್ಷೆಯ ಹಂತಗಳು! ಎಷ್ಟೆಷ್ಟು ಸಲ ಆ ದಾಂಪತ್ಯ ಜೀವನದಲ್ಲಿ ಕಷ್ಟ ಸಹಿಸಿದ್ದಾಳೆ! ಇದಕ್ಕೂ ಹೆಚ್ಚು ಹೇಳಬೇಕಾದ ಸಂದರ್ಭಗಳಿದ್ದುವು. ಜೈಲು ವಾಸ ಮುಗಿಸಿ ಮ್ಯಾಥ್ಯೂ ಕರೆದಾಗ ಅನ್ನಮ್ಮ ಮುಖದ ಮೇಲೆ ಹೊಡೆದ ಹಾಗೆ ಸಾಧ್ಯವಿಲ್ಲ ಎಂದು ಹೇಳಿದ್ದಳು. ಅಂದು ಮ್ಯಾಥ್ಯುವಿಗೆ ಕೋಪ ಬರಲಿಲ್ಲ. ಸಾಧ್ಯವಿಲ್ಲ ಎಂದು ಹೇಳಿದುದರ ಹಿಂದಿದ್ದ ಮಾತುಗಳು ಅವನಿಗೆ ಗೊತ್ತಿತ್ತು. ಅದನ್ನು ಅನ್ನಮ್ಮ ಹೇಳಿದಾಗ ಸಹನೆಯಿಂದ ಕೇಳಿಸಿಕೊಂಡಿದ್ದ.

ಆ ಮನಃಕ್ಲೇಶ ಕಳೆದ ಮೇಲೆ ಮ್ಯಾಥ್ಯೂ ಅತ್ತ. ಗಟ್ಟಿಯಾಗಿ ಅತ್ತ. ಅನ್ನಮ್ಮ ಅವನಿಗೆ ಭರವಸೆ ನೀಡಿದಳು.

ಮದುವೆಯಾಗಿ ಬಹಳ ಕಾಲ ಕಳೆದಿರಲಿಲ್ಲ. ಒಂದು ಮಗು ಹುಟ್ಟಿತ್ತು. ವೈವಾಹಿಕ ಜೀವನದ ಮಾಧುರ್ಯವನ್ನು ಸರಿಯಾಗಿ ಅನುಭವಿಸುತ್ತಿದ್ದ ಕಾಲ. ತಿರುವನಂತಪುರದ ಸೈನ್ಸ್ ಕಾಲೇಜ್ ಕಾಂಪೌಂಡಿನಲ್ಲಿ ಪೋಲೀಸಿನವರು ವಿದ್ಯಾರ್ಥಿಗಳನ್ನು ಅಟ್ಟಿಸಿಕೊಂಡು ಬಂದು ಹೊಡೆದರು ಎನ್ನುವ ಸುದ್ದಿಯನ್ನು ಒಂದು ದಿನ ಪತ್ರಿಕೆಯಲ್ಲಿ ಓದಿದ. ತಿರುವಾಂಕೂರಿನಲ್ಲಿ ಸ್ಟೇಟ್ ಕಾಂಗ್ರೆಸ್ ಅಂದು ಇರಲಿಲ್ಲ. ಆ ದಿವಸವನ್ನು ಅನ್ನಮ್ಮ ಇಂದಿಗೂ ನೆನಸಿಕೊಳ್ಳುತ್ತಾಳೆ. ಮ್ಯಾಥ್ಯೂ ಕಾಫಿ ಕುಡಿಯುತ್ತಾ ಇದ್ದ. ಆಗ ಪತ್ರಿಕೆ ಬಂದದ್ದು. ಅಂದು ಮಾಡಿದ್ದ ತಿಂಡಿ—ಅಪ್ಪದ ಜೊತೆಗೆ ಮೊಟ್ಟೆ ಬೇಯಿಸಿಟ್ಟದ್ದು. ಒಂದು

ಅಪ್ಪವನ್ನು ತಿಂದು ಮುಗಿಸಿರಲಿಲ್ಲ. ಸುದ್ದಿ ಓದಿದ ಕೂಡಲೇ ಎದ್ದು ಕಾಫಿ ಕುಡಿದು, "ನಾನು ತಿರುವನಂತಪುರದ ವರೆಗೆ ಹೋಗಿ ಬರುತ್ತೇನೆ" ಎಂದುಹೇಳಿ ಹೊರಬಿದ್ದ. ಅಷ್ಟು ದೊಡ್ಡ ಕೆಲಸ ಏನೆಂಬುದು ಅನ್ನಮ್ಮನಿಗೆ ತೋರಿರಲಿಲ್ಲ. ಕಷ್ಟದ ಒಂದು ಕಾಲ ಸ್ಥಿತಿಯ ಆರಂಭ ಆದಾಗಿತ್ತು ಎಂದು ಆ ಯುವತಿ ತಿಳಿಯಲಿಲ್ಲ. ಆ ಓಟ ಜೈಲಿನೊಳಕ್ಕೆ ಎಂದೂ ತೋರಿರಲಿಲ್ಲ. ಅಲ್ಲಿಂದ ಮತ್ತೇನನ್ನೆಲ್ಲಾ ಆಕೆ ಅನುಭವಿಸಿದಳು! ಹೆಣ್ಣಿಗೆ ಯೋಗ್ಯವಲ್ಲದ ರೀತಿಯಲ್ಲಿ ಗಂಡನನ್ನು ಜೈಲಟ್ಟುವ ವರೆಗೂ ಆಕೆ ಮುಂದುವರಿದಳು. ಆತ್ಮೀಯರೆಲ್ಲ ಅವಳನ್ನು ದೂಷಿಸಿದರು.

ಇಂದೂ ಅದೇ ರೀತಿಯ ಒಂದು ಸಂದರ್ಭವೆಂದು ಅನ್ನಮ್ಮನಿಗೆ ಅನ್ನಿಸಿತು. ತುಂಬ ಗಂಭೀರವಾದ ಸಂದರ್ಭ. ಇಂದು ಹೋದರೆ ಬಹುಶಃ ಹಿಂದಿರುಗದೆಯೂ ಹೋಗಬಹುದು. ಆದರೆ ಅಂದಿನ ಯುವತಿಯಲ್ಲ ಅನ್ನಮ್ಮ. ಅನುಭವಿಸಿದವಳು. ಗಂಡನನ್ನು ಹಿಡಿದು ನಿಲ್ಲಿಸಬಲ್ಲಳು. ಇಂಥಾ ಸಂದರ್ಭವಲ್ಲೆಲ್ಲ ಹೇಗೆ ನಡೆದುಕೊಳ್ಳ ಬೇಕು ಎಂದು ಅವಳಿಗೆ ಗೊತ್ತಿದೆ. ಗಂಡನನ್ನು ಒಂದು ಸ್ಥಿತಿಗೆ ತರಲು ಸಹಾಯ ಮಾಡು ವುದಕ್ಕೆ ಮಕ್ಕಳಿದ್ದಾರೆ. ಮ್ಯಾಥ್ಯುವೂ ಬವಲಾಯಿಸಿಹೋದ. ಬಾಯಿಯಲ್ಲಿ ಅರೆ ಜಗಿದಿದ್ದ ಅಪ್ಪವನ್ನಿಟ್ಟುಕೊಂಡು ಇಂದು ಆತ ಓಡಿ ಹೊರಗಿಳಿಯಲಾರ. ಅವನನ್ನು ಸಾವಿರ ಸಂಕೋಲೆಗಳು ಬಂಧಿಸಿವೆ.

ಹಾಗೆ ಅನ್ನಮ್ಮ ಮ್ಯಾಥ್ಯುವನ್ನು ಹಿಡಿದು ನಿಲ್ಲಿಸಿದ್ದಳು. ಒಂದೊಂದು ದಿನ ಕಳೆದಂತೆ ಆ ಮನೆಯ ಯಜಮಾನಿಗೆ ಆ ವಿಷಯದ ಬಗ್ಗೆ ಇದ್ದ ಕ್ಲೇಶ ಕಡಿಮೆಯಾಗು ತ್ತಿದೆ. ಸ್ವತಂತ್ರ ತಿರುವಾಂಕೂರಿನ ಹೋರಾಟದಲ್ಲಿ ಸಕ್ರಿಯವಾಗಿ ಸೇರದೆ ಇರುವ ಉಪಾಯಗಳನ್ನೂ ಕ್ರಮೇಣ ಹೇಳತೊಡಗಿದ, ಮೊದಲು ಲೂಕೋಸ್ ಹೇಳಿದ್ದನ್ನೆಲ್ಲಾ. ಆದರೆ ಮ್ಯಾಥ್ಯು ಹೊರಗೆ ಬರುತ್ತಿಲ್ಲ. ಯಾರೂ ಹಾಗೆ ಮ್ಯಾಥ್ಯುವನ್ನು ಎದುರೆದುರು ಟೀಕಿಸುತ್ತಲೂ ಇರಲಿಲ್ಲ. ಮ್ಯಾಥ್ಯುವಿನ ಹಾಗಿರುವ ಜನರನ್ನು ಕುರಿತು ಸಾಮಾನ್ಯವಾಗಿ ಕೆಲವರು ಪ್ಲಾಟ್‌ಫಾರಂಗಳಲ್ಲಿ ಅಲ್ಲಿ ಇಲ್ಲಿ ಕಾಂಗ್ರೆಸ್ಸಿನವರು ಪ್ರಸ್ತಾಪಿಸಿದ್ದರು ಅಷ್ಟೆ.

ನಾರಾಯಣನ್ ನಾಯರ್ ಮತ್ತು ಗೋಪಿಯ ಹೆಸರಿಗೆ ಸರ್ಕಾರ ನೋಟೀಸು ಕಳುಹಿಸಿದ ವಿಚಾರ ತಿಳಿಯಿತು. ಲೂಕೋಸ್ ಬಂದು ಮ್ಯಾಥ್ಯುವನ್ನು ಕಂಡ. ಅದು ಒಂದು ಬಹು ಮುಖ್ಯವಾದ ವಿಷಯವಾಗಿತ್ತು.

ಪುನಃ ಅವರಿಬ್ಬರಲ್ಲಿರುವ ಲೆಕ್ಕಪತ್ರವನ್ನು ನೋಡಿ ಮುಗಿಸಿದ್ದರೂ ಆ ಸ್ನೇಹಿತ ರನ್ನು ಕೈಬಿಡಲು ಮ್ಯಾಥ್ಯುವಿಗೂ ಲೂಕೋಸ್‌ಗೂ ಮನಸ್ಸು ಬರುತ್ತಿಲ್ಲ.

ಮ್ಯಾಥ್ಯುವಿಗೆ ಒಂದು ಹೊಸ ವಿಷಯ ದೊರೆಯಿತು. ಅದೊಂದು ದೊಡ್ಡ ಭರವಸೆ ನೀಡಿತು. ಆತನಿಗೆ ಪ್ರಿಯವಾದಂತಹ ಆದರ್ಶಕ್ಕೋಸ್ಕರ ಸರ್ವಸ್ವವನ್ನೂ ತ್ಯಜಿಸಲು ಆ ಇಬ್ಬರು ಸ್ನೇಹಿತರಿಗೆ ಸಹಾಯ ಮಾಡುವುದು. ಅದೊಂದು ಸೇವೆಯೆಂದೇ ಅವನ ಬುದ್ಧಿ ಅವನಿಗೆ ಉಪದೇಶಿಸಿತು. ಮ್ಯಾಥ್ಯು ಆವೇಶದಿಂದ ಹೇಳಿದ:

"ಏನಾಗಬೇಕು ಲೂಕೋಸ್? ಏನು ಬೇಕಾದರೂ ನಾನು ಮಾಡುತ್ತೇನೆ. ಹೇಳು ಲೂಕೋಸ್. ನನ್ನ ಸರ್ವಸ್ವವೇ ಕೈಬಿಟ್ಟು ಹೋಗೋದಾದರೂ ಇರೋದನ್ನೆಲ್ಲಾ ಅವರಿಗೆ ಕೊಡಬೇಕಾಗಿ ಬಂದರೂ ನಾನು ತಯಾರು ! ಹೇಳು ಲೂಕೋಸ್. ನನಗೇನೂ ತೋರುವುದಿಲ್ಲ. ನನ್ನ ಮನಸ್ಸಿಗೊಂದು ಸಮಾಧಾನ ಉಂಟಾಗಲಿ."

ಲೂಕೋಸ್ ಹಸನ್ಮುಖದಿಂದ ಹೇಳಿದ: "ಮತ್ತ್ಯಾಕೆ ನಾನು ಬಂದದ್ದು? ನನ್ನ ಆತ್ಮಕ್ಕೂ ಒಂದು ಸಮಾಧಾನಕ್ಕಾಗಿ. ನಾವಿಬ್ಬರೂ ಮಾಡಿದ್ದು ಸರಿ ಅಂತೆ ನನಗೆ ಅನ್ನಿಸಿಲ್ಲ. ನಾವು ನಮ್ಮ ಆತ್ಮದ ಕರೆಯನ್ನು ಗಮನಿಸಲಿಲ್ಲ. ಅವರು ಅದರ ಹಿಂದೆ ಹೋದರು. ಅವರ ಉದ್ದೇಶವನ್ನು ನಾವು ಕೈಗೊಳ್ಳಬೇಕು. ಅದು ನಮ್ಮ ಧರ್ಮ."

ಮ್ಯಾಥ್ಯು ಕೇಳಿದ: "ಅದಕ್ಕೆ ದಾರಿ ಯಾವುದು, ಲೂಕೋಸ್? ಏನಾದರೂ ಆಲೋಚನೆ ಮಾಡಿದ್ದುಂಟಾ?"

ಲೂಕೋಸ್ ಇದನ್ನೆಲ್ಲಾ ಸ್ವಲ್ಪ ಆಲೋಚಿಸಿದ್ದ. ನೋಟೀಸುಗಳಿಗೆ ಅನುಸರಿಸಿದಂತಹ ಕಾಂಟ್ರ್ಯಾಕ್ಟ್ ಕೆಲಸಗಳನ್ನು ನಾರಾಯಣ ನಾಯರೂ ಗೋಪಿಯೂ ಅವರವರ ಹೆಸರಿನಲ್ಲಿ ತೆಗೆದುಕೊಂಡಿದ್ದದ್ದು.' ಮ್ಯಾಥ್ಯು ಮತ್ತು ಲೂಕೋಸ್‌ನ ಹೆಸರಿನಲ್ಲಿ ತೆಗೆದುಕೊಂಡು ನಾರಾಯಣನ್ ನಾಯರೂ ಗೋಪಿಯೂ ಮಾಡಿಸಿದ ಕೆಲಸಗಳಿವೆ. ಆಗ ಮ್ಯಾಥ್ಯು ಹೇಳಿದ: "ಅದನ್ನು ನಾವು ಪ್ರಾರಂಭಿಸಿ ನಡೆಸಬೇಕು. ನಂತರ ಅವರಿಗೆ ಲಾಭವನ್ನೆಲ್ಲ ಕೊಡಬೇಕು."

ಅದೇನೂ ಕಷ್ಟದ ಕೆಲಸವಲ್ಲ ಎಂದು ಲೂಕೋಸ್ ಹೇಳಿದ.

"ಅಂತೂ ಅದು ಭಾರೀ ಮೊತ್ತವೇನಲ್ಲ. ತುಂಬಾ ಕಡಿಮೆ."

ಮ್ಯಾಥ್ಯು ಕೇಳಿದ:

"ಮತ್ತೆ ನಾವೇನು ಮಾಡಬೇಕು?"

ಲೂಕೋಸ್ ಅದಕ್ಕಿರುವ ದಾರಿಯನ್ನು ಕಂಡುಹಿಡಿದಿದ್ದಾನೆ. ನೋಟೀಸಿಗೆ ಅವಕಾಶವಾದ ಕೆಲಸಗಳನ್ನು ಸರಿಯಾಗಿ ಮಾಡಿ ಮುಗಿಸಲಾಗಿದೆ. ಸರ್ಕಾರದ ಸೇದಿನಿಂದಾಗಿ ಹೀಗೆ ನೋಟೀಸ್ ಬಂದದ್ದು. ಈ ಸ್ಥಿತಿಯಲ್ಲಿ ಮ್ಯಾಥ್ಯು ಲೂಕೋಸ್ ಇಬ್ಬರೂ ಮಾಡಿಸಿದ ಕೆಲಸವೆಲ್ಲಾ ತಿಳಿದುಹೋಗುತ್ತವೆ. ಹಣವೆಲ್ಲವನ್ನೂ ಸಂಗ್ರಹಿಸುವುದು. ನಾರಾಯಣನ್ ನಾಯರೂ ಗೋಪಿಯೂ ವ್ಯಯಿಸಿದ ಹಣವನ್ನೂ ಲಾಭವನ್ನೂ ಅವರಿಗೆ ಕೊಡುವುದು. ಇದು ಲೂಕೋಸ್ ಕಂಡುಹಿಡಿದ ರಕ್ಷಣಾ ಮಾರ್ಗ. ಮ್ಯಾಥ್ಯುವಿಗೆ ಅದು ಚೆನ್ನಾಗಿ ಹಿಡಿಸಿತು. ಅವನು ಉತ್ಸಾಹದಿಂದ ಕೇಳಿದ: "ಹಾಗಾದರೆ ಏನಾಗಬಹುದು?"

"ಯಾವ ತೊಂದರೆಯೂ ಇಲ್ಲ. ಕೈತುಂಬ ಹಣ ಒಬ್ಬೊಬ್ಬರಿಗೂ ಸಿಗುತ್ತೆ. ಅವರು ಸುಖವಾಗಿ ಜೀವಿಸಬಹುದು." ಮ್ಯಾಥ್ಯು ಒಪ್ಪಿದ. ಹಾಗಿದ್ದರೆ ಅದೇ ರೀತಿ

ಮುಂದುವರಿಸಿದರಾಯಿತು. ಹಣ ಕೊಡುವುದಕ್ಕೆ ಮ್ಯಾಥ್ಯು ಸಿದ್ಧನಾಗಿದ್ದ. ಲೂಕೋಸ್ ಉಪದೇಶಿಸಿದ:

"ಹಾಗೆ ಕೇಳಿದ್ದು ಅರ್ಧ. ಕೇಳದಿದ್ದದ್ದು ಅರ್ಧ ತೆಗೆದು ಎಸೆದು ಬಿಡಬೇಡ. ಅದರಿಂದ ಉಂಟಾಗುವ ತೊಂದರೆಗಳನ್ನೂ ಆಲೋಚನೆ ಮಾಡು. ಇದೇನಂಥ ಸಣ್ಣ ಕೆಲಸವೆ !"

ಮ್ಯಾಥ್ಯು ಕೇಳಿಸಿಕೊಂಡಿದ್ದ. ಲೂಕೋಸ್ ಮುಂದುವರಿಸಿದ:

"ನಾರಾಯಣನ್ ನಾಯರೂ ಗೋಪಿಯೂ ಮಾಡಿದ ಕೆಲಸವನ್ನು ಕೈಬಿಟ್ಟು ನಾವು ಮಾಡಿದ್ದು ಎಂದು ರಿಕಾರ್ಡೂ ಲೆಕ್ಕಪತ್ರಗಳೂ ಹೋಗಬೇಕು. ನಿಜವಾಗಿಯೂ ಅವರು ಮಾಡಿದ್ದು ನಾವು ಪ್ರಾರಂಭಿಸಿದ್ದು. ಆಗ ಇಂಜಿನೀಯರರ ಎಲ್ಲ ಸಹಾಯಗಳೂ ಬೇಕಾಗುತ್ತವೆ. ಆ ಮೇಲೆ ಸರ್ಕಾರವೂ ಕಣ್ಣು ಮುಚ್ಚಿಕೊಳ್ಳಬೇಕು. ಅದರ ತೊಂದರೆ ಯನ್ನೊಮ್ಮೆ ಆಲೋಚಿಸಿ ನೋಡು."

ಮ್ಯಾಥ್ಯುವಿನ ಆವೇಶ ಸ್ವಲ್ಪ ಸ್ವಲ್ಪವಾಗಿ ಇಳಿಯಿತು. ಬುದ್ಧಿ ಚುರುಕಾಗತೊಡ ಗಿತು. ಅವನು ಹೇಳಿದ ಮೇಸ್ತ್ರಿ ಮುಂತಾದವರಿಗೆ ಕೈತುಂಬ ಕೊಡಬೇಕು.

"ಹೌದು. ಅದು ಸಾಧ್ಯ ಅಂತ ಇಟ್ಟುಕೋ. ಕಾಡಿನಲ್ಲಿ ನಡೆಯೋ ವಿಷಯ ಅಲ್ಲವಾ? ಆದರೆ ಸರ್ಕಾರ ಎಲ್ಲರನ್ನೂ ಕಾಪಾಡಬೇಕಾಗುತ್ತದೆ. ಅಲ್ಲವಾ?"

ಮ್ಯಾಥ್ಯು ಹೇಳಿದ: "ನಮ್ಮ ಉದ್ದೇಶ ತಿಳಿದರೆ ಕೇಶವ ಪಿಳ್ಳೆ ನಮ್ಮನ್ನೂ ನಾಶ ಮಾಡುತ್ತಾನೆ. ಈಗ ನಾಯರ್ ಮತ್ತು ಗೋಪಿ ಹತ್ರ ಇರುವಷ್ಟು ಸಿಟ್ಟು ಬೇರೆ ಯಾರ ಹತ್ರವೂ ಇಲ್ಲ."

ಲೂಕೋಸ್ ಆ ವಿಷಯವನ್ನು ಎದುರಿಸಬೇಕಾದ ಮಾರ್ಗವನ್ನು ಕಂಡುಹಿಡಿದಿ ದ್ದಾನೆ. ಮ್ಯಾಥ್ಯುವಿಗೂ ಲೂಕೋಸ್‌ಗೂ ಲಾಭವುಂಟಾಗುವ ದಾರಿ ಎಂದು ಸಮಿೂಪಿಸ ಬೇಕು. ನಾಯರನ್ನೂ ಗೋಪಿಯನ್ನೂ ನಾಶ ಮಾಡುವುದರಂತೆಯೂ ಮ್ಯಾಥ್ಯುವನ್ನೂ ಲೂಕೋಸನ್ನೂ ಒಳ್ಳೆಯದು ಮಾಡುವ ಆಶೆಯಿದೆ. ಜೊತೆಗೆ ಸ್ವಲ್ಪ ಹಣ ಕೊಡಲೂ ಬೇಕು. ಅಲ್ಲೇ ಎಲ್ಲ ತೊಂದರೆಗಳೂ ಇರೋದು.

"ಪಿ. ಡಬ್ಲ್ಯು. ಡಿ. ಸೆಕ್ರೆಟರಿ ಫಿಲಿಪ್ಸ್. ಅವನೂ ಕೇಶವ ಪಿಳ್ಳೆಯೂ ಶತ್ರುಗಳು. ಕೇಶವ ಪಿಳ್ಳೆಯನ್ನು ಹೇಗೆ ಕೆಳಗಿಳಿಸಬೇಕು, ತೊಂದರೆಗೊಳಗು ಮಾಡಬೇಕು ಎಂದು ಆಲೋಚಿಸುತ್ತಿದ್ದಾನೆ. ಆ ಮನುಷ್ಯ ಒಳಗೊಳಗೆ ಒಬ್ಬ ಕಾಂಗ್ರೆಸ್ಸಿನವನು ಕೂಡ. ಈ ಕೆಲಸದಿಂದ ಗೋಪಿಗೂ ನಾಯರ್‌ಗೂ ಗುಣವಾಗುತ್ತದೆ ಎಂದು ಹೇಳಿದರೆ ಸಹಾಯ ಮಾಡ್ತಾನೆ. ಆದರೆ ವಂಚಕರು ಎನ್ನುವ ಹೆಸರಿನಲ್ಲಿ ನಮ್ಮ ಮೇಲೆ ವಿಪರೀತ ಸಿಟ್ಟಿದೆ."

ಆ ಸ್ಥಿತಿ ಮ್ಯಾಥ್ಯುವಿಗೂ ಗೊತ್ತಿತ್ತು. ಒಟ್ಟಾರೆ ತೊಂದರೆಯ ಪರಿಸ್ಥಿತಿ. ಯಾವು ದಾದರೂ ಮಾರ್ಗದಲ್ಲಿ ಪ್ರವೇಶಿಸಿ ವಿಷಯಗಳನ್ನು ಸರಿಪಡಿಸಬೇಕಾದದ್ದು ಮ್ಯಾಥ್ಯು ವಿಗೆ ಅತ್ಯಾವಶ್ಯಕವಾಗಿತ್ತು. ಅವನಿಗೆ ಈ ಕಾಲದಲ್ಲಿ ಹೊರಗೆ ಹೋಗಲು ಸಾಧ್ಯವಿಲ್ಲ.

ಹೊರಗೆ ಹೋದರೂ ಯಾವ ಕಾರ್ಯವನ್ನೂ ಸಾಧಿಸಿ ಬರುವಂತಹ ಆತ್ಮವಿಶ್ವಾಸವೂ ಶಕ್ತಿಯೂ ತನಗಿಲ್ಲ. ಎಲ್ಲವನ್ನೂ ಆತ ಲೂಕೋಸ್‌ಗೆ ವಹಿಸಿದ. ನಾಯರ್ ಮತ್ತು ಗೋಪಿಯ ಕುಟುಂಬಗಳನ್ನು ತೊಂದರೆಪಡಿಸದಂತೆ ಕಾಳಿ ನೋಡಲು ಅವರು ಆಲೋಚಿಸಿದರು. ನಿಜವಾಗಿಯೂ ಮ್ಯಾಥ್ಯುವಿಗೆ ಒಂದು ದೊಡ್ಡ ನಂಬಿಕೆ ಮೂಡಿತು.

ಆ ಕಾಲದಲ್ಲಿ ಅಷ್ಟಾದರೂ ಮಾಡುವುದಕ್ಕೆ ಸಾಧ್ಯವಿದೆಯಲ್ಲ ! ರಾಜ್ಯಕ್ಕೆ ಬೇಕಾಗಿ ಸಾಯಲು ಸಿದ್ಧವಾಗಿರುವ ಇಬ್ಬರಿಗೂ ಏನನ್ನು ಬೇಕಾದರೂ ಮಾಡಲು ಸಾಧ್ಯವಾಗಿತ್ತು.

ಸ್ವತಂತ್ರ ತಿರುವಾಂಕೂರು ಚಳವಳಿಯೂ ಅದಕ್ಕೆದುರಾಗಿರುವ ಹೋರಾಟವೂ ಒಂದಕ್ಕೊಂದು ಶಕ್ತಿ ಕೂಡಿಬರುತ್ತಿವೆ. ಆ ಅವಸ್ಥೆಯಲ್ಲಿ ಸರ್ಕಾರದ ಯೋಜನೆಯ ಕಾರ್ಯಕ್ರಮಗಳಿಗೆ ತಾತ್ಕಾಲಿಕವಾಗಿ ಒಂದು ಮಂದಗತಿ ಪ್ರಾಪ್ತವಾಯಿತು. ಆದರೆ ಕೂಡಲೇ ಕಾರ್ಯಾಚರಣೆಗಳು ಪ್ರಾರಂಭವಾದುವು.

ಲೂಕೋಸ್ ಗೋಪಿಗೂ ನಾರಾಯಣನ್ ನಾಯರ್‌ಗೂ ಅನುಕೂಲ ಮಾಡಿ ಕೊಡುವ ಪ್ರಯತ್ನದಲ್ಲಿದ್ದ. ಆ ಸಮಯದಲ್ಲಿ ಗೋಪಿಯೂ ನಾರಾಯಣನ್ ನಾಯರೂ ಜೈಲಿಗೆ ಸೇರಿ ಆಗಿತ್ತು. ಮ್ಯಾಥ್ಯು ಮಲೆಗೆ ಹೋಗಬೇಕಾಗಿ ಬಂದಿತು. ಅಲ್ಲಿಗೆ ಕ್ರಾಂತಿಯ ದೊಡ್ಡ ಅಲೆಗಳು ಬಂದು ಅಪ್ಪಳಿಸುತ್ತಿರಲಿಲ್ಲ. ಮಾಡಲು ಕೆಲಸ ವಿತ್ತು. ಬಾಹ್ಯಲೋಕದೊಂದಿಗೆ ದೊಡ್ಡ ಸಂಪರ್ಕವಿಲ್ಲ—ಆ ದೃಷ್ಟಿಯಲ್ಲಿ ಮ್ಯಾಥ್ಯುವಿಗೆ ಭರವಸೆಯುಂಟಾಯಿತು. ಅನ್ನಮ್ಮನೂ ಮಕ್ಕಳೂ ಜೊತೆಯಲ್ಲಿದ್ದಾರೆ.

ಹೆಚ್ಚು ತಡಮಾಡದೆ ಲೂಕೋಸ್ ಹಿಂದಿರುಗಿ ಬಂದ. ಹೆಚ್ಚು ಕಡಿಮೆ ಕಾರ್ಯ ಸಾಧನೆ ಮಾಡಿದ ಸಂತೋಷದಲ್ಲಿಯೇ ಹಿಂದಿರುಗಿ ಬಂದದ್ದು. ಒಂದು ದೊಡ್ಡ ಸುದ್ದಿಯನ್ನು ಅವನು ಹೇಳುವುದಿತ್ತು. "ಈ ಸ್ವತಂತ್ರ ತಿರುವಾಂಕೂರಿನ ಉದಯವಾಗೋದಿಲ್ಲ" ಎನ್ನುವುದೇ ಅದು.

ಮ್ಯಾಥ್ಯುವಿಗೆ ಅದು ಕರ್ಣಪೀಯೂಷವಾಗಿತ್ತು. ಅದು ಏಕೆ? ಅದನ್ನು ಹೇಗೆ ತಿಳಿದ? ಎಂಬುದನ್ನೆಲ್ಲ ಅವನು ತಿಳಿಯಬೇಕಾಗಿತ್ತು. ಲೂಕೋಸ್ ವಿವರಿಸಿದ:

"ದೇಶದಲ್ಲಿ ಯಾರಿಗೂ ಅದು ಬೇಡ. ಎಸ್. ಎಸ್. ಎಸ್. ಮತ್ತು ಎಸ್. ಎನ್. ಡಿ. ಪಿ. ಎಲ್ಲವೂ ಹಿಂದೆ ದೋಣಿಯ ಎರಡು ಪಕ್ಕದಲ್ಲೂ ತಳ್ಳಿ ರಾಜಕೀಯ ಇಲ್ಲವೆಂದು ಸರ್ಕಾರದ ಜೊತೆಗೂಡಿರಲಿಲ್ಲವೆ? ಅವರೆಲ್ಲ ಈಗ ಎದುರಾಗಿದ್ದಾರೆ. ಕೆಲವು ರೇಷನ್ ದಾರರು. ನಮ್ಮ ಹಾಗೆ ಕೆಲವು ಕಂಟ್ರಾಕ್ಟರರು. "ಸ್ವತಂತ್ರ ತಿರುವಾಂಕೂರ್ ಕೀ ಜೈ" ಎಂದು ಕೂಲಿಗಾಗಿ ನಡೆಯುತ್ತಿದ್ದಾರೆ. ಅವರ ಮನಸ್ಸಿನಲ್ಲಿಯೂ ಇರುವುದು ಬೇರೆ. ಎಲ್ಲರೂ ನಮ್ಮ ಹಾಗೆಯೇ. ಆದರೆ ನಮಗೆ ದಾರಿಯಲ್ಲಿ ನಡೆಯುವುದಕ್ಕೆ ಸಾಧ್ಯವಿಲ್ಲ. ನಾನು ಹಗಲು ಹೊತ್ತು ಹೊರಗೆ ಬರ್ತ್ತಿರಲಿಲ್ಲ. ನಾಚಿಕೆಗೇಡು ಮಾತ್ರವಲ್ಲ, ಕೆಲವು ಸಲ ಹುಚ್ಚು ನಾಯಿಯನ್ನು ಹೊಡೆಯುವ ಹಾಗೆ ಅಟ್ಟಿಸಿಕೊಂಡು ಬಂದು ಹೊಡೆಯುತ್ತಾರೆ."

ಲೂಕೋಸ್ ತನಗಾದ ಕೆಲವು ಅನುಭವಗಳನ್ನು ವಿವರಿಸಿದ. ಒಂದು ಕಡೆ ಹುಡು ಗರು ಕೂಗು ಹಾಕಿ ಓಡಿಸಿದರು. ಯಾವ ರೀತಿಯಲ್ಲಿ ಅವನನ್ನು ಪತ್ತೆಹಚ್ಚಿದರು ಎಂದು ತಿಳಿಯದು. ಮತ್ತೊಂದು ಕಡೆ ಅವನ ಹಿಂದೆ ನಡೆದು ಚಪ್ಪಾಳೆ ತಟ್ಟಿದರು. ಒಂದು ಹೋಟೆಲಿಗೆ ಹೋದಾಗ ಊಟ ಇಲ್ಲ ಅಂತ ಹೇಳಿ ಕಳಿಸಿದರು. ಅಲ್ಲಿ ತನ್ನ ಜೊತೆ ಬಂದವರಿಗೆ ಊಟ ಹಾಕಿದರು.

ಅವರ ಜೊತೆಗೆ ಲೂಕೋಸ್‌ಗೆ ಒಂದು ರಹಸ್ಯ ಹೇಳುವುದಿತ್ತು.

"ಕಾಂಗ್ರೆಸ್‌ನಲ್ಲಿ ಮುಂದಾಳುಗಳಾಗಿರುವವರಿಗೆ ಯಾರಿಗೂ ನಮ್ಮ ಹತ್ತಿರ ಅಷ್ಟೊಂದು ವಿರೋಧವಿಲ್ಲ. ಈ ಜನರೇ ನಮ್ಮನ್ನು ಬಿಡದೇ ಇರೋದು. ಅವರಿ ಗೇನಾದರೂ ಹೇಳಿದರೆ ಅದನ್ನು ಅನುಸರಿಸುತ್ತಾರೆ. ಮುಂದಾಳುಗಳು ಯಾಗಲ್ಲ. ಅವರೂ ಅದರಿಂದ ಬಿಡಿಸಿಕೊಳ್ಳಲಾರದೆ ಒಂದು ರೀತಿ ಇದ್ದಾರೆ. ಎಲ್ಲರಿಗೂ ಒಂದೊಂದು ಉದ್ಯೋಗ ಇದೆ. ಅದು ಯಾವನ ಹೆಸರಿನಲ್ಲಾದರೂ ಆಗಿರಬೇಕು ಅಷ್ಟೆ."

ಮ್ಯಾಥ್ಯುವಿಗೆ ಸರಿಯಾಗಿ ತಿಳಿದುಕೊಳ್ಳಬೇಕಾದ ವಿಷಯವಾಗಿತ್ತು ಅದು. ಒಪ್ಪೊಬ್ಬರನ್ನೂ ಕುರಿತು ಕುತೂಹಲದಿಂದ ಕೇಳಿದ. ಎಲ್ಲವನ್ನೂ ಲೂಕೋಸ್ ವಿವರ ವಾಗಿ ವಿಶದವಾಗಿ ಹೇಳಿದ. ಮ್ಯಾಥ್ಯುವಿಗೆ ನಿಜವಾಗಿಯೂ ಒಂದು ದೊಡ್ಡ ಭಾರವನ್ನು ಕೆಳಗಿಳಿಸಿದಂತಾಯಿತು. ಅವನ ಮನಸ್ಸು ಹಗುರವಾಯಿತು. ಆ ದಿನ ಆ ಹೊತ್ತಿನಲ್ಲಿ ಮ್ಯಾಥ್ಯು ಚೆನ್ನಾಗಿ ಒಂದು ಸಲ ನಗಾಡಿದ್ದ. ಮ್ಯಾಥ್ಯು ಕೇಳಿದ:

"ಇರಲಿ ಲೂಕೋಸ್. ನೀನು ಹೇಗೆ ಕಾರ್ಯ ಸಾಧಿಸಿದೆ?"

ಅದೊಂದು ದೊಡ್ಡ ಕಥೆಯಾಗಿತ್ತು. ಲೂಕೋಸ್ ಕೇಶವ ಪಿಳ್ಳೆಯನ್ನು ಕಂಡ. ಕೆಲವೇ ದಿವಸಗಳಲ್ಲಿ ಆ ಮನುಷ್ಯನಲ್ಲಿ ಎಷ್ಟೊಂದು ಬದಲಾವಣೆ ಆಗಿ ಹೋಗಿದೆ! ಆ ಬದಲಾವಣೆಯನ್ನು ಮಾತಿನಿಂದ ವಿವರಿಸಲು ಸಾಧ್ಯವಿಲ್ಲವೆಂದು ಲೂಕೋಸ್ ಹೇಳು ತ್ತಿದ್ದದ್ದು. ಕಣ್ಣಾರೆ ನೋಡಬೇಕು. ಒಬ್ಬ ರಾಕ್ಷಸನ ಮುಖದ ಹಾಗಾಗಿದೆ. ಒಂದೇ ನೋಟದಲ್ಲಿ ಅರ್ಥ ಮಾಡಿಕೊಳ್ಳಬಹುದು. ಆ ಮನುಷ್ಯ ಏನು ಮಾಡುವುದಕ್ಕೂ ಹೇಸುವುದಿಲ್ಲ. ಯಾರನ್ನೂ ಯಾವ ಸಂದರ್ಭದಲ್ಲಿಯೋ ಆಗಲಿ ಏನು ಬೇಕಾದರೂ ಮಾಡಬಹುದು. ಹೃದಯ, ಪ್ರೀತಿ, ಮನುಷ್ಯತ್ವ ಎಂದು ಹೇಳುವುದಾವುದೂ ಆತನಿಗಿಲ್ಲ ವಾಗಿದೆ. ಆತ ಏನನ್ನೋ ತೀರ್ಮಾನಿಸಿಬಿಟ್ಟಿದ್ದಾನೆ. ದಿವಾನರು ಕೂಡ ಈಗ ಈ ರೀತಿ ಇರಲಾರರು.

ಲೂಕೋಸ್ ಹೇಳಿದ: "ಅವನು ಒಬ್ಬ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟೋ, ಡಿ. ಎಸ್. ಪಿ.ಯೋ, ಪೋಲೀಸ್ ಕಮಿಷನರೋ ಯಾರಾದರೂ ಆಗಿದ್ದಿದ್ದರೆ ಹತ್ತು ಜನ ಸೇರಿರೋ ಕಡೆ ಗೋಲಿಬಾರ್‌ಗೆ ಆರ್ಡರ್ ಕೊಡುತ್ತಿದ್ದ. ಖಂಡಿತ. ದಿವಾನರಿಗೆ ಸಾಮರ್ಥ್ಯ ಸಾಲದು ಎನ್ನುವ ವರೆಗೆ ಆ ಮನುಷ್ಯನ ಅಭಿಪ್ರಾಯ ಇದ್ದ ಹಾಗಿದೆ."

ಮ್ಯಾಥ್ಯು ಕೇಳಿದ: "ಹಾಗಾದರೆ ಈ ಸ್ವತಂತ್ರ ತಿರುವಾಂಕೂರ್ ಜಯಿಸುತ್ತೆ ಅಂತ ಈ ಮನುಷ್ಯ ನಂಬಿದ್ದಾನಾ?" ಲೂಕೋಸ್‌ಗೆ ಅದು ತಿಳಿಯದು. ಒಂದು ವಿಷಯ ಮಾತ್ರ ಹೇಳಬಲ್ಲ. ಇಪ್ಪತ್ತನಾಲ್ಕು ಗಂಟೆಯೂ ಕೇಶವ ಪಿಳ್ಳೆ ಕೆಲಸದಲ್ಲಿ ತೊಡಗಿದ್ದಾನೆ. ಒಂದೊಂದು ಸ್ಥಳದಲ್ಲಿಯೂ ಒಂದೊಂದು ಮೂಲೆಯಲ್ಲಿಯೂ ಏನಾದರೊಂದು ಕೆಲಸ ಆತ ಮಾಡಿಕೊಂಡಿದ್ದಾನೆ. ಹೀಗೆ ಕೆಲಸ ಮಾಡುತ್ತಿರುವುದು ಸ್ವತಂತ್ರ ತಿರುವಾಂಕೂರನ್ನು ಜಯಿಸಬೇಕು ಎಂದಲ್ಲವೇ? ಲೂಕೋಸ್ ಹೇಳಿದ:

"ಅವನ ಮನೆಯ ಸುತ್ತೂ ಸೈನಿಕರ ಕಾವಲಿದೆ. ಆ ಕಡೆ ಕಣ್ಣೆತ್ತಿ ನೋಡೋದಕ್ಕೆ ಸಾಧ್ಯವಿಲ್ಲ. ನಾನು ನನ್ನ ಹೆಸರು ಹೇಳಿಯೂ ಒಂದು ಗಂಟೆ ಕಾಯಬೇಕಾಗಿ ಬಂತು. ಅನಂತರವೊ! ಒಳಗೆ ಹೋದ ಮೇಲೆ ಅಲ್ಲಿದ್ದವರ ದುರುಗುಟ್ಟಿದ ನೋಟವನ್ನು ಕಂಡು ಹೆದರಿಹೋದೆ. ನನಗೆ ಅನ್ನಿಸಿತ್ತು—ಸಂದರ್ಶಕರನ್ನು ಪರಿಶೋಧಿಸಿಯೇ ಒಳಗೆ ಬಿಡುತ್ತಿದ್ದದ್ದು ಎಂದು. 'ಭಕ್ತಿವಿಲಾಸ'ದಲ್ಲಿ ಇಷ್ಟೆಲ್ಲ ಕಾವಲಿಲ್ಲ."

ಮ್ಯಾಥ್ಯು ಕೇಳಿದ: "ಅಂದು ಅಲ್ವ ಟಿ.ಪಿ.ಯಲ್ಲಿ ಯಾರೋ ಕಿಟಿಕಿಯಲ್ಲಿ ಇಣಕಿ ನೋಡಲಿಲ್ಲವಾ? ಅದೇ ರೀತಿ ಯಾರೋ ಸಮಯ ಸಾಧಿಸ್ತಾ ಇರಬೇಕು."

ಲೂಕೋಸ್‌ಗೂ ಆ ಸಂಶಯವಿತ್ತು. ಎಲ್ಲರಿಗೂ ಕೇಶವ ಪಿಳ್ಳೆಯನ್ನು ಕೊಂದು ಹಾಕಿದರೆ ಕಾಟ ತಪ್ಪಿತಲ್ಲ ಎಂದು.

ಮ್ಯಾಥ್ಯು ಆಲೋಚಿಸುವುದು ಕೇಶವ ಪಿಳ್ಳೆಯ ಉದ್ದೇಶ ಏನಿರಬಹುದು ಎಂದು. ಸ್ವತಂತ್ರ ತಿರುವಾಂಕೂರಿನಿಂದ ಅವನಿಗೇನು ಪ್ರಯೋಜನ? ಅಥವಾ ದಿವಾನರ ಪ್ರತ್ಯೇಕ ಪ್ರೀತಿ ಸಂಪಾದಿಸುವುದಕ್ಕೋ?

ಲೂಕೋಸ್ ಕೇಳಿದ: " ಈ ದಿವಾನರು ತಾನೇ ಎಷ್ಟು ದಿನ ಇರ್‍ತಾರೆ? ಈ ಸ್ಥಿತಿ ನೋಡಿದರೆ ದಿವಾನರ ನೆಲೆಯೂ ಸುರಕ್ಷಿತವಲ್ಲ." ಆ ವಿಷಯ ನಂತರ ಆಲೋಚಿಸೋಣ ಎಂದು ಮ್ಯಾಥ್ಯು ಹೇಳಿದ. ಲೂಕೋಸ್ ಕಥೆ ಹೇಳತೊಡಗಿದ:

"ನಾನು ಮುಂದೆ ನಿಂತು ಕೈ ಮುಗಿದೆ. ಮುಖ ನೋಡೋದಕ್ಕೆ ಹೆದರಿಕೆಯಾಯ್ತು. ಅಷ್ಟೊಂದು ಕ್ರೌರ್ಯವಿತ್ತು. ಆತ ನಗಾಡಿದ. ನಾನು ಹೇಳಬೇಕಾದದ್ದನ್ನೆಲ್ಲ ಆಲೋಚನೆ ಮಾಡಿಕೊಂಡೇ ಹೋದದ್ದು. ನಮಗೆ ನಾಲ್ಕು ಕಾಸು ಸಿಕ್ಕುವ ಮಾರ್ಗ. ಕೆಲಸ ಪ್ರಾರಂಭಿಸಿ ಮುಂದುವರಿಸಿದರೆ ತೀರುವ ವರೆಗಿನ ಕೆಲಸದ ಕಾಸು ಸಿಕ್ಕುತ್ತೆ ಎಂದೆಲ್ಲ ಹೇಳಿದ. ಅವನ ಕಣ್ಣುಗಳಿಗೆ ಈಗ ಒಂದು ಪ್ರತ್ಯೇಕ ಶಕ್ತಿಯಿದೆ. ಅವನು ಹಾಗೆ ನೋಡಿಕೊಂಡಿದ್ದಾಗ ನನಗನ್ನಿಸಿತು ಆ ನೋಟ ನನ್ನ ಹೃದಯಕ್ಕೆ ನುಗ್ಗಿ ನಮ್ಮ ರಹಸ್ಯವನ್ನೆಲ್ಲ ಅವನು ತಿಳಿದುಕೊಂಡು ಬಿಟ್ಟ ಎಂದು. ಹೇಳಿ ಮುಗಿಸಿದ ಮೇಲೆ ಸತ್ಯವಾಗಿ ನಾವು ನಾಯರ್‌ಗೂ ಗೋಪಿಗೂ ಬೇಕಾದ ಒಂದು ಕೆಲಸಕ್ಕಾಗಿ ಹೋದದ್ದು ಎಂದು ಭಾವಿಸಿದುದಾಗಿ ನಾನು ನಂಬಿದೆ. ಒಂದೇ ಮಾತಿನಲ್ಲಿ ಹಿಂದೆಂದೂ ಕಾಣದ ಮನುಷ್ಯನ ಹತ್ತಿರವೋ ಎನ್ನುವ ಹಾಗೆ ಮುಖ ನೋಡಿ ಅವನು ಹೇಳಿದ: 'ಸಾಧ್ಯವಿಲ್ಲ'

ಎಂದು. ಕಾರಣ ಹೇಳಲಿಲ್ಲ. ನಾನು ಬಿಡಲಿಲ್ಲ. "ಏಕೆ?" ಕೊನೆಯಲ್ಲಿ ಮೂರು ಸಾವಿರ ರೂಪಾಯಿ ನಾನು ಪರ್ಸಿನಲ್ಲಿಟ್ಟುಕೊಂಡು ಹೋಗಿದ್ದೆ. ಅವನ್ನು ತೆಗೆದು ಮೇಜಿನ ಮೇಲಿಟ್ಟೆ. ಆ ಮೇಲಿನದನ್ನು ನೋಡಬೇಕಾಗಿತ್ತು. ನಾವು ಮೇಸ್ತ್ರಿಯಿಂದ ಹಿಡಿದು ಚೀಫ್ ಇಂಜಿನಿಯರ್ ವರೆಗೆ ತಿಂಗಳಿಗೆಷ್ಟು ಕೊಡ್ತೀವಿ? ಅದು ಅವರ ಹಕ್ಕೂ ಹೌದಲ್ಲ. ಅವರು ಕೂಡ ನಾವು ಕೊಡುವಾಗ 'ಛೇ! ಇದ್ಯಾಕೆ?' ಅಂತಲೋ ಇಲ್ಲದಿದ್ದರೆ 'ಯಾಕೆ ಇದಲ್ಲ' ಅಂತಲೋ ಅದೂ ಇಲ್ಲದಿದ್ದರೆ 'ಇದಲ್ಲ ಬೇಡ'ವಾಗಿತ್ತು ಅಂತಲೇ ಅಲ್ಲವೇ ತೆಗೆದುಕೊಳ್ಳೋದು? ನಾನು ಅವಕ್ಕಾಗಿ ಅಲ್ಲ ಅಂತಲೋ ಮತ್ತೇನಾದರೂ ಒಂದು ಸಮಾಧಾನ ಹೇಳುತ್ತೇನಲ್ಲ! ಕೇಶವ ಪಿಳ್ಳೆಗೆ ಯಾವ ಭೇದ ಭಾವವೂ ಇಲ್ಲ. ಒಂದೇ ಒಂದು ಅಕ್ಷರ ಉಚ್ಚರಿಸಲಿಲ್ಲ. ಆ ಹಣ ತೆಗೆದು ಮೇಜಿನ ಮೇಲಿಟ್ಟೆ. ಕೃತಜ್ಞತೆಯೂ ಇಲ್ಲ; ಉಪಕಾರವೂ ಇಲ್ಲ. ತೆಗೆದುಕೊಂಡದ್ದಾಗಿಯೋ ಕೊಟ್ಟದ್ದಾಗಿಯೋ ಇರುವ ಭಾವನೆಯೂ ಇಲ್ಲ. ಸ್ವತಂತ್ರ ತಿರುವಾಂಕೂರ್ ಪ್ರಶ್ನೆಗಾಗಿ ಏನಲ್ಲ ಮಾಡ್ತೀರಿ ಎಂದು ಕೇಳಿದ. ನಾವು ಟ್ರಕ್ಕುಗಳಲ್ಲಿ ಕೆಲಸದವರನ್ನು ಕಳಿಸಿದ್ದು ಗೊತ್ತಿದೆ. ಇನ್ನೂ ಹೆಚ್ಚು ಊರ್ಜಿತವಾಗಿ ಕೆಲಸ ಮಾಡಬೇಕೆಂದು ನಿರ್ದೇಶಿಸಿದ." ಮ್ಯಾಥ್ಯು ಮಧ್ಯೆ ಕೇಳಿದ:

"ಹಣ ತಗೆದುಕೊಂಡ ಮೇಲೂ ಆ ವಿಷಯ ಏನೂ ಹೇಳಲಿಲ್ಲವೇ?"

"ಅರ್ಧ ಗಂಟೆ ವರೆಗೆ ಮಾತನಾಡಿ ನಿಶ್ಶಬ್ದ. ಥಟ್ಟನೆ ನಾಟಕೀಯವಾಗಿ ಹೇಳಿದ: 'ನನಗೆ ಕೆಲಸವಿದೆ. ಇನ್ನು ಲೂಕೋಸ್ ಹೋಗಬಹುದು' ಎಂದು. ಅವನ ಹತ್ತಿರ ಹೆಚ್ಚಿಗೆ ಮಾತನಾಡುವುದಕ್ಕೆ ಹೆದರಿಕೆ. ಅವನೂ ಏನೂ ಹೇಳಲಿಲ್ಲ. ಮೂರು ಸಾವಿರ ಒಲೆಗೆ ಹಾಕಿದ್ದಾಯ್ತೋ ಎಂದು ನಾನು ಹೆದರಿದೆ. ನಾನು ಬಾಗಿಲಿನ ಹತ್ತಿರ ಬಂದಾಗ ಅವನು ಹೇಳಿದ: 'ಇಂಜಿನೀಯರ್‌ಗೆ ಯಾರಿಗೂ ತೊಂದರೆ ಕೊಡಬಾರದು ಕೇಳಿಸ್ತಾ?' ಎಂದು. ಆಗ ನನಗೆ ಭರವಸೆ ಉಂಟಾದದ್ದು."

ಮ್ಯಾಥ್ಯುವಿಗೆ ಕಥೆಯನ್ನೆಲ್ಲ ಕೇಳಿದಾಗ ಒಂದು ಸಂಶಯ: "ಹಣ ತೆಗೆದುಕೊಂಡು ಅವನು ಹಾಗೆಲ್ಲ ನಡೆದುಕೊಳ್ತಾನಾ ಇಂಜಿನಿಯರ ಮೇಲೆ ತಪ್ಪು ಹೊರಿಸಿ?"

ಲೂಕೋಸ್‌ಗೆ ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ಅದು ಆ ಮನುಷ್ಯನ ಇತ್ತೀಚಿನ ಸ್ವಭಾವ. ಆ ಹಣ ನಷ್ಟವಾಯಿತು ಎಂತಲೂ ಆಗಬಹುದು. ಒಂದೇ ಸಮಾಧಾನ. ಅಷ್ಟಾದರೂ ಹೇಳಿದನಲ್ಲ. ಅದೂ ಇಲ್ಲದೇ ಇದ್ದಿದ್ದರೋ? ಲೂಕೋಸನ ಮುಂದಿನ ಪ್ರಯತ್ನ ಫಿಲಿಪ್ಸ್‌ನನ್ನು ಹಿಡಿಯುವುದಾಗಿತ್ತು. ಕಾಂಗ್ರೆಸ್‌ನ ಒಬ್ಬ ದೊಡ್ಡ ಮುಖಂಡನ ಮನೆಗೆ ಅರ್ಧರಾತ್ರಿಯಲ್ಲಿ ಹೋದ.

ಮ್ಯಾಥ್ಯು ಕುತೂಹಲದಿಂದ ಕೇಳಿದ: "ಅದು ಯಾರು?"

"ಹೇಳ್ತೀನಿ ಗಡಿಬಿಡಿ ಮಾಡಬೇಡ. ಎರಡು ದಿನ ಅಲ್ಲಿ ಅಡಗಿದ್ದೆ. ಕಾಂಗ್ರೆಸ್ಸಿನವರು ಅಲ್ಲಿ ಹಗಲು ರಾತ್ರಿ ಹೋಗ್ತಿರ್ತಾರೆ. ಅಲ್ಲಿಯ ಪರಿಸರವಿಡೀ ಸಿ. ಐ. ಡಿ.ಗಳು.

ಯಾರ ದೃಷ್ಟಿಗೂ ಬೀಳದೆ ಎರಡು ದಿನ ಪಟ್ಟ ಪಾಡು ನನಗೆ ಗೊತ್ತು, ದೇವರಿಗೆ ಗೊತ್ತು. ನಾನು ತುಂಬ ಕಷ್ಟ ಪಟ್ಟೆ. ಅವನು ನಿನ್ನ ವಿಷಯ ಎಲ್ಲ ಕೇಳಿದ. ತುಂಬ ಪ್ರೀತಿಯಿಂದ ಕೇಳಿದ. ನಾವು ಮಾಡಿದ ಸಹಾಯವನ್ನು ಕುರಿತು ಅವರಿಗೆಲ್ಲ ಕೃತಜ್ಞತೆ ಇದೆ. ಆ ಮಧ್ಯೆ ಎರಡು ಸಲ ಆತ ಹೋಗಿ ಫಿಲಿಪ್ಸ್‌ನನ್ನು ಕಂಡು ಬಂದ. ಅಲ್ಲಿಗೆ ಹೋದದ್ದು ನಮ್ಮ ಸತ್ಯ ಸಂಗತಿಯನ್ನು ಮರೆಯದೆ ಹೇಳುವುದಕ್ಕಾಗಿ. ಅದೂ ಒಳ್ಳೆಯ ಕೆಲಸ ಎಂದು ಆ ಮುಂದಾಳು ಒಪ್ಪಿಕೊಂಡ. ನಾಯರ್ ಮತ್ತು ಗೋಪಿಯನ್ನು ಕುರಿತು ತುಂಬ ಪ್ರೀತಿ ಅವನಿಗೆ. ಅವರ ಕುಟುಂಬದ ಭವಿಷ್ಯಕ್ಕೂ ಸುರಕ್ಷಿತತ್ವಕ್ಕೂ ಬೇಕಾಗಿ ಯಾವ ಉಪಕಾರ ಮಾಡಿದರೂ ತಪ್ಪಲ್ಲ ಎಂದು ಆತನ ವಿಶ್ವಾಸ. ಆ ಕಾರ್ಯದಲ್ಲಿ ಎಲ್ಲಿಯ ವರೆಗೆ ಹೋಗುವುದಕ್ಕೂ ಆತ ತಯಾರಾಗಿದ್ದ. ಆದರೆ ಆ ತೀರ್ಮಾನಕ್ಕೆ ಬರುವ ಹೊತ್ತಿಗೆ ಸಾವಿರ ರೂಪಾಯಿ ಖರ್ಚಾಯಿತು. ಸೆಕ್ರೆಟರಿ ಫಿಲಿಪ್ಸ್‌ಗೆ ಕೊಡುವುದಕ್ಕೆ ಅಷ್ಟೆ !

ಮ್ಯಾಥ್ಯು ಕೇಳಿದ: "ಆ ಮೇಲೆ ಕೊಟ್ಟೆಯ?"

"ಕೊಟ್ಟೆ. ಕೊಡದೇ ಇರೋದಕ್ಕೆ ಸಾಧ್ಯವಾ? ಮೂರು ಸಾವಿರ ಹೋಗಿದೆ. ಕೆಲಸ ನಡೆಯಬಾರದಾ? ನನಗೆ ಎದುರುಗಡೆಗೆ ನಿಂತು ಮಾತನಾಡೋದಕ್ಕೆ ಸಾಧ್ಯವಿಲ್ಲ. ನಾನು ಹೋದರೆ ಫಿಲಿಪ್ಸ್ ಬದಲಾಯಿಸ್ತಾನೆ. ಒಂದು ಕೆಲಸವೂ ನಡೆಯುವುದಿಲ್ಲ. ನಮ್ಮನ್ನು ಗಣಿಸಿರುವುದು. ಮೋಸಗಾರರು. ಕೈಕೊಡೋ ಜನರು ಎಂದು. ಅಂತೂ ಫಿಲಿಪ್ಸ್ ಹೇಳಿದ್ದು: ಆತನಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಭದ್ರ ಮಾಡಿಕೊಳ್ಳಬೇಕು ಎಂದು. ಇನ್ನು ಇಂಜಿನಿಯರನ್ನು ನಮ್ಮ ಪರಕ್ಕೆ ತೆಗೆದುಕೊಳ್ಳುವುದು."

ಅದೊಂದು ದೊಡ್ಡ ಪ್ರಶ್ನೆಯಾಗಿ ಮ್ಯಾಥ್ಯುವಿಗೆ ತೋರಲಿಲ್ಲ. "ಅಲ್ಲ. ಅಲ್ಲ ಅದು ಹಾಗಲ್ಲ. ಅದು ಸ್ವಲ್ಪ ತೊಂದರೆಯಿರೋ ಕೆಲಸ. ಕೇವಲ ಪಿಳ್ಳೆಯೂ ಫಿಲಿಪ್ಸೂ ಅಡ್ಡಗಾಲಿಡುವುದಿಲ್ಲ ಎನ್ನುವ ನಂಬಿಕೆ ಬರಬೇಕು. ಅವರು ಅಡ್ಡಗಾಲಿಟ್ಟರೆ ಕೆಲಸ ಕೆಟ್ಟಿತು."

ಆ ಮುಂದಾಳು ಯಾರೆಂದು ತಿಳಿಯಲು ಮ್ಯಾಥ್ಯುವಿಗೆ ತುಂಬ ಕುತೂಹಲ ವುಂಟಾಯಿತು. ಲೂಕೋಸ್ ಕೇಳಿದ:

"ಅದ್ಯಾತಕ್ಕೆ ಬೇಕು ಮ್ಯಾಥ್ಯುಗೆ?"

"ಅದ್ಯಾಕೆ? ನಾನು ತಿಳಿದರೇನು?"

ಲೂಕೋಸ್ ಆ ಮುಂದಾಳಿನ ಹೆಸರನ್ನು ಹೇಳಿದ. ಮ್ಯಾಥ್ಯುವಿನ ಮುಖಭಾವ ವ್ಯತ್ಯಾಸವಾಯಿತು. ಆತ ಹೇಳಿದ:

"ಹಾಗಾದರೆ ನಾವು ಮೋಸಹೋದೆವು. ಹಣವನ್ನು ಫಿಲಿಪ್ಸ್ ಕೇಳಿರೋದೂ ಇಲ್ಲ. ಆ ಮನುಷ್ಯ ಕೊಟ್ಟಿರೋದೂ ಇಲ್ಲ. ಅದು ಆ ಮುಂದಾಳಿನ ಜೇಬಿಗೆ ಬಿತ್ತು. ಅವನೇ ಅಲ್ಲವೇ ಎಲೆಕ್ಷನ್‌ಗೆ ಸಂಗ್ರಹಿಸಿದ ಹಣ ಅಷ್ಟನ್ನೂ ನುಂಗಿದ್ದು? ಯಾವ ಲೆಕ್ಕ ಪತ್ರವೂ ಇಲ್ಲ. ಮೊದಲಿನಿಂದಲೂ ಆ ಮನುಷ್ಯ ಹಾಗೇನೇ."

ಲೂಕೋಸ್ ಸಮಾಧಾನ ಮಾಡಿದ:

"ಹಾಗಿದ್ದರೆ ಹಾಗೇ ಆಗಲಿ. ನಮ್ಮ ಕೆಲಸ ಆದರೆ ಸಾಕಲ್ಲವಾ? ಅದರ ಮೂಲ ಯಾಕೆ ಹುಡುಕಬೇಕು?" ಮ್ಯಾಥ್ಯು ಒಂದು ಎದಿರುಪ್ರಶ್ನೆ ಕೇಳಿದ:

"ಫಿಲಿಪ್ಸ್ ಈ ವಿಷಯನೆಲ್ಲ ತಿಳಿದಿದ್ದಾನೆ ಅಂತ ಖಂಡಿತವಾಗಿ ಹೇಳೋದಕ್ಕಾಗುತ್ತಾ? ಅವನು ಹೋಗಿ ಹೇಳಿರೋದಿಲ್ಲ."

ಲೂಕೋಸ್‌ಗೂ ಸ್ವಲ್ಪ ಸಂಶಯವುಂಟಾಗತೊಡಗಿತು. ಆದರೂ ಅವನು ಹೇಳಿದ: "ಅವನು ಹೇಳಿರ್ತಾನೆ. ಆ ಕೆಲಸ ಆಗಿರುತ್ತೆ."

ಮ್ಯಾಥ್ಯು ಕೇಳಿದ: "ಹಾಗೆ ನಡೆಯದೇ ಇದ್ದರೆ ಲೂಕೋಸ್, ಅವನ ಬೆನ್ನಿಗೆ ಒಂದು ಬಿಗಿಯೋದಕ್ಕೆ ಸಾಧ್ಯವಾ?"

ಲೂಕೋಸ್ ಸಂಶಯವಿಲ್ಲದೆ ಹೇಳಿದ: "ಅವರಲ್ಲೇನು ಅನುಮಾನ? ಅವನನ್ನು ಸುಮ್ಮನೆ ಬಿಡೋದಕ್ಕಾಗುತ್ತಾ? ಆದರೆ ಮ್ಯಾಥ್ಯು ಹಾಗೆ ಆಲೋಚಿಸಬೇಡ. ಆ ಕಾರ್ಯ ನಡೆಯುತ್ತೆ."

ಮ್ಯಾಥ್ಯುವಿನ ಸಂಶಯ ಹೋಗಿರಲಿಲ್ಲ. ಅವನು ಆ ಮುಂದಾಳಿನ ಜೊತೆಯಲ್ಲಿ ತುಂಬ ಹತ್ತಿರದಲ್ಲಿ ಒಡನಾಡಿದವನು.

ಮತ್ತೊಂದು ಯೋಜನೆ ಲೂಕೋಸನ ಮನಸ್ಸಿನಲ್ಲಿತ್ತು. ಅದೂ ಕಾರ್ಯರೂಪಕ್ಕೆ ಬಂದು ಫಲ ನೀಡುವಂಥಾದ್ದು. ಈ ಸರ್ಕಾರ ಹೋಗುತ್ತದೆ. ಇದಕ್ಕೆ ಹೆಚ್ಚಿಗೆ ದಿನ ಆಯುಷ್ಯ ಇಲ್ಲ. ಅನಂತರ ಆಳುವುದು ಕಾಂಗ್ರೆಸ್ ಆಗಿರುತ್ತದೆ. ಇಂದು ಅದನ್ನು ಪುಡಿ ಪುಡಿ ಮಾಡಿದ್ದು ಎಂದಲ್ಲವೇ ರಿಕಾರ್ಡು ಮಾಡಿದ್ದು. ಅದು ಸರಿಯಾಗಿ ನಾಯರೂ ಗೋಪಿಯೂ ಹಣ ಕೊಟ್ಟು ಮಾಡಿದ ವ್ಯವಸ್ಥೆಯ ಪ್ರಕಾರ. ಕಾಂಗ್ರೆಸ್ ಮುಂದಾಳುಗಳಿಗೆ ಅದು ಗೊತ್ತೂ ಇದೆ. ಇಂದು ಮಾಡುವ ಅನ್ಯಾಯಕ್ಕೆ ನಷ್ಟ ಪರಿಹಾರ ದೊರೆಯಲು ನಾಯರ್‌ಗೂ ಗೋಪಿಗೂ ಅವಕಾಶವಿದೆ. ಆ ನಷ್ಟ ಪರಿಹಾರವನ್ನು ಅವರು ಕೇಳಬಹುದು.

ಆ ವಾದ ಆಕರ್ಷಕ ವಾದವಾಗಿ ಮ್ಯಾಥ್ಯುವಿಗೆ ತೋರಿತು. ನಿಜವಾಗಿಯೂ ಅಧಿಕಾರದಲ್ಲಿ ಬರುವ ಅನುಭವದಿಂದಲೇ ಅದನ್ನು ಪರಿಗಣಿಸುವುದು. ವೀರಸಂಗ್ರಾಮದಲ್ಲಿ ಸರ್ವಸ್ವವನ್ನೂ ಉಪೇಕ್ಷಿಸಿದ ಯೋಧನ ವಿಷಯವಲ್ಲವೆ?

# [22]

## ಪ್ರತೀಕಾರ ಹಿಂಬಾಲಿಸುತ್ತದೆ

ಎಷ್ಟೋ ದಿನಗಳಿಂದ ಕೇಶವ ಪಿಳ್ಳೆಯನ್ನು ಊರು ಕರೆಯುತ್ತಿತ್ತು. ಜೀವನದಲ್ಲಿ ಯಾವ ಸಮಯದಲ್ಲೂ ಒಮ್ಮೆ ಮನೆಗೆ ಹೋಗಿ ಬರಬೇಕು ಎನ್ನುವ ತೀವ್ರ ಚಿಂತೆ ಅವನಿಗೆ ಉಂಟಾಗಿರಲಿಲ್ಲ. ವಿಶೇಷವಾದ ಕಾರಣವೂ ಇರಲಿಲ್ಲ, ಹೋಗಲು ಸಾಧ್ಯವೂ ಇರಲಿಲ್ಲ. ವಿಶ್ರಾಂತಿಯಿಲ್ಲದೆ ಕೇಶವ ಪಿಳ್ಳೆ ಕೆಲಸ ಮಾಡುತ್ತಿದ್ದ.

ಒಂದು ದಿನ ಬೆಳಗ್ಗೆ ಊರಿಗೆ ಹೋಗಿ ಬರಬೇಕೆಂದು ಕೇಶವ ಪಿಳ್ಳೆ ತೀರ್ಮಾನಿಸಿದ. ಆಗ ಪೋಲೀಸು ಮೂಲಕ ಒಂದು ಸುದ್ದಿ ಬಂದಿತು. ಆದಷ್ಟು ಬೇಗ ಮನೆಗೆ ಹೋಗ ಬೇಕಾಗಿತ್ತು. ಕಾರಣವೇನು ಎಂದು ಮೊದಲು ಹೇಳಲಿಲ್ಲ. ತುಂಬ ಒತ್ತಾಯ ಮಾಡಿದಾಗ ವಿಷಯ ತಿಳಿಯಿತು.

ಪಪ್ಪು ಪಿಳ್ಳೆ ತೀರಿಕೊಂಡರು. ಯಾರೋ ಇರಿದು ಕೊಂದದ್ದು. ಕೊಂದವನು ಸಿಕ್ಕಿಲ್ಲ. ಯಾರು ಎಂದು ತಿಳಿಯುವುದಕ್ಕೂ ಆಗಿಲ್ಲ. ಸಾಯಂಕಾಲ ಪಪ್ಪು ಪಿಳ್ಳೆ ಜಪಿಸುತ್ತ ಅತ್ತ ಇತ್ತ ನಡೆದಾಡುತ್ತಿದ್ದರು. ಕುಟ್ಟಿಯಮ್ಮನೂ ಹತ್ತಿರದಲ್ಲಿದ್ದರು. ಪಾಪಿಷ್ಟ ಎಲ್ಲಿಂದಲೋ ಬಂದು ಇರಿದ. ಒಂದೇ ಒಂದು ಅಕ್ಷರವನ್ನೂ ಉಚ್ಚರಿಸದೆ ಪಪ್ಪು ಪಿಳ್ಳೆ ಮುಖ ಅಡಿಯಾಗಿ ಬಿದ್ದರು. ಕೊಲೆಗಾರ ಓಡಿಹೋದ. ಇದು ಕಥೆ. ಕುಟ್ಟಿಯಮ್ಮನೂ ಜ್ಞಾನತಪ್ಪಿ ಬಿದ್ದಳು. ಅವಳಿಗೆ ಪ್ರಜ್ಞೆ ಬರಲಿಲ್ಲ. ಯಾರೋ ಕಾಂಗ್ರೆಸ್ಸಿನವರಾಗಿರಬೇಕು ಎಂದು ಪೋಲೀಸಿನವರು ಸಂಶಯಪಡುತ್ತಿದ್ದದ್ದು. ಕೇಶವ ಪಿಳ್ಳೆಯನ್ನೇ ಕೊಲ್ಲಬೇಕು ಎನ್ನುವ ಉದ್ದೇಶದಿಂದ ಯಾರೋ ಕೆಲವರು ಅವನಿಗೆ ಬೆಂಬಲ ನೀಡುತ್ತಿದ್ದಾರೆ. ಆ ನಿಗೂಢ ಸಿದ್ಧತೆಯ ಫಲವಾಗಿ ಈ ಕೊಲೆ ನಡೆದಿರುವುದು ಎಂದು ಪೋಲೀಸರು ತೀರ್ಮಾನಿಸಿದ್ದರು. ಅದಕ್ಕೆ ಸಂಬಂಧಪಟ್ಟವರನ್ನು ಕಂಡುಹಿಡಿಯಲೇಬೇಕೆಂದು 'ಭಕ್ತಿವಿಲಾಸ'ದಿಂದ ಉಗ್ರವಾದ ಆಜ್ಞೆ ಹೊರಟಿತು. ಕಾಂಗ್ರೆಸ್ ಕಾರ್ಯಕರ್ತರೋ ಅಥವಾ ಕಾಂಗ್ರೆಸ್ಸಿನ ಜತೆಗೂಡಿದ ಕಮ್ಯೂನಿಷ್ಟರೋ ಯಾರೋ ಆಗಿರಬೇಕು ಈ ಕೆಲಸ ಮಾಡಿದ್ದದ್ದು. ಇಪ್ಪತ್ತನಾಲ್ಕು ಗಂಟೆಯೊಳಗಾಗಿ ತಿಳಿದೇ ತೀರಬೇಕು.

ಪೋಲೀಸು ಕಾವಲಿನೊಂದಿಗೆ ಕೇಶವ ಪಿಳ್ಳೆ ಹೊರಟದ್ದು. ಅಲ್ಲಿ ಊರಿನವರಾಗಿ ಕಿಟ್ಟುಮಾವನೂ ಪಪ್ಪು ಪಿಳ್ಳೆಯ ಜೊತೆಗಾರರಾಗಿದ್ದ ಬೇರೆ ನಾಲ್ಕು ಜನ ತೀರ ಮುದುಕರಾಗಿದ್ದವರಿದ್ದರು. ಅವರನ್ನು ಬಿಟ್ಟರೆ ಬೇರೆ ಒಬ್ಬ ಮನುಷ್ಯನಿಲ್ಲ.

ಕಣ್ಣೀರು ಸುರಿಸುತ್ತ ಕಿಟ್ಟುಮಾವ ಪಪ್ಪು ಪಿಳ್ಳೆಯ ಹತ್ತಿರ ಕುಳಿತು ದೇವರ ಭಜನೆ

ಮಾಡುತ್ತಿದ್ದರು. ನೆರೆಹೊರೆಯವರಾದ ಮೂರು ನಾಲ್ಕು ಮಂದಿ ಸ್ತ್ರೀಯರೂ ಕಾತ್ಯಾಯಿನಿಯೂ ಮಗಳು ವಿಜಯಮ್ಮನೂ ಪ್ರಜ್ಞೆ ತಪ್ಪಿ ಬಿದ್ದಿದ್ದ ಕುಟ್ಟಿಯಮ್ಮನ ಶುಶ್ರೂಷೆ ಮಾಡುತ್ತಿದ್ದರು. ಡಾಕ್ಟರ್ ಬಂದು ಹೋದರು. ಇದು ವರೆಗೆ ಪ್ರಜ್ಞೆ ಬಂದಿಲ್ಲ. ಆ ಮನೆಯಲ್ಲಿ ಮಾತ್ರವಲ್ಲ. ಆ ಊರಿನಲ್ಲೆಲ್ಲಿ ನೋಡಿದರೂ ಯೂನಿ ಫಾರಂನಲ್ಲೂ ಯೂನಿಫಾರಂ ಇಲ್ಲದೆಯೂ ಪೋಲೀಸಿನವರು.

ಅಂದು ಬೆಳಗ್ಗೆ ಪೋಲೀಸಿನವರ ಮೆರವಣಿಗೆಯೇ ಆಗಿತ್ತು. ಅಲ್ಲಿಯ ಕಾಂಗ್ರೆಸ್ ಆಫೀಸನ್ನು ಪೋಲೀಸರು ಪರಿಶೋಧಿಸಿದರು. ಎಷ್ಟೋ ರಿಕಾರ್ಡುಗಳು ಸಿಕ್ಕಿದುವು. ಕಮಿಟಿ ಮೆಂಬರ್‌ಗಳಲ್ಲಿ ಒಬ್ಬಿಬ್ಬರನ್ನು ಅರೆಸ್ಟ್ ಮಾಡಿದ್ದಾಯಿತು. ಪ್ರಶ್ನೆ ಕೇಳುವುದ ಕ್ಕಾಗಿ ಅಕ್ಕಪಕ್ಕದ ಮನೆಗಳಿಂದ ತುಂಬ ಜನ ಗಂಡಸರನ್ನು ಪೋಲೀಸ್ ಸ್ಟೇಶನಿಗೆ ಕರೆದು ಕೊಂಡು ಹೋಗಿದ್ದರು. ಕೆಲವು ಮನೆಗಳನ್ನು ಪರಿಶೋಧಿಸಿದರು.

ಆ ಕೊಲೆಗಾರ ಯಾರು? ಎಲ್ಲಿಂದ ಬಂದ? ಎಲ್ಲಿಗೆ ಹೋದ?—ಆ ವಿವರ ಗಳನ್ನು ತಿಳಿಯಬೇಕು. ಊರಿನವರೇ ಯಾರೋ ಕೊಲೆ ಮಾಡಿರಬೇಕು ಎಂದು ಪೋಲೀಸರ ಅಭಿಪ್ರಾಯ. ಊರಿನವರಿಗೆ ಅದು ಗೊತ್ತು. ಅವರು ಹೇಳುತ್ತಿದ್ದರು: ಕೆಲವು ದಿನಗಳಿಗೆ ಮೊದಲು ಆ ಸ್ಥಳದ ಒಬ್ಬ ಯುವಕ ಸ್ವತಂತ್ರ ತಿರುವಾಂಕೂರು ವಿರೋಧಪಕ್ಷದಲ್ಲಿ ಹೇಳಿದ ಕೆಲವು ಸಂಗತಿಗಳು ಈ ಸಂದರ್ಭದಲ್ಲಿ ಅರ್ಥವತ್ತಾಗಿ ಕಂಡುಬಂದುವು. 'ಆ ಗ್ರಾಮದ ಸಂತತಿ ಹೀಗೆ ಕೊಲೆಗಾರನಾಗಿಹೋದದ್ದು ನತದೃಷ್ಟಕರ. ಅಂಥವನ ಜನನಕ್ಕೆ ಕಾರಣರಾದವರು ನಾಚಿಕೆಪಡಬೇಕಾಗಿದೆ. ಅವರು ಮಹಾ ಪಾಪಿ ಗಳು.' ಆವೇಶದಿಂದ ಆ ಯುವಕ ಮತ್ತೂ ಕೆಲವು ವಿಷಯಗಳನ್ನು ಹೇಳಿದ್ದ. 'ಎಲ್ಲಿಯೊ ನಡೆದ ಗೋಲಿಬಾರಿನಲ್ಲಿ ಸತ್ತ ಒಬ್ಬ ಮನುಷ್ಯನನ್ನು ಕುರಿತು ಮಾತನಾಡುತ್ತಿದ್ದಾರಲ್ಲ, ಅಲ್ಲಿ ಸತ್ತ ಮನುಷ್ಯನ ಮಗ, ತಂದೆಗೆ ಗುಂಡು ಬಿದ್ದು ಸತ್ತದ್ದನ್ನ ಹೇಗೆ ಸಹಿಸುತ್ತಾನೆ' ಎಂದು ಕೇಳಿದ. ಆ ದುಃಖ ಹೇಗಿರಬೇಕು ಎಂದು ಕೇಶವ ಪಿಳ್ಳೆ ತಿಳಿಯಬೇಕೆಂದು ಆತ ವಾದಿಸಿದ. ಸಭೆಯಲ್ಲಿ ಒಬ್ಬ ಆಗ ಗಟ್ಟಿಯಾಗಿ ಹೇಳಿದ: "ಅವನಿಗೆ ಹೃದಯವಿಲ್ಲ." ತುಂಬ ಹೊತ್ತು ಚಪ್ಪಾಳೆ ತಟ್ಟಿದರು. ಆ ಭಾಷಣ ಮಾಡಿದವನು ಎರಡು ದಿನಗಳಿಂದ ಕಾಣಿಸುತ್ತಿಲ್ಲ. ಅವನನ್ನು ಪೋಲೀಸಿನವರು ಹುಡುಕುತ್ತಿದ್ದರು.

ಎಲ್ಲ ಮನೆಗಳಲ್ಲೂ ಅಳುವ ಧ್ವನಿ. ಪೋಲೀಸಿನವರು ಕರೆದುಕೊಂಡು ಹೋದವ ರಲ್ಲಿ ಕೆಲವರನ್ನು ಕ್ರೂರವಾಗಿ ಶಿಕ್ಷಿಸಿದರಂತೆ. ಕೆಲವರನ್ನು ಕಕ್ಷಿಗಳನ್ನಾಗಿ ಮಾಡಿದ್ದಾರೆ. ಒಂದು ಒಳ್ಳೆ ಮಾತು ಹೇಳುವುದಕ್ಕೆ ಪೋಲೀಸ್ ಸ್ಟೇಷನ್‌ಗೆ ಹೋಗುವುದಕ್ಕೆ ಒಬ್ಬ ಮನುಷ್ಯನಿಲ್ಲ. ಒಟ್ಟಿನಲ್ಲಿ ಒಂದು ಭೀಕರವಾದ ವಾತಾವರಣವುಂಟಾಗಿತ್ತು. ಒಂದು ಮನೆಯಲ್ಲೂ ಅಡಿಗೆ ಮಾಡಿರಲಿಲ್ಲ.

ಕೇಶವ ಪಿಳ್ಳೆಯ ಮುಖ ಕಪ್ಪಾಗಿತ್ತು. ಅವನು ಅಳುತ್ತಿರಲಿಲ್ಲ. ಆದರೆ ಮನಸ್ಸಿ ನಲ್ಲಿ ಯಾವುದೋ ವಿಚಾರಗಳು ತುಂಬಿಕೊಂಡಿದ್ದುವು. ಯೂನಿಫಾರಂ ತೊಟ್ಟಿದ್ದ

ಪೋಲೀಸಿನವನು ಸೆಲ್ಯೂಟ್ ಮಾಡಿದ. ಪೋಲೀಸ್ ಮುಂದಾಳುಗಳು ನಿಶ್ಶಬ್ದರಾಗಿ ದಾರಿ ಬಿಟ್ಟುಕೊಟ್ಟರು. ಯಾರನ್ನೂ ನೋಡದ ರೀತಿಯಲ್ಲಿ ಕೇಶವ ಪಿಳ್ಳೆ ಪಪ್ಪು ಪಿಳ್ಳೆಯ ಶವದ ಹತ್ತಿರ ಹೋಗಿ ಮುಖದ ಮೇಲಿನ ಮುಸುಕು ತೆಗೆದು ಆ ಮುಖವನ್ನೊಮ್ಮೆ ನೋಡಿದ. ಕಿಟ್ಟುಮಾಮ ಗಟ್ಟಿಯಾಗಿ ಅಳುತ್ತಿದ್ದರು. ಕೇಶವ ಪಿಳ್ಳೆ ತುಟಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು ಗಟ್ಟಿಯಾಗಿ ಅಳದಂತೆ ಶ್ರಮಿಸುತ್ತಿದ್ದ.

ಬಳಿಕ ತಾಯಿಯ ಹತ್ತಿರ ಹೋದ. ಗೌರಿಯಮ್ಮ ಹೇಳಿದಳು: "ಅಮ್ಮ, ಕಣ್ಣು ಬಿಟ್ಟು ನೋಡು. ಕೇಶವ ಬಂದ."

"ಕೇಶವ" ಎನ್ನುವ ಶಬ್ದ ಒಂದು ದಿವ್ಯ ಮಂತ್ರದಂತಿತ್ತು. ಕುಟ್ಟಿಯಮ್ಮ ಕಣ್ಣು ತೆರೆದಳು.

ಕೇಶವ ಪಿಳ್ಳೆ ಕರೆದ: "ಅಮ್ಮ, ಇಲ್ಲಿ ನೋಡು, ನಾನು."

ಕೂಡಲೆ ಉತ್ತರ ಹೊರಬಂದಿತು:

"ನೀನು ಕೊಂದೆ. ನೀನು ತಂದೇನ ಕೊಂದೆ. ಯಾಕೆ ನೀನು ಆ ಪಾಪದ ಮನುಷ್ಯನನ್ನ ಕೊಂದೆ? ನನ್ನ ಭಾಗ್ಯದೇವರು ಕಣ್ಮರೆಯಾಯ್ತು."

ಪುನಃ ಆ ಕಣ್ಣುಗಳು ಮುಚ್ಚಿಕೊಂಡುವು. ಅಲ್ಲಿ ಕೇಶವ ಪಿಳ್ಳೆಗೆ ನಿಲ್ಲಲು ಸಾಧ್ಯವಾಗಲಿಲ್ಲ. ಅವನಿಗೆ ಅಳಬೇಕೆನ್ನಿಸಿತು. ಎರಡು ಹನಿ ಕಣ್ಣೀರು ಬೀಳಬೇಕು. ಇಲ್ಲದಿದ್ದರೆ ಹೃದಯ ಒಡೆಯಬಹುದು.

ಕೇಶವ ಪಿಳ್ಳೆ ಪಡುಭಾಗದಲ್ಲಿ ಒಂಟಿಯಾಗಿ ನಿಂತಿದ್ದ. ಪೋಲೀಸ್ ನೌಕರರಾಗಲೀ ಮತ್ತಾರಾಗಲೀ ಅವನ ಹತ್ತಿರ ಹೋಗಲಿಲ್ಲ.

ಒಳಗೆ ಗೌರಿಯಮ್ಮ ಕಾತ್ಯಾಯಿನಿಯ ಹತ್ತಿರ ಹೇಳಿದಳು: "ನೀನು ಅವನ ಜೊತೇಲಿರು. ನಾನು ನನ್ನ ತೊಡೆ ಮೇಲೆ ಅಮ್ಮನ ತಲೆ ಇಟ್ಟುಕೊಳ್ತೀನಿ."

"ಇಲ್ಲ. ನಾನೀಗ ಹೋಗೋದಿಲ್ಲ. ನಾನು ಹೋದರೆ ಅಮ್ಮನಿಗೆ ಕಷ್ಟ ಆಗುತ್ತೆ."

ಹೆಚ್ಚು ಹೊತ್ತು ಕಳೆಯಲಿಲ್ಲ. ಕುಟ್ಟಿಯಮ್ಮ ಕಣ್ಣು ತೆರೆದಳು. ಆ ಮೇಲೆ ಸ್ವಲ್ಪ ಬಾಯಿ ತೆರೆದಳು, ನೀರಿಗಾಗಿ. ಕಾತ್ಯಾಯಿನಿ ಬಾಯಿಗೆ ನೀರು ಬಿಟ್ಟಳು. ಆ ಕಣ್ಣುಗಳು ಎಂದೆಂದೂ ಮುಚ್ಚಿಕೊಂಡುವು.

ಒಳಗಿನಿಂದ ಗಟ್ಟಿಯಾಗಿ ಅಳುವುದು ಕೇಳಿಸಿತು. ಕೇಶವ ಪಿಳ್ಳೆಯ ಗಟ್ಟಿಯಾಗಿ ಬಿಗಿದುಕೊಂಡಿದ್ದ ತುಟಿಗಳು ಬಿಚ್ಚಿಕೊಂಡುವು. ಕಣ್ಣುಗಳಿಂದ ಅವನಿಗೆ ತಿಳಿಯದೆ ಅಶ್ರುಬಿಂದುಗಳು ಒಂದರ ಹಿಂದೆ ಮತ್ತೊಂದರಂತೆ ಉದುರುತ್ತಿದ್ದುವು. ಆದರೆ ಆ ಅವಸ್ಥೆಯಲ್ಲಿ ಹೆಚ್ಚು ಹೊತ್ತು ಕೇಶವ ಪಿಳ್ಳೆ ಇರಲಿಲ್ಲ. ಮುಖ ಒರೆಸಿಕೊಂಡು ಸಾಮಾನ್ಯ ಸ್ಥಿತಿಗೆ ಬಂದ. ಅಂತು ಅವನು ಅತ್ತ ಎನ್ನುವುದು ಸ್ಪಷ್ಟವಾಗಿತ್ತು.

ಪಪ್ಪು ಪಿಳ್ಳೆಯ ಶವದ ಪೋಸ್ಟ್ ಮಾರ್ಟಂ ನಡೆಸಿದರು. ಆಗ ಕುಟ್ಟಿಯಮ್ಮನನ್ನು ಆ ಕಡೆ ಸ್ನಾನ ಮಾಡಿಸಿದರು. ಯಾವಾಗಲೂ, ಮುಟ್ಟಿದ್ದಕ್ಕೆ ತೊಟ್ಟಿದ್ದಕ್ಕೆ ಎಲ್ಲಕ್ಕೂ

ಗಂಟೆಗೆ ನಲವತ್ತು ಸಲ ಜಗಳವಾಡುತ್ತಿದ್ದ, ಮರುಕ್ಷಣದಲ್ಲಿ ಮತ್ತೆ ಪ್ರೀತಿಯಿಂದ ಇರುತ್ತಿದ್ದ ವಯಸ್ಸಾದ ಮೂರು ನಾಲ್ಕು ಜನ ಮುದುಕಿಯರು, ಗೌರಿಯಮ್ಮ ಮತ್ತು ಕಾತ್ಯಾಯಿನಿ—ಇಷ್ಟೇ ಜನ ಅಳುತ್ತಿದ್ದದ್ದು. ಆ ಸ್ಥಳದಲ್ಲಿ ಎಲ್ಲಿ ಯಾರು ಸತ್ತರೂ ಕುಟ್ಟಿಯಮ್ಮ ಅಲ್ಲಿಗೆ ಹೋಗುತ್ತಿದ್ದಳು. ಶವದಹನ ಕಳೆದ ಮೇಲೆಯೇ ಕುಟ್ಟಿಯಮ್ಮ ಹಿಂದಿರುಗುತ್ತಿದ್ದದ್ದು. ಅದೇತಕ್ಕೆ ಹಾಗೆ ಹೋಗುತ್ತಿದ್ದಳು? ಮಗಳ ಹತ್ತಿರವೂ ಮಗನ ಹತ್ತಿರವೂ ಅದು ಏತಕ್ಕೆ ಎಂದು ವಿವರಿಸುತ್ತಿದ್ದಳು.

"ನಾನು ಸತ್ತಾಗ ನನ್ನನ್ನು ಎತ್ತಿಕೊಂಡು ಹೋಗಿ ಸ್ನಾನ ಮಾಡಿಸಿ. ಗಂಧ ವಿಭೂತಿ ಧರಿಸಿ. ರವಕೆ, ಸೀರೆ ಉಡಿಸೋದಕ್ಕೆ ನನ್ನ ನೆರೆಹೊರೆ ಹೆಂಗಸರು ಬೇಕು. ಸುಡೋ ಜಾಗ ಸರಿ ಮಾಡಿ ಸೌದೆ ತರೋದಕ್ಕೆ, ಶವ ಸುಡೋದಕ್ಕೆ ಗಂಡಸರು ಬೇಕು. ಅದಕ್ಕೆ ! ನೀನೋ ನಿನ್ನ ಒಡಹುಟ್ಟಿದವನ ಹೆಂಡತಿಯೋ ಆಲೋಚನೆ ಮಾಡಿದರೆ ಅದು ನಡೆಯುತ್ತಾ?"

ಹಾಗೆ ಒಂದು ಬಾಳಿನುದ್ದಕ್ಕೂ ಸತ್ತಾಗ ನೆರೆಹೊರೆಯ ಗಂಡಸರು ಹೆಂಗಸರು ಇರಬೇಕೆಂದು ಪಟ್ಟ ಶ್ರಮ ವ್ಯರ್ಥವಾಯಿತು. ಕುಟ್ಟಿಯಮ್ಮನನ್ನು ಸ್ನಾನ ಮಾಡಿಸುವುದಕ್ಕೆ ಎತ್ತಿಕೊಂಡು ಹೋದದ್ದು ಕಾತ್ಯಾಯಿನಿಯೂ ಗೌರಿಯಮ್ಮನೂ. ಉಳಿದ ಸ್ತ್ರೀಯರು ಮುದುಕಿಯರು.

ಪಪ್ಪು ಪಿಳ್ಳೆಯೂ ಅದೇ ರೀತಿ ಎಲ್ಲ ಕಡೆಗೂ ಹೋಗಿದ್ದರು. ಹೋಗದೆ ಇದ್ದರೆ ಕುಟ್ಟಿಯಮ್ಮ ಬಯ್ಯುತ್ತಿದ್ದಳು. ಅವಳು ಮೊದಲೇ ಸೂಚನೆ ಕೊಡುತ್ತಿದ್ದಳು:

"ಇದು ಎಲ್ಲರಿಗೂ ಇರೋದೇನೆ."

ಆದರೆ ಈಗ ನೆರೆಹೊರೆಯಲ್ಲಿ ಗಂಡಸರೂ ಇಲ್ಲ, ಹೆಂಗಸರೂ ಇಲ್ಲ. ಧಾರಾಳವಾಗಿ ಪೋಲೀಸಿನವರಿದ್ದರು. ಬೇರೆ ಕೆಲವರು ಸರ್ಕಾರಿ ಉದ್ಯೋಗಸ್ಥರಿದ್ದರು. ಅವರೇ ಆ ಮನೆಯ ತೆಂಕುಭಾಗಕ್ಕೆ ಎರಡು ಚಿತೆಯನ್ನು ಸಿದ್ಧಪಡಿಸಿದರು. ಪೋಲೀಸಿನವರು ಮಾವಿನ ಮರ ಕತ್ತರಿಸಿ ಸೌದೆಯನ್ನು ಹೊಂದಿಸಿದರು.

ಪಪ್ಪು ಪಿಳ್ಳೆ ಬೆಳಗ್ಗೆ ಎದ್ದು ಜಮೀನಿನ ಕಡೆಗೆ ಹೋಗುವಾಗ ಎಲ್ಲರ ಮನೆಯ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಎಲ್ಲರಿಗೂ ಪಪ್ಪು ಪಿಳ್ಳೆಯನ್ನು ಕಂಡರೆ ಪ್ರೀತಿಯಿತ್ತು. ಪಪ್ಪು ಪಿಳ್ಳೆಗೂ ಅಷ್ಟೆ. ಅವರು ಯಾರ ಹತ್ತಿರವೂ ಜಗಳವಾಡಿದ್ದಿಲ್ಲ. ಯಾರೂ ಅವರ ಹತ್ತಿರ ಜಗಳವಾಡಿದ್ದಿಲ್ಲ. ಯಾರಿಗಾದರೂ ಏನಾದರೂ ಸಹಾಯ ಬೇಕಾದರೆ ಪಪ್ಪು ಪಿಳ್ಳೆಯಿಂದಲೇ ದೊರೆಯುತ್ತಿತ್ತು. ಪಪ್ಪು ಪಿಳ್ಳೆ ಬದುಕಿದ್ದಾಗ ಅವರ ಯಾವ ಕೆಲಸಕ್ಕೂ ಊರಿನವರು ನೆರವಾಗುತ್ತಿದ್ದರು.

ಹಾಗಿದ್ದರೆ ಅವರೀಗ ಏನು ತಪ್ಪು ಮಾಡಿದ್ದು? ಅವರಿಗೊಬ್ಬ ಮಗ ಹುಟ್ಟಿದ್ದೆ? ಅಭಿಮಾನದಿಂದ ಆ ಅಮ್ಮ ಹೇಳುವ ಹಾಗೆ ಸೂರ್ಯನಂತಹ ಒಬ್ಬ ಮಗ ಹುಟ್ಟಿದ್ದರಿಂದಲೇ? ಆ ಮಗ ಗ್ರಾಮದಲ್ಲೇ ಜೀವಿಸಿದ್ದರೂ? ಈಗ ಅದೊಂದನ್ನೂ ಆಲೋಚಿಸಬೇಕಾಗಿಲ್ಲ.

ಆ ಚಿತೆಗಳು ಧಿಗ್ಗನೆ ಹೊತ್ತಿಕೊಂಡಾಗ ಬೆಂಕಿಯ ನಾಲಗೆಗಳು ಅನ್ಯೋನ್ಯವಾಗಿ ಕೂಡಿಕೊಂಡುವು. ಅದು ಧನ್ಯ ಬಾಳ್ವೆಯಾಗಿತ್ತು ಎಂದು ಹೇಳಲು ಯಾರೂ ಇರಲಿಲ್ಲ. ನಾಳೆ ಹಸಿರು ಶಾಲನ್ನು ಹೊದೆದುಕೊಂಡು ತಲೆಗೆ ಟವಲ್ ಸುತ್ತಿಕೊಂಡು ಊರುಗೋಲನ್ನು ಹಿಡಿದು ಜವಿೂನಿನ ಕಡೆಗೆ ಹೋಗಿಬರುವ ಆ ರೂಪವನ್ನು ಇನ್ನು ಕಾಣುವಂತಿಲ್ಲ. ಎಲ್ಲಿಯಾದರೂ ಒಂದು ಹೆಣ್ಣಿಗೆ ಹೆರಿಗೆ ನೋವು ಕಾಣಿಸಿಕೊಂಡಿದೆ ಎಂದು ಸುದ್ದಿ ತಿಳಿದಾಗ ಬೇಗನೇ ಬಟ್ಟೆ ಬದಲಿಸಿ ಅಲ್ಲಿಗೆ ಓಡಿಹೋಗುವ ಯಜಮಾನಿಯನ್ನು ಇನ್ನು ಕಾಣುವಂತಿಲ್ಲ. ಚಿತೆ ಉರಿದಾಯಿತು. ಕಾತ್ಯಾಯಿನಿಯ ಹೃದಯ ಬಿರಿಯುವಂತಹ 'ಅಮ್ಮಾ, ಅಪ್ಪಾ' ಎಂಬ ಕೂಗಿಗೆ ಪ್ರತ್ಯುತ್ತರವೊ ಎನ್ನುವಂತೆ ಚಿತೆಯ ಮಧ್ಯದಲ್ಲಿದ್ದ ಕೆಂಡಗಳು ಧಗಧಗಿಸುತ್ತಿದ್ದುವು. ಇನ್ನು ಅವು ಬೂದಿಯಾಗುತ್ತವೆ.

ಟಪಾಲು ತರುವ ಜವಾನ ಕೇಶವ ಪಿಳ್ಳೆಯ ಮುಂದೆ ಬಂದು ಬಾಗಿ ನಮಸ್ಕರಿಸಿ ಒಂದು ಕವರನ್ನು ಕೊಟ್ಟ. ಕೇಶವ ಪಿಳ್ಳೆಯ ಮನೆಯ ವಿಳಾಸಕ್ಕೆ ಬಂದ ಕಾಗದ ಅದು. ಹಸ್ತಾಕ್ಷರವನ್ನು ಗುರುತಿಸಲು ಸಾಧ್ಯವಿಲ್ಲ. ಕೇಶವ ಪಿಳ್ಳೆ ಕವರ್ ಒಡೆದು ಓದಿದ. ಆ ಕಾಗದದಲ್ಲಿ ಹೀಗಿತ್ತು:

"ಈ ಕಾಗದವನ್ನು ಬರೆಯುತ್ತಿರುವವನ ಹೆಸರು ಮುಕುಂದ. ನನ್ನ ತಂದೆಯ ಹೆಸರು ಗೋಪಾಲನ್ ನಾಯರ್. ನೀವು ಕೊಂದು ತೂಗುಹಾಕಲಿಲ್ಲವೇ ಆ ಗೋಪಾಲನ್ ನಾಯರ್. ನೀವು ಒಂದು ಸಲ ಕಳ್ಳ ಕೇಸಿನಲ್ಲಿ ಜೈಲಿಗೆ ಹಾಕಿದಿರಿ. ನಿಮ್ಮ ತಂದೆಯನ್ನು ಕೊಂದದ್ದು ನಾನು. ಆ ದುಃಖವನ್ನು ನೀವೂ ಅನುಭವಿಸಲಿ ಎಂದು. ನನಗಾದಷ್ಟು ದುಃಖ ನಿಮಗಾಗುವುದಿಲ್ಲ. ಆದರೂ ನನಗೊಂದು ತೃಪ್ತಿಯಿದೆ. ಯಾರ ಮೇಲೂ ಸಂಶಯಪಡಬೇಡಿ. ನಿಮ್ಮನ್ನೇ ಹುಡುಕಿ ತುಂಬ ದಿನ ಸುತ್ತಾಡಿದೆ. ಅದೇ ನನಗಿಷ್ಟವಾದದ್ದು. ಆದರೆ ಈ ಭಾರವನ್ನು ಹೊತ್ತುಕೊಂಡು ತುಂಬ ದಿನ ನಡೆಯಲಾಗಲಿಲ್ಲ. ಅದಕ್ಕಾಗಿ ವಧಿಸಿದ್ದು ನಿಮ್ಮ ತಂದೆಯನ್ನು. ಇನ್ನು ನಿಲ್ಲಿಸುತ್ತೇನೆ."

ಕೇಶವ ಪಿಳ್ಳೆಗೆ ತಲೆ ಸುತ್ತಿ ಬಂದ ಹಾಗಾಯಿತು. ನಿಲ್ಲಲು ಸಾಧ್ಯವಾಗಲಿಲ್ಲ. ಆದರೆ ಅವನು ಬೀಳಲಿಲ್ಲ. ಸ್ವಲ್ಪ ದೂರದಲ್ಲಿ ನಿಂತಿದ್ದ ಡಿ.ಎಸ್.ಪಿ.ಯ ಕೈಯಲ್ಲಿ ಆ ಕಾಗದವನ್ನು ಕೊಟ್ಟ. ಡಿ.ಎಸ್.ಪಿ. ಅದನ್ನು ಈಸಿಕೊಂಡರು. ಉಳಿದ ಮೇಲಿನ ಪೋಲೀಸ್ ಅಧಿಕಾರಿಗಳು ಅಲ್ಲಿಗೆ ಬಂದರು.

ಕೆಂಪು ಪಟ್ಟಿ ಉದ್ದ ಉದ್ದವಾಗಿ ಪಪ್ಪು ಪಿಳ್ಳೆಯ ಕತ್ತಿನಲ್ಲಿ ಕಾಲಪಾಶವಾಗಿ ಸುತ್ತಿಕೊಳ್ಳುತ್ತಿತ್ತು. ಅರ್ಧ ಕಛೇರಿಯಲ್ಲೂ ತಾಲ್ಲೂಕ್ ಆಫೀಸಿನಲ್ಲಿಯೂ ರೆವಿನ್ಯೂ ಆಫೀಸಿನಲ್ಲಿಯೂ ಅದೇ ರೀತಿ ಎಲ್ಲ ಆಫೀಸುಗಳಲ್ಲಿಯೂ ನೌಕರಿಯಲ್ಲಿದ್ದು ಇಳಿದು ಹೋದ ಎಷ್ಟೆಷ್ಟು ಮಂದಿ ನೌಕರರು, ಅಧಿಕಾರಿಗಳು—ಬಿಟ್ಟುಬಿಟ್ಟ ಕೆಂಪು ಪಟ್ಟಿ ಅದು. ಅದರ ಒಂದು ಭಾಗವನ್ನು ಕೇಶವ ಪಿಳ್ಳೆಯೂ ಮುಟ್ಟಿದ್ದ. ಈ ಪಟ್ಟಿ ಇನ್ನೂ ಉದ್ದವಾಗುತ್ತದೆಯೋ? ಆ ಕಡೆ ಪೋಲೀಸ್ ಅಧಿಕಾರಿಗಳು, ಗುಂಪುಗುಂಪಾಗಿ ನಿಂತು ಗಹನ

ವಾಗಿ ಆಲೋಚಿಸುತ್ತಿದ್ದರು. ಈ ಮುಕುಂದನೆನ್ನುವವನನ್ನು ಕುರಿತ ಹೆಚ್ಚು ವಿವರಗಳು ಚೀಫ್ ಸೆಕ್ರೆಟರಿಗೆ ಗೊತ್ತಿದೆ. ಆದರೆ ಈ ಸಂದರ್ಭದಲ್ಲಿ ಹೇಗೆ ಕೇಳುವುದು? ಒಬ್ಬ ಇನ್‌ಸ್ಪೆಕ್ಟರ್ ಗೋಪಾಲನ್ ನಾಯರರ ಆತ್ಮಹತ್ಯೆಯ ಕೇಸನ್ನು ಕುರಿತು ಹೇಳಿದರು. ಎ. ಎಸ್. ಪಿ.ಗೆ ಇವನೊಬ್ಬ ಕಾಂಗ್ರೆಸ್ಸಿನವನೆಂದು ಗೊತ್ತಿತ್ತು. ಸ್ಥಳೀಯ ಕಾಂಗ್ರೆಸ್ಸಿನವರ ಸಹಾಯವಿಲ್ಲದೆ ಇವನು ಈ ಕೆಲಸ ಮಾಡಿ ಹೋಗಲು ಸಾಧ್ಯವಿಲ್ಲವೆಂದು ಅವರ ವಾದ. ಇದು ಇಲ್ಲಿ ನಡೆದ ಗೂಢಾಲೋಚನೆ. ಕಾಂಗ್ರೆಸ್ ಮುಂದಾಳುಗಳಿಗೂ ಈ ವಿಷಯ ತಿಳಿದಿರಬೇಕು. ಅವರ ಪ್ರೇರಣೆಯಿಂದ, ಅವರು ನೀಡಿದ ಧೈರ್ಯದಿಂದ ಮಾತ್ರ ಇದನ್ನು ನಡೆಸಲು ಸಾಧ್ಯ! ಎಲ್ಲ ನೌಕರರೂ ಈ ತೀರ್ಮಾನಕ್ಕೆ ಬಂದರು.

ಡಿ. ಎಸ್. ಪಿ.ಯನ್ನು ಬಾಧಿಸುತ್ತಿದ್ದ ಪ್ರಶ್ನೆ ಮತ್ತೊಂದು. "ಅವನು ತಲೆಮರೆಸಿಕೊಂಡ. ಅವನು ಸಂತೃಪ್ತನಾಗದೆ ಹೋಗಿದ್ದಾನೆ. ಇವರ ಮೇಲೆ ಅವನ ದೃಷ್ಟಿ. ಅವನನ್ನು ಹಿಡಿಯಬೇಕು."

ಎ. ಎಸ್. ಪಿ. ಅಭಿಪ್ರಾಯ ಪಡುವುದು ಅವನು ದೂರ ಎಲ್ಲಿಗೂ ಹೋಗಿರುವುದಿಲ್ಲ. ಈ ಸುತ್ತುಮುತ್ತಿನಲ್ಲಿ ಎಲ್ಲಿಯೋ ಅವನಿರಬೇಕು. ನಾಡು ಇಡೀ ಅವನಿಗೆ ಪರಿಚಯವಿದೆ. ಹಾಗಿರುವಾಗ ತಲೆಮರೆಸಿಕೊಳ್ಳುವುದು ಅವನಿಗೆ ಕಷ್ಟವೆ?

ಕಾಗದ ಪೋಸ್ಟ್ ಮಾಡಿರುವುದು ಆಲಪ್ಪುಳದಿಂದ. ಕೂಡಲೆ ಸಂಸ್ಥಾನದ ಎಲ್ಲ ಪೋಲೀಸ್ ಸ್ಟೇಶನ್ನಿಗೂ ಕೊಲೆಗಾರನನ್ನು ಕುರಿತ ಚಹರೆಗಳು ಹೋದುವು. ಇಡೀ ನಾಡನ್ನು ನಡುಗಿಸಿದ್ದ ಕೊಲೆಯಾಗಿತ್ತು ಅದು. ಯಾರಿಗೂ ಯಾವ ತೊಂದರೆಯನ್ನೂ ಕೊಡದ ಒಬ್ಬ ಮನುಷ್ಯ ಸತ್ತ. ನಾಡಿನಲ್ಲಿ ಒಂದು ದೊಡ್ಡ ಸುದ್ದಿಯಾಗಿತ್ತು. ಆ ಕೊಲೆಗೆ ಪತ್ರಿಕೆಗಳು ಪ್ರಾಶಸ್ತ್ಯವನ್ನು ಕೊಟ್ಟು ಆ ಕೊಲೆಯನ್ನು ವಿವರಿಸಿದುವು. ಪೋಲೀಸಿನವರ ಪ್ರತ್ಯೇಕವಾದ ಪ್ರಯತ್ನವೂ ಕೂಡ ಒಬ್ಬ ಕಾಂಗ್ರೆಸ್ಸಿನವನು ಕೊಲೆ ಮಾಡಿದ್ದು ಎಂದು ಹೇಳುತ್ತಿದ್ದದ್ದು. ಕಾಂಗ್ರೆಸ್ಸಿಗೇ ಇಷ್ಟವಿಲ್ಲದ ಸುದ್ದಿಯಾಗಿತ್ತು ಅದು. ಆ ಸಾಧು ಮುದುಕ ಏನು ತಪ್ಪು ಮಾಡಿದ? ಅವನನ್ನು ಕೊಲೆ ಮಾಡಬೇಕಾಗಿರಲಿಲ್ಲ ಎಂದು ಎಲ್ಲ ನಾಲಿಗೆಗಳೂ ಹೇಳಿದ್ದು. ಅನಂತರ ಕೊಲೆಗಾರ ಮುಕುಂದನೆಂದು ತಿಳಿದದ್ದು.

ಕಾಂಗ್ರೆಸ್ ನೇತೃತ್ವದಲ್ಲಿ ಒಂದು ಹೇಳಿಕೆ ಹೊರಟಿತು. ಈ ಕೊಲೆಗೂ ಕಾಂಗ್ರೆಸ್ಸಿಗೂ ಯಾವ ಸಂಬಂಧವೂ ಇಲ್ಲವೆಂದೂ ಮುಕುಂದ ಕಾಂಗ್ರೆಸ್ಸಿನವನಲ್ಲವೆಂದೂ ಅದರಲ್ಲಿ ವ್ಯಕ್ತವಾಗಿತ್ತು. ಕೊಲೆಯ ವಿಚಾರವಾಗಿ ಕಾಂಗ್ರೆಸ್ಸು ತನಗಿದ್ದ ವಿರೋಧವನ್ನು ಪ್ರಕಟಿಸಿ ತೀರಿಕೊಂಡ ಮನುಷ್ಯನ ಆತ್ಮಕ್ಕೆ ಶಾಂತಿಯನ್ನೂ ಕೋರಿತು. ಆ ಮಧ್ಯೆ ನಡೆದ ಎಲ್ಲ ಕಾಂಗ್ರೆಸ್ ಸಭೆಗಳಲ್ಲೂ ಕೊಲೆ ನಡೆದದ್ದನ್ನು ಕುರಿತು ವಿರೋಧವನ್ನು ವ್ಯಕ್ತಪಡಿಸುತ್ತ ಪಪ್ಪು ಪಿಳ್ಳೆಗೆ ಆತ್ಮಶಾಂತಿಯನ್ನು ಕೋರಿದ್ದರು. ಕೊಲೆಗಾರನನ್ನು ಕಂಡುಹಿಡಿಯುವುದಕ್ಕೆ ಕಾಂಗ್ರೆಸ್ಸು ಎಲ್ಲ ಸಹಾಯಗಳನ್ನೂ ಮಾಡಿಕೊಡುವುದಾಗಿ ಪೋಲೀಸಿನವರಿಗೆ ವಾಗ್ದಾನ ಮಾಡಿದರು. ಏನೇ ಇದ್ದರೂ ಜನರು ಅದನ್ನು ಅಷ್ಟಾಗಿ ನಂಬಿರಲಿಲ್ಲ.

ಪಪ್ಪ ಪಿಳ್ಳೆಯ ಮತ್ತು ಕುಟ್ಟಿಯಮ್ಮನ ಅಸ್ಥಿಸಂಚಯ ಕಳೆಯಿತು. ಸೂತಕ ಕಳೆದ ಮೇಲೆಯೇ ಕೇಶವ ಪಿಳ್ಳೆ ಹೋಗುವುದು. ಸಂಪ್ರದಾಯದ ರೀತಿಯಲ್ಲಿ ಎಲ್ಲ ಕರ್ಮಗಳನ್ನೂ ಕೇಶವ ಪಿಳ್ಳೆ ಮಾಡುತ್ತಿದ್ದ. ಎಲ್ಲ ಕರ್ಮಗಳನ್ನೂ ನಡೆಸುತ್ತಿರುವುದು ಕಿಟ್ಟುಮಾವ. ಪೋಲೀಸಿನವರು ಕೊಲೆಯನ್ನೂ ಕೊಲೆಗಾರನನ್ನೂ ಕುರಿತ ವಿವರಗಳನ್ನು ತಿಳಿಯಲು ತುಂಬ ಶ್ರಮಿಸುತ್ತಿದ್ದರು. ಆ ಊರಿನಲ್ಲಿ ಪೋಲೀಸಿನವರು ಕರೆದುಕೊಂಡು ಹೋಗದ ಗಂಡಸರಿಲ್ಲ. ಕೆಲವರನ್ನು ಎಷ್ಟೋ ದಿವಸಗಳು ಕಳೆದರೂ ಬಿಟ್ಟಿಲ್ಲ. ಈಗ ಸ್ತ್ರೀಯರನ್ನೂ ಪ್ರಶ್ನಿಸಲು ಕರೆದುಕೊಂಡು ಹೋಗುವ ಆಲೋಚನೆಯಿದೆ. ಸ್ತ್ರೀಯರು ಸತ್ಯ ಹೇಳುತ್ತಾರೆ — ಅದಕ್ಕಾಗಿ. ಎಂಟು ಹತ್ತು ವರ್ಷದ ಮಕ್ಕಳನ್ನೂ ಪೋಲೀಸರು ಬಿಡುವುದಿಲ್ಲ.

ಆ ಊರಿಗೆ ಬಂದ ದಿನದಿಂದ ಕಾತ್ಯಾಯಿನಿಗೆ ಹತ್ತಿರದವಳಾಗಿದ್ದವಳು ಕಾಲಾಪುರದ ನಾಣಿಕುಟ್ಟಿ. ಪರಸ್ಪರ ಅರಿಯದ ರಹಸ್ಯ ಅವರಿಗಿಲ್ಲ. ಕಾಲುಗಂಟೆ ಸಮಯ ಸಿಕ್ಕಿದರೂ ಸಾಕು, ನಾಣಿಕುಟ್ಟಿ ಕಾತ್ಯಾಯಿನಿಯ ಮನೆಯಲ್ಲಿರುತ್ತಿದ್ದಳು. ಕಾತ್ಯಾಯಿನಿಯೂ ಅದೇ ರೀತಿ. ದಿವಸದಲ್ಲಿ ಒಂದು ಹತ್ತು ಸಲವಾದರೂ ಅವರು ಪರಸ್ಪರ ಕಾಣುತ್ತಿದ್ದರು. ಹೀಗೆ ಕೊನೆಯಿಲ್ಲದೆ ಮಾತನಾಡುವುದಕ್ಕಿರುವ ವಿಷಯವಾದರೂ ಏನು? ಹಾಗೆಯೇ ಅವರಿಗೆ ಹತ್ತಿರದವರಾದ ಬೇರೆ ಇಬ್ಬರು ಸ್ತ್ರೀಯರಿದ್ದರು. ಕೇವಲ ಕೇಶವನ ಹೆಂಡತಿಯಾಗಿ ಆ ಊರಿಗೆ ಬಂದಾಗಿನಿಂದ ತಿರುವಾಂಕೂರಿನ ದಿವಾನರನ್ನು ಬಿಟ್ಟರೆ ತುಂಬ ದೊಡ್ಡವನಾದ ಕೇಶವ ಪಿಳ್ಳೆಯ ಹೆಂಡತಿಯಾಗಿರುವ ಇಲ್ಲಿಯ ತನಕ ಯಾವ ವ್ಯತ್ಯಾಸವೂ ಅವಳಲ್ಲಿ ಆಗಿಲ್ಲ. ನಾಣಿಕುಟ್ಟಿಯ ಸ್ಥಿತಿ ಸ್ವಲ್ಪ ವ್ಯತ್ಯಾಸವಾಗಿತ್ತು. ಹಿಂದಿನ ಹಾಗೆಯೇ ಈಗಲೂ ಅವರು ಒಬ್ಬರನ್ನೊಬ್ಬರು 'ಹೋಗೇ ಬಾರೇ' ಎಂದು ಸಂಬೋಧಿಸುತ್ತಿದ್ದದ್ದು. ನಾಣಿಕುಟ್ಟಿಯ ಗಂಡ, ಹೇಳಿಕೊಳ್ಳುವಂತಹ ಯಾವ ಕೆಲಸವೂ ಇಲ್ಲದ ಮನುಷ್ಯ. ಸ್ವಲ್ಪ ಕೃಷಿ ಕೆಲಸ ಇತ್ತು. ಆಲಪ್ಪುಳ ಹಗ್ಗದ ಆಫೀಸಿನಲ್ಲಿ ಕೆಲಸದಲ್ಲಿದ್ದ ಒಬ್ಬನಿಗೆ ಮೊದಲ ಮಗಳನ್ನು ಕೊಟ್ಟದ್ದು. ಪ್ಪೈಲಾರ್ ಪುನ್ನಂಬ್ರದ ಹೋರಾಟದಲ್ಲಿ ಅವನು ಭಾಗವಹಿಸಿದ್ದ. ಆದರೆ ಸಿಕ್ಕಿಹಾಕಿಕೊಳ್ಳದೆ ತಪ್ಪಿಸಿಕೊಂಡಿದ್ದ. ಅವನೊಬ್ಬ ಕಮ್ಯುನಿಸ್ಟ್ ಆಗಿದ್ದ. ಅನಂತರ ಕಾಂಗ್ರೆಸ್ಸಿನವನಾಗಿದ್ದ. ಪೋಲೀಸಿನವರು ಅವನ ಹಳೆಯ ಚರಿತ್ರೆಯನ್ನು ನೋಡಿ ಸಂಶಯಪಟ್ಟು ಅವನನ್ನು ಪ್ರಶ್ನಿಸಿದರು. ಯಾವ ಸುಳುಹೂ ಸಿಕ್ಕಲಿಲ್ಲ. ಹೊಡೆದರು ಎಂದು ಹೇಳುವುದಿದೆ. ಪಪ್ಪ ಪಿಳ್ಳೆ ತೀರಿಕೊಂಡ ಮಾರನೆಯ ದಿನ ನಾಣಿಕುಟ್ಟಿ ಅಲ್ಲಿಗೆ ಹೋಗಿದ್ದಳು. ದುಃಖದಿಂದಿದ್ದ ಸ್ನೇಹಿತೆಯನ್ನು ಸಮಾಧಾನಪಡಿಸಿದಳು. ಅದೇ ದಿನ ಸಂಜೆ ಪಾಚ್ಚನ್ ಪಿಳ್ಳೆಯನ್ನು—ಅದು ನಾಣಿಕುಟ್ಟಿಯ ಅಳಿಯನ ಹೆಸರು—ಪೋಲೀಸಿನವರು ಕರೆದುಕೊಂಡು ಹೋದರು. ಕಾತ್ಯಾಯಿನಿಯನ್ನು ಅದೇ ರಾತ್ರಿ ಕಂಡು ಹೇಳಲು ನಾಣಿಕುಟ್ಟಿ ಚಡಪಡಿಸಿದಳು. ಆದರೆ ರಾತ್ರಿಯಲ್ಲಿ ಪೋಲೀಸಿನವರಿರುವ ಆ ಗುಡಿಸಲಿಗೆ ಹೋಗಬೇಡ ಎಂದು ಉಳಿದವರು ತಡೆದರು.

ಮೂರನೆಯ ದಿನ ಬೆಳಿಗ್ಗೆ ನಾಣಿಕುಟ್ಟಿಯನ್ನು ಪೋಲೀಸಿನವರು ಕರೆದುಕೊಂಡು ಹೋದರು. ಊರಿನವರಾರೂ ಕಾತ್ಯಾಯಿನಿಯ ಹತ್ತಿರ ಬರಲಿಲ್ಲ. ಅವರು ಬರದೇ ಹೋದದ್ದು ಪೋಲೀಸಿನವರಿಗೆ ಹೆದರಿ ಎಂದು ಕಾತ್ಯಾಯಿನಿಗೆ ತೋರಿತು. ಯಾವ ವಿವರವೂ ತಿಳಿಯದು. ಕಿಟ್ಟುಮಾವ ಎರಡು ಮೂರು ದಿನಗಳು ಹೊರಗೆ ಹೋಗಿ ಬಂದು ಊರಿನಲ್ಲಿ ಒಂದೊಂದು ಮನೆಯಲ್ಲೂ ನಡೆಯುತ್ತಿರುವ ವಿವರಗಳನ್ನು ತಿಳಿಸಿದರು. ಅದರ ಜೊತೆಯಲ್ಲಿ ಪೋಲೀಸಿನವರು ನಾಣಿಕುಟ್ಟಿಯನ್ನು ಕರೆದುಕೊಂಡ ವಿಷಯವನ್ನೂ ತಿಳಿಸಿದರು. ಕಾತ್ಯಾಯಿನಿ ನಡುಗಿಹೋದಳು. ಕಿಟ್ಟುಮಾವ ಹೇಳಿದರು: "ಈ ಊರಿನವರಿಗೆ ತಿಳಿಯದ ರೀತಿಯಲ್ಲಿ ಅವರ ಸಮ್ಮತಿ ದೊರೆಯದೆ ಈ ಕೊಲೆ ನಡೆಯುವುದಕ್ಕೆ ಸಾಧ್ಯವಿಲ್ಲ ಎಂದು ಪೋಲೀಸಿನವರು ಹೇಳುವುದು."

ಕಾತ್ಯಾಯಿನಿ ಆವೇಶದಿಂದ ಹೇಳಿದಳು: "ಸುಳ್ಳು. ಬರೀ ಸುಳ್ಳು. ನನ್ನ ನಾಣಿಕುಟ್ಟಿಗೆ ನಮ್ಮ ಮಾವನನ್ನು ಕೊಂದದ್ದು ಯಾರು ಅಂತ ಗೊತ್ತಿದೆ ಅಂತಲೇ ಹೇಳೋದು?"

ಕಿಟ್ಟುಮಾವನಿಗೆ ಅದೊಂದೂ ತಿಳಿಯದು. ತಿಳಿದಿದ್ದ ವಿಷಯ ಹೇಳಿದರು. ಪೋಲೀಸಿನವರು ಈ ಊರಿನಲ್ಲಿ ಯಾರನ್ನೂ ಬಿಡುವುದಿಲ್ಲ. ಸ್ತ್ರೀಯರನ್ನು ಮಾತ್ರವಲ್ಲ ಮಕ್ಕಳನ್ನೂ ಕರೆದುಕೊಂಡು ಹೋಗಿದ್ದಾರೆ. ಹೀಗೆ ಕಿಟ್ಟುಮಾವ ಹೇಳಿ ನಿಲ್ಲಿಸಿದ್ದು.

"ನಾಣಿಕುಟ್ಟಿ ಪಾಪ ಇರಬಹುದು. ಆದರೆ ಆ ಪಾಚ್ಚ ತೀರ ಮೋಸ. ನಿನಗೆ ಗೊತ್ತಿಲ್ಲ. ಅವನು ಪುನ್ನಂಬ್ರದಲ್ಲಿ ಮನುಷ್ಯರನ್ನು ಇರಿದು ಕೊಂದವನು."

ಕಾತ್ಯಾಯಿನಿಗೆ ಅದೊಂದೂ ಅರ್ಥವಾಗಲಿಲ್ಲ.

"ಕಿಟ್ಟುಮಾವ ಏನು ಹೇಳಿದರೂ ಈ ಊರಿನಲ್ಲಿ ಹುಟ್ಟಿ ಬೆಳೆದವರಲ್ಲಿ ಯಾವ ಹುಡುಗನೂ ಮಾವನ ಮುಖ ನೋಡಿ ಹಾಗೆ ಹೇಳಿದ್ದಿಲ್ಲ. ಮಾವನ ಹತ್ರ ಯಾರಿಗೆ ಆಗ್ತಿರಲಿಲ್ಲ? ಹಾಗೆ ವಿರೋಧ ಉಂಟಾಗೋ ಅಂಥಾದನ್ನು ಏನು ಮಾಡಿದ್ದರು? ಮಾವನಿಗೂ ಯಾರೊಡನೆಯೂ ವಿರೋಧವಿರಲಿಲ್ಲ. ಪೋಲೀಸಿನವರು ಸಮಯಕ್ಕೆ ತಕ್ಕ ಹಾಗೆ ಏನಾದರೂ ಹಿಂಸೆ ಕೊಡ್ತಾರೆ. ಪಾಪ, ಈ ಊರಿನ ಜನರನ್ನು ಹೊಡೆದು ಸಾಯಿಸ್ತಾರೆ."

ಒಂದು ಕ್ಷಣ ಬಿಟ್ಟು ಕಾತ್ಯಾಯಿನಿ ಹೇಳಿದಳು: "ನಾನು ಕೇಳೋದು, ಈ ಏನೂ ತಿಳಿಯದ ಜನರಿಗೆ ಹಿಂಸೆ ಕೊಡೋದು ಯಾಕೆ? ಮಾವ ಹೋದರು. ಇನ್ನು ಈ ಊರಿನವರ ಜೊತೆಯಲ್ಲಿ ಹಗೆತನ ಕಟ್ಟಿಕೊಳ್ಳಬೇಕು ಅಂತಲಾ?"

ಕೇಶವ ಪಿಳ್ಳೆ ಮಗಳನ್ನು ಹತ್ತಿರ ಕೂರಿಸಿಕೊಂಡು ಮೈದಡವುತ್ತಿದ್ದ. ಕಾತ್ಯಾಯಿನಿಯಮ್ಮ ಗಂಡನ ಹತ್ತಿರ ಬಂದು ಗಡುಸಾಗಿ ಕೇಳಿದಳು:

"ಇದೆಲ್ಲ ಏನು ಅಂತ?"

ಕೇಶವ ಪಿಳ್ಳೆ ಹೆಂಡತಿಯ ಮುಖ ನೋಡಿದ. ಆ ಮುಖಭಾವನೆಯಲ್ಲಿ, ಆ ಸ್ವರದಲ್ಲಿ ಜೀವನದಲ್ಲಿಯೇ ಮೊದಲನೆಯ ಸಲ ಅವಳು ಹಾಗೆ ಮಾತನಾಡಿದ್ದದ್ದು.

ಎಷ್ಟೋ ವರ್ಷಗಳಿಗೆ ಮೊದಲು ತಂದೆ ತಾಯಿಗಳು ತನ್ನ ಅಭಿವೃದ್ಧಿಗೆ ತಟಸ್ಥರಾಗುತ್ತಿದ್ದಾರೆ ಎಂದು ಕೇಶವ ಪಿಳ್ಳೆ ಹೇಳಿದಾಗ ಅದೇನು ಹೇಳಿದ್ದು ಎಂದು ಕಾತ್ಯಾಯಿನಿ ಕೇಳಿದ್ದಳು. ಆ ಪಾದಗಳಿಗೆ ಬಿದ್ದು ಕ್ಷಮೆ ಕೇಳುವಂತೆ ಹೇಳಿದ್ದಳು. ಅಂದು ಓದುಬರೆಹ ಬಾರದ, ಪ್ರಪಂಚ ಗೊತ್ತಿಲ್ಲದ ಆಧುನಿಕ ಜೀವನದ ರೀತಿನೀತಿಗಳನ್ನು, ಧರ್ಮನೀತಿಗಳನ್ನು ವಿವರಿಸಲಾಗದ ಆ ಹಳ್ಳಿಯ ಹೆಣ್ಣು ಅವಳ ಆಜ್ಞಾಶಕ್ತಿಯನ್ನು ತೋರಿಸಿದ್ದದ್ದು. ಆ ಆಜ್ಞಾಶಕ್ತಿಗೆ ಆಧಾರವಾದ ತತ್ವಶಾಸ್ತ್ರವೂ ಸಂಸ್ಕಾರವೂ ಪರಂಪರಾಗತವಾಗಿ ಸಿಕ್ಕಿದ್ದಾಗಿತ್ತು. ಈಗ ಪುನಃ ಆ ಆಜ್ಞಾಶಕ್ತಿಯೂ ವ್ಯಕ್ತಿತ್ವವೂ ತಲೆಎತ್ತಿ ನಿಂತಿದ್ದುವು.

ಕೇಶವ ಪಿಳ್ಳೆ ಅವಳ ಮುಂದೆ ತಲೆತಗ್ಗಿಸಿದಂತೆ ತೋರಿತು. ಅವನು ಧೈರ್ಯದಲ್ಲಿ ನಿಂತು ಉತ್ತರ ಹೇಳಬೇಕಾಗಿದ್ದ ಪ್ರಶ್ನೆ ಅದು. ಕಾತ್ಯಾಯಿನಿ ಪುನಃ ಕೇಳಿದಳು:

"ಇದೆಲ್ಲ ಏನು ಅಂತ?"

ಸ್ವರ ತುಂಬ ಕರ್ಕಶವಾಗಿತ್ತು. ಕೇಶವ ಪಿಳ್ಳೆ ಕೇಳಿದ:

"ಹ್ಞು, ಏನು?"

"ಈ ಊರಿನವರನ್ನೆಲ್ಲ ಹೊಡೆದು ಸಾಯಿಸ್ತೀರಾ?"

ಕೇಶವ ಪಿಳ್ಳೆಗೆ ವಿಷಯ ಅರ್ಥವಾಯಿತು. ಅದೇ ವಿಷಯ ಆಗಿದ್ದರೆ ಆತನಿಗೆ ಅದನ್ನು ಹೇಳಬಹುದಾಗಿತ್ತು.

ಕೇಶವ ಪಿಳ್ಳೆಗೆ ಶಕ್ತಿ ಬಂದಿತು. "ನೀನು ಹೋಗಿ ನಿನ್ನ ಕೆಲಸ ನೋಡು. ಅದು ಸರ್ಕಾರದ ಕೆಲಸ. ಅದರಲ್ಲಿ ತಲೆಹಾಕಬೇಡ."

ಅವಳು ಜೀವನದಲ್ಲಿ ಮೊತ್ತಮೊದಲಾಗಿ ವಾದಿಸಲು ಸಿದ್ಧಳಾಗಿದ್ದಳು. ಬೇರೊಂದು ವಿಷಯದಲ್ಲಿ ಬೇರೊಂದು ಸಂದರ್ಭವಲ್ಲಾಗಿದ್ದರೆ ಕಾತ್ಯಾಯಿನಿ ಹಿಂದಿರುಗಿ ತನಗೆ ಅರ್ಥವಾಗದ್ದು ತಲೆಹಾಕುವುದಕ್ಕೆ ಅರ್ಹತೆಯೂ ಇಲ್ಲದ ವಿಷಯವೆಂದು ಭಾವಿಸಿ ತನ್ನ ಪಾಡಿಗೆ ತಾನು ಹೋಗುತ್ತಿದ್ದಳು. ಇದು ಆ ಊರಿನ ಎಲ್ಲ ಹೆಣ್ಣುಗಂಡಿನ ವಿಚಾರ. ಮೇಲಾಗಿ ಅವಳ ನಾಣೆಕುಟ್ಟಿಯ ವಿಚಾರ.

ಅವಳು ಹೇಳಿದಳು: "ಈ ಪೋಲೀಸಿನವರು ಹೇಳೋದೆಲ್ಲ ಸುಳ್ಳು. ಈ ಊರಿನಲ್ಲಿ ಯಾರೂ ಈ ಕೆಲಸ ಮಾಡೋದಿಲ್ಲ. ಮಾಡಬೇಕು ಅಂತ ಆಲೋಚನೆ ಕೂಡ ಮಾಡೋದಿಲ್ಲ. ಮಾವ ಬಾಳಿದ್ದು ಹಾಗೆ. ಮಾವನ ಜೊತೆಯಲ್ಲಿ ಜನರು ಹಾಗಿದ್ದರು."

ಕೇಶವ ಪಿಳ್ಳೆಯ ಮುಖ ಗಂಭೀರವಾಯಿತು. ಅವನು ಗಂಡ ಎನ್ನುವುದಕ್ಕಿಂತಲೂ ಹೆಚ್ಚಾಗಿ ಅಧಿಕಾರಿಯಂತಾದ. "ಹ್ಞು ನಿಲ್ಲಿಸು. ನಿನ್ನ ಕೆಲಸ ನೀನು ನೋಡು, ಹೋಗು."

ಕಾತ್ಯಾಯಿನಿ ಬಿಟ್ಟುಕೊಡಲಿಲ್ಲ: "ಪಾಪದ ಜನರನ್ನು ಹೀಗೆಲ್ಲ ಹೊಡೆಸಿ ಕೊಲ್ಲಿಸಿದರೆ ದೇವರು ಶಿಕ್ಷೆ ಕೊಡ್ತಾನೆ. ಇದರ ಪಾಪ ಕುಟುಂಬಕ್ಕೆ ಅಂಟುತ್ತೆ. ಅದನ್ನ ಎಲ್ಲರೂ ಅನುಭವಿಸಬೇಕಾಗುತ್ತೆ. ಆದ್ದರಿಂದ ಈ ಕೆಲಸ ಬೇಡ."

ಕೇಶವ ಪಿಳ್ಳೆ ಅದನ್ನು ಕೇಳಿಸಿಕೊಂಡಂತೆ ತೋರಲಿಲ್ಲ. ಆತ ಅದನ್ನು ಸ್ವಾಗತಿಸಿದಂತೆ ಹೇಳಿದ: "ನನ್ನ ತಂದೇನ ಇರಿದುಕೊಂದು........."

ಕಾತ್ಯಾಯಿನಿ ಕೇಶವ ಪಿಳ್ಳೆಯೊಡನೆ ಕೇಳಿದಳು: "ಅದನ್ನು ಮಾಡಿದ್ದು ಯಾರು? ಮಾಡಿದವರನ್ನು ಹೊಡೀತಾರ? ನಾಣಿಕುಟ್ಟಿಯಾ ಮಾಡಿದ್ದು? ಅಥವಾ ಕಲ್ಯಾಣಿಯೋ?"

ಕೇಶವ ಪಿಳ್ಳೆ ಅತಿ ರೂಕ್ಷವಾಗಿ ಒಮ್ಮೆ ಅವಳ ಕಡೆ ನೋಡಿದ. ಅದು ಗಂಡನ ನೋಟ. ತೊಂದರೆ ಕೊಡುವ ಹೆಂಡತಿಯ ಮೇಲೆ ರೇಗುತ್ತ ಗಂಡ ನೋಡುವ ನೋಟ. ಆ ನೋಟದ ಮುಂದೆ ಕಾತ್ಯಾಯಿನಿ ಸ್ವಲ್ಪ ತಗ್ಗಿದಂತೆ ತೋರಿತು. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

"ನಾನು ಇಲ್ಲಿಗೆ ಬಂದ ಕಾಲದಿಂದ ನನ್ನ ಜೊತೆಯವರು ಕಲ್ಯಾಣಿ ಮತ್ತು ನಾಣಿಕುಟ್ಟಿ. ನಾವು ಒಟ್ಟಿಗೆ ಕಾಲ ಕಳೆದದ್ದು. ನಾವು ಮೂರು ಜನರಾದರೂ ನಮ್ಮ ಆತ್ಮ ಒಂದೇ. ನನಗೆ ಆಸ್ತಿಪಾಸ್ತಿಯಿರೋದಾಗಲೀ ನನ್ನ ಮಗಳ ತಂದೆ ದೊಡ್ಡ ಉದ್ಯೋಗಸ್ಥನಾಗಿರೋದಾಗಲೀ ಅಲ್ಲ ಅವರಿಗೆ ಬೇಕಾದದ್ದು. ಆ ಬಡ ಜೀವಿಗಳಿಗೆ ನನ್ನ ಮೇಲೆ ಪ್ರೀತಿಯಿದೆ. ಅದಕ್ಕೆ ಅವರಿಗೆ ಈ ಶಿಕ್ಷೆ. ಈಗ ಪಾಪ ನಾಣಿಕುಟ್ಟಿ ಜೈಲಿಗೆ ಹೋಗಿ........."

ಕಾತ್ಯಾಯಿನಿ ನಿಲ್ಲಿಸಲಿಲ್ಲ. ಅಷ್ಟರಲ್ಲಿ ಗಂಡನ ಕಟುವಾದ ಒಂದು ಆಜ್ಞೆ ಹೊರಬಂದಿತು:

"ಹ್ಞು ನಿಲ್ಲಿಸು."

ಅವಳು ನಿಲ್ಲಿಸಿದಳು. ಕಾತ್ಯಾಯಿನಿ ಹೇಳಬೇಕೆಂದಿದ್ದುದನ್ನು ಪೂರ್ತಿ ಹೇಳಿ ಮುಗಿಸಲಾಗಿರಲಿಲ್ಲ. ಆ ಸ್ಥಿತಿಯಲ್ಲಿ ಆ ಸಂಗತಿಯನ್ನು ಅವಳು ಹಾಗೆ ಎದುರಿಸುತ್ತಿದ್ದದ್ದು ಅವಳಿಗೆ ಹೇಳುವುದಕ್ಕೆ ಹಾಗೆಯೇ ಗೊತ್ತಿದ್ದದ್ದು. ಅದು ಸರಿಯಾಗಿ ಅರ್ಥವಾಗುವ ಗಂಡನೂ ಅಲ್ಲ. ಕಾತ್ಯಾಯಿನಿ ಸೋತಳು. ತನಗೂ ಆ ಸ್ತ್ರೀಯರಿಗೂ ಇದ್ದ ಸ್ನೇಹವನ್ನು ಹೇಗೆ ವಿವರಿಸಬೇಕೆಂಬುದು ತಿಳಿಯದು. ಅವಳು ಅಳುತ್ತ ಹೇಳಿದಳು: "ನನಗೆ ಯಾರೂ ಇಲ್ಲದ ಹಾಗಾಯ್ತು. ಅತ್ತೆ ಪಾಪ ಹೋದರು. ನನ್ನ ನಾಣಿಕುಟ್ಟಿ. ಕುಞ್ಞಿಕುಟ್ಟಿ. ಕಲ್ಯಾಣಿ—ಶತ್ರುಗಳಾದರು. ಅವರು ಈಗ ನಾನು ಹೀಗೆ ಒಂಟಿಯಾದವಳಲ್ಲಾ ಅಂತಾರೆ. ಇನ್ನು ಮೇಲೆ ಅವರು ನನ್ನ ಕಂಡರೆ ಮಾತನಾಡಿಸೋದಿಲ್ಲ. ನಾನು ಹೇಳಿದರೆ ನಂಬೋದಿಲ್ಲ ನನಗೆ ಯಾರೂ ಇಲ್ಲ."

ಆ ನಿಸ್ಸಹಾಯಕತೆಯೂ ಕೇಶವ ಪಿಳ್ಳೆಗೆ ಅರ್ಥವಾಗಲಿಲ್ಲ. ಅದು ಆತನಿಗೆ ಅರ್ಥವಾಗುವುದೂ ಅಲ್ಲ. ಅವನ ಜೀವನವನ್ನು ಕುರಿತೂ ಆಲೋಚಿಸಿ ನೋಡುತ್ತಾನೆ. ಅವನಿಗೆ ಯಾರಿದ್ದಾರೆ? ಪ್ರೀತಿಸುವ ತಂದೆ ತಾಯಿಗಳಿದ್ದರು. ಆ ಪ್ರೀತಿಯಿಂದ ದೊರೆಯುವ ಸಾಂತ್ವನವನ್ನು ಒಮ್ಮೆಯೂ ಆತ ಅವಶ್ಯಪಟ್ಟಿರಲಿಲ್ಲ. ಪ್ರೀತಿಯ ಹೆಂಡತಿಯೂ ಇದ್ದಳು. ಅವಳ ಸಾಂತ್ವನವೂ ಬೇಡ ಎಂದು ಕೊಂಡಿದ್ದ. ಲೋಕವೆಲ್ಲ ಶತ್ರುಗಳಲ್ಲವೆ? ಆಗ ಅವನಿಗೆ ಅದು ಅರ್ಥವಾಗುವುದಿಲ್ಲವೆ?

ಕಾತ್ಯಾಯಿನಿ ಬಹಳ ತಗ್ಗಿದ ಧ್ವನಿಯಲ್ಲಿ ಕೇಳಿಕೊಂಡಳು: "ನಾಣಿಕುಟ್ಟಿಯನ್ನು ದಯವಿಟ್ಟು ಬಿಡಿಸಿ. ಈ ಮಗಳನ್ನು ನೆನಸಿಕೊಂಡು, ತೀರಿಕೊಂಡು ಮೇಲಿರುವ ತಂದೆ ತಾಯಿಗಳನ್ನು ನೆನಸಿಕೊಂಡು........."

ಕೇಶವ ಪಿಳ್ಳೆ ಗರ್ಜಿಸಿದ: "ನೀನೂ ನಿನ್ನ ನಾಣಿಕುಟ್ಟಿಯೂ! ಈ ಹೆಣಗಳ ಜೊತೆಯಲ್ಲಿ ನಿನ್ನ ಸಹವಾಸ!"

ನಾಣಿಕುಟ್ಟಿಯ ಜೊತೆಯಲ್ಲಿ ನಡೆದಾಡುವುದು ತಪ್ಪು ಎಂದು ಗಂಡ ಹೇಳುತ್ತಿರುವುದು. ಅದಕ್ಕೆ ಸಮಾಧಾನ ನೀಡಬೇಕೆ?

ಅವಳು ಹೇಳಿದಳು: "ನಾನಿಲ್ಲಿಗೆ ಬಂದಾಗ ನನಗೆ ಪರಿಚಯವಾದದ್ದು ಅವರು. ಬೇರೆ ಸ್ನೇಹಿತೆಯರು ಜೀವನದಲ್ಲಿ ಇಷ್ಟಪಡುವುದಕ್ಕೆ ಸಿಕ್ಕಿಲ್ಲ. ಅವರಿಗೂ ನನ್ನ ಕಂಡರೆ ಪ್ರೀತಿಯಿತ್ತು. ಅದು ನನ್ನ ದೋಷವಲ್ಲ. ನಾನು ಅರಿತು ಇಷ್ಟಪಟ್ಟದ್ದಲ್ಲ."

ಮನುಷ್ಯತ್ವವಲ್ಲದ ಕ್ರೂರತೆಯೊಡನೆ ಕೇಶವ ಪಿಳ್ಳೆ ಹೇಳಿದ: "ನಿನ್ನ ನಾಣಿಕುಟ್ಟಿ ಜೈಲಿನಲ್ಲಿ ನರಳಬೇಕಾಗಿದ್ದರೆ ನರಳಲಿ. ಈ ಊರಿನ ಜನರೆಲ್ಲರೂ ನರಳಲಿ."

ಕಾತ್ಯಾಯಿನಿ ನಡುಗಿಹೋದಳು. ಆ ನಡುಕದಲ್ಲಿ ಆತ್ಮದಿಂದ ಏನೋ ಮೇಲೆದ್ದು ನಿಂತಿತು. ಅವಳಿಗೆ ತಿಳಿಯದಂತೆಯೇ ಒಂದು ಪ್ರಶ್ನೆ ಹೊರಗೆ ಬಂದಿತು.

"ಈ ಹಣ, ಅಧಿಕಾರ ಎಲ್ಲ ಯಾಕೆ? ನಾನು ಕೇಳೋದು ಇವೆಲ್ಲ ಯಾಕೆ ಅಂತ."

ಕಾತ್ಯಾಯಿನಿ ನಿಲ್ಲಿಸಲಿಲ್ಲ: "ತಂದೆ ಯಾವಾಗಲೂ ಹೇಳ್ತಿದ್ದರು: 'ಇದೆಲ್ಲ ಮನುಷ್ಯನ ಗುಣದಿಂದ' ಅಂತ."

ಅದನ್ನು ಹೇಳುವಾಗ ತಕ್ಕದ್ದನ್ನು ಏನೋ ಸರಿಯಾಗಿ ಹೇಳಿದೆ ಎನ್ನುವ ಒಂದು ತೃಪ್ತಿ ಕಾತ್ಯಾಯಿನಿಗಿತ್ತು. ಅವಳು ಹೇಳಿದಳು: "ಇನ್ನೂ ಏನೇನು ಅನುಭವಿಸಬೇಕಾಗಿದೆಯೋ ಭಗವಂತಾ, ನಂಗೊತ್ತಿಲ್ಲ."

ಗಟ್ಟಿಯಾಗಿ ಅಳುತ್ತಾ ಕಾತ್ಯಾಯಿನಿ ಒಳಗೆ ಹೋದಳು. ಕೇಶವ ಪಿಳ್ಳೆ ಅಲ್ಲಿ ಅತ್ತಿತ್ತ ನಡೆದಾಡಿದ. ಆತ ಚಿಂತಾಮಗ್ನನಾಗಿದ್ದ. ಎಷ್ಟೋ ಹೊತ್ತು ಕಳೆದ ಮೇಲೆ ಒಬ್ಬ ಪೋಲೀಸಿನವನನ್ನು ಕರೆದು ಹೇಳಿದ:

"ಒಬ್ಬಳು ಸ್ತ್ರೀಯನ್ನು—ಹೆಸರೇನು?......... ನಾಣಿಕುಟ್ಟಿ ಏನೋ ಇರಬೇಕು. ಅವಳನ್ನು ವಿಚಾರಿಸಿ ಆಯ್ತಾ?"

"ಎಸ್ ಸಾರ್. ಇವತ್ತು ಬಿಟ್ಟು ಕಳಿಸಿದೆವು."

ನಾಣಿಕುಟ್ಟಿಯನ್ನು ಬಿಟ್ಟ ಸುದ್ದಿ ತಿಳಿದಾಗ ಅವಳನ್ನು ಕಾಣುವ ಆಗ್ರಹವುಂಟಾಯಿತು ಕಾತ್ಯಾಯಿನಿಗೆ. ಅದು ಆಗ್ರಹವಾಗಿರಲಿಲ್ಲ. ತಡೆಯಲಾರದಂತಹ ಉತ್ಸಾಹ. ಅವಳನ್ನು ಬಾಚಿ ತಬ್ಬಿಕೊಳ್ಳಬೇಕು—ನಡೆದದ್ದನ್ನೆಲ್ಲ ಹೇಳಬೇಕು. ನನ್ನ ಗಂಡ ಹಾಗೆ ಎಂದು ಹೇಳಬೇಕು. ನಾಣಿಕುಟ್ಟಿಯ ಗಂಡ ಕೊಚ್ಚುಕುಟ್ಟನ್ ನಾಯರ್ ಹಾಗಲ್ಲ. ಕಾತ್ಯಾಯಿನಿ ಕೆಲವು ಸಲ ಹೇಳಿರುವ ಹಾಗೆ ಅಷ್ಟೊಂದು ಸಾಧು ಮನುಷ್ಯನೂ ವಿಶ್ವಾಸ

ವುಳ್ಳವನೂ ಅಲ್ಲ. ಎಲ್ಲವನ್ನೂ ಹೇಳಬೇಕು. ತನಗೆ ಇದು ಗೊತ್ತಿರಲೇ ಇಲ್ಲ. ಕೇಳಿಯೂ ಇರಲಿಲ್ಲವೆಂದು ಹೇಳಬೇಕು. ನಾಣಿಕುಟ್ಟಿ ನಂಬುತ್ತಾಳೆ. ಎಷ್ಟೆಷ್ಟು ಸಲ ನಾಣಿಕುಟ್ಟಿ ಕಾತ್ಯಾಯಿನಿಯನ್ನು ಕೇಶವ ಪಿಳ್ಳೆ ಒಳ್ಳೆಯ ಮನುಷ್ಯ. ಪ್ರೀತಿಯಿರುವವನು ಎಂದು ಹೇಳಿ ನಂಬಿಸಿದ್ದಳು. ಕೇಶವ ಪಿಳ್ಳೆಗೆ ವಿರೋಧವಾಗಿ ಏನಾದರೂ ಹೇಳಿದರೆ ಹಾಗೆ ಹೇಳಬಾರದು ಎಂದು ನಾಣಿಕುಟ್ಟಿ ಸುಮ್ಮನಿರಿಸಿದ್ದುಂಟು. ಈಗ ಅವಳೂ ತಪ್ಪು ತಿಳಿಯುವಂತಾಯಿತು.

ಕಾತ್ಯಾಯಿನಿ ಒಂದು ಟವಲ್ ತೆಗೆದುಕೊಂಡು ಹೊರಗೆ ಹೊರಟಳು.

"ಎಲ್ಲಿಗೆ?"

ಸಿಡಿಲಿನ ಹಾಗಿದ್ದ ಒಂದು ಆಜ್ಞೆ ಕಾತ್ಯಾಯಿನಿಯ ಕಿವಿಗೆ ಬಿದ್ದಿತು. ಅವಳು ನಿಂತು ಬಿಟ್ಟಳು. ಕೇಳಿದ್ದು ಕೇಶವ ಪಿಳ್ಳೆ.

"ಎಲ್ಲಿಗೂ ಹೋಗಬೇಡ. ಇಲ್ಲಿ ಬಾ."

ಕಾತ್ಯಾಯಿನಿ ಅಲುಗಾಡಲಾಗದೆ ನಿಂತಳು. ಸ್ವಲ್ಪ ಹೊತ್ತು ಕಳೆಯಿತು. "ಬಾಗಿಲಿನ ಹತ್ರ ಹಾಗೆ ನಿಂತುಕೊಳ್ಳಬೇಡ. ಇಲ್ಲಿ ಬಾ."

ಅವಳು ಒಂದು ಬೊಂಬೆಯ ಹಾಗೆ ಹಿಂದಿರುಗಿ ಬಂದು ಆತನ ಹತ್ತಿರ ನಿಂತು ಕೊಂಡಳು. ಅವಳನ್ನು ಆಪಾದ ಮಸ್ತಕ ನೋಡಿ ಕೇಶವ ಪಿಳ್ಳೆ ಹೇಳಿದ:

"ಹೊರಗೆಲ್ಲಿಯೂ ಹೋಗಬೇಡ."

ಸ್ವಲ್ಪ ಸಮಯ ಬಿಟ್ಟು ಆತ ಹೇಳಿದ:

"ಅಭಿಮಾನ ಅಂತನ್ನು ಬಿಟ್ಟು ಕಂಡ ಕಂಡ ಕಡೆ ನಡೆಯೋದು ಬಂತು."

ಕಾತ್ಯಾಯಿನಿ ಹೇಳಿದಳು: "ನಾನು ಹಾಗೇನೂ ನಡೆದಿಲ್ಲ."

"ಹ್ಞು! ನೀನು ಯಾರ ಹೆಂಡತಿ ಅಂತ ಗೊತ್ತ?"

ಆಕೆ ಏನೂ ಮಾತಾಡಲಿಲ್ಲ. ಕೇಶವ ಪಿಳ್ಳೆ ಹೇಳಿದ: "ಇನ್ನು ಮೇಲೆ ಹಿಂದಿನ ಹಾಗೆ ತಲೆ ಬಿರಿಹುಯ್ದುಕೊಂಡು ಪಿಶಾಚಿ ಹಾಗೆ ನಡೆದಾಡಬೇಡ. ಹಿಂದೆ ನಡೆದಾಡಿದ್ದು ಸಾಕು."

ಸ್ವಲ್ಪ ಹೊತ್ತು ಅಲ್ಲಿ ಮೌನ ಆವರಿಸಿತ್ತು. ಕೇಶವ ಪಿಳ್ಳೆ ಹೇಳಿದ: "ಒಬ್ಬಳೇ ಹೋದಾಗ ಯಾರಾದರೂ ಹಿಡಿದು ಕೊಂಡರೇನು ಮಾಡ್ತೀ?"

ಕಾತ್ಯಾಯಿನಿಯಮ್ಮ ಹೇಳಿದಳು: "ನನ್ನನ್ನ ಯಾರೂ ಏನೂ ಮಾಡೋದಿಲ್ಲ. ನಾನು ನನ್ನ ನಾಣಿಕುಟ್ಟೀನ ನೋಡೋದಕ್ಕೆ ಹೋಗ್ತಿದ್ದೀನಿ."

"ನನ್ನ ನಾಣಿಕುಟ್ಟಿ! ಯಾರದು?"

"ನಾನು ಇಲ್ಲಿಗೆ ಬಂದ ದಿನದಿಂದ ನನ್ನನ್ನು ಪ್ರೀತಿಸಿದ ಸ್ನೇಹಿತೆ. ನನ್ನ ಮನಸ್ಸಿಗೆ ಬೇಸರವಾದಾಗಲೆಲ್ಲ ನನ್ನನ್ನು ಸಮಾಧಾನ ಮಾಡಿದವಳು. ನನಗೋಸ್ಕರ ದಾರಿ ಸವೆಸಿದವಳು ಅವಳು. ನನಗೆ ಜೊತೆಯವರಾಗಿ ಬೇರೆ ಯಾರೂ ಇಲ್ಲ."

ಕೇಶವ ಪಿಳ್ಳೆ ಆಜ್ಞಾಪಿಸಿದ: "ಸಾಕು, ಸಾಕು. ಇನ್ನು ಮೇಲೆ ಎಲ್ಲಿಗೂ ಹೋಗ ಬೇಡ. ಒಳಕ್ಕೆ ಹೋಗು."

ಕಾತ್ಯಾಯಿನಿ ಒಳಗೆ ಹೋದಳು.

ಆ ಅನುಭವ ಜೀವನದಲ್ಲಿ ಮೊದಲನೆಯದಾಗಿತ್ತು. ಇನ್ನು ಮುಂದಿನ ಜೀವನದ ಪ್ರಾರಂಭವೂ ಅದಾಗಿತ್ತು. ಅವಳಿಗೆ ಜೀವನದಲ್ಲಿ ಬೇಕಾದವರೆಲ್ಲ ಇದ್ದರು. ಅವಳ ಮಾವ. ಅತ್ತೆ—ಅವರು ತನಗೆ ತಂದೆ ತಾಯಿಗಳೇ ಆಗಿದ್ದರು. ಮೂವರು ಜೊತೆಗಾತಿ ಯರು, ಮಗಳು. ಅಲ್ಲಿ ದೂರದಲ್ಲಿ, ತಿರುವನಂತಪುರದಲ್ಲಿ ಸೂರ್ಯನಂತೆ ಮೇಲೇರಿ ಬರುತ್ತಿದ್ದ ಅವಳ ಗಂಡ. ಆ ಜೀವನ ಸುಖವಾಗಿತ್ತು. ಸಂತೃಪ್ತಿಯಿಂದೊಡಗೂಡಿತ್ತು. ಒಬ್ಬ ತಾಯಿಯಾಗಿದ್ದರೂ ಮಧ್ಯಮ ವಯಸ್ಸಿಗೆ ಬಂದಿದ್ದರೂ ಪಪ್ಪು ಪಿಳ್ಳೆಯ, ಕುಟ್ಟಿಯಮ್ಮನ ಪ್ರೀತಿಯ ಮಗಳಾಗಿದ್ದಳು. ಹಾಗೆ ಯಾವ ವ್ಯತ್ಯಾಸವೂ ಇಲ್ಲದ ಹೆಣ್ಣುಮಗಳಂತೆ ಕುಣಿದಾಡಿಕೊಂಡು ನಡೆದಾಡಿದ್ದಳು. ಹತ್ತು ನಿಮಿಷ ಬಿಡುವು ಸಿಕ್ಕಿದರೂ ಸಾಕು. ಅವಳು ನಾಣಿಕುಟ್ಟಿಯ ಮನೆಗೆ ಹೋಗುತ್ತಿದ್ದಳು. ಆಗ ಆ ವಾಸನೆ ತಿಳಿದವರಂತೆ ಕಲ್ಯಾಣಿಯೂ ಕುಞ್ಞಿಕುಟ್ಟಿಯೂ ಅಲ್ಲಿಗೆ ಬರುತ್ತಿದ್ದರು. ಅವಳಿಗೆ ಒಂದು ಮನೆಯ ಜವಾಬ್ದಾರಿಯನ್ನು ಹೊರುವುದು ತಿಳಿಯದು. ಹೇಗೆ ಆ ಜವಾಬ್ದಾರಿ ಯನ್ನು ಹೊರುವುದು? ಆಗ ಜೀವನ ಅಷ್ಟೊಂದು ಹೊರೆಯಾಗಿರಲಿಲ್ಲ. ಅವಳ ತಂದೆ ತಾಯಿಗಳಂತಿದ್ದವರು ಹೋದರು. ಜೊತೆಗಾತಿಯರಿಲ್ಲದಾದರು. ಮಗಳಿದ್ದಾಳೆ. ದೂರದಲ್ಲಿದ್ದ ಗಂಡ ಹತ್ತಿರ ಬಂದಿದ್ದಾನೆ. ಆ ಗಂಡ ಹತ್ತಿರ ಬಂದಾಗ ಉಂಟಾದ ಅನುಭವ ಎಷ್ಟೊಂದು ನೋವನ್ನುಂಟುಮಾಡುತ್ತಿದೆ!

ಇನ್ನು ಮೇಲೆ ಜೀವನದಲ್ಲಿ ಆ ತಾಯಿ ಇಲ್ಲ. ಆ ತಂದೆ ಇಲ್ಲ. ಜೊತೆಗಾತಿಯ ರಿಲ್ಲ. ಮುಂದೆ ಹೊಸ ಜೊತೆಗಾತಿಯರನ್ನು ಮಾಡಿಕೊಳ್ಳಲು ಸಾಧ್ಯವಿಲ್ಲ.

ಅಡಿಗೆಮನೆಯ ಮೂಲೆಯಲ್ಲಿ ಹೋಗಿ ಕುಳಿತುಕೊಂಡು ಕಾತ್ಯಾಯಿನಿಯಮ್ಮ ಅದನ್ನೆಲ್ಲ ನೆನಸಿಕೊಂಡು ಅಳುತ್ತಿದ್ದಳು. ಅವಳಿಗೆ ಯಾರ್ಯಾರೂ ಇಲ್ಲ. ಕೇಶವ ಪಿಳ್ಳೆ ನಿಧಾನವಾಗಿ ಅಲ್ಲಿಗೆ ಹೋದ.

"ಇನ್ನು ಮೇಲೆ ಇಲ್ಲಿ ಹೀಗೆ ಕುಳಿತುಕೊಂಡು ಅದೇ ಕೊಳಕು ಹೆಣ್ಣಾಗಿ ತಲೆ ಕೆದರಿ ಕೊಂಡು ದರಿದ್ರದವಳಾಗಿ ಇರಕೂಡದು."

ಕಾತ್ಯಾಯಿನಿಯಮ್ಮ ಹೇಳಿದಳು: "ಅವರು ಯಾರೂ ಸುಳ್ಳು ಹೇಳೋರಲ್ಲ."

"ಅವರೂ ಬೇಡ. ಆ ಹಾಳು ಸಹವಾಸ ನಿನಗೆ ಬೇಡ."

"ಮತ್ತೆ ನಾನು ಹೇಗೆ ಜೀವಿಸಲಿ? ನನಗೆ ಯಾರಿದ್ದಾರೆ?"

"ಹ್ಞ—" ಕೇಶವ ಪಿಳ್ಳೆ ಹೋದ.

ನಾಣಿಕುಟ್ಟಿ ಈಗ ಏನು ಆಲೋಚನೆ ಮಾಡುತ್ತಿರಬಹುದು? ಕಾತ್ಯಾಯಿನಿಯ ಕರುಳಿಗೆ ಇರಿದಂತಾಯಿತು. ಅವಳು ಜಗಳವಾಡುವುದಿದ್ದರೆ ಜಗಳವಾಡಲಿ. ಚಿಂತೆಯಿಲ್ಲ.

ಆದರೂ ಅವಳ ಮನಸ್ಸಿಗೆ ಬೇಸರವಾಗಿದ್ದಾಗ ನಾನು ಹತ್ತಿರ ಇಲ್ಲವಲ್ಲ !

ನಾಣಿಕುಟ್ಟಿಯನ್ನು ಅಲ್ಲಿಗೆ ಬರಮಾಡಲು ಕಿಟ್ಟುಮಾವನ ಮೂಲಕ ಏರ್ಪಾಟು ಮಾಡಿದಳು.

ಕಾತ್ಯಾಯಿನಿ ತುಂಬ ಕಳವಳದಿಂದ ಕಾಯುತ್ತಿದ್ದಳು. ತುಂಬ ತಡಮಾಡಿ ಕಿಟ್ಟು ಮಾವ ಬಂದದ್ದು. ನಾಣಿಕುಟ್ಟಿ ಬರಲಿಲ್ಲ.

"ಯಾಕೆ ಕಿಟ್ಟುಮಾವ?"

ಒಂದು ನಿಟ್ಟುಸಿರಿನೊಂದಿಗೆ ಕಿಟ್ಟುಮಾವ ಹೇಳಿದರು:

"ಅಕ್ಕಪಕ್ಕದವರೆಲ್ಲ ಒಟ್ಟುಗೂಡಿ ತೀರ್ಮಾನ ಮಾಡಿದ್ದಾರೆ. ಇನ್ನು ಮೇಲೆ ಒಂದು ಮಗು ಈ ಮನೆ ಕಡೆಗೆ ಬರೋದಿಲ್ಲ."

"ಅದಲ್ಲ ಕಿಟ್ಟುಮಾವ ! ನಾಣಿಕುಟ್ಟಿ ಏನು ಹೇಳಿದಳು?"

"ಅವಳು ತುಂಬ ನೊಂದುಕೊಂಡಿದ್ದಾಳೆ. ಕಾತ್ಯಾಯಿನಿ ಹೀಗಾವಳಲ್ಲ. ಅವಳು ಒಂದು ಮಾತು ಹೇಳಿದ್ದಿದ್ದರೆ ನಾನು ಜೈಲಿಗೆ ಹೋಗಬೇಕಾಗಿ ಬರ್ತಿರಲಿಲ್ಲವಲ್ಲ ಅಂತ. ಎಲ್ಲರೂ ಹಾಗೇ ಹೇಳ್ತಾರೆ. ನೀನು ಮನಸ್ಸು ಮಾಡಲಿಲ್ಲ ಅಂತ."

"ನೀವು ಹೇಳಲಿಲ್ಲವಾ ಕಿಟ್ಟುಮಾವಾ?"

"ನಾನು ಹೇಳಿದೆ. ಅದನ್ನು ಅವರು ನಂಬಬೇಕಲ್ಲ !"

"ಹಾಗಾದರೆ ನಾಣಿಕುಟ್ಟಿ ಏನು ಹೇಳಿದಳು?"

"ಅದಾ? ಅವಳು ಹೇಳೋದು ಹೀಗೆ: ಇಷ್ಟು ದಿನ ಸ್ನೇಹಿತೆಯಾಗಿದ್ದದ್ದೇ ಸಾಕು. ನಾವು ಬಡವರು. ಹೀಗೇ ಇರ್ತೀವಿ."

"ಹಾಗಾದರೆ ಅವಳು ಬರೋದಿಲ್ಲವಾ?"

"ಇಲ್ಲ."

# [23]

## ತಂಗಮ್ಮನ ರಾಜೀನಾಮೆ

ಪಪ್ಪು ಪಿಳ್ಳೆಯ ದುರ್ಮರಣದಿಂದ ಕೇಶವ ಪಿಳ್ಳೆಗೆ ಅನುಕೂಲವೇ ಆಯಿತು. ದಿವಾನರು ಸಹಜವಾದ ಸಂತಾಪವನ್ನು ವ್ಯಕ್ತಪಡಿಸಿದರು. ಪಪ್ಪು ಪಿಳ್ಳೆಯ ಮರಣ ಇಡೀ ನಾಡನ್ನು ನಡುಗಿಸಿದಂತಹ ಘಟನೆಯಾಗಿತ್ತು. ಆ ದಾರುಣ ಕೊಲೆಯಲ್ಲಿ ಕಾಂಗ್ರೆಸ್ಸಿನವರಾರೂ ಪ್ರವರ್ತಿಸಿಲ್ಲವೆಂದು ತಿಳಿಸಬೇಕಾಗಿ ಬಂದಿತು. ಕೇಶವ ಪಿಳ್ಳೆಗೆ ವ್ಯತಿರಿಕ್ತವಾದ ನಿರೂಪಣೆಗಳೆಲ್ಲ ಹಾಗೆಯೇ ಶಮನಗೊಂಡುವು.

ಕೇಶವ ಪಿಳ್ಳೆಯನ್ನು ಚೀಫ್ ಸೆಕ್ರೆಟರಿಯಾಗಿ ನಿಯಮಿಸಲಾಯಿತು.

ಒಂದು ದಿನ ಸಂಜೆ ಹೊತ್ತಿನಲ್ಲಿ ಕೇಶವ ಪಿಳ್ಳೆಗೆ ಈ ವಿವರ ತಿಳಿದುಬಂದದ್ದು. ಊರಿಗೆ ಹೋಗಿ ಹಿಂದಿರುಗಿ ಬಂದ ಮೇಲೆ ಆತ ಹೆಂಡತಿಯನ್ನು ಕರೆದು ತಂದಿದ್ದ. ತಿರುವನಂತಪುರಕ್ಕೆ ಬಂದು ಮೂರು ನಾಲ್ಕು ದಿನಗಳು ಕಳೆದಿದ್ದುವು ಅಷ್ಟೆ.

"ಕಾತ್ಯಾಯಿನೀ. ನನಗೆ ಪ್ರೊಮೋಷನ್ ಸಿಕ್ಕಿತು, ಚೀಫ್ ಸೆಕ್ರೆಟರಿಯಾಗಿ."

ಕಾತ್ಯಾಯಿನಿಯಮ್ಮ ಏನೂ ಅರ್ಥವಾಗದೆ ನಿಂತುಕೊಂಡಳು. ಆದರೆ ಉದ್ಯೋಗ ದಲ್ಲಿ ಮೇಲೆ ಬಂದದ್ದು ಎನ್ನುವಷ್ಟು ಅರ್ಥವಾಗಿರಬೇಕು ಅಷ್ಟೆ. ಆಕೆಯ ಮುಖ ಪ್ರಕಾಶಗೊಂಡಿತ್ತು.

ಇಂದು ಆಕೆ ಕೊಳೆ, ಮಸಿ—ಅಂಟಿಸಿಕೊಂಡು ಅಡಿಗೆಮನೆಯಲ್ಲೆಲ್ಲ ನಿಂತಿರು ವುದು. ಆಕೆ ನಿಷ್ಕಳಂಕತೆಯೊಂದಿಗೆ ಕೇಳಿದಳು:

"ಹಾಗಂದರೆ?"

ನಿಜವಾಗಿಯೂ ಆ ಸುದ್ದಿಯನ್ನು ಕೇಳಿ ತುಂಬ ಸಂತೋಷಪಡುವುದಕ್ಕಿರುವುದು ತನಗೆ ಒಂದೇ ಒಂದು ವ್ಯಕ್ತಿ. ಅದು ಕಾತ್ಯಾಯಿನಿಯಮ್ಮ. ಆ ಒಳ್ಳೆಯ ಸುದ್ದಿಯನ್ನು ಮತ್ತಾರಿಗೆ ಬಿಸಿ ಆರದ ಹೊದಲು ತಂದು ಮುಟ್ಟಿಸುವುದು? ಬೇರೊಬ್ಬಳು ಹೆಂಡತಿ ಯಾಗಿದ್ದಿದ್ದಲ್ಲಿ ಎಷ್ಟೊಂದು ಸಂತೋಷದಿಂದ ಉತ್ಸಾಹದಿಂದ ಇರುತ್ತಿದ್ದಳು? ಈ ಹೆಣ್ಣು ದೊಣ್ಣೆ ಹಾಗೆ ನಿಂತುಕೊಂಡು ಕೇಳುತ್ತಿದ್ದಾಳೆ:

"ಹಾಗಂದರೆ?"

ಕೇಶವ ಪಿಳ್ಳೆಯ ಉತ್ಸಾಹವೆಲ್ಲ ಇಳಿದುಹೋದಂತೆ ತೋರುವುದಿಲ್ಲವೆ? ಖಂಡಿತ ವಾಗಿ. ಆತ ಕೇಳಿದರು: "ನಿನಗೆ ಗೊತ್ತಿಲ್ಲವಾ? ನೀನು ಕೇಳಿಯೂ ಇಲ್ಲವಾ?"

ಅದೇ ನಿರ್ಮಲ ಮನಸ್ಸಿನಿಂದ ಕಾತ್ಯಾಯಿನಿ ಹೇಳಿದಳು:

"ನಾನು ಹೇಗೆ ಕೇಳಲಿ? ನನಗೊಂದೂ ಗೊತ್ತಾಗೋದಿಲ್ಲ. ನನ್ನ ಹತ್ರ ಯಾವಾಗಲಾದರೂ ಹೇಳಿದ್ದಿರಾ?"

ಅದನ್ನು ವಿವರಿಸಿಕೊಡುವುದು ಎಂದರೆ—ಅದಕ್ಕೊಂದು ದೊಡ್ಡ ಪಾಠ ಹೇಳ ಬೇಕಾಗುತ್ತದೆ. ಕೇಶವ ಪಿಳ್ಳೆ ಹೇಳಿದರು:

"ಈಗಿರೋ ಕೆಲಸದಿಂದ ಮೇಲಿನ ಕೆಲಸಕ್ಕೆ."

ಆ ನಿರ್ಮಲ ಮನಸ್ಸಿನ ಹೆಣ್ಣು ಕೇಳಿದಳು:

"ಸಂಬಳ ಎಷ್ಟು ಹೆಚ್ಚಿಗೆ ಸಿಕ್ಕುತ್ತೆ?"

"ಸಾವಿರದ ಇನ್ನೂರು."

ಆಕೆಯ ಮುಖ ಹೆಚ್ಚು ಪ್ರಕಾಶಗೊಂಡಿತು. ಆಕೆ ಕೇಳಿದಳು: "ಇನ್ನು ಮೇಲೆ ಜನರನ್ನು ಹೊಡೆಸೋದೋ ಗೋಲಿಬಾರು ಮಾಡಿಸೋದೋ ಹಗೆಗಳನ್ನು ಮಾಡಿ ಕೊಳ್ಳೋದೋ ಯಾವುದೂ ಮಾಡಬೇಡಿ. ಈ ಉದ್ಯೋಗದಲ್ಲಿ ಅದು ಯಾವುದೂ ಇರುವುದಿಲ್ಲ ತಾನೇ?"

ಒಬ್ಬ ಉಕ್ಕಿನ ಮನುಷ್ಯನೆಂದು ತಿಳಿದಿದ್ದ ಕೇಶವ ಪಿಳ್ಳೆಯ ಎದುರಿಗೆ ಇದು ವರೆಗೆ ಯಾರೂ ಹಾಗೆ ಹೇಳಿರಲಿಲ್ಲ. ಹಿಂದೆ ಪಪ್ಪು ಪಿಳ್ಳೆಯೂ ಕುಟ್ಟಿಯಮ್ಮನೂ ಈ ವಿಷಯ ಹೇಳಿದ್ದರು. ಆದರೆ ಅದು ಕೂಡ ಈ ರೀತಿಯಲ್ಲಲ್ಲ. ಅವರು ಜನರನ್ನು ಅವನೇ ಹೊಡಿಸಿದ, ಕೊಲ್ಲಿಸಿದ ಎಂದು ಹೇಳಿದ್ದದ್ದು.

ಕೇಶವ ಪಿಳ್ಳೆ ಕಾತ್ಯಾಯಿನಿಯನ್ನು ದುರುಗುಟ್ಟಿಕೊಂಡು ನೋಡಿದರು. ಆ ಸ್ತ್ರೀಯ ಹತ್ತಿರ ಏನು ಮಾತನಾಡುವುದು? ಕಾಂಗ್ರೆಸ್ಸಿನ ಒಂದು ಅಂಗ ತನ್ನ ಮುಂದೆ ನಿಂತಿದ್ದ ಹಾಗಿತ್ತು. ಕೇಶವ ಪಿಳ್ಳೆ ಹೇಳಿದರು: "ಹ್ಞೂ, ನೀನು ಇನ್ನು ಹೋಗು."

ತಾನು ಹೇಳಿದ್ದರಲ್ಲಿ ಏನೋ ತಪ್ಪಿರಬಹುದೆಂದು ಕಾತ್ಯಾಯಿನಿಯಮ್ಮನಿಗೆ ತೋರಿತು. ಅವಳು ಹೇಳಿದಳು:

"ಅಲ್ಲ, ಆ ತೊಂದರೆಗಳಿಗೆಲ್ಲ ಸಿಕ್ಕಿಹಾಕಿಕೊಳ್ಳದೆ ಇರಬಹುದಲ್ಲ? ಇನ್ನು ಮೇಲೆ ಯಾರೂ ಬಯ್ಯದ ಹಾಗಿರಲಿ ಅಂತ."

ಕೇಶವ ಪಿಳ್ಳೆ ಇನ್ನೂ ಸ್ವಲ್ಪ ಗಡುಸಾಗಿ ಹೇಳಿದರು:

"ಹುಂ, ಸಾಕು."

ಸ್ವಂತ ಹೆಂಡತಿಯೇ ಕಾಂಗ್ರೆಸ್ಸಿನ ಪ್ರಚಾರವನ್ನು ನಡೆಸುತ್ತಿದ್ದಾಳೆ.

ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿ ನೇಮಕಗೊಂಡಾಗ ಆ ಉನ್ನತಿಯಲ್ಲಿ ಸಂತೋಷ ಪಡಬಹುದಾದ ವ್ಯಕ್ತಿಯನ್ನು ಕೇಶವ ಪಿಳ್ಳೆ ಹುಡುಕುತ್ತ ಓಡಿದ. ಈಗಲೂ ಕೇಶವ ಪಿಳ್ಳೆಗೆ ಅಂತಹ ವ್ಯಕ್ತಿಯೊಂದನ್ನು ಕಾಣಬೇಕು ಎನ್ನುವ ಆಗ್ರಹವಿದೆ.

ಎಷ್ಟೋ ಮಂದಿ ಕೇಶವ ಪಿಳ್ಳೆಯನ್ನು ಅಭಿನಂದಿಸಿದರು. ಕಾಗದಗಳನ್ನು ಬರೆದು, ಬಂದು ಕಂಡು ಎಷ್ಟೋ ಜನರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಅವೆಲ್ಲ

ಕೇವಲ ಔಪಚಾರಿಕವಾದ ಅಭಿನಂದನೆಗಳಾಗಿದ್ದುವು. ಹಲವರಿಗೆ ಅಸೂಯೆಯುಂಟಾಗಿತ್ತು. ಕೆಲವರು ಹಲ್ಲು ಕಡಿಯುತ್ತಲೂ ಇದ್ದರು. ಮತ್ತೆ ಕೆಲವರು ಅಭಿನಂದಿಸುವುದು ತಮ್ಮ ಕರ್ತವ್ಯವೆಂದು ಆಲೋಚಿಸಿ ಅಭಿನಂದಿಸಿದವರೂ ಇದ್ದರು. ಕೇಶವ ಪಿಳ್ಳೆಗೆ ಅದೆಲ್ಲವೂ ಅರ್ಥವಾಯಿತು. ಅಂತು ಲೋಕದಲ್ಲಿ ತನ್ನ ಈ ಸ್ಥಾನ ಲಬ್ಧಿಯಲ್ಲಿ ನಿಸ್ವಾರ್ಥದಿಂದ ಸಂತೋಷಪಡುವ ಒಂದು ವ್ಯಕ್ತಿಯನ್ನು ಅನ್ವೇಷಿಸುತ್ತ ಹೊರಟಿದ್ದರು. ಜೀವನದಲ್ಲಿ ತನಗೆ ಪರಿಚಯವಿದ್ದ ಒಬ್ಬೊಬ್ಬರನ್ನೂ ಅವರು ಆಲೋಚಿಸಿದರು. ಒಬ್ಬನೆ ಒಬ್ಬ ಇಲ್ಲ. ಕಾತ್ಯಾಯಿನಿಗೆ ಇದರಿಂದ ಸಂತೋಷವುಂಟಾಗುತ್ತದೆ ಖಂಡಿತ. ಆದರೆ. ಅದು ಏನೆಂಬುದೇ ಆಕೆಗೆ ತಿಳಿಯದು. ಓ! ಅವಳು ಸಂತೋಷದಿಂದ ಕುಣಿದಾಡಿದ್ದಿದ್ದರೆ!

ನಿಜವಾಗಿಯೂ ಅದೊಂದು ಕೊರತೆಯಾಗಿತ್ತು. ಅದರ ಅರ್ಥ, ಆತ್ಮೀಯವಾದ ಒಂದೇ ಒಂದು ವ್ಯಕ್ತಿಯಿಲ್ಲ ಎಂದಲ್ಲವೆ? ಜೀವನದಲ್ಲಿ ತಾನು ಒಂಟಿ ಎಂದಲ್ಲವೆ? ಕೇಶವ ಪಿಳ್ಳೆ ಆ ಹೊಸ ಸ್ಥಾನ ಲಭಿಸಿದ್ದರಲ್ಲಿ ಸಂತೋಷವನ್ನು ಅನುಭವಿಸಲು ಸಾಧ್ಯವಾಗದೆ ಹೋದದ್ದು?

ಬೇಡ. ಯಾರೂ ನಿಸ್ವಾರ್ಥಿಗಳಾಗಿರಬೇಕಾಗಿಲ್ಲ. ಅದಕ್ಕೆ ವ್ಯತಿರಿಕ್ತವಾಗಿದ್ದರೇ ಸಾಕು: ನಿಸ್ವಾರ್ಥದ ಹೆಸರಿನಲ್ಲಿ ಬಾಧ್ಯತೆಗಳುಂಟಾಗುವುದಿಲ್ಲವಲ್ಲ?

ಒಂದು ದಿನ ಹರಿಹರಯ್ಯರೂ ಗೋವಿಂದನ್ ನಾಯರೂ ಬಂದರು. ಹರಿಹರಯ್ಯರ್ ಒಬ್ಬ ಹಣ್ಣು ಮುದುಕನಾಗಿ ಹೋಗಿದ್ದರು. ತುಂಬ ವರ್ಷಗಳಾಗಿವೆ ಆ ಬ್ರಾಹ್ಮಣನಿಗೆ ಪೆನ್ಶನ್ ಸಿಕ್ಕಿ. ಗೋವಿಂದನ್ ನಾಯರ್‌ಗೂ ಪೆನ್ಶನ್ ಸಿಕ್ಕಿತು. ಅವರು ಬಂದದ್ದು ಸಂತೋಷವನ್ನು ವ್ಯಕ್ತಪಡಿಸುವುದಕ್ಕಾಗಿ ಮಾತ್ರ. ಬೇರೆ ಯಾವುದಕ್ಕೂ ಅಲ್ಲ. ಸ್ವಾಮಿಗೆ ಒಂದು ಪ್ರತ್ಯೇಕ ವಿಚಾರವನ್ನು ಹೇಳುವುದಿತ್ತು. ಅದೇನಿರಬಹುದು? ಅವರು ಹೇಳಿದರು: "ಆ ದಿನ ಪಾರ್ಕ್ ವ್ಯೂಗೆ ನಮ್ಮ ಸೆಕ್ಷನ್‌ನಿಂದ ಹೋಗುವಾಗ ನಾನು ಹೇಳಿರಲಿಲ್ಲವೇ ಪಾರ್ಕ್ ವ್ಯೂನಲ್ಲೇ ವಾಸಮಾಡುವ ಕಾಲ ಬರುತ್ತೆ ಅಂತ? ಅದು ನಿಜವಾಯಿತು. ಅದನ್ನು ನೋಡೋದಕ್ಕೆ ನಾನು ಬಂದದ್ದು."

ಗೋವಿಂದನ್ ನಾಯರ್ ಸ್ವಾಮಿಯ ಮಾತನ್ನು ವಿರೋಧಿಸಿದರು: "ಸ್ವಾಮಿ ಚೀಫ್ ಸೆಕ್ರೆಟರಿಯಾಗ್ತೀರಿ ಅಂತ ಹೇಳಲಿಲ್ಲ. ಸೆಕ್ರೆಟರಿ ಸ್ಥಾನದ ವರೆಗೆ ಮಾತ್ರ ಹೇಳಿದ್ದು."

"ಹಾಗಲ್ಲ, ಚೀಫ್ ಸೆಕ್ರೆಟರಿಯೇ ಆಗ್ತಾರೆ ಅಂತ ನಾನು ಹೇಳಿದ್ದು—" ಎಂದರು ಸ್ವಾಮಿ.

ಅವರು ಕೇಳಿದರು: "ಚೀಫ್ ಸೆಕ್ರೆಟರಿಯಾಗುವುದಾಗಿ ನೀವು ಹೇಳಿದಿರಾ?"

"ನಾನು ಹೇಳಲಿಲ್ಲ. ಆದರೂ ನನಗೆ ಗೊತ್ತಿತ್ತು."

"ಸರಿ ಹಾಗಿದ್ದರೆ. ನನಗೂ ಗೊತ್ತಿತ್ತು."

ಆ ವಾದ ಪ್ರತಿವಾದಗಳು ಒಬ್ಬನು ಮತ್ತೊಬ್ಬನನ್ನು ಕೆಳಗೆ ಇಳಿಸಬೇಕು ಎನ್ನುವುದಾಗಿರಲಿಲ್ಲ. ಸ್ವಾಮಿ ಹೇಳಿದ್ದ ವಿಷಯವನ್ನು ತಿಳಿಸಿ ಅಭಿನಂದಿಸುವುದಕ್ಕಾಗಿ ಮಾತ್ರವಲ್ಲದೆ ಸ್ವಾಮಿಯ ಮಾತಿನ ಸತ್ಯಾಸತ್ಯತೆಗಳನ್ನು ಹೊರಗೆ ಹಾಕಬೇಕು ಎಂದಲ್ಲ ಗೋವಿಂದನ್ ನಾಯರ್ ಹೇಳಿದ್ದು. ಇಬ್ಬರೂ ಸಂತೋಷದಿಂದ ಹೇಳಿದ್ದರು ಅಷ್ಟೆ. ಗೋವಿಂದನ್ ನಾಯರ್ ಹೇಳಿದರು:

"ಅಂತು ನಾವು ಇದನ್ನ ಕಣ್ಣಿನಲ್ಲಿ ನೋಡಿದೆವಲ್ಲ ಅದು ಸಾಕು."

ಸ್ವಾಮಿ ಅದನ್ನು ಅನುಮೋದಿಸಿದರು.

ಜೀವನದಲ್ಲಿ ಮೊತ್ತಮೊದಲಾಗಿ ನಿಸ್ವಾರ್ಥದ ಸವಿ ಕೇಶವ ಪಿಳ್ಳೆಯ ಅನುಭವಕ್ಕೆ ಬಂದಿತು. ಅವರ ಉತ್ಸಾಹ ಆ ನಿಸ್ವಾರ್ಥದ ಅತ್ಯುತ್ತಮ ಅಭಿವ್ಯಕ್ತಿಯಾಗಿತ್ತು.

ಕೇಶವ ಪಿಳ್ಳೆ ಹೇಳಿದರು: "ಸ್ವಾಮೀ, ಇದು ಯಾವುದನ್ನೂ ನಾನು ಉದ್ದೇಶಪಟ್ಟಿರಲಿಲ್ಲ. ಇಂಥ ಕಡೆ, ಇಂಥ ರೀತಿಯಲ್ಲಿ, ಈ ಸಮಯದಲ್ಲಿ ಸೇರಬೇಕು ಅಂತಲೂ ಕೆಲಸ ಮಾಡಿದ್ದಲ್ಲ. ಒಂದು ಕಡೆಗೆ ಬಂದು ಸೇರಿದೆ. ಸರಿ. ಸಂತೋಷ. ಅಲ್ಲಿಂದ ಮೇಲೇರಿದೆ. ಸರಿ, ಅದೂ ಸಂತೋಷ. ಈ ಏಣಿಮೆಟ್ಟಿಲುಗಳ ಮೂಲಕ ಮೇಲೇರಿದ್ದು ಲೆಕ್ಕ ಹಾಕಿ, ಆಲೋಚಿಸಿ ಅಲ್ಲ. ಸತ್ಯ ಹೇಳ್ತೀನೆ ಸ್ವಾಮಿ. ಹಿಂತಿರುಗಿ ನೋಡಿದಾಗ ನನಗೇ ಅನ್ನಿಸುತ್ತೆ. ನಾನು ಹೇಗೆ ಇಲ್ಲಿಯ ವರೆಗೆ ಏರಿದೆ ಅಂತ."

ಸ್ವಾಮಿ ಶ್ರದ್ಧೆಯಿಂದ ಅದನ್ನು ಕೇಳಿಸಿಕೊಳ್ಳುತ್ತಿದ್ದರು. "ಅದು ಭಗವಂತನ ಇಷ್ಟ."

ಗೋವಿಂದನ್ ನಾಯರ್‌ಗೆ ಮತ್ತೂ ಒಂದು ವಿಷಯ ಹೇಳುವುದಿತ್ತು. "ಅನುಭವಿಸುವ ಭಾಗ್ಯವೂ ಇತ್ತು ಸ್ವಾಮಿ."

ಕಿಟ್ಟುಮಾವನ ಮಾತುಗಳು ಕೇಶವ ಪಿಳ್ಳೆಯ ಕಿವಿಯೊಳಗೆ ಮೊಳಗಿದುವು. "ಅವಳು ಭಾಗ್ಯವತಿ." ಆ ಮಾತುಗಳನ್ನು ಗೋವಿಂದನ್ ನಾಯರೂ ಸ್ವಾಮಿಯೂ ಕೇಳಿಸಿಕೊಳ್ಳುತ್ತಿದ್ದಾರೋ ಎಂದು ಕೇಶವ ಪಿಳ್ಳೆ ಸಂಶಯಪಟ್ಟರು. ಆ ಮಾತುಗಳು ಅಷ್ಟು ಗಟ್ಟಿಯಾಗಿ ಪ್ರತಿಧ್ವನಿಸಿದ್ದುವು. ಎಷ್ಟೋ ವರ್ಷಗಳಿಗೆ ಹಿಂದೆ, ಪಾರ್ಕ್ ವ್ಯೂ ಗೇಟಿನಲ್ಲಿ ಚೀಫ್ ಸೆಕ್ರೆಟರಿ ಮೆನನ್ನರನ್ನು ಕಾಣಲು ನಿಂತಿದ್ದಾಗ ಪೋಲೀಸಿನವನು ಅಬ್ಬರಿಸಿ ಅಟ್ಟಿದುದನ್ನು ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು.

"ಅವಳು ಭಾಗ್ಯವತಿ."

ಆ ಭಾಗ್ಯವತಿ ಆ ದೊಡ್ಡ ಕಟ್ಟಡದ ಒಂದು ಕೋಣೆಯಲ್ಲಿ ಕುಳಿತಿದ್ದಾಳೆ. ಬಾವಲಿ ಹಾಗೆ ಬೆಳಕಿಗೆ ಬಾರದೆ.

ಹರಿಹರಯ್ಯರ್ ಕೇಳಿದರು: "ಗೋವಿಂದನ್ ನಾಯರೇ ಇಲ್ಲಿಗೇ ಇದು ನಿಂತೀತಾ? ಇದು ಭಕ್ತಿವಿಲಾಸಕ್ಕೂ ಏರುವುದಿಲ್ಲವೇ?"

ಗೋವಿಂದನ್ ನಾಯರ್ ಕೇಳಿದರು: "ಭಕ್ತಿವಿಲಾಸವಾ ಸ್ವಾಮಿ?"

ಸ್ವಾಮಿ ಕೂಡಲೇ ಹೇಳಿದರು: "ಹೌದು, ಭಕ್ತಿವಿಲಾಸವೇ. ಗೋವಿಂದನ್ ನಾಯರ್‌ಗೆ ಸಂಶಯ ಇದೆಯಾ?"

"ನನಗೆ ಸಂಶಯ ಇಲ್ಲ. ಸ್ವಾಮಿ ಹೇಳೋದು ಭವಿಷ್ಯದಲ್ಲಿ ಮಂತ್ರಿಗಳು ಅಂತಲ್ಲವೆ?"

ಹರಿಹರಯ್ಯರ್ ತಲೆ ಅಲ್ಲಾಡಿಸುತ್ತ ಸಮ್ಮತಿ ಸೂಚಿಸಿದರು.

"ಓ! ಅದು ಸರಿ. ಮಂತ್ರಿ, ದಿವಾನರು ಎಲ್ಲ ಒಂದೇ ತಾನೆ?"

ಹರಿಹರಯ್ಯರ್ ಹೇಳಿದರು: "ಆದರೆ ಅದನ್ನು ನೋಡೋವರೆಗೆ ನಾನಿರ್ತೀನಾ ಗೋವಿಂದನ್ ನಾಯರೇ?"

ಗೋವಿಂದನ್ ನಾಯರ್ ಹೇಳಿದರು:

"ಅದನ್ನೆಲ್ಲ ನೋಡೋದಕ್ಕೆ ಸ್ವಾಮಿ ಇರೋದಿಲ್ಲ ಅಂತ ಸ್ವಾಮಿ ಹೇಳೋದಲ್ಲವೆ?" ಹರಿಹರಯ್ಯರ್ ತಾವಾಗಿ ಅನುಗ್ರಹಿಸಿದರು:

"ಸರಿ, ಹಾಗೇ ಒದಗಿ ಬರಲಿ."

ಆಗ ಕೇಶವ ಪಿಳ್ಳೆ ಆ ಪಾಪದ ದಫೇದಾರ್ ಮಾದೇವನ್ ಪಿಳ್ಳೆಯನ್ನು ನೆನಸಿಕೊಂಡರು. ಮಾದೇವನ್ ಪಿಳ್ಳೆಯನ್ನು ಎಷ್ಟೋ ವರ್ಷಗಳಿಗೆ ನಂತರ ಅವರು ನೆನಸಿಕೊಳ್ಳುತ್ತಿದ್ದದ್ದು. ಕಾರ್ಯಭಾರಗಳ ಒತ್ತಡಗಳಿಂದಾಗಿ ಆ ಮನುಷ್ಯನನ್ನು ಜ್ಞಾಪಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ಪಾಪ! ಈಗ ತೀರಿಕೊಂಡಿರಬೇಕು. ಇಲ್ಲದೇ ಇದ್ದಿದ್ದರೆ ಈ ಸಮಯದಲ್ಲಿ ಬಂದು ಕಾಣಬೇಕಾಗಿತ್ತು. ಆಗ ಆತ್ಮೀಯವಾಗಿ ಅಭಿನಂದಿಸಲು ಮೂವರಾಗುತ್ತಿದ್ದರು. ತಂದೆ ತಾಯಿ ಬದುಕಿದ್ದಿದ್ದರೆ—ಕಾತ್ಯಾಯಿನಿಯಮ್ಮನ ಹಾಗೆ ಅವರಿಗೂ ಅರ್ಥವಾಗುತ್ತಿದ್ದದ್ದು ಇಷ್ಟೇ.

ಮಾರನೆಯ ದಿನ ಕೇಶವ ಪಿಳ್ಳೆ ಚೀಫ್ ಸೆಕ್ರೆಟರಿಯಾಗಿ ಚಾರ್ಜು ವಹಿಸಿಕೊಳ್ಳಬೇಕಾಗಿತ್ತು. ಅಯ್ಯಪ್ಪ ದೇವಸ್ಥಾನದಲ್ಲಿ ಪುಷ್ಪಾಂಜಲಿ ಮುಂತಾಗಿ ಎಲ್ಲ ದೇವಸ್ಥಾನಗಳಲ್ಲಿಯೂ ಬಲಿವಾಡುಗಳನ್ನು ಒಪ್ಪಿಸಿದರು. ಜೋಯಿಸರನ್ನು ಕೇಳಿ ಒಳ್ಳೆಯ ಮುಹೂರ್ತವನ್ನು ನೋಡಿ ಚಾರ್ಜು ವಹಿಸಿಕೊಂಡದ್ದು.

ಅಂದು ಸೆಕ್ರೆಟರಿಯೇಟ್‌ನಲ್ಲಿ ಹೊಸದಾದ ಜೀವಕಳೆಯೂ ಚೈತನ್ಯವೂ ಇತ್ತು. ಒಬ್ಬೊಬ್ಬ ಹೊಸ ಚೀಫ್ ಸೆಕ್ರೆಟರಿ ಬರುವಾಗಲೂ ಅದು ಇದ್ದದ್ದೇ.

ಚೀಫ್ ಸೆಕ್ರೆಟರಿ ನೋಡಬೇಕಾದ ಫೈಲುಗಳನ್ನು ಮೇಜಿನ ಮೇಲೆ ತಂದಿರಿಸಲಾಯಿತು. ಕೇಶವ ಪಿಳ್ಳೆ ದೇವರನ್ನು ಪ್ರಾರ್ಥಿಸಿ ಪೆನ್ನು ಕೈಗೆತ್ತಿಕೊಂಡರು. ಎಲ್ಲಕ್ಕಿಂತ ಮೇಲಿದ್ದ ಫೈಲು ನೋಡಿದರು. ಅದೊಂದು ರಾಜೀನಾಮೆಯ ಪತ್ರ. ಕೇಶವ ಪಿಳ್ಳೆ ಅದನ್ನು ಓದಿದರು. ಅವರು ಏನೂ ತೋರದೆ ಕುಳಿತರು.

ಅದು ತಂಗಮ್ಮನ ರಾಜೀನಾಮೆಯ ಪತ್ರ.

ಏನು ಮಾಡಲೂ ತೋರದೆ ಚೀಫ್ ಸೆಕ್ರೆಟರಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತು

ಕೊಂಡರು. ಚೀಫ್ ಸೆಕ್ರೆಟರಿಯಾಗಿ ಜಾರ್ಜ್ ವಹಿಸಿಕೊಂಡಾಗ ಮೊದಲು ಮಾಡ ಬೇಕಾಗಿದ್ದದ್ದು ಅದು. ಅದು ಪರ್ಸನಲ್ ಕ್ಲಾರ್ಕಿನ ತಾತ್ಸಾರದಿಂದಲೋ ಅಥವಾ ಯಾದೃಚ್ಛಿಕವಾಗಿ ಸಂಭವಿಸಿದ್ದಾಗಿರಬಹುದೇ? ಹಿಂದಿನ ಕಥೆಗಳನ್ನೆಲ್ಲ ತಿಳಿದಿರುವ ಒಂದು ವ್ಯಕ್ತಿ ಮನಃಪೂರ್ವಕವಾಗಿ ಮಾಡಿದ ಕೆಲಸ ಇದು ಎಂದು ಕೇಶವ ಪಿಳ್ಳೆಗೆ ತೋರಿತು. ಸ್ವಲ್ಪ ಸಣ್ಣದಾಗಿ ಅಪಮಾನ ಮಾಡಬೇಕು. ಇಲ್ಲದಿದ್ದರೆ ಮನಃಕ್ಲೇಶ ವನ್ನುಂಟುಮಾಡಬೇಕು ಎಂದಾಗಿರಬಹುದೇ? ಪರ್ಸನಲ್ ಕ್ಲಾರ್ಕನ್ನು ಕರೆದರು. ಆತ ಒಬ್ಬ ಯುವಕ. ಅವನೂ ಕಷ್ಟದಿಂದ ಅಲ್ಲಿಗೆ ಬಂದದ್ದು. ಪರ್ಸನಲ್ ಕ್ಲಾರ್ಕನ್ನು ಅಡಿಯಿಂದ ಮುಡಿಯ ವರೆಗೆ ಕೇಶವ ಪಿಳ್ಳೆ ಒಮ್ಮೆ ನೋಡಿದರು. ತನ್ನಿಂದ ಏನೋ ತಪ್ಪಾಗಿಹೋಗಿರಬೇಕೆಂದು ಆ ಯುವಕ ಗಾಬರಿಯಾಗಿದ್ದ. ಅಭಿವೃದ್ಧಿ ಹೊಂದಿ ಮೇಲೇರಿ ಆ ಸ್ಥಾನಕ್ಕೆ ಬಂದಿದ್ದ ಯುವಕನಿಗೆ ತಾನು ನಿಂತಿದ್ದ ನೆಲ ಕುಸಿಯುತ್ತಿದ್ದಂತೆ ತೋರಿತು. ಕೆಳಗೆ ಬಿದ್ದುಹೋಗುತ್ತಿದ್ದೇನೆ ಎನ್ನಿಸಿತು. ಹಿಂದೆ ಕೇಶವ ಪಿಳ್ಳೆ ಈ ಸ್ಥಿತಿ ಯಲ್ಲಾಗಿದ್ದಾಗ ಮಾಡುವುದನ್ನೆಲ್ಲ ಭಯಪಟ್ಟು ಕಳವಳದಿಂದ ಮಾಡುತ್ತಿದ್ದದ್ದು. ಈ ಯುವಕನೂ ಹಾಗೆಯೇ ಮಾಡುತ್ತಿದ್ದ. ತಾನು ಯಾವ ತಪ್ಪು ಮಾಡಿದ್ದು ಎಂದು ಅವನಿಗೆ ತಿಳಿಯುತ್ತಿಲ್ಲ. ಅವನು ಬೆವತುಹೋದ.

ಕೇಶವ ಪಿಳ್ಳೆ ಕೇಳಿದರು: "ಮೊದಲು ನಾನು ಸೈನ್ ಮಾಡಬೇಕಾದದ್ದು ಒಬ್ಬ ಉದ್ಯೋಗಸ್ಥನ ರಾಜೀನಾಮೆ ಪತ್ರಕ್ಕಾ?"

ಆತ ಸತ್ಯ ಹೇಳಿದ: "ನನಗೆ ಅದು ಗೊತ್ತಾಗಲಿಲ್ಲ."

"ಹ್ಞ—ಹೋಗಿ."

ಆತ ಹೊರಟುಹೋದ.

ಕೇಶವ ಪಿಳ್ಳೆ ಏನು ಮಾಡಲೂ ತೋರದೆ ಎಷ್ಟೋಹೊತ್ತು ಸುಮ್ಮನೆ ಕುಳಿತಿದ್ದರು. ಅವಳಿಗೆ ಕೆಲಸ ಬೇಡ ಅನ್ನಿಸಿದರೆ ಕೆಲವು ದಿನಗಳಿಗೆ ಮೊದಲೇ ರಾಜೀನಾಮೆ ಕೊಡಬಹುದಾಗಿತ್ತಲ್ಲವೆ? ಅವಳನ್ನು ಉದ್ಯೋಗದಿಂದ ಹಿಂದಕ್ಕೆ ಕಳುಹಿಸುವುದಕ್ಕೆ ಕೇಶವ ಪಿಳ್ಳೆಯೇ ಆಗಬೇಕೆಂದು ಅವಳಿಗೆ ನಿರ್ಬಂಧವಾಗಿದ್ದಿರಬೇಕು.

ತಾನು ಅವಳಿಗೆ ಮಾಡಿದ ತಪ್ಪಾದರೂ ಏನು ಎಂದು ಕೇಶವ ಪಿಳ್ಳೆ ಆಲೋಚಿಸಿದರು. ಆ ಸಂಬಂಧದ ಇತಿಹಾಸದ ಒಂದೊಂದು ದಿನವನ್ನೂ ಒಂದೊಂದು ಘಟನೆಯನ್ನೂ ಕೇಶವ ಪಿಳ್ಳೆ ನೆನಸಿಕೊಂಡು ನೋಡಿದರು. ಯಾವುದೂ ಸ್ಪಷ್ಟವಾಗದೆ ಇಲ್ಲ. ಎಲ್ಲವನ್ನೂ ಅವರು ಜ್ಞಾಪಿಸಿಕೊಳ್ಳುವುದುಂಟು. ಇದೊಂದು ಮನಃಪೂರ್ವಕವಾಗಿ ಸಮರ್ಪಿಸಿದ ರಾಜೀನಾಮೆ.

"ನಿಮ್ಮನ್ನು ಒಂದು ಏಣಿಯ ಮೊದಲ ಮೆಟ್ಟಲಿನಲ್ಲಿ ಹತ್ತಿ ನಿಲ್ಲಿಸಿದೆ. ಆ ಮೆಟ್ಟಲನ್ನು ಏರಲು ನಿಮಗೆ ಎಂದೂ ಸಾಧ್ಯವಿರಲಿಲ್ಲ. ಒಂದೊಂದು ಮೆಟ್ಟಲನ್ನೂ ಏರಿ ಈಗ ತುದಿಯ ಮೆಟ್ಟಲಿಗೆ ಹೋಗಿ ತಲಪಿದಿರಿ. ನಿಮಗೆ ಈಗ ಅಧಿಕಾರವಿದೆ.

"ನೀವೇ ನನ್ನನ್ನು ಮನೆಗೆ ಕಳಿಸಿ"—ಹೀಗೆ ಅವಳು ಹೇಳುತ್ತಿದ್ದಂತೆ ತೋರಿತು. ಗಾಯಗೊಂಡ ಹೃದಯದಂತೆ ಆ ಪತ್ರ ಅವರ ಮುಂದಿತ್ತು. ಆ ಅಕ್ಷರಗಳು ಕಲಕಿಕೊಂಡಂತೆ ತೋರಿದುವು. ಕೇಶವ ಪಿಳ್ಳೆಯ ಬುದ್ಧಿಗೆ ಮಂಕು ಕವಿಯಿತು. ಅವಳು ತನಗೆ ಏನೆಲ್ಲ ಕೊಟ್ಟಿದ್ದಾಳೆ. 'ಕೂಡದು. ಅವರಿಗೆ ರಾಜೀನಾಮೆ ಪತ್ರಕ್ಕೆ ಒಪ್ಪಿಗೆ ನೀಡಿ ಸಹಿ ಹಾಕಲು ಸಾಧ್ಯವಿಲ್ಲ. ಆರ್ಡರ್ ಹೇಗೆ ಪಾಸ್ ಮಾಡುವುದು ಎನ್ನುವ ಶಬ್ದಗಳೂ ತಿಳಿಯುತ್ತಿಲ್ಲ.

ಉದ್ಯೋಗ ಬೇಡವೆಂದು ಭಾವಿಸಿ ಅವಳು ಬರೆದದ್ದಾಗಿರಬಹುದೇ? ಅವಳು ಜೀವಿಸುವುದಾದರೂ ಹೇಗೆ? ಆ ಕಟ್ಟಡವಲ್ಲದೆ ಬೇರೆ ಏನೂ ಅವಳದಾಗಿದ್ದಂತೆ ಕೇಶವ ಪಿಳ್ಳೆಗೆ ತೋರುವುದಿಲ್ಲ. ಬಹು ದೊಡ್ಡ ಹಣವಂತ ಯಾರಾದರೂ ಅವಳ ಜೊತೆಗಾರನಾಗಿರಬಹುದೇ? ಅವನು ಉಪದೇಶಿಸಿದ್ದಾಗಿರಬಹುದೇ?

ಪುನಃ ಕೇಶವ ಪಿಳ್ಳೆ ಆ ರಾಜೀನಾಮೆ ಪತ್ರದ ಕಡೆಗೆ ನೋಡಿದರು. ಅಲ್ಲ, ತನ್ನ ಬಾಳಿನ ಕುಂಭವನ್ನು ಕೇಶವ ಪಿಳ್ಳೆಯ ಮುಂದೆ ಒಡೆದು ಪುಡಿಪುಡಿ ಮಾಡಲು ಅವಳು ತೀರ್ಮಾನಿಸಿರಬೇಕು ಎಂದು ತೋರುತ್ತದೆ. ಹಾಗೆ ಆ ವಾಕ್ಯಗಳು ಯಾವುದೋ ಜೀವನದಿಂದ ಬೀಳ್ಕೊಡುವ ರೀತಿಯಲ್ಲಿರಬಹುದು.

ಎಷ್ಟೋ ದಿನಗಳಿಂದ ಅವಳ ಬಗ್ಗೆ ಯಾವ ಅನ್ವೇಷಣೆಯನ್ನೂ ಕೇಶವ ಪಿಳ್ಳೆ ನಡೆಸಿಲ್ಲ. ಯಾವ ವಿವರವೂ ತಿಳಿಯದು. ಅಂದು ಆ ಯುವಕನನ್ನು ನೋಡಿ ಹೊರಗೆ ಬಂದ ನಂತರ ಶೇಖರವಿಲಾಸಕ್ಕೆ ಹೋಗಿಲ್ಲ. ಅದು ಸರಿಯೋ ಎಂದು ಕೇಶವ ಪಿಳ್ಳೆ ಸ್ವತಃ ಕೇಳಿಕೊಂಡರು. ಒಂದೊಂದು ಹಂತದಲ್ಲಿಯೂ ಕೇಶವ ಪಿಳ್ಳೆಯನ್ನು ಅವಳು ಯಾವಾಗಲೂ ಅಪಮಾನ ಮಾಡಿದಂತೆ ತೋರಿತು. ಕೇಶವ ಪಿಳ್ಳೆ ಒಮ್ಮೆಯೂ ಅವಳಿಗೆ ಅವಶ್ಯವಿರುವ ಮನುಷ್ಯನಾಗಿರಲಿಲ್ಲ. ಕೇಶವ ಪಿಳ್ಳೆ ಸ್ವತಃ ಕೇಳಿಕೊಂಡ ಪ್ರಶ್ನೆಗೆ ಸ್ವಯಂ ಸಮಾಧಾನ ಸಿಕ್ಕಿತು. ಸಮಯ ಇಲ್ಲದೇ ಹೋಗಿತ್ತು. ಈ ಬಗೆಯ ಕೆಲಸಗಳನ್ನೆಲ್ಲ ಆಲೋಚಿಸಲು ಒಂದು ನಿಮಿಷವೂ ಬಿಡುವಿರಲಿಲ್ಲ. ಆದ್ದರಿಂದ ಹೋಗಿಲ್ಲ. ಕ್ಷಮಾಪಣೆ ಆ ಸಮಾಧಾನಕ್ಕಿದ್ದದ್ದು. ಏನೆಲ್ಲ ಸಂಭವಿಸಿರಬಹುದೆಂದು ತಿಳಿಯಲು ಕೇಶವ ಪಿಳ್ಳೆ ಕ್ಲೇಶಕ್ಕೊಳಗಾದರು. ಅವಳ ಭವಿಷ್ಯ ಏನಾಗಿರಬಹುದು?

ಆ ರಾಜೀನಾಮೆ ಪತ್ರವನ್ನು ತೆಗೆದು ಒಂದು ಕಡೆ ಇಟ್ಟರು. ಗುಡ್ಡದ ಹಾಗೆ ಫೈಲುಗಳು ಮೇಜಿನ ಮೇಲೆ ಕುಳಿತಿದ್ದುವು. ಅವರ ಆರ್ಡರ್‌ಗಾಗಿ.

ಆ ಗುಡ್ಡಗಳ ಕಡೆಗೆ ಗಮನ ಹೋಗುವುದಿಲ್ಲ. ಏನು ಮಾಡುವುದಕ್ಕೂ ಸಾಧ್ಯವಿಲ್ಲ. ಚಾರ್ಜು ವಹಿಸಿಕೊಂಡ ಮೊದಲನೆಯ ದಿನ ಅದು. ಅವರಿಗೆ ಅದೊಂದು ದುಃಶಕುನವಾಗಿ ತೋರಿತು. ಈ ಕುರ್ಚಿಯಲ್ಲಿ ಕೆಲಸ ಪ್ರಾರಂಭಿಸಬೇಕಾದದ್ದು ಹೀಗಾ? ಸರಿಯಾಗಿ ನೋಡಿ ಜೋಯಿಸರು ನಿಶ್ಚಯಿಸಿದ ಒಳ್ಳೆಯ ದಿವಸ ಇದೇನಾ?

ಒಂದು ಒಂದೂವರೆ ಗಂಟೆಯ ವರೆಗೆ ಹಾಗೆ ಏನೂ ಮಾಡದೆ ಕುಳಿತಿದ್ದು ಕೇಶವ ಪಿಳ್ಳೆ ಆಫೀಸಿನಿಂದ ಹೊರಟು ಕಾರಿನಲ್ಲಿ ಪಾರ್ಕ್ ವ್ಯೂಗೆ ಹೋದರು. ಅಲ್ಲಿ ಕಾತ್ಯಾಯಿನಿ

ಯಮ್ಮನಿಗೆ ಗಂಡ ಬಂದ ವಿಚಾರ ತಿಳಿದದ್ದು ಸ್ವಲ್ಪ ಹೊತ್ತು ಕಳೆದ ಮೇಲೆಯೇ.

ಹೋಗಿ ತಂಗಮ್ಮನನ್ನು ಕಾಣಬೇಕೇ ಬೇಡವೇ ಎನ್ನುವ ವಿಷಯವನ್ನು ಕುರಿತು ಕೇಶವ ಪಿಳ್ಳೆ ತಮಗೆ ತಾವೇ ಚರ್ಚಿಸಿದರು. ಸಾಧ್ಯವಿದ್ದರೆ ಆ ರಾಜೀನಾಮೆಯನ್ನು ಹಿಂತೆಗೆಸಬೇಕೆಂದಿತ್ತು. ಬೇರೆ ಏತಕ್ಕಾಗಿಯೂ ಅಲ್ಲ. ಅದಕ್ಕೆ ತಾನೇ ಅನುಮತಿ ನೀಡ ಬೇಕಾಗಿ ಬಂದಿರುವ ಕಷ್ಟಕ್ಕಾಗಿ. ಏತಕ್ಕಾಗಿಯೋ ಅದನ್ನು ಮಾಡಲು ಕೇಶವ ಪಿಳ್ಳೆಗೆ ಸಾಧ್ಯವಾಗುತ್ತಿಲ್ಲ.

ಕಾತ್ಯಾಯಿನಿಯಮ್ಮ ತಂದುಕೊಟ್ಟ ಒಂದು ಕಪ್ಪು ಕಾಫಿಯನ್ನು ಕೇಶವ ಪಿಳ್ಳೆ ಕುಡಿದರು. ಕೇಶವ ಪಿಳ್ಳೆ ಆಗ ಆಫೀಸಿನಿಂದ ಬಂದದ್ದು ಒಂದು ವಿಶೇಷ ಸಂಗತಿಯಾಗಿ ತೋರಿರಲಿಲ್ಲ. ಯಾವಾಗ ಆಫೀಸಿಗೆ ಹೋಗಬೇಕು, ಯಾವಾಗ ಹಿಂದಿರುಗಿ ಬರಬೇಕು ಎನ್ನುವುದು ಆ ಹೆಣ್ಣಿಗೆ ತಿಳಿಯದು. ಆ ಜೀವನವನ್ನು ಕುರಿತು ಅವಳಿಗೆ ಯಾವ ಸಂಬಂಧವೂ ಇರಲಿಲ್ಲವಲ್ಲ? ಕಾಫಿ ಕುಡಿದು ಈಚೆಗೆ ಬಂದಾಗ ಸಿಪಾಯಿ ಕೇಳಿದ:

"ಅಮ್ಮ, ಇವತ್ಯಾಕೆ ಯಜಮಾನರು ಆಫೀಸಿನಿಂದ ಬೇಗನೇ ಬಂದದ್ದು? ಒಂದು ಪಕ್ಷ ಛಾರ್ಜು ತೆಗೆದುಕೊಂಡ ದಿವಸವಾದ್ದರಿಂದ ಇರಬೇಕು."

ಕಾತ್ಯಾಯಿನಿಯಮ್ಮ ಕೇಳಿದಳು:

"ಯಾವಾಗ ಹಿಂದಿರುಗಬೇಕು?"

"ಸಾಯಂಕಾಲ ಐದು ಗಂಟೆಗೆ."

ಹಾಗೆ ಅವಳು ಆ ವಿಷಯ ತಿಳಿದುಕೊಂಡದ್ದು. ಸ್ವಲ್ಪ ಸಮಯ ಬಿಟ್ಟು ಒಬ್ಬ ಮುದುಕಿ ಕಾಣಲು ಬಂದಿದ್ದಾಳೆ ಎಂದು ಗೇಟಿನಲ್ಲಿ ಕಾವಲು ಕಾಯುತ್ತ ನಿಂತಿದ್ದವನು ಕೇಶವ ಪಿಳ್ಳೆಗೆ ತಿಳಿಸಿದ. ಅವರನ್ನು ಒಳಗೆ ಬಿಡುವಂತೆ ಕೇಶವ ಪಿಳ್ಳೆ ಹೇಳಿದರು.

ಬಂದಿದ್ದದ್ದು ಭಾಗೀರಥಿ ಅಮ್ಮ! ತಂಗಮ್ಮನ ತಾಯಿ. ಅದು ತೀರ ಅನಿರೀಕ್ಷಿತ ವಾಗಿತ್ತು.

ಭಾಗೀರಥಿಯಮ್ಮ ಮಾತಿಗೆ ಪ್ರಾರಂಭಿಸಿದ್ದು. ಎದೆ ಬಡಿದುಕೊಳ್ಳುತ್ತ ಆ ಸ್ತ್ರೀ ಹೇಳಿದಳು:

"ಅವಳನ್ನ ಮಾಯ ಮಂತ್ರ ಮಾಡಿ ಮರುಳು ಮಾಡಿಬಿಟ್ಟ ಆ ಮಾಯಾವಿ. ಅಯ್ಯೋ ದೇವರೇ?"

ಕೇಶವ ಪಿಳ್ಳೆಗೆ ಅದು ಅರ್ಥವಾಗಿಲ್ಲವೆಂದು ತೋರಿತು. ಅವರು ಆಕೆಯ ಮುಖ ವನ್ನು ನೋಡಿದರು.

ಭಾಗೀರಥಿಯಮ್ಮ ಹೇಳಿದಳು: "ಅವಳು ಕೆಲಸಕ್ಕೆ ರಾಜೀನಾಮೆ ಕೊಟ್ಟಳು."

ಕೇಶವ ಪಿಳ್ಳೆ ಹೇಳಿದರು: "ನೋಡಿದೆ. ಆ ರಾಜೀನಾಮೆ ಪತ್ರ ನನ್ನ ಹತ್ರಬಂದಿದೆ."

"ಹಾಗಾದರೆ ಕೆಲಸ ಬಿಟ್ಟು ಹೋಗೋದಕ್ಕೆ ಒಪ್ಪಿಗೆ ಕೊಟ್ಟಿರಾ?"

"ಇಲ್ಲ. ಅದಕ್ಕೇನು ಕಾರಣ?"

"ಆ ದಿನ ನೀವು ಒಬ್ಬ ಯುವಕನನ್ನು ನೋಡಲಿಲ್ಲವಾ? ಅವನೇ ಅದಕ್ಕೆ ಕಾರಣ. ಅವನು ತುಂಬ ಮಾಯೆಗಾರ. ಈ ತಿರುವನಂತಪುರದ ಎಲ್ಲ ಉದ್ಯೋಗಸ್ಥರ ಮನೆಯಲ್ಲೂ, ಕೆಲಸದಲ್ಲಿರೋ ಹೆಣ್ಣುಮಕ್ಕಳ ಮನೆಯಲ್ಲೂ ಅವನು ಮನೆಯವನಿದ್ದ ಹಾಗೆ. ಎಲ್ಲರನ್ನೂ ಮಾಯ ಮಂತ್ರ ಮಾಡಿ ಮರುಳು ಮಾಡಿದ್ದಾನೆ."

ಭಾಗೀರಥಿಯಮ್ಮ ಹೇಳುತ್ತಿದ್ದ ಕಥೆ ಕೇಶವ ಪಿಳ್ಳೆಗೆ ಅರ್ಥವಾಗಲಿಲ್ಲ. ಅವರು ಕೇಳಿದರು: "ಮಾಯ ಮಂತ್ರ ಮಾಡಿ ಮರುಳು ಮಾಡ್ತಾನಾ?"

ಆ ಮುದುಕಿ ದೃಢವಾಗಿ ಹೇಳಿದಳು: "ಹೌದು."

"ಅಂದರೆ?"

"ಅವನು ಭಜನೆ, ಪೂಜೆ, ಹಾಡು ಹೇಳಿಕೊಂಡು ಅಡ್ಡಾಡ್ತಾನೆ. ಯಾವುದೋ ಸ್ವಾಮೀಜಿಯ ಶಿಷ್ಯನಂತೆ. ಆ ಸ್ವಾಮೀಜಿ ಮೂರು ನಾಲ್ಕು ಸಲ ತಿರುವನಂತಪುರಕ್ಕೆ ಬಂದರು. ನೌಕರರ ಮನೆಯಲ್ಲೆಲ್ಲ ಪೂಜೆ ನಡೆಯಿತು. ಇದ್ದದ್ದೂ ಅವರ ಮನೆಯಲ್ಲೇ. ಆ ಸ್ವಾಮಿ ಅನುಗ್ರಹಿಸಿದರೆ ಮೇಲಿನ ಉದ್ಯೋಗ. ಹೆಚ್ಚಿಗೆ ಸಂಬಳ. ಮದುವೆ ಆಗದೇ ಇರೋ ಹೆಣ್ಣುಮಕ್ಕಳಿಗೆ ಮದುವೆ—ಇವೆಲ್ಲ ನಡೆಯುತ್ತವಂತೆ. ಅವರೆಲ್ಲೋ ಬಡಗು ದಿಕ್ಕಿನವರಂತೆ. ಈ ಹೆಣ್ಣುಮಕ್ಕಳನ್ನೆಲ್ಲ ಇವನೂ. ಇವನ ಸ್ವಾಮಿಯೂ ಸೇರಿ ಮರುಳು ಮಾಡಿಟ್ಟಿದ್ದಾರೆ."

ಸ್ವಲ್ಪ ದಿನಗಳ ಹಿಂದೆ ಸೆಕ್ರೆಟರಿಯೇಟಿನ ಒಬ್ಬಿಬ್ಬರು ಲೇಡಿ ಸೂಪರಿಂಟೆಂಡೆಂಟು ಗಳೂ. ಲೇಡಿ ಕ್ಲಾರ್ಕುಗಳೂ. ಮತ್ತೆ ಕೆಲವು ನೌಕರರ ಹೆಂಡತಿಯರೂ ಯಾವುದೋ ಒಂದು ಪೂಜೆ ನಡೆಸಬೇಕು ಎಂದೂ ಮಠ ಕಟ್ಟಿಸಬೇಕು ಎಂದೂ ಮಾತನಾಡಿಕೊಳ್ಳುತ್ತಿದ್ದ ವಿಚಾರವನ್ನು ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು. ಚಳವಳಿ ಬಿರುಸಾಗಿ ನಡೆಯುತ್ತಿದ್ದ ಕಾಲ ಅದು. ಯಾರೋ ಒಬ್ಬ ಆನಂದನನ್ನು ಕುರಿತು ಅವರು ಮಾತನಾಡಿಕೊಳ್ಳು ತ್ತಿದ್ದರು. ಅದು ಯಾವುದನ್ನೂ ಮನಸ್ಸಿಗೆ ನಾಟಿಸಿಕೊಂಡಿರಲಿಲ್ಲ. ಈಗಲೂ ಒಬ್ಬ ಆನಂದನ ಗೀತಾ ಪ್ರವಚನವೆಂತಲೋ. ಉಪನಿಷತ್ ವ್ಯಾಖ್ಯಾನವೆಂತಲೋ ಪತ್ರಿಕೆಗಳಲ್ಲಿ ಕಾಣುವುದುಂಟು. ಇದಕ್ಕೆ ಸಂಬಂಧಪಟ್ಟ ಕಥೆಯೇ ಆಗಿರಬೇಕು ಭಾಗೀರಥಿಯಮ್ಮ ಹೇಳುವುದೆಂದು ತೋರಿತು.

ಭಾಗೀರಥಿಯಮ್ಮ ಪ್ರಾರಂಭಿಸಿದರು: "ಉದ್ಯೋಗಸ್ಥರ ಹೆಂಡತಿಯರೂ ಉದ್ಯೋಗ ಇರುವ ಹೆಣ್ಣುಮಕ್ಕಳೆಲ್ಲ ಅವನ ಬೆನ್ನ ಹಿಂದೆಯೇ ಇರ್ತಾರೆ. ಒಂದು ಸಲ ನಮ್ಮ ಮನೆಯಲ್ಲೂ ಅವನು ಪೂಜೆ ನಡೆಸಿದ. ಅವನು ಕಣ್ಣುಮುಚ್ಚಿ ಕುಳಿತುಕೊಂಡಿರು ತ್ತಿದ್ದ. ಹೆಂಗಸರು ಅವನ ಸುತ್ತಲೂ ನಿಂತಿರುತ್ತಿದ್ದರು. ಎಲ್ಲರೂ ಮರುಳಾಗುತ್ತಿದ್ದರು. ಮರುಳಾಗಿಹೋಗುತ್ತಿದ್ದರು."

ಕೇಶವ ಪಿಳ್ಳೆ ಕೇಳಿದರು: "ಆ ದಿನ ನಾನು ಕಂಡ ಯುವಕ ಈಗಲೂ ಅಲ್ಲೇ ವಾಸ ಮಾಡ್ತಾನಾ?"

ಒಂದು ಕ್ಷಣ ಕಳೆದು ಭಾಗೀರಥಿಯಮ್ಮ ಅದಕ್ಕೆ ಉತ್ತರ ಕೊಟ್ಟದ್ದು.

"ಅಯ್ಯೋ! ನಾನು ಅದನ್ನೆಲ್ಲ ಹೇಗೆ ಹೇಳಲಪ್ಪಾ ದೇವರೇ! ನಾನು ಮಾನ, ಮರ್ಯಾದೆ, ನಾಚಿಕೆ ಎಲ್ಲ ಬಿಟ್ಟು ಅವಳ ಜೊತೆ ಬಾಳ್ತಿದ್ದೀನಿ. ನಾನು ಹೀಗೆಲ್ಲ ಬಾಳಿದವಳಲ್ಲ. ಹರಕೆ ಹೊತ್ತು ಈ ಮಗಳನ್ನ ಹೆತ್ತೆ. ಈಗ ಮಾನ ಮರ್ಯಾದೆ ಎಲ್ಲ ಹೋಯ್ತು. ಪಿಳ್ಳೇ, ಎಲ್ಲ ಹೋಯ್ತು. ನಾನು ಅದನ್ನೆಲ್ಲಾ ನೋಡ್ತಾ ಕೇಳ್ತಾ ಇರಬೇಕಾಗಿ ಬಂತು. ಹೊಗೆಯಾಡೋ ಕೊಳ್ಳಿ ಹೊರಗೆ ಹೋಗಲಿ ಅಂತ ನನ್ನ ಗಂಡು ಮಕ್ಕಳೂ ಹೇಳಿದ್ರು. ಅಂಥವಳು ಒಬ್ಬಳು ನಮ್ಮ ಒಡಹುಟ್ಟಲಿಲ್ಲ ಅಂತ ಅವರೂ ಅಂದುಕೊಂಡರು. ನಾನು ಹೊತ್ತು ಹೆತ್ತು ಸಾಕಿದ ಮಗಳಲ್ಲವೇನ್ರೋ ಅಂತ ಗಂಡು ಮಕ್ಕಳ ಮೇಲೆ ರೇಗಿದೆ. ಆ ಮೇಲೆ ಅವಳ ಜೊತೆಯಲ್ಲೇ ವಾಸಮಾಡೋದಕ್ಕೆ ತೊಡಗಿದೆ. ಎಲ್ಲ ಸಹಿಸಿದೆ."

ಕೇಶವ ಪಿಳ್ಳೆ ಪುನಃ ಕೇಳಿದರು: "ಈಗ ಹೇಳಿದ ಕಥೆ ನಡೆದದ್ದು ಯಾವಾಗ?"

ಭಾಗೀರಥಿಯಮ್ಮ ಆ ಕಥೆಯನ್ನು ಪ್ರಾರಂಭಿಸಿದರು:

"ಅವನು ಅಲ್ಲೇ ವಾಸ ಮಾಡೋದು. ಆದರೂ ಅವನು ತಿರುವನಂತಪುರದ ಎಲ್ಲರ ಮನೆಗೂ ಹೋಗಬೇಕು. ಭಜನೆ, ಪೂಜೆ—ಇದು ಅವನ ಕೆಲಸ. ಅವನೆಲ್ಲಾದರೂ ಒಂದು ಕಡೆಗೆ ಹೋದರೆ ಅವನನ್ನು ಅಲ್ಲಿಂದ ಬಿಡೋದಿಲ್ಲ. ಆಗ ಇವಳಿಗೆ ಸಿಟ್ಟು ಬರ್ತದೆ. ಅವನು ಬಂದ ಮೇಲೆ ಅವನ ಜೊತೆಯಲ್ಲಿ ಜಗಳ. ಇದು ಇವಳ ಭಕ್ತಿ, ಇವಳ ಪೂಜೆ!"

ಆ ಹಳೆಯ ಕಥೆಗಳನ್ನು ಸ್ಮರಿಸಿಕೊಳ್ಳುತ್ತ ಭಾಗೀರಥಿಯಮ್ಮ ಹೇಳಿದಳು: "ಮೊದಲು ಮರ್ಯಾದೆಯಾಗಿ ಪಿಳ್ಳೆ ಜೊತೇಲಿ ಮದುವೆ ಮಾಡಿ ಕೊಡಬೇಕು ಅನ್ನೋ ಆಲೋಚನೆ ಇತ್ತು. ಇವಳು ರಾಮಚಂದ್ರನ್ ನಾಯರ್ ಜೊತೆಯಲ್ಲಿ ಓಡಿಹೋದಳು. ಆ ಮೇಲೂ ಪಿಳ್ಳೆ ನೆರವಾಗಿ ನಿಂತದ್ದು. ಅದಾದ ಮೇಲೆ ಹೀಗೆಲ್ಲ ಆದದ್ದು. ಇನ್ನೂ ಏನೇನು ನಡೆಯಿತೋ ದೇವರೇ! ನನಗೆ ತಿಳಿಯದು. ಇದೇ ಈ ಹೆಂಗಸರ ಪೂಜೆ, ಭಕ್ತಿ ಎಲ್ಲ!"

ಕೇಶವ ಪಿಳ್ಳೆ ಕೇಳಿದರು: "ಅವಳು ಯಾಕೆ ರಾಜೀನಾಮೆ ಕೊಡೋದಕ್ಕೆ ಹೊರಟಿದ್ದಾಳೆ?"

"ಅದೇ ತಾನೇ ತಿಳಿಯಬೇಕಾದದ್ದು. ಆ ದೊಡ್ಡ ಸ್ವಾಮಿ ಸ್ಥಿರವಾಗಿ ಇಲ್ಲೇ ಇರೋದಕ್ಕೆ ಬರ್ತಾನಂತೆ. ಅವಳು ಮನೇನ ಆ ಸ್ವಾಮಿ ಆಶ್ರಮವಾಗಿ ಮಾಡ್ತಾಳಂತೆ. ಆ ಮೇಲೆ ಅವಳೂ ಸನ್ಯಾಸಿನಿಯಾಗ್ತಾಳಂತೆ. ಯಾವುದೋ ಅಮ್ಮ ಆಗ್ತಾಳಂತೆ. ಆ ಹೆಸರು ಮರೆತುಹೋಯ್ತು."

ಕೇಶವ ಪಿಳ್ಳೆ ಪ್ರತಿಮೆಯಂತೆ ಸ್ವಲ್ಪ ಹೊತ್ತು ಕುಳಿತಿದ್ದರು. ಭಾಗೀರಥಿಯಮ್ಮ ಇನ್ನೂ ಏನೇನೋ ಹೇಳಿಕೊಂಡಿದ್ದಳು.

"ಅವಳ ಸನ್ಯಾಸ! ಅದ್ಯಾತಕ್ಕೆ ಅಂತ ನನಗೆ ಗೊತ್ತು. ಯಾಕೆ ಅವಳು ಕಾವಿ ಉಡ್ತಾಳೆ? ವಿಭೂತಿ ಧರಿಸಿಕೊಳ್ತಾಳೆ? ರುದ್ರಾಕ್ಷಿ ಮಾಲೆ ಹಾಕಿಕೊಳ್ತಾಳೆ? ಅದೆಲ್ಲ ಮಾಡಿಕೊಂಡರೂ ಅವಳು ಹಿಂದಿನ ಹಾಗೆಯೇ. ನೀನು ಹೀಗೆಲ್ಲ ಆದರೆ ನಾನೇನು ಮಾಡ್ಲಿ ಅಂತ ಕೇಳಿದಾಗ ಅವಳು ಹೇಳಿದಳು: 'ಇಲ್ಲೇ ಆಶ್ರಮದಲ್ಲೇ ಇದ್ದುಕೋ' ಅಂತ. ಕಾವಿ ಉಟ್ಟು ರುದ್ರಾಕ್ಷಿಮಾಲೆ ಹಾಕಿಕೊಂಡು ಬೇಡದ್ದನ್ನೆಲ್ಲ ಮಾಡ್ತಾ, ನೋಡ್ತಾ ಕಾಲ ಕಳೆಯೋದಕ್ಕೆ ನನಗೆ ಆಗೋದಿಲ್ಲ."

ಆ ಬದುಕಿನ ಸ್ಥಿತಿಯನ್ನು ಕಂಡು ಕೇಶವ ಪಿಳ್ಳೈ ಎಷ್ಟೋ ಹೊತ್ತು ಸ್ತಂಭಿತರಾಗಿ ಕುಳಿತಿದ್ದರು. ಭಾಗೀರಥಿಯಮ್ಮ ಕೇಳಿದಳು:

"ಅವಳನ್ನು ಒಂದು ಸಲ ಕಂಡು ಪಿಳ್ಳೈ ಒಂದು ಮಾತು ಹೇಳಿದರಾಗದಾ?"

"ಹೇಳಿ ಏನು ಪ್ರಯೋಜನ?"

ಸ್ವಲ್ಪ ಹೊತ್ತು ಆಲೋಚಿಸುತ್ತ ಇದ್ದು ಭಾಗೀರಥಿಯಮ್ಮ ಹೇಳಿದಳು: "ಅದೂ ನಿಜ! ಪಿಳ್ಳೈ ಹೇಳಿದರೂ ಯಾವ ಪ್ರಯೋಜನವೂ ಆಗೋದಿಲ್ಲ. ಪಿಳ್ಳೈ ಅಂದರೆ ಅವಳಿಗೊಂದು ಲೆಕ್ಕವೇ ಇರಲಿಲ್ಲ."

ಭಾಗೀರಥಿಯಮ್ಮ ಒಂದು ನಿಟ್ಟುಸಿರು ಬಿಟ್ಟಳು. ಇದೆಲ್ಲ ಹಣೆಬರಹ ಎಂದು ಅವಳು ಹೇಳಿದ್ದು. ಸಮಾಧಾನಪಡಿಸುವುದಕ್ಕಾಗಿ ಕೇಶವ ಪಿಳ್ಳೈ ಹೇಳಿದರು:

"ಒಂದು ವೇಳೆ ನಿಜವಾದ ಭಕ್ತಿಯಿಂದಲೂ ಆಗಿರಬಹುದು ಅವಳು ಹಾಗೆಲ್ಲ ಮಾಡ್ತಿರೋದು" ಎಂದು.

"ಭಕ್ತಿ! ಒಳ್ಳೆ ಭಕ್ತಿ. ನಾನು ಹೇಳಿದ್ದೊಂದೂ ಪಿಳ್ಳೈಗೆ ಕೇಳಿಸಲಿಲ್ಲವಾ? ಇದು ಯಾವುದೂ ಭಕ್ತಿಯೂ ಅಲ್ಲ ವಿಶ್ವಾಸವೂ ಅಲ್ಲ. ಎಲ್ಲ ಹುಚ್ಚು ಹಿಡಿದು ಮಾಡೋ ಅಂಥಾದ್ದು. ಹುಚ್ಚು!"

ಸ್ವಲ್ಪ ಹೊತ್ತು ಬಿಟ್ಟು ಭಾಗೀರಥಿಯಮ್ಮ ಹೇಳಿದಳು:

"ಪಿಳ್ಳೈ, ಇಲ್ಲಿ ಕೇಳ್ತೀರಾ? ಈ ಮಧ್ಯೆ ಅವಳಿಗೆ ಹುಚ್ಚು ಹಿಡಿದಿತ್ತು. ಶುದ್ಧ ಹುಚ್ಚು. ಊಳಾಂಬಾರಕ್ಕಾಗಲೀ ಮತ್ತೆಲ್ಲಿಗಾಗಲೀ ಕಳಿಸಬೇಕು ಅಂದುಕೊಂಡಿದ್ದೆ. ಹೇಗೆ ಅಂತ ಗೊತ್ತಾ? ಹಾಗೇ ಕುಳಿತಿದ್ದಾಗ ಅವಳಿಗೆ ಪ್ರಜ್ಞೆ ಇರ್‍ತಿರಲಿಲ್ಲ. ಆ ಮೇಲೆ ಅವಳು ನಗಾಡ್ತಿದ್ದಳು. ನಗು ಬಂದರೆ ನಿಲ್ಲಿಸ್ತಾಲೇ ಇರಲಿಲ್ಲ. ತೆಂಗಿನ ಕಾಯಿ ತಂದು ಅದಕ್ಕೆ ಸ್ನಾನ ಮಾಡಿಸಿ, ಚಂದನನ್ನೋ ಭಸ್ಮನ್ನೋ ಹಚ್ಚಿಕೊಂಡು, ಕಾಡಿಗೆ ಹಚ್ಚಿ, ಹಾಸಿಗೆ ಮೇಲಿಟ್ಟುಕೊಂಡು ಬಿದ್ದುಕೊಳ್ಳುತ್ತಿದ್ದಳು. ಅದೆಲ್ಲ ಅವನು ಮಂಕುಬೂದಿ ಎರಚಿದ್ದು. ಅವಳು ತುಂಬ ದಿನ ರಜೆ ತಕ್ಕೊಂಡಳು. ಈಗ ರಾಜೀನಾಮೆ ಕೊಟ್ಟಳು."

ಕೇಶವ ಪಿಳ್ಳೈ ಕೇಳಿದರು:

"ಈಗಲೂ ಆ ಹುಚ್ಚು ಉಂಟಾ?"

ಭಾಗೀರಥಿಯಮ್ಮ ಹೇಳಿದಳು: "ಆ ಹುಚ್ಚು ಅವನೇ ಬಿಡಿಸಿದ. ಆದರೆ ಅವಳ

ಮುಖದಲ್ಲಿ ಒಂದು ವಿಶೇಷತೆಯಿತ್ತು. ಹಳೆಯ ಮುಖವಲ್ಲ. ಥಟ್ಟನೆ ಸಿಟ್ಟೂ ಸಂಕಟವೂ, ಸಂತೋಷವೂ ಬರುತ್ತದೆ." ಆ ಮುದುಕಿ ಎಲ್ಲವನ್ನೂ ಹೇಳಿ ಮುಗಿಸಿದಳು.

"ಅವನು ಅಲ್ಲಿಂದ ಹೋಗೋದಕ್ಕೆ ಅವಳು ಒಪ್ಪೋದಿಲ್ಲ."

ಇಬ್ಬರೂ ಸ್ವಲ್ಪ ಹೊತ್ತು ಅವರವರ ಸ್ವಂತ ಚಿಂತೆಯಲ್ಲಿ ಮುಳುಗಿದ್ದರು. ಭಾಗೀರಥಿಯಮ್ಮ ವಿವರಿಸಿದಂತೆಯೇ ಇದ್ದರೆ ಆ ಕಟ್ಟಡ ಕಟ್ಟಿಸಿ ಅವಳಿಗೆ ಪರಿಹಾರ ಕೊಟ್ಟಿದ್ದು ತಪ್ಪಾಯ್ತು ಎಂದು ಕೇಶವ ಪಿಳ್ಳೆಗೆ ತೋರಿತು. ಅದು ಇಂದು ಪರಾಧೀನವಾಗುತ್ತಿದೆ. ಅವರ ಜೊತೆಗೆ ಅದನ್ನು ಕುರಿತು ತಾನೇತಕ್ಕೆ ಚಿಂತಿಸಬೇಕು ಎಂದು ಕೇಶವ ಪಿಳ್ಳೆಗೆ ತೋರಿತು. ಹಾಗೆ ಒಂದು ಋಣ ತೀರಿತು. ಉಪಕಾರ ಮಾಡಿದ್ದಕ್ಕೆ ಪ್ರತ್ಯುಪಕಾರ ಮಾಡಿವೆ. ಆ ಪ್ರತ್ಯುಪಕಾರವನ್ನು ಪಡೆದವಳು ಹೇಗೆ ಅದನ್ನು ವಿನಿಯೋಗಿಸುತ್ತಿದ್ದಾಳೆ ಎಂದು ಕಂಡುಹಿಡಿಯಬೇಕಾಗಿದೆಯೇ? ಅದು ಹೋಗಲಿ. ಆದರೂ ಕೇಶವ ಪಿಳ್ಳೆಯ ಹೃದಯದಲ್ಲಿ ಎಲ್ಲಿಯೋ ಒಂದು ಕಡೆಯಲ್ಲಿ ವೇದನೆಯಿದೆ. ಅವಳು ತೆಂಗಿನ ಕಾಯಿ ತೊಳೆದು ಅದಕ್ಕೆ ಕಾಡಿಗೆ ಹಚ್ಚಿ, ಭಸ್ಮವನ್ನೂ ಗಂಧವನ್ನೂ ಹಚ್ಚಿ ಹಾಸಿಗೆಯ ಮೇಲೆ ಇಟ್ಟುಕೊಂಡು ಮಲಗುತ್ತಿದ್ದಳು. ಅದಕ್ಕೆ ಕಾರಣ ಬಹುಶಃ ಒಂದು ಮಗುವಿನ ತಾಯಿಯಾಗಬೇಕು ಎನ್ನುವ ಬಯಕೆಯಾಗಿರಬಹುದೇ?

ಭಾಗೀರಥಿಯಮ್ಮ ಬಂದದ್ದು ಈ ವಿಷಯಗಳನ್ನು ತಿಳಿಸುವುದಕ್ಕೆ ಮಾತ್ರವಾಗಿತ್ತೆ? ಅದಕ್ಕೂ ಹೆಚ್ಚಾಗಿ ಯಾವುದೋ ಉದ್ದೇಶದಿಂದ ಬಂದಿದ್ದದ್ದು. ಅದನ್ನವಳು ಹೇಳಲಿಲ್ಲ. ತಂಗಮ್ಮನನ್ನು ಕಂಡು ಮಾತಾಡಬೇಕು ಎಂದು ಅವಳು ಹೇಳಿದಳು. ಆದರೆ ಮರುಕ್ಷಣದಲ್ಲಿ ಅದರಿಂದ ಯಾವ ಪ್ರಯೋಜನವೂ ಆಗುವುದಿಲ್ಲವೆಂದು ಅವಳಿಗೇ ತೋರಿತು. ಕೇಶವ ಪಿಳ್ಳೆಗೆ ಅವಳನ್ನು ಹಿಡಿತಕ್ಕೆ ತರಬಹುದಾದ ಯಾವ ಶಕ್ತಿಯೂ ಇರಲಿಲ್ಲ. ಇನ್ನು ಮೇಲೆ ಅದು ಕೈಗೂಡುವುದಿಲ್ಲವೆಂದೂ ಅವಳಿಗೆ ಗೊತ್ತಿತ್ತು.

ಹಾಗೆ ಇಬ್ಬರೂ ಏನೂ ಮಾತನಾಡದೆ ಸ್ವಲ್ಪ ಹೊತ್ತು ಕುಳಿತಿದ್ದರು. ಭಾಗೀರಥಿಯಮ್ಮ ಕೇಳಿದಳು:

"ಪಿಳ್ಳೆ, ಈಗ ನಾನೇನು ಮಾಡಲಿ?"

ಯಾವ ಉತ್ತರವನ್ನೂ ಹೇಳಲು ತೋರದೆ ಕೇಶವ ಪಿಳ್ಳೆ ಭಾಗೀರಥಿಯಮ್ಮನ ಮುಖದ ಕಡೆಗೆ ನೋಡಿದರು. ಆ ಮುದುಕಿ ಮಗಳ ಜೊತೆಯಲ್ಲಿ ಜೀವಿಸಲು ಸಾಧ್ಯವಿಲ್ಲ ಎಂದು ಹೇಳಿದಳು.

"ಮತ್ತೂ ಅಲ್ಲಿಯೇ ಜೀವಿಸೋದು ಅಂದರೆ—ಒಂದು ಧರ್ಮಾಶ್ರಮದಲ್ಲಿ ಜೀವಿಸಿದ ಹಾಗೆ. ಅದಕ್ಕಿಂತಲೂ ಒಳ್ಳೆಯದು ಯಾವುದಾದರೂ ಪುಣ್ಯಕ್ಷೇತ್ರಕ್ಕೆ ಹೋಗಿ ಭಜನೆ ಮಾಡಿಕೊಂಡು ಕಾಲಕಳೆಯೋದಲ್ಲವಾ? ಅಲ್ಲಿ ಯಾರ್‍ಯಾರೂ ಇಲ್ಲದ ಹೆಣ್ಣು ಮಕ್ಕಳನ್ನು, ವಿಧವೆಯರನ್ನು, ಕೆಟ್ಟು ಹಾಳಾದ ಹೆಂಗಸರನ್ನು ಕರಕೊಂಡು ಬಂದು ಸಾಕ್ತಾರೆ ಅಂತ ಕೇಳಿರೋದು. ಅದಕ್ಕೆ ಆ ಮನೇನ ಆ ಸ್ವಾಮಿಗೆ ಬರೆದು ಕೊಡೋದಂತೆ.

ನಾನು ಯಾರ್‍ಯಾರೂ ಇಲ್ಲದವರ ಜೊತೇಲಿ ಬಾಳಬೇಕಾಗಿದೆ. ಆಗ ಅಲ್ಲಿಯ ಪ್ರಪಂಚ ಹೇಗಿರಬಹುದು ಎಂದು ಯಾರಿಗೆ ಗೊತ್ತು? ನನಗೆ ಅಲ್ಲಿ ಹಾಗೆ ಬಾಳೋದಕ್ಕೆ ಆಗೋದಿಲ್ಲ ಕೇಶವ ಪಿಳ್ಳೆ!"

ಕೇಶವ ಪಿಳ್ಳೆ ಚಿಂತಾಮಗ್ನರಾಗಿ ಆ ಕೊಠಡಿಯೊಳಗೆ ಅತ್ತ ಇತ್ತ ನಡೆದಾಡುತ್ತಿದ್ದರು. ಈ ಪ್ರಶ್ನೆಗೆ ಯಾವ ಪರಿಹಾರವೂ ಕಂಡುಬರುತ್ತಿಲ್ಲ. ಶೇಖರ ಪಿಳ್ಳೆ ಹಿಂದೆ ಪಾರ್ಕ್ ವ್ಯೂಗೆ ಬಂದು ಹೇಳಿದುದನ್ನೆಲ್ಲ ಕೇಶವ ಪಿಳ್ಳೆ ಸ್ಮರಿಸಿಕೊಂಡರು. ಜೊತೆಗೆ ಆ ಮನುಷ್ಯನ ಅಂತಿಮ ದಿನಗಳೂ ನೆನಪಿಗೆ ಬಂದುವು. ಕೇಶವ ಪಿಳ್ಳೆಗೆ ಜೀವನದಲ್ಲಿ ಎಂದೂ ಮರೆಯಲಾರದ ವ್ಯಕ್ತಿ ಎಂದರೆ ಶೇಖರ ಪಿಳ್ಳೆಯಲ್ಲದೆ ಮತ್ತಾರು? ಆ ಮನುಷ್ಯನ ಪತ್ನಿ ಇಂದು ಜೀವಿಸುವುದಕ್ಕೆ ಬೇರೆ ಗತಿಯಿಲ್ಲದೆ ನಿಂತಿದ್ದಾಳೆ. ಸಾಯುವ ಕಾಲದಲ್ಲಿ ಆಕೆಯನ್ನು ಸಾಕುವ ಜವಾಬ್ದಾರಿಯನ್ನು ಶೇಖರ ಪಿಳ್ಳೆ ತನಗೆ ವಹಿಸಿದ್ದರೆ? ಕೇಶವ ಪಿಳ್ಳೆಗೆ ಅದು ಸರಿಯಾಗಿ ನೆನಪಿಲ್ಲ. ಅವರನ್ನು ನೋಡಿಕೊಳ್ಳಬೇಕು ಎಂದು ಹೇಳಲಿಲ್ಲವೆ? ಹೇಳಿರಬೇಕು. ಇಲ್ಲ, ಹಾಗೆ ಹೇಳಿದ ಹಾಗಿಲ್ಲ. ಜವಾಬ್ದಾರಿಯನ್ನೇನೂ ವಹಿಸಿಲ್ಲ. ಆದರೂ ಒಂದು ಹೊಣೆಗಾರಿಕೆಯಲ್ಲವೆ? ಆ ವಿಷಯಕ್ಕೆ ಸಂಬಂಧಪಟ್ಟ ಹೊಣೆಗಾರಿಕೆಗಳೆಲ್ಲಾ ತೀರಿದುವೆ? ತೀರಿದುವು ಎಂದು ಭಾವಿಸುವುದಕ್ಕೆ ಏತಕ್ಕೋ ಸಾಧ್ಯವಾಗುತ್ತಿಲ್ಲ.

ಕೇಶವ ಪಿಳ್ಳೆ ಕೇಳಿದರು: "ನಾನೀಗ ಏನು ಮಾಡಬೇಕು?"

ಆ ಸ್ತ್ರೀ ನಿರ್ಧಾರವಾಗಿ ಹೇಳಿದರು: "ನನಗೆ ಅದು ಗೊತ್ತಿಲ್ಲ. ನನಗೆ ಆಶ್ರಯ ಪಿಳ್ಳೆ ಅಲ್ಲದೆ ಬೇರೆ ಇಲ್ಲ. ಪಿಳ್ಳೆ ಏನು ಬೇಕಾದರೂ ನೀವರ್ಾನ ಮಾಡಿ."

ಒಂದು ಕ್ಷಣ ಕಳೆದು ಆಶ್ರಯರಹಿತಳಾದ ಆಕೆ ಹೇಳಿದಳು: "ಅಂತು ಪಿಳ್ಳೆಗೆ ನಾನು ತುಂಬ ದಿನ ಭಾರವಾಗಿರೋದಿಲ್ಲ. ಆಯುಷ್ಯ ಹೆಚ್ಚಿಗೆಯಿಲ್ಲ! ಆ ರೀತಿ ಶ್ರೀಕಂಠೇಶ್ವರ ನನ್ನನ್ನು ಕಷ್ಟಪಡಿಸೋದೂ ಇಲ್ಲ."

ತಾನೇನು ಮಾಡಬೇಕೆಂದು ಕೇಶವ ಪಿಳ್ಳೆಗೆ ಸರಿಯಾಗಿ ತಿಳಿಯದಾಗಿತ್ತು. ತನಗಿಂಥಾದ್ದು ಮಾಡಬೇಕು ಎಂದು ಆ ಸ್ತ್ರೀ ಹೇಳುವುದೂ ಇಲ್ಲ. ಕೇಶವ ಪಿಳ್ಳೆ ಹೇಳಿದರು: "ನಾನು ಪ್ರತಿ ತಿಂಗಳೂ ಸ್ವಲ್ಪ ಹಣ ಕೊಟ್ಟರೆ ಆಗದಾ?"

"ನಾನೆಲ್ಲಿ ವಾಸ ಮಾಡಲಿ ಪಿಳ್ಳೆ? ನನ್ನ ಗಂಡುಮಕ್ಕಳ ಜೊತೇಲೂ ನಾನು ಜಗಳ ಆಡಿಕೊಂಡು ಬಂದೆ. ಇನ್ನು ಮೇಲೆ ಅಲ್ಲಿಗೆ ಹೋದರೆ—"

"ಅವರು ಹೊರಗೆ ಹಾಕದೆ ಇರ್ತಾರಾ?"

"ಏನೋ! ನನಗೊಂದೂ ಗೊತ್ತಾಗೋದಿಲ್ಲ."

ಕೇಶವ ಪಿಳ್ಳೆ ಕೇಳಿದರು: "ಸಂಬಂಧಿಕರ ಮನೆ ಬೇರೆ ಯಾವುದೂ ಇಲ್ವೆ?"

"ಇಲ್ಲಾಂತ ಹೇಳೋದಕ್ಕಾಗೋದಿಲ್ಲ ಪಿಳ್ಳೆ. ಆದರೆ ಅವರಿಗೆ ನನ್ನ ಮೇಲೆ ಕರುಣೆ ತೋರಿಸ್ಬೇಕೂಂತ ಏನು? ಏನೂ ಇಲ್ಲ. ಬೇಕಾದರೆ ಹಣ ಕೊಟ್ಟು ಊಟ

ಮಾಡಬಹುದು." ಮುದುಕಿ ಮುಂದುವರಿಸಿದಳು:

"ನಾನು ಎಲ್ಲಾದರೂ ಒಂದು ಕಡೆ ಮುದುರಿಕೊಂಡು ಬಿದ್ದಿದ್ದು ಕಾಲ ಕಳೆದರೆ ಸಾಕು ಕೇಶವ ಪಿಳ್ಳೆ. ಹಾಗೆ ಮುದುರಿಕೋಡು ಬಿದ್ದಿರೋದಕ್ಕೂ ಜಾಗ ಇಲ್ಲ."

ಕೇಶವ ಪಿಳ್ಳೆಯ ಜೊತೆಯಲ್ಲಿಯೇ ಇದ್ದರೇನು ಎನ್ನುವ ಭಾವನೆ ಭಾಗೀರಥಿಯಮ್ಮನಿಗೆ ಇದ್ದಂತೆ ಕೇಶವ ಪಿಳ್ಳೆಗೆ ತೋರಿತು. ತನಗೆ ಈ ಜೀವನದಲ್ಲಿ ಒಬ್ಬನೇ ಅಳಿಯ ಇರುವುದು ಎಂದು ಭಾಗೀರಥಿಯಮ್ಮ ಹೇಳಿದುದನ್ನು ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು. ಅದನ್ನು ಅವರು ಬಲವಾಗಿ ಹಿಡಿದುಕೊಂಡಂತೆ ತೋರಿತು. ಅವರ ಮಗಳನ್ನು ಕೇಶವ ಪಿಳ್ಳೆ ಮದುವೆ ಮಾಡಿಕೊಳ್ಳದೆ ಇದ್ದರೂ ಇಂದೂ ಕೇಶವ ಪಿಳ್ಳೆ ತನ್ನ ಅಳಿಯನೆಂದೇ ಭಾವಿಸಿದ್ದಾಳೆ. ಭಾಗೀರಥಿಯಮ್ಮನ ಆಲೋಚನೆಯೂ ನಿರ್ಧಾರವೂ ಕೇಶವ ಪಿಳ್ಳೆಗೆ ಅರ್ಥವಾಯಿತು. ಆ ಸ್ತ್ರೀ ಮುಂದೆ ಹೀಗೆ ಹೇಳಿದ್ದಾಗಿರಬಹುದು. 'ಇದು ತುಂಬ ದೊಡ್ಡ ಬಂಗಲೆ. ಕೆಲಸದವರಿಗಿರುವ ಸಣ್ಣ ರೂಮಿನಲ್ಲಿ ನಾನು ಮುದುರಿಕೊಂಡು ಬಿದ್ದಿದ್ದು ಕಾಲಕಳೆಯುತ್ತೇನೆ. ಒಂದು ಗುಟುಕು ಗಂಜಿನೀರು ಕೊಟ್ಟರೆ ಸಾಕು!' ಈ ಮಾತುಗಳು ನಾಲಗೆಯ ತುದಿಯ ವರೆಗೆ ಬಂದಿವೆ. ಯಾವುದಾದರೂ ಒಂದೇ ಒಂದು ಪ್ರಶ್ನೆಯನ್ನು ಕೇಶವ ಪಿಳ್ಳೆ ಕೇಳಿದರೆ ಸಾಕು. ಈ ಬಯಕೆ ಹೊರಗೆ ಬರುತ್ತದೆ.

ಅದರಿಂದೇನು ತೊಂದರೆ? ಅಲ್ಲಿ ಇದ್ದುಕೊಳ್ಳಲಿ ಎಂದು ಒಪ್ಪಿಕೊಳ್ಳಬೇಕಾಗಿತ್ತು. ಒಪ್ಪಿಕೊಳ್ಳುವಂಥಾದ್ದು ಕೂಡ. ಆದರೆ ಈಗ ಕಾತ್ಯಾಯಿನಿ ಅಲ್ಲಿದ್ದಾಳೆ. ಸಾಧ್ಯವಿಲ್ಲ. ಹಾಗೆ ಒಪ್ಪಬಾರದು. ಕಾತ್ಯಾಯಿನಿಯೂ ಭಾಗೀರಥಿಯಮ್ಮನೂ ಒಂದೇ ಮನೆಯಲ್ಲಿ ವಾಸಿಸುವುದು ಸಾಧ್ಯವಿಲ್ಲ.

ಇದ್ದಕ್ಕಿದ್ದ ಹಾಗೆ ಕಾತ್ಯಾಯಿನಿಯಮ್ಮ ಬಾಗಿಲಿನಲ್ಲಿ ಕಾಣಿಸಿಕೊಂಡಳು. ನಗುತ್ತಾ ಭಾಗೀರಥಿಯಮ್ಮ ಹೇಳಿದಳು: "ಅಯ್ಯೋ! ಹೆಂಡತಿ ಇಲ್ಲೇ ಇದ್ರಾ? ನನ್ನ ಹತ್ರ ಹೇಳಲೇ ಇಲ್ಲವಲ್ಲಾ? ಬಂದದ್ದ್ಯಾವಾಗ?"

ಕೇಶವ ಪಿಳ್ಳೆ ಮಾತಾಡಲಿಲ್ಲ. ಆತ ಕೈಕೈ ಹಿಸುಕಿಕೊಳ್ಳುತ್ತಾ ನಿಂತಿದ್ದರು. ಭಾಗೀರಥಿಯಮ್ಮ ಹೇಳಿದಳು:

"ಹಾಗಿದ್ದರೆ ನಾನು ಬರ್‍ತೇನೆ."

ಭಾಗೀರಥಿಯಮ್ಮ ಬಾಗಿಲಿನ ಹತ್ತಿರಕ್ಕೆ ಹೋದಳು. ಆ ಸ್ತ್ರೀಯರಿಬ್ಬರೂ ಒಳಗೆ ಹೋದರು.

'ಸಾಧ್ಯವಿಲ್ಲ' ಎನ್ನುವ ಶಬ್ದ ಕೇಶವ ಪಿಳ್ಳೆಯ ತುಟಿಯವರೆಗೆ ಬಂದಿತು. ಹೊರಗೆ ಬರಲಿಲ್ಲ. ಎಂಥಾ ಗ್ರಹಚಾರದ ದಿನ!

# [24]

## ದಾಂಪತ್ಯದ ಪ್ರಾರಂಭ

ಆ ಮುದುಕಿ ಕಾತ್ಯಾಯಿನಿಯ ಹತ್ತಿರ ಏನೆಲ್ಲ ಹೇಳಿಬಿಡಬಹುದು ಎನ್ನುವುದನ್ನು ಕೇಶವ ಪಿಳ್ಳೆಗೆ ಊಹಿಸಲು ಸಾಧ್ಯವಿರಲಿಲ್ಲ. ಅವರು ತೀರ ಅಸ್ವಸ್ಥರಾಗಿದ್ದರು. ಹೋಗಿ ಅವರ ಮಧ್ಯೆ ಕುಳಿತುಕೊಂಡರೇನು ಎನ್ನಿಸಿತು. ತಾನು ಎದುರಿಗಿದ್ದರೆ ಆ ಮುದುಕಿ ಅದಾವುದನ್ನೂ ಹೇಳದಿರಬಹುದು. ಅಥವಾ ಹೇಳುವುದಕ್ಕೆ ಪ್ರಾರಂಭಿಸಿದ್ದರೆ ಮಾತನ್ನು ಬೇರೆ ಕಡೆಗೆ ತಿರುಗಿಸಲೂಬಹುದು. ಆದರೆ ಒಬ್ಬ ತಪ್ಪು ಮಾಡಿದವನ ಹೃದಯಭಾರ ಅಪರಿಗಿನ್ನದದ್ದು. ಆ ಇಬ್ಬರು ಸ್ತ್ರೀಯರು ಕುಳಿತು ಮಾತನಾಡುತ್ತಿರುವುದರ ಮಧ್ಯೆ ಪ್ರವೇಶಿಸುವ ಧೈರ್ಯ ತನಗಿಲ್ಲವೆನ್ನಿಸಿತು. ಆ ವೃದ್ಧೆ ವಿತಕ್ಕೆ ಬಂದಳು ಎಂದೋ, ಯಾರು ಎಂದೋ ಹೇಳುವಾಗ ಉಳಿದ ವಿಷಯಗಳನ್ನು ಕೆಣಕಿ ಕೆಣಕಿ ಹೊರಪಡಿಸಬಹುದಾದ ಶಕ್ತಿ ಕಾತ್ಯಾಯಿನಿಗಿದೆಯೆ? ಅದೊಂದೇ ಆಶ್ವಾಸನೆ ಕೇಶವ ಪಿಳ್ಳೆಗಿದ್ದದ್ದು. ಆ ಹಳ್ಳಿಯ ಹೆಣ್ಣು ಅಷ್ಟೊಂದು ಸೂಕ್ಷ್ಮಬುದ್ಧಿಯವಳಾಗಿರುವುದಿಲ್ಲ.

ಅಂತು ಚೀಫ್ ಸೆಕ್ರೆಟರಿಯಾಗಿ ಚಾರ್ಜು ವಹಿಸಿಕೊಂಡ ದಿನ ಒಳ್ಳೆಯ ದಿನವಾಗಿರಲಿಲ್ಲ. ಅಂದು ವೈಯಕ್ತಿಕ ಜೀವನದ ಬಹುದೊಡ್ಡ ಇಕ್ಕಟ್ಟುಗಳನ್ನು ಕೇಶವ ಪಿಳ್ಳೆ ಎದುರಿಸುತ್ತಿದ್ದರು. ಓ ! ಹಾಳಾದ್ದು ! ಈಗ ಎಲ್ಲವೂ ತಿಳಿದು ಕಾತ್ಯಾಯಿನಿಯಮ್ಮ ಒಬ್ಬಳು ಭದ್ರಕಾಳಿಯಾಗಿ ಮಾರ್ಪಾಟು ಹೊಂದುವುದಿಲ್ಲವೆ? ಅವಳ ನಿಜವಾದ ಸ್ವರೂಪವನ್ನು ಕಾಣಬೇಕಾಗುತ್ತದೆ. ಇದು ವರೆಗೆ ನಿಜವಾದ ಸಂಗತಿ ಏನು ಎಂದು ಅವಳಿಗೆ ತಿಳಿಯದು.

ಮುಗಿಯದ ಮಾತುಕತೆ ಒಳಗೆ ನಡೆದಿದ್ದದ್ದು ! ಆ ಮುದುಕಿಗೆ ಇಂದು ಹೇಳಲೇಬೇಕಾಗಿದೆ. ಏನು ಹೇಳಬೇಕು. ಏನು ಹೇಳಬಾರದು ಎನ್ನುವ ಯಾವ ತಿಳುವಳಿಕೆಯೂ ಆಕೆಗಿಲ್ಲ. ಯಾವ ತಡೆಯೂ ಇಲ್ಲದೆ, ಯಾವ ಪ್ರಶ್ನೆಯನ್ನೂ ಕೇಳದಿದ್ದರೂ ಹೇಳಬೇಕು ಅನ್ನಿಸಿದ್ದನ್ನೆಲ್ಲ ಆ ಮುದುಕಿ ಹೇಳಿಬಿಡುತ್ತಾಳೆ. ಕಾತ್ಯಾಯಿನಿಯಮ್ಮನಿಗೆ ತಿಳಿಯಬೇಕಾದದ್ದು ಬಾಕಿ ಯಾವುದೂ ಉಳಿಯದೇ ಹೋಗಬಹುದು.

ಕಾತ್ಯಾಯಿನಿಯಮ್ಮ ಆಫೀಸು ರೂಮಿಗೆ ಬಂದಳು. ಅವಳ ಮುಖಭಾವದಲ್ಲಿ ಯಾವ ವಿಶೇಷತೆಯೂ ಕಂಡುಬಂದಂತಿರಲಿಲ್ಲ. ಅದು ಕೇಶವ ಪಿಳ್ಳೆಗೆ ಸ್ವಲ್ಪ ಸಮಾಧಾನವನ್ನು ತಂದಿತು.

ಕಾತ್ಯಾಯಿನಿಯಮ್ಮ ಕೇಳಿದಳು: "ಆ ಮುದುಕಿ ಇಲ್ಲೇ ವಾಸ ಮಾಡಿಕೊಳ್ಳಬಹುದಾ?"

ಕೇಶವ ಪಿಳ್ಳೆಗೆ ಆ ಪ್ರಶ್ನೆಯನ್ನು ನಂಬಲಾಗಲಿಲ್ಲ. ಹಾಗಾದರೆ ಕಾತ್ಯಾಯಿನಿಯಮ್ಮನಿಗೆ ಏನೂ ತಿಳಿದಿಲ್ಲವೆ?

ಆಕೆ ಕೇಳಿದಳು: "ನಮ್ಮ ಈ ಸ್ಥಿತಿಗೆ ಕಾರಣರಾದವರನ್ನು ನಾವು ನೆನಸಿಕೊಳ್ಳಬಾರದಾ? ಮರೆತುಬಿಡೋದಾ? ದೇವರು ನಮ್ಮನ್ನ ಸುಮ್ಮನೆ ಬಿಡುವನಾ?"

ಕೇಶವ ಪಿಳ್ಳೆ ಮೌನವಾಗಿದ್ದರು. ಕಾತ್ಯಾಯಿನಿಯಮ್ಮ ಮತ್ತೆ ಕೇಳಿದಳು: "ಯಾಕೆ ಏನೂ ಮಾತಾಡದೇ ಇದ್ದೀರಿ?"

ಒಪ್ಪಿಗೆಯನ್ನು ನಿರೀಕ್ಷಿಸುತ್ತ ಕಾತ್ಯಾಯಿನಿಯಮ್ಮ ನಿಂತಿದ್ದಳು. ಒಹುಶಃ ಅವಳಿಗೆ ಈ ಚರಿತ್ರೆ ಸಂಪೂರ್ಣವಾಗಿ ತಿಳಿದಿರಲಾರದಲ್ಲವೆ?

ಏನು ಹೇಳಬೇಕೆಂಬುದು ಕೇಶವ ಪಿಳ್ಳೆಗೆ ಥಟ್ಟನೆ ಹೊಳೆಯದಾಯಿತು. ಅಂತು ಒಬ್ಬ ಮೇಲಧಿಕಾರಿ, ತನ್ನ ಕೈಕೆಳಗಿನ ನೌಕರನ ಹತ್ತಿರ ಅಧಿಕಾರವಾಣಿಯಿಂದ ಕೇಳುವಂತೆ ಕೇಳಿದರು: "ನೀನು ಆಲೋಚನೆ ಮಾಡಿ ಕೇಳ್ತಿರೋದಾ?"

ಥಟ್ಟನೆ ಬಂದಿತ್ತು ಅವಳ ಉತ್ತರ. ಜೊತೆಗೆ ಧೈರ್ಯದಿಂದಲೂ ಕೂಡಿತ್ತು: "ಹೌದು, ಅಲ್ಲದೆ ನಾನು ಯಾಕೆ ಆಲೋಚನೆ ಮಾಡಬೇಕು?"

"ನಿನಗೆ ಇವತ್ತು ಆ ಮುದುಕಿಯ ಮೇಲೆ ಹುಟ್ಟಿದ ಕರುಣೆ, ನಾಳೆ ಅಥವಾ ಇದೇ ದಿನ ಇಲ್ಲದೇ ಹೋದರೆ?"

ಕೇಶವ ಪಿಳ್ಳೆ ಹೇಳಿ ಮುಗಿಸುವ ಮೊದಲೇ ಕಾತ್ಯಾಯಿನಿಯಮ್ಮ ಆ ಮಾತನ್ನು ಪೂರ್ತಿ ಮಾಡಿದಳು: "ನಾನು ಬಡಿದು ಓಡಿಸಿ ಬೀದಿಪಾಲು ಮಾಡೋದಿಲ್ಲ. ತಿಂದ ಅನ್ನಕ್ಕೆ ಋಣಿಯಾಗಿರಬೇಕು. ನನಗೆಲ್ಲ ಗೊತ್ತಾಯ್ತು. ಆಗ ಜನರು ಮಾತಾಡಿಕೊಳ್ತಿದ್ದದ್ದೆಲ್ಲ ನಿಜ ಅಂತ ಗೊತ್ತಾಯ್ತು."

ಕೇಶವ ಪಿಳ್ಳೆಯ ದೇಹವಿಡೀ ತಣ್ಣಗಾದಹಾಗಾಯಿತು. ಆ ಮನುಷ್ಯ ಮರಗಟ್ಟಿದಂತಾದರು. ಕಾತ್ಯಾಯಿನಿಯಮ್ಮ ಕೇಳಿದಳು: "ಅದಕ್ಕಾಗಿ ಅಲ್ಲ. ಅದು ಕರ್ತವ್ಯ. ಆ ಮುದುಕೀನ ನಾನು ನೋಡಿಕೊಳ್ತೀನಿ. ನನಗೆ ಯಾವ ದೂರೂ ಬರೋದಿಲ್ಲ."

ಅನಂತರವೂ ಕಾತ್ಯಾಯಿನಿಯಮ್ಮ ಒಪ್ಪಿಗೆಗಾಗಿ ನಿರೀಕ್ಷಿಸುತ್ತ ನಿಂತಿದ್ದಳು. "ಬೇಡ" ಎಂದು ಹೇಳಿದರೆ ಒಳ್ಳೆಯದೆಂದು ಕೇಶವ ಪಿಳ್ಳೆಗೆ ತೋರಿತು. ಭಾಗೀರಥಿಯಮ್ಮ ನಮ್ಮ ಜೊತೆಯಲ್ಲಿ ವಾಸ ಮಾಡುವುದು ಬೇಡ. ಕೇಶವ ಪಿಳ್ಳೆಯನ್ನು ಒಂದು ತೆರನಾದ ಭಯ ಆವರಿಸಿತು. ಅಜ್ಞಾತವಾದ ಒಂದು ಭಯ! ಆದರೆ ಹೆಂಡತಿಯ ಮುಖದ ಕಡೆಗೆ ನೋಡುತ್ತ ಭಾಗೀರಥಿಯಮ್ಮ ಅಲ್ಲಿ ವಾಸ ಮಾಡುವುದು ಬೇಡ ಎಂದು ಹೇಳಲು ಸಾಧ್ಯವಿಲ್ಲವಾಗಿತ್ತು.

"ನಿನ್ನ ಇಷ್ಟ ಬಂದ ಹಾಗೆ ಮಾಡು."

ಆ ತರಹದ ಒಪ್ಪಿಗೆಯಲ್ಲ ಕಾತ್ಯಾಯಿನಿಯಮ್ಮನಿಗೆ ಬೇಕಾಗಿದ್ದದ್ದು. ಅವಳು ಹೇಳಿದಳು:

"ಹಾಗಾದರೆ ಇಲ್ಲಿ ಸೌಕರ್ಯ ಇಲ್ಲ ಅಂತ ಹೇಳಿ ಆಚೆಗೆ ಕಳಿಸೋದಾ?"

"ನಾನು ಹೇಳಿದ್ದು ಹಾಗೆಂತಲಾ?"

"ಮತ್ತೇನು ಹೇಳಿದಿರಿ? ನಿನ್ನ ಇಷ್ಟ ಬಂದ ಹಾಗೆ ಮಾಡು ಅಂದರೇನರ್ಥ?"

ಸ್ವಲ್ಪ ಹೊತ್ತು ಕಳೆದ ಮೇಲೆ ಕೇಶವ ಪಿಳ್ಳೆಗೆ ಅರಿವಿಲ್ಲದಂತೆಯೇ ನಾಲಿಗೆಯಿಂದ ಒಂದು ವಾಕ್ಯ ಹೊರ ಬಂದಿತು.

"ಹಾಗಿದ್ದರೆ ಅವರು ಇಲ್ಲೇ ಇರಲಿ."

ಕೇಶವ ಪಿಳ್ಳೆಗೆ ಮತ್ತೇನೋ ಹೇಳಬೇಕು ಎನ್ನಿಸಿತ್ತು. ತಲೆಯೆತ್ತಿ ನೋಡಿದರು. ಅಷ್ಟರಲ್ಲಿ ಕಾತ್ಯಾಯಿನಿಯಮ್ಮ ಅಲ್ಲಿಂದ ಹೋಗಿ ಆಗಿತ್ತು. ಅವರು ಕರೆದರು:

"ಕಾತ್ಯಾಯಿನೀ !"

ಒಳಗಿನಿಂದ "ಏನು?" ಎಂದು ಓಗೊಟ್ಟಳು. ಸ್ವಲ್ಪ ಹೊತ್ತಿನಲ್ಲೇ ಅವಳು ಹಿಂದಿರುಗಿ ಬಂದಳು. ಆ ಸ್ತ್ರೀಯ ಮುಖದಲ್ಲಿ ಸಂತೃಪ್ತ ಭಾವನೆಯಿತ್ತು. ಅವರಾಚೆಗೆ ಹೃದಯದಾಳದಲ್ಲಿ ಎಲ್ಲಿಯಾದರೂ ಆ ಕಥೆಗಳನ್ನೆಲ್ಲ ತಿಳಿದಿರುವ ಹೆಂಡತಿಯ ಮ್ಲಾನತೆಯುಂಟೇ ಎಂದು ಕಂಡುಹಿಡಿಯಲು ಕೇಶವ ಪಿಳ್ಳೆಗೆ ಸಾಧ್ಯವಾಗಲಿಲ್ಲ. ಅವರು ಸೂಕ್ಷ್ಮವಾಗಿ ಹೆಂಡತಿಯನ್ನೊಮ್ಮೆ ನೋಡಿದರು. ಆ ಹಳ್ಳಿಯ ಹೆಣ್ಣಿನ ಹೃದಯದ ಆಳಕ್ಕಿಳಿಯುವ ಶಕ್ತಿ ಆ ಉದ್ಯೋಗಸ್ಥನ ಕಣ್ಣುಗಳಿಗಿರಲಿಲ್ಲ.

ಕಾತ್ಯಾಯಿನಿಯಮ್ಮ ಕೇಳಿದಳು: "ಯಾಕೆ ಕರೆದಿರಿ?"

"ಸುಮ್ಮನೆ ! ಸುಮ್ಮನೆ !"

"ಸುಮ್ಮನೆ ಕರೆದಿರಾ?"

"ನೀನು ಅವರ ಹತ್ತಿರ ಹೇಳಿದೆಯಾ?"

"ಹೇಳಿದೆ, ಯಾಕೆ?"

"ಕೇಳಿದೆ ಅಷ್ಟೆ."

"ಎಷ್ಟೋಂದು ಸಮಾಧಾನ ಆಗಿದೆ ಅಂತ ! ನಾವು ಮಾಡಬೇಕಾದದ್ದು ಇದು. ಇದು ಮಾತ್ರ. ಇದಲ್ಲದೆ........."

ಆ ಪತ್ನಿ ಜೀವನದಲ್ಲಿ ಮೊತ್ತಮೊದಲಾಗಿ ಗಂಡನ ಮುಖವನ್ನು ತೀಕ್ಷ್ಣವಾಗಿ ನೋಡಿದಳು. ಆ ಮೂಲಕ ತಾನು ಹೇಳಬೇಕೆಂದಿದ್ದುದನ್ನು ಪೂರ್ತಿಗೊಳಿಸಿದ್ದು. ಕೇಶವ ಪಿಳ್ಳೆಗೆ ಆ ನೋಟವನ್ನು ಸಹಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ಕೇಶವ ಪಿಳ್ಳೆ ತಲೆ ತಗ್ಗಿಸಿ ಕುಳಿತಿದ್ದರು. ಅಲ್ಲ, ಅವರ ತಲೆ ತಾನಾಗಿ ಬಾಗಿತ್ತು. ಪುನಃ ಗಂಡನ ಅಧಿಕಾರವನ್ನು ಅವರು ಕೈಗೆತ್ತಿಕೊಂಡರು. ಅಧಿಕಾರಿಯ ಆಜ್ಞಾಪನಾಶಕ್ತಿಯನ್ನು.

"ಹ್ಞೂ, ಹೋಗು."

ಕಾತ್ಯಾಯಿನಿಯಮ್ಮ ಒಳಗೆ ಹೋದಳು.

ಕೇಶವ ಪಿಳ್ಳೆ ಒಂದು ಆರಾಮು ಕುರ್ಚಿಯನ್ನೊರಗಿದರು. ಆರಾಮು ಕುರ್ಚಿಯಲ್ಲಿ

ಬಿದ್ದಿದ್ದರು ಎಂದು ಹೇಳುವುದೇ ಸರಿ. ಮನಸ್ಸಿಲ್ಲದ ಮನಸ್ಸಿನಿಂದ ಎಷ್ಟೋ ವರ್ಷಗಳಿಗೆ ಮೊದಲು ಕೊರಳಿಗೆ ತಾಳಿ ಕಟ್ಟಿ ಉಡುಗೆ ತೊಡುಗೆ ಕೊಟ್ಟು ಮನೆಗೆ ಕರೆದುಕೊಂಡು ಬಂದುಬಿಟ್ಟು, ಬಹುಪಾಲು ಮರೆತಿರುತ್ತಿದ್ದ ಆ ಹೆಣ್ಣನ್ನು ಅರ್ಥಮಾಡಿಕೊಳ್ಳಲು ಕೇಶವ ಪಿಳ್ಳೆ ಶ್ರಮಿಸುತ್ತಿದ್ದರು. ಹೌದು! ಅವಳನ್ನು ಜ್ಞಾಪಿಸಿಕೊಂಡ ಸಂದರ್ಭ ಗಳುಂಟೇ? ಹಾಗೆ ಒಬ್ಬಾಕೆ ತನ್ನ ಜೀವನವನ್ನು ಸ್ಪರ್ಶಿಸಿದ್ದನ್ನು ಕೂಡಾ ಆತ ಜ್ಞಾಪಿಸಿ ಕೊಂಡದ್ದಿಲ್ಲ. ತನಗೊಬ್ಬಳು ಹೆಂಡತಿಯಿದ್ದಾಳೆ ಎನ್ನುವ ನೆನಪು ಕೂಡಾ ಇಲ್ಲದೆ ಅಲ್ಲವೆ ಕಾಲ ಕಳೆದದ್ದು? ಯಾವಾಗಲಾದರೂ ಊರಿಗೆ ಹೋದಾಗ ಮಾತ್ರ ತನ ಗೊಬ್ಬಳು ಪತ್ನಿಯಿದ್ದಾಳೆ ಎನ್ನುವುದು ನೆನಪಾಗುತ್ತಿದ್ದದ್ದು. ಮದುವೆಯಾದ ಮೇಲೂ ತನಗೆ ಪತ್ನಿಯಿದ್ದಾಳೆ ಎಂದು ಅರಿಯದ ಆ ಜೀವನದಲ್ಲಿ ಆ ಪತ್ನಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಿರಲಿಲ್ಲ. ತಾನು ಪತಿವ್ರತೆಯೆನ್ನುವ ಪ್ರಜ್ಞೆಯಿರುವ ಒಂದು ಹೆಣ್ಣು ತನಗೋಸ್ಕರ ಈ ಲೋಕದಲ್ಲಿ ಜೀವಿಸಿದ್ದಾಳೆ ಎನ್ನುವ ಸಂಗತಿ ಕೇಶವ ಪಿಳ್ಳೆಯ ಪ್ರಜ್ಞಾಲೋಕದಲ್ಲಿ ಇತ್ತೆ? ಈಗ ಅವಳನ್ನು ಜೀವಕ್ಕೆ ಸಮನಾಗಿ. ತನ್ನ ಚೇತನಕ್ಕೆ ಸಮನಾಗಿ ತನ್ನೆದುರಿಗೇ ಕಾಣುತ್ತಿದ್ದಾರೆ ಒಬ್ಬಳು ಪತ್ನಿಯನ್ನು! ಆದರೆ ಅವಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ.

ಏತಕ್ಕಾಗಿ ಮದುವೆ ಮಾಡಿಕೊಂಡೆ? ಎಂದು ಕೇಶವ ಪಿಳ್ಳೆ ಆಲೋಚಿಸಿರಲಿಲ್ಲ. ಅಂತಹ ಒಂದು ಪ್ರಶ್ನೆಯನ್ನು ಯಾರಾದರೂ ನೇರವಾಗಿ ಕೇಳಿದ್ದಿದ್ದರೆ ಒಂದೇ ಒಂದು ಉತ್ತರ ಹೇಳಬಹುದಾಗಿತ್ತು: "ತಂದೆ ತಾಯಿಗಳ ಒತ್ತಾಯಕ್ಕೆ" ಎಂದು. ಅವಲ್ಲದೆ ಆ ಮದುವೆಗೆ ಯಾವ ಅರ್ಥವೂ ಇರಲಿಲ್ಲ. ಆದರೆ ಇಂದು ಮದುವೆಗೆ ಒಂದು ಅರ್ಥ ವಿದ್ದಂತೆ ತೋರಿತು. ಒಂದು ಹೊಸ ಜೀವನ ಪ್ರಾರಂಭವಾಗಿದೆ. ಹೆಂಡತಿಯ ಜೊತೆ ಯಲ್ಲಿ ಒಬ್ಬಾತನ ಜೀವನ.

ಕೇಶವ ಪಿಳ್ಳೆ ಕುರ್ಚಿಯಿಂದ ಮೇಲೆದ್ದರು. ಅತ್ತ ಇತ್ತ ಚಿಂತಾಮಗ್ನರಾಗಿ ನಡೆ ದಾಡುತ್ತಿದ್ದರು. ಇನ್ನು ಮೇಲೂ ಅವಳು ಕೆಲವು ಪ್ರಶ್ನೆ ಕೇಳುತ್ತಾಳೆ. ಅವಕ್ಕೆಲ್ಲ ಉತ್ತರ ಹೇಳಬೇಕಾಗುತ್ತದೆ. ಅವಳಿಗೆ ಎಲ್ಲವೂ ತಿಳಿದುಹೋಯಿತು. ತಿಳಿದ ವಿಷಯ ಗಳು ಅವಳನ್ನು ಬಾಧಿಸುವುದಿಲ್ಲವೆ? ಅದನ್ನು ನೋಡಲು ಕೇಶವ ಪಿಳ್ಳೆಗೆ ಸಾಧ್ಯವಿಲ್ಲ. ಕಾತ್ಯಾಯಿನಿಯಮ್ಮ ಒಂದು ಒಗಟಾಗಿ ಕಾಣಿಸಿದಳು. ಅಥವಾ ಹೆಂಡತಿಯೆಂದರೇ ಒಂದು ಒಗಟೋ ಏನೋ ಎನ್ನಿಸಿತು.

ಮ್ಯಾಥ್ಯು ಮತ್ತು ಲೂಕೋಸ್ ಎನ್ನುವ ಇಬ್ಬರು ಬಂದು ಹೊರಗೆ ಕಾಯು ತ್ತಿದ್ದಾರೆಂದು ಪೋಲೀಸಿನವನು ತಿಳಿಸಿದ. ಅವರನ್ನು ಒಳಗೆ ಬಿಡುವಂತೆ ಅನುಮತಿ ನೀಡಿದರು. ಕೇಶವ ಪಿಳ್ಳೆಗೆ ತಾನೊಬ್ಬ ಚೀಫ್ ಸೆಕ್ರೆಟರಿ ಎನ್ನುವಂತೆ ಕುಳಿತುಕೊಳ್ಳಲು ಸ್ವಲ್ಪ ಹೊತ್ತು ಬೇಕಾಯಿತು.

ಅವರು ಬಂದಿದ್ದದ್ದು ಬೇರೆ ಯಾವುದಕ್ಕೂ ಅಲ್ಲ, ಅಭಿನಂದಿಸುವುದಕ್ಕೆ ಮಾತ್ರ.

ಅಂದು ಚಾರ್ಜು ವಹಿಸಿಕೊಳ್ಳುವುದೆಂದು ಅವರು ತಿಳಿದಿದ್ದರು. ಅದೇ ದಿನ ಹೋಗಿ ಕಂಡುಬರಬೇಕೆಂದು ಅವರು ನಿಶ್ಚಯಿಸಿದರು. ನಾಯರ್ ಮತ್ತು ಗೋಪಿಯ ಕಂಟ್ರಾಕ್ಟ್‌ಗೆ ಸಂಬಂಧಿಸಿದಂತಹ ವಿಷಯಗಳು ಕೇಶವ ಪಿಳ್ಳೆ ಮುಂತಾದವರ ಸಹಾಯ ದಿಂದ ಶುಭಪ್ರದವಾಗಿ ಕೈಗೂಡಲು ಸಾಧ್ಯವಾಯಿತೆಂದು ಅವರು ಹೇಳಿದರು. ಲೂಕೋಸ್ ಹೇಳಿದ:

"ಅದರಿಂದಾಗಿ ಸರಕಾರಕ್ಕೆ ಯಾವ ನಷ್ಟವೂ ಸಂಭವಿಸಲಿಲ್ಲ."

ಕೇಶವ ಪಿಳ್ಳೆ ಮಂದಹಾಸವನ್ನು ಸೂಚಿಸಿದರು ಅಷ್ಟೆ. ಅಂದು ಮುಂದಾಳುಗಳಲ್ಲಿ ಪ್ರಧಾನ ವ್ಯಕ್ತಿಯಾಗಿದ್ದ ಲೂಕೋಸ್. ಇಂದು ಸರ್ಕಾರದ ಪಕ್ಷದಲ್ಲಿದ್ದಾನೆ. ಆದ್ದರಿಂದ ಎದುರಿಸಬೇಕಾಗಿ ಬರುವ ತೊಂದರೆಗಳೂ ಸಹಿಸಬೇಕಾದ ಅಪಮಾನಗಳೂ ತುಂಬ ಇದ್ದುವು. ಅವುಗಳನ್ನು ಒಂದೊಂದಾಗಿ ಲೂಕೋಸ್ ವಿವರಿಸಿದ. ಏನೂ ತಿಳಿಯದವ ರಂತೆ ಕೇಳಿದರು:

"ಇದೆಲ್ಲ ಎಲ್ಲಿಗೆ ನಿಲ್ಲುತ್ತೋ ಏನೋ." ಕೇಶವ ಪಿಳ್ಳೆ ಲೂಕೋಸ್‌ನ ಮುಖದ ಮೇಲೆ ಹೊಡೆದ ಹಾಗೆ ಹೇಳಿದರು.

"ಮಿ. ಲೂಕೋಸ್, ನಾನು ತೀರಾ ದಡ್ಡ ಅಂತ ಭಾವಿಸಬೇಡಿ. ನೀವು ಭಾವಿಸಿ ರುವ ಇದೊಂದೂ ನನಗೆ ಗೊತ್ತಿಲ್ಲ ಅಂತಲೂ ಭಾವಿಸಬೇಡಿ. ನನಗೆ ನೀವು ಯಾರು ಅಂತ ಗೊತ್ತು.. ತಿಳೀತಾ?"

ಲೂಕೋಸ್ ಸ್ವಲ್ಪ ಗಾಬರಿಗೊಳಗಾದ. ಆತ ಕ್ಷಮಾಯಾಚನೆಯ ಸ್ವರದಲ್ಲಿ ಅವಸರವಾಗಿ ಹೇಳಿದ: "ಅಯ್ಯೋ. ಅದು........."

ಕೇಶವ ಪಿಳ್ಳೆ ಹೇಳಿದರು: "ನಿಲ್ಲಿಸಿ. ನಿಲ್ಲಿಸಿ ಸಾಕು. ನನಗೆಲ್ಲ ಗೊತ್ತು. ಇದರ ಆಧಾರದ ಮೇಲೆ ನಾವು ಮುಂದುವರಿಸಬಹುದು. ನಾನು ನಿಮ್ಮನ್ನು ಸರಿಯಾಗಿ ಅರ್ಥ ಮಾಡಿಕೊಂಡೇ ಕೇಳ್ತಾ ಇರೋದು."

ನಾಯರ್ ಮತ್ತು ಗೋಪಿಯ ಕಂಟ್ರಾಕ್ಟಿಗೆ ಸಂಬಂಧಪಟ್ಟ ರಹಸ್ಯ ಕೇಶವ ಪಿಳ್ಳೆಗೆ ತಿಳಿದುಹೋಗಿದೆಯೋ ಏನೋ ಎಂದು ಲೂಕೋಸಿಗೆ ಉಂಟಾದ ಮೊದಲ ಭಯ. ಲೂಕೋಸ್ ಕೇಳಿದ: "ನಾವೇನು ಮಾಡಿದೆವು ಹುಜೂರ್?"

ಕೇಶವ ಪಿಳ್ಳೆ ನಗುತ್ತಾ ಹೇಳಿದರು: "ನೀವು ಯಾವ ತಪ್ಪೂ ಮಾಡಿಲ್ಲ ಮಿ॥ ಲೂಕೋಸ್. ನಿಮ್ಮನ್ನು ಕುರಿತು ನನಗೆ ಯಾವ ತಪ್ಪು ಅಭಿಪ್ರಾಯವೂ ಇಲ್ಲ."

ಕೇಶವ ಪಿಳ್ಳೆ ಹೇಳಿದ್ದು ಮ್ಯಾಥ್ಯೂಗೆ ಅರ್ಥವಾಯಿತು. ಆತ ಹೇಳಿದ: "ಏನೂ ಇಲ್ಲ ಲೂಕೋಸ್! ಅವರು ಹೇಳುವುದು ಸರಿ. ಅದೇ ಸರಿಯಾದದ್ದು."

ಲೂಕೋಸ್‌ಗೆ ಸಂಗತಿ ಸರಿಯಾಗಿ ತಿಳಿಯದೆ ಕಷ್ಟಪಡುತ್ತಿರುವುದು, ಅಷ್ಟೆ.

ಹಾಗೆ ಆ ಮಾತುಕತೆ ಸ್ವಲ್ಪ ಹೊತ್ತು ನಿಂತಿತು. ಹೊರಡಲು ಅವರು ಎದ್ದು ನಿಂತಾಗ ಒಂದು ಸಣ್ಣ ಪೆಟ್ಟಿಗೆಯನ್ನು ಲೂಕೋಸ್ ಕೇಶವ ಪಿಳ್ಳೆಯ ಮುಂದಿದ್ದ

ಮೇಜಿನ ಮೇಲಿರಿಸಿದ.

"ಇದು ನಮ್ಮ ಒಂದು ಸಣ್ಣ ಉಡುಗೊರೆ."

ಬಾಯಿಮಾತಿಗೆ ಕೇಶವ ಪಿಳ್ಳೆ ಹೇಳಿದ್ದು: "ಓ! ಇದೆಲ್ಲಾ ಯಾಕೆ? ನೀವು ಬಂದು ಅಭಿನಂದಿಸಿದ್ದೇ ಸಾಕಾಗಿತ್ತು. ಅದೇ ಸಂತೋಷವುಂಟುಮಾಡಿದೆ."

ಅದಕ್ಕೆ ಮ್ಯಾಥ್ಯೂ ಹೇಳಿದ: "ತಾವು ಚೀಫ್ ಸೆಕ್ರೆಟರಿಯಾದದ್ದಕ್ಕೆ ನಮ್ಮ ಅಭಿನಂದನೆಯ ಉಡುಗೊರೆ. ನಮ್ಮ ನೆನಪಿಗೆ."

ಆತ್ಮೀಯ ಭಾವನೆಯಿಂದ ಹೇಳುತ್ತಿರುವುದು ಎಂದು ಭಾವಿಸಿ ಕೇಶವ ಪಿಳ್ಳೆ ಹೇಳಿದರು: "ಸರಿ. ಸ್ವೀಕರಿಸಿದ್ದೇನೆ."

ಒಂದು ವಿಷಯವನ್ನು ಮ್ಯಾಥ್ಯೂ ಮತ್ತು ಲೂಕೋಸ್ ಹತ್ತಿರ ಹೇಳುವುದಿತ್ತು.

"ಚಳವಳಿ ನಿಂತುಹೋಯಿತು ಎಂದು ಭಾವಿಸಬೇಡಿ. ಒಂದು ಹೊಸ ರೂಪು ತಾಳುತ್ತಿದೆ. ಸರಿ, ಅದನ್ನು ಆ ಮೇಲೆ ತಿಳಿಸ್ತೀನಿ."

ಅನಂತರ ಅವರು ಅಲ್ಲಿಂದ ಬೀಳ್ಕೊಂಡರು.

ಕೇಶವ ಪಿಳ್ಳೆ ಮೇಜಿನ ಮೇಲಿದ್ದ ಪೆಟ್ಟಿಗೆಯನ್ನು ಕೈಗೆತ್ತಿಕೊಂಡರು. ಅದೊಂದು ಆಭರಣದ ಪೆಟ್ಟಿಗೆ. ಕೇಶವ ಪಿಳ್ಳೆ ಪೆಟ್ಟಿಗೆಯನ್ನು ತೆರೆದು ನೋಡಿದರು. ಹರಳು ಮೆಟ್ಟಿದ ಒಂದು ಕಂಠಾಭರಣ. ತುಂಬ ಬೆಲೆಯುಳ್ಳದ್ದು. ತುಂಬಾ ಆಕರ್ಷಕವಾಗಿಯೂ ಇತ್ತು. ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನನ್ನು ಕರೆದರು. ಕಾತ್ಯಾಯಿನಿಯಮ್ಮ ಭಾಗೀರಥಿಯಮ್ಮ ಇಬ್ಬರೂ ತುಂಬ ಹೊತ್ತಿನಿಂದ ಮಾತನಾಡುತ್ತಾ ಕುಳಿತಿದ್ದರು. ಕರೆದದ್ದು ಕೇಳಿಸಿತು. "ಸ್ವಲ್ಪ ಇಲ್ಲಿ ಬಾ."

ಆ ಹರಳು ಮೆಟ್ಟಿದ ನೆಕ್ಲೇಸ್ ತೆಗೆದು ಕೈಯಲ್ಲಿ ಇಟ್ಟುಕೊಂಡು ಕೇಶವ ಪಿಳ್ಳೆ ನಿಂತಿದ್ದರು. ಕಾತ್ಯಾಯಿನಿಯಮ್ಮ ಗಂಡನ ಹತ್ತಿರ ಬಂದಳು. ಅವಳು ಕೇಳಿದಳು: "ಇದು ಯಾವಾಗ ತಂದಿರಿ? ಮಗಳಿಗೆ ಚೆನ್ನಾಗಿ ಒಪ್ಪುತ್ತೆ."

ಒಂದು ಆಕರ್ಷಕ ಮಂದಹಾಸದೊಡನೆ ನಿಧಾನವಾಗಿ ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ಹತ್ತಿರ ಬಂದರು. ಅವರು ಅದನ್ನು ಹೆಂಡತಿಗೆ ತೋರಿಸುವುದಕ್ಕೆ ಹೋದರು.

"ಇದು ನಿನಗಾಗಿ."

"ಓ! ನನಗೆ ಬೇಡ. ಇದನ್ನೆಲ್ಲಾ ಮೈಮೇಲೆ ಹಾಕಿಕೊಂಡು ತಿರುಗಾಡಿದರೆ ಆಪತ್ತು. ನನಗೆ ನಾಚಿಕೆ. ಇದು ನನಗೆ ಬೇಡಿ."

ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯನ್ನು ತಡೆದಳು. ಅವಳು ಕೇಶವ ಪಿಳ್ಳೆಯ ಮುಖವನ್ನು ನೋಡಿದಳು. ಹಾಗೆ ಒಮ್ಮೆಯೂ ಗಂಡ ನಗುಮುಖದಿಂದ ಇದ್ದುದನ್ನು ನೋಡಿರಲಿಲ್ಲ. ಆ ಕಣ್ಣುಗಳಲ್ಲಿ ಒಂದು ಬಗೆಯ ಕಾಂತಿಯಿತ್ತು. ಆ ರೀತಿಯ ಹಸನ್ಮುಖಭಾವ ಅವರಿಗಿತ್ತು: "ಈ ಸರ ನಿನ್ನ ಕೊರಳಿನಲ್ಲಿ ಹಾಕಿದ್ದನ್ನು ನೋಡಬೇಕು."

ಕಾತ್ಯಾಯಿನಿಯಮ್ಮ ಕೇಳಿದಳು: "ಯಾಕೆ?"

"ಯಾಕೆ ಅಂತಲಾ?, ನೀನು ಈ ನೆಕ್ಲೇಸ್ ಹಾಕಿದ್ದನ್ನ ನಾನು ಕಣ್ಣುತುಂಬ ನೋಡಬೇಕು. ಅದಕ್ಕಾಗಿ."

ಕಾತ್ಯಾಯಿನಿಯಮ್ಮ ಅದನ್ನು ತಡೆಯುತ್ತಾ ಹೇಳಿದಳು: "ಈ ವಯಸ್ಸಿನಲ್ಲಾ ನನ್ನನ್ನು ಹೀಗೆ ಜ್ಞಾಪಿಸಿಕೊಳ್ಳುತ್ತಿರೋದು?"

"ಅದರಲ್ಲೇನು ತಪ್ಪು?"

"ಇದನ್ನು ಕೊರಳಿಗೆ ಹಾಕಿಕೊಂಡು ತಿರುಗಾಡಿದರೆ ಮಗಳು ನೋಡಿದರೆ ಚಪ್ಪಾಳೆ ಹಾಕಿ ನಗಾಡಿಯಾಳು."

ನೆಕ್ಲೇಸ್ ತೊಡಿಸಿದ್ದಾಯಿತು. ಅದನ್ನು ಕಾತ್ಯಾಯಿನಿಯಮ್ಮನ ಎದೆಯ ಮೇಲೆ ಸರಿಯಾಗಿ ತೂಗಿಸಿದರು. ಅವರು ನೆಕ್ಲೇಸ್ ಧರಿಸಿದ್ದ ಪತ್ನಿಯ ಸೌಂದರ್ಯವನ್ನು ನೋಡುತ್ತ ನಿಂತಿದ್ದರು.

ಕಾತ್ಯಾಯಿನಿಯಮ್ಮನಿಗೆ ಸಂಬಂಧಿಸಿದಂತೆ ಅದೊಂದು ಹೊಸ ಅನುಭವವಾಗಿತ್ತು. ಆ ರೀತಿಯಲ್ಲಿ ಕೇಶವ ಪಿಳ್ಳೆ ಅವಳನ್ನು ನೋಡಿ ಮಂದಹಾಸವನ್ನು ಬೀರಿರಲಿಲ್ಲ; ಆಸಕ್ತಿಯಿಂದ ನೋಡಿರಲಿಲ್ಲ. ಆಭರಣ ತೊಡಿಸಿರಲಿಲ್ಲ. ಅವಳನ್ನೇ ನೋಡುತ್ತಾ ನೋಡುತ್ತಾ ನಿಂತದ್ದೂ ಇಲ್ಲ. ಅವೆಲ್ಲ ಒಟ್ಟುಗೂಡಿ ಬಂದು ಕಚಗುಳಿ ಆಡಿಸಿದಂತೆ ಕಾತ್ಯಾಯಿನಿಯಮ್ಮ ಪುಳಕಗೊಂಡಳು. ಅವಳು ತಲೆತಗ್ಗಿಸಿ ನಿಂತಿದ್ದಳು. ಮುಖದಲ್ಲಿ ಒಂದು ತೇಜಸ್ಸು ಕಾಣಿಸಿಕೊಂಡಿತು.

ನಾಚಿಕೆಯಿಂದ ಕಾತ್ಯಾಯಿನಿಯಮ್ಮ ತಲೆಯೆತ್ತಿ ನೋಡಿದಳು. ಅವರ ಕಣ್ಣುಗಳಲ್ಲಿ ಹಿಂದೆಂದೂ ಇಲ್ಲದ ಕಾಂತಿ ಮೂಡಿತ್ತು. ಸ್ನಿಗ್ಧತೆಯಿತ್ತು ಅವಳೇನನ್ನೋ ಬಯಸುತ್ತಿದ್ದಳು. ಜೀವನದಲ್ಲಿ ತನಗೆ ಇಂಥಾದ್ದು ಬೇಕು ಎಂದು ಆಶೆಪಟ್ಟವಳಲ್ಲ. ನಡೆನುಡಿಯಲ್ಲೂ ಅದು ಕಂಡುಬರುತ್ತಿರಲಿಲ್ಲ. ಇಂದು ಅವಳು ಬಯಸುತ್ತಿದ್ದಳು. ತೇಜೋಪೂರ್ಣವಾದ ನಾಚಿಕೆಯಿಂದ ಕೂಡಿದ, ಮಂದಹಾಸದಿಂದೊಡಗೂಡಿದ ಉತ್ಸಾಹದಿಂದ ಆ ಸಣ್ಣ ಕಣ್ಣುಗಳಿಂದ......... ಹಾಗೆ ಒಮ್ಮೆಯೂ ಅವಳನ್ನು ಕೇಶವ ಪಿಳ್ಳೆ ಕಂಡದ್ದಿಲ್ಲ. ಕಾತ್ಯಾಯಿನಿ ಸುಂದರಿ. ಆಕೆಗೆ ತೇಜಸ್ಸಿತ್ತು. ಸ್ತ್ರೀಯಲ್ಲಿ ಇರಬೇಕಾದ ಮೋಹಕತೆಯಿತ್ತು. ಆಕೆ ಏನನ್ನೋ ಬಯಸುತ್ತಿದ್ದಾಳೆಂದು ಕೇಶವ ಪಿಳ್ಳೆಗೆ ಅರ್ಥವಾಯಿತು.

ಎಷ್ಟೋ ವರ್ಷಗಳ ಹಿಂದೆ ಸೆಕ್ರೆಟರಿಯೇಟಿನಲ್ಲಿ ರೆವೆನ್ಯೂ ಸೆಕ್ಷನಿನ ಒಂದು ರೂಮಿನಲ್ಲಿ ಒಂದು ದೊಡ್ಡ ಅಲಮೇರದ ಹಿಂದೆ ಒಂದು ಚುಂಬನಕ್ಕಾಗಿ ಬಯಸುತ್ತಾ ನಿಂತಿದ್ದ ಒಂದು ಮುಖ! ಅದು ಕೇಶವ ಪಿಳ್ಳೆಗೆ ನೆನಪಾಯಿತು. ಆ ಮುಖದಲ್ಲಿದ್ದ ಭಾವನೆಯೂ ಹೀಗೆಯೇ ಇತ್ತು. ಹಾಗಾದರೆ ಸ್ತ್ರೀಯರೆಲ್ಲ ಚುಂಬನಕ್ಕಾಗಿ ಆಶೆಪಡುವುದು ಹೀಗೆಯೇ ಇರಬಹುದೇ? ಅಂದು ಬಯಸಿದ್ದ ಮುಖವನ್ನೂ ಇಂದು ಚುಂಬನಕ್ಕಾಗಿ

ಕಾದು ನಿಂತಿರುವ ಮುಖವನ್ನೂ ಕೇಶವ ಪಿಳ್ಳೆ ತಮಗರಿವಿಲ್ಲದಂತೆ ಒಂದು ನಿಮಿಷ ಹೋಲಿಸಿ ನೋಡಿದರು. ಅದು ತನಗರಿವಿಲ್ಲದೆ ಸಂಭವಿಸಿದ್ದು. ಯಾರೋ ಒಳಗಿನಿಂದ ಕೇಶವ ಪಿಳ್ಳೆಯನ್ನು ಬಲಾತ್ಕಾರವಾಗಿ ಹಿಡಿದು ಎತ್ತಿ ನಿಲ್ಲಿಸಿದಂತಾಗಿತ್ತು. 'ನೋಡು. ಆ ಅಲಮಾರದ ಹಿಂದಿರುವ ಮುಖವನ್ನು ನೋಡು.' ಆ ಮುಖವನ್ನು ಕಾಣಬಾರದೆಂದು ಕೇಶವ ಪಿಳ್ಳೆ ಕಣ್ಣುಮುಚ್ಚಿಕೊಂಡರೂ ಅದೇ ಮುಖ ಕಾಣುತ್ತಿದ್ದದ್ದು. ಕಾಣದೇ ಹೋದದ್ದು ಕಾತ್ಯಾಯಿನಿಯಮ್ಮನ ಮುಖ. ಅಂತರಂಗದಲ್ಲಿ ಯಾರೋ ಕೇಳಿದಂತಾಯಿತು:

'ಯಾರು ಸುಂದರಿ?'

ಒಬ್ಬ ಪುರುಷನ ಇಕ್ಕಟ್ಟಿನ ಸ್ಥಿತಿಯಾಗಿರಬೇಕು ಅದು. ಆ ಇಬ್ಬರು ಸ್ತ್ರೀಯರಿಗೂ ತನ್ನ ಗಮನವನ್ನು ಸೆಳೆಯುವುದಕ್ಕೆ ಸಾಧ್ಯವಾಗದೆ ಹೋಗಬಹುದು. ಒಬ್ಬರೊಡನೆ ಒಬ್ಬರನ್ನು ಹೋಲಿಸುತ್ತಾ ಇಚ್ಛಾಶಕ್ತಿಯನ್ನು ಕಳೆದುಕೊಂಡು ಅಸಹಾಯಕನಾಗಿ ಬೆರೆತು ಹೋಗಬಹುದು. ಒಬ್ಬಳ ಜತೆಯಲ್ಲಿ ಬೇಸರವುಂಟಾಗಿದ್ದರೂ ಅವಳು ನೆನಪಾಗುತ್ತಿರುತ್ತಾಳೆ.

ಕಾತ್ಯಾಯಿನಿಯಮ್ಮನ ಮುಖದಲ್ಲಿ ನೈರಾಶ್ಯ ಆವರಿಸಿದಂತೆ ತೋರಿತು. ಎಷ್ಟು ಹೊತ್ತಿನಿಂದ ಅವಳು ಅದಕ್ಕಾಗಿ ಆಸೆಪಡುತ್ತಾ ಕಾಯುತ್ತಿದ್ದಳು! "ನನಗೆ ಕೊಡೋದಿಲ್ವಾ?" ಎಂದು ಬೇಡುವ ಧ್ವನಿಯಲ್ಲಿ ಕಾತ್ಯಾಯಿನಿಯಮ್ಮ ಕೇಳುತ್ತಿದ್ದಂತೆ ತೋರಿತು. ಕೇಶವ ಪಿಳ್ಳೆ ಎರಡು ಕೈಗಳನ್ನೂ ನೀಡಿದರು.

ಪಾರ್ಕ್ ವ್ಯೂನಲ್ಲಿ ಆಫೀಸು ರೂಮಿನಲ್ಲಿ ಬಾಗಿಲಿನ ಮರೆಯಲ್ಲಿ ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯ ತೋಳುಗಳೊಳಗೆ ಸೇರಿದಳು. ಆಕೆ ಬಯಸುತ್ತಿದ್ದದ್ದು ಲಭಿಸಿತು. ಎಷ್ಟೋ ವರ್ಷಗಳಿಂದ ಆ ದಾಂಪತ್ಯ ಜೀವನದಲ್ಲಿ ಒಂದು ಚುಂಬನವನ್ನು ಬಯಸಿರಲಿಲ್ಲ. ಯಾವಾಗಲೋ ಒಮ್ಮೆ ಅದು ದೊರೆತಿರಬಹುದು. ಆದರೆ ಕೇಳಿದರೆ ದೊರೆಯುವುದೆಂಬ ನಂಬಿಕೆಯಿಲ್ಲದೆಯೂ ಹೋಗಿದ್ದರಿಂದ ಆಗಿರಬಹುದು ಕೇಳಿ ಪಡೆದದ್ದರಿಂದ ಆ ಸವಿಯುಂಟಾಗಿದ್ದದ್ದು.

ಅಂತು ತನ್ನಲ್ಲಿ ಯಾವುದೋ ಒಂದು ದೌರ್ಬಲ್ಯವಿರುವುದಾಗಿ ಕೇಶವ ಪಿಳ್ಳೆಗೆ ತೋರಿತು. ಅವರ ತೋಳಿನೊಳಗೆ ಸೇರಿಕೊಂಡು ತಮ್ಮ ಮುಖವನ್ನೇ ನೋಡುತ್ತಾ ತಲೆಯೆತ್ತಿ ನಿಂತಿರುವುದು ಕಾತ್ಯಾಯಿನಿಯಮ್ಮ. ಆದರೆ ಕಣ್ಣುರೆಪ್ಪೆ ಒಂದುಸಲ ಮುಚ್ಚಿದ ಕೂಡಲೇ ಕಾಣಿಸುತ್ತಿದ್ದದ್ದು ತಂಗಮ್ಮ. ಅವಳ ಮುಖದ ಹತ್ತಿರ ಮುಖವೊಡ್ಡಿದಾಗ ತಂಗಮ್ಮನನ್ನು ಚುಂಬಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಕಾತ್ಯಾಯಿನಿಯಮ್ಮನ ತೋಳುಗಳು ಅಪ್ಪಿಕೊಂಡಾಗ ಕೇಶವ ಪಿಳ್ಳೆಗೆ ಒಂದು ರೀತಿಯ ಭಯವುಂಟಾಗುತ್ತಿತ್ತು.. ಹಿಂದೆ ಕೇಶವ ಪಿಳ್ಳೆಗೆ ಉಸಿರುಕಟ್ಟಿಸುತ್ತಿದ್ದ ಆ ಭಯ.

ಆ ದಾಂಪತ್ಯ ಜೀವನದ ಮಧ್ಯೆ ಹೀಗೆ ತಂಗಮ್ಮ ಪ್ರವೇಶಿಸಿಬಿಟ್ಟಿದ್ದಳು. ಇಂದು

ಅದನ್ನು ತಡೆಯುವುದು ಕಷ್ಟವಾಗಿತ್ತು. ಆತ ಇನ್ನು ಮೇಲೆ ಭಯಪಟ್ಟುಕೊಂಡು ನಿಲ್ಲಬೇಕಾಗಿಲ್ಲ.

* * * *

ಬಹುಶಃ ಪಾರ್ಕ್ ವ್ಯೂನಲ್ಲಾಗಿರಬೇಕು. ಮದುವೆಯಾದ ಎಷ್ಟೋ ವರ್ಷಗಳ ನಂತರ ಗಂಡನ ಜೊತೆಯಲ್ಲಿ ನಲವತ್ತೈದನೆಯ ವಯಸ್ಸಿನಲ್ಲಿ ಕಾತ್ಯಾಯಿನಿಯಮ್ಮ ಮಧುಚಂದ್ರವನ್ನು ಅನುಭವಿಸುತ್ತಿರುವುದು. ಅಂದು ಸಂಜೆ ಕಾತ್ಯಾಯಿನಿಯಮ್ಮ ಮಲ್ಲಿಗೆ ಹೂ ಮುಡಿದಿದ್ದಳು. ಕೇಶವ ಪಿಳ್ಳೆ ಹೇಳಿರಲಿಲ್ಲ. ಬಹುಶಃ ಹಿಂದೆ ಮದುವೆಯಾದ ಮೇಲೆ ಕೇಶವ ಪಿಳ್ಳೆ ಮೊದಲು ಊರಿಗೆ ಬಂದಿದ್ದಾಗ ಹೂವಿನ ಬಗ್ಗೆ ನಡೆದ ಮಾತುಕತೆಯನ್ನು ಜ್ಞಾಪಿಸಿಕೊಂಡು ಮಲ್ಲಿಗೆ ದಂಡೆ ಮುಡಿದದ್ದಾಗಿರಬಹುದು. ಎಂದೇನೂ ಮಲ್ಲಿಗೆ ಹೂವು ಹಾಸಿಗೆಯಲ್ಲಿ ಹರಡಿರುತ್ತಿತ್ತಾದರೂ ಮಲ್ಲಿಗೆ ಹೂವು ದಾಂಪತ್ಯವನ್ನು ಮಧುರಗೊಳಿಸುತ್ತಿದ್ದುದಾಗಿರಬೇಕು. ಅಂದು ಕಾತ್ಯಾಯಿನಿಯಮ್ಮನ ಆ 'ಮಧುಚಂದ್ರ'ಕ್ಕೆ ಒಂದು ವಿಶೇಷತೆಯಿತ್ತು. ಯಾವುದು ಯಾವುದೋ ಮಾತುಕಥೆ ಆಡಿಕೊಂಡಿರುವುದಲ್ಲ—ಅಂದು ಗಂಡ ಹೆಂಡತಿಯರಲ್ಲಿ ನಡೆದದ್ದು. ಗಟ್ಟಿಯಾಗಿ ನಗುತ್ತಾ ಹೊತ್ತು ಕಳೆಯುವುದಕ್ಕೆ ವಿನೋದವಾಗಿ ಮಾತಾಡಿಕೊಂಡಿದ್ದದ್ದೂ ಅಲ್ಲ. ಅಂದು ಒಂದು ವಿಷಯವನ್ನು ಇತ್ಯರ್ಥ ಮಾಡಿಕೊಳ್ಳಲೇಬೇಕಾಗಿತ್ತು. ಕಾತ್ಯಾಯಿನಿಯಮ್ಮ ಎಷ್ಟೋ ವಿಷಯಗಳನ್ನು ತಿಳಿದದ್ದಾಯಿತಲ್ಲವೇ? ಹಾಗೆ ವಿಷಯಗಳೆಲ್ಲ ಪತ್ನಿಗೆ ತಿಳಿದಿವೆ ಎನ್ನುವುದು ಕೇಶವ ಪಿಳ್ಳೆಗೂ ಗೊತ್ತಿತ್ತು. ಖಂಡಿತವಾಗಿಯೂ ಕಾತ್ಯಾಯಿನಿ ಆ ಪ್ರಶ್ನೆಗಳನ್ನು ಕೇಳುತ್ತಾಳೆ. ಅವುಗಳಿಗೆಲ್ಲ ಸರಿಯಾದ ಉತ್ತರ ನೀಡಬೇಕಾಗುತ್ತದೆ. ಕೇಶವ ಪಿಳ್ಳೆ ಒಂದು ತೀರ್ಮಾನಕ್ಕೆ ಬಂದೇ ತೀರಬೇಕು. ಸರಿಯಾಗಿ ಹೇಳುವುದಾದರೆ ಆ ದಂಪತಿಗಳು ಆಗ ದಾಂಪತ್ಯ ಜೀವನವನ್ನು ಆರಂಭಿಸುತ್ತಿದ್ದರು ಅಷ್ಟೆ.

ಕಾತ್ಯಾಯಿನಿಯಮ್ಮನಿಗೆ ಭಾಗೀರಥಿಯಮ್ಮನ ಬಗ್ಗೆ ಸಹಾನುಭೂತಿಯಿದೆ. ಆಕೆ ಶುದ್ಧ ಚಾರಿತ್ರ್ಯವುಳ್ಳವಳೆಂದು ಕಾತ್ಯಾಯಿನಿಯಮ್ಮನ ಅಭಿಪ್ರಾಯ. ಯಾವ ಸುತ್ತು ಬಳಸೂ ಇಲ್ಲದೆ ಆಕೆ ಹೇಳಿದಳು: "ಪಾಪ. ಆ ಮುದುಕಿ ಮುಪ್ಪಿನ ಕಾಲದಲ್ಲಿ ಕಷ್ಟ ಅನುಭವಿಸಬೇಕಾಗಿ ಬಂತು."

"ಇದೇ ಅಭಿಪ್ರಾಯವನ್ನು ಯಾವಾಗಲೂ ತಾಳಿಕೊಂಡಿರಬಾರದು"—ಎಂದು ಕೇಶವ ಪಿಳ್ಳೆ ಆಗಲೂ ಹೇಳುತ್ತಿದ್ದದ್ದು. 'ಭಾಗೀರಥಿಯಮ್ಮ ಕೆಟ್ಟ ಹೆಂಗಸು. ಆದ್ದರಿಂದಲೇ ಆಕೆಗೆ ಈ ಕಷ್ಟ ಬಂದದ್ದು ಎಂದು ಆ ಮೇಲೆ ಹೇಳಬೇಡ' ಎಂದು ಕೇಶವ ಪಿಳ್ಳೆ ಮುನ್ಸೂಚನೆ ಕೊಟ್ಟರು.

ಆ ಮುನ್ಸೂಚನೆಯನ್ನು ಆಲೋಚಿಸುತ್ತಾ ಇದ್ದವಳಂತೆ ಕಾತ್ಯಾಯಿನಿಯಮ್ಮ ಸ್ವಲ್ಪ ಹೊತ್ತು ಮೌನವಾಗಿ ಮಲಗಿದ್ದಳು. ಕೇಶವ ಪಿಳ್ಳೆ ಮಂಚದ ಮೇಲೆ ಕುಳಿತಿದ್ದರು

ಅವರು ಆಲೋಚಿಸುವುದಕ್ಕೆ ಅವಳಿಗೆ ಅವಕಾಶವನ್ನು ಕೊಟ್ಟಿದ್ದಂತಿತ್ತು.

ಕಾತ್ಯಾಯಿನಿಯಮ್ಮ ಸತ್ಯ ಸಂಗತಿಯನ್ನು ತಿಳಿದುಕೊಳ್ಳುವುದಕ್ಕಾಗಿ ಗಂಡನ ಹೃದಯದೊಡನೆಯೇ ಎನ್ನುವಂತೆ ಕೇಳಿದಳು:

"ನಾನು ಒಂದು ವಿಷಯ ಕೇಳ್ತೀನಿ. ಸತ್ಯ ಹೇಳಬೇಕು."

"ಕೇಳು, ಸತ್ಯವನ್ನೇ ಹೇಳ್ತೀನಿ" ಎಂದು ಕೇಶವ ಪಿಳ್ಳೆ ಹೇಳಲಿಲ್ಲ.

"ಹ್ಞಂ, ಏನು?" ಎಂದು ಮಾತ್ರ ಕೇಳಿದರು.

ಸ್ವಲ್ಪ ಹೊತ್ತಿನ ವರೆಗೆ ಕಾತ್ಯಾಯಿನಿಯಮ್ಮ ಮಾತಾಡಲಿಲ್ಲ. ಬಹುಶಃ ಹೇಗೆ ಆ ಪ್ರಶ್ನೆಯನ್ನು ಕೇಳುವುದು ಎಂದು ಆಲೋಚಿಸುತ್ತಿದ್ದುದಾಗಿರಬೇಕು.

"ನಾನು ನಿಮಗೆ ಬೇಡವಾಗಿದ್ದೆ ಅಲ್ಲವೆ?"

ಹರಿತವಾದ ಪ್ರಶ್ನೆ. ಕೇಶವ ಪಿಳ್ಳೆ ನಿಜವಾಗಿಯೂ ಅದನ್ನು ನಿರೀಕ್ಷಿಸಿರಲಿಲ್ಲ. ಅದೊಂದು ಕಷ್ಟದ ಪ್ರಶ್ನೆಯಾಗಿತ್ತು. 'ನಿನ್ನ ಮದುವೆ ನಿಶ್ಚಯ ಮಾಡಿ ಆಗಿದೆ' ಎಂದು ತಂದೆ ಹೇಳಿದ ನಿಮಿಷದಿಂದ ಇದುವರೆಗೆ ಅವಳು ತನಗೆ ಬೇಕು ಎಂದು ಕೇಶವ ಪಿಳ್ಳೆಗೆ ತೋರಿರಲಿಲ್ಲ. ಬೇಡ ಎನ್ನಿಸಿಯೂ ಇರಲಿಲ್ಲ. ಹಾಗಿರುವಾಗ ಹೇಗೆ ಆ ಪ್ರಶ್ನೆಗೆ ಉತ್ತರ ಹೇಳುವುದು?

ಕೇಶವ ಪಿಳ್ಳೆಯ ಉತ್ತರ ಒಂದು ಪ್ರಶ್ನೆಯ ರೂಪದಲ್ಲಿ ಹೊರಬಂದಿತು. "ಅಂದರೆ?"

"ಅಂದರೆ—ನಾನು ಬೇಡವಾಗಿದ್ದೆ ಅಂತ. ಮದುವೆ ಮಾಡಿಕೊಂಡದ್ದೂ ಇಷ್ಟಪಟ್ಟಲ್ಲ. ಕೈಬಿಡಬೇಕು ಅನ್ನಿಸಿದ್ದರೆ ನಿಮಗೆ ಅದೂ ಕಷ್ಟವಾಗಿರಲಿಲ್ಲ."

ಒಂದು ಕ್ಷಣ ಬಿಟ್ಟು ಆಕೆ ಮತ್ತೆ ಹೇಳಿದಳು:

"ನಾನು ಸತ್ತುಹೋಗಿದ್ದಿದ್ದರೆ ಆಗ ಸಂಕಟ ಇರ್ತಿರಲಿಲ್ಲ. ನಾನೊಬ್ಬಳು ಇದ್ದೀನಿ ಅನ್ನೋ ನೆನಪು ಕೂಡ ಇರಲಿಲ್ಲ" ಎಂದು ಕಾತ್ಯಾಯಿನಿ ಗಂಡನ ಮುಖವನ್ನು ದುರುಗುಟ್ಟಿಕೊಂಡು ನೋಡಿದಳು.

ಕೇಶವ ಪಿಳ್ಳೆ ಉತ್ತರಿಸಿದರು:

"ನೀನ್ಯಾಕೆ ತಲೆ ಕೆಟ್ಟವಳ ಹಾಗೆ ಮಾತಾಡ್ತೀಯ?"

"ನನಗೆ ತಲೆ ಕೆಟ್ಟಿಲ್ಲ. ನಾನು ಇದ್ದದ್ದು ಹೇಳಿದೆ. ಸತ್ಯ ಹೇಳಿದೆ. ನಾನು ಅನುಭವಿಸಿದ ಸತ್ಯ ಇದು. ಹೇಳಿ, ಇದು ನಿಜ ತಾನೆ?"

ಕೇಶವ ಪಿಳ್ಳೆ ಹೇಳಿದರು: "ಹಾಗೇ ಆಗಿದ್ದಿದ್ದರೆ ನೀನು ಇಲ್ಲಿ ಈ ಹಾಸಿಗೆ ಮೇಲೆ ಹೀಗೆ ಮಾತಾಡ್ತಿದ್ದೆಯಾ? ನಾನು ಹೀಗೆ ನಿನ್ನ ಹತ್ತಿರ ಕುಳಿತಿರುತ್ತಿದ್ದೆನಾ?"

ಕಾತ್ಯಾಯಿನಿಯಮ್ಮ ಕೂಡಲೇ ಹೇಳಿದಳು—ಅದು ಹಳ್ಳಿಯ ಹೆಣ್ಣಿನ ವಿಶ್ವಾಸದಿಂದ ಹೊರಬಂದ ಉತ್ತರವಾಗಿತ್ತು:

"ಆ ಮಾತು ಹೇಳಬೇಡಿ. ಅದು ಹಣೆಬರಹ; ವಿಧಿಬರಹವನ್ನು ತಿದ್ದೋದಕ್ಕೆ ಯಾರ ಕೈಯಿಂದಲೂ ಸಾಧ್ಯವಿಲ್ಲ."

ಕೇಶವ ಪಿಳ್ಳೆಗೆ ಏನು ಹೇಳಬೇಕೋ ತಿಳಿಯದಾಯಿತು. ಇಬ್ಬರೂ ಸ್ವಲ್ಪ ಹೊತ್ತಿನ ವರೆಗೆ ಏನೂ ಮಾತಾಡಲಿಲ್ಲ. ಆ ಮೇಲೆ ಕಾತ್ಯಾಯಿನಿಯಮ್ಮ ಹೇಳಿದಳು: "ನಾನು ಅನುಭವಿಸಿದ್ದನ್ನ ನೆನಸಿಕೊಳ್ತಿದ್ದೆ."

"ಅದನ್ನ ನೆನಸಿಕೊಳ್ಳೋದು ಈಗಲಾ?"

"ಅಲ್ಲ. ಆಗ ನಾನಿದೊಂದನ್ನೂ ನೆನಸಿಕೊಂಡಿರಲಿಲ್ಲ. ಆದರೂ ನನ್ನ ನೆನಪಾಗೋದಿಲ್ಲವಲ್ಲ ಯಾಕೆ ಅನ್ನಿಸಿತ್ತು. ಅಲ್ಲಿ ತುಂಬ ಕೆಲಸ ಇರುತ್ತೆ ಅಂತ ಎಲ್ಲರೂ ಹೇಳ್ತಿದ್ದರು. ಇರಬಹುದೇನೋ ಅಂತ ಸಮಾಧಾನಪಟ್ಟುಕೊಳ್ತಿದ್ದೆ. ಕೆಲವು ಸಲ ಬೇರೆ ಏನಾದರೂ ಇರಬಹುದೇ ಅನ್ನಿಸ್ತಿತ್ತು. ಅದು ಹಾಗೇ ಇತ್ತು. ಈಗ ನನಗೆ ಅದೆಲ್ಲ ಗೊತ್ತಾದದ್ದು."

ಕೇಶವ ಪಿಳ್ಳೆ ಅದೊಂದು ತೀರ ಗೌಣವಾದ ವಿಷಯವೆನ್ನುವ ಧಾಟಿಯಲ್ಲಿ ಕಾತ್ಯಾಯಿನಿಯಮ್ಮನ ಕೆನ್ನೆಯನ್ನು ಚಿಗುಟ ಹೇಳಿದರು:

"ನಿನಗೆ ಗೊತ್ತಾದದ್ದು ಮಣ್ಣಾಂಗಟ್ಟಿ. ಸುಮ್ಮನೆ ಏನೇನೋ ತಂದು ತಲೆ ತುಂಬಿಸಿಕೊಂಡು, ತಲೆ ಕೆಡಿಸಿಕೊಳ್ಳಬೇಡ ಕಣೇ."

ಕಾತ್ಯಾಯಿನಿಯಮ್ಮ ಕೇಳಿದಳು: "ಹಾಗಾದರೆ ನಿಮಗೆ ಹರಟೆ ಹೊಡೆಯೋದಕ್ಕೂ ತಮಾಷೆ ಮಾಡೋದಕ್ಕೂ ಬರುತ್ತೆ ಅಲ್ಲವಾ?"

ಅದನ್ನೂ ಹರಟೆಯಾಗಿ ಕೇಶವ ಪಿಳ್ಳೆ ಭಾವಿಸಿದರು. "ಹಾಳು ಗ್ರಹಚಾರ! ಒಂದು ಸಲ ಕೆನ್ನೆ ಚಿಗುಟೋದಕ್ಕೂ ಬಿಡೋದಿಲ್ಲವಲ್ಲೇ?"

ಕಾತ್ಯಾಯಿನಿಯಮ್ಮ ಒಂದು ಸಲ 'ಹ್ಞು' ಎಂದು ಸ್ವಲ್ಪ ಕಟುವಾಗಿ ಹೇಳಿದಳು: "ನಾನು ಹೀಗೆಲ್ಲ ಅಂದುಕೊಂಡಿರಲಿಲ್ಲ. ಜನರು ಏನೇನೋ ಮಾತಾಡಿಕೊಳ್ತಿದ್ದರು. ಆದರೂ ನಾನು ನಂಬಿರಲಿಲ್ಲ. ಈಗ ನನಗೆ ಇದೆಲ್ಲ ತಿಳಿದದ್ದು! ಮದುವೆ ಮಾಡಿಕೊಂಡು ಹೊರಟು ಬಂದ ಮೇಲೆ ನನ್ನ ಕಡೆಗೆ ಕಣ್ಣೆತ್ತಿ ನೋಡದೇ ಹೊರಟುಹೋದದ್ದು ಯಾಕೆ ಅನ್ನೋದು!"

"ಆ ಮುದುಕಿ ಬಂದು ಏನೇನೋ ಬೇಡದ್ದನ್ನೆಲ್ಲ ಹೇಳಿರಬೇಕು ಅಂತ ಕಾಣುತ್ತೆ."

ಆ ಮಾತನ್ನು ತಡೆಯುತ್ತ ಕಾತ್ಯಾಯಿನಿಯಮ್ಮ ಹೇಳಿದಳು: "ಇಲ್ಲ, ಇಲ್ಲ. ಅವರೇನೂ ಹೇಳಲಿಲ್ಲ. ಅವರ ಮೇಲೆ ದೂರು ಹೊರಿಸಬೇಡಿ. ಪಾಪ! ಒಳ್ಳೆ ನಡವಳಿಕೆ ಹೆಂಗಸು."

ಹೃದಯವನ್ನು ಮೀಟುವಂತಹ ಯಾವುದೋ ಸಂಗತಿಗಳು ಕಾತ್ಯಾಯಿನಿಗೆ ತಿಳಿದಿವೆ ಅನ್ನಿಸಿತು ಕೇಶವ ಪಿಳ್ಳೆಗೆ.

ಇಬ್ಬರೂ ಭಾರವಾದ ನಿಮಿಷಗಳನ್ನು ನೂಕುತ್ತಿದ್ದರು. ಕಾತ್ಯಾಯಿನಿಯಮ್ಮ

ಕೈಕಾಲು ಅಲುಗಾಡಿಸದೆ ಮಲಗಿದ್ದಳು. ಹೊಸದಾಗಿ ತಿಳಿದ ಸುದ್ದಿಯಿಂದಾಗಿ ಆಕೆ ತನ್ನ ಕಳೆದ ದಿನಗಳ ಬದುಕನ್ನು ಆಲೋಚಿಸುತ್ತಿದ್ದುದಾಗಿರಬೇಕು. ಆ ಕಾಲದಲ್ಲಿ ಅಲ್ಲಿಯೂ ಇಲ್ಲಿಯೂ ಕೇಶವ ಪಿಳ್ಳೆಯನ್ನು ಕುರಿತು ಕೇಳಿದ ಆರೋಪಗಳನ್ನು ಒಂದೊಂದನ್ನಾಗಿ ಸಂದರ್ಭಕ್ಕನುಸಾರವಾಗಿ ಆಕೆ ಜ್ಞಾಪಿಸಿಕೊಳ್ಳುತ್ತಿದ್ದಳು. ಮದುವೆ ನಡೆದ ದಿನವೇ ಕೈಹಿಡಿದ ಹೆಣ್ಣನ್ನು ಕಣ್ಣೆತ್ತಿ ಕೂಡ ನೋಡದೆ ಕೈಹಿಡಿದ ಮನುಷ್ಯ ಹೊರಟುಬಂದದ್ದು —ಹಾಗೆಲ್ಲಿಯಾದರೂ ಉಂಟೇ? ತಾನು ಕಂಡ ಎಷ್ಟೋ ಮದುವೆಗಳನ್ನು, ಕಾತ್ಯಾಯಿನಿಯಮ್ಮ ಜ್ಞಾಪಿಸಿಕೊಂಡಳು. ಎಲ್ಲಿಯೂ ಹಾಗೆ ನಡೆದಿಲ್ಲ. ಹಿಂದೆ ಎಷ್ಟೋ ಸಲ ಕಾತ್ಯಾಯಿನಿಯಮ್ಮ ಜ್ಞಾಪಿಸಿಕೊಳ್ಳುತ್ತಿದ್ದುದುಂಟು. ಯಾವುದೋ ಒಂದು ಅನರ್ಥವುಂಟಾಗಿದೆ ಎನ್ನಿಸಿದ್ದುಂಟು. ಆದರೂ ತನ್ನನ್ನು ತಾನೇ ಸಮಾಧಾನಪಡಿಸಿಕೊಳ್ಳುತ್ತಿದ್ದುದೂ ಉಂಟು. ತಿರುವನಂತಪುರದಲ್ಲಿ ನೌಕರನಾಗಿರುವುದು, ಕೆಲಸ ಹೋಗದ ಹಾಗೆ ನೋಡಿಕೊಳ್ಳಬೇಕು—ಎಂದು ಮಾವನೂ ಕಿಟ್ಟುಮಾವನೂ ಹೇಳುತ್ತಿದ್ದುದ್ದು. ಇಂದು ಹೊಸದಾಗಿ ತಿಳಿದ ಸಂಗತಿಗಳ ಆಧಾರದ ಮೇಲೆ ಆ ವಿಷಯಗಳನ್ನೆಲ್ಲ ಕಾತ್ಯಾಯಿನಿಯಮ್ಮ ನೆನಸಿಕೊಂಡಳು. ತಾನು ಬೇಡವಾಗಿತ್ತು. ಅದು ಸತ್ಯ. ಇಷ್ಟವಿಲ್ಲದ ಇಷ್ಟದಲ್ಲಿ ಮದುವೆ ಮಾಡಿಕೊಂಡದ್ದು. ಎಷ್ಟೋ ತಿಂಗಳು ಕಳೆದ ಮೇಲೆ ಊರಿಗೆ ಬಂದದ್ದು. ಅಕ್ಕಪಕ್ಕದ ಹೆಂಗಸರು ಕೇವಲ ಊಹೆಯಿಂದ ಆಡಿದ ಮಾತಾಗಿದ್ದರೂ ಅವರು ಹೇಳಿದ್ದು ನಿಜವಾಗಿತ್ತು. "ಅಲ್ಲಿ ತಿರುವನಂತಪುರದಲ್ಲಿ ಅವನಿಗೆ ಯಾವಳೋ ಇದ್ದಾಳೆ"—ಎಂದು ಸ್ನಾನದ ಕೊಳದ ಹತ್ತಿರ, ಅಲ್ಲಿ ಇಲ್ಲಿ ಎಲ್ಲ ಕಡೆಗಳಲ್ಲೂ ಅವರು ಹೇಳಿದ್ದು ಕಾತ್ಯಾಯಿನಿಯಮ್ಮನ ಕಿವಿಯಲ್ಲಿ ಈಗಲೂ ಮೊಳಗುತ್ತಿತ್ತು. ಪಾಪ ! ಅತ್ತೆ ಈ ವಿಷಯಕ್ಕೆ ಅವರೆಲ್ಲರ ಹತ್ತಿರ ಎಷ್ಟೊಂದು ಜಗಳ ಆಡಿದರು !

ಪಪ್ಪು ಪಿಳ್ಳೆ ಮತ್ತು ಕುಟ್ಟಿಯಮ್ಮನನ್ನು ಕುರಿತು ಕಾತ್ಯಾಯಿನಿಯಮ್ಮ ಆಲೋಚಿಸಿದಳು. ಅತ್ತೆ ನನಗೆ ತಾಯಿಯಂತಿದ್ದಳು. ಮಾವ ತಂದೆಯಂತಿದ್ದರು. ಅವರನ್ನು ಕುರಿತ ನೆನಪುಗಳು ಎಂದೂ ಮಾಸುವುದಿಲ್ಲ. ಆ 'ಮಗಳೇ' ಎನ್ನುವ ಕರೆ ಈಗ ತಾನೇ ಕಿವಿಯಲ್ಲಿ ಕೇಳಿದಂತಿದೆ. ಎಂತಹ ವಾತ್ಸಲ್ಯ ಅವರದು ! ಆ ಅಮ್ಮ ನನ್ನನ್ನು ಒಂಬತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತಿರಲಿಲ್ಲ ಅಷ್ಟೆ. ಆ ವೃದ್ಧ ದಂಪತಿಗಳು ಎಷ್ಟು ಅನ್ಯೋನ್ಯವಾಗಿ ಬಾಳಿದರು ! ನಿಜವಾದ ದಾಂಪತ್ಯ ಅಂದರೆ ಅದು. ದಿನಕ್ಕೆ ಒಂದು ಹತ್ತು ಸಲ ಬಾಯಿಗೆ ಬಂದ ಹಾಗೆ ಬಯ್ಯುತ್ತಿದ್ದರು. ಒಬ್ಬರ ಮೇಲೊಬ್ಬರು ರೇಗಾಡುತ್ತಿದ್ದರು. ಆದರೆ ಮರುಕ್ಷಣದಲ್ಲಿ ಮಾವ, "ಇಲ್ಲಿ ಯಾರೂ ಇಲ್ಲವಾ? ಎಲೆ ಅಡಿಕೆ ಬೇಕಾಗಿತ್ತು" ಎಂದು ಹೆಂಡತಿಯನ್ನು ಕರೆಯುತ್ತಿದ್ದುದನ್ನು ಕೇಳಬಹುದಾಗಿತ್ತು. ಕೆಲವು ಸಲ ಗಂಟೆಗಟ್ಟಲೆ ಇಬ್ಬರೂ ಕುಳಿತು ಮಾತನಾಡುತ್ತಿದ್ದುದನ್ನು ಕೇಳಬಹುದಾಗಿತ್ತು. ಗಂಡ ಹೆಂಡತಿ ಕುಳಿತು ಇಷ್ಟು ಹೊತ್ತು ಮಾತನಾಡುವಂಥಾದ್ದು ಏನಿರುತ್ತೆ? ಎಂದು ಕಾತ್ಯಾಯಿನಿಗೆ ಅನ್ನಿಸಿದ್ದೂ ಉಂಟು. ಯಾವಾಗಲೂ ಅತ್ತೆ, ಮಾವನ ಹಿಂದೆಯೇ ಇರುತ್ತಿದ್ದರು.

ತಾನು ಹತ್ತಿರ ಕಾಣದಿದ್ದಾಗ ಮಾವ ಕರೆಯುತ್ತಿದ್ದರು. ಆ ಹೊಂದಾಣಿಕೆಗೆ ಎಂದೂ ಚ್ಯುತಿ ಬಂದಿರಲಿಲ್ಲ. ಇವರು ಯೌವನದಲ್ಲೂ ಹೀಗೇ ಇದ್ದರೋ ಏನೋ ಎಂದು ಕಾತ್ಯಾಯಿನಿಯಮ್ಮ ಆಲೋಚಿಸಿದ್ದುಂಟು. ಗಂಡ ಹೆಂಡತಿ ಯೌವನದಲ್ಲಿ ಇಷ್ಟೊಂದು ಅನ್ಯೋನ್ಯವಾಗಿರಲು ಸಾಧ್ಯವೇ ಎಂದು ಎಷ್ಟೋ ಸಲ ಅವಳಿಗನ್ನಿಸಿದ್ದುಂಟು.

ಅಂತೂ ಹಿಂದಕ್ಕೆ ದೃಷ್ಟಿ ಹಾಯಿಸಿ ನೋಡಿದಾಗ ಕಾತ್ಯಾಯಿನಿಗೆ ಅನ್ನಿಸಿದ್ದು ಆ ಜೀವನ ಕ್ಲೇಶದಾಯಕವಾಗಿತ್ತು ಎಂದು. ಅತ್ತೆ ಮಾವಂದಿರ ವಾತ್ಸಲ್ಯದ ತಂಪಾದ ಆಶ್ರಯದಲ್ಲಿ ಆ ಜೀವನ ಹೇಗೋ ಕಳೆಯಿತು. ಆ ಬಗ್ಗೆ ಯಾವ ದೂರನ್ನೂ ಹೇಳಿ ಕೊಳ್ಳುವುದಿಲ್ಲ. ಮದುವೆಗೆ ಹಿಂದೆ ಇದ್ದ ಜೀವನವನ್ನೇ ಮದುವೆಯ ನಂತರವೂ ಪ್ರಾರಂಭಿಸಿದ್ದು ಅಷ್ಟೆ. ಯಾವುದಕ್ಕೂ ಕೊರತೆಯಿರಲಿಲ್ಲ. ಒಂದರ ಮೇಲೊಂದರಂತೆ ಭೂಮಿ, ಮನೆ, ಹಣ—ಎಲ್ಲವೂ ದೊರೆತು ಐಶ್ವರ್ಯ–ಸುಖವನ್ನನುಭವಿಸುವುದೂ ಒಂದು ರೀತಿಯ ಕಷ್ಟವಾಗಿತ್ತು. ಈಗ ಅದು ತೀರಾ ಕಷ್ಟವಾಯಿತು. ತನ್ನ ಬದುಕು ಅನಾಥವಾದಂತೆ ಕಾತ್ಯಾಯಿನಿಗೆ ತೋರಿತು.

ಪಕ್ಕದಲ್ಲಿ ಕೇಶವ ಪಿಳ್ಳೆ ಆಲೋಚನಾಮಗ್ನರಾಗಿ ಕುಳಿತಿದ್ದರು. ಕಾತ್ಯಾಯಿನಿ ಯಮ್ಮ ಕೇಶವ ಪಿಳ್ಳೆಯನ್ನೊಮ್ಮೆ ನೋಡಿದಳು. ಅದನ್ನು ಕೇಶವ ಪಿಳ್ಳೆ ನೋಡಲಿಲ್ಲ. ಇಲ್ಲಿ ಕುಳಿತಿರುವ ಮನುಷ್ಯ ಆಕೆಯ ರಕ್ಷಕ; ಆಕೆಯ ಸರ್ವಸ್ವ. ಆಕೆಯನ್ನು ರಕ್ಷಿಸುವು ದಿಲ್ಲವೆ? ಒಮ್ಮೆಯೂ ಆಕೆಯನ್ನು ಇಷ್ಟಪಟ್ಟು ಇವಳು ತನ್ನವಳು ಎನ್ನುವ ಭಾವನೆ ಯಿಂದ ನಡೆದುಕೊಂಡಿರಲಿಲ್ಲ. ಈಗ ಆಭರಣ ತೊಡಿಸುವುದಕ್ಕೆ ಆಶೆಪಡುತ್ತಿದ್ದದ್ದು, ಕೆನ್ನೆ ಜಿಗುಟಿದ್ದು, ಹಾಗೆ ಎಷ್ಟೋ ಹೊತ್ತು ಆಕೆ ಮಾತನಾಡಿದಳು.

ಇಂದಿನಂತೆ ಹಿಂದೆಂದೂ ಗಂಡ ತನ್ನನ್ನು ಗಾಢವಾಗಿ ಆಲಿಂಗಿಸಿಕೊಂಡಿರಲಿಲ್ಲ. ಇಂತಹ ಬಿಸಿಯಾದ ಮುತ್ತೂ ಲಭಿಸಿರಲಿಲ್ಲ. ಅಂದೊಂದು ಹೊಸ ಅನುಭವವೇ ಆಗಿತ್ತು. ಇದೇ ರೀತಿಯಲ್ಲಿ ಗಂಡ ತಂಗಮ್ಮ ಎನ್ನುವ ಸ್ತ್ರೀಯನ್ನು ಆಲಿಂಗಿಸಿಕೊಂಡಿರಬಹುದೇ? ಬಿಸಿಯಾದ ಮುತ್ತನ್ನು ಕೊಟ್ಟಿರಬಹುದೇ? ಆಕೆಗೆ ಆಭರಣ ತೊಡಿಸಿರಬಹುದೇ? ಆಕೆಯ ಜೊತೆಯಲ್ಲಿ ಎಷ್ಟೋ ಹೊತ್ತು ಮಾತಾಡಿಕೊಂಡು ಕುಳಿತಿರಬಹುದೇ?

ಈ ಪ್ರಶ್ನೆಗಳು ಒಂದಾದ ಮೇಲೊಂದು ವೇಗದಲ್ಲಿ ಮೂಡಿಬಂದುವು.

ಕಾತ್ಯಾಯಿನಿಯಮ್ಮ ಕೇಳಿದಳು: "ಆ ತಂಗಮ್ಮ ಹೀಗೆ ಮಲಗಿದ್ದಾಗ, ಇದೇ ರೀತಿ ಅವಳ ಹತ್ರ ನೀವು ಕುಳಿತದ್ದುಂಟಾ?"

ಕೂಡಲೇ "ಉಂಟು" ಎಂದರು. ಹಾಗೆ ಹೇಳಿದ್ದು ತಪ್ಪೊಪ್ಪಿಗೆಯ ಧ್ವನಿಯಲ್ಲಿ.

"ನನ್ನನ್ನು ಮದುವೆ ಮಾಡಿಕೊಂಡ ಮೇಲಾ?"

ಕಾತ್ಯಾಯಿನಿಯ ಕೈಗಳನ್ನು ಹಿಡಿದುಕೊಂಡು ಅವುಗಳನ್ನು ನೇವರಿಸುತ್ತಾ ಹೇಳಿ ದರು: "ಅಲ್ಲ, ಅದಕ್ಕೆ ಮೊದಲು. ನಾನು ಎಲ್ಲವನ್ನೂ ನಿನ್ನ ಹತ್ತಿರ ತೆರೆದು ಹೇಳ್ತೀನಿ. ನಿಜ ಹೇಳ್ತೀನಿ. ನೀನು ಹಿಂದಿನದನ್ನೆಲ್ಲ ಮರೆತುಬಿಡಬೇಕು. ನನ್ನನ್ನು ನಂಬಬೇಕು.

ನನಗೆ ಇನ್ನು ಮೇಲೆ ನೀನು ಮಾತ್ರ. ನೀನಲ್ಲದೆ ನನಗೆ ಬೇರೆ ಯಾರೂ ಇಲ್ಲ."

ಕೇಶವ ಪಿಳ್ಳೆ ಆಲೋಚಿಸಿದ್ದದ್ದು ಅದು. ಆ ಹೊಸ ಜೀವನವನ್ನು ಹೇಗೆ ಪ್ರಾರಂಭಿಸಬೇಕು ಎಂದು. ಎಲ್ಲವನ್ನೂ ಬಚ್ಚಿಟ್ಟುಕೊಂಡು ಜೀವಿಸುವುದೆ? ಅಥವಾ ಎಲ್ಲವನ್ನೂ ತೆರೆದು ಹೇಳಿಬಿಡುವುದೆ? ಎಂದು. ಆ ವ್ಯಕ್ತಿ ಹಿಂದಿನ ಬಾಳ್ವೆಯ ಕಡೆಗೊಮ್ಮೆ ದೃಷ್ಟಿ ಹಾಯಿಸಿ ನೋಡಿದರು. ಇದುವರೆಗೆ ಪ್ರೀತಿಸಬಹುದಾದ ಒಂದೇ ಒಂದು ವ್ಯಕ್ತಿಯನ್ನು ಮಾತ್ರ ಸಂಪಾದಿಸಲು ಸಾಧ್ಯವಾಗಿದ್ದದು, ಸಾಯುವಾಗ ಹತ್ತಿರ ಕುಳಿತು ಒಂದು ತೊಟ್ಟು ನೀರು ಬಿಡುವಂತಹ ಒಂದು ವ್ಯಕ್ತಿಯನ್ನು ಮಾತ್ರ—ಅದು ಕಾತ್ಯಾಯಿನಿಯಮ್ಮ. ಮತ್ತಾರೂ ಇಲ್ಲ. ಆ ಹಾದಿಯಲ್ಲಿ ಬೇರೆ ಒಬ್ಬ ಮನುಷ್ಯನಿಲ್ಲ. ಆ ಹಾದಿಯಲ್ಲಿ ಅವಳು ಮಾತ್ರ ತನ್ನ ಹಿಂದೆ ಬರುತ್ತಿದ್ದಾಳೆ. ಅಗತ್ಯವಿದ್ದಲ್ಲ............ ಬರುತ್ತಿದ್ದಾಳೆ. ಅವಳ ಹತ್ತಿರ ಯಾಕೆ ಬಚ್ಚಿಡಬೇಕು? ಎಲ್ಲವನ್ನೂ ತೆರೆದು ಹೇಳಿಬಿಡಬೇಕು. ಅವಳು ಕ್ಷಮಿಸುತ್ತಾಳೆ.

ಕೇಶವ ಪಿಳ್ಳೆ ಕೇಳಿದರು: "ನೀನು ನನ್ನನ್ನು ನಂಬ್ತೀಯಾ?" ನಂಬುತ್ತೇನೆ ಎಂದು ಕಾತ್ಯಾಯಿನಿಯಮ್ಮ ತಲೆ ಅಲ್ಲಾಡಿಸಿದಳು. ಕೇಶವ ಪಿಳ್ಳೆ ಪ್ರಾರಂಭಿಸಿದರು:

"ಸರಿ, ನೀನು ಏನು ಕೇಳಬೇಕು ಕೇಳು. ನಾನು ಹೇಳ್ತೀನಿ. ಎಲ್ಲ ಹೇಳ್ತೀನಿ."

"ನನಗೆ ಏನು ಕೇಳಬೇಕು ಅನ್ನೋದು ತಿಳಿಯದು. ನೀವೇ ಎಲ್ಲ ಹೇಳಿಬಿಡಿ."

ಕೇಶವ ಪಿಳ್ಳೆ ತಾವು ಅನುಭವಿಸಿದ ಸತ್ಯ ಸಂಗತಿಯನ್ನು ಹೇಳಿದರು: "ಅವಳಿಗೆ ನನ್ನ ಕಂಡರೆ ಇಷ್ಟವಿರಲಿಲ್ಲ."

ಅದನ್ನು ಕಾತ್ಯಾಯಿನಿಯಮ್ಮ ಕೇಳಿ ತಿಳಿದಿದ್ದಳು. ಆಕೆಗೆ ಕೇಳಬೇಕಾದದ್ದು ಅದಲ್ಲ. ಕೇಶವ ಪಿಳ್ಳೆಗೆ ತಾನು ಇಷ್ಟವಾಗಿದ್ದೆನೆ? ಎನ್ನುವುದು. ಒಂದು ಇಕ್ಕಟ್ಟಿನ ಪ್ರಶ್ನೆ ಅದು. ಇಷ್ಟವಿತ್ತು ಎಂದಾಗಲೀ ಇಷ್ಟವಿರಲಿಲ್ಲ ಎನ್ನುವುದನ್ನಾಗಲೀ ಹೇಳಲು ಸಾಧ್ಯವಿರಲಿಲ್ಲ.

"ನಮ್ಮ ಮದುವೆಗೆ ಮೊದಲು ನಾವಿಬ್ಬರೂ ಹತ್ತಿರದ ಕುರ್ಚಿಯಲ್ಲಿ ಕುಳಿತು ಕೆಲಸ ಮಾಡುತ್ತಿದ್ದೆವು. ನನಗೊಂದು ರೀತಿಯ ಕುತೂಹಲವಿತ್ತು. ಬರೀ ಕುತೂಹಲ."

ಕಾತ್ಯಾಯಿನಿಯಮ್ಮ ಕೇಳಿದಳು: "ಮದುವೆಯ ನಂತರ ಅದಿರಲಿಲ್ಲವಾ?"

"ಇರಲಿಲ್ಲ."

ಕಾತ್ಯಾಯಿನಿಯಮ್ಮನಿಗೆ ನಂಬಿಕೆ ಬರಲಿಲ್ಲ. ಒಂದು ಹುಸಿನಗು ನಗುತ್ತ ಸ್ವಲ್ಪ ರಮ್ಯಭಾವದಿಂದ ಅವಳು ಹೇಳಿದಳು:

"ನೋಡಿ! ನೋಡಿ! ಸುಳ್ಳು ಹೇಳ್ತಿದ್ದೀರಿ. ಆ ಮೇಲೆ ಅವಳ ಹತ್ರ ಹೋಗಿರಲಿಲ್ಲವಾ?"

ಗಿಳಿಯ ಹಾಗೆ ಕೇಶವ ಪಿಳ್ಳೆ ಹೇಳಿದರು: "ತುಂಬ ದಿನಗಳು ಕಳೆದಿಲ್ಲ. ಮದುವೆಯಾದ ಮೇಲೆ ನಾನು ಅವಳ ಹತ್ರ ಹೋಗಿಲ್ಲ. ಅವಳು ರಾಮಚಂದ್ರನ್ ನಾಯರ್ ಅನ್ನುವವನ ಜೊತೆಯಲ್ಲಿ ಹೊರಟುಹೋದಳು. ಮತ್ತೊಂದು ಸಂಗತಿ. ಅವಳು

ಭಯಂಕರಿ. ರಾಕ್ಷಸಿ. ನಾನು ನಿನ್ನ ಹತ್ರ ಹೇಳ್ತೀನಿ ಕೇಳು. ಅತೃಪ್ತಳಾಗಿ ಅವಳು ನನ್ನನ್ನು ಒದ್ದು ಹೊರಗೆ ಹಾಕಿದಳು. ಹೋಗಾಚೆ ಅಂದಳು. ಅನಂತರ ನಾನು ಹೋಗಿಲ್ಲ."

ಕಾತ್ಯಾಯಿನಿಯಮ್ಮನಿಗೆ ಅದರಲ್ಲೂ ನಂಬಿಕೆ ಬರಲಿಲ್ಲ. ಕೇಶವ ಪಿಳ್ಳೆ ಆ ದೃಶ್ಯವನ್ನು ವಿವರಿಸಿ ತಿಳಿಸಿದರು. ಅದು ಬರಿ ಸುಳ್ಳು ಎಂದು ಅವಳಿಗನ್ನಿಸಿದ್ದು. ಆದರೆ ಅದನ್ನು ನಂಬಿದಂತೆ ಕಾತ್ಯಾಯಿನಿಯಮ್ಮ ನಟಿಸಿದಳು. ಅವಳು ಕೇಳಿದಳು: "ಆಮೇಲೂ ಅಲ್ಲಿಗೆ ಹೋಗಿದ್ದಿರಲ್ಲ?"

ಕೇಶವ ಪಿಳ್ಳೆ ಹೇಳಿದರು: "ಹ್ಞು! ಹೋಗಿದ್ದೆ. ತುಂಬ ದಿನ ಕಳೆದ ಮೇಲೆ. ಆಗ ನಾನು ಅಸಿಸ್ಟೆಂಟ್ ಸೆಕ್ರೆಟರಿಯಾಗಿದ್ದೆ. ಶೇಖರ ಪಿಳ್ಳೆ ಸಾಯುವ ಹೊತ್ತಿನಲ್ಲಿ ನಾನು ಅಲ್ಲಿಗೆ ಹೋ-ಗಿದ್ದೆ. ಅದು ನನ್ನ ಕರ್ತವ್ಯವಾಗಿತ್ತು. ಶೇಖರ ಪಿಳ್ಳೆ ತುಂಬ ಒಳ್ಳೆಯ ಮನುಷ್ಯರಾಗಿದ್ದರು. ನಾವು ಇವತ್ತು ಇಲ್ಲಿರುವುದಕ್ಕೆ ಕಾರಣ ಶೇಖರ ಪಿಳ್ಳೆ. ಇಲ್ಲದೇ ಇದ್ದಿದ್ದರೆ ಕಷ್ಟದಲ್ಲಿ ನೂರು ರೂಪಾಯಿ ಸಂಬಳ ಸಿಕ್ತಿತ್ತು. ಅಷ್ಟೆ. ನಾವು ಆ ಮನುಷ್ಯನನ್ನು ಮರೆಯೋದಕ್ಕೆ ಸಾಧ್ಯವೆ?"

ಕಾತ್ಯಾಯಿನಿಯಮ್ಮ ಕೇಳಿದಳು: "ಅವರು ಯಾಕೆ ನಮಗೆ ಹಾಗೆ ಉಪಕಾರ ಮಾಡಿದ್ದು? ಮಗಳನ್ನು ಮದುವೆ ಮಾಡಿ ಕೊಡೋದಕ್ಕಲ್ಲವಾ?"

"ಹೌದು. ಆದರೆ ಅವಳಿಗೆ ನಾನು ಏನೋ ಸಾಲದು ಅನ್ನಿಸಿತು. ಅವಳು ರಾಮಚಂದ್ರನ್ ನಾಯರ್ ಜೊತೆ ಹೋದಳು. ಅದು ಒಳ್ಳೆಯದಾಯ್ತು. ನಿಜವಾಗಿಯೂ ಕಿಟ್ಟುಮಾವ ಹೇಳಿದ್ದೇ ಸರಿ. ನೀನು ಭಾಗ್ಯವತಿ. ಬೇರೆ ಜೋಯಿಸರು ಹೇಳಿದ್ದೂ ಅದೇ."

ಕಾತ್ಯಾಯಿನಿಯಮ್ಮನಿಗೆ ಅದನ್ನೆಲ್ಲ ಕೇಳುವುದಕ್ಕೆ ಅಷ್ಟೊಂದು ಮನಸ್ಸಿರಲಿಲ್ಲ. ಅವಳು ಕೇಳಿದಳು:

"ಆ ಮೇಲೆ?"

"ಆ ಮೇಲಾ?"

ಕೇಶವ ಪಿಳ್ಳೆ ಸಣ್ಣ ಹುಡುಗನ ಹಾಗೆ ಕಾತ್ಯಾಯಿನಿಯಮ್ಮನ ಮೂಗನ್ನು ವಾತ್ಸಲ್ಯದಿಂದ ಹಿಂಡಿದರು.

ಕಾತ್ಯಾಯಿನಿಯಮ್ಮ ಕೇಳಿದಳು: "ಅವಳಿಗೆ ಮನೆ ಕಟ್ಟಿಸಿಕೊಟ್ಟದ್ದೋ?"

"ಶೇಖರ ಪಿಳ್ಳೆ ತೀರಿಕೊಂಡರು. ನಮಗೆ ಮಾಡಿದ ಉಪಕಾರಕ್ಕೆ ಪ್ರತಿಯಾಗಿ ನಾನು ಅದನ್ನು ಕಟ್ಟಿಸಿಕೊಟ್ಟೆ. ಆ ಋಣ ಒಂದು ಸಲ ತೀರಿಸುವಂಥಾದ್ದೇನನ್ನೂ ಮಾಡಿಕೊಡಲಿಲ್ಲವಲ್ಲ ಎಂದು ಮನಸ್ಸು ಯಾವಾಗಲೂ ಬಾಧಿಸುತ್ತಿತ್ತು."

"ಆ ಮೇಲೂ ಅಲ್ಲಿಗೆ ಹೋಗ್ತಾ ಬರ್ತಾ ಇದ್ದದ್ದೋ?"

ಹಾಗೆ ಒಂದಾದ ಮೇಲೊಂದು ಪ್ರಶ್ನೆಯನ್ನು ಕೇಳುತ್ತಲೇ ಇದ್ದಳು. ಓದು ಬರೆಹ ಬಾರದ ಹಳ್ಳಿ ಹೆಣ್ಣು ತಾನು ತಿಳಿದುಕೊಂಡಷ್ಟು ದಡ್ಡಳಲ್ಲ. ಇನ್ನೂ ಅವಳು ಪ್ರಶ್ನೆ ಕೇಳುತ್ತಾಳೆ. ಅವಳಿಗೆ ಪ್ರಶ್ನೆ ಕೇಳುವ ಹಕ್ಕಿದೆ. ಅವಳು ಪತ್ನಿ. ಅದೊಂದು ನೀರಸವಾದ ಮಾತುಕಥೆಯೆನ್ನುವಂತೆ ಕೇಶವ ಪಿಳ್ಳೆ ಅದಕ್ಕೆ ಉತ್ತರ ಕೊಟ್ಟದ್ದು:

"ಹೋಗೇ ಸುಮ್ಮನೆ! ನೀನು ಇಲ್ಲಿದ್ದೆಯಾ? ನೀನು ಇದ್ದದ್ದು ಊರಿನಲ್ಲಲ್ಲವಾ? ನಾನೊಬ್ಬ ಗಂಡಸಲ್ಲವಾ? ಸುಮ್ಮನೆ ಒಂದು ಖುಷಿಗೆ ಹೋದೆ. ಅಂತು ಅವಳೊಬ್ಬಳು ರಾಕ್ಷಸಿ. ಅಬ್ಬ! ಇಂಥಾ ಸ್ತ್ರೀಯರೂ ಇರ್ತಾರಾ? ಭಯಂಕರ! ಭಯಂಕರ! ತೃಪ್ತಿ ಅನ್ನೋದೇ ಇಲ್ಲದವಳು."

ಕಾತ್ಯಾಯಿನಿಯಮ್ಮ ಕೇಳಿದಳು· "ಸುಮ್ಮನೆ ಖುಷಿಗೆ ಹೋದಿರಿ ಅಲ್ವೇ?"

"ಹೌದು."

ಕಾತ್ಯಾಯಿನಿಯಮ್ಮನಿಗೆ ಆ ಮಾತು ವಿಶ್ವಾಸ ಉಂಟುಮಾಡುವುದಲ್ಲವಲ್ಲ— 'ಸುಮ್ಮನೆ ಖುಷಿಗೆ' ಎಂದು ಗಂಡ ಹೇಳುವುದಾದರೂ ಅದನ್ನು ಹೆಂಡತಿಯಾದವಳು ಸಹಿಸುತ್ತಾಳೆಯೇ?

ಕೇಶವ ಪಿಳ್ಳೆ ಹೇಳಿದರು: "ಅದೇನೇ ಇದ್ದರೂ ಅದೆಲ್ಲ ಕಳೆದ ಕಥೆ. ಅದು ಯಾವಾಗಲೋ ಮುಗಿದುಹೋದ ಕಥೆ. ಅವಳು ಸನ್ಯಾಸಿನಿಯಾಗಿದ್ದಾಳೆ. ನಾನು ಕಟ್ಟಿಸಿ ಕೊಟ್ಟ ಮನೆಯಲ್ಲೇ ಆಶ್ರಮ ತೆರೆಯೋದಕ್ಕೆ ಹೊರಟಿದ್ದಾಳೆ. ಅದೆಲ್ಲ ಮುಗಿಯಿತು. ನನಗೆ ನೀನು. ನಿನಗೆ ನಾನು. ಇಷ್ಟಲ್ಲದೆ ಬೇರೆ ಯಾರಿದ್ದಾರೆ?"

ಕೇಶವ ಪಿಳ್ಳೆ ತಲೆ ತಗ್ಗಿಸಿ ಮುಖವನ್ನು ಕಾತ್ಯಾಯಿನಿಯಮ್ಮನ ಮುಖದ ಹತ್ತಿರ ಒಡ್ಡಿದರು. ಅವಳು ಆ ಚುಂಬನದ ಬಿಸಿಯನ್ನನುಭವಿಸದೆ. ಅತ್ತಿತ್ತ ಅಲುಗಾಡದೆ ಮಲಗಿದ್ದಳು.

ಕಾತ್ಯಾಯಿನಿಯಮ್ಮನಿಗೆ ತಿಳಿಯಬೇಕಾದದ್ದೆಲ್ಲ ತಿಳಿಯಲಿಲ್ಲವೆ? ಹೇಳಬೇಕಾದದ್ದನ್ನೆಲ್ಲ ಹೇಳಿ ಆಗಲಿಲ್ಲವೆ? ಇನ್ನು ಉಳಿದಿರುವುದೇನು? ಒಂದು ವಿಷಯ ಮಾತ್ರ ಹೇಳದೇ ಇದ್ದದ್ದು ಇರಬಹುದು. ಆ ವ್ಯಾಪಾರದಲ್ಲಿ ಉಂಟಾದ ಲಾಭ. ಅದನ್ನು ಸ್ಪಷ್ಟಪಡಿಸಿದಾಗ ಕಾತ್ಯಾಯಿನಿಯಮ್ಮನಿಗೆ ಎಲ್ಲವನ್ನೂ ಮರೆಯಲು. ಕ್ಷಮಿಸಲು ಸಾಧ್ಯವಾಗಬಹುದು.

ಮುಖವನ್ನು ಮುಖಕ್ಕೆ ಸೇರಿಸಿ ಕೇಶವ ಪಿಳ್ಳೆ ತಮ್ಮ ಸತ್ಯ ಸಂಗತಿಯನ್ನು ಹೇಳಿದರು: "ನಮಗೆ ಈ ಸ್ಥಾನ ದೊರೆಯಿತು. ಎಷ್ಟೋ ಜಮೀನು ಸಂಪಾದನೆ ಮಾಡಿದ್ದಾಯಿತು. ಇದೆಲ್ಲ ನನ್ನದು ಮಾತ್ರವಲ್ಲ, ನಿನ್ನದು ಕೂಡ. ನನಗಿಂತ ಮೊದಲೇ ಕೆಲಸಕ್ಕೆ ಸೇರಿದವರು, ನನಗಿಂತ ಹಣವಂತರಾಗಿದ್ದವರು, ಬುದ್ಧಿವಂತರಾಗಿದ್ದವರು ಎಷ್ಟೋ ಜನರು ಧಾರಾಳವಾಗಿದ್ದಾರೆ. ಅವರಿನ್ನೂ ನೂರೈವತ್ತು ರೂಪಾಯಿ ಸಂಬಳದಲ್ಲಿದ್ದಾರೆ. ಇದೆಲ್ಲ ಬಂದು ಕೂಡಿದ್ದು. ನಾನು ನಿನ್ನ ವಿಚಾರದಲ್ಲಿ ತಪ್ಪು ಮಾಡಿದೆ. ಅದು ಮಾಡಿದ್ದೂ ಅಭಿವೃದ್ಧಿಗೋಸ್ಕರವಾಗಿ ಹೊರತು ಬೇರೆಯಲ್ಲ. ನನ್ನ ಚಿನ್ನಾ. ನನ್ನನ್ನು ಕ್ಷಮಿಸೋದಿಲ್ಲವಾ?"

ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ಮುಖದ ಮೇಲೆ ಚುಂಬನದ ಮಳೆಗರೆದರು. ಅವಳು ಆಗಲೂ ಅತ್ತಿತ್ತ ಅಲುಗಾಡದೆ ಮಲಗಿದ್ದಳು. ಅದು ಅವಳಿಗೆ ಗೊತ್ತಾಗಲೇ

ಇಲ್ಲ. ಪುನಃ ಕೇಶವ ಪಿಳ್ಳೆ ಕೇಳಿದರು:

"ನನ್ನನ್ನು ಕ್ಷಮಿಂಸೋದಿಲ್ಲವಾ?"

ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯ ಮುಖವನ್ನು ಸೂಕ್ಷ್ಮವಾಗಿ ನೋಡುತ್ತ ಕೇಳಿದಳು: "ಅವಳ ಜೊತೆಯಲ್ಲಿ ಸುಖವಾಗಿರಬೇಕು ಅಂತ ಅಲ್ಲವಾ ನನ್ನನ್ನ ತಿರುವನಂತಪುರಕ್ಕೆ ಕರೆದುಕೊಂಡು ಬರದೇ ಇದ್ದದ್ದು?"

ಒಂದು ಹೊಸ ವಿಚಾರ ಹೇಳಬೇಕಾದದ್ದಿತ್ತು. ಅದನ್ನು ಖಂಡಿತವಾಗಿಯೂ ಕಾತ್ಯಾಯಿನಿಯಮ್ಮನ ಹತ್ತಿರ ಹೇಳಲೇಬೇಕಾಗಿತ್ತು. ಕಾತ್ಯಾಯಿನಿಗೆ ಅದು ತಿಳಿದಿರಲೇ ಬೇಕಾದದ್ದು. ಕೇಶವ ಪಿಳ್ಳೆ ಹೇಳಿದರು: "ಅಲ್ಲ, ಅದು ನಿನ್ನ ತಪ್ಪು ತಿಳುವಳಿಕೆ. ನಿನಗೇನೂ ಗೊತ್ತಿಲ್ಲ. ನಿನಗೆ ಅಥೊಂದೂ ತಿಳಿಯದು. ಅಭ್ಯುದಯಕ್ಕೋಸ್ಕರ ಆ ನಾಟಕ ಆಡುತ್ತ ನಾನು ನಿನ್ನನ್ನು ಉದ್ದೇಶಪಟ್ಟು ಇಲ್ಲಿಗೆ ಕರೆತರಲಿಲ್ಲ. ಈಗ ನಾವು ಮಲಗಿರುವ ಕೋಣೆ ಉಂಟಲ್ಲ, ಈ ಮಲಗುವ ಕೋಣೆಗೆ ನಾಲಗೆ ಇದ್ದಿದ್ದರೆ ಏನೆಲ್ಲ ಕಥೆ ಹೇಳ್ತಿತ್ತು ಅಂತ ನಿನಗೆ ಗೊತ್ತಾ? ಅದು ನಿನಗೆ ತಿಳಿಯದು."

ಒಂದು ದೊಡ್ಡ ಸಂಗತಿಯನ್ನು ಹೇಳಲು ಕೇಶವ ಪಿಳ್ಳೆ ತೊಡಗುತ್ತಿದ್ದರು. ಸ್ವಲ್ಪ ಅಪನಂಬಿಕೆಯಿಂದಲೇ ಕಾತ್ಯಾಯಿನಿಯಮ್ಮ ಕೇಳಿದಳು:

"ಹ್ಞು! ಏನು?"

"ಇಲ್ಲಿಗೆ ನಾನು ಚೀಫ್ ಸೆಕ್ರಟರಿಯ ಪರ್ಸನಲ್ ಕ್ಲಾರ್ಕಾಗಿ ಬಂದಾಗ, ಏನೇನೋ ನೋಡಬೇಕಾಯ್ತು. ದಿವಾನರಿಗೊಬ್ಬರು ಪ್ರೈವೇಟ್ ಸೆಕ್ರಟರಿ ಇದ್ದರು. ಈಗ ಆ ಮನುಷ್ಯ ಇಲ್ಲ. ಆತ ಇಲ್ಲಿಗೆ ಪ್ರತಿ ದಿನ ಹಗಲು ಹೊತ್ತಿನಲ್ಲಿ ಬರ್ತಿದ್ದ. ಆ ಮೇಲೆ— ಓ! ಅದನ್ನೆಲ್ಲ ನಾನು ನೋಡಿದೆ. ನಾನು ಹೆದರಿಹೋದೆ."

ಕೇಶವ ಪಿಳ್ಳೆ ಭಗವತಿಕುಟ್ಟಿಯಮ್ಮನ ಬದುಕನ್ನು ವಿವರಿಸಿದರು. ಕೃಷ್ಣನ್ ನಾಯರ್ ಅಧಿಕಾರದಲ್ಲಿ ಮೇಲೆ ಬಂದದ್ದು ಭಗವತಿ ಕುಟ್ಟಿಯಮ್ಮನ ಕಾರಣದಿಂದ. ಅದೇ ರೀತಿ ಎಷ್ಟೋ ಅಧಿಕಾರಿಗಳ ಕಥೆಗಳನ್ನು ಕೇಶವ ಪಿಳ್ಳೆ ವಿವರಿಸಿದರು.

"ನಾನು ಮನಸ್ಸು ಬಿಚ್ಚಿ ಹೇಳಲಾ? ನಾನು ಆ ಕಾಲದಲ್ಲಿ ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬರದೇ ಹೋದದ್ದು ಹೆದರಿಕೊಂಡು. ನನ್ನ ಹೆಂಡತಿ ಶುದ್ಧಚಾರಿತ್ರ್ಯ ವುಳ್ಳವಳಾಗಿರಬೇಕೆನ್ನುವುದು ನನಗೆ ಮುಖ್ಯವಾಗಿತ್ತು. ನಾನು ಆ ನಾಟಕ ಆಡುತ್ತಿದ್ದ ಹೊತ್ತಿನಲ್ಲಿ ನೀನಿಲ್ಲಿದ್ದಿದ್ದರೆ ನೀನೂ ಕೈತಪ್ಪಿ ಹೋಗುತ್ತಿದ್ದೆ. ಇಲ್ಲಿ ಉದ್ಯೋಗಾಭ್ಯು ದಯ ಹೆಂಡತಿಯ ಮೂಲದಿಂದ. ಕೆಳನೌಕರನ ಹೆಂಡತಿ ಮೇಲಿನ ಅಧಿಕಾರಿಯ ಕಣ್ಣಿಗೆ ಬಿದ್ದರೆ ಮತ್ತೆ ಮೇಲೇರಿದ್ದೇ. ಎಲ್ಲರ ಜೀವನವೂ ಒಮ್ಮೆ ಹಸನಾದರೆ ಸಾಕು. ಆ ಮೇಲೆ ಹೆಂಡತಿಯ ದೊಡ್ಡಸ್ತಿಕೆ ನೋಡಬಹುದು."

ಆ ಕಥಾ ವಿವರಣೆಗಳು ಕಾತ್ಯಾಯಿನಿಯಮ್ಮನನ್ನು ಸ್ವಲ್ಪ ಭಯಗೊಳಿಸಿದುವು.

ಅವಳು ಕೇಳಿದಳು: "ಮತ್ತೆ ಯಾಕೆ ನನ್ನನ್ನು ಈ ಹಾಳು ಸ್ಥಳಕ್ಕೆ ಎಳೆದುಕೊಂಡು ಬಂದಿರಿ?"

ನಗುತ್ತಾ ಕೇಶವ ಪಿಳ್ಳೆ ಹೇಳಿದರು:

"ಓ! ನೀನು ಹೆದರಿಕೊಳ್ಳಬೇಡ. ಇಲ್ಲಿಗೆ ಬಂದು ನಿನಗೆ ಯಾರೂ ತೊಂದರೆ ಕೊಡೋದಿಲ್ಲ. ನನ್ನ ಅಂದಿನ ಸ್ಥಿತಿ ಬದಲಾಯಿಸಿ ಆಯ್ತು. ಆ ಒಡನಾಟವೂ ಹೋಯ್ತು. ಗಂಡನಿಗೆ ಮೇಲಿನ ಉದ್ಯೋಗ ಸಿಕ್ಕಲಿ ಅಂತ, ಯಜಮಾನಮ್ಮ ಆಗಬೇಕು ಅಂತ ನಿನಗನ್ನಿಸಲಿಲ್ಲವಲ್ಲ . . ಅನ್ನಿಸುತ್ತಾ?"

"ಅಯ್ಯೋ ದೇವರೇ, ನನಗೇನೂ ಬೇಡ. ಊರಿನಲ್ಲಿ ಅಡುಗೆಮನೆ ಮೂಲೆಯಲ್ಲಿ ಗಂಜಿ, ಸಾರು ಮಾಡಿಕೊಂಡು ಆ ಕತ್ತಲೆ ಮನೆಯಲ್ಲಿ ಕಳೆದರೆ ಸಾಕು. ಇಲ್ಲಿಗೆ ಬಂದ ಮೇಲೆ ನನಗೆ ನಿದ್ದೆಯೇ ಬರೋದಿಲ್ಲ. ನನ್ನನ್ನ ಊರಿಗೆ ಕರೆದುಕೊಂಡು ಹೋಗಿ ಬಿಟ್ಟುಬಿಡಿ ಸಾಕು. ನಾನು ಯಜಮಾನಮ್ಮ ಆಗೋದೂ ಬೇಡ. ಈ ದೊಡ್ಡ ಮನೆಯಲ್ಲಿ ಕಾಲಕಳೆಯೋದೂ ಬೇಡ. ಪೋಲೀಸಿನವನು ಬಾಗಿಲಿನಲ್ಲಿ ನಿಂತುಕೊಳ್ಳೋದೂ ನನಗೆ ಬೇಡ."

ಕಾತ್ಯಾಯಿನಿಯಮ್ಮನನ್ನು ಕಚಗುಳಿಯಾಡಿಸುತ್ತ ಕೇಶವ ಪಿಳ್ಳೆ ಕೇಳಿದರು: "ಕುಟ್ಟನಾಡಿನಲ್ಲಿ ಒಬ್ಬ ವ್ಯವಸಾಯಗಾರನ ಹೆಂಡತಿಯಾಗಿದ್ದರೆ ಒಳ್ಳೇದಿತ್ತು ಅಲ್ಲಾ?"

ಕಾತ್ಯಾಯಿನಿಯಮ್ಮ ತೆರೆದ ಮನಸ್ಸಿನಿಂದ ಹೇಳಿದಳು: "ನನಗೆ ಕುಟ್ಟನಾಡಿನ ಯಾವ ದೊಡ್ಡ ವ್ಯವಸಾಯಗಾರನ ಹೆಂಡತಿಯಾಗಿರಬೇಕಾಗಿತ್ತು ಅಂತಲೂ ಅನ್ನಿಸೋದಿಲ್ಲ. ನನಗೆ ನನ್ನ ಮಗುವಿನ ತಂದೆ ಕುಟ್ಟನಾಡಿನಲ್ಲಿ ವ್ಯವಸಾಯ ಮಾಡಿಕೊಂಡಿದ್ದರೆ ಸಾಕಾಗಿತ್ತು."

ಕೇಶವ ಪಿಳ್ಳೆ ಕೇಳಿದರು: "ಚೀಫ್ ಸೆಕ್ರೆಟರಿಯ ಹೆಂಡತಿಯಾಗಿರಬಾರದು ಅಂತಲಾ?"

"ಹೀಗೆಲ್ಲ ಆಗಬೇಕಾಗಿರಲಿಲ್ಲ. ನನಗೆ ಆ ಉದ್ಯೋಗಸ್ಥನ ಹೆಂಡತಿಯಾಗಿರುವುದು ತಿಳಿಯದು. ನೀವು ಹೇಳಿದ ಉದ್ಯೋಗಸ್ಥನ ಹೆಂಡತಿಯಾಗಿರೋದಕ್ಕೂ ನನಗೆ ತಿಳಿಯದು."

ಒಂದು ನಿಮಿಷ ಬಿಟ್ಟು ಕಾತ್ಯಾಯಿನಿಯಮ್ಮ ಕೇಳಿದಳು: "ಇನ್ನು ಮೇಲೂ ಅಲ್ಲಿಗೆ ಹೋಗೋದಿಲ್ಲ ಅಂತ ಏನು ನಂಬಿಕೆ?"

"ಇಲ್ಲ ಚಿನ್ನ; ಇಲ್ಲ."

ಕಾತ್ಯಾಯಿನಿಯಮ್ಮ ಗಟ್ಟಿಯಾಗಿ ಅತ್ತುಬಿಟ್ಟಳು. ಆ ಸ್ತ್ರೀ ಅಷ್ಟು ಹೊತ್ತು ತಡೆದಿಟ್ಟಿದ್ದ ಅಳು ಅದು.

ಕೇಶವ ಪಿಳ್ಳೆ ಏನೇನನ್ನೋ ಹೇಳಿ ಸಮಾಧಾನಪಡಿಸುತ್ತಿದ್ದರು. ಗಾಬರಿಯಿಂದ ಅವರು ಹೇಳಿದರು: "ನಾನೆಲ್ಲವನ್ನೂ ಮನಸ್ಸು ಬಿಚ್ಚಿ ಹೇಳಿದ್ದೇ ಆಪತ್ತಾಯ್ತು."

# [25]

## ಬಿರುಗಾಳಿಯ ದಿನಗಳು

ಮಾರನೆಯ ದಿನ ಬೆಳಗ್ಗೆ ಕೇಶವ ಪಿಳ್ಳೆ ಮೊದಲು ಮಾಡಿದ ಕೆಲಸ ಎಂದರೆ ತಂಗಮ್ಮನ ರಾಜೀನಾಮೆಯ ಪತ್ರವನ್ನು ತೆಗೆದುಕೊಂಡು ಕೆಲಸ ಬಿಟ್ಟು ಹೋಗುವುದಕ್ಕೆ ಅನುಮತಿ ನೀಡಿದ್ದು. ಆ ಆರ್ಡರಿಗೆ ಸಹಿ ಹಾಕುವಾಗ ಅವರ ಕೈ ನಡುಗಲಿಲ್ಲ. ಅದು ಯಾವುದೇ ರೀತಿಯಲ್ಲೂ ಮನಸ್ಸನ್ನು ಬಾಧಿಸಲಿಲ್ಲ. ಸಾಧಾರಣವಾಗಿ ಸಹಿ ಹಾಕುವಂತೆಯೇ ಅದಕ್ಕೂ ಸಹಿ ಹಾಕಿದ್ದು. ಕೇಶವ ಪಿಳ್ಳೆ ಚೀಫ್ ಸೆಕ್ರೆಟರಿಯಾದ ನಂತರ ಮಾಡಿದ ಮೊದಲ ಔದ್ಯೋಗಿಕ ಕೆಲಸ ಅದು. ಕಾಟ ಕೊಡುತ್ತಿದ್ದ ಯಾವುದೋ ಒಂದು ಗ್ರಹಚಾರ ದೂರ ಹೋಯಿತು ಎನ್ನುವ ಸಮಾಧಾನ ಬಂದಂತೆ ಅವರಿಗೆ ತೋರಿತು.

ಅದೇ ದಿನ ಒಬ್ಬಳು ಸೂಪರಿಂಟೆಂಡೆಂಟ್, ಮತ್ತೊಬ್ಬಳು ಆಫೀಸ್ ಮ್ಯಾನೇಜರ್ ಆಗಿದ್ದ ಇಬ್ಬರು ಸ್ತ್ರೀಯರ ರಾಜೀನಾಮೆ ಪತ್ರವನ್ನೂ ಕೇಶವ ಪಿಳ್ಳೆ ಸ್ವೀಕರಿಸಬೇಕಾಗಿತ್ತು. ಅವರೆಲ್ಲರೂ ಸನ್ಯಾಸಿನಿಯರಾಗುವುದಕ್ಕೆ ಹೋಗುವವರಾಗಿರಬೇಕು.

ವಿಷಯವನ್ನೆಲ್ಲ ಕೇಳಿ ಭಾಗೀರಥಿಯಮ್ಮ ತುಂಬ ಅತ್ತಳು. ಹೇಗೆ ಆ ಮುದುಕಿಯನ್ನು ಸಮಾಧಾನಗೊಳಿಸುವುದು ಎನ್ನುವುದು ಕಾತ್ಯಾಯಿನಿಯಮ್ಮನಿಗೆ ತಿಳಿಯದಾಗಿತ್ತು. ಕೇಶವ ಪಿಳ್ಳೆ ತಮಾಷೆಗಾಗಿ ಕೇಳಿದರು: "ಯಾಕೆ ದೊಡ್ಡಮ್ಮನ್ನ ಹಿಡಿದು ಕಟ್ಟಿ ಹಾಕಿದ್ದೀಯಲ್ಲ. ಕಷ್ಟವಾಗೋದಿಲ್ಲವಾ?"

ಸರಿಯಾದ ಉತ್ತರವನ್ನೇ ಕಾತ್ಯಾಯಿನಿಯಮ್ಮ ಕೊಟ್ಟದ್ದು: "ಅತ್ತೆಯ ಜೊತೆಯಲ್ಲಿ ವಾಸ ಮಾಡಬೇಕು ಅಂತ ಅಲ್ಲವಾ ಮನಸ್ಸು ಆಶೆಪಡೋದು. ಅದನ್ನು ಮರೆಯುವುದಕ್ಕಾಗಿ ಕೇಳೋದಲ್ಲವಾ?"

ಕೇಶವ ಪಿಳ್ಳೆ ಅಸಹಾಯಕರಾಗಿ ಹೇಳಿದರು:

"ನೀನು ಏನು ಬೇಕಾದರೂ ಹೇಳಿಕೊ, ನಾನು ಕೇಳಿಸಿಕೊಳ್ತೀನಿ, ಸಹಿಸಿಕೊಳ್ತೀನಿ."

ಆ ರೀತಿಯ ಮಾತುಕಥೆ ಅಲ್ಲಿ ಆಗಾಗ ಉಂಟಾಗುವುದುಂಟು. ಕೇಶವ ಪಿಳ್ಳೆ ಎಲ್ಲವನ್ನೂ ಒಪ್ಪಿಕೊಳ್ಳುತ್ತಿದ್ದರು. ಆದರೆ ಅದು ಸಂತೋಷವಿದ್ದ ಒಂದು ಮನೆಯಾಗಿತ್ತು. ತಂದೆ, ತಾಯಿ, ಮಗಳು ಒಂದೇ ಕಡೆ ಇದ್ದ ಉತ್ಸಾಹವುಳ್ಳ ಮನೆ. ಸ್ವಲ್ಪ ದೂರದಲ್ಲಿ ನಿಂತು ಆ ಹೃದ್ಯವಾದ ದೃಶ್ಯಗಳನ್ನು ಭಾಗೀರಥಿಯಮ್ಮ ಕಾಣುತ್ತಿದ್ದಳು. ಅಲ್ಲಿಗೆ ಪ್ರವೇಶಿಸಲು ಅವಳಿಗೆ ಅವಕಾಶವಿತ್ತೇ? ಅವಳು ಪ್ರವೇಶಿಸುವಂತಿಲ್ಲ. ಆ ಮನೆಯಲ್ಲಿ ಹಾಗೆ ಬಾಳಬೇಕಾಗಿದ್ದದ್ದು ತಂಗಮ್ಮನಲ್ಲವೇ ಎಂದು ಆಕೆಗೆ ತೋರಿರಲಾರದು. ಎಲ್ಲವನ್ನೂ ಅವಳು ಕೈಯಾರೆ ಹಾಳುಮಾಡಿಕೊಂಡಳು ಎಂದುಕೊಳ್ಳುತ್ತಾಳೆ.

ಆ ಮಧ್ಯೆ ಒಂದು ರಹಸ್ಯವಾದ ಕಾನ್‌ಫರೆನ್ಸ್ 'ಭಕ್ತಿವಿಲಾಸ'ದಲ್ಲಿ ನಡೆಯಿತು. ಭಾರತ ಸ್ವತಂತ್ರವಾಗಲು ಹೆಚ್ಚು ದಿನಗಳಿರಲಿಲ್ಲ. ಸ್ವತಂತ್ರ ತಿರುವಾಂಕೂರಿಗೆ ಸಂಬಂಧಿಸಿದಂತೆ ಕೊನೆಯ ಹೋರಾಟವನ್ನು ನಡೆಸುವುದಾಗಿತ್ತು ಅದು. ಹೈದರಾಬಾದು ಮೈಸೂರು ಮುಂತಾದ ರಾಜ್ಯಗಳ ಸರ್ಕಾರಗಳೂ ರಹಸ್ಯವಾಗಿ ಈ ಸಂಪರ್ಕದಲ್ಲಿದ್ದುವು. ಹಾಗೆ ತುದಿಗೈಗೆ ಬಂದಿದ್ದ ಕಾರ್ಯಕ್ರಮ ಕಾನ್‌ಫರೆನ್ಸ್‌ನಲ್ಲಿ ಆಕಾರ ತಾಳಿತು.

ಉಳಿದ ರಾಜ್ಯಗಳೊಂದಿಗೂ ಸರ್ಕಾರ ಸ್ವತಂತ್ರ ತಿರುವಾಂಕೂರಿನ ಅಸ್ತಿತ್ವದ ಬಗ್ಗೆ ಆಲೋಚನೆ ನಡೆಸಿತ್ತು. ಹೊಸದಾಗಿ ರೂಪುಗೊಳ್ಳಲಿದ್ದ ಪಾಕಿಸ್ತಾನದೊಂದಿಗೆ ವಾಣಿಜ್ಯ ಸಂಪರ್ಕಗಳನ್ನಿಟ್ಟುಕೊಳ್ಳಬೇಕೆಂದೂ ಸ್ವತಂತ್ರ ತಿರುವಾಂಕೂರಿನ ಆರ್ಥಿಕ ಸಂಪತ್ತನ್ನು ಅಭಿವೃದ್ಧಿಗೊಳಿಸಿಕೊಳ್ಳಬೇಕೆಂದೂ ತೀರ್ಮಾನಿಸಿತು. ಭಾರತದ ರಾಜ್ಯಗಳ ವಿಚಾರವಾಗಿ ಯಾವ ವ್ಯವಸ್ಥೆಯನ್ನೂ ಮಾಡದೆ ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವುದಾಗಿ ತೀರ್ಮಾನಿಸಿದ್ದರು. ರಾಜ್ಯವಿಡೀ ಸಡಗರಗೊಂಡಿತು. ಆಗಸ್ಟ್ ಹದಿನೈದರಂದು ಭಾರತದಿಂದ ಬೇರ್ಪಟ್ಟು ಒಂದು ರಾಜ್ಯವಾಗಿ ತಿರುವಾಂಕೂರು ಉದಯಿಸುವುದಾದಲ್ಲಿ ಅದನ್ನು ನಾಡಿನ ಜನತೆಗೆ ಊಹಿಸಲೂ ಸಾಧ್ಯವಿರಲಿಲ್ಲ.

ಅಂದು ರೇಷನ್ ವ್ಯಾಪಾರಿಗಳೂ ಕಂಟ್ರಾಕ್ಟರರೂ, "ಸ್ವತಂತ್ರ ತಿರುವಾಂಕೂರ್ ಕೀ ಜೈ" ಎಂದು ಕೂಗುತ್ತ ನಡೆಯುತ್ತಿದ್ದರು. ಅವರ ಕೈಯಲ್ಲಿ ಒಂದು ಬಾವುಟವೂ ಇತ್ತು. ಅವರ ನೇತೃತ್ವವನ್ನು ವಹಿಸಿದ್ದವರು ಪೋಲೀಸಿನಲ್ಲಿಯೂ ರಾಜಕೀಯ ಜೀವನದಲ್ಲಿಯೂ ಕೊಳೆತುಹೋದ ಎಷ್ಟೋ ಮಂದಿ ಮುಂದಾಳುಗಳಾಗಿದ್ದರು.

ಸಂಸ್ಥಾನದ ವಿದ್ಯಾಸಂಸ್ಥೆಗಳು ಮುಚ್ಚಿದುವು. ರಾಜ್ಯವಿಡೀ ವಿದ್ಯಾರ್ಥಿಗಳು ಸ್ವತಂತ್ರ ತಿರುವಾಂಕೂರಿಗೆದುರಾಗಿ ಘೋಷಣೆಗಳನ್ನು ಮಾಡಿದರು. ಪೋಲೀಸಿನವರು ಏರ್ಪಡಿಸಿದ್ದ ಗೂಂಡಗಳು ಮನಃಪೂರ್ವಕವಾಗಿ ಗೊಂದಲವನ್ನೆಬ್ಬಿಸುವುದಕ್ಕಾಗಿ ಶ್ರಮಿಸಿದರು. ಆಗಲೂ ಸರ್ಕಾರದ ಪಕ್ಷದಲ್ಲಿ ಜವಾಬ್ದಾರಿ ಚೀಫ್ ಸೆಕ್ರೆಟರಿಯದಾಗಿತ್ತು. ಎಷ್ಟೆಷ್ಟೋ ಹೋರಾಟಗಳನ್ನು ಎದುರಿಸಿ ಪಟ್ಟುಗಟ್ಟಿದ್ದ ಒಬ್ಬ ಉದ್ಯೋಗಸ್ಥನಲ್ಲವೇ ಕೇಶವ ಪಿಳ್ಳೆ! ಆ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲು ಕೇಶವ ಪಿಳ್ಳೆಗೆ ಸಾಧ್ಯವಿಲ್ಲ. ಆ ಹೊತ್ತಿಗೆ ಕೇಶವ ಪಿಳ್ಳೆ ಆಲೋಚನೆಯಲ್ಲಿ ಮುಳುಗಿದ್ದರು.

ಪಾರ್ಕ್ ವ್ಯೂವಿನ ಮೇಲುಭಾಗದ ಕಿಟಿಕಿಗಳ ಮೂಲಕ ಮ್ಯೂಸಿಯಂ ರೋಡಿನಲ್ಲಿ ಸಾಗುತ್ತಿದ್ದ ತುದಿಮೊದಲಿಲ್ಲದ ಘೋಷಣೆ ಮತ್ತು ಮೆರವಣಿಗೆಯನ್ನು ಕಾತ್ಯಾಯಿನಿಯಮ್ಮ ನೋಡುತ್ತ ನಿಂತಿದ್ದಳು. ಹೊರಗಡೆ ವಿಶಾಲವಾದ ಜಗತ್ತಿನಲ್ಲಿ ಯಾವುದೋ ಗಂಭೀರವಾದ ಘಟನೆಗಳು ನಡೆಯುತ್ತಿವೆ ಎಂದು ಅವಳಿಗೆ ತೋರಿತು. ಹಿಂದೆ ಊರಿನಲ್ಲಿದ್ದಾಗ ಕಾಂಗ್ರೆಸ್ ಜನರು ಘೋಷಣೆ ಮಾಡಿಕೊಂಡು ಹೋಗುತ್ತಿದ್ದುದನ್ನು ಕೇಳಿದ್ದಳು. ಈಗಲೂ ಕಾಂಗ್ರೆಸ್ ಘೋಷಣೆ ಮಾಡುತ್ತ ಹೋಗುತ್ತಿದೆ. ಸಂಶಯವಿಲ್ಲ. ಒಂದು ದಿನ ಗಟ್ಟಿಯಾಗಿ ಘೋಷಣೆ ಮಾಡಿಕೊಂಡು ಹೋಗುತ್ತಿದ್ದುದು ಕಾತ್ಯಾಯಿನಿಯಮ್ಮ

ನಿಗೆ ಕೇಳಿಸಿತು: "ಚೀಫ್ ಸೆಕ್ರೆಟರಿ ಕೇಶವ ಪಿಳ್ಳೆಯನ್ನು ಗಲ್ಲಿಗೇರಿಸಬೇಕು."

ಸಣ್ಣ ಸಣ್ಣ ಹುಡುಗರು ಹಾಗೆ ಕೂಗಿಕೊಂಡು ಹೋಗುತ್ತಿದ್ದದ್ದು. ಸಾವಿರ ಸಾವಿರ ಕೊರಳುಗಳು ಒಟ್ಟಿಗೆ ಕೂಗುತ್ತಿದ್ದುವು. ಆ ಬಂಗಲೆಯ ಹತ್ತಿರ ಬಂದಾಗ ಆ ಕೂಗು ಮತ್ತೂ ಹೆಚ್ಚಿತು.

ಕಾತ್ಯಾಯಿನಿಯಮ್ಮ ಕೇಳಿಸಿಕೊಳ್ಳಲಿ ಎಂದಾಗಿರಬೇಕು, "ಚೀಫ್ ಸೆಕ್ರೆಟರಿ ಕೇಶವ ಪಿಳ್ಳೆಯನ್ನು ಗಲ್ಲಿಗೇರಿಸಬೇಕು" ಎಂದು ಗಟ್ಟಿಯಾಗಿ ಕೂಗುತ್ತಿದ್ದದ್ದು.

ಅವರಿಗೆಲ್ಲ ಕೇಶವ ಪಿಳ್ಳೆ ಏನು ಮಾಡಿದರು? ಕಾತ್ಯಾಯಿನಿಗೆ ತುಂಬ ಹೆದರಿಕೆ ಯುಂಟಾಯಿತು. ಹೋಗುವುದು ಕಾರಿನಲ್ಲೇ ಆದರೂ ದಾರಿಯಲ್ಲಿ ಅಪಾಯವನ್ನುಂಟು ಮಾಡಿದರೊ? ಮಾವನನ್ನು ಕೊಂದ ಮನುಷ್ಯ ಇದುವರೆಗೆ ಕೈಗೆ ಸಿಕ್ಕಿಲ್ಲ. ಈ ಗುಂಪಿ ನಲ್ಲಿ ಅವನು ಇಲ್ಲ ಅಂತ ಹೇಗೆ ಹೇಳುವುದು? ಇರಲೂಬಹುದು. ಅವನು ಸಮಯ ಕಾಯುತ್ತ ಇರಬಹುದು. ಈ ಮನೆಯಲ್ಲಿ ತಾನೆ ಯಾವ ಸಂರಕ್ಷಣೆಯಿದೆ?

ವಿಜಯಮ್ಮ ಆ ದಿನ ಎಂದಿಗಿಂತ ಮೊದಲೇ ಸ್ಕೂಲಿನಿಂದ ಮನೆಗೆ ಬಂದಳು. ಅವಳು ಒಂದು ದೊಡ್ಡ ಸುದ್ದಿಯನ್ನು ತಂದಿದ್ದಳು. "ಕಾಲೇಜಿನಲ್ಲಿ ಓದುತ್ತಿರುವವ ನೊಬ್ಬ ಸ್ಕೂಲಿಗೆ ಬಂದು ಎಲ್ಲ ವಿದ್ಯಾರ್ಥಿಗಳನ್ನು ಹೊರಗೆ ಕರೆದ. ಫುಟ್‌ಬಾಲ್ ಗ್ರೌಂಡಿನಲ್ಲಿ ಒಂದು ಸಭೆ ಸೇರಿತು. ಅವನು ಒಂದು ಗಂಟೆ ಮಾತನಾಡಿದ ಕಣಮ್ಮ ಎಂಥ ಭಾಷಣ ಅಂತೀ! ಎಲ್ಲರೂ ಮೆಚ್ಚಿಕೊಂಡರು. ಆ ಮೇಲೆ ಎಲ್ಲರೂ ಜಾಥಾ ಹೊರಟರು."

ಕಾತ್ಯಾಯಿನಿಯಮ್ಮ ಕೇಳಿದಳು: "ನೀನೂ ಹೋಗಿದ್ದೆಯಾ?"

ವಿಜಯಮ್ಮ ಹೇಳಿದಳು: "ರಾಧೆ, ತ್ರೇಸ್ಯ, ನಾನು—ಎಲ್ಲರೂ ಮೆರವಣಿಗೆಯಲ್ಲಿ ಭಾಗವಹಿಸಿದೆವು. ಎಲ್ಲರೂ ಭಾಗವಹಿಸುವಾಗ ನಾನು ಹೇಗೆ ಸುಮ್ಮನಿರಲಿ? ಆ ತ್ರೇಸ್ಯ ನನ್ನನ್ನು ಹಿಡಿದು ಎಳೆದುಕೊಂಡು ಹೋದಳು ಕಣಮ್ಮ."

ಅಮ್ಮ ಗಾಬರಿಯಿಂದ ಕೇಳಿದಳು: "ಅವರು ಕೂಗಿಕೊಂಡು ಹೋದದ್ದನ್ನ ನೀನು ಕೇಳಿಸಿಕೊಂಡೆಯಾ?"

ವಿಜಯಮ್ಮನಿಗೆ ಅದು ಅರ್ಥವಾಯಿತು.

"ನಾನು ಹಾಗೆ ಕೂಗಲಿಲ್ಲ. ತ್ರೇಸ್ಯ ನನ್ನನ್ನು ಒತ್ತಾಯ ಮಾಡಿದಳು. ಹಾಗೆ ಹೇಳು ಅಂತ. ನಾನು ಹೇಳಲಿಲ್ಲ."

"ಎಂಥಾದ್ದೇ ಅದು ತ್ರೇಸ್ಯ?"

"ಸೆಕ್ರೆಟರಿ ಫಿಲಿಪ್ಸ್ ಅವರ ಮಗಳು" ಎಂದು ಹೇಳಿ ವಿಜಯಮ್ಮ ಬಳಿಕ ಕೇಳಿದಳು: "ತಂದೆ ಯಾಕೆ ಹೀಗೆಲ್ಲ ಮಾಡ್ತಾರೆ, ನೀನು ಕೇಳಬೇಕು ಕಣಮ್ಮ."

"ತಂದೆ ಏನು ಮಾಡಿದರು?"

"ನಮ್ಮ ದೇಶಕ್ಕೆ ಕೇಡುಂಟುಮಾಡೋ ಕೆಲಸದಲ್ಲಿ ತಂದೆ ಕೈಹಾಕಿದ್ದಾರೆ. ಅವನು

ಅದನ್ನೆಲ್ಲ ಭಾಷಣದಲ್ಲಿ ಸರಿಯಾಗಿ ಹೇಳಿದ. ಭಾಷಣ ಕೇಳಿದ ಮೇಲೆ ನನಗೂ ತಂದೆ ಮಾಡ್ತಿರೋದು ತಪ್ಪು ಅನ್ನಿಸಿತು."

ಕಾತ್ಯಾಯಿನಿಯಮ್ಮ ಮಗಳ ಬಾಯಿಯನ್ನು ಮುಚ್ಚಿ ಹಿಡಿದು ಕೊಂಡಳು. "ಮಗಳೇ, ಹಾಗೆಲ್ಲ ಅನ್ನಬಾರದು. ಅದು ಅಮಂಗಳ. ಕೆಟ್ಟದ್ದನ್ನ ಹಾರೈಸಬಾರದು. ತಂದೆ ಮೇಲೆ ತಪ್ಪುಹೊರಿಸಬಾರದು."

ವಿಜಯಮ್ಮ ಸುಮ್ಮನಾಗಲಿಲ್ಲ. ಅವಳು ಹೇಳಿದಳು: "ಅಮ್ಮನೂ ಸ್ವತಂತ್ರ ತಿರುವಾಂಕೂರು ಬೇಕು ಅಂತಲಾ ಹೇಳೋದು?"

ಕಾತ್ಯಾಯಿನಿಯಮ್ಮನಿಗೆ ತನ್ನ ಅಜ್ಞಾನವನ್ನು ಒಪ್ಪಿಕೊಳ್ಳುವುದಕ್ಕೆ ಯಾವ ಸಂಕೋಚವೂ ಇರಲಿಲ್ಲ.

"ನನಗೆ ಅದೊಂದೂ ಗೊತ್ತಿಲ್ಲ ಮಗಳೇ! ಆದರೆ ಮಗಳು ತಂದೆ ಮೇಲೆ ತಪ್ಪು ಹೊರಿಸಬಾರದು. ಅದು ಸರಿಯಲ್ಲ."

ವಿಜಯಮ್ಮ ಮಾತಾಡಲಿಲ್ಲ. ಅಮ್ಮ ಹೇಳಿದಳು:

"ಇವರು ಹೇಳ್ತಿರೋದು ತಂದೇನ ಗಲ್ಲಿಗೇರಿಸಬೇಕು ಅಂತ. ಅಂಥವರ ಜೊತೆಯಲ್ಲಿ ನೀನು ಹೋಗೋದು ಸರಿಯಾ?"

ವಿಜಯಮ್ಮ ಹೇಳಿದಳು: "ಆ ತ್ರೇಸ್ಯಳಿಂದಾಗಿ ಕಣಮ್ಮ ನಾನು ಮೆರವಣಿಗೇಲಿ ಸೇರಿದ್ದು. ಇಲ್ಲದೆ ಇದ್ದರೆ ನಾನು ಅದರಲ್ಲಿ ಸೇರ್ತಿರಲಿಲ್ಲ. ಆ ರೀತಿ ಘೋಷಣೆ ಪ್ರಾರಂಭಿಸಿದ ಮೇಲೆ ನಾನು ಮನೆಗೆ ಬಂದೆ."

ವಿಜಯಮ್ಮನಿಗೆ ಎಷ್ಟೋ ವಿಷಯಗಳನ್ನು ಕೇಳಿ ತಿಳಿದುಕೊಳ್ಳುವುದಕ್ಕೂ ಹೇಳುವುದಕ್ಕೂ ಇತ್ತು. ಅವಳೀಗ ಹೈಸ್ಕೂಲಿನಲ್ಲಿ ಓದುತ್ತಿರುವ ಒಬ್ಬ ವಿದ್ಯಾರ್ಥಿನಿ. ಹಳ್ಳಿಯಲ್ಲಿ ಓದುತ್ತಿದ್ದ ಹೈಸ್ಕೂಲನ್ನು ಬಿಟ್ಟು ತಾಯಿಯ ಜೊತೆಯಲ್ಲಿ ಬಂದ ಮೇಲೆ ತಿರುವನಂತಪುರದ ಹೈಸ್ಕೂಲನ್ನು ಸೇರಿದ್ದಳು. ಸ್ವಾಭಾವಿಕವಾಗಿ ಅವಳ ಆಲೋಚನಾ ಶಕ್ತಿ ವಿಕಾಸಗೊಂಡಿತ್ತು. ತಾಯಿಯ ಹತ್ತಿರ ಇದ್ದಷ್ಟು ಸಲಿಗೆ ಅವಳಿಗೆ ತಂದೆಯ ಹತ್ತಿರ ಇರಲಿಲ್ಲ. ಅವಳು ಈಗ ತಂದೆಯ ಹತ್ತಿರ ಸಲಿಗೆ ಬೆಳೆಸಿಕೊಳ್ಳುತ್ತಿದ್ದಳು ಅಷ್ಟೆ. ಕಳೆದು ಹೋದ ಜೀವನ ಅದಾಗಿತ್ತು.

ಕೇಶವ ಪಿಳ್ಳೆ ಆಫೀಸಿನಿಂದ ಸಂಜೆಯ ಹೊತ್ತಿಗೆ ಮನೆಗೆ ಬಂದರು. ಕಾತ್ಯಾಯಿನಿಯಮ್ಮ ಕಾಯುತ್ತ ಕುಳಿತಿದ್ದಳು. ಅವಳು ತುಂಬ ಹೊತ್ತಿನಿಂದ ಕಾತರಿಸುತ್ತಿದ್ದಳು. ಎಂದೂ ಇಲ್ಲದಂತಹ ಒಂದು ಘಟನೆ ಅಂದು ನಡೆಯಿತು. ಕೇಶವ ಪಿಳ್ಳೆ ಕಾರಿನಿಂದ ಇಳಿಯುವುದಕ್ಕೆ ಮೊದಲೇ ಕಾತ್ಯಾಯಿನಿಯಮ್ಮ ಅಲ್ಲಿ ಬಂದು ನಿಂತಿದ್ದಳು. ಅವಳು ಕೇಳಿದಳು:

"ಕೇಳಿದಿರಾ ಘೋಷಣೆ ಮಾಡಿಕೊಂಡು ಹೋದದ್ದನ್ನ?"

ಕೇಶವ ಪಿಳ್ಳೆ 'ಹ್ಞು' ಎಂದರು ಅಷ್ಟೆ.

ಕಾತ್ಯಾಯಿನಿಯಮ್ಮ ಕೇಳಿದಳು: "ಅದು ಅಷ್ಟೊಂದು ಮುಖ್ಯವಾದದ್ದಲ್ಲವಾ?"

ಕೇಶವ ಪಿಳ್ಳೆಗೆ ಕಾತ್ಯಾಯಿನಿಯಮ್ಮನ ಗಾಬರಿ ಅರ್ಥವಾಯಿತು. ಅವರು ಹೇಳಿದರು: "ನಾನೊಂದು ಸಲ ಡ್ರೆಸ್ ಬದಲಾಯಿಸ್ತೀನಿ. ಇವತ್ತು ಎಂದಿನ ಹಾಗೆ ನನಗೆ ಒಂದು ಕಪ್ಪು ಕಾಫಿಯೂ ಇಲ್ಲವಾ?"

ಗಂಡನಿಗೆ ಕಾಫಿ ತಂದಿಲ್ಲ ಎನ್ನುವುದು ಕಾತ್ಯಾಯಿನಿಯಮ್ಮನಿಗೆ ನೆನಪಾದದ್ದು ಆಗ. ಅವಳು ಅಡಿಗೆ ಮನೆಗೆ ಹೋದಳು.

ಕೇಶವ ಪಿಳ್ಳೆ ಕಾಫಿ ಕುಡಿಯುತ್ತಿದ್ದಾಗ ಕಾತ್ಯಾಯಿನಿಯಮ್ಮ ತಾನು ಅಂದು ನೋಡಿದ ಮೆರವಣಿಗೆಯನ್ನು ಕುರಿತು ವರ್ಣಿಸುತ್ತಿದ್ದಳು. ಅವಳು ಹೇಳಿದಳು:

"ಮತ್ತೇ, ನಾನು ತುಂಬ ಹೆದರಿಕೊಂಡಿದ್ದೆ. ಗೇಟಿನಲ್ಲಿ ನಿಂತುಕೊಳ್ಳೋ ಪೋಲೀಸಿನವನನ್ನು, ತೋಟದ ಕೆಲಸದವನನ್ನು, ಡ್ರೈವರ್‌ನನ್ನು—ಎಲ್ಲರನ್ನೂ ಕಂಡು ಹೆದರಿಕೆಯಾಗಿತ್ತು. ಹೇಗೆ ಅವರನ್ನೆಲ್ಲ ನಂಬೋದು? ಹೀಗೆ ಕೂಗಿಕೊಂಡು ಹೋಗೋ ಹುಡುಗರ ಜೊತೆಯಲ್ಲಿ ಇವರ ಮಕ್ಕಳೂ ಇರಬಹುದು."

ಇರಬಹುದು ಎನ್ನುವ ಧಾಟಿಯಲ್ಲಿ ಕೇಶವ ಪಿಳ್ಳೆಯೂ ತಲೆಯಲ್ಲಾಡಿಸಿದರು. ವಿಷಯ ಸರಿಯಾಗಿ ತಿಳಿಯದ ಕಾತ್ಯಾಯಿನಿಯಮ್ಮ ಕೇಳಿದಳು: "ಯಾಕೆ ನೀವೇನೂ ಮಾತಾಡೋದಿಲ್ಲ? ಇದೇನು ಮಹಾ ಅಂತಲಾ? ಮಾತಾಡಿ."

ಕೇಶವ ಪಿಳ್ಳೆ ನಗುವನ್ನು ತಂದುಕೊಂಡು ಹೇಳಿದರು: "ಇದನ್ನು ಹೇಳಿದರೆ ನಿನಗೆ ಅರ್ಥವಾದೀತೇನೇ?"

ಅಸಹಾಯಕಳಾಗಿ ಕಾತ್ಯಾಯಿನಿಯಮ್ಮ ತಾನು ಹೇಳುತ್ತಿರುವ ಮಾತು ಹಿಡಿಸುತ್ತಿಲ್ಲವೇನೋ ಎನ್ನುವ ಧಾಟಿಯಲ್ಲಿ ಹೇಳಿದಳು: "ನನಗೆ ಇದೊಂದನ್ನೂ ಕಲಿಸಿಕೊಡಲಿಲ್ಲ. ಮತ್ತೆ ಹ್ಯಾಗೆ ನನಗೆ ಇದು ಅರ್ಥವಾದೀತು?"

ಕೇಶವ ಪಿಳ್ಳೆಗೆ ಕಾತ್ಯಾಯಿನಿಯಮ್ಮನ ನಿರ್ಮಲ ಮನಸ್ಸು ಅರ್ಥವಾಯಿತು. ಅವರು ಮೌನದಿಂದಿದ್ದರು. ಅನಂತರ ಕಾತ್ಯಾಯಿನಿಯಮ್ಮ ಮಗಳ ವಿಷಯ ಹೇಳುವುದಕ್ಕೆ ಹೊರಟಳು: "ನಮ್ಮ ಮಗಳೂ ಅವರ ಜೊತೆಯಲ್ಲಿ ಹೋಗಿದ್ದಳು. ತ್ರೇಸ್ಯ ಅನ್ನೋ ಹೆಣ್ಣು ಗಲ್ಲಿಗೇರಿಸಬೇಕು ಅಂತ ಕೂಗು ಅಂದಳಂತೆ. ಆದರೆ ಇವಳು ಹಾಗೆ ಕೂಗಲಿಲ್ಲವಂತೆ."

ಕೇಶವ ಪಿಳ್ಳೆಗೆ ಅದೊಂದು ವಿಶೇಷ ವಾರ್ತೆಯಾಗಿತ್ತು. ವಿಜಯಮ್ಮನನ್ನು ಕರೆದರು. ಅವಳಿಂದ ವಿಷಯವನ್ನೆಲ್ಲ ತಿಳಿದುಕೊಂಡರು. ಅನಂತರ ಅವಳನ್ನು ಹೋಗಿ ಓದಿಕೊಳ್ಳುವಂತೆ ಹೇಳಿದರು. ಮಗಳನ್ನು ಬಯ್ಯಲಿಲ್ಲವೇಕೆ ಎಂದು ಕಾತ್ಯಾಯಿನಿಯಮ್ಮ ಗಂಡನನ್ನು ಕೇಳಿದರು. ಜೊತೆಗೆ ಈ ಗಲಾಟೆಯಲ್ಲಿ ಭಾಗವಹಿಸಿದ ಮಗಳಿಗೆ ತಕ್ಕ ಬಂದೋಬಸ್ತು ಮಾಡಬಾರದೆ? ಅದನ್ನೂ ಮಾಡಲಿಲ್ಲ. ಏತಕ್ಕೆ? ಅದಕ್ಕೆ ಕೇಶವ ಪಿಳ್ಳೆ 'ಹ್ಞು' ಎಂದರು ಅಷ್ಟೆ.

ಕೇಶವ ಪಿಳ್ಳೆಯ ಮನಸ್ಸು ಭಾರವಾದಂತೆ ತೋರಿತು. ಮನಸ್ಸು ಅಷ್ಟೊಂದು ಭಾರವಾದಂತೆ ಹಿಂದೆಂದೂ ಅನುಭವಕ್ಕೆ ಬಂದಿರಲಿಲ್ಲ. ಅದು ಅವರನ್ನು ಉತ್ಸಾಹ ಹೀನರನ್ನಾಗಿ ಮಾಡಿತು. ಅಷ್ಟು ಮಾತ್ರವಲ್ಲ, ಸಾಮಾನ್ಯವಾಗಿ ಬಲಹೀನತೆಗೂ ಒಳಗು ಮಾಡಿತು. ಉತ್ಸಾಹವಿಲ್ಲದಿದ್ದರೆ ಹೋಗಲಿ. ಸಿಟ್ಟು ಕೂಡ ಬರುತ್ತಿಲ್ಲ. ಆ ಸಂದರ್ಭ ಅವರನ್ನು ಮಂದಬುದ್ಧಿಗೊಳಗುಮಾಡಿತ್ತು. ಸುಮ್ಮನೆ ಕುಳಿತಿದ್ದರು. ಏನು ಮಾಡು ವುದಕ್ಕೂ ತೋರುತ್ತಿರಲಿಲ್ಲ. ಯಾವುದೂ ಹೊಳೆಯುತ್ತಿರಲಿಲ್ಲ.

ಸ್ವಂತ ಸಾಮರ್ಥ್ಯವಿಲ್ಲದೆ ಎದುರಿಸಬೇಕಾದ ಘಟನೆಯ ಬೃಹತ್ತನ್ನು ನೆನಸಿಕೊಂಡು ದಿಗ್ಭ್ರಾಂತನಾಗಿ ಹಿಂದೆ ಒಂದು ಸಲ ಕುಳಿತದ್ದುಂಟು. ಅಂದು ಒಂದು ರೀತಿಯಲ್ಲಿ ಕೆಳಗಿನ ಸ್ಥಾನ ಇದ್ದದ್ದು. ಅನಂತರ ಎಲೆಕ್ಷನ್ ಎನ್ನುವ ಒಂದು ಹೊಸ ಕೆಲಸ ಸಿಕ್ಕಿದ ಮೇಲೆ ಅವರ ಬುದ್ಧಿ ಸಾಮರ್ಥ್ಯಗಳು ಜಾಗೃತಗೊಂಡಿದ್ದುವು. ಹತ್ತರಷ್ಟು ಹೆಚ್ಚಿದ್ದ ಶಕ್ತಿಸಾಮರ್ಥ್ಯದಿಂದ ಒಂದು ಬಿರುಗಾಳಿಯಂತೆ ಆತ ದೇಶವಿಡೀ ಸುತ್ತಾಡಿದ್ದುಂಟು. ಅಂದು ಮಾಡಿದ ಕೆಲಸಗಳೆಲ್ಲವೂ ಬುದ್ಧಿಪೂರ್ವಕವಾದ ಕೆಲಸಗಳಾಗಿದ್ದುವು. ಉಗ್ರ ವ್ಯಕ್ತಿಗಳು ಆತನನ್ನು ಭಯಪಡಿಸಲಾಗಿರಲಿಲ್ಲ. ಭವಿಷ್ಯವನ್ನು ಕುರಿತು ಚಿಂತಿಸಿಯೂ ಇರಲಿಲ್ಲ. ಏನು ಮಾಡಬೇಕು ಎನ್ನುವುದು ತಿಳಿದಿತ್ತು. ಅದು ತನ್ನ ಕರ್ತವ್ಯವೆಂದು ತೋರಿತ್ತು. ಸಾಮರ್ಥ್ಯದಿಂದಲೇ ಅದನ್ನೆಲ್ಲ ಮಾಡಿ ಜಯಿಸಿದ್ದಾಗಿತ್ತು.

ಇಂದು ಹಿಂದೆ ಇದ್ದದ್ದಕ್ಕಿಂತಲೂ ಹೆಚ್ಚಾಗಿ ಬುದ್ಧಿಗೆ ಮಂಕು ಕವಿದಿದೆ. ಎದುರಿಸ ಬೇಕಾಗಿರುವ ಸಮಸ್ಯೆ ಹಿಂದಿನದಕ್ಕಿಂತ ಗಂಭೀರವಾಗಿದೆ. ಸಾಮರ್ಥ್ಯಗಳೂ ಕುಂದಿ ಹೋಗಿವೆ. ಹೊಸದಾದ ಚೈತನ್ಯವನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಎಷ್ಟೋ ವರ್ಷಗಳಿಗೆ ಮೊದಲು ತೆರೆದ, ದೀರ್ಘವಾಗಿ ಹಾಸಿಕೊಂಡು ಬಿದ್ದಿದ್ದ ಮಾರ್ಗದಲ್ಲಿ ಕೇಶವ ಪಿಳ್ಳೆಯ ದೃಷ್ಟಿ ಬಿದ್ದದ್ದು ಈ ಕುರ್ಚಿಯ ಮೇಲೆ. ಈ ಕುರ್ಚಿ ಸಿಕ್ಕಿತು. ಅಂದಿನ ಅಭ್ಯುದಯಾಕಾಂಕ್ಷಿಗಳು ಬೆರಳಿಟ್ಟು ತೋರಿಸುತ್ತಿದ್ದದ್ದೂ ಇದೇ ಕುರ್ಚಿಯನ್ನು. ಆ ಆಗ್ರಹ ನಿಂತುಹೋದದ್ದಾಗಿರಬೇಕು. ಆ ದೃಷ್ಟಿ ಇನ್ನು ಮುಂದೆ ಹೋಗದೆ ಇರ ಬಹುದು. ಅದೇ ಅಲ್ಲವೇ ಸಾಹಸ ಪರಾಕ್ರಮಗಳ ಉದ್ಗಮಸ್ಥಾನ?

ಕಾತ್ಯಾಯಿನಿಯಮ್ಮ ಎಡೆಬಿಡದೆ ಒಂದೊಂದಾಗಿ ಪ್ರಶ್ನೆಯನ್ನು ಕೇಳುತ್ತಾ ಇದ್ದಳು. ಅದೊಂದಕ್ಕೂ ಉತ್ತರ ಹೇಳಲಿಲ್ಲ. ಆ ಪ್ರಶ್ನೆಗಳು ಮನಸ್ಸನ್ನು ಕದಲಿಸಿದಂತೆಯೂ ಕೇಶವ ಪಿಳ್ಳೆಗೆ ತೋರಲಿಲ್ಲ. ಈ ಸ್ವತಂತ್ರ ತಿರುವಾಂಕೂರು ಎಂದರೇನೆಂದು ಅವಳು ತಿಳಿದುಕೊಳ್ಳಬೇಕಾಗಿತ್ತು. ಏತಕ್ಕೋಸ್ಕರ ನಾಡಿನ ಜನರೆಲ್ಲ ಹೀಗೆ ಗಲಾಟೆ ಮಾಡು ತ್ತಿದ್ದಾರೆ? ಇದೆಲ್ಲ ಕಾತ್ಯಾಯಿನಿಯಮ್ಮನಿಗೆ ತಿಳಿದಿದ್ದಿದ್ದರೆ ಕೇಶವ ಪಿಳ್ಳೆಯ ಮನಸ್ಸಿಗೆ ಒಂದು ಸಮಾಧಾನ ದೊರೆಯುತ್ತಿತ್ತು.

ತನಗೆ ಯಾರೂ ಇಲ್ಲವೆನ್ನುವ ಭಾವನೆ ಇಂದಿನಂತೆ ಕೇಶವ ಪಿಳ್ಳೆಗೆ ಹಿಂದೆಂದೂ ಉಂಟಾಗಿರಲಿಲ್ಲ. ಮನಸ್ಸಿನ ಭಾರವನ್ನು ಮತ್ತೊಂದು ವ್ಯಕ್ತಿಯೊಡನೆ ಹೇಳಿಕೊಂಡು

ಹಗುರಗೊಳಿಸಿಕೊಳ್ಳಲು ಯಾವ ಮಾರ್ಗವೂ ಇರಲಿಲ್ಲ. ಇಷ್ಟು ಕಾಲ ಜೀವಿಸಿಯೂ ಒಬ್ಬನೇ ಒಬ್ಬ ಸ್ನೇಹಿತ ತನ್ನವನಾಗಿ ಉಳಿದಿಲ್ಲ. ಇದೆಂತಹ ಬದುಕಾಗಿತ್ತು! ಎಲ್ಲವನ್ನೂ ತೆರೆದು ಹೇಳುತ್ತಿರುವಾಗ ಅದನ್ನೆಲ್ಲ ಕೇಳಿಸಿಕೊಂಡು ಸಲಹೆ ಕೊಡಬಹುದಾದಂತಹ, ಸಮಾಧಾನಪಡಿಸಬಹುದಾದಂತಹ ವ್ಯಕ್ತಿಯನ್ನು ತಾನು ಸಂಪಾದಿಸಲಿಲ್ಲ. ಒಬ್ಬನೇ ಒಬ್ಬ ಬಂಧುವಿಲ್ಲ. ಇಂತಹ ಸ್ಥಿತಿ ತನಗೆ ಬರುವುದೆಂದು ತಾನು ಆಲೋಚಿಸಿರಲೂ ಇಲ್ಲ. ಹತ್ತಿರದ ಒಂದೇ ಒಂದು ವ್ಯಕ್ತಿಯಿಲ್ಲ. ಹೆಂಡತಿಯೇನೋ ನಿಜವಾಗಿಯೂ ವಿಶ್ವಾಸಕ್ಕೆ ಪಾತ್ರಳಾದವಳು. ಅತಿ ಹತ್ತಿರದವಳು. ಆದರೆ ಅವಳಿಗೆ ಇದು ಅರ್ಥವಾಗುವುದಿಲ್ಲ. ಅರ್ಥಮಾಡಿಕೊಳ್ಳಬಹುದಾದಂತಹವಳನ್ನಾಗಿ ಅವಳನ್ನು ಬೆಳೆಸಬಹುದಿತ್ತು. ಅದು ದೊಡ್ಡ ತಪ್ಪಾಗಿಹೋಯಿತು. ಅಂತಹ ಒಂದು ಸಂದರ್ಭವನ್ನು ಹಾಳು ಮಾಡಿದ್ದಾಯಿತು. ಅವಳನ್ನು ಕಡೆಗಣಿಸಿದ್ದರ ದೋಷ ಕೇಶವ ಪಿಳ್ಳೆಗೆ ಈಗ ಅರ್ಥವಾಗುತ್ತಿದೆ. ಯಾವ ರೀತಿಯಲ್ಲೂ ಆ ತಪ್ಪನ್ನು ಪರಿಹರಿಸಿಕೊಳ್ಳಲಾಗುವುದಿಲ್ಲ.

ಮೇಜಿನ ಮೇಲಿರುವ ರಹಸ್ಯ ಫೈಲುಗಳಲ್ಲಿ ಯಾರನ್ನೂ ಗಾಬರಿಗೊಳಿಸುವ ರಿಪೋರ್ಟುಗಳಿವೆ. ಮೇಲೆ ತೋರುವುದಕ್ಕಿಂತ ಗಂಭೀರವಾದ ಪ್ರವೃತ್ತಿಗಳು ಭೂಗರ್ಭದಲ್ಲಿ ನಡೆಯುತ್ತಿವೆ. ಈ ಕ್ರಾಂತಿಯ ಒಟ್ಟು ಸ್ವರೂಪವನ್ನು ಕೇಶವ ಪಿಳ್ಳೆ ಕೆಲವು ದಿನಗಳಿಂದ ಕಾಣುತ್ತಿದ್ದಾರೆ. ಆಕೃತಿಯನ್ನು ತಳೆದು ಅದು ಭೀಕರ ಶಕ್ತಿಯಾಗಿ ಕೇಶವ ಪಿಳ್ಳೆಯ ಮುಂದೆ ನಿಂತಿದೆ.

ಕಾತ್ಯಾಯಿನಿಯಮ್ಮ ಕಳವಳಗೊಂಡು ಒಂದು ಪ್ರಶ್ನೆಯನ್ನು ಕೇಳಿದಳು: "ಇವರೆಲ್ಲ ಗಲ್ಲಿಗೇರಿಸಬೇಕು ಅಂತ ಬೊಬ್ಬೆ ಹಾಕೋದು ಯಾಕೆ?"

ಹೆಂಡತಿಯಾದವಳು ಆ ಪ್ರಶ್ನೆಯನ್ನು ಕೇಳುತ್ತಿರುವಾಗ ಅದು ಹಾಗೆಯೇ ಸಂಭವಿಸಬಹುದು. ನಿಜವಾಗಿಯೂ ಆ ಪ್ರಶ್ನೆಯ ರೂಪವೇ ಇದು. "ಇವರು ನಮ್ಮನ್ನು ನೇಣುಹಾಕಬೇಕು ಅಂತ ಹೇಳಿಕೊಂಡು ಹೋದರೂ ಅದು ನಡೆದೀತಾ?"

ಕಾತ್ಯಾಯಿನಿಯಮ್ಮ ಗೋಳೋ ಎಂದು ಅತ್ತುಬಿಟ್ಟಳು. ಅತ್ತು ಅತ್ತು ಕ್ಷೀಣಿಸಿದಳು.

"ಛೀ! ರಂಪ ಮಾಡಬೇಡ. ಅದನ್ನೇ ನಾನು ನಿನಗೆ ಹೇಳಿದ್ದು. ನಿನಗಿದೊಂದೂ ಅರ್ಥವಾಗೋದಿಲ್ಲ ಅಂತ. ನಿನ್ನ ಹತ್ರ ಅದನ್ನೆಲ್ಲ ಹೇಳೋದಕ್ಕೆ ಸಾಧ್ಯವಿಲ್ಲ."

ಕಾತ್ಯಾಯಿನಿಯಮ್ಮನ ತಲೆಗೆ ಒಂದು ಉಪಾಯ ಹೊಳೆದಂತೆ ತೋರಿತು.

"ಈ ಉದ್ಯೋಗ ಬೇಡ ಅಂತ ಕೈಬಿಟ್ಟು ನಾವು ನಮ್ಮ ಊರಿಗೆ ಹೋಗಿಬಿಡೋಣ."

ನಗುತ್ತ ಕೇಶವ ಪಿಳ್ಳೆ ಹೇಳಿದರು: "ಹಾಗೆ ಮಾಡಿದೆವು ಅಂತ ಆದರೆ, ಈ ಉದ್ಯೋಗ ಕೈಬಿಟ್ಟು ಹೋದೆವು ಅಂತ ಆದರೆ, ಎಲ್ಲಿ ಹೋಗಿ ಅಡಗಿಕೊಂಡಿದ್ದರೂ ಇವರು ಬಿಡೋದಿಲ್ಲ."

ಅದೇಕೆ? ಎನ್ನುವ ಅರ್ಥದಲ್ಲಿ ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯ ಮುಖವನ್ನು ನೋಡಿದಳು.

"ನೀನು ಹಿಂದೆ ಊರಿನಲ್ಲಿದ್ದಾಗಲೂ ಇದೇ ರೀತಿ ಜನರು ಗಲಭೆ ಮಾಡಿಕೊಂಡು ಹೋಗ್ತಿದ್ದದ್ದನ್ನ ಕೇಳಿಲ್ಲವಾ?"

"ಜೈಲಿಗೆ ಹಾಕಬೇಕು ಅಂತೆಲ್ಲ ಮೀಟಿಂಗ್ ಸೇರಿದಾಗ ಕೆಲವರೆಲ್ಲ ಮಾತಾಡ್ತಿದ್ದರು ಅಂತ ಕೇಳಿದ್ದೀನಿ."

ಕೇಶವ ಪಿಳ್ಳೆ ಹೇಳಿದರು: "ಆದ್ದರಿಂದಲೇ ಬೇರೆ ಉಪಾಯವಿಲ್ಲ ಅಂತ ನಾನು ಹೇಳಿದ್ದು."

ಆಗ ಯಾವುದರಿಂದಲೂ ಬೇರೆ ಮಾರ್ಗವಿಲ್ಲ ಎನ್ನುವ ಅಭಿಪ್ರಾಯ ಕಾತ್ಯಾಯಿನಿಯಮ್ಮನಿಗೆ ಉಂಟಾದದ್ದು. ಕೇಶವ ಪಿಳ್ಳೆ ಹೇಳಿದರು: "ಹೆದರಿಕೊಳ್ಳಬೇಡ. ಹಾಗೆ ಸಂಭವಿಸುತ್ತೆ ಅಂದುಕೊಳ್ಳಬೇಡ. ಇವರು ಹೀಗೆ ಕೂಗಾಡಿಕೊಂಡಿರ್ತಾರೆ. ನನ್ನನ್ನು ನೇಣು ಹಾಕಬೇಕಾಗಿದ್ದರೆ—ನನ್ನ ಹಾಗೇ ಇರುವ ಎಷ್ಟೆಷ್ಟು ಜನರನ್ನ ನೇಣು ಹಾಕಬೇಕು ಗೊತ್ತಾ? ಹೀಗೆ ಕೂಗಾಡಿಕೊಂಡಿರುವವರಿಗೆ ಅದಕ್ಕೆ ಅಧಿಕಾರವಿದೆಯಾ? ಅದು ಸಾಧ್ಯವಾ ಅನ್ನೋದನ್ನ ತಿಳಿದಿದ್ದರೆ ಸಾಕು."

ಕಾತ್ಯಾಯಿನಿಯಮ್ಮನಿಗೆ ಅದು ಪೂರ್ತಿ ಅರ್ಥವಾಗಲಿಲ್ಲ. ಒಂದು ವಿಷಯ ಅರ್ಥವಾಯಿತು. ನೇಣು ಹಾಕುವುದಿದ್ದರೆ ಒಬ್ಬರನ್ನಲ್ಲ, ತುಂಬ ಉದ್ಯೋಗಸ್ಥರನ್ನು ಹಾಕುವುದಾಗಿರಬೇಕು. ಆದ್ದರಿಂದಲೇ ಅವಳ ಕಳವಳ ಮಾಯವಾಗಿರಲಿಲ್ಲ. ಕೇಶವ ಪಿಳ್ಳೆ ಹೆಂಡತಿಯನ್ನು ಪ್ರೀತಿಯಿಂದ ಸಮಾಧಾನಪಡಿಸಿದರು:

"ನೀನು ಇದೊಂದನ್ನೂ ನೋಡದೆ ಕೇಳದೆ ನಿನ್ನ ಪಾಡಿಗೆ ನೀನಿರು. ಹೆದರಿಕೊಳ್ಳಬೇಡ" ಎಂದು ಹೇಳಿ ಹೆಂಡತಿಯನ್ನು ಕೇಳಿದರು:

"ನೀನು ಭಾಗ್ಯವತಿಯಲ್ಲವಾ? ಹಾಗಿರುವಾಗ ನನಗೆ ಇಂಥ ಅಪಾಯಗಳೆಲ್ಲ ಬರೋದುಂಟಾ?"

ಕಾತ್ಯಾಯಿನಿಯಮ್ಮ ಹೇಳಿದಳು: "ಒಳ್ಳೆ ಭಾಗ್ಯ. ಇಷ್ಟೊಂದು ಪುಣ್ಯ ಮಾಡಿದವಳುಂಟಾ? ಚೆನ್ನಾಯ್ತು."

ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನಿಗೆ ಧೈರ್ಯ ನೀಡಿದರು:

"ನೀನಿಷ್ಟೊಂದು ಬುದ್ಧಿಯಿಲ್ಲದವಳಾ? ಇಷ್ಟೆಲ್ಲ ವಿರೋಧಗಳನ್ನೂ ಎದುರಿಸಿಕೊಂಡು ಮುನ್ನುಗ್ಗಬಲ್ಲ ನನ್ನನ್ನು ನೇಣು ಹಾಕೋದಾ? ಅದನ್ನು ಕೇಳಿದಾಕ್ಷಣ ನೀನು ನಂಬಿಬಿಟ್ಟೆಯಾ?"

ಇನ್ನು ಮೇಲೆ ಆ ಘೋಷಣೆಗೆ ಅವಕಾಶವಿಲ್ಲ ಎಂದು ಹೇಳಿ ಅದನ್ನು ಹೆಂಡತಿಗೆ ವಿವರಿಸಿದರು. ಆದರೂ ಒಂದು ವಿಷಯ ಸ್ಪಷ್ಟ. ಕಾಂಗ್ರೆಸ್ಸಿನವರಿಗೆ ಆಗದೇ ಇದ್ದ ಉದ್ಯೋಗಸ್ಥನೆಂದರೆ ಕೇಶವ ಪಿಳ್ಳೆ. ಕಾಂಗ್ರೆಸ್ಸನ್ನು ಸದಾ ಎದುರಿಸಿದ್ದು ಕೇಶವ ಪಿಳ್ಳೆ.

ಆದ್ದರಿಂದ ಕೆಲವು ತೊಂದರೆಗಳುಂಟಾಗಬಹುದು. ಕೆಲಸ ಕೈಬಿಟ್ಟುಹೋಗಲೂ ಬಹುದು. ವಿಷಮತೆಗಳುಂಟಾಗಬಹುದು. ಆದರೆ ಅದೊಂದೂ ಕಾತ್ಯಾಯಿನಿಯಮ್ಮನಿಗೆ ಮುಖ್ಯ ವಾಗಿರಲಿಲ್ಲ. ಅವಳು ಹೇಳಿದಳು: "ನನಗೆ ಈ ತಿರುವುಮುರುವು ಒಂದೂ ಗೊತ್ತಾಗೋ ದಿಲ್ಲ. ನಾನು ಹೆದರಿಹೋಗಿದ್ದೆ."

ಕಾತ್ಯಾಯಿನಿಯಮ್ಮನನ್ನು ಹಾಗೆ ಸಮಾಧಾನಪಡಿಸಿದ್ದಾಯಿತು. ಆದರೆ ಕೇಶವ ಪಿಳ್ಳೆಯ ಮನಸ್ಸು ಅಸ್ವಸ್ಥವಾಗಿತ್ತು. ಅವರು ಟೆಲಿಫೋನ್ ಮೂಲಕ ಪಾರ್ಕ್ ವ್ಯೂಗೆ ಇನ್ನೂ ಹೆಚ್ಚಿನ ರಕ್ಷಣಾ ವ್ಯವಸ್ಥೆಗಳನ್ನು ಮಾಡಬೇಕೆಂದು ಪೋಲೀಸ್ ಕಮಿಷನರಿಗೆ ತಿಳಿಸಿದರು. ಸ್ವಲ್ಪ ಹೊತ್ತಾಗುವುದರೊಳಗೆ ಒಂದು ಗುಂಪು ಪೋಲೀಸಿನವರು ಶಸ್ತ್ರ ಧಾರಿಗಳಾಗಿ ಪಾರ್ಕ್ ವ್ಯೂಗೆ ಬಂದು ಸೇರಿಕೊಂಡರು.

ಜೀವನದಲ್ಲಿ ಒಂದು ನಾಟಕ ಆಡಿದ್ದಾಯಿತು. ಇದುವರೆಗೆ ಅದು ಜಯಪ್ರದ ವಾಗಿತ್ತು. ಆದರೆ ಆ ನಾಟಕ ಕೊನೆಯಲ್ಲಿ ಅಗ್ನಿಜ್ವಾಲೆಯನ್ನೆಬ್ಬಿಸುತ್ತಿದೆ ಎನ್ನುವ ಪ್ರಜ್ಞೆ ಕೇಶವ ಪಿಳ್ಳೆಗಿದೆ.

ಸ್ಟೇಟ್ ಕಾಂಗ್ರೆಸ್ ರೂಪ ತಾಳಿದಾಗ ಆ ಹೋರಾಟಕ್ಕೆ ಇಷ್ಟೊಂದು ದೀರ್ಘವಾದ ಆಯುಷ್ಯವಿರುತ್ತದೆ ಎನ್ನಿಸಿರಲಿಲ್ಲ. ಕೂಡಲೇ ನಂದಿಹೋಗುವ, ನಂದಿಹೋಗಿಯೇ ತೀರುವ ಒಂದು ಅಗ್ನಿ ಮಾತ್ರ ಎಂದು ಭಾವಿಸಿದ್ದದ್ದು. ಹಣದ ಮೇಲೆ ಹಣ, ಅಧಿಕಾರದ ಮೇಲೆ ಅಧಿಕಾರ—ಎಲ್ಲವೂ ಇತ್ತು. ಅಭ್ಯುದಯಕ್ಕಿದ್ದ ಎಲ್ಲ ಅನುಕೂಲಗಳನ್ನೂ ಕೇಶವ ಪಿಳ್ಳೆ ಕಂಡುಕೊಂಡದ್ದಾಯಿತು. ಸ್ಟೇಟ್ ಕಾಂಗ್ರೆಸ್ ಅಡಗಿಹೋಗುತ್ತದೆ ಎಂದು ಭಾವಿಸಿದ್ದದ್ದು. ಅದರ ಹುಟ್ಟನ್ನು ಅಡಗಿಸಿಬಿಡಬೇಕು ಎನ್ನಿಸಿಯೂ ಇತ್ತು. ಆ ಪಕ್ಷದ ಮೇಲೆ ಸಿಟ್ಟು ದ್ವೇಷಗಳೂ ಉಂಟಾದುವು. ಉದ್ದೇಶದಿಂದಲೇ ಕೇಶವ ಪಿಳ್ಳೆ ಆ ಕೆಲಸ ಮಾಡಿದ್ದು. ಆ ಲೆಕ್ಕಾಚಾರ ತಪ್ಪಿಹೋಯಿತು ಎಂದು ತಿಳಿದದ್ದು ತಡವಾಗಿ, ಬಹಳ ತಡ ವಾದ ಹೊತ್ತಿನಲ್ಲಿ ! ಪರಿಹಾರ ಮಾರ್ಗ ತೋರದೇ ಹೋದ ಹೊತ್ತಿನಲ್ಲಿ !

ಬ್ರಿಟಿಷರು ಭಾರತವನ್ನು ಬಿಟ್ಟುಹೋಗುವುದೆಂದು ತೀರ್ಮಾನಿಸಿದಾಗ ಸ್ವತಂತ್ರ ತಿರುವಾಂಕೂರ್ ಎನ್ನುವ ಆಶೆ ಮೂಡಿತು. ಅದೊಂದು ಒಳ್ಳೆಯ ಕೆಲಸ ಎಂದು ಕೇಶವ ಪಿಳ್ಳೆಗೆ ಅನ್ನಿಸಿತ್ತು. ಕಾಂಗ್ರೆಸ್ ಜಯಿಸಿತು. ಆದರೆ ಜಯಿಸಿದ ಕಾಂಗ್ರೆಸ್ಸನ್ನು ಪರಿಣಾಮ ಕಾರಿಯಾಗಿ ಸೋಲಿಸಿ ಅದನ್ನು ಹಿಡಿತದಲ್ಲಿಟ್ಟುಕೊಂಡಿರಬೇಕು ಎನ್ನುವ ಒಂದು ಮಹದಾಶೆಯುಂಟಾಯಿತು. ಸ್ವತಂತ್ರ ತಿರುವಾಂಕೂರು ಜಯಿಸುತ್ತದೆಂದು ಕೇಶವ ಪಿಳ್ಳೆಗೆ ತೋರಿದ್ದದ್ದು. ಸ್ಟೇಟ್ ಕಾಂಗ್ರೆಸ್ ಏತಕ್ಕೋಸ್ಕರ ಸ್ಥಾಪನೆಗೊಂಡಿತ್ತೋ, ಅದಕ್ಕೆ ಸ್ವತಂತ್ರ ತಿರುವಾಂಕೂರ್ ಎದುರಲ್ಲ. ಮಹಾರಾಜರ ಆಡಳಿತದ ಕೈಕೆಳಗೆ ಪ್ರಜಾ ಸರ್ಕಾರ—ಅದಾಗಿತ್ತು ಸ್ಟೇಟ್ ಕಾಂಗ್ರೆಸ್ಸಿನ ಗುರಿ. ಸ್ವತಂತ್ರ ತಿರುವಾಂಕೂರು ಅದನ್ನು ಒಪ್ಪಿಕೊಳ್ಳುತ್ತದೆ. ಆಗ ಸ್ವತಂತ್ರ ತಿರುವಾಂಕೂರು ಅಂಗೀಕರಿಸಲ್ಪಟ್ಟಂತೆಯೇ.

ಆದರೆ ಕೆಲವಾರು ದಿನಗಳು ಕಳೆದ ಮೇಲೆ ಕೇಶವ ಪಿಳ್ಳೆಗೆ ಸಂಶಯವುಂಟಾಗತೊಡ

ಗಿತ್ತು. ಸ್ವತಂತ್ರ ತಿರುವಾಂಕೂರು ಜಯಿಸಬಹುದೇ? ಅಷ್ಟೊಂದು ಸಶಕ್ತವಾಗಿದ್ದುವು ತಿರುವಾಂಕೂರಿಗೆ ಎದುರಾದ ಪರಿಸ್ಥಿತಿಗಳು. ಸ್ವತಂತ್ರ ತಿರುವಾಂಕೂರು ಎನ್ನುವ ಕನಸಿನ ಎಲ್ಲಾ ಮಂಖಗಳೂ ಕ್ರಮೇಣ ಸ್ಪಷ್ಟವಾದಾಗ ಅದು ಸರಿಯೇ ಎನ್ನುವ ಸಂಶಯವೂ ಕೇಶವ ಪಿಳ್ಳೆಗುಂಟಾಯಿತು. ಯಾರೋ ತನ್ನೊಳಗಿದ್ದುಕೊಂಡು 'ಅದು ಸರಿಯಲ್ಲ' ಎಂದು ಹೇಳುತ್ತಿದ್ದಂತೆ ತೋರಿತು. ಆ ಸಂಶಯಗಳು ಒಂದೊಂದಾಗಿ ಬಲಗೊಳ್ಳುತ್ತಿದ್ದುವು.

ಆದರೆ ಆ ರೀತಿಯ ಸಂಶಯಗಳನ್ನು ಹೊರಗೆ ತೋರಿಸಿಕೊಳ್ಳಲು ಸಾಧ್ಯವೆ? ತೋರಿಸಿಕೊಳ್ಳುವುದರ ಫಲ ದಿವಾನರ ಪ್ರೀತಿಯನ್ನು ಕಳೆದುಕೊಳ್ಳುವುದು. ಸೂಕ್ಷ್ಮ ದೃಷ್ಟಿಯ ಆ ರಾಜ್ಯಾಧಿಕಾರಿಯ ಗಮನಕ್ಕೆ ಬಾರದಂತೆ ಸಂರಕ್ಷಿಸಿಕೊಳ್ಳಬೇಕು ಎನ್ನುವುದು ಕೂಡ ಒಂದು ದೊಡ್ಡ ಸಾಹಸ. ಇದು ವರೆಗೆ ದಿವಾನರಿಗೆ ತನ್ನ ಬಗ್ಗೆ ಯಾವ ಸಂಶಯವೂ ಉಂಟಾಗಿಲ್ಲ.

ಉಳಿದ ಕೆಲವು ಅಧಿಕಾರಿಗಳನ್ನು ಕುರಿತು ಕೇಶವ ಪಿಳ್ಳೆ ಆಲೋಚಿಸಿದರು. ದಿವಾನರಿಗೆ ಎಷ್ಟೋ ಜನರ ಬಗ್ಗೆ ವಿಶ್ವಾಸವಿಲ್ಲ. ಆಗಾಗ ಎಷ್ಟೋ ಜನರಿಗೆ ಸ್ಥಾನಪಲ್ಲಟವಾಗುತ್ತಿದೆ. ಈ ಸ್ವಲ್ಪ ಕಾಲದಲ್ಲೇ ಪೋಲೀಸ್ ಕಮಿಷನರು ಎಷ್ಟೋ ಜನರಾಗಿ ಹೋದರು. ಎಲ್ಲ ಸಮಯದಲ್ಲೂ ಅವರು ನಂಬಿದ್ದದ್ದು ಒಬ್ಬನೇ ಒಬ್ಬನನ್ನು. ಅದು ತನ್ನನ್ನು ಮಾತ್ರ. ಅದು ಕೇಶವ ಪಿಳ್ಳೆಗೆ ಗೊತ್ತಿತ್ತು.

ಸ್ಟೇಟ್ ಕಾಂಗ್ರೆಸ್ಸಿನ ಕ್ರಾಂತಿಯ ವಿಷಯದಲ್ಲೂ ತಿರುವಾಂಕೂರಿನ ವಿಷಯದಲ್ಲೂ ಮೇಲಿನ ಆಜ್ಞೆಯನ್ನು ಪಾಲಿಸುತ್ತಿದ್ದ ಒಬ್ಬ ಅಧಿಕಾರಿ ಎಂದು ಹೇಳುವುದಕ್ಕಿಂತ ಹೆಚ್ಚಿಗೆ ಮೇಲೆ ಹೋದದ್ದಲ್ಲವೇ ಎಂದು ಕೇಶವ ಪಿಳ್ಳೆಗೆ ಸಂಶಯವುಂಟಾಯಿತು. ಅಷ್ಟೊಂದು ಮುಂದುವರಿದು ಹೋಗಬಾರದಿತ್ತು. ಭವಿಷ್ಯದ ದೀರ್ಘತೆಯನ್ನು ನೋಡುತ್ತ ನಿಂತಿದ್ದರೆ ಸಾಕಾಗಿತ್ತು. ಅದನ್ನು ಒಂದು ಸ್ವಂತ ಕೆಲಸದಂತೆ ಎಣಿಸಿ ಮಾಡಿದ್ದಾಯಿತು. ಮತ್ತಾವ ಅಧಿಕಾರಿಯೂ ಅಲ್ಲಿಯ ವರೆಗೆ ಹೋಗಿಲ್ಲ. ಅವರೆಲ್ಲ ಒಂದು ಹಂತ ದಾಟಿದ ಮೇಲೆ ಉಪಾಯವಾಗಿ ನಿಂತುಬಿಟ್ಟರು. ಆದರೆ ತಾನು ಇಲ್ಲಿಯ ವರೆಗೆ ಏರಿಬಂದದ್ದು ಅದರಿಂದಲೇ ಅಲ್ಲವೇ?

ಒಂದು ಕಾಲದಲ್ಲಿ ಇವಕ್ಕೆಲ್ಲ ಉತ್ತರ ಹೇಳಬೇಕಾಗಿ ಬಂದರೆ ಏನು ಹೇಳುವುದು? ಮೇಲಧಿಕಾರಿಗೆ ಹೊಂದಿಕೊಂಡಂತೆ ಅಂದಿನ ಆಡಳಿತ ಯಂತ್ರದ ಅಂಗವಾಗಿ ತಾನು ಏನು ಹೇಳಿದರೂ ಅದರ ಬೆಲೆ ಹೋಗಬಹುದೇ? ಸ್ವಂತ ಮನಃಸ್ಸಾಕ್ಷಿಯನ್ನೂ ಸಮಾಧಾನವನ್ನೂ ಒಪ್ಪಿಕೊಳ್ಳಲು ಸಾಧ್ಯವಿಲ್ಲವೆಂದು ಕೇಶವ ಪಿಳ್ಳೆಗೆ ತೋರಿತು. ಮತ್ತೇನು ಮಾಡಬೇಕು?

ಮಲಗುವ ಕೋಣೆಯಿಂದ ಕಾತ್ಯಾಯಿನಿಯಮ್ಮ ಅಲ್ಲಿಗೆ ಬಂದಳು.

"ಎಷ್ಟು ಹೊತ್ತಾಯ್ತು? ಮಲಗೋದಿಲ್ಲವಾ?"

ಕೇಶವ ಪಿಳ್ಳೆ ಹೇಳಿದರು: "ತುಂಬ ಕೆಲಸ ಇತ್ತು."

ಕೇಶವ ಪಿಳ್ಳೆಯ ಹತ್ತಿರ ಬಂದು ಒಂದು ಕುರ್ಚಿಯಲ್ಲಿ ಕುಳಿತುಕೊಂಡು ಕಾತ್ಯಾಯಿನಿಯಮ್ಮ ಆಕರ್ಷಕವಾಗಿ ನಗುತ್ತ ಹೇಳಿದಳು: "ಯಾವ ಕೆಲಸನೂ ಮಾಡಿಲ್ಲ. ನಾನು ನೋಡ್ತಾ ಇದ್ದೆ. ತುಂಬ ಹೊತ್ತಿನಿಂದ ಏನೋ ಆಲೋಚನೆ ಮಾಡಿಕೊಂಡಿದ್ದಿರಿ. ಥಟ್ಟನೆ ಎದ್ದು ಹೆದರಿಕೊಂಡು ನೋಡ್ತಿದ್ದಿರಿ. ಆ ಮೇಲೆ ಹಿಂದಕ್ಕೆ ಕೈಕಟ್ಟಿಕೊಂಡು ಅತ್ತ ಇತ್ತ ನಡೆದಾಡ್ತಿದ್ದಿರಿ. ಅದು ನೀವು ಮಾಡ್ತಿದ್ದದ್ದು."

ಕೇಶವ ಪಿಳ್ಳೆ ಕೇಳಿದರು: "ಹಾಗಾದರೆ ನೀನೂ ಮಲಗಿಲ್ಲವಾ?"

"ಇಲ್ಲ. ನನಗೆ ನಿದ್ದೆ ಬರಲಿಲ್ಲ. ನನಗೆ ಭಯ. ಜೊತೆಗೆ ತಲೆಯಲ್ಲಿ ಏನೇನೋ ಆಲೋಚನೆ."

"ನೇಣು ಹಾಕ್ತಾರೆ ಅಂತಲಾ?"

"ಹ್ಞು! ನನಗೆ ಹೆದರಿಕೆ" ಎಂದು ಹೇಳಿ ಕಾತ್ಯಾಯಿನಿಯಮ್ಮ ಹೇಳಿದಳು: "ಭಯ ನನಗೆ ಮಾತ್ರ ಅಲ್ಲ, ನೀವು ನಾಲ್ಕು ಕಡೆಗೂ ನೋಡಿದ್ದನ್ನು ಕಂಡು ಹೆದರಿಕೊಂಡೆ."

"ಇಲ್ಲಿ ಒಳ್ಳೆ ಪೋಲೀಸ್ ಬಂದೋಬಸ್ತುಂಟಲ್ಲ. ಯಾಕೆ ಹೆದರಿಕೊಳ್ಳಬೇಕು?" ಕೂಡಲೇ ಕಾತ್ಯಾಯಿನಿಯಮ್ಮ ಹೇಳಿದಳು: "ಈ ಪೋಲೀಸಿನವರೊಳಗೂ ಕಾಂಗ್ರೆಸ್ಸಿನವರಿಲ್ಲವಾ?"

ಅದಕ್ಕೆ ಕೇಶವ ಪಿಳ್ಳೆಗೆ ಕೂಡಲೆ ಉತ್ತರಿಸಲಾಗಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಹೇಳಿದರು: "ಅವರು ಹಾಗೆ ಮಾಡೋದಿಲ್ಲ."

ಕಾತ್ಯಾಯಿನಿಯಮ್ಮನಿಗೆ ಆ ಊರನ್ನು ಬಿಟ್ಟುಹೋದರೆ ಸಾಕಾಗಿತ್ತು.

"ಹಾಗಾದರೆ ನೀನು ಊರಿಗೆ ಹೋಗು."

"ಅದು ಆಗೋದಿಲ್ಲ. ನಾವೆಲ್ಲ ಒಟ್ಟಿಗೆ ಹೋಗೋಣ."

ಅದು ಸಾಧ್ಯವಿಲ್ಲವೆಂದು ಕೇಶವ ಪಿಳ್ಳೆ ತಲೆಯಲ್ಲಾಡಿಸಿದರು. "ಈ ಸ್ಥಾನದಲ್ಲಿದ್ದರೆ ಮಾತ್ರ ಇಂದಲ್ಲ ನಾಳೆ ಭವಿಷ್ಯದಲ್ಲಿ ಕ್ಷೇಮವುಂಟಾದೀತು."

ಕೇಶವ ಪಿಳ್ಳೆ ಕೇಳಿದರು: "ನಾವು ಊರಿಗೆ ಹೋದರೆ ನಮಗೆ ಈ ಬಂದುಬಸ್ತು ಸಿಕ್ಕುತ್ತಾ? ಭವಿಷ್ಯತ್ತಿನ ವಿಷಯವೇ ಆಗಿದ್ದರೂ ಇಲ್ಲಿದ್ದರೇ ಕ್ಷೇಮ."

ಊರಿಗೆ ಹೋದರೆ ಜನರ ಹಗೆತನವನ್ನೆಲ್ಲಾ ನಾಲ್ಕಾರು ದಿನಗಳು ಕಳೆಯುವಷ್ಟರಲ್ಲಿ ಹೋಗಲಾಡಿಸಿಕೊಳ್ಳಬಹುದು. ಅವರು ಎಲ್ಲವನ್ನೂ ಮರೆಯುತ್ತಾರೆ ಎಂದು ಕಾತ್ಯಾಯಿನಿಯಮ್ಮ ಹೇಳುತ್ತಿದ್ದದ್ದು.

"ಪಾಪ! ಒಳ್ಳೆಯ ಜನರು. ಹೆಂಗಸರು ಗಂಡಸರು ಎಲ್ಲರೂ. ಈ ತಿರುವನಂತಪುರದಲ್ಲಿ ವೇಷ ಹಾಕಿಕೊಂಡು ತಿರುಗಾಡುವ ಕಪಟಿಗಳ ಹಾಗೇನು? ಇವರಲ್ಲಿ ಒಬ್ಬರನ್ನೂ ನಂಬಬಾರದು."

ಕೇಶವ ಪಿಳ್ಳೆ ಅದನ್ನು ಒಪ್ಪಿದರು. ಆದರೆ ಅವರಿಗೆ ಒಂದು ಭಿನ್ನಾಭಿಪ್ರಾಯ

ಪಿತ್ತು: "ನಿನ್ನನ್ನ ಕಂಡರೆ ಅವರಿಗೆ ಇಷ್ಟವಿರಬಹುದು. ನನ್ನನ್ನು ಕಂಡರೆ ಇಷ್ಟವಿಲ್ಲ."

ಆ ಮಾತನ್ನು ಕಾತ್ಯಾಯಿನಿಯಮ್ಮ ವಿರೋಧಿಸಿದಳು: "ಮತ್ತೇ. ಇಲ್ಲಿ ಕೇಳಿ. ನನ್ನನ್ನು ಕಂಡರೆ ಆಗುವ ಜನರಿಗೆ ನಮ್ಮವರನ್ನು ಕಂಡರೂ ಆಗೇ ಆಗುತ್ತೆ. ನೀವು ಅಲ್ಲಿಗೆ ಒಂದು ವಾಸ ಮಾಡಿ ನೋಡಿ."

ನಗುತ್ತಾ ಕೇಶವ ಪಿಳ್ಳೆ ಹೇಳಿದರು: "ಹಾಗಾದರೆ ನಾನು ನನ್ನ ಹೆಂಡತಿಯಿಂದ ಸಂರಕ್ಷಣೆ ಪಡೆಯಬೇಕು ಅನ್ನು."

ತೀಕ್ಷ್ಣವಾದ ಉತ್ತರ ಕಾತ್ಯಾಯಿನಿಯಮ್ಮನಿಂದ ಬಂದದ್ದು: "ಯಾರಿಗೂ ಯಾವ ಕೇಡನ್ನೂ ಮಾಡದೆ ಒಳ್ಳೆಯವರಾಗಿ ಬಾಳಿದರೆ ಹಾಗೇನೇ."

ಕೇಶವ ಪಿಳ್ಳೆ ನಕ್ಕರು. ಕಾತ್ಯಾಯಿನಿಯಮ್ಮ ನಗಲಿಲ್ಲ.

ಸ್ವಲ್ಪ ಹೊತ್ತಿನ ವರೆಗೆ ಇಬ್ಬರೂ ಮೌನವಾಗಿದ್ದರು. ಬಹುಶಃ ಕೇಶವ ಪಿಳ್ಳೆ ಹೆಂಡತಿ ಹೇಳಿದ ಮಾತಿನ ಸತ್ಯವನ್ನು ಕುರಿತು ಆಲೋಚಿಸುತ್ತಿದ್ದುದಾಗಿರಬಹುದು. ಅದು ಯಥಾರ್ಥ ಸತ್ಯವಲ್ಲವೆ? ಕೇಶವ ಪಿಳ್ಳೆಯ ಅಂತರ್‌ನಯನಗಳೆದುರಿಗೆ ಅವರ ತಂದೆ ಮಿಂಚಿನಂತೆ ಹೊಳೆದರು. ಕಾತ್ಯಾಯಿನಿಯಮ್ಮ ಹೇಳಿದ ಸತ್ಯಕ್ಕೆ ಒಂದು ಅಪವಾದ ವಲ್ಲವೇ ತಂದೆಯ ಅಂತ್ಯ? ಯಾರಿಗೂ ಯಾವ ಕೇಡನ್ನೂ ಮಾಡದೆ ಎಲ್ಲರಿಗೂ ಬೇಕಾಗಿ ಆ ಕುಟ್ಟನಾಡಿನ ವೃದ್ಧ ಜೀವಿಸಿದ್ದದ್ದು. ಆದರೆ ಆ ವೃದ್ಧನ ಅಂತ್ಯ ಹೇಗಾ ಯಿತು? ಕೇಶವ ಪಿಳ್ಳೆಗೆ ಆ ಪ್ರಶ್ನೆಯನ್ನು ಕಾತ್ಯಾಯಿನಿಯಮ್ಮನ ಹತ್ತಿರ ಹೇಳಬೇಕು ಎನ್ನಿಸಿತು. ಆದರೆ ಆ ಪ್ರಶ್ನೆ ಹೊರಗೆ ಬರಲಿಲ್ಲ. ಏಕೆಂದರೆ ಅದಕ್ಕೆ ದೊರೆಯುತ್ತಿದ್ದ ಉತ್ತರವೂ ತೀಕ್ಷ್ಣವಾಗಿರುತ್ತಿತ್ತು. ಇಂತಹ ಒಬ್ಬ ಮಗ ಹುಟ್ಟಿದ್ದರಿಂದ ಆ ವೃದ್ಧನಿಗೆ ಅಂತಹ ಒಂದು ಆಪತ್ತು ಸಂಭವಿಸಿತು. ಇಲ್ಲದೇ ಇದ್ದಿದ್ದರೆ ಹಾಗಾಗುತ್ತಿರಲಿಲ್ಲ. ಈ ಮಗ ಇಲ್ಲದೇ ಇದ್ದಿದ್ದರೆ ಆ ಮುಕುಂದ ಆ ವೃದ್ಧನನ್ನು ಇರಿದು ಕೊಲ್ಲುತ್ತಿದ್ದನೆ?

ಬೆಂಕಿಯ ಕೆಂಡ ಸುರಿದ ಹಾಗಾಗಿ ಕೇಶವ ಪಿಳ್ಳೆಯ ಅಂತರಂಗ ಬೆಂದಿತು. ಆ ಸ್ಥಿತಿ ಯಲ್ಲಿ ತಂದೆಯ ಮರಣವನ್ನು ಕುರಿತು ಚಿಂತಿಸಿಲ್ಲ. ಜೀವನದ ಒಟ್ಟು ಮೌಲ್ಯವನ್ನು ಕುರಿತು ಚಿಂತಿಸುತ್ತಿದ್ದ ಆ ರಾತ್ರಿಯಲ್ಲಿ ಆಲೋಚಿಸಬೇಕಾದ ಆ ವಿಷಯವೂ ಅವರ ಆಲೋಚನಾ ವಲಯದಲ್ಲಿ ಮಿಂಚಿನ ಹಾಗೆ ನುಗ್ಗಿತ್ತು. ಆದರೆ ಆ ವಿಷಯದಲ್ಲಿ ತಾನು ಅಪರಾಧಿಯೇ ಎಂದು ಕೇಶವ ಪಿಳ್ಳೆ ಆಲೋಚಿಸಿದರು. ಗೋಪಾಲನ್ ನಾಯರನ್ನು ಯಾವ ರೀತಿಯಲ್ಲೂ ವಂಚಿಸಿರಲಿಲ್ಲ. ಆದರೂ ತಪ್ಪಿತಸ್ಥನ ನೆಲೆಯಿಂದ ದೂರ ಸರಿದು ನಿಲ್ಲಲು ತನಗೆ ಸಾಧ್ಯವಿಲ್ಲ ಎನ್ನಿಸಿತು.

ಕಾತ್ಯಾಯಿನಿಯಮ್ಮನ ಒಂದು ಪ್ರಶ್ನೆ ಆ ನಿಶ್ಶಬ್ದತೆಯನ್ನು ಭೇದಿಸಿತು.

"ಈ ಸ್ವತಂತ್ರ ತಿರುವಾಂಕೂರು ಅನ್ನೋದೇನು? ಮಹಾ ರಾಜರು ಇರೋದು ಬೇಡ ಅಂತಲಾ?"

ಅದೇನು ಎನ್ನುವುದನ್ನು ಅರ್ಥವಾಗುವಂತೆ ತಿಳಿಸಿಕೊಡಲು ಕೇಶವ ಪಿಳ್ಳೆಗೆ

ತಿಳಿಯಿದು. ಹೇಗೋ ಕಾತ್ಯಾಯಿನಿಯಮ್ಮನಿಗೆ ಅರ್ಥವಾಗುವ ರೀತಿಯಲ್ಲಿ ಅದನ್ನು ವಿವರಿಸಿ ತಿಳಿಸಿಕೊಟ್ಟರು. ತುಂಬ ಶ್ರದ್ಧೆಯಿಂದ ಅವಳು ಅದನ್ನು ಕೇಳಿಸಿಕೊಂಡಳು. ಅವಳಿಗೆ ಅರ್ಥವಾಯಿತು. ಅವಳು ಕೇಳಿದಳು: "ಹಾಗಾದರೆ ನಾವು ತಿರುವಾಂಕೂರನ್ನು ಬೇರೆಯಾಗಿ ಆಳಬೇಕು ಅಂತ ಅಲ್ಲವೇ?"

"ಹೌದು."

"ಹಾಗಾದರೆ ಕೊಚ್ಚಿಗೂ ಗುರುವಾಯೂರಿಗೂ ನಾವು ಹೋಗೋ ಹಾಗಿಲ್ಲ."

"ಅದನ್ನೆಲ್ಲ ಆ ಮೇಲೆ ಪಕ್ಕದ ರಾಜ್ಯಗಳ ಜೊತೆ ನಾವು ಮಾಡುವ ಕರಾರಿಗೆ ಅನುಸರಿಸಿಕೊಂಡು ಮಾಡಬೇಕು."

"ಕಾಶಿ ರಾಮೇಶ್ವರಕ್ಕೊ?"

"ಅದೂ ಹಾಗೆಯೇ."

"ಅಯ್ಯೋ ದೇವರೇ! ಅದೆಂಥ ಏರ್ಪಾಟು? ನಾವು ಗುರುವಾಯೂರಿಗೂ ಕಾಶಿಗೂ ಹೋಗಬಾರದು ಅನ್ನೋದು? ಅದೀಗ ಕಷ್ಟ. ಮಾವನೂ ಕಿಟ್ಟುಮಾವನೂ ಯಾವಾಗಲೂ ಹೇಳ್ತಿದ್ದರು: 'ಕಲಿ ಅವತಾರ ಮಾಡಿದ್ದಾನೆ. ಅದಕ್ಕೇ ಇಷ್ಟೆಲ್ಲ ಗಲಭೆ ನಡೀತಿದೆ!' ಭಾಗವತ ಓದಿ, ಅದರಲ್ಲಿ ಹೇಳಿದ್ದ ಕಲಿಗಾಲದ ವಿಷಯನೆಲ್ಲ ಹೇಳ್ತಿದ್ದರು. ಹೀಗೆಲ್ಲ ಆಗೋದಾದರೆ ನಮಗೆ ಸ್ವತಂತ್ರ ತಿರುವಾಂಕೂರು ಬೇಡ. ಕಾಂಗ್ರೆಸ್ಸಿನವರು ಹೇಳೋದೇ ಸರಿ."

"ಸುಮ್ಮನಿರು" ಎಂದು ಕೇಶವ ಪಿಳ್ಳೆ ಕೈಸನ್ನೆ ಮಾಡಿದರು. ತಗ್ಗಿದ ಸ್ವರದಲ್ಲಿ ಕಾತ್ಯಾಯಿನಿಯಮ್ಮ ಹೇಳಿದಳು: "ಮಗಳೂ ಹೀಗೆ ಅನ್ನಾಳೆ. ತಂದೆ ಮಾತ್ರ ಸ್ವತಂತ್ರ ತಿರುವಾಂಕೂರು ಅನ್ನೋದು."

ಕೇಶವ ಪಿಳ್ಳೆ ತಲೆ ಚಚ್ಚಿಕೊಂಡರು. ಗ್ರಹಚಾರ, ಗ್ರಹಚಾರ! ಎಂದು ಕೈಸನ್ನೆ ಮಾಡಿದರು.

ಕಾತ್ಯಾಯಿನಿಯಮ್ಮ ಕೇಳಿದಳು: "ಏನು?"

ಕೇಶವ ಪಿಳ್ಳೆ ಹೇಳಿದರು: "ಯಾಕೆ ನಾನು ಈ ನಾಟಕ ಎಲ್ಲ ಆಡಿದೆ?"

"ಯಾಕೆ?"

"ನಿಮಗೋಸ್ಕರ ಅಲ್ಲದೆ ಬೇರೆ ಯಾರಿಗೆ?"

ಅದರಲ್ಲಿ ಕಾತ್ಯಾಯಿನಿಯಮ್ಮನಿಗೆ ಸಂಶಯವಿಲ್ಲ. ಮತ್ತಾರಿಗಾಗಿಯೂ ಅಲ್ಲ. ಚಿಂತಾಮಗ್ನಳಾಗಿದ್ದ ಆ ಸ್ತ್ರೀಯ ಹೃದಯ ಅನುಕಂಪದಿಂದ ಕೂಡಿತು. ಎದುರಿಗಿರುವ ಮನುಷ್ಯ ಏನೆಲ್ಲ ಮಾಡಿದನೋ ಅದರ ಪ್ರಯೋಜನವೆಲ್ಲ ದೊರೆಯುವುದು ಆಕೆಗೂ ಅವಳ ಮಗಳಿಗೂ. ಕಣ್ಣಿನಲ್ಲಿ ನೀರು ತಂದುಕೊಂಡು ತುಂಬಿದ ಪ್ರೀತಿಯಿಂದ ಕೇಶವ ಪಿಳ್ಳೆಯ ಹತ್ತಿರ ಹೋಗಿ ನಿಂತುಕೊಂಡು ಗಲ್ಲವನ್ನು ಹಿಡಿದು ಮುಖವನ್ನು ಮೇಲೆತ್ತಿ ಕಾತ್ಯಾಯಿನಿಯಮ್ಮ ಹೇಳಿದಳು: "ಇದು ಯಾವುದೂ ಇಲ್ಲದೇ ಹೋದರೂ ನನಗೇನು

ನಷ್ಟ? ನನಗೆ ಬೇಡ. ನನಗೆ ಒಂದು ಪಾವು ಅಕ್ಕಿ ಕೊಟ್ಟರೆ ಅದನ್ನು ಬೇಯಿಸಿ ಆ ಗಂಜಿ ನೀರು ಕುಡಿತೀನಿ. ಅದೇ ಸುಖ ನನಗೆ. ಆಗಲೂ ನಾನು ಸಮಾಧಾನವಾಗಿರ್ತೀನಿ. ಒಟ್ಟಿಗೆ ಉಪವಾಸ ಮಾಡೋದಾದರೂ ಸರಿಯೆ. ನನಗೆ ಐಶ್ವರ್ಯ ಅಲ್ಲ ಬೇಕಾದದ್ದು. ನನಗೆ ಇದು ಬೇಕು, ನನಗೆ ಅದು ಬೇಕು ಎಂದು ಹೇಳಿ ಏನಾದರೂ ನಿಮ್ಮನ್ನು ಕಾಡಿಸಿದ್ದುಂಟಾ? ಅಲ್ಲದೆ ಭೂಮಿ. ಸಂಪತ್ತು ಎಲ್ಲ ದೊರೆಯುತ್ತೆ. ಇಲ್ಲಿ ಬಂದು ಜೀವಿಸಬೇಕು ಅಂತ ಭಾವಿಸಿ ಅಲ್ಲ ನಾನು ತಾಳಿ ಕಟ್ಟುವಾಗ ಕತ್ತು ಒಡ್ಡಿದ್ದು. ಇದೆಲ್ಲ ಕೈಬಿಟ್ಟು ಹೋದರೂ ನನಗೆ ಯಾವ ಬೇಸರವೂ ಇಲ್ಲ. ನನಗೆ ನನ್ನ ದೇವರಿದ್ದರೆ ಸಾಕು. ಅದು ಮಾತ್ರ ನನಗೆ ಬೇಕಾದದ್ದು."

ಒಂದು ಮಗು. ತಾಯಿ ಹೇಳುವುದನ್ನು ಕೇಳಿಸಿಕೊಳ್ಳುವಂತೆ ಕೇಶವ ಪಿಳ್ಳೆ ಕೇಳಿಸಿಕೊಳ್ಳುತ್ತ ಕುಳಿತಿದ್ದರು. ಆ ತಾಯಿ ಹೇಳಿದಳು:

"ಇದೆಲ್ಲ ಹೋಗಲಿ. ನಮಗೆ ಇದು ಯಾವುದೂ ಬೇಡ. ಸಂತೋಷವಾಗಿ ಕಾಲ ಕಳೆದರೆ ಸಾಕು."

ಕೇಶವ ಪಿಳ್ಳೆಯ ಕೈ ಕಾತ್ಯಾಯಿನಿಯಮ್ಮನ ಕೊರಳನ್ನು ಬಳಸಿತು. ಅವರ ಮುಖ ಬಾಗಿತು. ಆ ಎರಡು ಮುಖಗಳೂ ಪರಸ್ಪರ ಕೂಡಿದುವು.

ಎಷ್ಟು ಹೊತ್ತು ಹಾಗೆ ಅವರಿದ್ದರು ಎಂದು ತಿಳಿಯದು. ಆ ಸ್ಥಿತಿಯಲ್ಲಿ ಕೇಶವ ಪಿಳ್ಳೆ ಸಕಲ ಕ್ಲೇಶಗಳನ್ನೂ ಮರೆತರು.

ಕಾತ್ಯಾಯಿನಿಯಮ್ಮ ಗಂಡನ ಕಿವಿಯಲ್ಲಿ ಹೇಳಿದಳು: "ಎಷ್ಟು ಹೊತ್ತಾಗಿ ಹೋಯ್ತು. ಇವತ್ತು ಮಲಗಿಯೇ ಇಲ್ಲವಲ್ಲ."

ಸಣ್ಣ ಮಗುವಿನಂತೆ ಅವರು ಒಪ್ಪಿಕೊಂಡರು. ಹೌದು! ಅದು ಮಗುವಿನಂತಹ ಮಾತುಕತೆಯಾಗಿತ್ತು.

"ನನಗೆ ನಿದ್ದೆ ಬರ್ತಿಲ್ಲ. ನಿದ್ದೆ ಬರೋದಿಲ್ಲ."

"ನಾವು ಹೋಗಿ ಮಲಗೋಣ. ನಾನು ಮಲಗಿಸ್ತೀನಿ."

ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯನ್ನು ಹಿಡಿದು ಎಬ್ಬಿಸಿದಳು. ಕೇಶವ ಪಿಳ್ಳೆ ಹೇಳಿದರು: "ಎಲ್ಲವನ್ನೂ. ಎಲ್ಲವನ್ನೂ ನನ್ನ ಚಿನ್ನದ ಹತ್ತಿರ ಹೇಳಬೇಕು ಅನಿಸುತ್ತೆ."

"ಮತ್ತೆ ಯಾಕೆ ಹೇಳದೇ ಹೋದಿರಿ? ನನ್ನ ಹತ್ರ ಅಲ್ಲದೆ ಯಾರ ಹತ್ರ ಹೇಳಬೇಕು?"

ಕೇಶವ ಪಿಳ್ಳೆ ಒಪ್ಪಿದರು: "ನಿನ್ನ ಹತ್ರ ಮಾತ್ರ. ನಿನ್ನ ಹತ್ರ ಅಲ್ಲದೆ ಬೇರೆ ಯಾರ ಹತ್ರವೂ ಅಲ್ಲ."

"ಮತ್ತೆ ಯಾಕೆ?"

"ನಿನಗೆ ಹೆದರಿಕೆಯಾಗುತ್ತೆ."

"ನನಗೆ ಹೆದರಿಕೆಯಾಗೋದಿಲ್ಲ."

"ನನಗೆ ಇರೋದು ಬರೀ ಶತ್ರುಗಳು."

"ಓ ! ಅದು ಚಿಂತೆಯಿಲ್ಲ."

ಆ ಭರವಸೆಯು ತಂಪಿನಲ್ಲಿ ಗಿಳಿಯ ಹಾಗೆ ಕೇಶವ ಪಿಳ್ಳೆ ಹೇಳಿದರು: "ಇದೆಲ್ಲ ಹೀಗಾಗುತ್ತೆ ಅಂತ ನಾನು ಭಾವಿಸಿರಲಿಲ್ಲ."

ಗಂಡನ ಅಭಿಪ್ರಾಯ ಯಾವುದು ಎಂದು ತಿಳಿಯದೆ ಕಾತ್ಯಾಯಿನಿಯಮ್ಮ ಹೇಳಿದಳು: "ಓ ! ಯಾವ ಕೇಡೂ ನಮಗೆ ಬರೋದಿಲ್ಲ. ಏನೇನೋ ನೆನಸಿಕೊಂಡು ಮನಸ್ಸನ್ನ ಘಾಸಿಮಾಡಿಕೊಳ್ಳಬೇಡಿ."

ಕೇಶವ ಪಿಳ್ಳೆ ತಮಗುಂಟಾದ ವಡ್ಡತನವನ್ನು ಕುರಿತು ಹೇಳುತ್ತಿರುವುದು:

"ನಾನೂ ತಿರುಮುಂಬಿನಲ್ಲಿ ಸೇವೆ ಮಾಡಿ ನೋಡಿಕೊಂಡಿದ್ದರೆ ಸಾಕಾಗಿತ್ತು. ಹಾಗೆ ಮಾಡದೆ ಸ್ವಾರ್ಥಕ್ಕಾಗಿ ಕೆಲಸ ಮಾಡಿದೆ. ತಪ್ಪಾಗಿ ಹೋಯಿತು."

"ಏನೂ ತಪ್ಪಾಗಲಿಲ್ಲ. ಬಂದು ಮಲಗಿಕೊಳ್ಳಿ."

ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯನ್ನು ಮಲ್ಲಿಗೆ ಹೂ ಹರಡಿದ್ದ ಹಾಸಿಗೆಯ ಮೇಲೆ ಕರೆದುಕೊಂಡು ಹೋಗಿ ಮಲಗಿಸಿದಳು.

ತಾಯಿಯ ತೋಳಿನ ಮೇಲೆ ಮಲಗುವ ಮಗುವಿನ ಹಾಗೆ ಕಾತ್ಯಾಯಿನಿಯಮ್ಮನ ತೋಳಿನ ಮೇಲೆ ಕೇಶವ ಪಿಳ್ಳೆ ಮಲಗಿದರು. ಕಾತ್ಯಾಯಿನಿಯಮ್ಮನ ಬೆರಳುಗಳು ಮೃದುವಾಗಿ ಮೈಮೇಲೆ ಚಲಿಸುತ್ತಿದ್ದುವು. ಆ ರೀತಿಯಲ್ಲಿ ಎಷ್ಟೋ ವರ್ಷಗಳ ಹಿಂದೆ ತಾಯಿಯ ತೋಳಿನ ಮೇಲೆ ಅವರು ಮಲಗಿದ್ದುದುಂಟು. ಸ್ವಲ್ಪ ಹೊತ್ತು ಕಳೆದು ಕಾತ್ಯಾಯಿನಿಯಮ್ಮ ಎದ್ದು ನೋಡಿದಳು. ಕೇಶವ ಪಿಳ್ಳೆ ನಿದ್ದೆ ಮಾಡುತ್ತಿದ್ದರು. ಅವರ ಮುಖದಲ್ಲಿ ಪ್ರಸನ್ನತೆಯೂ ಕೃತಕೃತ್ಯತೆಯೂ ಲಾಸ್ಯವಾಡುತ್ತಿತ್ತು. ಕಾತ್ಯಾಯಿನಿಯಮ್ಮ ಚಿಂತಾಕ್ರಾಂತನಾಗಿದ್ದ ಗಂಡನನ್ನು ಮಲಗಿಸಿದಳು.

ಕೇಶವ ಪಿಳ್ಳೆ ನಿದ್ದೆಯಲ್ಲಿ ಏನೋ ಹೇಳಿದರು. ಪುನಃ ಕಾತ್ಯಾಯಿನಿಯಮ್ಮ ಎಚ್ಚರಗೊಂಡ ಮಗುವನ್ನು ತಟ್ಟಿ ಮಲಗಿಸುವಂತೆ ಕೇಶವ ಪಿಳ್ಳೆಯನ್ನು ತಟ್ಟಿ ಮಲಗಿಸಿದಳು. ಅವರು ಮಲಗಿದರು.

ಕೇಶವ ಪಿಳ್ಳೆಗೆ ಹೊದಿಸಿ ಕಾತ್ಯಾಯಿನಿಯಮ್ಮ ಮಲಗುವ ಕೋಣೆಯ ಮ್ಲಾನ ಮಂದಪ್ರಕಾಶದಲ್ಲಿ ಸುಖನಿದ್ರೆ ಮಾಡುತ್ತಿದ್ದ ಗಂಡನ ಮುಖವನ್ನು ನೋಡಿ ಸಮಾಧಾನಗೊಂಡಳು.

## ಆಶ್ರಮ

ಧನ್ಯಾನಂದಾಶ್ರಮದ ಮತ್ತು ಅನಾಥ ಮಂದಿರದ ಉದ್ಘಾಟನೆಯ ದಿನ ಸಮೀಪಿಸುತ್ತಿತ್ತು. ಪತ್ರಿಕೆಗಳಲ್ಲೆಲ್ಲ ಧನ್ಯಾನಂದ ಸ್ವಾಮೀಜಿ ಅವರ ಅದ್ಭುತ ಸಿದ್ಧಿಗಳನ್ನು ಕುರಿತು ಲೇಖನಮಾಲೆಗಳು ಹೊರಬಂದುವು. ಆಶ್ರಮದ ಮತ್ತು ಮಂದಿರದ ಕಾರ್ಯ ಚಟುವಟಿಕೆಗಳನ್ನು ಕುರಿತ ಸ್ಥೂಲ ವಿವರಗಳನ್ನೂ ಪತ್ರಿಕೆಗಳು ಪ್ರಕಟಿಸಿದ್ದುವು. ಉದ್ಘಾಟನೆಯನ್ನು ತುಂಬ ವಿಜೃಂಭಣೆಯಿಂದ ನಡೆಸಬೇಕೆಂದು ತೀರ್ಮಾನಿಸಲಾಗಿತ್ತು. ತಂಗಮ್ಮನೂ ಸೇರಿದಂತೆ ಮೂವರು ಸ್ತ್ರೀಯರೂ ನಾಲ್ಕು ಮಂದಿ ಪುರುಷರೂ ಅಂದು ಶ್ರೀ ಸ್ವಾಮೀಜಿ ಅವರ ದಿವ್ಯ ಹಸ್ತದಿಂದ ಕಾವಿಯನ್ನು ಸ್ವೀಕರಿಸಿ ಸನ್ಯಾಸವನ್ನು ಪಡೆಯಲು ತೀರ್ಮಾನಿಸಿದ್ದರು. ಸ್ವಾಮೀಜೀ ಅವರು ಬಂದ ನಂತರವೇ ಅದು ತೀರ್ಮಾನವಾಗುವುದು.

ಆಶ್ರಮ ಮತ್ತು ಅನಾಥ ವನಿತಾಸದನಕ್ಕೆ ಸಂಬಂಧಿಸಿದ ಧನಸಂಗ್ರಹ ಕಾರ್ಯ ಪ್ರಾರಂಭವಾಯಿತು. ತಿರುವನಂತಪುರದ ದೊಡ್ಡ ಹಿಂದೂ ಉದ್ಯೋಗಸ್ಥರ ಪತ್ನಿಯರೂ ಹೆಣ್ಣುಮಕ್ಕಳೂ ರಾಜಕೀಯ ಮುಂದಾಳುಗಳ ಪತ್ನಿಯರೂ ಗುಂಪುಗುಂಪಾಗಿ ಮನೆಮನೆಗೆ ಹೋಗಿ ಸಂಭಾವನೆಯನ್ನು ಸಂಗ್ರಹಿಸುತ್ತಿದ್ದರು. ಎಲ್ಲರ ಪತ್ನಿಯರೂ ಒಟ್ಟಿಗೆ ಒಂದು ಕಡೆ ಕಲೆಯಬಹುದಾದ ಒಂದು ಮಂಡಲ. ಹೀಗೆ ಜನ್ಮತಾಳಿತು. ಅದೊಂದು ಒಳ್ಳೆಯ ಕಾರ್ಯ. ಪೋಲೀಸ್ ಕಮೀಷನರ ಪತ್ನಿಯೂ ಸ್ಟೇಟ್ ಕಾಂಗ್ರೆಸಿನ ಪ್ರಮುಖ ಮುಂದಾಳಿನ ಸಹಧರ್ಮಿಣಿಯೂ ಒಟ್ಟಿಗೆ ಜನಸೇವೆಯ ಕಾರ್ಯಕ್ಕಾಗಿ ಹೊರಟಿದ್ದರು. ಅದೊಂದು ಒಳ್ಳೆಯ ಕೆಲಸವೆಂದು ಸದ್ಭಾವನೆಯುಳ್ಳ ಜನ ಭಾವಿಸಿದರು.

ತಂಗಮ್ಮನ ಮನೆಯೇ ಆಶ್ರಮವಾಗಿ ಮಾರ್ಪಾಡುಹೊಂದಲಿದ್ದದ್ದು. ಕಮಿಟಿಯ ಆಫೀಸು ಕೂಡ ತಾತ್ಕಾಲಿಕವಾಗಿ ಅಲ್ಲಿಯೇ ಇತ್ತು. ಪ್ರತಿ ದಿನ ಹಣ ಸಂಗ್ರಹಕ್ಕಾಗಿ ಹೊರಟ ಮಹಿಳೆಯರು ಆಫೀಸಿಗೆ ಬಂದು ಲೆಕ್ಕ ಒಪ್ಪಿಸಿ ಹೋಗುತ್ತಿದ್ದರು. ಅದು ಪದ್ಧತಿಯಾಗಿತ್ತು.

ಆ ಮಧ್ಯೆ ಒಂದು ದಿನ ಪಾರ್ಕ್ ವ್ಯೂ ಭಾಗಕ್ಕೆ ಹಣಸಂಗ್ರಹಕ್ಕಾಗಿ ಹೊರಟ ಒಂದು ಗುಂಪು ಹಿಂದಿರುಗಿ ಬಂದಾಗ ತಂದದ್ದು ಒಂದು ದೊಡ್ಡ ಸುದ್ದಿಯನ್ನು. ಇಬ್ಬರು ಗೌರ್ನಮೆಂಟ್ ಸೆಕ್ರೆಟರಿಗಳ ಪತ್ನಿಯರೂ ಕಾಂಗ್ರೆಸ್ ಮುಖಂಡನ ಸಹಧರ್ಮಿಣಿಯೂ ಗುಂಪಿನಲ್ಲಿದ್ದದ್ದು. ಬೇರೆಬೇರೆ ಕಡೆಗೆ ಹೋಗಿದ್ದ ಸ್ತ್ರೀಯರ ಗುಂಪುಗಳು ಬಂದು ಆಫೀಸನ್ನು ತಲಪುವ ಮೊದಲೇ ಅವರು ಆಫೀಸಿಗೆ ಬಂದಿದ್ದರು.

ವಿದ್ಯಾಭ್ಯಾಸ ಸೆಕ್ರೆಟರಿಯ ಪತ್ನಿ ವಿಶಾಲಾಕ್ಷಿ ಅಮ್ಮನ ಅಭಿಪ್ರಾಯ ಇನ್ನೂ ಮೂರು ನಾಲ್ಕು ಸ್ಥಳಗಳಿಗೆ ಹೋಗಿ ಬರೋಣ ಎಂದಾಗಿತ್ತು. ರೆವಿನ್ಯೂ ಸೆಕ್ರೆಟರಿಯ ಪತ್ನಿ ಭಾನುಮತಿ ಅಮ್ಮ ಹೇಳಿದರು: "ನನಗೆ ಅಲ್ಲಿಗೆ ಹೋಗಿ ಬಂದ ಮೇಲೆ ಮನಸ್ಸಿಗೆ ಉತ್ಸಾಹವೇ ಇಲ್ಲ. ಎಂಥ ಮಂಕು ಅದು ವಿಶಾಲಾಕ್ಷಿ ಅಮ್ಮ?"

ವಿಶಾಲಾಕ್ಷಿ ಅಮ್ಮ ಹೇಳಿದರು: "ಒಂದು ಹಳ್ಳಿ ಗುಗ್ಗು. ಮನುಷ್ಯರನ್ನೇ ಕಂಡಿಲ್ಲ. ನಡವಳಿಕೆಯೂ ಗೊತ್ತಿಲ್ಲ. ಅದೊಂದು ಕೋಣ."

ಭಾನುಮತಿ ಅಮ್ಮ ಪರಿತಾಪಪಡುತ್ತಿದ್ದರು. "ಆ ಬಂಗಲೆಯಲ್ಲಿ ಯಾರೆಲ್ಲ ವಾಸಮಾಡಿದರು! ಕೃಷ್ಣನ್ ನಾಯರರ ಹೆಂಡತಿ ಭಗವತಿಕುಟ್ಟಿಯಮ್ಮ, ಅನಂತರ ಆ ಅಮ್ಮಾಳ್ ಅಲ್ಲವಾ? ರೈಮಣಿ ಅವರ ಹೆಂಡತಿ......... ಅವರೆಲ್ಲ ಯೋಗ್ಯತೆ ಯಿದ್ದವರಾಗಿದ್ದರು. ಅವರಿಗೆಲ್ಲ ಅಂತಸ್ತು ಅಭಿಮಾನಗಳಿದ್ದುವು. ಮನೆಗೆ ಯಾರು ಬಂದರೂ ಗೌರವಿಸುತ್ತಿದ್ದರು. ಅಲ್ಲಿ ಅಂಥವರು ಇರಬೇಕಾದದ್ದು. ಇದನ್ನು ಎಳೆದು ಕೊಂಡು ಬಂದು ಅಲ್ಲಿ ಕೂಡಿ ಹಾಕಿದ್ದಾರಲ್ಲೋ ಶ್ರೀಪದ್ಮನಾಭಾ!"

ಕಾಂಗ್ರೆಸ್ ಮುಖಂಡನ ಹೆಂಡತಿ ಜಾನಕಿ ಅಮ್ಮನಿಗೆ ಇಂಥ ವಿಷಯಗಳನ್ನು ಕುರಿತು ಮಾತನಾಡುವುದು ಬೇಕಾದಷ್ಟಿತ್ತು. ಆಕೆ ಹೇಳಿದರು: "ಇಲ್ಲದೆ ಇದ್ರೂ ಇಂಥವರೆಲ್ಲ ಹೀಗೇನೇ. ಸ್ತ್ರೀಯರಿಗೆ ಒಂದು ಸಂಸ್ಕೃತಿ, ಗಾಂಭೀರ್ಯ ಯಾವುದೂ ಇಲ್ಲ. ಅವರು ಅಡುಗೆಮನೆಯಿಂದ ಹೊರಗೆ ಬರೋದೇ ಇಲ್ಲ. ಮಾತನಾಡುವುದಕ್ಕಾಗಲೀ ಮನೆಗೆ ಬಂದವರನ್ನ ಉಪಚರಿಸೋದಕ್ಕಾಗಲೀ ತಿಳಿಯದು. ವಿಷಯ ಅಷ್ಟೆ."

ಭಾನುಮತಿಯಮ್ಮ ಕೇಳಿದರು: "ಇಂಥವರೆಲ್ಲ ಯಾಕೆ ಪಾರ್ಕ್ ವ್ಯೂಗೆ ಬಂದಿರ ಬೇಕು? ಅಲ್ಲಿರಬೇಕಾದದ್ದು ಹಾಗಲ್ಲ."

ವಿಶಾಲಾಕ್ಷಿ ಅಮ್ಮ ಅದಕ್ಕೆ ತಮಾಷೆಯಾಗಿ ಹೇಳಿದರು: "ಇದಕ್ಕೆ ನಾವು ಒಂದು ನಿಯಮ ಮಾಡಿಬಿಡೋಣ."

ಭಾನುಮತಿಯಮ್ಮ ಅದನ್ನೊಂದು ತಮಾಷೆಯ ಮಾತು ಎಂದಲ್ಲ ಸ್ವೀಕರಿಸಿ ದುದು, ಹಾಗೆ ಒಂದು ನಿಯಮವನ್ನೇ ಮಾಡಬೇಕೆಂದು ಅಭಿಪ್ರಾಯಪಟ್ಟರು. ಆ ಬಂಗಲೆಯ ಅಂತಸ್ತನ್ನು ಕಾಪಾಡಬೇಕಾದ ನಿಯಮ.

ಅಷ್ಟರಲ್ಲಿ ಕನ್ಸರ್‌ವೇಟರರ ಹೆಂಡತಿಯ ನೇತೃತ್ವದಲ್ಲಿ ಹೋಗಿದ್ದ ಗುಂಪೂ ಮತ್ತೊಬ್ಬ ಸೆಕ್ರೆಟರಿಯ ಪತ್ನಿ ರುಕ್ಮಿಣಿಯಮ್ಮನ ಮುಂದಾಳುತ್ವದಲ್ಲಿ ಹೋಗಿದ್ದ ಗುಂಪೂ ಅಲ್ಲಿಗೆ ಬಂದಿತು. ಕನ್ಸರ್‌ವೇಟರರ ಪತ್ನಿ ಕೇಳಿದರು: "ಯಾಕೆ, ಭಾನುಮತಿ ಯಮ್ಮ ಸಿಟ್ಟಿನಲ್ಲಿರೋ ಹಾಗಿದೆಯಲ್ಲ?"

ರುಕ್ಮಿಣಿಯಮ್ಮ ಹೇಳಿದರು: "ಇವತ್ತು ಕಲೆಕ್ಷನ್ ತೀರ ಕಡಿಮೆ ಅನ್ನೋ ಸಿಟ್ಟಿರ ಬೇಕು. ಶಕುನ ಸರಿಯಿಲ್ಲ ಅಂದುಕೊಂಡೇ ಭಾನುಮತಿಯಮ್ಮ ಹೊರಟದ್ದು."

ಅದು ನಿಜ ಎಂದು ಭಾನುಮತಿಯಮ್ಮ ಹೇಳಿದರು. ಅಂದಿನ ಅನುಭವವೂ ಅದೇ

ಆಗಿತ್ತು.

ಕನ್ಸರ್‌ವೇಟರರ ಪತ್ನಿ ಕೇಳಿದರು: "ಇವತ್ತಿನ ಕಲೆಕ್ಷನ್ ಎಷ್ಟು?"

ಅಷ್ಟೊಂದು ಕಡಿಮೆಯೇನಲ್ಲ ಎಂದು ಜಾನಕಿಯಮ್ಮ ಹೇಳಿದರು.

"ಏನ್ತ್ಯಾಕೆ?"

ರುಕ್ಮಿಣಿಯಮ್ಮ ಕೇಳಿದ್ದು.

ವಿಶಾಲಾಕ್ಷಿಯಮ್ಮ ಆ ಕಥೆಯನ್ನು ವಿವರಿಸತೊಡಗಿದರು: "ರುಕ್ಮಿಣೀ, ನಮಗಿವತ್ತು ಒಂದು ಹೊಸ ಅನುಭವ ಆಯ್ತು."

ಎಲ್ಲರೂ ಕುತೂಹಲದಿಂದ ಕೇಳಿಸಿಕೊಳ್ಳುತ್ತಿದ್ದರು. ವಿಶಾಲಾಕ್ಷಿಯಮ್ಮ ಆ ಕಥೆಯನ್ನು ಹೇಳತೊಡಗಿದರು: "ನಾವು ಇವತ್ತು ಪಾರ್ಕ್ ವ್ಯೂಗೆ ಹೋಗಿದ್ದೆವು. ಅಲ್ಲಿ ಡ್ರಾಯಿಂಗ್ ರೂಮಿನಲ್ಲಿ ಸ್ವಲ್ಪ ಹೊತ್ತು ನಿಂತುಕೊಂಡೆವು. ಒಂದೇ ಒಂದು ತಲೆಯೂ ಕಾಣಿಸಲಿಲ್ಲ. ನಮಗೆ ಸಂಶಯ ಆಯ್ತು. ಬಹುಶಃ ಮನೆಯ ಯಜಮಾನಿ ಇಲ್ಲವೋ ಏನೋ ಅಂದುಕೊಂಡೆವು. ಅಷ್ಟು ಹೊತ್ತಿಗೆ ತೋಟದ ಕೆಲಸದವನು ಬಂದ. ಅವನ ಹತ್ತಿರ ಕೇಳಿದಾಗ ಅಮ್ಮ ಒಳಗಿದ್ದಾರೆ ಅಂದ. ಅವನು ಒಳ್ಳೆ ಚೂಟಿಯಾಗಿದ್ದಾನೆ. ಅವನು ಮತ್ತೂ ಒಂದು ವಿಷಯ ಹೇಳಿದ: ಅಮ್ಮಾವರು ಹಾಗೆಲ್ಲ ಹೊರಗೆ ಬರೋದಿಲ್ಲ. ಆದರೂ ಹೇಳಿ ನೋಡ್ತೀನಿ ಅಂತ ಒಳಕ್ಕೆ ಹೋದ. ನಾವು ಕಾಯ್ತಾ ನಿಂತಿದ್ದೆವು. ಅಷ್ಟರಲ್ಲಿ ಬಂದಳಲ್ಲ ಒಬ್ಬಳು !"

ವಿಶಾಲಾಕ್ಷಿಯಮ್ಮ ಇಷ್ಟು ಹೇಳಿ ನಿಲ್ಲಿಸಿದಾಗ ಭಾನುಮತಿಯಮ್ಮ ಮಧ್ಯೆ ಬಾಯಿ ಹಾಕಿ ಹೇಳಿದರು: "ನಾನು ಅಂದುಕೊಂಡೆ ಇವಳೆಲ್ಲೋ ಇಲ್ಲಿಯ ಅಡುಗೆಯವಳಿರಬೇಕು ಅಂತ."

ವಿಶಾಲಾಕ್ಷಿಯಮ್ಮನಿಗೆ ಅದನ್ನು ವಿವರಿಸುವ ಹಕ್ಕು ತನ್ನದೆಂದು ! ಭಾನುಮತಿಯಮ್ಮನಿಗೆ ಸಿಟ್ಟು ಬಂದಿತು. ಆದ್ದರಿಂದ ಮತ್ತಾರು ಹೇಳಿದರೂ ಸರಿಹೋಗುವುದಿಲ್ಲ. ರುಕ್ಮಿಣಿಯಮ್ಮ ತೀರ್ಪು ಕೊಟ್ಟರು. ವಿಶಾಲಾಕ್ಷಿಯಮ್ಮನೇ ಹೇಳಲಿ ಎಂದು. ಭಾನುಮತಿಯಮ್ಮ ಮನಸ್ಸಿಲ್ಲದ ಮನಸ್ಸಿನಿಂದ ಆ ತೀರ್ಪಿಗೆ ತಲೆಬಾಗಿದರು. ವಿಶಾಲಾಕ್ಷಿಯಮ್ಮ ಪ್ರಾರಂಭಿಸಿದರು: "ನನಗೆ ಅಡಿಗೆಯವಳ ಹಾಗೆ ಕಾಣಿಸಲಿಲ್ಲ. ಅಡಿಗೆಯವಳ ಕತ್ತಿನಲ್ಲಿ, ಕೈಯಲ್ಲಿ, ಮೈಯಲ್ಲಿ ಅಷ್ಟೊಂದು ಚಿನ್ನ ಎಲ್ಲಿ ಬರುತ್ತೆ? ಕಿವಿಯಲ್ಲಿ ದೊಡ್ಡ ಓಲೆ; ಬಳೆ ಅಂತಲೇ ಹೇಳಬಹುದು; ಕೈಗೆ ಚಿನ್ನ ತಟ್ಟಿ ತಟ್ಟಿ ದುಂಡಗೆ ಮಾಡಿ ಹಾಕಿತ್ತು. ಕತ್ತಿನ ತುಂಬ ಚಿನ್ನ. ರುದ್ರಾಕ್ಷಿಯಷ್ಟು ಗಾತ್ರದ ಮುತ್ತಿನ ಮಾಲೆ. ಆ ಮೇಲ ಸರಪಣಿ ಹಾಕಿದ್ದ ಚೈನು, ಒಂದು ಅಷ್ಟು ಗಾತ್ರ ಇದ್ದ ತಾಳಿ. ಅದನ್ನು ಆ ಸರಪಣಿಯಲ್ಲಿ ಹಾಕಿ ಕತ್ತಿನಲ್ಲಿ ತೂಗುಹಾಕಿತ್ತು. ಇಷ್ಟೆಲ್ಲ ಆಭರಣ ಅಡಿಗೆಯವಳಿಗೆಲ್ಲಿಂದ ಬರಬೇಕು?"

ಜಾನಕಿಯಮ್ಮನಿಗೆ ಕೇರಳದ ಉತ್ತರ ಭಾಗದವರ ಆಭರಣವನ್ನು ಕುರಿತು ಹೇಳುವುದಿತ್ತು. ಅವರು ಉತ್ತರ ಭಾಗದಲ್ಲೆಲ್ಲ ಸಂಚರಿಸಿದ್ದರು.

"ಅವರ ಮೈಮೇಲೆ ಒಂದು ಹೊರೆ ಚಿನ್ನ ಇರುತ್ತೆ. ಒಂದು ಒಡವೇನೂ ಕಲಾತ್ಮಕ ವಾಗಿರೋದಿಲ್ಲ."

ವಿಶಾಲಾಕ್ಷಿಯಮ್ಮ ಆಕೆಯನ್ನು ವರ್ಣಿಸುವುದಕ್ಕಾರಂಭಿಸಿದರು. ಒಂದು ಬಿಳಿ ಸೀರೆ ಉಟ್ಟಿದ್ದಳು. ಜಂಪರ್ ತೊಟ್ಟಿದ್ದಳು. ಅದನ್ನ ಜಂಪರ್ ಅಂತ ಹೇಳೋದು ಬೇಡ. ಮೊಳಕೈಯಿಂದ ಕೆಳಗಿನ ವರೆಗೆ ಅದರ ತೋಳು. ಸೊಂಟದ ವರೆಗೆ ಜಂಪರ್. ಕೈಯಿದ್ದ ಬನಿಯನ್ ಇದ್ದ ಹಾಗಿತ್ತು. ಜಂಪರ್ ಮೇಲೆ ಒಂದು ಮೇಲುಹೊದಿಕೆ ಕೂಡ ಇರಲಿಲ್ಲ.

ಭಾನುಮತಿಯಮ್ಮ ಒಂದು ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದರು. ಕಾತ್ಯಾಯಿನಿಯಮ್ಮನನ್ನು ನೋಡಿದರೆ ಒಬ್ಬಳು ಅಡಿಗೆಯವಳು ಅಂತಲೇ ಅನ್ನಿಸುವುದು ಎನ್ನುವ ವಿಷಯವನ್ನೇ ಪ್ರತಿಪಾದಿಸಿದರು. ಅವರ ಉದ್ದೇಶ "ಬಿಳಿ ಸೀರೆ ಅನ್ನೋದು ಬೇಡ, ಕೊಳಕಾದದ್ದು. ಒಂದು ಕಡೆ ಮಸಿ, ಮತ್ತೆ ಕೆಲವು ಕಡೆ ಕರೆ. ಅರಸಿನ......... ಕೆನ್ನೆಯ ಮೇಲೂ ಸ್ವಲ್ಪ ಮಸಿ ಅಂಟಿಕೊಂಡಿತ್ತು."

ಕನ್ಸರ್‌ವೇಟರರ ಹೆಂಡತಿ ಕೇಳಿದರು:

"ಹಾಗಾದರೆ ನಿಮ್ಮ ನೋಟ ತುಂಬ ಸೂಕ್ಷ್ಮವಾಗಿತ್ತು ಅನ್ನಿ !"

ಎಲ್ಲರಿಗೂ ಕೇಳಿಸಿಕೊಳ್ಳಲು ಸ್ವಾರಸ್ಯವಿದ್ದ ವಿಷಯವಾಗಿತ್ತು ಅದು.

ವಿಶಾಲಾಕ್ಷಿಯಮ್ಮ ಮುಂದುವರಿಸಿದರು: "ಅಂತು ಅವಳಿದ್ದದ್ದು ಅಡಿಗೆಮನೆಯಲ್ಲಿ ಅನ್ನುವುದು ನಿಜ."

ರುಕ್ಮಿಣಿಯಮ್ಮ ಕೇಳಿದರು: "ದಪ್ಪಕ್ಕಿದ್ದಾಳೋ ಅಥವಾ ತೆಳ್ಳಗಿದ್ದಾಳೋ?"

ಭಾನುಮತಿಯಮ್ಮ ಆ ಪ್ರಶ್ನೆಗೆ ಉತ್ತರಿಸಿದ್ದು:

"ಅಷ್ಟೊಂದು ದಪ್ಪಕ್ಕೇನಿಲ್ಲ. ಆದರೆ ದೇಹ ಒಳ್ಳೆ ಗಟ್ಟಿಮುಟ್ಟಾಗಿದೆ. ಒಳ್ಳೆ ರಕ್ತಪುಷ್ಟಿಯಿದೆ. ಇಲ್ಲದ್ದನ್ನೆಲ್ಲ ಹೇಳಬಾರದಲ್ಲ."

ಆ ಮಧ್ಯೆ ಯಾರೋ ಕೇಳಿದರು: "ಕೆಂಪಗಿದ್ದಾಳೋ ಕಪ್ಪಗಿದ್ದಾಳೋ?"

ಜಾನಕಿಯಮ್ಮ ಹೇಳಿದರು: "ಎಣ್ಣೆಗೆಂಪು. ಅಲ್ವಾ ವಿಶಾಲಾಕ್ಷಿಯಮ್ಮ?"

"ಹೌದು, ಆದರೆ ಎಷ್ಟೊಂದು ತಲೆಗೂದಲು ! ಒಂದು ಹೊರೆ ! ತಲೆಗೂದಲ ತುದಿ ಕಟ್ಟಿದ್ದಳು—ಇಳಿಬಿಟ್ಟಿದ್ದಳು. ಹೊರೋದಕ್ಕಾಗೋದಿಲ್ಲ. ಹಲ್ಲೂ ಚೆನ್ನಾಗಿವೆ.

ಕನ್ಸರ್‌ವೇಟರರ ಪತ್ನಿ ಕೇಳಿದರು: "ಇನ್ನು ನಿಮ್ಮ ಅನುಭವ ಏನು ಅದನ್ನ ಹೇಳಿ !"

ವಿಶಾಲಾಕ್ಷಿಯಮ್ಮ ಮುಂದುವರಿಸಿದರು: "ನಾವು ನಿಂತೇ ಇದ್ದೆವು. ನಮ್ಮನ್ನ ಕಂಡ ಹಾಗೇ ಮುಖ ಬಿಳಿಚಿಕೊಂಡಿತು. ಕಂಬದ ಹಾಗೆ ನಿಂತುಕೊಂಡಿದ್ದಳು. ಒಂದೇ ಒಂದು ಅಕ್ಷರ ಕೂಡ ಉಚ್ಚರಿಸಲಿಲ್ಲ. ಅದು ಹೋಗಲಿ. ಉಪಚಾರಕ್ಕಾದರೂ ಮುಖದಲ್ಲಿ ನಗು ಕಾಣಿಸಲಿಲ್ಲ. ಒಂದು ಥರಾ ಆಗಿದ್ದಳು !"

ಭಾನುಮತಿಯಮ್ಮ ಹೇಳಿದರು: "ಅದು ಮನುಷ್ಯರನ್ನೇ ಕಂಡಿಲ್ಲ ಅಂತ ಕಾಣೆ

ಸುತ್ತೆ. ಮನುಷ್ಯರನ್ನು ಕಂಡ ಕಾಡುಮೃಗದ ಹಾಗೆ ನಮ್ಮನ್ನು ಕಂಡು ಗಾಬರಿಯಾಗಿ ಹೋದಳು. ಸ್ವಲ್ಪ ಹೊತ್ತು ಹೋಗಿದ್ದರೆ ಅಡಂಗೆಮನೆಗೆ ಓಡಿಹೋಗಿಬಿಡುತ್ತಿದ್ದಳು. ಮತ್ತೆ ಈಚೆಗೆ ತಲೆ ತೋರಿಸ್ತಿರಲಿಲ್ಲ."

ಜಾನಕಿಯಮ್ಮ ಆ ಅಭಿಪ್ರಾಯವನ್ನೇ ಮುಂದುವರಿಸಿದರು: "ಈ ಹಳ್ಳಿ ಹೆಂಗಸರು ಬರೀ ಗುಗ್ಗುಗಳು."

ವಿಶಾಲಾಕ್ಷಿಯಮ್ಮ ಸತ್ಯಸಂಧತೆಯಿಂದಲೇ ಆ ಕಥಾನಕವನ್ನು ಪುನರಾರಂಭಿಸಿದರು:

"ತುಂಬ ಹೊತ್ತಿನ ವರೆಗೆ ನಾವು ಯಾರೂ ಮಾತಾಡಲಿಲ್ಲ. ಆದರೂ ಅವಳು ನಮ್ಮನ್ನ ಹಾಗೇ ನೋಡ್ತಾ ನಿಂತಿದ್ದಳು. ಮತ್ತಷ್ಟು ಹೊತ್ತಾಯ್ತು. ಆಗಲೂ ಹಾಗೇ ನಿಂತಿದ್ದಳು. ಅದು ಮತ್ತೆ ಅಡುಗೆಮನೆಗೆ ಓಡಿಹೋಗಿಬಿಡುತ್ತೆ ಅಂದುಕೊಂಡಿದ್ದೆವು. ಆಗ ಜಾನಕಿಯಮ್ಮ ನಾವು ಹೋಗಿದ್ದ ವಿಷಯ ತಿಳಿಸಿದರು. "ನಾವು ಧನ್ವಾನಂದಾಶ್ರಮದ, ಮತ್ತು ಅನಾಥ ವನಿತಾಸದನದ ಉದ್ಘಾಟನೆಗೆ ಹಣಸಂಗ್ರಹ ಮಾಡುವುದಕ್ಕೆ ಬಂದಿದ್ದೇವೆ" ಎಂದು ಮುಂತಾಗಿ. ಅವಳಿಗೆ ಅದು ಅರ್ಥವಾದ ಹಾಗೆ ಕಾಣಿಸಲಿಲ್ಲ. ಸುಮ್ಮನೆ ಗೊಂಬೆ ನಿಂತ ಹಾಗೆ ನಿಂತುಕೊಂಡಿದ್ದಳು."

ಆ ಮಧ್ಯೆ ಯಾರೋ ಕೇಳಿದರು: "ಉಪಚಾರಕ್ಕಾದರೂ ಒಂದು ಮಾತಾಡಲಿಲ್ಲವಾ? ಕುಳಿತುಕೊಳ್ಳಿ ಅಂತಲೂ ಅನ್ನಲಿಲ್ಲವಾ?"

"ತುಟಿ ಪಿಟಕ್ ಅನ್ನಲಿಲ್ಲ. ಕುಳಿತುಕೊಳ್ಳಿ ಅಂತಲೂ ಅನ್ನಲಿಲ್ಲ, ಏನೂ ಇಲ್ಲ."

ಮತ್ತೊಬ್ಬಳು ಕೇಳಿದಳು: "ನೀವೇ ಕೂತುಕೋಬಾರದಾಗಿತ್ತಾ?" ಭಾನುಮತಿಯಮ್ಮ ಅದಕ್ಕೆ ಉತ್ತರ ಹೇಳಿದ್ದು: "ನನಗೆ ಕುಳಿತುಕೊಳ್ಳಬೇಕು ಅನ್ನಿಸಿತ್ತು."

ವಿಶಾಲಾಕ್ಷಿಯಮ್ಮ ಹೇಳಿದರು: "ಮೇಲಧಿಕಾರಿಯ ಮನೆಯಲ್ಲವಾ? ಹೇಳದೆ ಕುಳಿತುಕೊಳ್ಳುವುದು ಸರಿಯಲ್ಲ ಅನ್ನಿಸಿತು. ಒಬ್ಬ ಅಸಿಸ್ಟೆಂಟ್ ಸೆಕ್ರೆಟರಿಯ ಹೆಂಡತಿಯೋ ಸೂಪರಿಂಟೆಂಡೆಂಟರ ಹೆಂಡತಿಯೋ ನಮ್ಮ ಮನೆಗೆ ಬಂದರೆ ನಾವು ಕುಳಿತುಕೊಳ್ಳಿ ಅನ್ನದೇ ಇರ್ತೀವೇನು?"

ಕನ್ಸರ್‌ವೇಟರರ ಹೆಂಡತಿ ಕೇಳಿದರು:

"ನೀವೆಲ್ಲ ಯಾರು ಅನ್ನೋದಾದರೂ ಅವಳಿಗೆ ತಿಳಿಯಿತಾ?"

"ತಿಳಿಯಿತೋ ಇಲ್ಲವೋ ಗೊತ್ತಿಲ್ಲ." ಜಾನಕಿಯಮ್ಮ ಹೇಳಿದರು: "ಅದು ಕೇಳಿ ತಿಳಿದುಕೊಂಡಿರಬಹುದು. ಅಥವಾ ಆ ಮೇಲೆ ಬೆರಳಿನಿಂದ ಕಿವಿ ಮುಚ್ಚಿಕೊಂಡಿತ್ತೋ ಏನೋ!"

ಭಾನುಮತಿಯಮ್ಮ ಹೇಳಿದರು: "ಒಂದು, ಅದಕ್ಕೆ ಏನು ಮಾತಾಡಬೇಕು ಅಂತ ಗೊತ್ತಿಲ್ಲ; ಇಲ್ಲದೇ ಇದ್ರೆ, ಅಹಂಕಾರ. ಇದರಲ್ಲಿ ಯಾವುದೋ ಒಂದು."

ಜಾನಕಿಯಮ್ಮನ ಅಭಿಪ್ರಾಯ, ಸರಿಯಾಗಿ ತಿಳಿಯದೆ ಇದ್ದದ್ದರಿಂದ ಅವಳು ಹಾಗಿದ್ದದ್ದು ಎಂದು. ಅಹಂಕಾರದಿಂದಿರುವುದಕ್ಕೆ ಸಾಧ್ಯವಿಲ್ಲ. ಮತ್ತೊಬ್ಬ ಸ್ತ್ರೀಯ ಅಭಿಪ್ರಾಯ ಹಾಗೆ ನಿರ್ಧಾರವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಯಾವುದೋ ಮಲೆನಾಡಿನ ಕಪ್ಪೆಯ ಹಾಗೆ ನೀರಿನ ಗುಂಡಿಯಲ್ಲೆಲ್ಲೋ ಇದ್ದವಳಿಗೆ ಇದನ್ನೆಲ್ಲ ಕಂಡಾಗ ಅಹಂಕಾರ ಬೇಗ ಬರುತ್ತದೆ. ಇಲ್ಲದೆ ಇದ್ದರೆ ಅಷ್ಟೊಂದು ಚಿನ್ನವನ್ನು ದಪ್ಪಗೆ ದುಂಡಗೆ ಮಾಡಿ ನೇತುಹಾಕಿಕೊಳ್ಳುತ್ತಿದ್ದಳೇನು? ಭಗವತಿಕುಟ್ಟಿಯಮ್ಮನಿಗೆ ಧಾರಾಳವಾದ ಆಭರಣಗಳಿದ್ದುವು. ಆದರೆ ಅವರು ಒಂದನ್ನೂ ತೊಟ್ಟುಕೊಂಡಿರುತ್ತಿರಲಿಲ್ಲ. ಭಾನುಮತಿಯಮ್ಮನಿಗೆ ಭಗವತಿಕುಟ್ಟಿಯಮ್ಮನನ್ನು ಹೊಗಳಿದುದು ಸಾಕಾಗಲಿಲ್ಲ. "ಪಾರ್ಕ್ ವ್ಯೂನಲ್ಲಿ ವಾಸ ಮಾಡಬೇಕಾದರೆ ನಿಜವಾಗಿಯೂ ಅವರ ಹಾಗಿರುವವರಾಗಬೇಕು. ಅವರು ಆ ಬಂಗಲೆಗೇ ಒಂದು ಅಲಂಕಾರವಾಗಿದ್ದರು. ನಾನು ಎಷ್ಟೋ ಸಲ ಅಲ್ಲಿಗೆ ಹೋಗಿದ್ದೀನಿ. ಎಂಥ ನಡೆನುಡಿ, ಅಂತಸ್ತು ಅಭಿಮಾನಗಳಿದ್ದುವು ಅವರಲ್ಲಿ !"

ರುಕ್ಮಿಣಿಯಮ್ಮ ಒಂದು ನಿಟ್ಟುಸಿರುಬಿಡುತ್ತಾ ಹೇಳಿದರು: "ನೀವೇನೇ ಹೇಳಿದರೂ ಅಲ್ಲಿ ವಾಸ ಮಾಡೋ ಯೋಗ ದೊರೆತದ್ದು ಆ ಹಳ್ಳಿಮುಕ್ಕನಿಗೆ."

ಭಾನುಮತಿಯಮ್ಮ ಥಟ್ಟನೆ ಹೇಳಿದರು:

"ಅದು ಯಾವ ಯೋಗ ರುಕ್ಮಿಣಿಯಮ್ಮ? ಅದೊಂದು ಯೋಗವಾ?"

ಆ ಮಧ್ಯೆ ಯಾರೋ. "ಹ್ನು ! ಯೋಗವಲ್ಲದೆ ಮತ್ತಿನ್ನೇನು?" ಎಂದು ಕೇಳಿದರು. ಭಾನುಮತಿಯಮ್ಮ ಸುಮ್ಮನಾಗಲಿಲ್ಲ.

"ಆ ಬಡಗು ದೇಶದವನು ಚೆನ್ನಾಗಿ ಸೇವೆ ಸಲ್ಲಿಸಿ, ಅಲ್ಲಿ ವರೆಗೆ ತಲುಪಿದ. ಭಕ್ತಿ ವಿಲಾಸದ ಸೇವೆ. ಹಾಗಲ್ಲದೆ ಮತ್ತಿನ್ನೇನು? ಇಲ್ಲದೇ ಇದ್ದಿದ್ದರೆ ಬೇರೆ ಯಾರಾದರೂ ಈ ಸ್ಥಾನದಲ್ಲಿರಬೇಕಾಗಿತ್ತು. ಸೀನಿಯಾರಿಟಿ ಕೂಡ ನೋಡಲಿಲ್ಲ. ನಮ್ಮ ಯಜಮಾನರು ಸೂಪರಿಂಟೆಂಡೆಂಟರಾಗಿದ್ದಾಗ ಕೇಶವ ಪಿಳ್ಳೆ ಹದಿನೈದು ರೂಪಾಯಿ ಕಾರ್ಕೂನ. ಎಷ್ಟು ಜನರ ತಲೆಮೇಲೆ ಕಾಲಿಟ್ಟು ಮೇಲೆ ಬಂದದ್ದು !"

ವಿಶಾಲಾಕ್ಷಿಯಮ್ಮ ಆ ಮಾತನ್ನು ಮುಂದುವರಿಸಿದುದು:

"ಇದರ ಮೂಲ ಎಲ್ಲಿಂದ ಗೊತ್ತಾ? ಕೃಷ್ಣನ್ ನಾಯರೂ ಭಗವತಿಕುಟ್ಟಿಯಮ್ಮನೂ."

ಕನ್ಸರ್‌ವೇಟರರ ಹೆಂಡತಿ ಆಗ ಗಮನಾರ್ಹವಾದ ಒಂದು ಪ್ರಶ್ನೆ ಕೇಳಿದರು: "ನಿಜವಾಗಿಯೂ ಈಗ ಅಲ್ಲಿ ಯಾರು ವಾಸಮಾಡಬೇಕಾಗಿತ್ತು?"

ತುಂಬ ಮುಖ್ಯವಾದ ಒಂದು ಪ್ರಶ್ನೆಯಾಗಿತ್ತು ಅದು. ಒಂದು ನಿಮಿಷದ ವರೆಗೆ ಯಾರೂ ಮಾತಾಡಲಿಲ್ಲ. ಆ ನಿಶ್ಶಬ್ದತೆಯಿದ್ದಾಗ ಒಂದು ಶಬ್ದ ಕೇಳಿಬಂದಿತು: "ತಂಗಮ್ಮ."

ಭಾನುಮತಿ ಅಮ್ಮನಿಗೆ ಅದು ನಿಜವೆನ್ನಿಸಿತು. "ಹೌದು, ಆಕೆಗೆ ಅವನು ದೊಡ್ಡ

ದ್ರೋಹ ಮಾಡಿದ. ಮದುವೆ ಮಾಡಿಕೊಳ್ತೀನಿ ಅಂತ ಹೇಳಿ ನಂಬಿಸಿ ಪಾರ್ಕ್ ವ್ಯೂಗೆ ಕಾಲಿರಿಸಿದ. ಕಡೆಗೆ ಮೋಸ ಮಾಡಿದ."

ಆಗ ಮತ್ತೊಬ್ಬ ಸ್ತ್ರೀ ತಗ್ಗಿದ ಧ್ವನಿಯಲ್ಲಿ ಹೇಳಿದಳು: "ಆದರಿಂದಾಗಿ ಅವಳ ಬದುಕು ಏನೇನೋ ಆಗಿ ಹೋಯ್ತು. ಒಂದು ಲೆಕ್ಕದಲ್ಲಿ ಅದೂ ಒಳ್ಳೇದೇ ಆಯ್ತು. ಅವಳ ಆತ್ಮಕ್ಕೆ ಒಂದು ಸನ್ಮಾರ್ಗ ದೊರೆಯುವ ಕಡೆಗೆ ಅವಳು ತಿರುಗುವ ಹಾಗಾಯ್ತು. ಪುನಶ್ಶಾಂತಿಯಿಲ್ಲದ ಸಂಸಾರದ ಮಾರ್ಗದಿಂದ ಪಾರಾದಳು."

ವಿಶಾಲಾಕ್ಷಿಯಮ್ಮನ ಅಭಿಪ್ರಾಯ ತಂಗಮ್ಮ ಇಂದು ಸರ್ವಸ್ವವನ್ನೂ ಉಪೇಕ್ಷಿಸಿ ಈ ಮಾರ್ಗದಲ್ಲಿ ಕಾಲಿರಿಸುವಂತಾದ್ದಕ್ಕೆ ಕಾರಣ ನಿರಾಶೆ. ತಂಗಮ್ಮ ಪ್ರೇಮಿಸಿದ್ದಳು. ಭಗ್ನಪ್ರೇಮದಿಂದಾಗಿ ವಿರಕ್ತಿ ಮೂಡಿತು.

ಆಗಲೂ ಅಲ್ಲಿ ಸ್ವಲ್ಪ ಹೊತ್ತು ಮೌನ ಆವರಿಸಿತು. ಪ್ರೇಮ ನೈರಾಶ್ಯದ ಒಂದು ಕಥೆಯನ್ನು ಮಾತನಾಡುತ್ತಿದ್ದದ್ದು. ಲೋಕಾನುಭವವಿದ್ದ ಕನ್ಸರ್‌ವೇಟರರ ಹೆಂಡತಿ ಆ ಮೌನವನ್ನು ಮುರಿದರು.

"ಇಲ್ಲದೆ ಇದ್ದರೂ ಈಗ ಬಡಗು ನಾಡಿನವರನ್ನು ನಂಬೋ ಹಾಗಿಲ್ಲ. ಹಿಂದೆ ಓದುವುದಕ್ಕೆ ಬರ್ತಿದ್ದವರೆಲ್ಲ ತುಂಬ ನಂಬಿಕಸ್ತರಾಗಿರ್ತಿದ್ದರು. ಈಗ ಅದೆಲ್ಲ ಬದಲಾಯಿಸಿ ಹೋಗಿದೆ."

ಆ ಮಧ್ಯೆ ಯಾರೋ ಹೇಳಿದರು: "ಇದಂತೂ ದೊಡ್ಡ ವಂಚನೆ."

ಭಾನುಮತಿಯಮ್ಮನನ್ನು ಆಗ ಆಶ್ಚರ್ಯಕ್ಕೊಳಗುಮಾಡಿದುದು ಮತ್ತೊಂದು ವಿಷಯ.

"ತಂಗಮ್ಮನನ್ನು ಉಪೇಕ್ಷಿಸಿ ಈ ಕಪ್ಪೇನ ಕೈಹಿಡಿಬೇಕು ಅನ್ನಿಸಿದ್ದು ಆಶ್ಚರ್ಯ!"

ಎಲ್ಲರೂ ನಗಬಹುದಾದಂತಹ ಒಂದು ಅಭಿಪ್ರಾಯ ಹೊರಬಂದಿತು.

"ಅವನು ಗಂಡುಗಪ್ಪೆ. ಕಪ್ಪೆ, ಕಪ್ಪೆ ಜೊತೇಲೇ ಅಲ್ಲವಾ ಒಂದುಗೂಡೋದು?" ಅದು ಹೋಗಲಿ ಮುಂದಿನ ಕಥೆಯನ್ನು ಹೇಳಲೇ ಇಲ್ಲವಲ್ಲ ಎಂದು ಗುಂಪಿನಲ್ಲಿ ಒಬ್ಬಳು ಹೇಳಿದಳು. ವಿಶಾಲಾಕ್ಷಿಯಮ್ಮ ಕಥೆಯನ್ನು ಮುಂದುವರಿಸಿದರು: "ಜಾನಕಿಯಮ್ಮ ನಾವು ಹೋಗಿದ್ದ ವಿಷಯವನ್ನೆಲ್ಲ ವಿವರಿಸಿದರು. ಅನಾಥ ಮಂದಿರ ಅಂದರೇನು? ಧನ್ಯಾನಂದ ಸ್ವಾಮಿ ಅಂದರೆ ಯಾರು? ಮುಂತಾಗಿ ಎಲ್ಲವನ್ನೂ ವಿವರಿಸಿದರು. ಯಾವ ಪರಿಣಾಮವೂ ಇಲ್ಲದೆ ಕೇಳಿಸಿಕೊಂಡು ನಿಂತಿದ್ದಳು. ಒಂದೇ ಒಂದು ಅಕ್ಷರ ಉಚ್ಚರಿಸಲಿಲ್ಲ. ಕಡೆಗೆ ಜಾನಕಿಯಮ್ಮನೇ ಸಂಭಾವನೆ ಕೊಡಬೇಕು ಅಂತ ಕೇಳಿದರು."

ಯಾರೋ ಮಧ್ಯೆ ಕೇಳಿದರು: "ಇಷ್ಟೂ ನಿಂತುಕೊಂಡೇನಾ?"

"ಹೌದು, ಅಷ್ಟು ಹೊತ್ತು ಸುಮ್ಮನೆ ನಿಂತಿದ್ದಳು. ನಾವು ಇನ್ನೂ ತುಂಬ ಕಡೆಗೆ ಹೋಗಬೇಕು. ನಿಲ್ಲೋದಕ್ಕೆ ಹೊತ್ತಿಲ್ಲ ಅಂತ ಜಾನಕಿಯಮ್ಮ ಹೇಳಿದ ಮೇಲೆ ಅದು ಬಾಯಿ ತೆರೆಯಿತು: "ಅವಳ ತಂದೆ ಬರಲಿ" ಎಂದಷ್ಟೇ ಹೇಳಿದ್ದು. ಅಷ್ಟು ಮಾತ್ರ. ನಾವು

ಮಂತ್ರೂ ಸ್ವಲ್ಪ ಹೊತ್ತು ನಿಂತುಕೊಂಡಿದ್ದೆವು. ಅದು ಅಲ್ಲಾಡಲಿಲ್ಲ. ಬಾಯಿ ಬಿಚ್ಚಲಿಲ್ಲ. ಕಡೆಗೆ ನಾವು ಹೋಗ್ತೀವಿ ಅಂತ ಹೇಳಿ ಈಚೆಗೆ ಬಂದೆವು."

ಹಾಸ್ಯ ಪ್ರವೃತ್ತಿಯುಳ್ಳ ಒಬ್ಬಳು ಹೇಳಿದಳು: "ಹಾಗಿದ್ದರೆ ಅದು ಮಿಸೆಸ್ ಚೀಫ್ ಸೆಕ್ರೆಟರಿಯಲ್ಲ. ಅಡಿಗೆಯವಳೇ ಇರಬೇಕು. ಒಳ್ಳೆ ಅಡಿಗೆಯವಳು."

ಭಾನುಮತಿಯಮ್ಮನಿಗೆ ಮಂತ್ರೂ ಒಂದು ಆರೋಪ ಹೊರಿಸುವುದಿತ್ತು.. ಬಾಯಾರಿ ಗಂಟಲು ಒಣಗಿಸಿಕೊಂಡು ಅವರು ಅಲ್ಲಿಗೆ ಹೋಗಿದ್ದದ್ದು. ಒಂದು ತೊಟ್ಟು ನೀರು ಕೂಡ ಅವರಿಗೆ ಸಿಕ್ಕಲಿಲ್ಲ.

ಕನ್ಸರ್‌ವೇಟರರ ಹೆಂಡತಿ ಹೇಳಿದರು: "ಅದು ಹೋಗಲಿ ಬಿಡಿ. ನಾವು ನಮ್ಮ ಕೆಲಸ ನೋಡೋಣ."

ಅಷ್ಟರಲ್ಲಿ ಹೊರಗೆ ಹೋಗಿದ್ದ ತಂಗಮ್ಮ ಬಂದಳು. ಅವಳು ಹಣ ಸ್ವೀಕರಿಸ ಬೇಕಾಗಿದ್ದವಳು. ಪ್ರತಿಯೊಂದು ಗುಂಪಿನವರೂ ಅವರವರ ಅಂದಿನ ಸಂಗ್ರಹವನ್ನು ಒಪ್ಪಿಸಿದರು.

ಈ ಸಂದರ್ಭದಲ್ಲಿ ಪಾರ್ಕ್ ವ್ಯೂನಲ್ಲಿ ನಡೆದ ಘಟನೆಯನ್ನೂ ತಿಳಿಸಬೇಡವೇ? ಒಂದು ಸುದ್ದಿಯನ್ನು ಗಂಡನಿಗೆ ತಿಳಿಸುವುದಕ್ಕಾಗಿ ಕಾತ್ಯಾಯಿನಿಯಮ್ಮ ಕಾಯುತ್ತಾ ಕುಳಿತಿದ್ದಳು. ಗಂಡ ಆಫೀಸಿನಿಂದ ಬಂದ ತಕ್ಷಣ ಕಾತ್ಯಾಯಿನಿಯಮ್ಮ ಹೇಳಿದಳು: "ಇವತ್ತು ಇಲ್ಲಿ ಒಂದು ವಿಶೇಷ ನಡೀತು."

ಕೇಶವ ಪಿಳ್ಳೆ ಹೇಳಿದರು: "ನಿನ್ನ ವಿಶೇಷ! ನಾನು ಡ್ರೆಸ್ ಬದಲಾಯಿಸಿ ಕಾಫಿ ಕುಡಿಯುವಾಗ ನಿನ್ನ ವಿಶೇಷ ಹೇಳಿದರೆ ಸಾಕು."

"ಅಲ್ಲ, ನಿಜವಾಗಿಯೂ ವಿಶೇಷ ಇತ್ತು."

ಕಾತ್ಯಾಯಿನಿಯಮ್ಮನ ಮನಸ್ಸೂ ಒಂದು ರೀತಿಯಲ್ಲಿ ಅಸ್ತವ್ಯಸ್ತಗೊಂಡಿತ್ತು. ಹಣಸಂಗ್ರಹಕ್ಕೆ ಬಂದವರ ಹತ್ತಿರ ಸರಿಯಾಗಿ ನಡೆದುಕೊಂಡೆನೇ ಎಂಬ ಸಂಶಯ. ತನ್ನಿಂದ ಏನೋ ತಪ್ಪಾಗಿರಬೇಕು ಎನ್ನಿಸುತ್ತಿತ್ತು. ಹಾಗೆಲ್ಲ ಆಗಬಾರದಾಗಿತ್ತು. ಗಂಡ ಬಯ್ಯಬಹುದು. ಆದರೆ ಹೇಗೆ ನಡೆದುಕೊಳ್ಳಬೇಕಾಗಿತ್ತು ಎನ್ನುವುದು ತಿಳಿದಿರಲಿಲ್ಲ.

ಕಾಫಿ ಬಗ್ಗಿಸಿ ಕೊಡುತ್ತಿದ್ದಾಗ ಕೇಶವ ಪಿಳ್ಳೆ ಹೇಳಿದರು: "ಇನ್ನು ಹೇಳು ಅಜ್ಜಮ್ಮ. ಅದೇನು ವಿಶೇಷ ಅನ್ನೋದನ್ನ." ಕಾತ್ಯಾಯಿನಿಯಮ್ಮ ಹೇಳಿದಳು: "ಅಲ್ಲ, ನಿಜವಾಗಿ ವಿಶೇಷ ನಡೀತು. ನಾನು ಆಗಲೇ ಹೇಳಲಿಲ್ಲವಾ?"

ಕಾತ್ಯಾಯಿನಿಯಮ್ಮ ಮಾತನಾಡುತ್ತಿದ್ದ ಧಾಟಿಯನ್ನೇ ಅನುಕರಿಸುತ್ತ ಕೇಶವ ಪಿಳ್ಳೆ ಹೇಳಿದರು: "ನಿಜವಾಗಿಯೂ ವಿಶೇಷ ನಡೆದಿದ್ದರೆ ಹೇಳಿಬಿಡಿ."

ಅಂದು ಕೇಶವ ಪಿಳ್ಳೆಯ ಮನಸ್ಸು ಉಲ್ಲಾಸದಿಂದಿತ್ತು. ಒಂದು ಸಣ್ಣ ಮಗುವಿನ ಹಾಗೆ ಕಾತ್ಯಾಯಿನಿಯಮ್ಮ ಒಂದು ತೊದಲು ನುಡಿಯಿಂದ, "ಏನಾದರೂ ತಪ್ಪಾಗಿದ್ದರೆ ಕ್ಷಮಿಸಬೇಕು ಗೊತ್ತಾಯಿತಾ?" ಎಂದಳು.

ಆ ಕುಟ್ಟನಾಡಿನ ಹೆಣ್ಣಿಗೆ ಗಂಡನನ್ನು ಹೇಗೆ ವಶಪಡಿಸಿಕೊಳ್ಳಬೇಕು ಎನ್ನುವುದು ಗೊತ್ತಿತ್ತು. ಅದಕ್ಕೆ ಬೇಕಾದ ಪ್ರಯೋಗಗಳೂ ತಿಳಿದಿದ್ದುವು. ಅದನ್ನೆಲ್ಲ ಯಾರೂ ಕಲಿಸಿಕೊಡತಂಥಾದ್ದಲ್ಲ. ಸ್ವತಃ ಕಾಪಾಡಿಕೊಂಡು ಬರುವ ಜನ್ಮಸಂಸ್ಕಾರ.

ಕೇಶವ ಪಿಳ್ಳೆ ಕೇಳಿದರು: "ಕೇಳಿದ ಮೇಲಲ್ಲವಾ ತಪ್ಪುಂಟೇ, ದೋಷವುಂಟೇ, ಸಿಟ್ಟು ಮಾಡಿಕೊಳ್ಳಬೇಕೇ ಅನ್ನುವುದನ್ನು ತೀರ್ಮಾನ ಮಾಡೋದು?"

ಮುಖ ಸ್ವಲ್ಪ ದಪ್ಪಗೆ ಮಾಡಿಕೊಂಡು ಹೇಳಿದಳು: "ಹಾಗಾದರೆ ನಾನು ಹೇಳೋದಿಲ್ಲ."

"ಹೇಳು, ನಾನು ಸಿಟ್ಟು ಮಾಡಿಕೊಳ್ಳೋದಿಲ್ಲ, ತಿಳೀತಾ?"

ಕಾತ್ಯಾಯಿನಿಯಮ್ಮನಿಗೆ ಆ ಮಾತಿನಲ್ಲಿ ಸಂಪೂರ್ಣ ವಿಶ್ವಾಸ ಮೂಡಲಿಲ್ಲ. ಅವಳು ಸಂಶಯಪಡುತ್ತಲೇ ಹೇಳಿದಳು: "ಇವತ್ತು ಇಲ್ಲಿಗೆ ಮೂರು ಜನ ಹೆಂಗಸರು ಬಂದಿದ್ದರು."

ಅದೇ ಧ್ವನಿಯಲ್ಲಿ ಕೇಶವ ಪಿಳ್ಳೆ ಕೇಳಿದರು: "ಆ ಮೇಲೆ?"

"ಹೋಗಿ, ತಮಾಷೆ ಮಾಡಬೇಡಿ. ,ಹೇಳೋದನ್ನ ಕೇಳಿ. ಇಬ್ಬರು ಅಲಂಕಾರ ಮಾಡಿಕೊಂಡಿದ್ದವರು ಮತ್ತೊಬ್ಬಳೂ."

"ಇನ್ನೊಬ್ಬಳು ಅಲಂಕಾರ ಮಾಡಿಕೊಂಡಿರಲಿಲ್ಲವಾ?"

"ಅವರಷ್ಟು ಮಾಡಿಕೊಂಡಿರಲಿಲ್ಲ. ಆ ಇಬ್ಬರ ತಲೆಯೂ ಸ್ವಲ್ಪ ನರೆತಿತ್ತು. ತಲೆಯಲ್ಲಿ ತುಂಬ ತಲೆಕೂದಲೇನೂ ಇರಲಿಲ್ಲ. ಆದರೂ ಚೌರಿ ಸೇರಿಸಿ ತಲೆಗಂಟು ಹಾಕಿಕೊಂಡಿದ್ದರು. ಆ ಗಂಟು ಒಂದು ಹೊರೆ ಇತ್ತು, ತಲೆಯಲ್ಲಿ ನಾಲ್ಕು–ಮೂರು ಏಳು ತಲೆಕೂದಲೇ ಇದ್ದರೂ. ಅವರು ಕಣ್ಣುಹುಬ್ಬು ತಿದ್ದಿಕೊಂಡಿದ್ದರು. ಕಣ್ಣಿಗೆ ಕಾಡಿಗೆ ಬಾಲ ಎಳೆದುಕೊಂಡಿದ್ದರು. ಮುಖಕ್ಕೆ ಬಿಳಿ ಪುಡಿ ಬಾಚಿ ಸುರಿದುಕೊಂಡಿದ್ದರು. ಹಣೆಗೆ ಕುಂಕುಮದ ಬೊಟ್ಟು. ಮೇಲ್ಸೆರಗು ಜರಿಯದು. ಒಂದಿಷ್ಟೂ ನಾಚಿಕೆಯಿಲ್ಲ. ಇದಕ್ಕಿಂತ ಮುಂಡುಟ್ಟುಕೊಳ್ಳದೇ ತಿರುಗಾಡಿದರೆ ಒಳ್ಳೇದಿತ್ತು. ಆದರೆ ರವಕೆ ಒಂದು ವಿಶೇಷ. ತೆಳು ಅಂದರೆ ತೆಳು. ಒಂದು ಥರಾ ಬಟ್ಟೆ. ಅದಕ್ಕೆ ಕೈಯೇ ಇರಲಿಲ್ಲ. ಕಂಕುಳು ಕಾಣಿಸ್ತಿತ್ತು, ಮೊಲೆ ಕೆಳಭಾಗವೂ. ನಾನು ಗಾಬರಿಯಾಗಿ ಹೋದೆ. ಮೊಲೆ ಚೂಪಾಗಿ ಕಾಣೋ ಹಾಗೆ ಕಟ್ಟಿಕೊಂಡಿದ್ದರು. ಕೈಯಲ್ಲಿ ಒಂದೊಂದು ಚೀಲ ತೂಗುಹಾಕಿಕೊಂಡಿದ್ದರು. ಆ ಇಬ್ಬರು ಹೆಂಗಸರು ಬಿಳಿ ಅಂದರೆ ಬಿಳಿ. ರಕ್ತವೇ ಇಲ್ಲ. ತುಟಿಗೂ ಕೆಂಪು ಬಣ್ಣ ಬಳಿದುಕೊಂಡಿದ್ದರು ಅಂತ ಕಾಣಿಸುತ್ತೆ. ಹಿಮ್ಮಡಿ ಎತ್ತರವಾಗಿದ್ದ ಚಪ್ಪಲಿ ಹಾಕಿಕೊಂಡು ಬಂದಿದ್ದರು. ಮತ್ತೊಬ್ಬಳು ಹಾಗಿರಲಿಲ್ಲ. ಖದ್ದರ್ ವಸ್ತ್ರ ಉಟ್ಟಿದ್ದಳು."

ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ವಿವರಣೆಯನ್ನು ಕೌತುಕದಿಂದ ಕೇಳುತ್ತಿದ್ದರು. ಅವರು ಕೇಳಿದರು: "ಅವರು ಯಾತಕ್ಕೆ ಬಂದಿದ್ದರು?"

"ಯಾವುದೋ ಆಶ್ರಮಕ್ಕೋ ಏನೋ ರೂಪಾಯಿ ಬೇಕು ಅಂದರು."

"ಆ ಮೇಲೆ?"

"ಆ ಮೇಲೇನು? ಅವಳ ತಂದೆ ಬಂದ ಮೇಲೆ ಕೇಳಿ ಈಸಿಕೊಳ್ಳಿ ಅಂದೆ."

"ಭೇಷ್ !"

"ಹ್ಞ? ಯಾಕೆ?"

"ಬಂದಿದ್ದವರು ಯಾರ್‍ಯಾರು?"

"ಇಬ್ಬರು ಉದ್ಯೋಗಸ್ಥರ ಹೆಂಡತಿಯರು. ಅವರು ನಾಜೂಕಾಗಿದ್ದರು. ಮತ್ತೊಬ್ಬಳು ಒಬ್ಬ ಊರಿನ ಮುಖಂಡನ ಹೆಂಡತಿ."

"ಉದ್ಯೋಗಸ್ಥರ ಹೆಂಡತಿಯರಾ? ಯಾವ ಉದ್ಯೋಗಸ್ಥರ ಹೆಂಡತಿಯರು?"

"ಸೆಕ್ರೆಟರಿಗಳ ಹೆಂಡತಿಯರು. ಅವರನ್ನು ಕಂಡ ತಕ್ಷಣ ನನಗೆ ಸಿಟ್ಟು ಬಂತು. ನನ್ನ ಕಾಲು ಕೂಡ ಚಡಪಡಿಸುತ್ತಿದ್ದುವು."

ಕೇಶವ ಪಿಳ್ಳೆ ಸ್ವಲ್ಪ ಹೊತ್ತು ಮೌನವಾಗಿದ್ದರು. ತನ್ನಿಂದ ಯಾವುದೋ ಅನರ್ಥ ವುಂಟಾಯಿತೆಂದು ಭಾವಿಸಿ ಅವಳು ಕೇಳಿದಳು: "ಯಾಕೆ ಏನೂ ಮಾತಾಡದೆ ಕುಳಿತು ಕೊಂಡಿರಿ?"

ಕೇಶವ ಪಿಳ್ಳೆ ಹೇಳಿದರು: "ಅವರು ನನ್ನ ಹಾಗಿರುವ ಉದ್ಯೋಗಸ್ಥರ ಹೆಂಡತಿ ಯರು. ನೀನು ಅವರನ್ನ ಏನಾದರೂ ಅಂದುಬಿಟ್ಟೆಯಾ?"

ಕಾತ್ಯಾಯಿನಿಯಮ್ಮ ಮೊದಲೇ ಪ್ರಮಾಣ ಮಾಡಿ ಹೇಳಿದಳು: "ನನ್ನ ವಿಜ ಯಮ್ಮನ ಆಣೆಗೂ ನಾನು ಅವರನ್ನ ಏನೂ ಅನ್ನಲಿಲ್ಲ. ಅಲ್ಲ, ಯಾರಾದರೂ ಇಬ್ಬರು ಹೆಂಗಸರು ಮನೆಗೆ ಬಂದರೆ ಅವರನ್ನು ಬಯ್ದು ಕಳಿಸೋದಕ್ಕೆ ನನಗೇನು ಹುಚ್ಚಾ? ಇದೀಗ ಕಷ್ಟ ! ನಾನು ಒಂದೇ ಒಂದು ಮಾತು ಆಡಿದ್ದು. "ಅವಳ ತಂದೆ ಬರಲಿ" ಅಂತ. ಅದಲ್ಲದೆ ಒಂದು ಅಕ್ಷರ ಕೂಡ ಮಾತಾಡಿಲ್ಲ. ನಾನು ಸುಮ್ಮನೆ ನಿಂತುಕೊಂಡಿದ್ದೆ ಅಷ್ಟೆ."

ಕೇಶವ ಪಿಳ್ಳೆ ಕೇಳಿದರು: "ನೀನು ಅವರನ್ನ ಕುಳಿತುಕೊಳ್ಳಿ ಅಂತ ಹೇಳಿ ಕಾಫಿ ಗೀಫಿ ಕೊಟ್ಟೆಯಾ?"

"ಇಲ್ಲ. ಅವರು ಅಲ್ಲಿ ನಿಂತುಕೊಂಡಿದ್ದರು. ನಾನೂ ನಿಂತುಕೊಂಡಿದ್ದೆ. ಅವರು ಬಂದಿದ್ದ ವಿಷಯ ಹೇಳಿದರು. ನಾನೂ ಹಾಗೆ ಹೇಳಿದೆ. ಆ ಮೇಲೆ ಅವರು ಹೋದರು."

ಕೇಶವ ಪಿಳ್ಳೆಗೆ ಸಿಟ್ಟು ಬರಲಿಲ್ಲ. ನಗು ಬಂದಿತು. ಕಾತ್ಯಾಯಿನಿಯಮ್ಮ ಕೇಳಿ ದಳು:

"ಹ್ಞ, ಯಾಕೆ ನಗಾಡೋದು?"

"ಸುಮ್ಮನೆ ನಗಾಡಿದೆ ಅಷ್ಟೆ. ಮನೆಗೆ ಯಾರಾದರೂ ಬಂದರೆ ಗೌರವಿಸಿ ಸತ್ಕರಿಸ ಬೇಡವೇ?"

ಕೂಡಲೇ ಕಾತ್ಯಾಯಿನಿಯಮ್ಮ ಉತ್ತರಿಸಿದಳು: "ಅವರಿಗೆ ನಾನೇನೂ ಅವಮಾನ

ಮಾಡಿಲ್ಲ. ಹಣನೂ ಕೊಡಲಿಲ್ಲ. ಅದಕ್ಕೆ ಅಧಿಕಾರ ಇರೋರು ಬಂದು ಕೊಡಲಿ ಅಂತ."

"ಮನೆಯಲ್ಲಿ ಹಣ ಇದೆ. ಬೀಗದ ಕೈ ನಿನ್ನ ಹತ್ರವೇ ಇತ್ತು. ಐದೋ ಹತ್ತೋ ಬೇಕಿದ್ದರೆ ನೂರು ರೂಪಾಯಿಗಳನ್ನೇ ಕೊಟ್ಟು ಕಳಿಸಿದ್ದರೆ ನಾನು ನಿನ್ನ ಮೇಲೆ ಸಿಟ್ಟು ಮಾಡಿಕೊಳ್ತಿದ್ದೆನಾ?"

ಕಾತ್ಯಾಯಿನಿಯಮ್ಮನಿಗೆ ತನ್ನದೇ ಆದ ಸಮಾಧಾನವಿತ್ತು. "ನಾನು ಇದುವರೆಗೆ ಯಾರಿಗೂ ಹಣ ತೆಗೆದುಕೊಟ್ಟಿಲ್ಲ. ಊರಿನಲ್ಲಿ ಕೂಡ ಹಣಕಾಸು ಕೊಡೋದು ಬಿಡೋದೆಲ್ಲ ಮಾಡ್ತಿದ್ದದ್ದು ಮಾವನವರು. ಅತ್ತೆ ಕೂಡ ಕಾಸು ಮುಟ್ಟಿರಲಿಲ್ಲ. ನನಗೆ ಅದೇ ಗೊತ್ತಿದ್ದದ್ದು. ಹಣ ಕಾಸು, ಭತ್ತ—ಯಾವುದು ಕೊಡಬೇಕಾಗಿದ್ದರೂ ಹೆಂಗಸರು ಕೈಹಾಕೋದುಂಟಾ? ನನಗೆ ಆ ಕೆಲಸ ಗೊತ್ತಿಲ್ಲ. ನಾನು ಮಾಡಿಯೂ ಇಲ್ಲ. ಇನ್ನು ಮೇಲೆ ಮಾಡೋದೂ ಇಲ್ಲ. ಅದೆಲ್ಲ ಗಂಡಸರಿಗೆ ಬಿಟ್ಟದ್ದು."

ಕಾತ್ಯಾಯಿನಿಯಮ್ಮ ತನ್ನ ವಿಚಾರಧಾರೆಯಲ್ಲಿ ಸಿದ್ಧಿಸಿದ್ದ ವಿಶ್ವಾಸವನ್ನೂ ತತ್ವ ಶಾಸ್ತ್ರವನ್ನೂ ವಿವರಿಸುತ್ತಿದ್ದಳು. ಅವಳು ಅದನ್ನು ನೋಡಿದ್ದು, ಕೇಳಿದ್ದು, ಜೀವಿಸಿದ್ದೂ ಆ ದೃಷ್ಟಿಯಲ್ಲಿ. ಕೇಶವ ಪಿಳ್ಳೆಗೆ ಹೇಳುವುದೇನೂ ಇರಲಿಲ್ಲ. ಅವರು ಕೇಳಿದರು:

"ಅವರನ್ನು ಕುಳಿತುಕೊಳ್ಳಿ ಅಂತ ಕೂಡ ನೀನು ಹೇಳಲಿಲ್ಲವಾ?"

"ಇಲ್ಲ. ಅವರು ನಿಂತುಕೊಂಡೇ ಮಾತಾಡಿದರು. ಹೋದರು."

ಕೇಶವ ಪಿಳ್ಳೆ ಅದೇ ವಿಷಯವನ್ನೆತ್ತಿಕೊಂಡು: "ನೀನು ಯಾರ ಮನೆಗಾದರೂ ಹೋದಾಗ ಅವರು ನಿನ್ನನ್ನ ಕುಳಿತುಕೊಳ್ಳಿ ಅನ್ನದೇ ಹೋದರೆ ನಿನಗೆ ಸಿಟ್ಟು ಬರೋ ದಿಲ್ಲವಾ?"

"ಯಾಕೆ ಸಿಟ್ಟು ಬರುತ್ತೆ? ನನಗೆ ಹಾಗನ್ನಿಸೋದಿಲ್ಲ. ನಾನು ಊರಿನಲ್ಲಿ ಎಲ್ಲರ ಮನೆಗೂ ಹೋಗ್ತಿದ್ದೆ. ಯಾರೂ ಕುಳಿತುಕೊ ಉರುಳಿಕೊ ಅಂತ ಹೇಳ್ತಿರಲಿಲ್ಲ. ನಮ್ಮ ಮನೆಗೂ ಎಲ್ಲರೂ ಬರ್‍ತಿದ್ದರು. ಅವರ ಹತ್ರವೂ ಅತ್ತೆ ಕುಳಿತುಕೊಳ್ಳೋದಕ್ಕೆ ಹೇಳ್ತಿರ ಲಿಲ್ಲ."

ಕಾತ್ಯಾಯಿನಿಯಮ್ಮನ ಮನಸ್ಸಿನಲ್ಲಿ ಇದ್ದದ್ದು ಅವರ ಗೆಳತಿಯರಾದ ನಾಣಿ ಕುಟ್ಟಿಯೂ ಕುಞಾಕುಟ್ಟಿಯೂ ಆಗಿರಬಹುದು. ಆ ಹೆಸರುಗಳನ್ನು ಅವಳು ಹೇಳಲಿಲ್ಲ ಅಷ್ಟೆ.

ಸ್ವಲ ಹೊತ್ತು ಕಳೆದ ಮೇಲೆ ಕಾತ್ಯಾಯಿನಿಯಮ್ಮ ಹೇಳಿದಳು: "ಇಲ್ದೇ ಇದ್ರೂ ಒಂದು ವಿಷಯ ನಿಜ. ಹೆಂಗಸರು ಕುರ್ಚಿಯಲ್ಲಿ ಕಾಲು ಮೇಲೆ ಕಾಲು ಹಾಕಿಕೊಂಡು ಕುಳಿತುಕೊಳ್ಳೋದು ಒಳ್ಳೇದಲ್ಲ. ಒಳ್ಳೆ ಮನೆತನದಲ್ಲಿ ಹುಟ್ಟಿದವರು ಹಾಗೆಲ್ಲ ಕೂತು ಕೊಳ್ಳೋದಿಲ್ಲ. ಇನ್ನು ಆ ಹೆಂಗಸರು—ಅವರು ಕೂತುಕೊಳ್ತಿದ್ದರೇನೋ. ಅವ ರಿಬ್ಬರೂ ಮಾನಮರ್ಯಾದೆ ಇಲ್ಲದವರು."

ಆಗಲೂ ಕೇಶವ ಪಿಳ್ಳೆಗೆ ನಗು ಬಂದಿತು. ಆದರೆ ಅದೊಂದು ವಿಶೇಷ ರೀತಿಯ ನಗುವಾಗಿತ್ತು. ಬಹುಶಃ ಅವರು ಸ್ವತಃ ಕೇಳಿಕೊಳ್ಳುತ್ತಿದ್ದುದಾಗಿರಬೇಕು. "ಈ ಸ್ಥಿತಿಗೆ ಹೊಣೆಗಾರರು ಯಾರು?" ಎಂದು. ತನ್ನ ಮೇಲೆ ಸಿಟ್ಟುಮಾಡಿಕೊಳ್ಳುವುದೇ ಒಳ್ಳೆಯ ದಲ್ಲವೆ?

ಕಾತ್ಯಾಯಿನಿಯಮ್ಮನಿಗೂ ಮನಸ್ಸಿನಲ್ಲಿ ಸ್ವಲ್ಪ ಅಸ್ವಸ್ಥತೆಯುಂಟಾಗಿತ್ತು. ವಿಷಯ ಗಳನ್ನೆಲ್ಲ ತನಗೆ ತೋರಿದ ರೀತಿಯಲ್ಲಿ ವಾದಿಸಿದ್ದರೂ ತನ್ನಿಂದ ಯಾವುದೋ ಕೆಲವು ತಪ್ಪುಗಳುಂಟಾಗಿವೆ ಎನ್ನಿಸಿತು. ಅವಳಿಗೂ ಸ್ವಲ್ಪ ಬೇಸರವಿತ್ತು. ಗಂಡನಿಗೆ ಅಪಮಾನ ಮಾಡಿದೆನೇ ಎಂದು.

ಅವಳು ಕೇಳಿದಳು: "ಅದಿರಲಿ, ನನ್ನಿಂದೇನಾದ್ರೂ ತಪ್ಪಾಯ್ತಾ?"

"ಓ ! ಏನೂ ಆಗಲಿಲ್ಲ. ತಪ್ಪೇನೂ ಆಗಲಿಲ್ಲ. ನನ್ನ ಜೊತೆಯಲ್ಲಿ ಕೆಲಸ ಮಾಡು ವವರ ಹೆಂಡತಿಯರಲ್ಲವೆ? ಅವರಿಗೆ ನಿನ್ನ ಬಗ್ಗೆ ಒಳ್ಳೆ ಅಭಿಪ್ರಾಯ ಬರದೇ ಹೋಗ ಬಹುದು."

"ಅಷ್ಟೇ ತಾನೆ? ಅವರಿಗೆ ನಾನು ಒಳ್ಳೆಯವಳು ಅಂತ ಅನ್ನಿಸದಿದ್ರೆ ಹೋಗಲಿ. ನನಗೆ ಅದರಲ್ಲಿ ಯಾವ ಬೇಸರವೂ ಇಲ್ಲ. ನಿಮಗೇನೂ ತಪ್ಪು ಮಾಡಲಿಲ್ಲವಲ್ಲ?"

ಕೇಶವ ಪಿಳ್ಳೆ ಹಾಗೆ ಹೇಳಿದರು ಅಷ್ಟೆ. ತಪ್ಪು ಎಂದಾಗಲೀ ಅಲ್ಲ ಎಂದಾಗಲೀ ಹೇಳಲಿಲ್ಲ.

ಕೆಲವು ದಿವಸಗಳಿಂದ ಪತ್ರಿಕೆಗಳಲ್ಲೆಲ್ಲ ಮುಖಪುಟಗಳಲ್ಲಿ ಪ್ರಕಟವಾಗುತ್ತಿದ್ದ ಆಶ್ರಮದ ಉದ್ಘಾಟನೆಯ ವಾರ್ತೆ ಕೇಶವ ಪಿಳ್ಳೆಯ ದೃಷ್ಟಿಗೆ ಬಿದ್ದಿತ್ತು. ಅದು ನಗರ ದಲ್ಲಿ ಒಂದು ಬಹು ಮುಖ್ಯ ಕಾರ್ಯಕ್ರಮವಾಗಿರುತ್ತದೆ. ಅದಕ್ಕೆ ಹಣ ಸಂಗ್ರಹಕ್ಕಾಗಿ ಆ ಮಹಿಳೆಯರು ಸ್ತ್ರೀಯರು ಬಂದದ್ದು ಎಂದು ಕೇಶವ ಪಿಳ್ಳೆಗೆ ಹೊಳೆಯಿತು. ತಮಗೆ ಅಪಮಾನ ಮಾಡಿದರು ಎಂದು ಅವರಿಗನ್ನಿಸಿರಬಹುದು. ಹಾಗೆ ಆ ಸ್ತ್ರೀಯರು ಹಿಂದಿರುಗಿ ಹೋಗಿರಬಹುದು—ಎಂದು ಕೇಶವ ಪಿಳ್ಳೆ ಊಹಿಸಿದರು.

ಎಲ್ಲ ಹಿಂದೂ ಉದ್ಯೋಗಸ್ಥರೂ, ಉದ್ಯೋಗಸ್ಥರಲ್ಲದ ಸಾಹುಕಾರರೂ ಆ ಗಡಿಬಿಡಿಯಲ್ಲಿದ್ದಾರೆ. ಸ್ಟೇಟ್ ಕಾಂಗ್ರೆಸ್ಸಿನ ಮುಖಂಡರೆಲ್ಲರೂ ಆ ಸಮಾರಂಭದ ಮುಂದಾಳುಗಳಾಗಿದ್ದಾರೆ. ತಾನು ಹೇಗೆ ಅವರ ಒಳಗೆ ಸೇರಿಕೊಳ್ಳುವುದು ಎಂದು ಕೇಶವ ಪಿಳ್ಳೆ ಆಲೋಚಿಸುತ್ತಿದ್ದರು

ಕಾಂಗ್ರೆಸ್ಸಿನ ಮುಂದಾಳುಗಳಲ್ಲಿ ಯಾರ ಜೊತೆಯಲ್ಲೂ ವೈಯಕ್ತಿಕವಾದ ಸ್ನೇಹ ವಿಲ್ಲ. ಸ್ನೇಹಿತರನ್ನು ಮಾಡಿಕೊಳ್ಳುವ ಅವಕಾಶವೂ ಉಂಟಾಗಿರಲಿಲ್ಲ. ಕಾಂಗ್ರೆಸ್ ಜಯಿಸಿರುವ ಕಾಲ ಇದು. ಬ್ರಿಟಿಷಿನವರು ಭಾರತವನ್ನು ಬಿಟ್ಟುಹೋಗುವ ದಿನವನ್ನೂ ತೀರ್ಮಾನಿಸಿ ಆಗಿದೆ. ತಿರುವಾಂಕೂರಿನಲ್ಲಿ ಸ್ವತಂತ್ರ ತಿರುವಾಂಕೂರು ಎನ್ನುವ ಘೋಷಣೆ ಮಾತ್ರ ಈಗ ಉಳಿದಿರುವುದು. ಬಾಯಿ ಬಿಟ್ಟು ಹೇಳಲು ಸಾಧ್ಯವಿಲ್ಲ

ದಿದ್ದರೂ ಅದೂ ಕೈಬಿಟ್ಟು ಹೋಗುತ್ತದೆ. ಕಾಂಗ್ರೆಸ್ಸೇ ಅಧಿಕಾರಕ್ಕೆ ಬರುತ್ತದೆ.

ಕಾಂಗ್ರೆಸ್, ಕೇಶವ ಪಿಳ್ಳೆಯನ್ನು ಪ್ರಧಾನ ಶತ್ರುವೆಂದು ಭಾವಿಸಿದೆ. ಗಲ್ಲಿಗೇರಿಸ ಬೇಕು ಎಂದು ಅವರು ಘೋಷಿಸುವುದು. ಅಷ್ಟೊಂದು ತಾತ್ಸಾರವಾಗಿ ಕಾಣುವಂತಹ ಸಂದರ್ಭವೂ ಅದಲ್ಲ. ಗಲ್ಲಿಗೆ ಹಾಕದೇ ಇದ್ದರೂ ಒಟ್ಟಿನಲ್ಲಿ ತುಂಬ ಕೆಟ್ಟ ಕಾಲ ಮುಂದೆ ಬರಲಿರುವುದು. ಜೋಯಿಸರು ಹೇಳುವುದೂ ಹಾಗೆಯೇ. ಕಾಂಗ್ರೆಸ್ಸಿನ ಕೆಲವು ಮಂದಿಯ ಜೊತೆಯಲ್ಲಾದರೂ ಸಂಪರ್ಕವನ್ನಿರಿಸಿಕೊಳ್ಳಬೇಕಾಗಿತ್ತು. ಅದು ಇದ್ದಿದ್ದರೆ ಧೈರ್ಯವಾಗಿರಬಹುದಾಗಿತ್ತು. ಅದಕ್ಕೆ ಇದು ಒಳ್ಳೆಯ ಸಂದರ್ಭ !

ಆದರೆ, ಹೇಗೆ ಆ ಸಮಾರಂಭದಲ್ಲಿ ತಾನು ಪಾಲುಗೊಳ್ಳುವುದು? ಆಶ್ರಮ ಇರುವುದು ತಂಗಮ್ಮನ ಮನೆಯಲ್ಲಿ. ನಾನು ಕಟ್ಟಿಸಿದ ಕಟ್ಟಡದಲ್ಲಿ. ಇದರಲ್ಲಿ ಪಾಲು ಗೊಂಡರೆ ಮಾತ್ರೂ ತಂಗಮ್ಮನ ಜೊತೆಯಲ್ಲಿ ಸೇರಿಕೊಳ್ಳಬೇಕಾಗುವುದಿಲ್ಲವೆ? ಈಗ ತಾನೇ ಪ್ರಾರಂಭಿಸಿದ ಮನೋಹರವಾದ ಸಂಸಾರ. ಪುನಃ ಅವ್ಯವಸ್ಥೆಯಾಗುತ್ತದೆ. ಇಂದು ತನ್ನನ್ನು ಪ್ರೀತಿಸುವ ಒಂದೇ ಒಂದು ವ್ಯಕ್ತಿ ಈ ಲೋಕದಲ್ಲಿರುವುದು. ಅದು ಕಾತ್ಯಾಯಿನಿ. ಕ್ಲೇಶಗಳ ಭಾಂಡವನ್ನು ಸುರಿಯಲು ಒಂದು ಸ್ಥಳ ಇದ್ದರೆ ಅದು ಅವಳ ಹತ್ತಿರ ಮಾತ್ರ. ಆ ತೋಳಿನ ಮೇಲೆ ಹಾಯಾಗಿ ನಿದ್ದೆ ಮಾಡಬಹುದು. ಹೃದಯ ನಗುವುದಿದ್ದರೆ ಅವಳ ಹತ್ತಿರ ಮಾತ್ರ. ಅಪಾರ ಬೆಲೆಯುಳ್ಳದ್ದೊಂದನ್ನು ಸಂಪಾದಿಸಿದೆ. ಅದು ಕೈಬಿಟ್ಟುಹೋಗಬೇಕೆ? ಉತ್ಸಾಹದಿಂದ ಕಾಲಕಳೆಯುತ್ತಿರುವ ಅವಳನ್ನು ಶಾಶ್ವತ ವಾಗಿ ಪುನಃ ದುಃಖಕ್ಕೀಡು ಮಾಡಬೇಕೆ?

ಒಂದು ದಿನ ಎಲ್ಲವನ್ನೂ ವಿವರವಾಗಿ ಕಾತ್ಯಾಯಿನಿಯಮ್ಮನ ಹತ್ತಿರ ಹೇಳಿದರು. ಅದು, "ನನಗೆ ಇನ್ನು ಮೇಲೆ ತಂಗಮ್ಮನ ಜೊತೆಯಲ್ಲಿ ಯಾವ ಸಂಬಂಧವೂ ಇಲ್ಲ ಅಂತ ನಾನು ನಿನ್ನ ಹತ್ರ ಹೇಳ್ತಿದ್ದೀನಿ. ನನಗೆ ಅಂಥ ಆಶೆಯೇ ಇಲ್ಲ. ಅವಳ ವಿಚಾರ ವಾಗಿ ನನಗೆ ಯಾವ ಸುದ್ದಿಯೂ ಬೇಡ. ನಮ್ಮ ನಮ್ಮ ನೆಲೆ ಗಟ್ಟಿಮಾಡಿಕೊಂಡರೆ ಸಾಕು."

ಕಾತ್ಯಾಯಿನಿಯಮ್ಮನ ಮುಖ, ಬಾಡಿ ಬೆಂಡಾಗಿ ಕಾಣಿಸಿತು ಅಷ್ಟೆ. ಒಂದು ಶಬ್ದ ವನ್ನೂ ಆ ಸ್ತ್ರೀ ಉಚ್ಚರಿಸಲಿಲ್ಲ. ಅವಳಿಗೆ ಮಾತನಾಡಲು ಸಾಧ್ಯವಿಲ್ಲದಾಗಿತ್ತು. ಗಂಟಲು, ನಾಲಗೆ ಎಲ್ಲವೂ ಕಟ್ಟಿದ್ದುವು. ಕೇಶವ ಪಿಳ್ಳೆಗೆ ತಾನು ಹೇಳಬಾರದಿತ್ತು, ಎನ್ನಿ ಸಿತು. ಇಷ್ಟು ಬೇಗ ಆ ಉತ್ಸಾಹವೂ ಮಂದಹಾಸವೂ ಮಾಯವಾಗುತ್ತವೆ ಎಂದು ಕೇಶವ ಪಿಳ್ಳೆ ಊಹಿಸಿರಲಿಲ್ಲ. ತನ್ನ ಉದ್ದೇಶವನ್ನು ಕಾತ್ಯಾಯಿನಿಯಮ್ಮ ಅರ್ಥಮಾಡಿ ಕೊಳ್ಳಲು ಸಾಧ್ಯವಿಲ್ಲದೇ ಹೋಗಿರಬಹುದು. ಕೆಲವು ಜನ ಕಾಂಗ್ರೆಸ್ಸಿನವರ ಜೊತೆಯಲ್ಲಿ ವೈಯಕ್ತಿಕವಾದ ಮಿತ್ರತ್ವವನ್ನು ಸಂಪಾದಿಸುವುದರಿಂದ ದೊರೆಯುವ ಪ್ರಯೋಜನ ವೇನು, ಯಾತಕ್ಕಾಗಿ ಎಂದು ಅವಳಿಗೆ ತಿಳಿಯದೆ ಹೋಗಿರಬಹುದು. ಇಲ್ಲದಿದ್ದಲ್ಲಿ ಅವಳು ತಪ್ಪು ತಿಳಿದಿರಬಹುದು.

ಕಾತ್ಯಾಯಿನಿಯಮ್ಮ ಮುದುಡಿಹೋಗಿದ್ದಳು. ಒಂದು ಶಬ್ದವನ್ನೂ ಉಚ್ಚರಿಸಿರಲಿಲ್ಲ. ತುಟಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಿದ್ದಳು. ಒಪ್ಪಿಗೆ ಕೇಳಿದ್ದೇ ತಪ್ಪಾಯಿತೇ ಎನ್ನಿಸಿತು ಕೇಶವ ಪಿಳ್ಳೆಗೆ.

ಕಡೆಗೆ ಕಾತ್ಯಾಯಿನಿಯಮ್ಮ ಹೇಳಿದಳು: "ನನ್ನ ಹತ್ರ ಯಾಕೆ ಕೇಳ್ತೀರಿ. ನಿಮಗಿಷ್ಟ ಬಂದ ಹಾಗೆ ಮಾಡಿ. ನಾನು ಇಲ್ಲೆಲ್ಲಾದ್ರೂ ಒಂದು ಮೂಲೇಲಿ ಆ ಮುದುಕಿ ಜೊತೆಯಲ್ಲೋ, ಎಲ್ಲೋ ಕಾಲ ಹಾಕ್ತೀನಿ."

'ಬುದ್ಧಿ ಇರುವವಳ ಹಾಗೆ ಆಡು' ಎಂದು ಕೇಶವ ಪಿಳ್ಳೆ ಉಪದೇಶಿಸಿದರು. ಎಲ್ಲ ಅಧಿಕಾರಿಗಳೂ ಹೀಗೆಯೇ ಒಂದೊಂದು ಉದ್ಯೋಗ ಕೈಗೊಂಡು ಕಾಂಗ್ರೆಸ್ಸಿಗೆ ಹತ್ತಿರ ಇರುವುದು. ಈ ರೀತಿ ಪ್ರತ್ಯೇಕ ನಿಲ್ಲುವುದರಿಂದ ಕೇಡುಂಟಾಗುತ್ತದೆ. ಪ್ರನಃ ಪ್ರಮಾಣ ಮಾಡಿ ಕೇಶವ ಪಿಳ್ಳೆ ಹೇಳಿದರು: "ನನಗೂ ಅವಳಿಗೂ ಯಾವ ಸಂಬಂಧವೂ ಇಲ್ಲ. ನನಗೆ ಅವಳ ಒಡನಾಟ ಬೇಕಾಗಿಯೂ ಇಲ್ಲ."

ಆಗಲೂ ಹಿಂದಿನ ಉತ್ತರವನ್ನೇ ಕಾತ್ಯಾಯಿನಿಯಮ್ಮ ಆವರ್ತಿಸಿದಳು. ಅದೊಂದೇ ಉತ್ತರ ಅವಳಿಗೆ ಹೇಳಲಿದ್ದದ್ದು.

ಕೇಶವ ಪಿಳ್ಳೆ ಅದು ಬೇಡವೆಂದು ತೀರ್ಮಾನಿಸಿದರು. ಆ ಸಮಾರಂಭದಲ್ಲಿ ಪಾಲುಗೊಳ್ಳುವುದು ಬೇಡವೆನ್ನುವ ತೀರ್ಮಾನಕ್ಕೆ ಬಂದರು. ಭವಿಷ್ಯದಲ್ಲಿ ಏನಿದೆಯೋ ಅದರಂತಾಗಲಿ. ಕಾಂಗ್ರೆಸ್ ಅಧಿಕಾರದಲ್ಲಿ ಬಂದಾಗ ತನ್ನ ಕಡೆಯಲ್ಲಿ ಯಾರೂ ಇಲ್ಲದೆ ತನ್ನನ್ನು ಹೊರಗೆ ತಳ್ಳುವುದಾದರೆ ಹಾಗೆಯೇ ಆಗಲಿ. ಕಾತ್ಯಾಯಿನಿಯಮ್ಮನ ಮನಸ್ಸಿಗೆ ನೋವು ಮಾಡಬಾರದು ಎಂದುಕೊಂಡರು. ಈಗ ಅನುಭವಿಸುತ್ತಿರುವಂತಹ ಶುಶ್ರೂಷೆಗಳಿಗಿಂತ, ಅವಳಿಂದ ಲಭಿಸುವ ಆಶ್ವಾಸಕ್ಕಿಂತ ಹೆಚ್ಚಾಗಿ ಮತ್ತೊಂದಿಲ್ಲ ಎನ್ನಿಸಿತು.

ಇನ್ನು ಮೇಲೆ ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ವ್ಯಕ್ತಿ. ಅವಳ ವ್ಯಕ್ತಿ ಮಾತ್ರ. ಅವಳಿಗಾಗಿ ತಾನು.

# [27]

## ಅಧಿಕಾರದ ಕೊನೆಯ ಉಸಿರು

ಕೇಶವ ಪಿಳ್ಳೆಯ ಬುದ್ಧಿಗೆ ಮಂಕುಕವಿದು ಕೆಲವು ದಿವಸಗಳಾಗಿದ್ದುವು. ಎಲ್ಲಿಯೂ, ಯಾವುದರಲ್ಲಿಯೂ ಮೊದಲ ಕೈ ಆಗಿದ್ದ ಆ ಸಾಮರ್ಥ್ಯ ಕುಗ್ಗಿದಂತೆ ತೋರಿತು. ಅವರು ಚಿಂತೆಗೊಳಗಾಗಿದ್ದರು. ಆ ಉತ್ಸಾಹರಾಹಿತ್ಯವೂ ಸ್ಪಷ್ಟವಾಗುತ್ತಿತ್ತು. ಸೋತುಹೋದ ಮನುಷ್ಯನಂತಾಗಿದ್ದರು. ಭಯಪಡುತ್ತಿದ್ದರು. ಹಿಂದೆಮುಂದೆ ನೋಡುತ್ತಿದ್ದರು.

ಗಂಡನಲ್ಲಾಗಿದ್ದ ಬದಲಾವಣೆಯನ್ನು ಕಾತ್ಯಾಯಿನಿಯಮ್ಮ ಗಮನಿಸಿದ್ದಳು. ಅವಳು ಕೇಳುತ್ತಿದ್ದಳು: "ಯಾಕೆ ಹೀಗೆ ಒಂದು ಥರಾ ಇದ್ದೀರಿ" ಎಂದು.

ಸ್ಪಷ್ಟವಾದ ಉತ್ತರ ಕಾತ್ಯಾಯಿನಿಯಮ್ಮನಿಗೆ ದೊರೆಯಲಿಲ್ಲ. ವಿಷಯವೇನು ಎನ್ನುವುದು ತಿಳಿಯದಿದ್ದರೂ ಅವಳು ಗಂಡನನ್ನು ಕೇಳುತ್ತಿದ್ದಳು: "ಯಾಕೆ ಇಷ್ಟೊಂದು ಬೇಸರಪಟ್ಟುಕೊಂಡಿದ್ದೀರಿ? ನನಗೆ ತಿಳಿದ ಹಾಗೆ ಯಾಕೆ ಅಂತ ಗೊತ್ತಾಗೋದಿಲ್ಲ" ಎಂದು ಹೇಳಿ, "ನೌಕರಿ ವಿಷಯವಾ? ಅದೇ ಆಗಿದ್ದರೆ ಹೋಗಲಿ ಬಿಡಿ. ದೇವರು ಕೊಟ್ಟದ್ದು. ಕೈಬಿಟ್ಟುಹೋದರೂ ನಮಗೆ ಯಾವ ದೋಷವೂ ತಟ್ಟೋದಿಲ್ಲ."

ಆದರೆ ಆ ಸ್ಥಿತಿಯಲ್ಲಿ ಕೇಶವ ಪಿಳ್ಳೆಗೆ ಅದನ್ನು ವಿವರಿಸಲು ಸಾಧ್ಯವಿಲ್ಲ. ಅದಲ್ಲವೇ ಅವರ ಸ್ವಭಾವ?

ಕೇಶವ ಪಿಳ್ಳೆಗೆ ತನ್ನ ಔದ್ಯೋಗಿಕ ಜೀವನ ಒಂದು ಬಹು ಮುಖ್ಯ ಘಟ್ಟವನ್ನು ತಲಪುತ್ತಿದೆ ಎಂದು ತೋರುತ್ತಿತ್ತು. ಭವಿಷ್ಯವನ್ನು ಕುರಿತು ಅವರಿಗೆ ಕಳವಳವುಂಟಾಗಿತ್ತು. ಆ ದೀರ್ಘವಾದ, ಸ್ಪಷ್ಟವಾದ ಮಾರ್ಗ ಇಂದು ಬಳಸುಮಾರ್ಗವಾಗಿ ಕತ್ತಲೆಯಲ್ಲಿ ಅದೃಶ್ಯವಾಗುತ್ತಿದೆ—ಯಾವುದನ್ನೂ ತೀರ್ಮಾನಿಸಲು ಸಾಧ್ಯವಿಲ್ಲ. ಆ ಅನಿಶ್ಚಿತತ್ವವನ್ನು ಕುರಿತು ಅವರು ಆಲೋಚಿಸುವಂತಾಯಿತು. ಕಾಂಗ್ರೆಸ್ ಅಧಿಕಾರಕ್ಕೆ ಬರುತ್ತದೆ. ಈ ಅಧಿಕಾರದ ಸಂವಿಧಾನ ಕೈಬಿಟ್ಟು ಹೋಗುತ್ತದೆ. ಅದೊಂದು ದೊಡ್ಡ ವ್ಯಾಕುಲವಾಗಿರುತ್ತದೆ. ಆ ಪ್ರಬಲವಾದ ವ್ಯಾಕುಲದಲ್ಲಿ ಸ್ಥಾನದಿಂದ ದೂರ ಹೋಗಿಬಿಡಬೇಕಾಗಿ ಬರಬಹುದು. ಹಾಗೆ ಹೋಗುವ ಸಾಧ್ಯತೆಯೇ ಕಂಡುಬರುತ್ತದೆ. ತನಗೆ ಸಂಬಂಧಿಸಿದಂತೆ ಭದ್ರವಾಗಿ ಹಿಡಿದು ನಿಲ್ಲಿಸುವ ಯಾವ ಶಕ್ತಿಯೂ ಇಲ್ಲ. ಉಳಿದವರೆಲ್ಲ ಅವರು ಹಿಡಿದಿರುವುದನ್ನು ಭದ್ರಪಡಿಸಿಕೊಳ್ಳುತ್ತಿದ್ದಾರೆ. ತಾನು ಮಾತ್ರ ಅದಕ್ಕಾಗಿ ಯಾವ ಪ್ರಯತ್ನವನ್ನೂ ಮಾಡುತ್ತಿಲ್ಲವೆನ್ನಿಸಿತು. ಒಬ್ಬನೇ ಒಬ್ಬ ಕಾಂಗ್ರೆಸ್ ಮುಖಂಡನ ಹತ್ತಿರವೂ ಒಮ್ಮೆ ನಗಾಡಿದ್ದು ಕೂಡ ಇಲ್ಲ. ಅವರನ್ನು ಎದುರೆದುರಿಗೆ ಕಾಣುವ ಸಂದರ್ಭವೂ ದೊರೆಯಲಿಲ್ಲ. ಒಬ್ಬ ಕಾಂಗ್ರೆಸ್ಸಿನವನ ಪರಿಚಯವೂ ಇಲ್ಲ. ಆ ಹೊಸ

ಸಂವಿಧಾನದಲ್ಲಿ ತನಗಾಗಿ, ತನ್ನ ಪರ ವಹಿಸಿ ಮಾತನಾಡುವವರು ಯಾರಿದ್ದಾರೆ? ಯಾರೂ ಇಲ್ಲ.

ಕೇಶವ ಪಿಳ್ಳೆ ತನ್ನ ಹಿಂದಿನ ಜೀವನವನ್ನು ಒಮ್ಮೆ ಜ್ಞಾಪಿಸಿಕೊಂಡರು. ಉದ್ಯೋಗ ಹುಡುಕಿಕೊಂಡು ತಿರುವನಂತಪುರಕ್ಕೆ ಬಂದು ಸಂದನ್‌ಕೋಡಿನಲ್ಲಿದ್ದ 'ಶಿವಮಯಂ ಲಕ್ಷ್ಮೀ ಹೋಟೆಲ್'ನಲ್ಲಿ ವಾಸಮಾಡುತ್ತಿದ್ದು, ಚೀಫ್ ಸೆಕ್ರೆಟರಿ ಮೆನೋನರ ದೃಷ್ಟಿಗೆ ಬಿದ್ದ ದಿನದಿಂದ ಇಂದಿನ ವರೆಗಿನ ಬದುಕನ್ನೆಲ್ಲ ಅವರು ಅವಲೋಕಿಸಿದರು. ನಿಜ ವಾಗಿಯೂ ಅದು ಒಂದು ಅದೃಷ್ಟ. ಆದರೆ ದೂರದೃಷ್ಟಿಯಿಲ್ಲದೆ, ಸರಿಯಾಗಿ ಆಲೋಚಿ ಸದೆ ಮಾಡಿದ ಕೆಲಸದ ಕಥೆ ಇದು. ಈ ಜೀವನದಲ್ಲಿ ತನ್ನಿಂದ ಯಾರಿಗೆ ಉಪಕಾರ ವಾಗಿದೆ ಎಂದು ಜ್ಞಾಪಿಸಿಕೊಂಡರು. ಒಬ್ಬರಿಗೂ ಉಪಕಾರ ಮಾಡಿಲ್ಲ. ಯಾರಿಗೋಸ್ಕರ ತಾನು ದುಡಿದದ್ದು? ದಿವಾನರಿಗೋಸ್ಕರ. ದಿವಾನರಿಗಾಗಿ ಮಾತ್ರ. ಒಬ್ಬ ಮನುಷ್ಯನ ಸ್ನೇಹವನ್ನು ಸಂಪಾದಿಸಲೂ ಇದುವರೆಗೆ ಸಾಧ್ಯವಾಗಿಲ್ಲ. ಕಾಂಗ್ರೆಸ್ಸಿನ ವಿಚಾರ ಹಾಗಿರಲಿ, ಕಾಂಗ್ರೆಸ್ ಅಲ್ಲದವರಲ್ಲಿಯಾದರೂ ತನಗೊಬ್ಬ ಸ್ನೇಹಿತನಿದ್ದಾನೆಯೆ? ಒಬ್ಬನೂ ಅವರ ಜ್ಞಾಪಕಕ್ಕೆ ಬರುತ್ತಿಲ್ಲ. ಯಾವುದಾದರೂ ಅಪಾಯವುಂಟಾದರೆ "ಒಳ್ಳೆ ಕಷ್ಟ ಬಂತಲ್ಲ" ಎಂದು ಸುಮ್ಮನೆ ಔಪಚಾರಿಕವಾಗಿಯಾದರೂ ಹೇಳುವವರು ಯಾರಾದರೂ ಇದ್ದಾರೆಯೆ? ಹಾಗೆ, ಒಬ್ಬ ಮನುಷ್ಯನನ್ನು ಹುಡುಕುವುದಕ್ಕಾಗಿ ಕೇಶವ ಪಿಳ್ಳೆ ಬಹಳ ದಿನಗಳಿಂದ ಶ್ರಮಿಸುತ್ತಿದ್ದಾರೆ. ಯಾರೂ ಇಲ್ಲ. ಓಹ್! ಎಂತಹ ಕಷ್ಟ! 'ಹಾಗಾದದ್ದು ಒಳ್ಳೆಯದಾಯ್ತು' ಎಂದು ಹೇಳುವವರೇ ಇರುವುದು.

ಮಾಡಬಾರದ್ದನ್ನೆಷ್ಟೋ ಮಾಡಿಬಿಟ್ಟೆ ಎನ್ನಿಸಿತು. ಪೊಲಿಟಿಕಲ್ ಸೆಕ್ರೆಟರಿಯಾಗಿ, ಕಳೆದ ಆ ಸುದೀರ್ಘವಾದ ಕಾಲಘಟ್ಟವನ್ನು ಅವರು ನೆನಸಿಕೊಂಡರು. ಮತ್ತೊಂದರ ಆಲೋಚನೆ ಆ ಕಾಲವಲ್ಲಿರಲಿಲ್ಲ. ಅನಂತರ ಆ ಆಲೋಚನೆ ಬರಲೂ ಇಲ್ಲ. ಕಾಂಗ್ರೆಸ್ಸಿನ ಜೊತೆಯಲ್ಲಿ ಹಾಗೆ ಶತ್ರುತ್ವ ಕಟ್ಟಿಕೊಂಡದ್ದು ಸರಿಯೆ? ಇನ್ನು ಮೇಲೆ ಅದನ್ನೆಲ್ಲ ಜ್ಞಾಪಿಸಿಕೊಂಡು ಪ್ರಯೋಜನವಿಲ್ಲ. ಏಕಾಂಗಿಯಾದ ಆ ಅವಸ್ಥೆ ಕೇಶವ ಪಿಳ್ಳೆಯನ್ನು ಭಯಪಡಿಸಿತು.

ಕೇಶವ ಪಿಳ್ಳೆಗೆ ಸೆಕ್ರೆಟರಿಯೇಟ್‌ನಲ್ಲಿ ಮಾತ್ರವಲ್ಲ, ದೇಶದ ಎಲ್ಲ ನೌಕರರೂ ಹೊಸ ಬದಲಾವಣೆಗೆ ಸಿದ್ಧರಾಗುತ್ತಿದ್ದಂತೆ ತೋರಿತು. ತಮಗೆ ಪರಿಚಯವಿದ್ದ ಒಬ್ಬೊಬ್ಬ ನೌಕರನನ್ನೂ ಜ್ಞಾಪಿಸಿಕೊಂಡರು. ಎಲ್ಲರೂ ಕಾಂಗ್ರೆಸ್ಸಿನ ಜೊತೆಯಲ್ಲಿ ಸ್ನೇಹ ದಿಂದಿದ್ದಾರೆ. ಅವರ ಕಡೆಯ ಜನರೂ ಕಾಂಗ್ರೆಸ್ಸಿನಲ್ಲಿದ್ದಾರೆ. ಬೇಕಾದ ಜನರೂ ಇದ್ದಾರೆ. ಹೊಸ ಹೊಸ ಸಂಪರ್ಕಗಳನ್ನು ಅವರು ಏರ್ಪಡಿಸಿಕೊಳ್ಳುತ್ತಿದ್ದಾರೆ. ಧನ್ಯಾನಂದಾ ಶ್ರಮದ ಸ್ಥಾಪನೆಗೆ ಅಗತ್ಯವಿರುವ ಕಾರ್ಯಕ್ರಮಗಳಲ್ಲಿ ನೌಕರರು, ಕಾಂಗ್ರೆಸ್ಸಿನವರು ಎಲ್ಲರೂ ಸಹಕರಿಸಬೇಕು ಎನ್ನುವ ಒಂದು ಸರ್ಕ್ಯುಲರ್ ಹೊರಟಿತ್ತು. ಆದರೆ ಹೊರಗೆ ಅದನ್ನು ನೌಕರರು ಧಿಕ್ಕರಿಸಿ ಮಾತನಾಡುತ್ತಾರೆ. ಕೇಶವ ಪಿಳ್ಳೆ ಅದೆಲ್ಲವನ್ನೂ ಗಮನಿಸು

ವುದುಂಟು. ಚೀಫ್ ಸೆಕ್ರೆಟರಿಯನ್ನು ಬಿಟ್ಟು ಉಳಿದವರು ಹೊಸ ಸಂವಿಧಾನಕ್ಕೆ ಸಿದ್ಧ ರಾಗುತ್ತಿದ್ದಾರೆ. ಹಾಗಲ್ಲದೆ ಮತ್ತೇನು?

ನಗರದಲ್ಲಿದ್ದ ಅಧಿಕಾರಿಗಳ ಮನೆಗಳಲ್ಲಿ ಸ್ವಾಮೀಜಿ ಅವರ ಪೂಜಾದಿ ಕರ್ಮಗಳು, ದೀಕ್ಷೆ—ಮುಂತಾದುವೆಲ್ಲ ಯಾವಾಗಲೂ ನಡೆಯುತ್ತಿರುತ್ತವೆ. ಎಲ್ಲಿಯೋ ಮುದುಡಿ ಕೊಂಡಿದ್ದ ರಾಜಕೀಯ ರಂಗ ಪುನಃ ಚೇತನ ಪಡೆದು ಹೊರಗೆ ಬಂದಂತೆ ತೋರಿತು. ಅದು ತುಂಬ ವಿಜೃಂಭಣೆಯ ಸಮಾರಂಭ. ಎಲ್ಲರೂ ಅದರಲ್ಲಿ ಪಾಲುಗೊಳ್ಳುತ್ತಾರೆ. ಸ್ವಾಮೀಜಿ ಅಭೀಷ್ಟದಾಯಕರೂ ತ್ರಿಕಾಲಜ್ಞಾನಿಯೂ ಆಗಿದ್ದಾರೆಂದು ಜನರು ಹೇಳು ವುದು. ನಗರವಿಡೀ ಅವರ ಆಧ್ಯಾತ್ಮಿಕ ತೇಜಸ್ಸಿನಲ್ಲಿ ಮುಳುಗಿಹೋಗಿದೆ.

ಎಲ್ಲರಿಗೂ ಸ್ವಾಮೀಜಿಯ ಅನುಗ್ರಹ ಬೇಕಾಗಿತ್ತು. ಅದಕ್ಕೋಸ್ಕರ ಕಾಂಗ್ರೆಸ್ಸಿನ ಒಬ್ಬ ಸಾಮಾನ್ಯ ಮನುಷ್ಯನಿಂದ ಹಿಡಿದು ಎಲ್ಲರೂ ಪೂಜೆ, ಭಿಕ್ಷೆ ಮುಂತಾದುವನ್ನು ನಡೆಸಿದರು. ಕೆಲವರನ್ನು ಸ್ವಾಮೀಜಿ ಹೃದಯಪೂರ್ವಕವಾಗಿ ಅನುಗ್ರಹಿಸಿದರು. ಅವರಲ್ಲಿ ಒಬ್ಬಾತ ಗೋವಿಂದನ್ ಪಿಳ್ಳೆ. ನಿಜವಾಗಿಯೂ ಆತ ಕೇಶವ ಪಿಳ್ಳೆಯ ಪ್ರೊಮೋಷನ್ ಕುರಿತು ಗೊಣಗುತ್ತಿದ್ದ ಮನುಷ್ಯ.

ಸ್ವಾಮೀಜಿಯ ಸನ್ನಿಧಾನದಲ್ಲಿ ಅಭೀಷ್ಟ ಸಿದ್ಧಿಸುತ್ತದೆ. ಅದಕ್ಕೋಸ್ಕರ ಅಧಿಕಾರಿ ಗಳು ಬಲಿವಾಡು ಮುಂತಾದುವುಗಳನ್ನು ಒಪ್ಪಿಸುತ್ತಿದ್ದಾರೆ.

ಕೇಶವ ಪಿಳ್ಳೆಗೆ ಇದೆಲ್ಲವೂ ತಿಳಿದಿತ್ತು. ಗತಕಾಲದಲ್ಲಿ ಸೃಷ್ಟಿಸಿದ ಕಪ್ಪನ್ನು ಹೋಗ ಲಾಡಿಸಿಕೊಳ್ಳಲು ತಕ್ಕ ಸಮಯ ಇದು. ಕೇಶವ ಪಿಳ್ಳೆಗೆ ಸ್ವಾಮೀಜಿಯನ್ನು ಮನೆಗೆ ಆಹ್ವಾನಿಸಿ ಒಂದು ಪೂಜೆ, ಭಿಕ್ಷೆ ನಡೆಸಿದರೇನು ಎಂದು ಎಷ್ಟೋ ಸಲ ಅನ್ನಿಸಿತ್ತು. ಹಾಗೆ ಮಾಡಿದರೆ ಅದರಿಂದ ದೊರೆಯುವ ಪ್ರಯೋಜನವನ್ನೂ ಲೆಕ್ಕಹಾಕಿದರು. ಆದರೆ ಆ ಭಿಕ್ಷೆ, ಪೂಜೆಗಳ ಸಮಯದಲ್ಲಿ ತಂಗಮ್ಮನೂ ಶೇಖರವಿಲಾಸಕ್ಕೆ ಕೊನೆಯ ಸಲ ಹೋದಾಗ ಕಂಡ ಯುವಕನೂ ಇರುತ್ತಾರೆ.

ತಂಗಮ್ಮ, ಇಂದು ತಂಗಮ್ಮನಲ್ಲ. ಕಾಷಾಯ ವಸ್ತ್ರ ಧರಿಸಿದ ಮಾತಾ ಜ್ಯೋತಿರ್ಮಯಿದೇವಿಯಾಗಿದ್ದಾಳೆ. ಆ ಯುವಕ ಚಿದಾನಂದನಾಗಿದ್ದಾನೆ. ಬಹುಶಃ ತಂಗಮ್ಮನಲ್ಲಿ ಪರಿವರ್ತನೆಯುಂಟಾಗಿರಬಹುದು. ಅಂತಹ ಒಂದು ಪರಿವರ್ತನೆಗೆ ಹೆಚ್ಚು ಸಮಯ ಬೇಕೆ? ಭಾಗೀರಥಿಯಮ್ಮ ಆ ಯುವಕನನ್ನೂ ತಂಗಮ್ಮನನ್ನೂ ಕುರಿತು ಹೇಳಿದುದು ಸರಿಯಲ್ಲದೇ ಇರಬಹುದು. ಆಕೆ ಹೇಳಿದ ಹಾಗಿದ್ದರೆ, ಅದು ವ್ಯಭಿಚಾರದ, ಅನೀತಿ ಮಾರ್ಗದ ಕಥೆಯೇ ಆಗಿದ್ದಲ್ಲಿ ಇಷ್ಟೊಂದು ಜನರು ಆ ಅನಾಥ ವನಿತಾ ಸದನ ಮತ್ತು ಆಶ್ರಮದ ವಿಚಾರವಾಗಿ ಆಕರ್ಷಿತರಾಗುತ್ತಿದ್ದರೆ?

ಆದರೆ ತಂಗಮ್ಮನನ್ನು ಮಾತಾಜಿ ಎಂದು ಪೂಜಿಸಬೇಕು. ಹೇಗೆ ಪೂಜಿಸುವುದು? ನಿಜವಾಗಿಯೂ ಸಂಕೋಚವಾಗುತ್ತದೆ. ಆಗ ತನ್ನ ಆತ್ಮ ವಿಧಿಸತೊಡಗಿತು. ಏತಕ್ಕೆ ತಾಯಿಯನ್ನು ಪೂಜಿಸುವಂತೆ ಅವಳನ್ನು ಪೂಜಿಸಬಾರದು? ಅದು ಕೃತಜ್ಞತೆಯಲ್ಲವೆ?

ನಿಜವಾಗಿಯೂ ಈ ಸ್ಥಾನಕ್ಕೆ ಏರಲು ಯಾರು ಕಾರಣ? ಆದರೆ ಅದೊಂದು ದೊಡ್ಡ ಸಮಸ್ಯೆಯಾಗಿತ್ತು. ಇದುವರೆಗೆ ಅನುಭವಿಸಿಲ್ಲದ ಒಂದು ರೀತಿಯ ಮಾನಸಿಕ ಸುಖವೂ ಸಮಾಧಾನವೂ ಕೇಶವ ಪಿಳ್ಳೆಗುಂಟಾಗಿತ್ತು. ಇಂದು ಅವರನ್ನು ಭಯಪಡಿಸುವ ವ್ಯಕ್ತಿ ಮನೆಯಲ್ಲುಂಟು.

ಪೂಜೆಗಳನ್ನೂ ಭಿಕ್ಷೆಗಳನ್ನೂ ಕುರಿತ ಮಾತುಕತೆಗಳು ಸ್ಕೂಲುಗಳಿಗೂ ತಲಪಿದುವು. ವಿಜಯಮ್ಮನ ಸ್ಕೂಲಿನಲ್ಲೂ ಅವಳ ಕ್ಲಾಸಿನಲ್ಲಿ ಓದುತ್ತಿದ್ದ ಎಷ್ಟೋ ಹುಡುಗಿಯರ ಮನೆಯಲ್ಲಿ ಪೂಜೆ ಭಿಕ್ಷೆಗಳು ನಡೆದುವು. ಅವರೆಲ್ಲರೂ ಸ್ಕೂಲಿಗೆ ಬಂದಾಗ ಆ ಸಮಾರಂಭವನ್ನು ಕುರಿತು ವರ್ಣಿಸುತ್ತಿದ್ದರು.

"ನಿಮ್ಮ ಮನೆಯಲ್ಲಿ ಯಾವಾಗ ಪೂಜೆ ಇಟ್ಟುಕೊಂಡಿದ್ದೀರಿ?" ಎಂದು ಕೆಲವರು ಅವಳನ್ನು ಕೇಳಿದ್ದುಂಟು. ಅವಳಿಗೆ ಆ ವಿಚಾರ ತಿಳಿಯದು.

ಒಂದು ದಿನ ಮಗಳು ತಂದೆಯ ಕುರ್ಚಿಯ ಹಿಂದುಗಡೆ ಬಂದು ನಿಂತುಕೊಂಡು ಮುಖವನ್ನು ಮುಂದಕ್ಕೆ ನೀಡಿ, ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿದಳು.

"ಅಪ್ಪ, ನಮ್ಮ ಮನೆಗೂ ಸ್ವಾಮಿಜಿ ಕರೆದು ಪೂಜೆ ಇಟ್ಟುಕೊಳ್ಳೋಣ."

ಮುಖವನ್ನರಳಿಸಿಕೊಂಡು, ಹಿಂದಕ್ಕೆ ತಿರುಗಿ ಕೇಶವ ಪಿಳ್ಳೆ ಕೇಳಿದರು: "ನನ್ನ ಮಗಳಿಗೆ ಅದನ್ನ ನಡೆಸಬೇಕೂಂತ ಆಸೆ ಉಂಟಾ?"

ವಿಜಯಮ್ಮ ಸಮ್ಮತಿ ಸೂಚಿಸುತ್ತ, "ಹ್ಞು" ಎಂದಳು. ಕೇಶವ ಪಿಳ್ಳೆ ಹೇಳಿದರು: "ಹಾಗಾದರೆ ಅವಳನ್ನ ಒಪ್ಪಿಸು. ಪೂಜೆ ಇಟ್ಟುಕೊಳ್ಳೋಣ."

ವಿಜಯಮ್ಮ ಒಳಗೆ ಹೋದಳು. ಹೆಚ್ಚು ಸಮಯ ಕಳೆದಿರಲಿಲ್ಲ. ತಾವು ಕುಳಿತ ನೆಲ ನಡುಗುತ್ತಿರುವಂತೆ ತೋರಿತು. ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯ ಮುಂದೆ ಜ್ವಾಲಾಮುಖಿಯಂತೆ ಬಂದು ನಿಂತಿದ್ದರು.

ಅವರು ಹೆಂಡತಿಯನ್ನು ಹಿಂದೆಂದೂ ಹೀಗೆ ನೋಡಿರಲಿಲ್ಲ. ನಿಜವಾಗಿಯೂ ಕೇಶವ ಪಿಳ್ಳೆ ನಡುಗಿಹೋದರು. ಅವರಿಗೆ ತಪ್ಪು ಮಾಡಿದ್ದ ಭಾವನೆಯಿತ್ತಲ್ಲ!

ಕೇಶವ ಪಿಳ್ಳೆ ಒಂದು ಕೃತಕ ನಗುವನ್ನು ತಂದುಕೊಂಡರು. "ಇಲ್ಲಿಗೆ ಕರೆದುಕೊಂಡು ಬರೋದಕ್ಕೆ ನನ್ನ ಒಪ್ಪಿಗೆ ಪಡೆಯೋದಕ್ಕೆ ಮಗಳನ್ನ ಕಳಿಸಿದ್ದೀರಾ?" ಎಂದು ಕಾತ್ಯಾಯಿನಿಯಮ್ಮ ಕೇಳಿದಳು.

ಕೇಶವ ಪಿಳ್ಳೆ ತುಂಬ ವಿನಯದಿಂದ ಹೇಳಿದರು: "ಅದಕ್ಯಾಕೆ ಇಷ್ಟು ಸಿಟ್ಟು ಮಾಡಿಕೊಳ್ತೀಯೆ? ಒಳ್ಳೆ ಭದ್ರಕಾಳಿ ಹಾಗೆ ಕುಣಿತೀಯಲ್ಲೇ, ನಾನು ಹೆದರಿ ಹೋದೆ."

ಕಾತ್ಯಾಯಿನಿಯಮ್ಮನಿಗೆ ಆ ನಯಗಾರಿಕೆಯ ಮಾತುಗಳೊಂದೂ ಬೇಕಾಗಿರಲಿಲ್ಲ.

"ಬೇಡ. ನಾನಿದೊಂದನ್ನೂ ನೋಡಲಾರೆ. ನನ್ನ ಪ್ರಾಣ ಇರೋ ತನಕ ಅದು ನಡೆಯೋದಕ್ಕೆ ಬಿಡೋದಿಲ್ಲ. ಸ್ವಾಮಿಯೂ ಸರಿ, ಮಾತಾಜೀನೂ ಸರಿ. ಮೊದಲು

ನನ್ನನ್ನ ಸಾಯಿಸಿ, ಆ ಮೇಲೆ ಹೂವಿಟ್ಟು ಪೂಜಿಸೋದೋ ಏನು ಬೇಕಾದರೂ ಮಾಡಿ ಕೊಳ್ಳಿ."

ಕೇಶವ ಪಿಳ್ಳೆ ಕೇಳಿದರು: "ನೀನು ಯಾಕೆ ಹೀಗೆ ಹಾರಾಡ್ತೀಯಾ ಅಂತ?"

ಕಾತ್ಯಾಯಿನಿಯಮ್ಮನಿಗೆ ಸಹಿಸಲು ಸಾಧ್ಯವಾಗಲಿಲ್ಲ. ಮುಂದಿನ ಯಾವ ನಿಮಿಷದಲ್ಲಿ ಬೇಕಾದರೂ ಗಟ್ಟಿಯಾಗಿ ಅತ್ತುಬಿಡುವಂತಿತ್ತು. ತನ್ನನ್ನು ತಾನು ಮರೆತಂತೆ ಕಾತ್ಯಾಯಿನಿಯಮ್ಮ ಕೇಳಿದಳು:

"ಅವಳನ್ನಿಲ್ಲಿಗೆ ಕರೆದುಕೊಂಡು ಬರಬೇಕು ಅಲ್ಲ? ನಾನು ಅವಳ ಕಾಲು ತೊಳೀ ಬೇಕು ಅಲ್ವಾ? ಆ ಮುಂದಕೆ ಕೆಲವು ಪೂಜೆಗಳಿಗೆ ಹೋಗಿ ಕಣ್ಣಾರೆ ಕಂಡು ಬಂದು ಹೇಳೋದನ್ನೆಲ್ಲ ಕೇಳಿದ್ದೀನಿ. ಆ ದೊಡ್ಡ ದೊಡ್ಡ ಮನೆ ಹೆಂಗಸರೆಲ್ಲ ಕಾಲು ತೊಳೀತಾ ರಂತೆ. ಈಗ ನಾನು ಅವನ ಕಾಲ್ನೂ ಅವಳ ಕಾಲ್ನೂ ತೊಳೆದು ಆ ನೀರು ಕುಡೀಬೇಕು ಅಲ್ವಾ?"

ಕಾತ್ಯಾಯಿನಿಯಮ್ಮನಿಗೆ ಉಸಿರುಕಟ್ಟಿದಂತಾಗಿ ಸ್ವಲ್ಪ ಹೊತ್ತು ಸುಮ್ಮನೆ ನಿಂತು ಕೊಂಡಳು.

"ನನ್ನನ್ನ ಅತ್ತಲಾಗೆ ಊರಿಗೆ ಕರೆದುಕೊಂಡು ಹೋಗಿ ಬಿಟ್ಬಿಡಿ."

ಮರುಕ್ಷಣದಲ್ಲಿಯೇ ಕಾತ್ಯಾಯಿನಿಯಮ್ಮ ಗಟ್ಟಿಯಾಗಿ ಅಳುವುದಕ್ಕಾರಂಭಿಸಿ ದಳು. ಬಿಕ್ಕಿಬಿಕ್ಕಿ ಅತ್ತಳು.

"ಅಯ್ಯೋ! ನನಗಿಲ್ಲಿ ಯಾರಿದ್ದಾರೆ? ಯಾರೂ ಇಲ್ಲ. ಇದ್ದವರಿಬ್ಬರು. ಅವರೂ ಕಣ್ಣು ಮುಚ್ಚಿಕೊಂಡರು."

ಕಾತ್ಯಾಯಿನಿಯಮ್ಮ ನಿಲ್ಲಲಾರದೆ ಹತ್ತಿರದಲ್ಲಿದ್ದ ಸೋಫದ ಮೇಲೆ ಬಿದ್ದು ಬಿಕ್ಕಿಬಿಕ್ಕಿ ಅತ್ತಳು.

ಕೇಶವ ಪಿಳ್ಳೆ ಮೇಲೆದ್ದು ಆ ರೂಮಿನಲ್ಲಿ ಅತ್ತ ಇತ್ತ ನಡೆದಾಡುತ್ತಿದ್ದರು. ಅಲ್ಲಿ ಅಂತಹ ದೃಶ್ಯವೊಂದು ಸೃಷ್ಟಿಯಾಗಿತ್ತು. ಕಾತ್ಯಾಯಿನಿಯಮ್ಮನನ್ನು ಸಮಾಧಾನ ಮಾಡ ಬೇಕೇ ಅಥವಾ ಸುಮ್ಮನಿರಬೇಕೇ ಎಂದು ಆಲೋಚಿಸುತ್ತಿದ್ದುದಾಗಿರಬೇಕು. ಒಂದು ಅಸಮಾಧಾನ ಅವರ ಮುಖದಲ್ಲಿ ಕಂಡುಬರುತ್ತಿದ್ದದ್ದು. ಬಹುಶಃ ಈಗ ಅವರ ಕಿವಿ ಯೊಳಗೆ ಕಿಟ್ಟುವಮಾವನ ಶಬ್ದ ಪ್ರತಿಧ್ವನಿಸುತ್ತಿರಬೇಕು: "ಅವಳು ಭಾಗ್ಯವತಿ."

ಹಾಗೆಯೇ ಸ್ವಲ್ಪ ಹೊತ್ತು ಕಳೆಯಿತು. ಅವರು ಹೆಂಡತಿಯ ಹತ್ತಿರ ಸ್ವಲ್ಪ ಗಂಭೀರವಾಗಿ ಕೇಳಿದರು: "ಇದು ಬೇಡದ ವಿಚಾರ. ಇದಕ್ಕೆ ಯಾಕೆ ಹೀಗೆ ಬಿಕ್ಕಿಬಿಕ್ಕಿ ಅಳ್ತೀಯಾ?"

ಕಾತ್ಯಾಯಿನಿಯಮ್ಮ ಏನೂ ಮಾತಾಡಲಿಲ್ಲ. ಅವಳು ಅಳುತ್ತಿದ್ದಳು. ಬಹುಶಃ ಅವಳಿಗೆ ತನ್ನನ್ನು ತಾನು ನಿಯಂತ್ರಿಸಿಕೊಳ್ಳುವ ಶಕ್ತಿಯಿಲ್ಲದೆ ಹೋಗಿರಬಹುದು.

ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ಹತ್ತಿರ ಬಂದು ಕುಳಿತುಕೊಂಡು ಸಮಾಧಾನ

ಪಡಿಸಲು ತೊಡಗಿದರು. ಅವರು ಮುಖ ಅಡಿ ಮಾಡಿ ಮಲಗಿದ್ದ ಅವಳ ಮುಖವನ್ನು ಹಿಡಿದು ಎತ್ತಿದರು. ಆ ಮುಖ ಕಣ್ಣೀರಿನಿಂದ ತೊಯ್ದುಹೋಗಿತ್ತು.

ಅವರು ಕೇಳಿದರು: "ಇಷ್ಟೊಂದು ಅಳೋದಕ್ಕೆ ಈಗ ನಿನಗೇನಾಯ್ತು?"

ಆ ಸ್ತ್ರೀಗೆ ತನಗೆ ಅನ್ನಿಸಿದುದನ್ನು ಅಡಗಿಸಿಡುವ ಶಕ್ತಿಯಿರಲಿಲ್ಲ. ನೇರವಾಗಿ ಅವಳಿಗೆ ಅನ್ನಿಸಿದ್ದನ್ನು ಹೇಳಿದ್ದಳು.

"ಆ ಇಷ್ಟ ಇನ್ನೂ ಹೋಗಿಲ್ಲ ಅಲ್ಲ?"

ಅವರು ಅಸಹಾಯಕರಾಗಿ ಹೇಳಿದ್ದು:

"ಆ ವಿಷಯವನ್ನೆಲ್ಲ ನಾನು ನಿನ್ನ ಹತ್ತ ಮನಸ್ಸು ಬಿಚ್ಚಿ ಹೇಳಲಿಲ್ಲವಾ? ನಾನು ಯಾವುದನ್ನೂ ಮುಚ್ಚಿಟ್ಟುಕೊಂಡಿಲ್ಲ. ಆಗಲೂ ನಿನಗೆ ನಂಬಿಕೆ ಬರೋದಿಲ್ಲವಲ್ಲ. ನಾನೇನು ಮಾಡ್ಲಿ?"

"ಹಾಗಿದ್ದರೆ ಪೂಜೆ ನಡೆಸಬೇಕು ಅಂತ ಆಲೋಚನೆ ಮಾಡ್ತಾ ಇರೋದಾ?"

"ಅದನ್ನ ನೀನು ನನಗೆ ಅವಳ ಮೇಲಿರುವ ಪ್ರೀತಿಯಿಂದ ಅಂತ ತಿಳಿದು ಕೊಂಡೆಯಾ? ನನಗೆ ಅದು ಇಷ್ಟವಾದೀತಾ? ಇದೀಗ ನೋಡು ಕಷ್ಟ!"

ತಂಗಮ್ಮನ ಮೇಲಿನ ಸಂಶಯ ಕಾತ್ಯಾಯಿನಿಯಮ್ಮನಿಗಿದ್ದೇ ಇತ್ತು. ಅವಳು ಹೇಳಿದಳು: "ಮತ್ತಿನ್ನೇನು. ಈ ಪೂಜೆ, ಭಜನೆ ಎಲ್ಲ ನಾಟಕ. ನಿಜವಾಗಿ ನಡೆಯೋದೇ ಬೇರೆ. ಆ ಸ್ವಾಮಿಯೂ ಅವನ ಶಿಷ್ಯನೂ ಮಾಡ್ತಿರೋದು ಅದು. ಆ ಮುದುಕಿ ಹತ್ರ ಕೇಳಿ ನೋಡಿ. ಅವರು ಕೆಲವು ಪೂಜೆ ಭಜನೆಗೆ ಹೋಗಿದ್ದರಂತೆ. ಅಂಥವಳನ್ನ ಇಲ್ಲಿಗೆ ಬರಮಾಡಬೇಕು. ಅವಕ್ಕೆ ಪೂಜೆ ಇಟ್ಟುಕೊಳ್ಳೋಣ ಅಂತ ಹೇಳ್ತಿರೋದು ಅಲ್ಲ?"

ಕೇಶವ ಪಿಳ್ಳೆ ಖಡಾಖಂಡಿತವಾಗಿ ಹೇಳಿದರು: "ಹಾಗಲ್ಲ. ನನಗೆ ಅವಳ ಹತ್ತಿರ ಯಾವ ಸ್ನೇಹವೂ ಈಗ ಇಲ್ಲ. ನಾನು ಅವಳನ್ನು ಮರೆತು ಯಾವುದೋ ಕಾಲ ಆಯ್ತು. ಅದನ್ನು ನೀನು ನಂಬು."

ಕಾತ್ಯಾಯಿನಿಯಮ್ಮ ಗಂಡನ ಮುಖವನ್ನು ದಿಟ್ಟಿಸಿ ನೋಡಿದಳು. ಅವಳಿಗೆ ನಂಬಲು ಸಾಧ್ಯವಾಗಲಿಲ್ಲ. ಯಾವಾಗಲೂ ನಂಬುವುದಕ್ಕೆ ಪ್ರಯತ್ನಪಡುತ್ತಿದ್ದಳು. ಆದರೆ ನಂಬಲು ಸಾಧ್ಯವಿಲ್ಲದಂತಹ ಯಾವುದೋ ಒಂದು ವಿಷಯ ಅಡಗಿತ್ತು. ಅದನ್ನು ಕಂಡುಹಿಡಿಯುವುದಕ್ಕಾಗಿಯೋ ಎನ್ನುವಂತೆ ಅವಳು ಗಂಡನ ಮುಖವನ್ನೇ ದಿಟ್ಟಿಸು ತ್ತಿದ್ದದ್ದು. ಗಂಡನ ಹೃದಯದ ಆಳದಲ್ಲಿರುವುದನ್ನು ಕಂಡುಹಿಡಿಯಬೇಕು. ಧರ್ಮ ಪತ್ನಿಗೆ ಮಾತ್ರ ಅದು ಸಾಧ್ಯವಿತ್ತು.

ಕೇಶವ ಪಿಳ್ಳೆ ತಮ್ಮನ್ನು ಕೆಲವು ದಿನಗಳಿಂದ ಬಾಧಿಸುತ್ತಿದ್ದ ವಿಷಯಗಳನ್ನೆಲ್ಲ ಕಾತ್ಯಾಯಿನಿಯಮ್ಮನಿಗೆ ವಿವರಿಸಿದರು. ದಿವಾನರ ಆಡಳಿತ ಅಂತ್ಯಗೊಳ್ಳುತ್ತದೆ. ಕಾಂಗ್ರೆಸ್ ಅಧಿಕಾರಕ್ಕೆ ಬರುತ್ತದೆ. ದಿವಾನರನ್ನು ಬಿಟ್ಟರೆ ಕಾಂಗ್ರೆಸ್ಸಿನವರಿಗೆ ಉಳಿಯುವ ಮೊದಲನೆಯ ಶತ್ರು ಕೇಶವ ಪಿಳ್ಳೆ. ಕಾಂಗ್ರೆಸ್ಸಿನಲ್ಲಿ ಒಬ್ಬರ ಪರಿಚಯವೂ ತಮಗಿಲ್ಲ

.........ಹಾಗೆ ಕೇಶವ ಪಿಳ್ಳೆಯನ್ನು ಚಿಂತೆಗೀಡು ಮಾಡಿದ್ದ ವಿಷಯವನ್ನು ವಿವರಿಸಿದರು. ಕೊನೆಯಲ್ಲಿ ಅವರು ಹೇಳಿದರು: "ನಿನಗೆ ಗೊತ್ತಾ? ನನಗೇನಾದರೂ ತೊಂದರೆಯಾದರೆ, 'ಅಯ್ಯೋ, ನಿಮಗೆ ತೊಂದರೆಯಾಯ್ತಲ್ಲ' ಎಂದು ಹೇಳುವವರು ಯಾರಿದ್ದಾರೆ? ಯಾರೂ ಇಲ್ಲ."

ಕಾತ್ಯಾಯಿನಿಯಮ್ಮ ಅದನ್ನು ಅಷ್ಟೊಂದು ದೊಡ್ಡ ಸಮಸ್ಯೆಯೆಂದು ಭಾವಿಸಿದಂತಿರಲಿಲ್ಲ. ಇಷ್ಟು ಹೊತ್ತು ಕೇಶವ ಪಿಳ್ಳೆ ಹೇಳಿದುದೂ ಅವಳ ತಲೆಗೆ ಹೊಕ್ಕಂತೆ ತೋರಲಿಲ್ಲ. ಅರ್ಥವೂ ಆಗಿರಲಿಲ್ಲ. ಕೊರಡಿನ ಹಾಗೆ ಕೇಶವ ಪಿಳ್ಳೆಯ ಮುಖದ ಕಡೆಗೆ ನೋಡುತ್ತ ಬಿದ್ದಿದ್ದಳು. ಕೇಶವ ಪಿಳ್ಳೆ ಕೇಳಿದರು:

"ನಿನಗೆ ಇದು ಯಾವುದೂ ಅರ್ಥವಾದ ಹಾಗೆ ತೋರೋದಿಲ್ಲ."

ಹೇಳಬೇಕು ಅನ್ನಿಸಿದುದನ್ನು ಪ್ರಾರಂಭಿಸುವ ರೀತಿಯಲ್ಲಿ ಒಂದು ಸಲ 'ಹ್ಞು' ಎಂದಳು ಅಷ್ಟೆ. ಗಂಡ ತಮ್ಮ ಮನಸ್ಸಿನಲ್ಲಿರುವುದನ್ನು ಮುಚ್ಚಿಡುವುದಕ್ಕಾಗಿ ಯಾವುದೊ ಕಥೆ ಕಟ್ಟಿ ಹೇಳುತ್ತಿದ್ದಾರೆ ಎಂದು ಕಾತ್ಯಾಯಿನಿಯಮ್ಮ ಭಾವಿಸಿದ್ದಂತಿತ್ತು. ಯಾರ ಹತ್ತಿರ ತಮ್ಮ ಸಂಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದಾರೋ ಆ ವ್ಯಕ್ತಿ ಶೈತ್ಯ ಹಿಡಿದ ಕಿವಿಯಿಂದ ಕೇಳಿಸಿಕೊಳ್ಳುತ್ತಿರುವುದೆಂದು ಕೇಶವ ಪಿಳ್ಳೆಗೆ ಅನ್ನಿಸಿದ್ದು. ಅವರ ವಾಕ್ಚಾತುರ್ಯ ಮರೆಯಾಯಿತು. ಮುಂದೆ ಹೇಳುವುದಕ್ಕೆ ಏನೂ ಇಲ್ಲದಾಯಿತು. ತನ್ನ ಕಷ್ಟಗಳನ್ನೆಲ್ಲ ಹೇಳಿಕೊಳ್ಳುವ ಸ್ಥಳವೊಂದಿದೆ, ಅಲ್ಲಿ ತನ್ನ ಮನಸ್ಸಿಗೆ ಸಮಾಧಾನ ದೊರೆಯುತ್ತದೆ ಎಂದು ಕೇಶವ ಪಿಳ್ಳೆ ಭಾವಿಸಿದ್ದರು. ಆ ಸ್ಥಾನವೂ ಈಗ ತಮಗಿಲ್ಲದಾಯಿತು ಎನ್ನಿಸಿತು. ಕೇಶವ ಪಿಳ್ಳೆ ಮೌನವಾಗಿ ಕುಳಿತರು.

ಆಗ ಕಾತ್ಯಾಯಿನಿಯಮ್ಮನ ಶಬ್ದ ಹೊರಟಿತು.

"ಆ ಮೇಲೆ?"

"ಆ ಮೇಲೇನು? ನಾನು ಹೇಳುವುದು ನಿನಗೆ ಅರ್ಥವಾಗುವುದಿಲ್ಲ. ಅದನ್ನ ಅರ್ಥಮಾಡಿಕೊಳ್ಳೋದಕ್ಕೂ ಹೋಗೋದಿಲ್ಲ. ನಾನು ಹೇಳುವುದೊಂದನ್ನೂ ನೀನು ನಂಬುವುದಿಲ್ಲ."

ಅದಕ್ಕೆ ಕಾತ್ಯಾಯಿನಿಯಮ್ಮ ಉತ್ತರ ಹೇಳಲಿಲ್ಲ. ಅವಳು ಹೇಳಿದಳು: "ಇಷ್ಟಪಡೋರು ಯಾರೂ ಇಲ್ಲ. ಅದಕ್ಕೆ ಇಷ್ಟಪಡೋರನ್ನ ಕರಕೊಂಡು ಬರಬೇಕಲ್ಲವಾ?"

ಕೇಶವ ಪಿಳ್ಳೆಯ ಮನಸ್ಸು ಮುದುರಿಕೊಂಡಿತು. "ನಿನಗೆ ಹೇಗನ್ನಿಸುತ್ತೋ ಹಾಗೆ ಭಾವಿಸಿಕೋ. ಇನ್ನು ನಾನು ಹೇಳೋದೇನೂ ಇಲ್ಲ."

ಕೇಶವ ಪಿಳ್ಳೆ ಎದ್ದು ಹೊರಟರು. ಕಾತ್ಯಾಯಿನಿಯಮ್ಮ ಅವರನ್ನು ಹಿಡಿದು ನಿಲ್ಲಿಸಿದಳು. ಅನಂತರ ಕೇಳಿದಳು: "ಯಾಕೆ ಬೇಜಾರು ಮಾಡಿಕೊಂಡಿದ್ದೀರಿ, ಅನ್ನೋದನ್ನ ಹೇಳಿ."

ಕೇಶವ ಪಿಳ್ಳೆ ಸೋತು ಹೇಳಿದರು: "ಏನೂ ಇಲ್ಲ. ನನ್ನ ಮನಸ್ಸಿಗೆ ಯಾವ ಬೇಸರವೂ ಇಲ್ಲ."

ಕಾತ್ಯಾಯಿನಿಯಮ್ಮ ಗಂಡನ ಕೈಯನ್ನು ಬಲವಾಗಿ ಹಿಡಿದುಕೊಂಡಳು. ಅವಳು ಗಂಡನನ್ನು ಬಿಡಲಿಲ್ಲ.

"ಉದ್ಯೋಗ ಕೈಬಿಟ್ಟು ಹೋಗುತ್ತೆ ಅಂತಲಾ? ಕೈಬಿಟ್ಟು ಹೋಗೋದಾದರೆ ಹೋಗಲಿ. ಅದಕ್ಕಿಷ್ಟು ಬೇಸರ ಯಾಕೆ? ದೇವರ ದಯೆಯಿಂದ ನಮಗೆ ಸಾಕಾಗೋ ಅಷ್ಟಿದೆ. ಒಬ್ಬಳು ಮಗಳಿದ್ದಾಳೆ. ನಮಗೆ ಅಷ್ಟು ಸಾಕು."

ಸ್ವಲ್ಪ ಹೊತ್ತು ಬಿಟ್ಟು ಅವಳು ಮತ್ತೆ ಕೇಳಿದಳು:

"ಯಾಕೆ ನೀವೇನೂ ಮಾತಾಡೋದಿಲ್ಲ? ಆಗಿರೋದು ಸಾಲದಾ? ಇನ್ನೂ ಯಾಕೆ?"

ಕೇಶವ ಪಿಳ್ಳೆಗೆ ಹೇಳುವುದೇನೂ ಇರಲಿಲ್ಲ. ಆದರೆ ಆ ಪ್ರಶ್ನೆಗಳು ಹೃದಯದಲ್ಲೂ ಮನಸ್ಸಿನಲ್ಲೂ ಹೊಕ್ಕು ಬಾಧಿಸುತ್ತಿದ್ದುವು. ನಿಸ್ವಾರ್ಥದಿಂದ ಆ ಹೆಣ್ಣು ಕೇಳಿದ ಪ್ರಶ್ನೆಗಳು ಅವು. ಆ ಪ್ರಶ್ನೆಗಳಲ್ಲಿ ಯಾವ ಕಳಂಕವೂ ಇರಲಿಲ್ಲ. ಕಾತ್ಯಾಯಿನಿಯಮ್ಮ ಕೇಳಿದಳು:

"ಆ ಕಳ್ಳರ ಗುಂಪನ್ನು ಕರೆದುಕೊಂಡು ಬಂದು ಪೂಜಿಸಬೇಕು ಅಂತಿದ್ದರೆ ಕರೆದುಕೊಂಡು ಬಂದು ಪೂಜೆ ಇಟ್ಟುಕೊಳ್ಳಿ. ನಾನೇನೂ ಮಾತಾಡೋದಿಲ್ಲ."

ತನ್ನ ಹಣೆಯಲ್ಲಿ ಹೀಗೆಲ್ಲ ಬರೆದಿತ್ತು ಎನ್ನುವ ರೀತಿಯಲ್ಲಿ ಕಾತ್ಯಾಯಿನಿಯಮ್ಮ ಹೇಳಿದಳು: "ನಾನು ಅವಳ ಕಾಲು ತೊಳೆದ ನೀರನ್ನೂ ಕುಡೀತೀನಿ. ಅವನ ಕಾಲು ತೊಳೆದ ನೀರನ್ನೂ ಕುಡೀತೀನಿ. ಆದರೆ......... ಆದರೆ......... ಎಲ್ಲ ಕಡೆಗಳ ಹಾಗೆ ಸ್ವಾಮಿ ಹತ್ರ ಪ್ರಸಾದ ತೆಗೆದುಕೊಂಡು ಬರೋದಕ್ಕೆ ಒಬ್ಬಳೇ ಹೋಗೋದಿಲ್ಲ. ಅವನು ಎಂಥವನು ಅನ್ನೋದು ತಿಳಿದ ಮೇಲೂ ಯಾಕೆ ಹೋಗಲಿ? ನನಗೆ ಅವನ ಪ್ರಸಾದ, ಅನುಗ್ರಹ—ಯಾವುದೂ ಬೇಡ."

ತಾಳ್ಮೆಗೆಟ್ಟು ಕೇಶವ ಪಿಳ್ಳೆ ಕೇಳಿದರು: "ನೀನು ಏನು ಮಾತಾಡ್ತಿದ್ದೀಯ?"

"ನಾನು ತೆರೆದು ಹೇಳ್ತಿದ್ದೀನಿ. ಪೂಜೆ ಇಟ್ಟುಕೊಳ್ಳಬೇಕೂಂತಿದ್ದರೆ ಇಟ್ಟುಕೊಳ್ಳಿ. ನಾನು ಅಡ್ಡ ಬರೋದಿಲ್ಲ. ಮಗಳಾಣೆಗೂ ಸತ್ಯ ಹೇಳ್ತಿದ್ದೀನಿ."

ಕೇಶವ ಪಿಳ್ಳೆಗೆ ಸಿಟ್ಟು ಬಂದಿತು. "ಸಾಕು, ನಿಲ್ಲಿಸು."

ಕಾತ್ಯಾಯಿನಿಯಮ್ಮ ಸುಮ್ಮನಾಗಲಿಲ್ಲ. "ನನಗೆ ಗೊತ್ತು. ನನ್ನ ಮೇಲೆ ಈಗ ಸಿಟ್ಟು ಬರುತ್ತೆ ಅಂತ."

ಕೇಶವ ಪಿಳ್ಳೆ ಅಲ್ಲಿಂದ ಆಫೀಸು ರೂಮಿಗೆ ಹೋದರು.

ಆ ದಾಂಪತ್ಯ ಜೀವನದ ಮೊದಲನೆಯ ಸಂಘರ್ಷಣೆ ಅದು. ಯಾವಾಗಲೂ ಕಾತ್ಯಾಯಿನಿಯಮ್ಮ ಎದುರಾಡಿದವಳಲ್ಲ. ಈ ದಿನ ಎದುರು ಮಾತಾಡಿದಳು. ಒಬ್ಬ

ಹೆಂಡತಿಯಾಗಿ ಎದುರು ವಾದಿಸಿದಳು.

ಕಾತ್ಯಾಯಿನಿಯಮ್ಮ ಸ್ವಲ್ಪ ಹೊತ್ತು ಬಿಟ್ಟು ಆಫೀಸು ರೂಮಿನೊಳಕ್ಕೂ ಬಂದಳು. ಆಗಲೂ ಅವಳಿಗೆ ಹೇಳಬೇಕಾಗಿದ್ದದ್ದು ಇದು: "ಪೂಜೆ ಇಟ್ಟುಕೊಳ್ಳಿ, ನಾನು ಅಡ್ಡಿ ಮಾಡೋದಿಲ್ಲ."

"ನೀನು ನನ್ನನ್ನು ನೆಮ್ಮದಿಯಾಗಿರೋದಕ್ಕೆ ಬಿಡೋದಿಲ್ಲವಾ?"

ಅದಕ್ಕೆ ದೊರೆತ ಉತ್ತರ ಇದು: "ನಾನು ಯಾವಾಗಲೂ ನೆಮ್ಮದಿ ಕೆಡಿಸಿಕೊಂಡೇ ಬಂದಿದ್ದೀನಿ. ನನಗೆ ಗೊತ್ತು."

ಹಾಗೆ ಜಗಳವಾಡಿಕೊಂಡಿದ್ದ ಛಾಯೆ ಕಾತ್ಯಾಯಿನಿಯಮ್ಮನಲ್ಲಿ ಎರಡು ಮೂರು ದಿವಸಗಳ ವರೆಗೆ ಇದ್ದೇ ಇತ್ತು. ಅದು ಹೆಂಡತಿಯಾದವಳ ಸ್ವಭಾವವಲ್ಲವೆ? ಅಂತಹ ಸ್ವಭಾವ ಇಲ್ಲದೇ ಇದ್ದಿದ್ದರೆ ಅವಳು ಹೆಂಡತಿಯೆನ್ನಿಸಿಕೊಳ್ಳಬಲ್ಲಳೆ?

ಆ ಮಧ್ಯೆ ಕೆಲವು ಗಹನವಾದ ವಿಷಯಗಳನ್ನು ಕೇಶವ ಪಿಳ್ಳೆ ಸಿ.ಐ.ಡಿ. ನೌಕರರ ಮೂಲಕ ತಿಳಿದರು. ಕಾಂಗ್ರೆಸ್ಸಿನ ಒಂದು ವಿಭಾಗ. ಮುಂದಾಳುಗಳ ಗಮನಕ್ಕೇ ಬಾರದಂತೆ ಆಯುಧಗಳನ್ನು ಸಂಗ್ರಹಿಸುತ್ತಿದ್ದಾರೆ. ಮತ್ತೊಂದು ವಿಭಾಗ ಸಿ.ಐ.ಡಿ. ನೌಕರರಿಗೆ ಅರ್ಥವಾಗದ ರೀತಿಯಲ್ಲಿ ಯಾವುದೋ ಗೂಢಾಲೋಚನೆ ನಡೆಸುತ್ತಿದೆ. ಎಷ್ಟು ಶ್ರಮಿಸಿದರೂ ಸುಳುಹು ಸಿಕ್ಕುತ್ತಿಲ್ಲ. ಆ ವಿವರಗಳೆಲ್ಲವೂ ನಂಬಬಹುದಾಗಿದ್ದಂತಹವುಗಳು.

ಕೇಶವ ಪಿಳ್ಳೆಯಲ್ಲಿ ಥಟ್ಟನೆ ಒಂದು ಬದಲಾವಣೆಯನ್ನು ಕಾತ್ಯಾಯಿನಿಯಮ್ಮನಿಗೆ ಗುರುತಿಸಲು ಸಾಧ್ಯವಾಯಿತು. ಈಗ ಚಿಂತಾಮಗ್ನರಾಗಿಲ್ಲ. ಇತ್ತೀಚೆಗೆ ಸರ್ಕಾರದ ಕೆಲಸದಲ್ಲಿ ಇಷ್ಟೊಂದು ಗಡಿಬಿಡಿಯೂ ಉಂಟಾಗಿರಲಿಲ್ಲ. ಅವರು ದಡಬಡನೆ ಮೇಲೆದ್ದಂತೆ ತೋರಿತು. ಮುಖ್ಯವಾಗಿ ಮಾಡಿ ಮುಗಿಸಬೇಕಾದ ಕೆಲವು ಕೆಲಸಗಳಿದ್ದುವು.

ನಾಲ್ಕೈದು ದಿವಸಗಳೊಳಗೆ ದೇಶದಲ್ಲೆಲ್ಲ ಕಾಂಗ್ರೆಸ್ ಕಾರ್ಯಕರ್ತರಲ್ಲಿ ತುಂಬ ಜನರನ್ನು ಅರೆಸ್ಟ್ ಮಾಡಿದ್ದಾಯಿತು. ಮುಂದಾಳುಗಳಲ್ಲಿ ಕೆಲವರನ್ನು ಕೈಬಿಡಲಾಯಿತು. ಆ ಅರೆಸ್ಟಿನ ಉದ್ದೇಶ ಯಾರಿಗೂ ಅರ್ಥವಾಗುತ್ತಿರಲಿಲ್ಲ. ಧನ್ಯಾನಂದಾಶ್ರಮಕ್ಕೆ ಸಂಬಂಧಿಸಿದಂತೆ ಮೊದಲು ಸರ್ಕಾರ ಹೊರಡಿಸಿದ ಸರ್ಕ್ಯುಲರನ್ನು ಪುನಃ ಒತ್ತಿ ಹೇಳುವ ಮತ್ತೊಂದು ಆರ್ಡರ್ ಹೊರಟಿತು. ಥಟ್ಟನೆ ಪೂಜೆ ಭಿಕ್ಷೆಗಳೆಲ್ಲವೂ ನಿಂತುವು. ಒಬ್ಬನೇ ಒಬ್ಬ ನೌಕರನಿಗೂ ಆ ಆರ್ಡರನ್ನು ಮೀರಲು ಸಾಧ್ಯವಾಗಿರಲಿಲ್ಲ.

ಅಂದು ಒಂದು ದಿನ ಆಫೀಸಿನಿಂದ ಬಂದು ವಿಶ್ರಮಿಸಿಕೊಳ್ಳುತ್ತಿದ್ದಾಗ ಕೇಶವ ಪಿಳ್ಳೆ ಹೆಂಡತಿಯನ್ನು ಕರೆದರು. "ಇಲ್ಲಿ ನೋಡು, ನಾನು ನಿನ್ನ ಮಾತನ್ನೇ ಅನುಸರಿಸಿದ್ದೀನಿ."

ಕಾತ್ಯಾಯಿನಿಯಮ್ಮನಿಗೆ ಅರ್ಥವಾಗಲಿಲ್ಲ. ಕೇಶವ ಪಿಳ್ಳೆ ಕೆಲವು ದಿವಸಗಳಿಂದ ನಡೆದದ್ದನ್ನೆಲ್ಲ ವಿವರಿಸಿದರು. "ಅಪಾಯಕಾರಿಗಳಾಗಿದ್ದ ನಾನೂರು ಮಂದಿ ಕಾಂಗ್ರೆಸ್ಸಿನವರನ್ನು ಅರೆಸ್ಟ್ ಮಾಡಿಸಿದೆ. ಕೆಲವರು ತಪ್ಪಿಸಿಕೊಂಡು ಹೋದವರೂ ಉಂಟು.

ಅವರನ್ನು ಹಿಡಿಯುವ ಪ್ರಯತ್ನ ನಡೆಯುತ್ತಿದೆ. ಧನ್ವಾನಂದನ ಪೂಜೆ, ಭಿಕ್ಷೆ ಎಲ್ಲವನ್ನೂ ಎರಡು ದಿವಸಗಳಿಂದ ಸಂಪೂರ್ಣವಾಗಿ ನಿಲ್ಲಿಸಿದ್ದಾಯ್ತು. ಸದ್ಯದಲ್ಲಿ ಅದು ಯಾವುದೂ ಪ್ರಾರಂಭವಾಗುವ ಹಾಗಿಲ್ಲ."

ಕಾತ್ಯಾಯಿನಿಯಮ್ಮ ಕೇಳಿದಳು: "ನಾನು ಇದನ್ನೆಲ್ಲ ಮಾಡಿ ಅಂತ ಹೇಳಿದ್ದೆನಾ?"

"ಇಲ್ಲ. ನೀನು ಹಾಗೆ ಹೇಳಲಿಲ್ಲ. ಆದರೆ ನೀನು ಆ ದಿನ ಹೇಳಲಿಲ್ಲವಾ? ನೌಕರಿಯಿಂದ ಮನೆಗೆ ಕಳಿಸೋಹಾಗಿದಿದ್ದರೆ ಕಳಿಸಲಿ. ನಮಗೆ ದೇವರು ಕೊಟ್ಟದ್ದು ಸಾಕಾಗೋ ಅಷ್ಟಿದೆ ಅಂತ?"

ಕಾತ್ಯಾಯಿನಿಯಮ್ಮ 'ಹೌದು' ಎಂದು ಒಪ್ಪಿಕೊಂಡಳು. ಆಕೆ ಹಾಗೆ ಹೇಳಿದ್ದು ನಿಜ. ಕೇಶವ ಪಿಳ್ಳೆ ಹೇಳಿದರು:

"ಹಾಗೆ ಸಂಭವಿಸಬಹುದು. ನಾನೀಗ ಅದಕ್ಕೆ ಸಿದ್ಧವಾಗಿದ್ದೀನಿ."

ಯಾವ ಒಂದು ವ್ಯಸನವನ್ನಾಗಲೀ ಗಾಬರಿಯನ್ನಾಗಲೀ ಪ್ರಕಟಿಸದೆ ಕಾತ್ಯಾಯಿನಿಯಮ್ಮ ಹೇಳಿದಳು:

"ಅದಕ್ಕೇನಂತೆ; ಹಿಂದಕ್ಕೆ ಕಳಿಸಲೀಳಿ. ಯಾವ ತೊಂದರೆಯೂ ಆಗೋದಿಲ್ಲ." ಆದರೆ ಮತ್ತೆ ಕೇಳಿದಳು: "ಹಾಗಾದರೆ ಯಾಕೆ ಇಷ್ಟು ಜನರನ್ನೆಲ್ಲ ಹಿಡಿದು ಜೈಲಿಗೆ ಹಾಕಿಸಿದ್ದು?"

"ಅದು ನನ್ನ ಕೆಲಸ."

"ಹಿಂಥಕ್ಕೆ ಕಳಿಸಿಕೊಳ್ಳಬೇಕು ಅನ್ನೋ ಆಸೆಯಿದ್ದರೆ—ಈ ಹೊತ್ತಿನಲ್ಲಿ ಅದನ್ನು ಮಾಡಬೇಕಾ?"

"ಕಾಂಗ್ರೆಸ್ಸಿನವರ ಶತ್ರುತ್ವ ಹೆಚ್ಚಿದೆ. ಅವರು ಆಡಳಿತ ಕೈಗೊಳ್ಳುವಾಗ ನನ್ನನ್ನು ಹಿಂದಕ್ಕೆ ಕಳಿಸೋದು."

'ನೇರವಾಗಿ ಬಾ. ನೇರವಾಗಿ ಹೋಗು' ಎನ್ನುವ ಮಾರ್ಗವನ್ನು ಮಾತ್ರ ಅರಿತಿದ್ದ ಆಕೆ ಹೇಳಿದಳು: "ಹಗೆತನ ಉಂಟಾಗಲಿ ಅಂತಲಾ ಹಾಗೆ ಕೆಲವು ಜನರನ್ನ ಜೈಲಿಗೆ ಹಾಕಿದ್ದು?"

ವಿಷಯಗಳನ್ನು ಅರ್ಥವಾಗುವಂತೆ ತಿಳಿಸುವುದು ಕಷ್ಟದ ಕೆಲಸವಾಯಿತು. ಅವರು ಹೇಳಿದರು: "ಹಾಗೇ ಅಂತ ಇಟ್ಟುಕೋ."

"ಅಯ್ಯೋ ಅದು ಬೇಡವಾಗಿತ್ತು. ಜನರನ್ನು ಹಗೆ ಮಾಡಿಕೊಂಡಾ ಕೆಳಗಿಳಿಯೋದು?"

"ಇಲಿ ಸೋಲಿಸೋದಕ್ಕೆ ಹೋಗಿ ಮನೆ ಸುಟ್ಟುಕೊಂಡರು" ಎನ್ನುವ ರೀತಿಯಲ್ಲಲ್ಲ ಕೇಶವ ಪಿಳ್ಳೆ ಹೇಳಿದ್ದು—ಯಥಾರ್ಥವಾಗಿ ಕೆಳಗಿಳಿದು ಹೋಗುವುದು ಎನ್ನುವ ಅವಸ್ಥೆಯಲ್ಲಿ ಅವರು ಅಭಿಪ್ರಾಯಪಟ್ಟರು. ಇಲ್ಲಿಯ ವರೆಗೆ ಮಾತ್ರ ಜೀವನ ಎನ್ನುವ ದೊಡ್ಡ ಮಾರ್ಗವನ್ನು ಕಂಡದ್ದು—ಮಾದೇವನ್ ಪಿಳ್ಳೆಯಂತಹ ಅಭ್ಯುದಯಾ

ಕಾಂಕ್ಷಿಗಳು ಈ ನಿಲ್ದಾಣದ ವರೆಗೆ ತೋರಿಸಿದ್ದರು. ಈ ನಿಲ್ದಾಣದಲ್ಲಿ ಸ್ವಲ್ಪ ದಿನ ಇರುವುದು, ಸುಖವಾಗಿರಬಹುದು, ಆದರೆ—ಇಲ್ಲಿಯ ವರೆಗೆ ತಲಪುತ್ತೇನೆ ಎಂದು ನಿರೀಕ್ಷಿಸಿಯೋ ತಲಪಬೇಕು ಎನ್ನುವ ಗುರಿಯನ್ನಿಟ್ಟುಕೊಂಡೋ ಅಲ್ಲ ಯಾತ್ರೆ ಪ್ರಾರಂಭಿಸಿದ್ದು. ಬಂದು ಸೇರಿದ್ದಾಯಿತು. ಈ ನಿಲ್ದಾಣದಲ್ಲಿ ವಿಶ್ರಾಂತಿ ಪಡೆಯುವುದು ಬೇಡ ಎಂದು ನಿಶ್ಚಯಿಸಿದರು. ಕೊನೆಗೆ ಅವರು ಕಾಂಗ್ರೆಸ್ ಅಧಿಕಾರಕ್ಕೆ ಬರುವಾಗ ಇಲ್ಲಿಂದ ಹೋಗಿಬಿಡಬೇಕು ಎಂದಾದಲ್ಲಿ ಹೋಗಿಬಿಡಬಹುದು. ಹೋಗದೆ ಇರುವ ಪ್ರಯತ್ನಗಳನ್ನು ಕೇಶವ ಪಿಳ್ಳೆ ಬೇಡವೆಂದು ಕೈಬಿಟ್ಟದ್ದು ಹಾಗೆ.

ಕಾಂಗ್ರೆಸ್ಸನ್ನು ಎದುರಿಸಿ, ಅದರಿಂದಲೇ ಪಾರ್ಕ್ ವ್ಯೂಗೆ ಬಂದು ಸೇರಿದ್ದು. ಇಡೀ ಜೀವನದಲ್ಲಿ ಅದರ ಶತ್ರುವಾಗಿದ್ದರು. ಆ ಪ್ರಸ್ಥಾನ ತಿಳಿಸಿದ್ದೊಂದೂ ಕೇಶವ ಪಿಳ್ಳೆಯ ತಲೆಗೆ ಹೊಕ್ಕದ್ದೂ ಇಲ್ಲ. ಅದು ಸರಿಯೋ ತಪ್ಪೋ ಎಂದು ಆಲೋಚಿಸಲು ಶ್ರಮಿಸಿಯೂ ಇಲ್ಲ. ಅದನ್ನು ನಾಶಗೊಳಿಸುವುದಕ್ಕೆ ಶ್ರಮಪಟ್ಟದ್ದು. ಇನ್ನು ಮೇಲೆ ಅದರ ಪಾದಸೇವೆ ಬೇಡವೆಂದು ಹೇಳುವುದಲ್ಲವೇ ಒಳ್ಳೆಯದು—ಅಲ್ಲದೇ ಇದ್ದರೆ ಯಾರ್ಯಾರ ಕಾಲು ತೊಳೆದು ಕುಡಿಯಬೇಕು? ಅದು ಬೇಡ. ಕಾತ್ಯಾಯಿನಿಯಮ್ಮ ಹೇಳಿದ್ದನ್ನು ಅವರು ಅಂಗೀಕರಿಸಿದರು.

"ಉದ್ಯೋಗ ಹೋಗುತ್ತೆ ಅಂತಲಾ? ಹೋಗೋದಿದ್ದರೆ ಹೋಗಲಿ. ಅದಕ್ಕೆ ಇಷ್ಟು ಕಷ್ಟ ಪಡೋದು ಯಾಕೆ? ದೇವರ ದಯದಿಂದ ನಮಗೆ ಜೀವನಕ್ಕಾಗೋ ಅಷ್ಟಿದೆ. ನಮಗಿರೋದು ಒಂದೇ ಮಗು. ಅಷ್ಟು ಸಾಕು!"

ಅಷ್ಟು ಸಾಕು. ಇನ್ನು ಕೈಬಿಡುವುದು ಸ್ವೀಕರಿಸಿದ ದೃಷ್ಟಿಯಲ್ಲೇ ಆಗಲಿ. ಹಾಗೆಯೇ ಕೇಶವ ಪಿಳ್ಳೆಗೆ ನೆಮ್ಮದಿಯೂ, ಉತ್ಸಾಹವೂ ಉಂಟಾದದ್ದು.

ಕೇಶವ ಪಿಳ್ಳೆ ಅನಂತರದ ಜೀವನವನ್ನು ಕುರಿತು ಹೆಂಡತಿಯ ಹತ್ತಿರ ಕೇಳಿದರು:

"ಇಲ್ಲಿಂದ ಹೋದರೆ ಎಲ್ಲಿ ವಾಸ ಮಾಡೋದು ನಿನಗಿಷ್ಟ?"

ಅದು ನಿಶ್ಚಯಿಸಬೇಕಾಗಿದ್ದ ವಿಷಯ. ವಂಚಿಯೂರಿನಲ್ಲೋ ಮೂವಾಟ್ಟುಪುಳದಲ್ಲೋ, ನಾಂಚಿನಾಟ್ಟಿನಲ್ಲೋ ಅಥವಾ ಊರಿನಲ್ಲೋ? ಊರಿನಲ್ಲೇ ಸಾಕು ಎಂದು ಕೇಶವ ಪಿಳ್ಳೆ ಹೇಳುವುದು. ಉಳಿದ ಸ್ಥಳಗಳೆಲ್ಲ ಅವರಿಗೆ ಬೇರೆ ಊರುಗಳು.

ಅವಳು ಹೇಳಿದಳು: "ಅಲ್ಲಿ ಹೋಗಿ ಜೀವಿಸುವುದು ಇಷ್ಟವಿಲ್ಲದೇ ಹೋಗಬಹುದು."

ನಿಜವಾಗಿಯೂ ಕೇಶವ ಪಿಳ್ಳೆಗೆ ಅದು ಅಷ್ಟೊಂದು ಮುಖ್ಯವಾಗಿರಲಿಲ್ಲ. ಅದಕ್ಕೆ ಬೇಕಾದ ಕಾರಣಗಳೂ ಅವರಿಗಿದ್ದುವು. ಅವರು ನಗುತ್ತ ಹೇಳಿದರು: "ನಿನಗೆ ನಿನ್ನ ನಾಣಿಯೂ ಕುಂಞಿಕುಟ್ಟಿಯೂ ಅಲ್ಲಿದ್ದಾರೆ—ಊರಿನವರೆಲ್ಲ ನಿನಗೆ ಬೇಕಾದವರು. ನನಗೆ ಯಾರಿದ್ದಾರೆ?"

ಕಾತ್ಯಾಯಿನಿಯಮ್ಮ ಅಭಿಮಾನದಿಂದ 'ಹೌದು' ಎಂದು ಒಪ್ಪಿದಳು.

"ಅದು ಹುಟ್ಟಿ ಬೆಳೆದ ಊರಲ್ಲವೇ? ಅಷ್ಟೆಲ್ಲ ಹತ್ತಿರದ ಮನುಷ್ಯರು ದೊರೆಯುವ ಸ್ಥಳ ಬೇರೆ ಇದೆಯಾ?"

ಕೇಶವ ಪಿಳ್ಳೆ ಹೇಳಿದರು: "ಅದು ನಿಜ. ಆದರೆ ನನಗೆ ಆ ರೀತಿ ಅನ್ನಿಸಲಿಲ್ಲ ವಲ್ಲ !"

ಕಾತ್ಯಾಯಿನಿಯಮ್ಮನಿಗೆ ಆ ವಿಷಯದಲ್ಲಿ ನಿರ್ಬಂಧವಿಲ್ಲ.

"ಹಾಗಿದ್ದರೆ. ಎಲ್ಲಿರಬೇಕು? ಈ ತಿರುವನಂತಪುರ ಬಿಟ್ಟು ಎಲ್ಲಿ ಬೇಕಾದರೂ ನನಗೆ ಇಷ್ಟವಾದವರೂ ಜೊತೆಗಾತಿಯರೂ ಸಿಕ್ತಾರೆ."

ಮೂವಾಟ್ಟುಪುಳದಲ್ಲಿ ಒಂದು ಒಳ್ಳೆಯ ಕಟ್ಟಡ ಕಟ್ಟಿಸುವ ಏರ್ಪಾಡಾಯಿತು. ಕೊಟ್ಟಾಯದ ಪೇಷ್ಕಾರರೂ ಮೂವಾಟ್ಟುಪುಳದ ತಹಸೀಲ್‌ದಾರರೂ, ಕೋಟ್ಟಯಂ ಡಿವಿಜನ್ನಿನ ಇಂಜಿನಿಯರೂ ಅದರ ಜವಾಬ್ದಾರಿ ಹೊತ್ತರು. ಪ್ರತಿ ವಾರ ಕಾತ್ಯಾಯಿನಿಯಮ್ಮನೂ ಮೂವಾಟ್ಟುಪುಳಕ್ಕೆ ಹೋಗಿ ಕಟ್ಟಡದ ಕೆಲಸ ನೋಡಿಕೊಂಡು ಬರುತ್ತಿದ್ದರು.

ಔದ್ಯೋಗಿಕ ಜೀವನವನ್ನು ಅಂತ್ಯಗೊಳಿಸುವ ಮೊದಲು ಕೇಶವ ಪಿಳ್ಳೆ ಮತ್ತೊಂದು ಕೆಲಸವನ್ನು ಮಾಡಿ ಮುಗಿಸಬೇಕಾಗಿತ್ತು. ಅದನ್ನು ಕುರಿತೇ ಅವರು ಆಲೋಚಿಸುವುದು. ಮತ್ತೊಂದು ದಿನ ಅವರು ಆ ವಿಷಯವನ್ನು ಹೆಂಡತಿಯ ಹತ್ತಿರ ಹೇಳಿದರು. ಚೀಫ್ ಸೆಕ್ರೆಟರಿಯಾಗಿರುವಾಗಲೇ ವಿಜಯಮ್ಮನ ಮದುವೆ ಮಾಡಿಬಿಡಬೇಕು. ಕಾತ್ಯಾಯಿನಿಯಮ್ಮನಿಗೆ ತುಂಬ ಸಂತೋಷವನ್ನುಂಟುಮಾಡಿದ ವಿಷಯವಾಗಿತ್ತು ಅದು.

"ನನ್ನನ್ನು ಹದಿನೇಳು ವರ್ಷಕ್ಕೆ ಮದುವೆ ಮಾಡಿದ್ರು. ಈಗ ಅವಳಿಗೆ ಹದಿನಾರು ವರ್ಷ. ನಾನು ಈ ವಿಷಯ ಯಾವಾಗಲೂ ಆಲೋಚಿಸಿಕೊಂಡಿದ್ದೆ. ಆದರೆ ಓದ್ತಾ ಇದ್ದಾಳಲ್ಲ ಅಂತ ಹೇಳಿರಲಿಲ್ಲ."

ಅವಳು ಕೇಳಿದಳು: "ಹಾಗಾದರೆ ಹುಡುಗ ಯಾರು?"

"ಒಬ್ಬನನ್ನು ಗೊತ್ತುಮಾಡಬೇಕು."

ಗುಂಡು ಹೊಡೆದ ಹಾಗೆ ಕೇಶವ ಪಿಳ್ಳೆಯ ಕಿವಿಗೆ ಬಿದ್ದಿತು: "ದೊಡ್ಡ ಉದ್ಯೋಗಸ್ಥನನ್ನು ಹುಡುಕೋದಾ?"

ಕೇಶವ ಪಿಳ್ಳೆ ಕೇಳಿದರು: "ಹ್ಞು. ಯಾಕೆ? ಉದ್ಯೋಗ ಇರೋನು ಆಗೋದಿಲ್ಲವಾ?"

ಅದಕ್ಕೆ ಉತ್ತರವಿಲ್ಲ. ಸಿಕ್ಕಿದ್ದು ಮತ್ತೊಂದು ಪ್ರಶ್ನೆ.

"ತಿರುವನಂತಪುರದಿಂದ?"

"ತಿರುವನಂತಪುರ ಆದರೇನು?"

"ಹುಡುಗ ಒಳ್ಳೆಯವನಾಗಿದ್ದರೆ ಸಾಲದಾ?"

ಕಾತ್ಯಾಯಿನಿಯಮ್ಮ ಖಡಾಖಂಡಿತವಾಗಿ ಹೇಳಿದಳು—"ಉದ್ಯೋಗ ಇರೋನೂ ಬೇಡ, ತಿರುವನಂತಪುರದೋನೂ ಬೇಡ. ನನ್ನ ಮಗಳಿಗೆ ನನ್ನ ಅನುಭವ ಆಗೋದು ಬೇಡ."

"ನಿನಗೆ ಯಾವ ಅನುಭವ ಆಯ್ತು?"

ಕಾತ್ಯಾಯಿನಿಯಮ್ಮ ಸ್ವಲ್ಪ ಬದಲಾಯಿಸಿದಳು.

"ಅದನ್ನೆಲ್ಲ ಜ್ಞಾಪಿಸಬೇಡಿ. ನಾನು ಅದನ್ನು ಮರೆತಿಲ್ಲ— ನನಗೆ... ನನಗೆ ಬಾಯಿಗೆ ಬಂದುಬಿಡ್ತದೆ. ನನ್ನ ಹತ್ರ ಹೇಳಿಸಬೇಡಿ." ಕೇಶವ ಪಿಳ್ಳೆ ಅದನ್ನು ನಗುತ್ತ ಮುಗಿಸಿದರು.

"ಇಲ್ಲ, ಇಲ್ಲ ನನ್ನ ಚಿನ್ನ, ಹೇಳಿಸೋದಿಲ್ಲ. ನಾನು ನೋಡಿಕೊಳ್ತೀನಿ. ಅದು ಹೋಗಲಿ. ಅಳಿಯ ಹೇಗಿರಬೇಕು ಅನ್ನೋದು ನಿನ್ನ ಉದ್ದೇಶ?"

ಕಾತ್ಯಾಯಿನಿಯಮ್ಮ ಸ್ವಲ್ಪ ಹೊತ್ತಿನ ವರೆಗೆ ಮಾತಾಡಲಿಲ್ಲ. ಅವಳು ಅದನ್ನು ಆಲೋಚಿಸುತ್ತಿದ್ದಂತೆ ತೋರಿತು.

ಕೇಶವ ಪಿಳ್ಳೆ ಕೇಳಿದರು: "ನೀನು ಏನೂ ಆಲೋಚಿಸಿರಲಿಲ್ಲವಾ?"

ಒಂದು ಮಂದಹಾಸದೊಡನೆ ಕಾತ್ಯಾಯಿನಿಯಮ್ಮ ಹೇಳಿದಳು: "ಮತ್ತೇ, ನಾನು ಅವನ್ನು ನೆನಸಿಕೊಳ್ಳದೇ ಇರೋದಕ್ಕಾಗುತ್ತ? ಒಂದು ಮಗು ಹುಟ್ಟಿ ಅದು ಹೆಣ್ಣುಮಗು ಅಂತಾದಾಗಲೇ ತಾಯಿಗೆ ಅಳಿಯ ಹೇಗಿರಬೇಕು ಅನ್ನಿಸುತ್ತೆ. ಆ ಮಗು ನಡೆದಾಡುತ್ತಿದ್ದಾಗ ತಾಯಂದಿರು ಹೇಳ್ತಾರೆ—ಈಗ ಆ ಹುಡುಗ ಯಾವ ಊರಿನಲ್ಲಿ ಸ್ಲೇಟು ಪುಸ್ತಕ ತೆಗೆದುಕೊಂಡು ಸ್ಕೂಲಿಗೆ ಹೋಗುತ್ತಿದ್ದಾನೆ ಅಂತ. ಹಾಗೆ ತಾಯಂದಿರು ಆಲೋಚನೆ ಮಾಡೋದು. ಇನ್ನು ನನಗೆ ಅವನು ಹೇಗಿರಬೇಕು ಅನ್ನಿಸದೆ ಇರುತ್ತಾ?"

ತೇಜೋಮಯವಾದ ಕಣ್ಣುಗಳಿಂದ ದೂರದ ಸ್ವಪ್ನವನ್ನು ಕಾಣುವಂತೆ ಆ ತಾಯಿ ಹೇಳಿದಳು:

"ಅವನು ನನ್ನ ಮುಂದೆ ನಿಂತಿದ್ದಾನೆ."

ಕೇಶವ ಪಿಳ್ಳೆ ಹೇಳಿದರು:

"ನನಗೆ ಕಾಣಿಸೋದಿಲ್ಲ. ಎಲ್ಲಿ ಅವನು?"

ಅರಳು ಹುರಿದ ಹಾಗಿತ್ತು ಉತ್ತರ.

"ಅದು ನಿಮಗೆ ಕಾಣೋದಿಲ್ಲ."

"ಅದು ಯಾಕೆ?"

"ಅದು ಹಾಗೇನೇ. ಅದಕ್ಕೆ ಎಷ್ಟೋ ವಿಷಯಗಳಿವೆ. ಅದನ್ನ ನಾನು ಹೇಳಲಾ? ಜಗಳ ಆಡಬೇಡಿ."

"ಇಲ್ಲ" ಎಂದು ಕೇಶವ ಪಿಳ್ಳೆ ಸಮ್ಮತಿಸಿದರು.

ಕಾತ್ಯಾಯಿನಿಯಮ್ಮ ಎಣಿಸಿ ಎಣಿಸಿ ಹೇಳುವಂತೆ ಹೇಳತೊಡಗಿದಳು: "ಅದಕ್ಕೆ

ಮೊಟ್ಟ ಮೊದಲಾಗಿ ಹೆಂಡತಿ ಮೇಲೆ ಪ್ರೀತಿ ಇರಬೇಕು. ಹಾಗೆ ಇಷ್ಟವಾಗಿರುವಾಗ ನನಗೊಂದು ಮಗು ಬೇಕು ಅನ್ನಿಸುತ್ತೆ. ಅದೊಂದು ಆಶೆ. ಹಾಗೆ ಮಗು ಹುಟ್ಟಿದಾಗ ಅದು ಹೆಣ್ಣಾಗಿದ್ದರೆ ಅವಳ ಗಂಡ ಹೇಗಿರಬೇಕು ಅಂತ ಗೊತ್ತಾಗುತ್ತೆ. ಅದು ಅಂತಹ ತಂದೆಗೆ ಮಾತ್ರ ಕಾಣೋದಕ್ಕೆ ಸಾಧ್ಯ." ಒಳ್ಳೆಯ ಲೆಕ್ಕಾಚಾರ ಹಾಕಿ ವಿಷಯ ಹೇಳಿದೆ ಎಂದು ಅವಳ ಮೂಗು ವಿಕಾಸಗೊಂಡಿತು.

ಅವಳು ಹೇಳಿದಳು: "ನಮ್ಮದು ಹಾಗಿದೆಯಾ? ಒಂದು ಸಲ ನೆನಸಿಕೊಂಡು. ನೋಡಿ. ವರ್ಷದಲ್ಲಿ ಒಂದು ಸಲ ಬಂದಿರಿ. ರೂಮಿನಲ್ಲಿ ಒಂದು ಮೂಲೆಯಲ್ಲಿ, ಒಬ್ಬಳು ಬಿದ್ದುಕೊಂಡಿರ್ತಿದ್ದಳು. ಬೇಡದೆ ಬರೋದಿದ್ದರೂ ಒಂದು ಹೆಣ್ಣಲ್ಲವಾ ಮಲಗಿದ್ದದ್ದು—ಒಂದು ಸಲ ನೆನಸಿಕೊಳ್ಳಿ."

ಅಪರಾಧಿಯಾದ ಕೇಶವ ಪಿಳ್ಳೆ ಹೆಚ್ಚಿಗೆ ಮಾತನಾಡದೆ ತಮ್ಮ ತಪ್ಪನ್ನು ಒಪ್ಪಿಕೊಂಡರು.

"ನೀನು ಏನು ಬೇಕಾದರೂ ಹೇಳು, ಕೇಳಿಸಿಕೊಳ್ತೀನಿ. ನಿನ್ನ ಅಧೀನದಲ್ಲಿದೀನಲ್ಲ ಈಗ !"

ಕಾತ್ಯಾಯಿನಿಯಮ್ಮ ಸುಮ್ಮನಾಗಲಿಲ್ಲ: "ಹಾಗೆಲ್ಲ ಹೇಳಬೇಡಿ. ಅದು ಬೇಡಿ. ಅದಿರಲಿ, ನಾನು ಹೇಳಿದ್ದು ಸರಿ ತಾನೆ? ಕೆಲವರಿಗೆ ಗುಟ್ಟಾಗಿ ಮಕ್ಕಳು ಹುಟ್ಟೋದುಂಟು. ಅವರು ಎಂದಾದರೂ ಆ ಮಗುವನ್ನು ನೆನಸಿಕೊಳ್ಳೋದುಂಟಾ?"

ಮತ್ತೂ ಕಾತ್ಯಾಯಿನಿಯಮ್ಮ ಮಾತನ್ನು ಮುಂದುವರಿಸುತ್ತಿದ್ದಂತೆ ತೋರಿತು. ಆ ಮಾತಿನಿಂದ ಅವಳ ಗಮನವನ್ನು ಬೇರೆ ಕಡೆಗೆ ತಿರುಗಿಸುವುದಕ್ಕಾಗಿ ಕೇಶವ ಪಿಳ್ಳೆ ಕೇಳಿದರು:

"ಅಳಿಯ ಯಾರಾಗಿರಬೇಕು ಅಂತ ನಿನ್ನ ಉದ್ದೇಶ?"

"ಅವನು ಉದ್ಯೋಗಸ್ಥನಾಗಿರಬಾರದು, ತಿರುವನಂತಪುರದವನೂ ಆಗಿರಬಾರದು."

"ಮತ್ತೆ ಯಾರಾಗಿರಬೇಕು?"

ಕಾತ್ಯಾಯಿನಿಯಮ್ಮ ಹೇಳಿದಳು: "ಅವನು ಯಾರೂ ಆಗಿರಬೇಕಾಗಿಲ್ಲ. ಅವಳಿಗೆ ಅವಳ ತಾಯಿಯ ಅನುಭವದಂತಾಗಬಾರದು."

ಒಂದು ಕ್ಷಣ ಬಿಟ್ಟು ಅವಳು ಹೇಳಿದಳು:

"ನನಗ್ಗೊತ್ತು. ನೀವು ಕೇಳ್ತೀರಿ ಅಂತ. ಅವಳ ತಾಯಿಗೆ ಯಾವ ಕಷ್ಟದ ಅನುಭವ ಉಂಟಾಯ್ತು ಅಂತ. ಭೂಮಿ ಇಲ್ಲವಾ? ಏನು ಕಡಿಮೆಯಾಗಿರೋದು? ಜೊತೆಗಾತಿಯರಲ್ಲಿ ಯಾರಿಗಾದರೂ ಇಷ್ಟು ಭೂಮಿ ಇದೆಯಾ ಅಂತ. ಅದಲ್ಲ ವಿಷಯ. ಅವಳನ್ನು ಪ್ರೀತಿಸೋ ಮನುಷ್ಯನಾಗಿರಬೇಕು. ಮತ್ತ್ಯಾರೂ ಆಗಬೇಕಾಗಿಲ್ಲ."

"ಒಬ್ಬ ಕೃಷಿಕಾರ ಸಾಕಾ?"

"ಹ್ಞ. ಅದರಲ್ಲೇನು ತಪ್ಪು? ಈ ಉದ್ಯೋಗಸ್ಥನಿಗಿಂತ ಒಳ್ಳೆಯವನಾಗಿರ್‍ತಾನೆ. ಉದ್ಯೋಗಸ್ಥನಿಗೆ ನಡೆನುಡಿ ಗೊತ್ತಿರೋದಿಲ್ಲ. ಅವನಲ್ಲಿ ಎಂಜಲು ವಾಸನೆ ಇರಬಹುದು. ಕೃಷಿಕಾರ ಹಾಗಾಗುವುದಿಲ್ಲ."

ಕೇಶವ ಪಿಳ್ಳೆ ಕೇಳಿದರು:

"ಕಾಗದ ಓದೋದಕ್ಕೆ ಬಾರದವನು?"

"ಅಂಥವರು ಈಗಿಲ್ಲ."

ಅಸಹಾಯಕರಾಗಿ ಕೇಶವ ಪಿಳ್ಳೆ ಪ್ರಾರಂಭಿಸಿದರು: "ಪ್ರೀತಿಯುಳ್ಳವನೋ ಹೇಗೆ ಎಂದು ಒಳಗೆ ಹೊಕ್ಕು ನೋಡಿ ಒಬ್ಬನನ್ನು ಕರೆದುಕೊಂಡು ಬರೋದಕ್ಕೆ ಸಾಧ್ಯವಾ? ಅಂಥ ಒಬ್ಬ ಕೃಷಿಕಾರನನ್ನು ಹೇಗೆ ಕಂಡುಹಿಡಿಯುವುದು? ನಾನು ಒಬ್ಬ ದೊಡ್ಡ ಉದ್ಯೋಗ ಇರುವವನನ್ನೇ ಹುಡುಕೋದು."

ಹೃದ್ಯವಾಗಿ ನಗುತ್ತ ಕಾತ್ಯಾಯಿನಿಯಮ್ಮ ಹೇಳಿದಳು: "ಅದೇನಾದರೂ ಇರಲಿ. ಅವನನ್ನು ಕರೆದುಕೊಂಡು ಬನ್ನಿ. ನಾನು ಹೇಳ್ತೀನಿ."

ಆ ರೀತಿಯಲ್ಲಿ ಕೇಶವ ಪಿಳ್ಳೆ ಕೆಳಗಿಳಿಯಬೇಕಾಗಿ ಬಂದಲ್ಲಿ ಮನಸ್ಸನ್ನು ವಿಚಲಿತಗೊಳಿಸಿಕೊಳ್ಳದೆ ಕೆಳಗಿಳಿಯುವುದಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಉದ್ಯೋಗ ಜೀವನದಿಂದ ಹಿಂದಿರುಗಿಸಿದರೆ ಯಾವ ಪರಿತಾಪವೂ ಬೇಸರವೂ ಇಲ್ಲದೆ ಪಾರ್ಕ್ ವ್ಯೂನಿಂದ ಇಳಿಯಬೇಕು. ಇಳಿದಾಗ ಪಾರ್ಕ್ ವ್ಯೂನಂತಿರುವ ಒಂದು ಮನೆಗೆ ಹೋಗಬೇಕು. ಮಗಳ ಮದುವೆ ಆದರೆ ನನ್ನ ಜೀವನ ಸಂಪೂರ್ಣವಾಯಿತು.

ಕೇಶವ ಪಿಳ್ಳೆಯ ಔದ್ಯೋಗಿಕ ಜೀವನದಲ್ಲಿ ಈ ತೀರ್ಮಾನವನ್ನು ಮಾಡಿದ್ದರೂ ಸಂಪೂರ್ಣವಾಗಿ ನಿರ್ಣಯಿಸಿದ ಕಾಲಾವಸ್ಥೆಯೂ ಒಂದು ಶಕ್ತಿಯೂ ದೊರೆಯಿತು. ಒಬ್ಬ ಕಾಂಗ್ರೆಸ್ ಶತ್ರುವಾಗಿ ಅವರು ಜೀವನವನ್ನು ಆರಂಭಿಸಿದ್ದು. ಹಾಗೆಯೇ ಕಾಂಗ್ರೆಸ್ಸಿನ ವೈರಿಯಾಗಿ ಔದ್ಯೋಗಿಕ ಜೀವನವನ್ನು ಅಂತ್ಯಗೊಳಿಸಬೇಕೆಂದು ತೀರ್ಮಾನಿಸಿದರು. ತಾವು ಇನ್ನು ಮೇಲೆ ಕಾಂಗ್ರೆಸ್ಸಿನ ಜೊತೆಯಲ್ಲಿ ನಗುತ್ತ, ತಲೆ ಕೆರೆದುಕೊಂಡು ಜೀವಿಸುವ ಹಾಗಾದರೆ ಏನು? ಎಂದು ಒಮ್ಮೆ ಆಲೋಚಿಸಿದರು. ಅದೊಂದು ಹಳೆಯ ಸಂಗತಿಯಂತೆ ಕಾಣಿಸಿತು.

ಮತ್ತೂ ಕಾಂಗ್ರೆಸ್ಸಿನವರನ್ನು ಜೈಲಿಗೆ ಸೇರಿಸಲಾಯಿತು. ಒಬ್ಬಿಬ್ಬರು ಜೈಲಿನಲ್ಲಿ ಸತ್ತರು. ದೊಡ್ಡ ಗಲಾಟೆಯುಂಟಾಯಿತು. ಹೊಡೆದು ಕೊಂದದ್ದು ಎಂದು ಆರೋಪವಾಯಿತು. ಕೇಶವ ಪಿಳ್ಳೆ ಅದಾವುದನ್ನೂ ಲೆಕ್ಕಕ್ಕೆ ಹಾಕಿಕೊಳ್ಳಲಿಲ್ಲ. ದೊಡ್ಡ ಶತ್ರುವಾಗಿಯೇ ಇರಬೇಕೆಂದು ತೀರ್ಮಾನ ಮಾಡಿದ್ದಾಗಿತ್ತು. ಯಾವುದರಲ್ಲೂ ಅವರು ಮುಂದಾಳಾಗಿದ್ದರು. ಅವರು ಏನು ಮಾಡಿದರೂ ದಿವಾನರ ಬೆಂಬಲವಿತ್ತು. ಔದ್ಯೋಗಿಕ ಜೀವನದ ಅಂತ್ಯದಲ್ಲಿ ಎಣಿಸಬಹುದಾದ ದಿನಗಳಲ್ಲಿ ಅಂತಸ್ತಿನಿಂದ ಸಿಂಹದಂತೆ

ಬಾಳಬೇಕು. ನಾಯಿಯಂತೆ ಇಳಿದುಹೋಗಬಾರದು. ಕಾಂಗ್ರೆಸ್‌ನವರು ಅಧಿಕಾರಕ್ಕೆ ಬರುವಾಗ ಒಂದು ಸಿಂಹವನ್ನು ಅಲ್ಲಿಂದ ಹೊರಗಿಳಿಸಲಿ.

* * * *

ಅದು ಸಂಭವಿಸಿತು. ದಿವಾನರನ್ನು ಯಾರೋ ಇರಿದು ಗಾಯಗೊಳಿಸಿದರು. ಕೊರಳಿನ ಹತ್ತಿರ ಇರಿದದ್ದು. ಆದರೆ ಬಿದ್ದದ್ದು ಮುಖಕ್ಕೆ. ಒಂದು ಮೀಟಿಂಗಿನಲ್ಲಿ ಆ ಕೆಲಸ ನಡೆದದ್ದು. ಇರಿದ ಮನುಷ್ಯ ಸಿಕ್ಕಲಿಲ್ಲ. ಮಾರನೆಯ ದಿನ ರಾಜ್ಯದಲ್ಲೆಲ್ಲ ತುಂಬ ಸಂಖ್ಯೆಯಲ್ಲಿ ಅರೆಸ್ಟ್ ನಡೆದಿದ್ದುವು. ಇದಾಗಿರಬೇಕು ಅರ್ಥಮಾಡಿಕೊಳ್ಳಲಾಗದ ಗೂಢಾಲೋಚನೆ.

ದಿವಾನರು ತಿರುವಾಂಕೂರನ್ನು ಬಿಟ್ಟರು. ನಿಜವಾಗಿಯೂ ಕೇಶವ ಪಿಳ್ಳೆಯ ಜೀವನದಲ್ಲಿ ದೊಡ್ಡ ಘಟನೆಯಾಗಿತ್ತು ಅದು. ಅನಾದರಣೆಗೊಳಗಾದವರಂತೆ ಅವರಿಗೆ ತೋರಿತು. ಉಳಿದಿರುವ ಬ್ರಿಟಿಷರು ಭಾರತದಿಂದ ಹೋಗುವುದಕ್ಕೆ ಹೆಚ್ಚು ದಿನಗಳಿಲ್ಲ ಅರಮನೆಯಿಂದ ತಾತ್ಕಾಲಿಕವಾಗಿ ಒಬ್ಬರನ್ನು ದಿವಾನರ ಸ್ಥಾನದಲ್ಲಿ ನಿಯಮಿಸಿದರು ಕಷ್ಟದಿಂದ ಈ ಸ್ಥಿತಿಯಲ್ಲೂ ಚೀಫ್ ಸೆಕ್ರೆಟರಿಯಾಗಿರಬೇಕು ಎನ್ನಿಸಿತು.

ಅದಾದ ಮೇಲೆ...............?

## ಪ್ರಾಯಶ್ಚಿತ್ತ

ತಿರುವಾಂಕೂರು ಇಂಡಿಯನ್ ಯೂನಿಯನಿನಲ್ಲಿ ಸೇರಿತು. ಸ್ವತಂತ್ರ ತಿರುವಾಂಕೂರಿನ ಕನಸು ಎಂದೆಂದಿಗೂ ಇಲ್ಲದಂತಾಯಿತು. ಆಗಸ್ಟ್ ಪದಿನಾಲ್ಕನೆಯ ತಾರೀಕು ಅರ್ಧ ರಾತ್ರಿಯಲ್ಲಿ ಯೂನಿಯನ್ ಜಾಕ್ ಇಳಿಸಿ ಭಾರತದ ಬಾವುಟ ಸೆಕ್ರೆಟರಿಯೇಟಿನ ಸ್ತಂಭವನ್ನೇರಿತು. ರಾಜ್ಯವಿಡೀ ಆ ಪುಣ್ಯ ದಿನವನ್ನು ಹೇಗೆ ಕೊಂಡಾಡಬೇಕು ಎಂಬುವುದನ್ನು ಕುರಿತು, ಕಾಂಗ್ರೆಸ್ ಮುಂದಾಳುಗಳು, ಚೀಫ್ ಸೆಕ್ರೆಟರಿ, ತಾತ್ಕಾಲಿಕವಾಗಿ ನಿಯಮಿತರಾದ ದಿವಾನರು. ಡಿಪಾರ್ಟ್‌ಮೆಂಟುಗಳ ಅಧಿಕಾರಿಗಳು. ನಗರದ ಪ್ರಮುಖರು—ಹೀಗೆ ಎಲ್ಲರೂ ಸೇರಿದ್ದ ಒಂದು ಕಾನ್ಫರೆನ್ಸ್ ಸೇರಿತು. ಕಾನ್ಫರೆನ್ಸನ್ನು ಕರೆಯಬೇಕಾಗಿದ್ದ ಜವಾಬ್ದಾರಿ ಕೇಶವ ಪಿಳ್ಳೆಯದಾಗಿತ್ತು. ರಾಜ್ಯವ್ಯಾಪಕವಾದ ಆ ಘೋಷಣೆಗಳ ಜವಾಬ್ದಾರಿ ಹೊತ್ತು ಕೇಶವ ಪಿಳ್ಳೆ ಆ ಕಾನ್ಫರೆನ್ಸ್ ಕರೆದದ್ದು.

ಅಂದು ಉಲ್ಲಾಸದಿಂದ ಕೇಶವ ಪಿಳ್ಳೆ ಪಾರ್ಕ್ ವ್ಯೂಗೆ ಬಂದದ್ದು. ಹೆಂಡತಿಯನ್ನು ಕರೆಯುತ್ತ ಅವರು ಒಳಗೆ ಬಂದದ್ದು. ಹೆಂಡತಿ ಓಡಿ ಬಂದಳು. ಅಷ್ಟೊಂದು ಉತ್ಸಾಹದಿಂದಿದ್ದ ಗಂಡನನ್ನು ಆಕೆ ಎಂದೂ ಕಂಡಿರಲಿಲ್ಲ. ವಿಷಯ ತಿಳಿಯದೆಯೇ ಕಾತ್ಯಾಯಿನಿಯಮ್ಮನಿಗೆ ಒಂದು ಪ್ರಸನ್ನತೆಯುಂಟಾಯಿತು. ಯಾವುದೋ ಒಂದು ಸಂತೋಷದ ಸುದ್ದಿಯಿದೆಯೆಂದು ಅವಳಿಗನ್ನಿಸಿತು. ಅದೇನೆಂದು ಅವಳಿಗೆ ತಿಳಿಯದು.

ಕೇಶವ ಪಿಳ್ಳೆ ಹೇಳಿದರು:

"ನಾನು ಈ ದಿನ ಎಲ್ಲ ಕಾಂಗ್ರೆಸ್ ಮುಖಂಡರನ್ನೂ ಕಂಡೆ."

ಕಾತ್ಯಾಯಿನಿಯಮ್ಮ ಕುತೂಹಲದಿಂದ ಕೇಳಿದಳು:

"ಆ ಮೇಲೆ?"

"ಆ ಮೇಲೇನು? ಏನೂ ಇಲ್ಲ."

"ಅವರು ಏನಾದರೂ ಬೇಡದ್ದು ಹೇಳಿದರಾ?"

"ಜಯಿಸಿದೆ. ಅಲ್ಲ, ಜಯಿಸಿದೆ ಅಂತ ತೋರುತ್ತೆ."

ಕೋಟು—ಪ್ಯಾಂಟು, ಟೈಗಳನ್ನು ಬದಲಾಯಿಸುವುದರಲ್ಲಿ ಕಾತ್ಯಾಯಿನಿಯಮ್ಮ ಸಹಾಯ ಮಾಡುತ್ತಿದ್ದುದರ ಮಧ್ಯೆ ಅವರು ಹೆಂಡತಿಯ ಕೆನ್ನೆಯಲ್ಲಿ ಒಂದು ಪ್ರೇಮ ಮುದ್ರೆಯನ್ನೊತ್ತಿದರು. ಒಂದು ವೇಳೆ ಕಿಟ್ಟುಮಾವನ ಮಾತುಗಳು ಅವರ ಕಿವಿಯೊಳಗೆ ಮೊಳಗಿರಬಹುದು: "ಅವಳು ಭಾಗ್ಯವಂತೆ."

ಕಾಫಿ ಕುಡಿಯುತ್ತಿದ್ದುದರ ಮಧ್ಯೆ ಅವರು ಹೇಳಿದರು: "ಓ! ಇವತ್ತಿನ ಕಾನ್ಫ

ರೆನ್ಸ್ ವಿಷಯ ನಿನ್ನ ಹತ್ರ ವಿವರಿಸಬೇಕಾಗಿತ್ತು. ನಿನಗೆ ಅರ್ಥವಾಗುವುದಿಲ್ಲವಲ್ಲ. ಏನು ಮಾಡಲಿ?"

ಕಾತ್ಯಾಯಿನಿಯಮ್ಮ ಅದನ್ನು ಒಪ್ಪಿಕೊಳ್ಳಲಿಲ್ಲ:

"ಒಂದು ಸಲ ಹೇಳಿ ನೋಡೋಣ. ಅರ್ಥವಾಗುತ್ತೋ ಇಲ್ಲವೋ ಅಂತ ನೋಡ್ತೀನಿ. ಹಾಗೆಲ್ಲ ಸುಮ್ಮನೆ ನನ್ನನ್ನು ಕತ್ತೆ ಮಾಡಬೇಡಿ."

ಆಗ ಹಗುರವಾದ ಮನಸ್ಸಿನಿಂದ ಕೇಶವ ಪಿಳ್ಳೆ ಹೇಳಿದರು:

"ಸರಿ! ನೀನು ಕತ್ತೆಯಾ? ಒಳ್ಳೆಯ ಕೆಲಸ! ಸಕಲರನ್ನೂ ಹೆದರಿಸುವ ಒಬ್ಬ, ಇದುವರೆಗೂ ಹಿಡಿತಕ್ಕೆ ಸಿಕ್ಕದವನೆಂದು ಹೆಸರು ಪಡೆದ ಕೇಶವ ಪಿಳ್ಳೆ—ಚೀಫ್ ಸೆಕ್ರೆಟರಿಯನ್ನು ಕಿರುಬೆರಳಿನ ಕೆಳಗೆ ಹಾಕಿ ಅದುಮಿ ಹಿಡಿದಿರುವ ನೀನು ಕತ್ತೆಯಾ?"

ಕೇಶವ ಪಿಳ್ಳೆಗೆ ಇನ್ನೂ ಹೆಚ್ಚು ಹೇಳುವುದಿತ್ತು. ಆದರೆ ಕಾತ್ಯಾಯಿನಿಯಮ್ಮ ತಡೆದಳು: "ಬೇಡ! ಬೇಡ! ಹಾಗೆಲ್ಲ ಹೇಳುವುದಕ್ಕೆ ಹೋದರೆ ನಾನೂ ಹೇಳಿಬಿಡಬೇಕಾಗುತ್ತೆ! ಮತ್ತೊಂದು ವಿಷಯ ಇದೆ, ಕಳ್ಳತನ ಎಲ್ಲ ಕಂಡುಹಿಡಿದೆ."

ಆ ಮಾತನ್ನು ಮುಂದುವರಿಸಿದರೆ ಅದು ಅಹಿತವಾದ ಮಾರ್ಗದಲ್ಲಿ ಹೋಗುತ್ತದೆ ಎಂದು ಕೇಶವ ಪಿಳ್ಳೆಗೆ ತೋರಿತು. ಕೇಶವ ಪಿಳ್ಳೆ ಅಂದಿನ ತನ್ನ ಆಶ್ವಾಸನೆಯ ಕಥೆಯನ್ನು ವಿವರಿಸತೊಡಗಿದರು. ಅದು ವಿಜಯದ ಕಥೆಯಾಗಿತ್ತು. ಆಗಸ್ಟ್ ಹದಿನೈದನ್ನು ಆಚರಿಸುವುದನ್ನು ಕುರಿತು ದಿವಾನರ ಆರ್ಡರ್ ಬಂದಿತು. ಅದರ ನಿರ್ದೇಶನಗಳನ್ನು ತಿಳಿದಾಗ ಕೇಶವ ಪಿಳ್ಳೆಗೆ ತೊಂದರೆಯಾಯಿತು. ಪ್ರಾರಂಭದ ಆಲೋಚನೆಗೆ ಆಹ್ವಾನಿಸಬೇಕಾಗಿದ್ದವರಲ್ಲಿ ಕಾಂಗ್ರೆಸ್ ಮುಖಂಡರೆಲ್ಲರೂ ಇರಬೇಕು ಎನ್ನುವುದು ಕಡ್ಡಾಯವಾಗಿತ್ತು. ಹಾಗೆ ಕರೆದಿದ್ದ ಕಾನ್ಫರೆನ್ಸ್ ಅದು. ಅಷ್ಟೆಲ್ಲ ಆದ ಮೇಲೆ ಕಾತ್ಯಾಯಿನಿಯಮ್ಮ ಕೇಳಿದಳು:

"ಹಾಗಾದರೆ, ಸರ್ಕಾರಕ್ಕೂ ಕಾಂಗ್ರೆಸ್ಸಿಗೂ ಇನ್ನು ಮೇಲೆ ಜಗಳ ಇರೋದಿಲ್ಲವಾ?"

ಕೇಶವ ಪಿಳ್ಳೆ ಆ ಕಥೆಯನ್ನು ವಿಸ್ತರಿಸಿ ಹೇಳತೊಡಗಿದ್ದರು. ಅಜ್ಞತೆಯ ಈ ಪ್ರಶ್ನೆಯನ್ನು ಕೇಳಿದಾಗ ಥಟ್ಟನೆ ಆ ಕಥೆಯನ್ನು ವಿವರಿಸುವ ಒಂದು ಉತ್ಸಾಹವಿಲ್ಲದಾಯಿತು. ಅದನ್ನೆಲ್ಲ ಯಾಕೆ ಇಷ್ಟು ವಿಸ್ತರಿಸಿ ಹೇಳಬೇಕು ಎಂದು ಅವರಿಗೆ ಅನ್ನಿಸಿತು. ಕಾತ್ಯಾಯಿನಿಯಮ್ಮನಿಗೆ ಅರ್ಥವಾಗುವುದಿದ್ದರೂ ವಿಷಯಗಳ ಗುರುತ್ವ ಲಘುತ್ವಗಳು ತಿಳಿಯುವುದಿಲ್ಲ. ಆ ಕಥೆಯನ್ನು ಮೊಟಕುಗೊಳಿಸುವುದೊಳ್ಳೆಯದು. ವಿಷಯ ಮಾತ್ರ ಹೇಳಿದರೆ ಸಾಕು. ಆದರೂ ಜೀವನದಲ್ಲಿ ಒಂದು ದೊಡ್ಡ ಭಯ. ಯಾವ ಪ್ರಯತ್ನವೂ ಇಲ್ಲದೆ ಒಂದಾದದ್ದನ್ನು ಹೇಳದಿರುವುದಕ್ಕೂ ಸಾಧ್ಯವಿಲ್ಲ. ಕಂಡದ್ದು ಭೂತವಲ್ಲ. ಗಾಳಿಗೆ ಅಲುಗಾಡುವ ಓಲೆಗರಿಯ ನೆರಳು ಅಷ್ಟೆ.

ಅವರು ಕಥೆಯನ್ನು ಮೊಟಕುಗೊಳಿಸಿದರು.

"ಕಾತ್ಯಾಯಿನೀ, ನಾನು ಹೆದರಿಕೊಂಡದ್ದು ಸುಮ್ಮನೆ. ಯಾವ ಗಂಡಾಂತರವೂ ಇಲ್ಲ."

"ಅದು ಯಾಕೆ?"

ಕೇಶವ ಪಿಳ್ಳೆ ಹೇಳಿದರು: "ಈ ಕಾಂಗ್ರೆಸ್ ಎಂದು ಹೇಳುವುದು ಅಷ್ಟೊಂದು ದೊಡ್ಡ ಸಂಗತಿಯೇನಲ್ಲ."

ಕಾತ್ಯಾಯಿನಿಯಮ್ಮ ಅರ್ಥವಾಗದೆ ಸುಮ್ಮನೆ ನೋಡುತ್ತಿದ್ದಳು. ಕೇಶವ ಪಿಳ್ಳೆ ಹೇಳಿದರು:

"ನಿನಗೆ ಯಾವುದೂ ಅರ್ಥವಾಗಲಿಲ್ಲ ಅಲ್ಲವೆ? ಹೆದರಿಕೊಳ್ಳಬೇಡ."

ಕಾತ್ಯಾಯಿನಿಯಮ್ಮ ಕೇಳಿದಳು:

"ಅವರು ಆಡಳಿತಕ್ಕೆ ಬಂದರೂ ಯಾವ ತೊಂದರೆಯೂ ಇಲ್ಲವಾ?"

"ಏನೂ ಇಲ್ಲ. ನಾನು ಇವರು ಯಾರನ್ನೂ ನೇರವಾಗಿ ಸರಿಯಾಗಿ ಕಂಡದ್ದೂ ಇಲ್ಲ. ಮಾತಾಡಿದ್ದೂ ಇಲ್ಲ. ಭಯಂಕರ ಜನರು ಅಂದುಕೊಂಡಿದ್ದೆ. ಇವತ್ತು ನಾನು ಹೆದರಿಕೊಂಡಿದ್ದೆ. ಅವರನ್ನು ಹೇಗೆ ಸ್ವಾಗತಿಸಬೇಕು, ಹೇಗೆ ಸಂತೋಷಗೊಳಿಸಬೇಕು ಎಂದು ಆಲೋಚಿಸುತ್ತಿದ್ದೆ. ಒಟ್ಟಿನಲ್ಲಿ ನಾನು ಹೆದರಿಹೋಗಿದ್ದೆ. ಅವರು ಮಂತ್ರಿಗಳಾಗಿ ಆಳುವುದಕ್ಕೆ ಬರುತ್ತಾರೆ. ಜೊತೆಗೆ ನಾನು ಅವರ ಬದ್ಧ ಶತ್ರು. ಅವರೇ ಮೊದಲು ಬಂದದ್ದು. ನನ್ನ ಕಣ್ಣಿಗೆ ಕತ್ತಲೆ ಹಿಡಿದ ಹಾಗಾಯ್ತು. ನಾನು ನಮಸ್ಕರಿಸಿದೆ. ದಿವಾನರಿಗೆ ಹೆದರುವ ಹಾಗೆ ಹೆದರಿಕೊಂಡಿದ್ದೆ. ಕಡೆಗೆ ಅರ್ಥವಾಯ್ತು. ಪಾಪ! ಏನೂ ತಿಳಿಯದವರು. ಆ ಭಾಷಣ, ಮಾತುಕತೆ ಎಲ್ಲವೂ ಬರೀ ವೇಷವಾಗಿತ್ತು. ಅವರಲ್ಲಿ ಕೆಲವರು ನನ್ನ ಮುಂದೆ ಕುಳಿತುಕೊಳ್ಳುವುದಿಲ್ಲ. ಅವರು ಕುಳಿತಿದ್ದಲ್ಲಿಗೆ ನಾನು ಹೋದರೆ ಥಟ್ಟನೆ ಎದ್ದು ನಿಂತುಕೊಳ್ಳುತ್ತಿದ್ದರು. ಸೂಪರಿಂಟೆಂಡೆಂಟ್ ನಿಂತುಕೊಳ್ಳುವ ಹಾಗೆ, ಅಸಿಸ್ಟೆಂಟ್ ಸೆಕ್ರೆಟರಿಗಳ ಹಾಗೆ—ಸೆಕ್ರೆಟರಿಗಳಷ್ಟೂ ಧೈರ್ಯವಿಲ್ಲ ಪಾಪ! ಭಾಷಣ ಮಾಡುವುದಕ್ಕೆ ಹೋದಾಗ ಚಪ್ಪಾಳೆ ತಟ್ಟುತ್ತಿದ್ದರು."

ಕಾತ್ಯಾಯಿನಿಯಮ್ಮ ಕೇಳಿದಳು: "ಆ ಮೇಲೆ ಏನಾಯ್ತು?"

"ಏನಾಗುತ್ತೆ? ಏನೂ ಇಲ್ಲ. ಅವರಲ್ಲಿ ಒಬ್ಬಿಬ್ಬರನ್ನು ಬಿಟ್ಟು ನನ್ನ ಸುತ್ತಮುತ್ತ ಬಂದು ನಿಂತುಕೊಂಡರು. ಎಲ್ಲರೂ ಬಂದು ಕಾಣುತ್ತೇವೆ ಎಂದು ಹೇಳಿದ್ದಾರೆ. ಈ ದಿನ ನನಗೆ ಪರಿಚಯವೂ ಆಯಿತು. ನನ್ನ ಪರಿಚಯ ಮಾಡಿಕೊಳ್ಳುವ ಒಂದು ಸಂದರ್ಭವೆಂದು ಅವರು ಲೆಕ್ಕಹಾಕಿರುವಂತೆ ತೋರುತ್ತದೆ. ಕಾತ್ಯಾಯಿನಿಯಮ್ಮನಿಗೆ ಕಥೆ ಕೇಳುವ ಕುತೂಹಲವಿದೆ. ಹಾಗಲ್ಲವೇ ಇರಬೇಕಾದದ್ದು?" ಅವಳು ಕೇಳಿದಳು:

"ಅವರು ಯಾರು ಹಾಗಿಲ್ಲದೆ ಇದ್ದ ಆ ಇಬ್ಬರು?"

"ಅವರು ಕಾಂಗ್ರೆಸ್ಸಿನ ಪ್ರೆಸಿಡೆಂಟೋ ವೈಸ್ ಪ್ರೆಸಿಡೆಂಟೋ ಆಗಿರಬೇಕು."

ಕಾತ್ಯಾಯಿನಿಯಮ್ಮ ಕೇಳಿದಳು: "ಹಾಗಾದರೆ ಕಾಂಗ್ರೆಸ್ ಅಂತ ಹೇಳುವುದು ಇಷ್ಟೇನಾ?"

ಕೇಶವ ಪಿಳ್ಳೆಗೂ ಅದೇ ಸಂದೇಹವುಂಟಾಗುತ್ತಿತ್ತು. ಅವರು ಹೇಳಿದರು: "ನನಗೂ ಅದೇ ಸಂಶಯ. ಇಂದು ಬಂದವರಲ್ಲಿ ಕೆಲವರನ್ನೆಲ್ಲ ನೋಡಿದಾಗ ನನಗೆ ಹಾಗನ್ನಿಸಿತು. ದೊಡ್ಡ ಮುಂದಾಳುಗಳಲ್ಲಿ ಕೆಲವರು ಮಾತ್ರ ದೊಡ್ಡಸ್ತಿಕೆ ಮುಂತಾದುವುಗಳಿದ್ದವರು. ಆದರೂ ನನಗೆ ಒಂದು ಸಂಶಯವಿದೆ."

ಕಾತ್ಯಾಯಿನಿಯಮ್ಮ ಅವಳ ಸಂಶಯವನ್ನು ತೆರೆದು ಕೇಳಿದಳು: "ಹಾಗಾದರೆ ಈ ದೇಶದ ಜನರು ಇವರು ಹೇಳೋದನ್ನ ಕೇಳಿ ಹೀಗೆ ಕುಣಿದಾಡಿದ್ದಾ?"

ಕೇಶವ ಪಿಳ್ಳೆಗೂ ಅದೇ ಆಶ್ಚರ್ಯವಿತ್ತು. ಪರಂಪರಾಗತವಾಗಿ ಬಂದ ರಾಜಭಕ್ತಿ, ಉದ್ಯೋಗಸ್ಥರ ಹತ್ತಿರ ಇರುವ ಗೌರವ, ಕಾನೂನಿನ ಬಗ್ಗೆ ಇರುವ ಭಯಭಕ್ತಿ, ಇವನ್ನೆಲ್ಲ ಮರೆತು ಈ ಜನರೆಲ್ಲ ಇವರ ಹಿಂದೆ ಹೇಗೆ ಹೋದರು ಎನ್ನುವ ವಿಷಯ ಕೇಶವ ಪಿಳ್ಳೆಯನ್ನು ಯಥಾರ್ಥವಾಗಿ ಆಶ್ಚರ್ಯಗೊಳಿಸಿತ್ತು. ಅದಕ್ಕೆ ಒಂದು ವ್ಯಾಖ್ಯಾನವನ್ನು ಮಾತ್ರ ಆತ ಮಾಡಬಹುದಾಗಿತ್ತು. ಇಂಗ್ಲೀಷಿನವರು ಹೋಗಬೇಕೆಂದು ಭಾರತದ ಜನರೆಲ್ಲರಿಗೂ ಆಗ್ರಹವಿತ್ತು. ತಿರುವಾಂಕೂರಿನವರಿಗೂ ಆ ಆಗ್ರಹವಿತ್ತು. ಅದನ್ನು ಈ ಮುಂದಾಳುಗಳು ಕೈಗೆತ್ತಿಕೊಂಡದ್ದಾಗಿರಬೇಕು.

ಕೇಶವ ಪಿಳ್ಳೆ ಹೇಳಿದರು: "ದಿವಾನರು ಮೊದಲೇ ಸ್ವಲ್ಪ ಆಲೋಚನೆ ಮಾಡಿದ್ದಿದ್ದರೆ ಇದೊಂದೂ ಇಲ್ಲಿ ಉಂಟಾಗುತ್ತಿರಲಿಲ್ಲ."

ಕಾತ್ಯಾಯಿನಿಯಮ್ಮ ಕೇಳಿದಳು:

"ಅವರು ತುಂಬ ಬುದ್ಧಿವಂತರು, ದೂರದೃಷ್ಟಿ ಇದ್ದವರು ಅಂತ ಅಲ್ಲವೇ ಹೇಳುತ್ತಿದ್ದದ್ದು?"

ಕೇಶವ ಪಿಳ್ಳೆ ಅದನ್ನು ಒತ್ತಿ ಹೇಳಿದರು:

"ಹೌದು,ಅದರಲ್ಲೇನು ಸಂಶಯ? ಆದರೂ ಸಣ್ಣ ದೋಷ ಇರೋದಿಲ್ಲವಾ? ಹಾಗೆ ಸಂಭವಿಸಿತು. ಈ ಮುಂದಾಳುಗಳಲ್ಲಿ ಕೆಲವರು ಉದ್ಯೋಗ ಅಪೇಕ್ಷಿಸಿದವರು. ಅಂದು ಒಂದೊಂದು ಕೆಲಸ ಇವರಿಗೆ ಕೊಟ್ಟಿದ್ದಿದ್ದರೆ ಇದೊಂದೂ ಇಲ್ಲಿ ನಡೆಯುತ್ತಿರಲಿಲ್ಲ."

ಕಾತ್ಯಾಯಿನಿಯಮ್ಮನ ಸಾಮಾನ್ಯ ಬುದ್ಧಿಗೆ ಅದಕ್ಕೂ ತಕ್ಕ ಸಮಾಧಾನ ಹೇಳುವುದಿತ್ತು. ಅದು ಒಂದು ಪ್ರಶ್ನೆಯ ರೂಪದಲ್ಲಿ ಹೊರಬಂದಿತು:

"ಹಾಗಾಗಿದ್ದಲ್ಲಿ ಇನ್ನೂ ಬೇರೆ ಎಷ್ಟೋ ಜನರು ಕಾಂಗ್ರೆಸ್ಸಿನವರಾಗುತ್ತಿರಲಿಲ್ಲವಾ? ಎಲ್ಲರಿಗೂ ಕೆಲಸ ಕೊಡೋದಕ್ಕೆ ಸಾಧ್ಯವಾ?"

ಅದಕ್ಕೆ ಕೇಶವ ಪಿಳ್ಳೆಗೆ ಉತ್ತರ ಹೇಳಲು ಸಾಧ್ಯವಾಗಲಿಲ್ಲ.

ಕಾತ್ಯಾಯಿನಿಯಮ್ಮ ಕೇಳಿದಳು: "ಏನಾದರಾಗಲಿ, ಹೆದರಿಕೆ ಹೋಯ್ತಾ?"

"ಹೋಯ್ತು. ಆದರೆ ಇನ್ನೂ ಕೆಲವು ದಿವಸಗಳ ವರೆಗೆ ಕೆಲಸ ಇದೆ. ಪರವೂರ್‌ನಿಂದ ಕನ್ಯಾಕುಮಾರಿ ವರೆಗೆ ಸಂಚರಿಸಬೇಕು. ಸಮಾರಂಭ ನಡೆಸೋದಕ್ಕಾಗಿ ಮಾಡುವುದಕ್ಕೆ ಒಂದು ಕೆಲಸ ಸಿಕ್ಕಿತು."

ಸ್ವಲ್ಪ ತಮಾಷೆ ಮಾಡುವಂತೆ ಕಾತ್ಯಾಯಿನಿಯಮ್ಮ ಕೇಳಿದಳು: "ಒಮ್ಮೆ ಕಾಂಗ್ರೆಸ್ ಇಲ್ಲದಂತೆ ಮಾಡೋದಕ್ಕೆ ಓಡಾಡಿದಿರಿ. ಈಗ ಕಾಂಗ್ರೆಸ್‌ಗಾಗಿ ಓಡಾಡ್ತೀರಿ. ಯಾರಾದರೂ ಇದನ್ನ ಕೇಳಿದರೆ ಏನಂ ಹೇಳ್ತೀರಿ?"

ಕೇಶವ ಪಿಳ್ಳೆ ಹೇಳಿದರು: "ಈಗ ಓಡಾಡೋದು ಸ್ವಾತಂತ್ರ್ಯ ದಿನವನ್ನು ಆಚರಿಸುವುದಕ್ಕೆ."

"ಹೌದು ಹೌದು. ಹೇಳುವುದಕ್ಕೆ ನಾಚಿಕೆಯಿಲ್ಲವಲ್ಲ? ಸ್ವಾತಂತ್ರ್ಯ ಬೇಡ ಅಂತ ಅಲ್ಲವಾ ಕಾಂಗ್ರೆಸ್‌ನ ಎದುರಿಸಿದ್ದು?"

"ಸಾಕು ನಿಲ್ಲಿಸೇ, ಹೋಗೆ !" ಎಂದು ಕೇಶವ ಪಿಳ್ಳೆ ಹೆಂಡತಿಯ ಮೇಲೆ ರೇಗಿದರು.

"ನಿನಗೇನು ಗೊತ್ತು ಇದೆಲ್ಲ?"

"ಹೌದು ಹೌದು. ನಾಚಿಕೆಯಿಲ್ಲವಲ್ಲ?"

"ನಾನಾಗಿದ್ದರೆ ಈ ಉದ್ಯೋಗ ಬೇಡ ಅಂತ ಕೈಬಿಡ್ತಿದ್ದೆ. ಹೇಗೆ ಮನುಷ್ಯರ ಮುಖದ ಕಡೆಗೆ ನೋಡ್ತಾ ಮಾತಾಡಬಲ್ಲಿರಿ? ಹಿಂದೆ ಒಂದು ಹೇಳಿದಿರಿ. ಈಗ ಮತ್ತೊಂದು ಹೇಳ್ತೀರಿ?"

ಮೊದಲು ಹೇಳಿದ್ದಕ್ಕೂ ಮಾಡುವುದಕ್ಕೂ ಈಗ ಮಾಡುವುದಕ್ಕೂ ಹೇಳುವುದಕ್ಕೂ ಪರಸ್ಪರ ಯಾವ ಸಂಬಂಧ ಇಲ್ಲವೆಂದು ವ್ಯಾಖ್ಯಾನಿಸಲು ಕೇಶವ ಪಿಳ್ಳೆ ಶ್ರಮಿಸಿದರು. ಆದರೂ ಅದೊಂದೂ ಫಲಿಸುವುದಿಲ್ಲವೆಂದು ಕೇಶವ ಪಿಳ್ಳೆಗೆ ಗೊತ್ತು. ಆ ವಾದಗಳು ಸರಿಯಾಗುವುದಿಲ್ಲವೆಂದೂ ಗೊತ್ತಿತ್ತು. ಕೊನೆಗೆ ಅವರು ಕೇಳಿದರು: "ಹಾಗಾದರೆ ಈ ಉದ್ಯೋಗಕ್ಕೆ ರಾಜಿನಾಮೆ ಕೊಡಲೆ?"

ಕಾತ್ಯಾಯಿನಿಯಮ್ಮ ಅದಕ್ಕಾಗಿ ಆಲೋಚಿಸಬೇಕಾಗಿ ಬರಲಿಲ್ಲ. "ಎರಡರಲ್ಲಿ ಯಾವುದಾದರೂ ಸರಿಯೆ. ರಾಜಿನಾಮೆ ಕೊಟ್ಟರೂ ಸರಿಯೆ, ಕೊಡದೇ ಇದ್ದರೂ ಸರಿಯೆ. ತೊಂದರೆ ಏನೂ ಆಗದೆ ಇದ್ದರೆ ಸಾಕು." ಕೇಶವ ಪಿಳ್ಳೆ ಹೇಳಿದರು: "ತೊಂದರೆ ಏನೂ ಇಲ್ಲ. ಆ ಭಯ ನಿನಗೆ ಬೇಡ. ನಿನಗೆ ಗೊತ್ತಾ? ನಾನು ಇನ್ನೂ ಒಂದು ನಾಟಕ ಆಡೋದಕ್ಕೆ ಹೋಗ್ತಿದ್ದೀನಿ."

ಏನು ಎನ್ನುವ ರೀತಿಯಲ್ಲಿ ಕಾತ್ಯಾಯಿನಿಯಮ್ಮ ಗಂಡನ ಮುಖದ ಕಡೆಗೆ ನೋಡಿದಳು. "ನಾನು ಖಾದಿ ಜುಬ್ಬ ಧರಿಸಿಕೊಂಡು ತಲೆಗೆ ಟೋಪಿ ಹಾಕಿಕೊಂಡು ತಿರುಗಾಡ್ತೀನಿ ಗೊತ್ತಾ? ಖಾದಿ ಷರಟು ಹೊಲಿಸೋದಕ್ಕೆ ಬರುವ ದಾರಿಯಲ್ಲೇ ಏರ್ಪಾಟು ಮಾಡಿದೆ."

ಯಾವ ಬೇಸರವೂ ಇಲ್ಲದೆ ಕಾತ್ಯಾಯಿನಿಯಮ್ಮ ಹೇಳಿದಳು: "ಹಾಗಾದರೆ

ಒಂದು ಬಾವುಟ ಹಿಡಿದುಕೊಂಡು ಕೇಶವ ಪಿಳ್ಳೆಯನ್ನು ಗಲ್ಲಿಗೇರಿಸಬೇಕು ಎಂದು ಹೇಳಿದರೆ ಆಯ್ತು. ನಾಚಿಕೆ ಅನ್ನೋದು ಇಲ್ಲದಿದ್ದರೆ ಏನು ಮಾಡೋದಕ್ಕೆ ಆಗೋದಿಲ್ಲ?"

"ಇದರಲ್ಲೆಂಥ ನಾಚಿಕೆಗೇಡಿದೆಯೆ?"

"ಏನೂ ಇಲ್ಲ. ಏನೂ ಇಲ್ಲ."

"ನಿನಗೆ ಗೊತ್ತಿತ್ತಾ? ಅದನ್ನು ನಾನೀಗ ಹೇಳ್ತಿರೋದು ಅಷ್ಟೆ."

ಕೇಶವ ಪಿಳ್ಳೆಗೆ ಹಿಂದೆಂದೂ ಇಲ್ಲದ ಧೈರ್ಯೋತ್ಸಾಹಗಳುಂಟಾದುವು. ಪುನಃ ಆ ರಾಜಮಾರ್ಗ ಕಂಡುಬರುತ್ತಿದೆ. ಆ ಮಾರ್ಗ ತಿರುವುಮುರುವಾಗಿಯಲ್ಲ ಹೋಗುವುದು. ಸರಿಯಾಗಿ. ನೇರವಾಗಿ ಹೋಗುತ್ತದೆ. ಅಡಿಯಿಟ್ಟುಕೊಂಡು ಹೋದರೆ ಸಾಕು. ಹಳ್ಳ ದಿಣ್ಣೆಗಳೇ ಇರುವುದಿಲ್ಲ. ನೇರವಾದ ಮಾರ್ಗ! ಆದರೆ ಇನ್ನು ಮುಂದಿನ ನಿಲ್ದಾಣ ಯಾವುದು? ದೂರದೂರದಲ್ಲಿ ಯಾವುದೋ ಒಂದು ಸ್ಥಾನ ಕಾಣುತ್ತಿದೆ. ಆ ಸ್ಥಾನದ ಹೆಸರೇನೆಂದು ತಿಳಿಯದು. ಸ್ಪಷ್ಟವಾದ ನಿರೀಕ್ಷೆ ಚೀಫ್ ಸೆಕ್ರೆಟರಿ ಸ್ಥಾನದ ವರೆಗೇ ಇರುವುದು. ಅದರ ನಂತರ ದಿವಾನರು. ಆ ಸ್ಥಾನವೇ ಈಗ ಇಲ್ಲದಾಗುತ್ತಿದೆ. ಈಗ ಈ ಕುರ್ಚಿಯಿಂದ ಮುಂದೆ ಪ್ರೊಮೋಷನ್ ಎಲ್ಲಿದೆ? ನಿಶ್ಚಯವಿಲ್ಲ. ಆದರೆ ಮುಂದೆ ದೀರ್ಘವಾದ ಜೀವನದಲ್ಲಿ ಇನ್ನೂ ಮೆಟ್ಟಿಲುಗಳಿವೆ. ಒಂದು ವೇಳೆ ಸ್ಥಾನದ ಮೆಟ್ಟಿಲುಗಳಿಲ್ಲದಿರಬಹುದು. ಐಶ್ವರ್ಯದ್ದಾಗಿರಬಹುದು.

ಸ್ವಾತಂತ್ರ್ಯ ದಿನಾಚರಣೆಯನ್ನು ನಡೆಸುವುದಕ್ಕಾಗಿ ಚೀಫ್ ಸೆಕ್ರೆಟರಿ ರಾಜ್ಯವಿಡೀ ಖಾದಿ ಪಂಚೆ, ಖಾದಿ ಜುಬ್ಬ ಧರಿಸಿ ಸಂಚರಿಸುತ್ತಿದ್ದರು. ಜಿಲ್ಲೆಗಳು, ತಾಲೂಕುಗಳು, ಹಳ್ಳಿಗಳು ಎಲ್ಲ ಕಡೆಗಳಲ್ಲೂ ಅವರು ಸಂಚರಿಸುತ್ತಿದ್ದರು. ಮೊದಲೇ ಏರ್ಪಡಿಸಿದ್ದ ಕಾರ್ಯಕ್ರಮವನ್ನನುಸರಿಸಿ ಎಲ್ಲಿಗೆ ಹೋದರೂ ನೌಕರರು ಮಾತ್ರವಲ್ಲ, ಕಾಂಗ್ರೆಸ್ಸಿನವರು, ಅಲ್ಲದವರು ಎಲ್ಲರೂ ನಿರ್ದೇಶನಗಳನ್ನು ಸ್ವೀಕರಿಸಲು ಕಾದಿದ್ದರು. ಕೆಲವೇ ದಿನಗಳೊಳಗೆ ಕೇಶವ ಪಿಳ್ಳೆ ಕಾಂಗ್ರೆಸ್ಸಿನ ಜನರೊಳಗೆ ತುಂಬ ಪರಿಚಿತರಾದರು. ಅವರೆಲ್ಲರ ಪ್ರೀತಿಯನ್ನು ಸಂಪಾದಿಸಿದರು. ಚೀಫ್ ಸೆಕ್ರೆಟರಿಯೊಡನೆ ಹಾಗೆ ಹತ್ತಿರದ ಪರಿಚಯದವರಾಗಲು ಅವರಿಗೂ ಸಂತೋಷವಿತ್ತು. ನಿಜವಾಗಿಯೂ 'ಉದ್ಯೋಗಸ್ಥರಿಗಿಂತ ಹೆಚ್ಚಾಗಿ ಕಾಂಗ್ರೆಸ್ಸಿನವರು ಚೀಫ್ ಸೆಕ್ರೆಟರಿಯ ನಿರ್ದೇಶನಗಳನ್ನು ಕಾರ್ಯರೂಪಕ್ಕೆ ತರಲು ಆಸಕ್ತಿ ವಹಿಸಿದ್ದದ್ದು. ಕೇಶವ ಪಿಳ್ಳೆ ಅವರ ಮನುಷ್ಯರಾದರು.

ಈ ಸ್ವಾಗತ ಕೇವಲ ಅನಿರೀಕ್ಷಿತವಾಗಿತ್ತು. ಕೇಶವ ಪಿಳ್ಳೆ ಆಶ್ಚರ್ಯಪಡುತ್ತಿದ್ದರು. ಅವರಿಗೆ ಇದು ಅರ್ಥವಾಗಲು ಕಷ್ಟವಾಯಿತು. ಕಾಂಗ್ರೆಸ್ಸಿನವರು ಚೀಫ್ ಸೆಕ್ರೆಟರಿಯನ್ನು ಗೌರವಿಸುವುದೇಕೆ ಎಂದು ಎಷ್ಟು ಆಲೋಚಿಸಿದರೂ ಅವರಿಗೆ ಹೊಳೆಯುತ್ತಿರಲಿಲ್ಲ.

ಈ ಸಂದರ್ಭವನ್ನು ಕೊನೆಯ ವರೆಗೂ ಪ್ರಯೋಜನಪಡಿಸಿಕೊಳ್ಳಲು ಕೇಶವ ಪಿಳ್ಳೆ ನಿಶ್ಚೈಸಿದರು.

ಅಂತೂ ದೇಶವಿಡೀ ಒಂದು ಸುತ್ತು ಹಾಕಿದ ಮೇಲೆ ಕೆಲವು ಪತ್ರಿಕೆಗಳಲ್ಲೂ ಕೆಲವು ಭಾಷಣ ವೇದಿಕೆಗಳಲ್ಲೂ ಕೆಲವು ಆರೋಪಣೆ, ಆಕ್ಷೇಪಗಳೆದ್ದುವು. ಅದು ಜವಾಬ್ದಾರಿ ಯಿಲ್ಲದ ಒಂದು ಗುಂಪು ಹೇಳುತ್ತಿರುವುದೆಂದು ಮೊದಲು ತೋರಿದ್ದು. ಕಮ್ಯೂನಿಸ್ಟರೂ ಅವರ ಒಡನಾಡಿಗಳೂ ಹೆಚ್ಚಾಗಿದ್ದದ್ದು. ಆದರೆ ಅನಂತರ ಅರ್ಥವಾಯಿತು, ಕಾಂಗ್ರೆಸ್ಸಿನಲ್ಲೂ ಕೆಲವರಿಗೆ ದ್ವೇಷವಿದೆಯೆಂದು. ಕೇಶವ ಪಿಳ್ಳೆ ಜನದ್ರೋಹಿ! ಸ್ವಾತಂತ್ರ್ಯಸಮರದಲ್ಲಿ ಸತ್ತವರ ರಕ್ತಕ್ಕೆ ಕಾರಣರಾರು ಎಂದು ಯಾರಾದರೂ ಉತ್ತರ ಹೇಳುವುದಿದ್ದರೆ ಅದು ಕೇಶವ ಪಿಳ್ಳೆ ಎಂದು. ಕಾಂಗ್ರೆಸ್ ಚಳುವಳಿಯಲ್ಲಿ ಎದ್ದು ಕಂಡು ಬಂದ ಒಬ್ಬ ಶತ್ರುವಿದ್ದಲ್ಲಿ ಅದು ಕೇಶವ ಪಿಳ್ಳೆ ಮಾತ್ರ ಎನ್ನುವ ವರೆಗೂ ಹೇಳುತ್ತಿದ್ದರು. ಮೊದಲು ಸ್ವಾತಂತ್ರ್ಯ ಚಳವಳಿಯಲ್ಲಿ ಮೊಳಗಿದ ಘೋಷಣೆಯನ್ನು ಅವರು ಸ್ಮರಿಸಿ ಕೊಳ್ಳುತ್ತಿದ್ದರು.

"ಕೇಶವ ಪಿಳ್ಳೆಯನ್ನು ಜೈಲಿಗೆ ಹಾಕಬೇಕು—ತೂಗುಹಾಕಬೇಕು."

ಸ್ವಾತಂತ್ರ್ಯಸಮರದಲ್ಲಿ ಹೋರಾಡಿದುದು ಈ ಮಣ್ಣಿನ ಮಕ್ಕಳು ಎನ್ನುವ ಸತ್ಯ ವನ್ನು ಮರೆತು ಎಲ್ಲ ಹೀನ ಮಾರ್ಗದಲ್ಲಿಯೂ ಕೊಲ್ಲಲು ಹೊರಟ ಮನುಷ್ಯ ಇಂದು ಸ್ವಾತಂತ್ರ್ಯ ದಿನಾಚರಣೆಗಾಗಿ ಓಡಾಡುವುದನ್ನು ಕುರಿತು ಅವರು ತಮಾಷೆ ಮಾಡಿದರು. ಈ ಓಡಾಟದ ಉದ್ದೇಶ ಹಣ ಸಂಪಾದನೆ ಮಾಡುವುದೆಂದು, ಹಳೆಯ ಸಂಗತಿಗಳನ್ನು ಎತ್ತಿ ಆಡುತ್ತಿದ್ದರು.

ಬೇರೆಯವರಿಗಿಂತ ಹೆಚ್ಚಾಗಿ ಈ ಗುಂಪಿನ ತಂತ್ರವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾದದ್ದು ಕೇಶವ ಪಿಳ್ಳೆಗೆ. ಎಲ್ಲವೂ ಸರಿ ಎಂದು ಭಾವಿಸಿದ್ದ ಒಬ್ಬ ಮನುಷ್ಯ ಆತ. ಅದೇ ಕಾರಣದಿಂದ ಅವರಿಗೆ ಭಯವೂ ಆಯಿತು. ನಿಷೇಧಿಸುವುದಕ್ಕೆ ಇಲ್ಲದಿದ್ದಲ್ಲಿ ಎದುರು ವಾದಿಸುವುದಕ್ಕೆ ಯಾರಾದರೂ ಇಷ್ಟಪಟ್ಟಲ್ಲಿ ಏನು ಹೇಳುವುದು? ಎದುರು ವಾದವಾವುದು? ಅವರ ಬುದ್ಧಿಗೆ ಹೊಳೆಯುತ್ತಿಲ್ಲ. ಸ್ವಯಂ ರಕ್ಷಣೆಗೋಸ್ಕರ ಒಂದು ವಾದದ ಮುಖವನ್ನು ಕಂಡುಹಿಡಿಯಲು ಕೇಶವ ಪಿಳ್ಳೆ ಎಷ್ಟೋ ದಿನಗಳಿಂದ ಶ್ರಮಿಸು ತ್ತಿದ್ದರು. ಈ ಆರೋಪಣೆಗಳಿಗೆ ಪ್ರತಿಯಾಗಿ ಒಬ್ಬನೇ ಒಬ್ಬ ಒಂದು ಅಕ್ಷರ ಹೇಳುವು ದಿಲ್ಲ. ಒಂದು ಭಾಷಣವೋ ಒಂದು ಲೇಖನವೋ ಕೇಶವ ಪಿಳ್ಳೆಗೆ ಅನುಕೂಲವಾಗಿ ಹುಟ್ಟಿಕೊಳ್ಳುತ್ತಿಲ್ಲ. ಎದುರಾಳಿಗಳ ಸಂಖ್ಯೆ ಹೆಚ್ಚಿತು. ವಾದದ ಮುಖಗಳೂ ಹೆಚ್ಚು ತ್ತಿದ್ದುವು. ಇದೊಂದು ಕ್ರಾಂತಿಯಾಗಬಹುದೇ ಎಂದು ಕೇಶವ ಪಿಳ್ಳೆಗೆ ಸಂಶಯ ವಾಯಿತು.

ಒಂದು ದಿನ ಕೇಶವ ಪಿಳ್ಳೆ ಎಲ್ಲವನ್ನೂ ಹೆಂಡತಿಯ ಹತ್ತಿರ ಹೇಳಿದರು. ಮತ್ತಾರ ಹತ್ತಿರ ಹೇಳುವುದು? ಆ ಸ್ತ್ರೀ ತುಂಬ ಸಮಾಧಾನಿ. ಯಾವ ಗಾಬರಿಯೂ ಇಲ್ಲ.

ಈ ಉದ್ಯೋಗ ಹೋಗುವುದಿದ್ದರೆ ಹೋಗಲಿ. ಯಾಕೆ ಇಷ್ಟು ತಲೆ ಕೆಡಿಸಿಕೊಳ್ಳಬೇಕು ಎಂದು ಆಕೆಯ ವಾದ.

"ದೇವರು ಕೊಟ್ಟದ್ದು ನಮಗೆ ಸಾಕಾಗೋ ಅಷ್ಟಿಲ್ಲವಾ? ಯಾಕೆ ಇದನ್ನು ತಬ್ಬಿ ಹಿಡಿದುಕೊಳ್ಳಬೇಕು? ಹೋಗುವುದಿದ್ದರೆ ಹೋಗಲಿ."

ನಿಜವಾಗಿಯೂ ಆ ಮಾತನ್ನು ಸ್ವೀಕರಿಸುವುದೊಳ್ಳೆಯದು. ಅಷ್ಟು ಮಾತ್ರವಲ್ಲ, ಅದೇ ಉತ್ತಮ. ಆದರೆ ಆ ಸಮಾಧಾನ ಸರಿಯಾಗಿ ಕೇಶವ ಪಿಳ್ಳೆಯ ಅಂತರಂಗಕ್ಕೆ ನಾಟುವುದಿಲ್ಲ.

ಕಾತ್ಯಾಯಿನಿಯಮ್ಮ ಕೇಳಿದಳು:

"ಇದೆಲ್ಲದರಿಂದ, ಈ ಉದ್ಯೋಗದಿಂದ ಹಿಂದಕ್ಕೆ ಕಳಿಸಿದರು ಅಂತ ಇಟ್ಟುಕೊಳ್ಳಿ. ಹೋಗಿ ಸಾಯೋದಕ್ಕೆ ಸಾಧ್ಯವಾ?"

ನಿಜವಾಗಿಯೂ ಸಾಯುವುದಿಲ್ಲ.

ಆದರೂ—

ಕಾತ್ಯಾಯಿನಿಯಮ್ಮ ಹೇಳಿದಳು:

"ಹಾಗೆ ನೆನಸೋದಾದರೂ ಉಂಟಾ?"

ಪುನಃ ಆ ಅವಸ್ಥೆಯಲ್ಲಿ ಹಿಂದೆ ಎಲ್ಲ ಕಾಲದಲ್ಲೂ ಇದ್ದಂತೆ ಒಂದು ಸಾಮರ್ಥ್ಯ ಕೇಶವ ಪಿಳ್ಳೆಗೆ ಉಂಟಾಯಿತು. ಸಾಗುವಷ್ಟು ಸಾಗಿ ಈ ನಾಟಕವನ್ನು ನೋಡೋಣ. ಜೀವನದಲ್ಲಿ ಸಂತೃಪ್ತಿಗೆ ನಿಜವಾಗಿಯೂ ಕಾರಣವಿದೆ. ಇಲ್ಲಿಯ ವರೆಗೆ ಬಂದು ತಲುಪಿದೆ. ಸಾಕು ಎಂದು ಸಮಾಧಾನಪಟ್ಟುಕೊಳ್ಳಬಹುದು. ಆದರೆ ಪೆನ್ಶನ್ ಕಾಲ ಬಾರದೆ ಇಳಿದುಹೋಗುವುದೆಂದರೆ ಅವಮಾನವಾದಂತೆ!

ತನಗೆದುರಾಗಿ ಸಂಘಟಿತವಾದ ಒಂದು ಪ್ರಯತ್ನ ನಡೆಯುತ್ತಿದೆ ಎನ್ನುವ ವಿಷಯ ದಲ್ಲಿ ಕೇಶವ ಪಿಳ್ಳೆಗೆ ಸಂಶಯವಿಲ್ಲ. ಅಲ್ಲದಿದ್ದಲ್ಲಿ ಹೀಗೆ ನಿರಂತರವಾದ ಆರೋಪ ಗಳುಂಟಾಗಲು ಸಾಧ್ಯವಿಲ್ಲ. ಸೆಕ್ರೆಟರಿ ಫಿಲಿಪ್ಸ್ ಮುಂತಾದವರು ಕಾಂಗ್ರೆಸ್ಸಿನ ಕಡೆ ಯವರು. ಚಳುವಳಿಯ ಕಾಲದಲ್ಲಾಗಿದ್ದರೆ—ಫಿಲಿಪ್ಸನಿಗೂ ತೊಂದರೆ ಕೊಡಬಹು ದಾಗಿತ್ತು. ಆದರೆ ಯಾಕೆ ದ್ರೋಹ ಮಾಡಬೇಕು ಎಂದು ತೀರ್ಮಾನಿಸಿ ಅದನ್ನು ಗಮನಿಸದೆ ಇದ್ದದ್ದು ದೊಡ್ಡ ತಪ್ಪಾಗಿ ಹೋಯಿತು ಎಂದು ಕೇಶವ ಪಿಳ್ಳೆಗೆ ಈಗ ತೋರುತ್ತಿತ್ತು. ಸೆಕ್ರೆಟರಿಯೇಟ್‌ನಿಂದ ತೊಂದರೆಗಳು ಆರಂಭವಾಗುವುದು. ಕೇಶವ ಪಿಳ್ಳೆಯನ್ನು ಅವಮಾನಿಸಿ ಕಳಿಸಿದರೆ ಅವರಿಗೆಲ್ಲ ಸಂತೋಷವಾಗುತ್ತದೆ. ಒಮ್ಮೆ ಅವರು ಪ್ರಯತ್ನ ಮಾಡಿ ಸೋತುಹೋದರು. ಪುನಃ ಸಿಕ್ಕಿದ ಸಂದರ್ಭವನ್ನು ಪ್ರಯೋಜನ ಪಡಿಸಿಕೊಳ್ಳುತ್ತಿದ್ದಾರೆ. ಅದು ಒಳ್ಳೆಯ ಸಂದರ್ಭ.

ಹೇಗೆ ಈ ಘಟ್ಟವನ್ನು ದಾಟುವುದು ಎಂದು ಕೇಶವ ಪಿಳ್ಳೆಯ ಆಲೋಚನೆ. ಈಗಿನ ಅವರ ಕಷ್ಟ ಉದ್ಯೋಗದಿಂದ ಹಿಂದಿರುಗಿ ಹೋಗುವುದಲ್ಲ. ಹಾಗೆ ತಳ್ಳಿಸಿ

ಕೊಂಡು, ಅಥವಾ ಹೇಳಿಸಿಕೊಂಡು ಹೊರಗೆ ಹೋದದ್ದು ಎಂದಾಗದಿರಲಿ ಎಂದು ಕೊಂಡಿದ್ದರು. ಕಾತ್ಯಾಯಿನಿಯಮ್ಮನಿಗೆ ಈಗ ವಿಷಯವೆಲ್ಲ ಸರಿಯಾಗಿ ಅರ್ಥ ವಾಯಿತು. ಕೆಲವು ದಿವಸಗಳಿಂದ ಅವಳಿಗೆ ಕೇಶವ ಪಿಳ್ಳೆ ವಿಷಯಗಳನ್ನು ತಿಳಿಸಿ ಕೊಟ್ಟಿದ್ದರು. ಆದರೂ ಅವಳಿಗೆ ಫಲವುಂಟಾಗುತ್ತಿಲ್ಲ. ಉದ್ಯೋಗದಿಂದ ಹಿಂದಕ್ಕೆ ಕಳಿಸಿದರೇನೆಂದು ಅವಳು ಕೇಳುವುದು? ಅದು ಅಷ್ಟೊಂದು ದೊಡ್ಡ ವಿಷಯವೇ?

ಪುನಃ ಜೀವನದಲ್ಲಿ ಒಂಟಿ ಎನ್ನುವ ವಿಚಾರ ಕೇಶವ ಪಿಳ್ಳೆಯನ್ನು ಬಾಧಿಸಿತು. ಒಂದೇ ಒಂದು ವ್ಯಕ್ತಿ ಸಹಾನುಭೂತಿಯಿಂದ ಮಾತನಾಡುವುದಕ್ಕೂ ಇಲ್ಲ. ಹೆಂಡತಿಗೂ ಅರ್ಥಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಹಾಗೆ ಒಬ್ಬ ಮನುಷ್ಯನನ್ನು ಕಂಡುಹಿಡಿಯಲು ಶ್ರಮಿಸುತ್ತಿದ್ದರು. ಈಗ ನಂಬಿಕೆಯಿದೆ. ಒಂದು ಸ್ಥಳ ಇದೆ—ಆ ಭಾರವನ್ನು ಇಳಿಸಿಕೊಳ್ಳಲು ಅದು ನಿಜವಾಗಿಯೂ ಸಮಾಧಾನವನ್ನು ನೀಡಿತ್ತು. ಆದರೆ ಹೆಂಡತಿಯಿಂದ ಅದಕ್ಕಿಂತಲೂ ಹೆಚ್ಚಾಗಿ ಅವಶ್ಯಪಡುತ್ತಿದ್ದರು. ಕಾತ್ಯಾಯಿನಿಯಮ್ಮ ಈ ಸ್ಥಿತಿಯಲ್ಲೂ ಉತ್ಸಾಹ ರಹಿತಳಾಗಿರಲಿಲ್ಲ. ಅವಳ ಮನಸ್ಸು ಹಗುರವಾಗಿತ್ತು. ಸುಖವಾಗಿ ನಿದ್ದೆ ಮಾಡಬಲ್ಲಳು. ಕೇಶವ ಪಿಳ್ಳೆಗೆ ನಿದ್ದೆ ಬಾರದೆ ಅತ್ತಿತ್ತ ಹೊರಳಾಡುತ್ತಿದ್ದಾಗ ಕಾತ್ಯಾಯಿನಿಯಮ್ಮ ನಿದ್ದೆ ಮಾಡುತ್ತಿದ್ದಳು. ಆದರೆ ಮಧ್ಯೆಮಧ್ಯೆ ಬೆಚ್ಚಿ ಎದ್ದು ಕೇಳುತ್ತಿದ್ದಳು:

"ಮಲಗಲಿಲ್ಲವಾ? ಇಷ್ಟೊಂದು ಕಷ್ಟಪಡೋದೇನಿದೆ?"

ಮರುನಿಮಿಷದಲ್ಲಿ ಆ ಸ್ತ್ರೀ ಗಾಢನಿದ್ರೆ ಮಾಡುತ್ತಿದ್ದಳು. ಇವಳು ಕೂಡ ನಿದ್ದೆ ಮಾಡುತ್ತಾಳೆ! ಕೇಶವ ಪಿಳ್ಳೆ ಸಿಟ್ಟು ಮಾಡಿಕೊಳ್ಳುತ್ತಿರಲಿಲ್ಲ. ಆಕ್ಷೇಪಿಸುತ್ತಿದ್ದರು.

ಕಾತ್ಯಾಯಿನಿಯಮ್ಮ ಕೇಳಿದಳು—

"ಮತ್ತೆ ನಾನೇನು ಮಾಡಬೇಕು? ನಾನೂ ನಿದ್ದೆ ಮಾಡದೆ ಇರ್ತೀನಿ ಅಂತ ಇಟ್ಟು ಕೊಳ್ಳಿ. ಆಗ ವಿಷಯ ಬಗೆಹರಿಯುತ್ತಾ? ಹೀಗೆಲ್ಲ ಮಾತನಾಡುವ ಮನುಷ್ಯರ ಬಾಯಿ ಕಟ್ಟಿ ಹಿಡಿಯುವುದು ಹೇಗೆ ಅಂತ ನನಗೆ ಗೊತ್ತಿಲ್ಲ. ನಾನು ನಿದ್ದೆ ಮಾಡದೆ ಅದನ್ನು ಆಲೋಚನೆ ಮಾಡ್ತಾ ಇದ್ದರೇನು ಬಂತು?"

ಕೇಶವ ಪಿಳ್ಳೆ ಆ ಮಾತನ್ನು ಅಲ್ಲಗಳೆಯುವಂತಿರಲಿಲ್ಲ. ಅಂತು ಹೆಂಡತಿ ಹಾಗೆ ಸುಖವಾಗಿ ನಿದ್ದೆ ಮಾಡಿಕೊಳ್ಳಲಿ ಎಂದು ಸುಮ್ಮನಿರಲೂ ಅವರಿಗೆ ಸಾಧ್ಯವಿಲ್ಲ.

ಕಾತ್ಯಾಯಿನಿಯಮ್ಮ ಆ ವಿಷಯದ ಸಾರಾಂಶಕ್ಕೆ ಬಂದಳು: "ಈಗ ಇವರೆಲ್ಲ ಏನು ಹೇಳುವುದು?"

"ನನ್ನನ್ನು ಮನೆಗೆ ಕಳಿಸಬೇಕು ಅಂತ."

ಸರಿಯಾದ ತಿಳಿವಳಿಕೆಯಿದ್ದ ಒಬ್ಬ ಮನುಷ್ಯನಂತೆ ಕಾತ್ಯಾಯಿನಿಯಮ್ಮ ಕೇಳು ತ್ತಿದ್ದದ್ದು. ಆ ಭಾವವೂ ಧ್ವನಿಯೂ ಅದಾಗಿತ್ತು. ಉಪದೇಶವನ್ನು ನೀಡುವ ಒಬ್ಬ ಮನುಷ್ಯನ ಹಾಗೆ ಚೀಫ್ ಸೆಕ್ರೆಟರಿ ಉತ್ತರ ಹೇಳುವುದು.

ಥಟ್ಟನೆ ಕಾತ್ಯಾಯಿನಿಯಮ್ಮನ ಸಾಧಾರಣ ಬುದ್ಧಿಯಿಂದ ಒಂದು ವಿಷಯ ಪ್ರಶ್ನೆಯ ರೂಪದಲ್ಲಿ ಹೊರಗೆ ಬಂದಿತು: "ಹಾಗಿದ್ದರೆ ಈ ಕಾಂಗ್ರೆಸ್‌ನವರನ್ನು ಎದುರಿಸಿದ ಪೋಲೀಸಿನವರನ್ನೂ ಉಳಿದ ಉದ್ಯೋಗಸ್ಥರನ್ನೂ ಮನೆಗೆ ಕಳಿಸಬೇಕಲ್ಲ?"

ಕೇಶವ ಪಿಳ್ಳೆ ಹೇಳಿದರು: "ಅದು ಹಾಗೇ ಆಗಬೇಕಾದದ್ದು. ಆದರೆ ನನ್ನನ್ನು ಮಾತ್ರ ಮನೆಗೆ ಕಳಿಸಿದರೆ ಸಾಕು ಅಂತ ಅಲ್ಲವೇ ಹೇಳುವುದು?"

"ಇದೀಗ ಸರಿ. ಅದು ಯಾವ ನ್ಯಾಯ?"

"ನ್ಯಾಯವಿಲ್ಲ."

ಕಾತ್ಯಾಯಿನಿಯಮ್ಮ ಕೇಳಿದಳು: "ನ್ಯಾಯವಿಲ್ಲದ ವಿಷಯಕ್ಕೆ ನಾವು ಯಾಕೆ ಹೆದರಿಕೊಳ್ಳಬೇಕು?"

"ಏನು ಮಾಡುವುದು ಮನೆಗೆ ಕಳಿಸಿದರೆ?"

ಕಾತ್ಯಾಯಿನಿಯಮ್ಮ ಪುನಃ ಹಿಂದಿನ ಸಮಾಧಾನಕ್ಕೆ ಬಂದಳು.

"ನಮ್ಮನ್ನ ಮಾತ್ರ ನ್ಯಾಯವಿಲ್ಲದೆ ಹಿಂದಕ್ಕೆ ಕಳಿಸುವುದಾದರೆ ಹಾಗೆಯೇ ಆಗಲಿ ಅಂದುಕೊಳ್ಳಬೇಕು. ಅದಲ್ಲದೆ ಮತ್ತೇನು?"

ಒಂದು ಕ್ಷಣ ಬಿಟ್ಟು ಅವಳು ಕೇಳಿದಳು: "ಕೆಲವು ದಿನಗಳ ಹಿಂದೆ ಹೇಳಲಿಲ್ಲವಾ? ದಿವಾನರು ಹೋದರು. ಇನ್ನು ಮೇಲೆ ಕಾಂಗ್ರೆಸ್ ಬರುತ್ತೆ ಅಂತ. ಕಾಂಗ್ರೆಸ್ಸಿನವರ ಶತ್ರುಗಳು ಕಮ್ಯೂನಿಸ್ಟರು ಅಂತ. ಕಾಂಗ್ರೆಸ್ ಆಳುವಾಗ ಅವರು ಇದೇ ರೀತಿ ತೊಂದರೆ ಮಾಡ್ತಾರೆ ಅಂತ. ಆಗ ಇನ್ನು ಮೇಲೆ ಕಮ್ಯೂನಿಸ್ಟರು ಆಳುವಾಗ ಕಾಂಗ್ರೆಸ್ಸಿನವರ ಕಾಲದಲ್ಲಿ ಕಮ್ಯೂನಿಸ್ಟರನ್ನು ಎದುರಿಸಿದ ಕಾಂಗ್ರೆಸ್ಸಿನವರನ್ನೆಲ್ಲ ಮನೆಗೆ ಕಳಿಸಬೇಕಲ್ಲವಾ? ಹಾಗೇನಾ? ಈ ಲೆಕ್ಕದಲ್ಲಿ ಒಬ್ಬ ಉದ್ಯೋಗಸ್ಥನೂ ಪೆನ್ಶನ್ ಪಡೆಯೋದಕ್ಕೆ ಸಾಧ್ಯವಿಲ್ಲ. ಹಾಗೇನಾ ಇನ್ನು ಮೇಲೆ ನಡೆಯೋದು?"

ಕೇಶವ ಪಿಳ್ಳೆ ಹೇಳಿದರು: "ಅದು ಹಾಗಲ್ಲ."

"ಮತ್ತೆ ಹೇಗೆ?"

ಕೇಶವ ಪಿಳ್ಳೆಯ ತಲೆಯೊಳಗೆ ಬುದ್ಧಿ ಮಿಂಚಿತು. ಅವರು ಹೇಳಿದರು: "ಆದರೆ ನಮಗೋಸ್ಕರ ಇದನ್ನು ವಾದಿಸುವವರು ಯಾರು?"

ಕಾತ್ಯಾಯಿನಿಯಮ್ಮ ಕೇಳಿದಳು: "ಇದನ್ನ ಯಾರಾದರೂ ಹೇಳಬೇಕಾ? ಇದೂ ಸರಿ. ಎಷ್ಟೋ ಜನರು ಮನೆಗೆ ಕಳಿಸಬೇಕು ಅಂತ ಕೂಗುವಾಗ ಕೆಲವರು ಅದು ಸಾಧ್ಯವಿಲ್ಲ ಅಂತ ಹೇಳಿಕೊಂಡು ತಿರುಗಬೇಕಾ? ಇದು ಒಳ್ಳೆ ಕಾಲ."

"ಒಳ್ಳೆ ಕಾಲ. ನ್ಯಾಯ ನಮ್ಮ ಕಡೆಗಿದೆ."

"ಆಗ ದಿವಾನರು ಹೇಳಿದ್ದನ್ನು ಕೇಳಿದೆವು. ಈಗ ಕಾಂಗ್ರೆಸ್‌ನವರು ಹೇಳುವುದನ್ನು ಕೇಳ್ತೇವೆ. ಮತ್ತಿನ್ನೇನು? ಸಮಾಧಾನ ತಂದುಕೊಂಡು ಮಲಗಿ ನಿದ್ದೆ ಮಾಡಿ."

ಕಾತ್ಯಾಯಿನಿಯಮ್ಮ ಹೊದೆದುಕೊಂಡು ಮಲಗಿದಳು. ಮಲಗಿದ ಕೂಡಲೆ

ನಿದ್ದೆಯೂ ಬಂದಿತು. ಕೇಶವ ಪಿಳ್ಳೆಗೆ ನಿದ್ದೆ ಬರಲಿಲ್ಲ. ಅವರಿಗೆ ಒಂದು ವಾದದ ಮುಖ ಕಾಣಿಸಿತು. ಉತ್ತಮವಾದ ವಾದದ ಮುಖ. ಅದನ್ನು ಕುರಿತು ಅವರು ಆಲೋಚಿಸು ತ್ತಿದ್ದರು. ಒಂದು ಕಾಲದಲ್ಲಿ ದಿವಾನರು ಆಳುತ್ತಿದ್ದಾಗ ಆ ಆಡಳಿತ ಮಂಡಲದ ಸೇವೆ ಮಾಡಿದರು. ಈಗ ಕಾಂಗ್ರೆಸ್ಸಿನ ಸೇವೆ ಮಾಡಬೇಕು. ಆ ಮೇಲೆ ಮತ್ತೊಂದು ಪಾರ್ಟಿ ಬಂದರೆ ಅದರ ಸೇವೆಯನ್ನೂ ಮಾಡಬೇಕು. ನಾನೇನು ತಪ್ಪು ಮಾಡಿದೆ?

ನಾಲ್ಕು ಕಡೆಗಳಿಂದಲೂ ಎದ್ದು ನಿಲ್ಲುತ್ತಿದ್ದ ವಾದ ಕೋಲಾಹಲಗಳಲ್ಲೆಲ್ಲ ಒಂದನೆಯ ದರ್ಜೆಯ ವಾದವಾಗಿತ್ತು ಅದು. ಆ ಘೋಷಣೆಗಳೂ ತಂತ್ರಗಳೂ ಆ ವಾದ ದಲ್ಲಿ ಮುಳುಗಿ ಹೋಗುತ್ತವೆ. ಯಾವ ಮನಃಕ್ಲೇಶವೂ ಇಲ್ಲದೆ ಕಾತ್ಯಾಯಿನಿ ನಿದ್ದೆ ಮಾಡುತ್ತಿದ್ದಾಳೆ. ಆ ಸ್ತ್ರೀ ಅವಳ ಭಾಷೆಯಲ್ಲಿ ಅವಳ ವಾದವನ್ನು ಮುಂದಿರಿಸಿದಳು. ವಿದ್ಯೆಬುದ್ಧಿಯಿದ್ದ ತನಗೆ ಅದು ಹೊಳೆಯಲಿಲ್ಲವಲ್ಲ ಎಂದು ಕೇಶವ ಪಿಳ್ಳೆ ನೆನಸಿ ಕೊಂಡರು.

ಕಾತ್ಯಾಯಿನಿಯಮ್ಮನನ್ನು ಕೇಶವ ಪಿಳ್ಳೆ ನೋಡುತ್ತಾ ಇದ್ದರು. ಅವರ ಕಣ್ಣು ಗಳು ಒಂದು ಅದ್ಭುತ ವ್ಯಕ್ತಿಯನ್ನು ಕಾಣುತ್ತಿದ್ದುವು. ಅಂದು ವಿವಾಹ ವೇದಿಕೆಯಲ್ಲಿ ಕಪ್ಪಾಗಿ ಕ್ಷಯರೋಗ ಹಿಡಿದ ಹಾಗೆ ಸಣ್ಣಗಿದ್ದ, ಸ್ವಲ್ಪ ಹಲ್ಲು ಮುಂದಕ್ಕೆ ಇದ್ದ ಒಂದು ತೆಂಗಿನ ಕುಸುರಿ ಹಾಗೆ ತಲೆಗೂದಲನ್ನು ಕಟ್ಟಿಕೊಂಡಿದ್ದ ಹೆಣ್ಣಾ ಇದು? ಆ ದಿನ ಇವ ಳನ್ನು ಕೈಯಲ್ಲಿ ಮುಟ್ಟುವುದಕ್ಕೂ ಬೇಸರವಾಗುತ್ತಿತ್ತು. ಎಂಥೆಂಥ ಅದ್ಭುತ ಶಕ್ತಿಗಳು ಅವಳಲ್ಲಿ ಕಂಡುಬರುತ್ತಿವೆ? ಈ ಸಿದ್ಧಿಗಳು ಅಂದೇ ಅವಳಿಗೆ ಲಭಿಸಿದ್ದುವೇ? ಕೇಶವ ಪಿಳ್ಳೆಗೆ ನಂಬಲು ಸಾಧ್ಯವಾಗುತ್ತಿಲ್ಲ. ಆ ಹೆಣ್ಣೇನಾ ಇವಳು? ಕೇಶವ ಪಿಳ್ಳೆಗೆ ಬಲವಾದ ಸಂಶಯವುಂಟಾಯಿತು. ಒಂದೊಂದು ನಿಮಿಷ ಕಳೆಯುವಾಗಲೂ ಅವರ ಆಶ್ಚರ್ಯ ಹೆಚ್ಚುತ್ತಿತ್ತು. ಆ ಸ್ತ್ರೀ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲದ ವ್ಯಕ್ತಿಯಾಗುತ್ತಿದ್ದಾಳೆ.

ಕಾತ್ಯಾಯಿನಿಯಮ್ಮ ಸುಖವಾಗಿ ನಿದ್ದೆ ಮಾಡುತ್ತಿದ್ದಾಳೆ. ಯಾವ ಆಲೋಚ ನೆಯೂ ಇಲ್ಲದೆ. ಇಂದು ಅವಳ ಬಣ್ಣ ಕಪ್ಪಲ್ಲ, ಹಲ್ಲು ಉಬ್ಬಿಲ್ಲ, ಅವಳು ತೆಳ್ಳನೆಯವ ಳಲ್ಲ. ಆ ಮುಖಕ್ಕೆ ಒಂದು ತೇಜಸ್ಸಿದೆ. ತನ್ನ ಹೆಂಡತಿ ಸುಂದರಿ. ಅವಳು ತನ್ನವಳು. ತನ್ನವಳು ಮಾತ್ರ. ತನಗೋಸ್ಕರ ಅವಳ ತಲೆಗೂದಲು ಹೀಗೆ ಸಮೃದ್ಧಿಯಾಗಿ ಬೆಳೆಯಿತು. ಆ ಒಳ್ಳೆಯ ಬಣ್ಣ ಬಂದಿತು. ಶರೀರ ಪುಷ್ಟಿಗೊಂಡಿತು. ಎಲ್ಲವೂ ಇಷ್ಟು ಆಕರ್ಷಕವಾದದ್ದು. ಮತ್ತಾರಿಗಾಗಿಯೂ ಅಲ್ಲ, ಕೇಶವ ಪಿಳ್ಳೆಗಾಗಿ ಮಾತ್ರ. ಹಾಗೆ ಕೇಶವ ಪಿಳ್ಳೆಗೋಸ್ಕರ ಅವಳು ಅದನ್ನು ಕಾಪಾಡಿಕೊಂಡು ಬರುತ್ತಿದ್ದಾಳೆ. ಆ ವಿಷಯ ದಲ್ಲಿ ನಂಬಿಕೆಯಿದೆ. ಆ ತೋಳಿನ ಮೇಲೆ ಮಲಗಿ ನಿದ್ದೆ ಮಾಡಿದರೆ ದುಃಸ್ವಪ್ನ ಕಾಣಿಸು ವುದಿಲ್ಲ. ಅವಳು ಬಯ್ಯುತ್ತಾಳೆ, ಅನುಸರಿಸುತ್ತಾಳೆ, ಗುಣದೋಷಗಳನ್ನು ತಿಳಿಸುತ್ತಾಳೆ. ಉಪದೇಶ ನೀಡುತ್ತಾಳೆ, ಆಜ್ಞೆ ಮಾಡುತ್ತಾಳೆ, ಭರವಸೆ ನೀಡುತ್ತಾಳೆ, ಕಷ್ಟಪಡಿಸುತ್ತಾಳೆ, ಸಂತೋಷನೀಡುತ್ತಾಳೆ, ಮನಸ್ಸು ನೋಯಿಸುತ್ತಾಳೆ, ಅನುಕರಿಸುತ್ತಾಳೆ—ಅವಳು ತನ್ನ

ಆಶ್ರಯದಲ್ಲಿ. ಆದರೆ ಅವಳು ತನ್ನನ್ನು ಆಳುತ್ತಿದ್ದಾಳೆ. ಅವಳಿಗೆ ಮನಸ್ಸಮಾಧಾನ ಇದೆ. ಅವಳು ತನ್ನ ವ್ಯಕ್ತಿ ಮಾತ್ರ. ಮತ್ತಾರವಳೂ ಅಲ್ಲ.

ಎಲ್ಲ ಕ್ಲೇಶಗಳನ್ನೂ ಮರೆತು ಕೇಶವ ಪಿಳ್ಳೆ ಆ ನಿರ್ಮಲವಾದ ಮುಖದೊಂದಿಗೆ ತನ್ನ ಮುಖವನ್ನು ಸೇರಿಸಿದರು. ಕಾತ್ಯಾಯಿನಿಯಮ್ಮ ಕಣ್ಣು ತೆರೆದು ನೋಡಿದಳು. ಎಂತಹ ಮನಮೋಹಕ ನಗು ! ಹೆಂಡತಿಯ ನಗು ! ಕಾತ್ಯಾಯಿನಿಯಮ್ಮನ ಕೈ ಅವರ ಕತ್ತನ್ನು ಬಳಸಿತು. ಅಪ್ಪಿ ಮಲಗಿದಾಗ ಅವಳು ಹೇಳಿದಳು: "ತಲೆಗೇನೂ ಆಲೋಚನೆ ಹಚ್ಚಿಕೊಳ್ಳಬೇಡಿ. ಸುಖವಾಗಿ ಮಲಗಿ ನಿದ್ದೆ ಮಾಡಿ." ಅವರ ಎದೆಯನ್ನು ತಾಯಿ ಮಗುವನ್ನು ತಟ್ಟುವಂತೆ ತಟ್ಟಿದಳು. ಅವಳು ಕಿವಿಯ ಹತ್ತಿರ ಹೇಳಿದಳು:

"ನಮಗೆ ಯಾವ ಕೇಡೂ ಉಂಟಾಗೋದಿಲ್ಲ."

ಆ ಎರಡು ಶರೀರಗಳೂ ಆತ್ಮವೂ ಒಂದಾದುವು. ಅಲ್ಲಿ ಸಂಕಟವಿಲ್ಲ, ಕ್ಲೇಶವಿಲ್ಲ, ದುಃಖವಿಲ್ಲ.

ಎಷ್ಟೋ ದಿವಸಗಳಿಂದ ಇಲ್ಲದ ಒಂದು ಉತ್ಸಾಹದಿಂದ ಕೇಶವ ಪಿಳ್ಳೆ ಮೇಲೆದ್ದದ್ದು. ಒಂದು ಶುಭಸೂಚನೆಯ ನಂಬಿಕೆಯೂ ಅವರಲ್ಲಿತ್ತು, ಏನಾದರೂ ಒಂದು ಮಾರ್ಗ ವುಂಟಾಗುತ್ತದೆ ಎಂದು. ಕಾತ್ಯಾಯಿನಿಯಮ್ಮನೂ ಖಂಡಿತವಾಗಿ ಅದನ್ನೇ ಹೇಳುತ್ತಾಳೆ. ಅವಳಿಗೆ ನಂಬಿಕೆಯಿತ್ತು.

ಅಂದೂ ಕೇಶವ ಪಿಳ್ಳೆಗೆ ಎದುರಾದ ಭಾಷಣಗಳೂ. ಲೇಖನಗಳೂ ಎದುರಿಗೆ ಮಾತನಾಡುವ ವರೆಗೂ ಇದ್ದುವು. ಆದರೆ ಇಂದು ಕೇಶವ ಪಿಳ್ಳೆಗೆ ಯಾವ ಹುಚ್ಚೂ ಹಿಡಿಯಲಿಲ್ಲ.

ಗೇಟಿನ ಪೋಲೀಸಿನವನು ಬಂದು ಹೇಳಿದ. ಕಾಂಗ್ರೆಸ್ ಕಮಿಟಿಯ ವೈಸ್ ಪ್ರೆಸಿಡೆಂಟ್ ಬಂದಿದ್ದಾರೆ ಎಂದು. ಕರೆದುಕೊಂಡು ಬಂದು ರಿಸೆಪ್ಷನ್ ರೂಮಿನಲ್ಲಿ ಕೂರಿಸುವಂತೆ ಕೇಶವ ಪಿಳ್ಳೆ ಹೇಳಿ ಕಳಿಸಿದರು. ಒಳಗೆ ಹೋಗಿ ಡ್ರೆಸ್ ಬದಲಾಯಿಸಿಕೊಂಡು ಬಂದರು.

ಆ ಸನ್ಮಾನ್ಯ ಅತಿಥಿ. ಕಾಂಗ್ರೆಸ್ ಸಂಸ್ಥೆಯಲ್ಲಿ ಎರಡನೆಯ ದರ್ಜೆಯ ಮನುಷ್ಯನಾಗಿದ್ದರೂ ತುಂಬ ಪ್ರಭಾವವಿದ್ದ ಮನುಷ್ಯ. ಸ್ವಲ್ಪ ಹೊತ್ತು ಕಳೆದ ಮೇಲೆ ಖಾದಿ ಉಡುಗೆಯಲ್ಲಿ ಅವರನ್ನು ಸ್ವಾಗತಿಸಿದರು. ಕುಶಲ ಪ್ರಶ್ನೆಯ ನಂತರ ಆಗಸ್ಟ್ ಹದಿನೈದರ ಆಚರಣೆಯ ಕಾರ್ಯಕ್ರಮಗಳ ವಿಚಾರಗಳಿಗೆ ಬಂದರು. ಕೇಶವ ಪಿಳ್ಳೆ ತಾವು ಮಾಡುತ್ತಿರುವ ಏರ್ಪಾಡುಗಳನ್ನು ವಿವರವಾಗಿ ತಿಳಿಸಿ ಹೀಗೆ ಉಪಸಂಹರಿಸಿದರು: ಎಲ್ಲ ಕಡೆಗಳಲ್ಲೂ ಮನೆಮನೆಗಳಲ್ಲೂ ಆಚರಣೆಗಳ ಏರ್ಪಾಡು ನಡೆಯುತ್ತಿದೆ. ಆಚರಣೆಯ ಕಾರ್ಯಕ್ರಮಗಳಲ್ಲಿ ಹೆಚ್ಚು ಪಾಲನ್ನು ನೌಕರರಲ್ಲದವರಿಗೆ ಬಿಟ್ಟುಕೊಡಲಾಗಿದೆ. ಇನ್ನೂ ನಾವು ಒಂದೆರಡು ಮೀಟಿಂಗ್ ಸೇರಿಸಬೇಕು. ಕಾರ್ಯಕ್ರಮಗಳ ಅಂಗೀಕಾರಕ್ಕಾಗಿ— ವೈಸ್ ಪ್ರೆಸಿಡೆಂಟರ ವಿವರಣೆಯಂತೆ ಏರ್ಪಾಡುಗಳನ್ನು ವ್ಯಾಪಕವಾಗಿ ಮಾಡಲಾಗಿದೆ ಎಂದು ಅವರು ಹೇಳಿದರು.

"ಹಳ್ಳಿಹಳ್ಳಿಗಳಿಗೂ ಕನ್ವೀನರ್ ಹೋಗಿದ್ದದ್ದು ಗೊತ್ತಾಯ್ತು."

ಕೇಶವ ಪಿಳ್ಳೆಗೆ ಲಭಿಸಿದ ಒಂದು ಅಭಿನಂದನೆ ಅದು. ಕೇಶವ ಪಿಳ್ಳೆಯೇ ಆ ಕನ್ವೀನರ್. ಅವರು ಹೇಳಿದರು:

"ಸುಮಾರು ದಿನಗಳಿಂದ ಓಡಾಡಿದ್ದಾಯ್ತು. ಹೋಗಬೇಕಾಗಿದ್ದ ಕಡೆಗಳಲ್ಲೆಲ್ಲ ಹೋಗಿಬಂದದ್ದಾಯ್ತು."

ಹಾಗೆ ಆ ವಿಷಯ ಮಾತನಾಡಿದ್ದಾಯಿತು. ಅನಂತರ ಮಾತನಾಡುವುದಕ್ಕೆ ಏನೂ ಇಲ್ಲದವರಂತೆ ಸ್ವಲ್ಪ ಹೊತ್ತು ಕುಳಿತರು. ಇಬ್ಬರಿಗೂ ಮಾತನಾಡುವುದಿತ್ತು. ಕೇಶವ ಪಿಳ್ಳೆ ಆತಿಥೇಯನಲ್ಲವೆ? ಅವರು ಕೇಳಿದರು:

"ಈಗ ಈ ಕಡೆ ಬಂದದ್ದು.........?"

ಒಂದು ಸಣ್ಣ ನಗುವಿನೊಂದಿಗೆ ಕಾಂಗ್ರೆಸ್ ಮುಂದಾಳು ಹೇಳಿದ್ದು. ಯಾವುದೋ ಕಾರ್ಯಸಾಧನೆಗಾಗಿರಬೇಕು ಎಂದು ವ್ಯಕ್ತವಾಗುತ್ತಿತ್ತು.

"ಸ್ವಲ್ಪ ಸ್ವಂತ ಕೆಲಸ; ಸ್ವಲ್ಪ ಸಾರ್ವಜನಿಕರ ಕೆಲಸ."

ಅದೇನೆಂದು ತಿಳಿಯಲು ಕೇಶವ ಪಿಳ್ಳೆ ಕಾತರದಿಂದಿದ್ದರು.

"ಸಾರ್ವಜನಿಕರ ಕೆಲಸ ವಿಸ್ತಾರವಾದದ್ದು. ಚಳವಳಿಯ ಕಾಲದಲ್ಲಿ ತುಂಬ ಜನರ ಆಸ್ತಿಪಾಸ್ತಿ ವಶಪಡಿಸಿಕೊಳ್ಳಲಾಗಿತ್ತು. ಸರ್ಕಾರದಿಂದ ದೊರೆಯಬೇಕಾಗಿದ್ದ ಹಣವನ್ನು ಅಡಗಿಸಿಡಲಾಗಿದೆ. ಸ್ವಾತಂತ್ರ್ಯ ದಿನದಲ್ಲಿ ಈ ಆಸ್ತಿಪಾಸ್ತಿ ಹಣ ಎಲ್ಲವನ್ನೂ ಕೊಡಬೇಕಾದವರಿಗೆ ಹಿಂದಕ್ಕೆ ಸಿಕ್ಕುವ ಹಾಗೆ ಆ ಕೇಸುಗಳನ್ನು ತೀರ್ಮಾನಿಸಿದರೆ ತುಂಬ ಒಳ್ಳೆಯದಾಗುತ್ತೆ. ಸಾಮಾನ್ಯವಾಗಿ ನಮ್ಮ ಅಭಿಪ್ರಾಯ ಅದು."

ಕೇಶವ ಪಿಳ್ಳೆ ಸ್ವಲ್ಪ ಹೊತ್ತು ಆಲೋಚನೆ ಮಾಡುತ್ತಿದ್ದರು. ಕಾಂಗ್ರೆಸ್ ಮುಂದಾಳು ಹೇಳಿದರು: "ತುಂಬ ಕೆಲಸ ಹಿಡಿಸುತ್ತೆ. ತುಂಬ ಕೇಸುಗಳಿವೆ. ಪೆನ್ಶನ್ ಕೂಡ ತಡೆಹಿಡಿದಿದ್ದಾರೆ. ಹಾಗಿರುವ ಕೇಸುಗಳನ್ನು ಸಂಗ್ರಹಿಸುವುದೂ ಕಷ್ಟ. ಅದೆಲ್ಲ ಗೊತ್ತು. ಆದರೆ ಅದನ್ನು ಮಾಡಿದ್ದರೆ ಒಳ್ಳೆಯದಿತ್ತು. ಅಷ್ಟು ಮಾತ್ರವಲ್ಲ ಅವನ್ನು ಮಾಡಬೇಕು ಅಂತ ನಮ್ಮ ಆಗ್ರಹ."

ಕೇಶವ ಪಿಳ್ಳೆ ಆ ವಿಷಯದಲ್ಲಿ ಎಲ್ಲವೂ ಗೊತ್ತಿದ್ದಂತೆ ಕೇಳಿದರು:

"ಅಫಿಸಿಯೇಟಿಂಗ್ ದಿವಾನರ ಹತ್ತಿರ ಕೇಳಿದಿರಾ?"

"ಇಲ್ಲ, ಅದನ್ನು ತಾವೂ ಅವರೂ ಒಟ್ಟಿಗೆ ಆಲೋಚಿಸುವುದೊಳ್ಳೆಯದಲ್ಲವೇ? ಈ ಸರ್ಕಾರವೇ ಅದನ್ನು ಮಾಡಿತು ಅಂತಾಗುತ್ತಲ್ಲವೇ? ಆದರ ಗೌರವವೂ ತಮಗೇ ಬರುತ್ತೆ."

ಚೀಫ್ ಸೆಕ್ರೆಟರಿ ಅದನ್ನು ವಿರೋಧಿಸಲಿಲ್ಲ.

"ವಿಷಯ ಒಳ್ಳೆಯದೇ, ಸಂಶಯವಿಲ್ಲ."

ನಗುತ್ತ ಅವರು ಹೇಳಿದರು: "ಹೆಚ್ಚಿನ ಮಟ್ಟಿಗೆ ಆ ಕೇಸುಗಳೆಲ್ಲ ನಾನು ಪಾಸು

ಮಾಡಿದ ಆರ್ಡರ್‌ನಿಂದ ಆಗಿರಬಹುದು. ಹಾಗಿರುವಾಗ ಆ ಕಟ್ಟನ್ನು ನಾನೇ ಬಿಚ್ಚುವುದರಿಂದ ನನಗೆ ಪ್ರತ್ಯೇಕ ಸಂತೋಷವಿದೆ. ಕೈ ತೊಳೆದುಕೊಳ್ಳುವ ಒಂದು ಸಮಾಧಾನ. ಪಾಪಕ್ಕೆ ಪರಿಹಾರ ದೊರೆಯಿತು ಎನ್ನುವ ನಂಬಿಕೆ—ಎಲ್ಲವೂ ನನಗಿದೆ. ನಾನು ಒಂದು ಸತ್ಯ ಹೇಳ್ತೀನಿ. ನನ್ನ ಮನಸ್ಸಿಗೆ ತೀರ ಬೇಸರವಾಗಿತ್ತು. ಯಾರೂ ನಂಬೋದಿಲ್ಲ. ನಾನೂ ಈ ರಾಜ್ಯದಲ್ಲಿ ಹುಟ್ಟಿಬೆಳೆದೋನು. ಇಲ್ಲಿ ಆರಡಿ ಮಣ್ಣಿನಲ್ಲಿ ವಿಶ್ರಮಿಸಬೇಕು ಅಂತ ಆಶಿಸುವವನು. ಆದರೆ ಸರ್ಕಾರಿ ಉದ್ಯೋಗಸ್ಥ. ಅವನ ಕರ್ತವ್ಯ ಮಾಡಬೇಕು. ಇನ್ನು ಮೇಲೆ ಕಾಂಗ್ರೆಸ್ ಆಳುವುದಕ್ಕೆ ತೊಡಗುತ್ತದೆ. ಆ ಸರ್ಕಾರದ ಆಜ್ಞೆಗಳನ್ನು ಪಾಲಿಸಬೇಕಾದದ್ದು ಉದ್ಯೋಗಸ್ಥರ ಕರ್ತವ್ಯ. ಅವರು ಯಾವಾಗಲೂ ಚಂಚಲಚಿತ್ತರಾಗಿರಬಾರದು. ಅದು ನನ್ನ ತತ್ವಶಾಸ್ತ್ರ. ಅದು ತಪ್ಪೇ ಇರಲಿ, ಸರಿಯೇ ಇರಲಿ, ಉದ್ಯೋಗಸ್ಥರು ಚಂಚಲಚಿತ್ತರಾದರೆ ಎಲ್ಲ ಹೋಯಿತು. ಆಡಳಿತ ಕೂಡ ಭದ್ರವಾಗಿರಬೇಕು. ಆದರೆ ಈ ತತ್ವವನ್ನು ಯಾರು ಅರ್ಥಮಾಡಿಕೊಳ್ಳುತ್ತಾರೆ? ನನ್ನ ಸತ್ಯಸಂಗತಿಯೂ ಅರ್ಥವಾಗೋದಿಲ್ಲ."

ಕೇಶವ ಪಿಳ್ಳೆ ವಾಗ್ಮಿಯಾಗಿ ನಡೆಸಿದ ಈ ಭಾಷಣವನ್ನು ಕಾಂಗ್ರೆಸ್ ಮುಂದಾಳು ಅಂಗೀಕರಿಸಿದರು. ಅದು ಸರಿಯೆಂದು ಆತ ಒಪ್ಪಿದರು. ಕೇಶವ ಪಿಳ್ಳೆ ಹೇಳಿದರು:

"ನೋಡಿ, ಈ ಮಧ್ಯೆ ಪತ್ರಿಕೆಗಳಲ್ಲಿ ಏನೆಲ್ಲ ಬರೀತಿದ್ದಾರೆ ನೋಡಿ. ಎಲ್ಲೆಲ್ಲ ಮಾತನಾಡ್ತಾರೆ—ಇವತ್ತಿನ ಪತ್ರಿಕೆಯಲ್ಲೂ ಇದೆ." ಮುಂದಾಳು ಅದನ್ನು ಓದುವುದುಂಟು. ಅವರು ಹೇಳಿದರು: "ಅವರು ಕಮ್ಯುನಿಸ್ಟರಲ್ಲವೆ?"

"ಅಲ್ಲ, ಕಮ್ಯುನಿಸ್ಟರು ಮಾತ್ರವಲ್ಲ. ಕಾಂಗ್ರೆಸ್ಸಿನವರೂ ಧಾರಾಳವಾಗಿದ್ದಾರೆ. ಮುಂದಾಳುಗಳೂ ಮಾತನಾಡುತ್ತಾರೆ."

ಆ ಮುಖಂಡನ ಉತ್ತರ ತಟ್ಟನೆ ನಿಂತಿತು. ಹಾಗೆ ಮಾತನಾಡಿದ ಮೂರುನಾಲ್ಕು ಜನರ ಹೆಸರನ್ನು ಕೇಶವ ಪಿಳ್ಳೆ ಹೇಳಿದರು:

"ನಾನು ಅದನ್ನು ಗಮನಿಸೋದಿಲ್ಲ. ನಾನು ನನ್ನ ಕೆಲಸ ಮಾಡಿಕೊಂಡು ಹೋಗ್ತೀನಿ. ಆದರೆ ನನಗೆ ನೀವು ಹೇಳಿದ ಕೆಲಸ ಇದೆಯಲ್ಲ. ಅದು ನನಗೆ ಸಮಾಧಾನ ಉಂಟು ಮಾಡುವ ವಿಷಯ. ನಾನು ಆದಷ್ಟು ಬೇಗ ಕೈಯಲ್ಲಾದ್ದನ್ನು ಮಾಡುತ್ತೇನೆ. ಅದಕ್ಕ ಮೊದಲು ಒಂದು ಕೆಲಸ ಮಾಡಬೇಕು. ಆಫಿಸಿಯೇಟಿಂಗ್ ದಿವಾನರ ಹತ್ತಿರ ನೀವು ಈ ವಿಷಯ ಹೇಳಬೇಕು. ನಾನು ಔದ್ಯೋಗಿಕ ನೆಲೆಯಲ್ಲಿ ಇದನ್ನು ಹೇಳ್ತೀನಿ."

ಕೇಶವ ಪಿಳ್ಳೆಗೆ ತುಂಬ ಸಮಾಧಾನವುಂಟಾಯಿತು. ಒಮ್ಮೆಯೂ ಇಂತಹ ಒಂದು ಮನಸ್ಸಮಾಧಾನ ಅವರಿಗುಂಟಾಗಿರಲಿಲ್ಲ.

ಮುಂದಾಳು ಆ ವಿಷಯವನ್ನು ದಿವಾನರ ಹತ್ತಿರ ಮಾತನಾಡುವುದಾಗಿ ತಿಳಿಸಿದರು. ಕೇಶವ ಪಿಳ್ಳೆ ಹಗುರವಾದ ಮನಸ್ಸಿನಿಂದ ಕೇಳಿದರು:

"ಸ್ವಂತ ವಿಷಯ ಯಾವುದು?"

"ಅದೂ ಇದಕ್ಕೆ ಸಂಬಂಧಪಟ್ಟಿದ್ದು. ನನ್ನ ಹೆಂಡತಿಯ ಸಹೋದರನಿಗೆ ಒಂದು ಕೂಪಿನ ಕಂಟ್ರಾಕ್ಟ್ ಇತ್ತು. ಅಳೆದು ಕೊಟ್ಟಿದ್ದಕ್ಕಿಂತ ಹೆಚ್ಚಿನ ಸ್ಥಳದಿಂದ ಮರ ಕಡಿದರು ಅಂತ ಕನ್ಸರ್‌ವೇಟರ್ ತೊಂದರೆ ಮಾಡಿದರು. ತುಂಬ ನಷ್ಟದಲ್ಲಿದ್ದಾನೆ. ಆ ಮರ ಸಾಗಿಸೋದಕ್ಕೆ ಆಗಿಲ್ಲ. ಅರ್ಜಿ ಹಾಕಿದ್ದಾಗಿದೆ. ಇದನ್ನ ಆದಷ್ಟು ಬೇಗ ಸರಿಮಾಡಿಕೊಡ ಬೇಕು. ರಾಜಕೀಯದಲ್ಲಿ ಸೇರಿದ ನನ್ನ ಹೆಂಡತಿ ಕೂಡ ಅವನನ್ನೇ ಆಶ್ರಯಿಸಿದ್ದಾಳೆ. ನಿಜವಾಗಿಯೂ ಇದು ನನ್ನ ಅನ್ನದ ಪ್ರಶ್ನೆಯಾಗಿದೆ."

ಕೇಶವ ಪಿಳ್ಳೆ ಅರ್ಜಿ ತೆಗೆದುಕೊಂಡರು. ಕೂಡಲೇ ಫೈಲ್ ಕಳಿಸಿಕೊಡುವಂತೆ ಆರ್ಡರ್ ಬರೆದು "ಇದು ನಾನು ಮಾಡಿಕೊಡಬಹುದಾದ ಕೆಲಸ. ಬೇಸರ ಮಾಡಿಕೊಳ್ಳ ಬೇಡಿ. ಒಂದು ವಾರದೊಳಗೆ ಮಾಡಿಕೊಡ್ತೇನೆ."

ಅನಂತರ ಅವರು ಡಿಪಾರ್ಟ್‌ಮೆಂಟಿನ ಮೇಲಿನ ಅಧಿಕಾರಿಗಳನ್ನೂ ಹೆಚ್ಚಾಗಿ ಫಾರೆಸ್ಟ್ ಕನ್ಸರ್‌ವೇಟರನ್ನೂ ದೂರಿದರು.

"ನಿಮ್ಮನ್ನೆಲ್ಲ ಈ ರೀತಿ ತೊಂದರೆಪಡಿಸುವುದರಲ್ಲಿ ಅರ್ಥವಿಲ್ಲ. ಅಲ್ಪ ಸ್ವಲ್ಪ ತೊಂದರೆಗಳಿದ್ದರೂ."

ನಮಸ್ಕರಿಸುತ್ತ ಮುಂದಾಳು ಹೊರಡಲು ಸಿದ್ಧರಾದರು. ಥಟ್ಟನೆ ಪ್ರಯೋಜನ ಕಾರಿಯಾದ ಒಂದು ವಿಷಯ ಕೇಶವ ಪಿಳ್ಳೆಯ ಬುದ್ಧಿಗೆ ಹೊಳೆಯಿತು. ಅವರು ಸ್ವಯಂ ಅಭಿನಂದಿಸಿಕೊಂಡರು.

ಕೇಶವ ಪಿಳ್ಳೆ ಹೇಳಿದರು: "ಮೊದಲು ಹೇಳಿದ ಆ ವಿಷಯ ಇದೆಯಲ್ಲ. ವಶ ಪಡಿಸಿಕೊಂಡ ಆಸ್ತಿಪಾಸ್ತಿಗಳ ವಿಷಯ. ಅದರ ವಿಚಾರವಾಗಿ ಒಂದು ಕೆಲಸ ಮಾಡಿದರೆ ತುಂಬ ಉಪಕಾರ ಆಗುತ್ತಿತ್ತು. ಕಾಂಗ್ರೆಸ್ ಆಫೀಸಿನಿಂದ ಕೆಳಗಿನ ಕಾಂಗ್ರೆಸ್ ಆಫೀಸುಗಳಿಗೆ ಒಂದು ನಿರ್ದೇಶನ ಹೋಗಬೇಕು. ಚಳುವಳಿಯ ಕಾಲದಲ್ಲಿ ಸರ್ಕಾರದಿಂದ ಹೀಗೆಲ್ಲ ನಷ್ಟಹೊಂದಿದವರು ನೇರವಾಗಿ ಚೀಫ್ ಸೆಕ್ರೆಟರಿಗೆ ಅರ್ಜಿ ಬರೆದುಕೊಳ್ಳುವಂತೆ ತಿಳಿಸ ಬೇಕು. ಆ ಅರ್ಜಿಯಲ್ಲಿ ಎಲ್ಲ ವಿವರಗಳೂ ಇರಬೇಕು. ಭೂಮಿ. ಹಣ ಕಳೆದು ಕೊಂಡವರೆಲ್ಲ ನೇರವಾಗಿ ಚೀಫ್ ಸೆಕ್ರೆಟರಿಯನ್ನು ಕಂಡು ಅರ್ಜಿ ಕೊಡುವುದು ಒಳ್ಳೆಯದು. ಅರ್ಜಿ ಸ್ವೀಕರಿಸಿ. ನೇರವಾಗಿ ಪ್ರಶ್ನೆ ಕೇಳಿ, ವಿಷಯ ತಿಳಿದು ಅಗತ್ಯವಿರುವು ದನ್ನು ಮಾಡಿಕೊಡಬಹುದಲ್ಲ. ಹೀಗಾದರೆ ಬೇಗ ಕೆಲಸ ನಡೆಯುತ್ತೆ. ಎಷ್ಟೋ ದಿನ ಗಳನ್ನು ಈ ಕೆಲಸಕ್ಕಾಗಿ ಕಳೆಯಬೇಕೂಂತ ಇದ್ದರೆ ನನಗೇನೂ ಬೇಸರವಿಲ್ಲ. ಅದನ್ನು ನಾನು ಮತ್ತೊಮ್ಮೆ ಹೇಳ್ತೀನಿ. ಪಾಪಪರಿಹಾರಕ್ಕಾಗಿ ವಿನಿಯೋಗಿಸುವ ಸಮಯ. ಅಷ್ಟು ಮಾತ್ರವಲ್ಲ ತುಂಬ ಅರ್ಜಿಗಳು ಬಂದಾಗ ನಾನು ಇದನ್ನು ಗಹನವಾದ ಪ್ರಶ್ನೆ ಯೆಂದು ದಿವಾನರ ಹತ್ತಿರವೂ ಅರಮನೆಯಲ್ಲೂ ಹೋಗಿ ಹೇಳೋದಕ್ಕಾಗುತ್ತೆ."

ಅದು ಒಂದು ಬುದ್ಧಿಪೂರ್ವಕವಾದ ಮಾರ್ಗವಾಗಿ ಮುಂದಾಳು ಒಪ್ಪಿದರು. ಅದೇ ದಿನ ಆ ಸರ್ಕ್ಯುಲರ್ ಕಳಿಸುವುದಾಗಿ ತಿಳಿಸಿದರು.

ದೇಶವಿಡೀ ಇರುವ ಎಲ್ಲ ಕಾಂಗ್ರೆಸ್ ಮುಖಂಡರಿಗೂ ಒಂದು ರೀತಿಯಲ್ಲಲ್ಲ ದಿದ್ದರೆ ಮತ್ತೊಂದು ರೀತಿಯಲ್ಲಿ ನಷ್ಟವಾಗಿದೆ. ಬೇರೆಯವರಿಗಿಂತ ಹೆಚ್ಚಾಗಿ ಅದು ಕೇಶವ ಪಿಳ್ಳೆಗೆ ಗೊತ್ತಿದೆ. ಸ್ಥಿರ ಆಸ್ತಿ ನಷ್ಟ ಹೊಂದಿದವರು, ಚರ ಆಸ್ತಿ ಕಳೆದುಕೊಂಡ ವರು, ಕೆಲಸ ಕಳೆದುಕೊಂಡವರು ಹೀಗೆ ಎಷ್ಟೋ ಜನರಿದ್ದಾರೆ. ಅವರೆಲ್ಲ ಅರ್ಜಿ ಬರೆದುಕೊಂಡು ಚೀಫ್ ಸೆಕ್ರೆಟರಿಯ ಮುಂದೆ ಬರಬೇಕು. ಬರುತ್ತಾರೆ ಎನ್ನುವುದರಲ್ಲಿ ಕೇಶವ ಪಿಳ್ಳೆಗೆ ಯಾವ ಸಂಶಯವೂ ಇಲ್ಲ. ಹಾಗೆ ಎದುರಿಗೆ ಬಂದಾಗ—ಇಂದು ದೇಶ ವಿಡೀ ತನ್ನ ಬಗ್ಗೆ ಹಬ್ಬಿ ಹರಡುವ ನಿಂದೆಗಳು ಮಾಯವಾಗುವುದಿಲ್ಲವೆ?

ಕೇಶವ ಪಿಳ್ಳೆಯ ಪೆನ್ನಿನ ತುದಿಯಲ್ಲಿ ಹಣ, ಭೂಮಿ, ಕೆಲಸ, ಕುರ್ಚಿ—ಎಲ್ಲವೂ ಪುನಃ ದೊರೆಯುವ ಸಾಧ್ಯತೆಯಿರುವುದು! ಆ ಮೇಲೆ ಯಾರು ಹಾಗೆ ಭಾಷಣ ಮಾಡಿ ಯಾರು? ಯಾರು ಬರೆಯುತ್ತಾರೆ? ಒಬ್ಬನಿಗಾದರೂ ಧೈರ್ಯವುಂಟಾಗುತ್ತದೆಯೆ? ಈ ಬಲೆಯಲ್ಲಿ ಬೀಳದಿರುವವರು ಯಾರು?

ಕಾಂಗ್ರೆಸ್ ಮುಂದಾಳು ಹೋದ ಮೇಲೆ ಸಣ್ಣ ಹುಡುಗನಂತೆ ಕುಣದಾಡುತ್ತ ಕೇಶವ ಪಿಳ್ಳೆ ಹೆಂಡತಿಯ ಹತ್ತಿರಕ್ಕೆ ಓಡಿದರು—

"ಕಾತ್ಯಾಯಿನೀ—ನೀನು, ನಿನ್ನ ಒಳ್ಳೆಯ ನಾಲಿಗೆಯಿಂದ ಹೇಳಿದ್ದು ಸರಿಯಾಯ್ತು. ನಮಗೆ ಕೇಡುಂಟಾಗೋದಿಲ್ಲ."

* * * *

1947 ಆಗಸ್ಟ್ 15. ಆ ಪುಣ್ಯ ದಿನವನ್ನು ದೇಶದ ಮನೆಮನೆಗಳೆಲ್ಲವೂ ಆಚರಿಸಿದುವು. ಕೇಶವ ಪಿಳ್ಳೆ ಮಾಡಿದ ಏರ್ಪಾಟುಗಳೆಲ್ಲ ನೂರಕ್ಕೆ ನೂರರಷ್ಟು ಜಯ ಹೊಂದಿದುವು. ನಿಜವಾಗಿಯೂ ಚೀಫ್ ಸೆಕ್ರೆಟರಿಗೆ ತುಂಬ ದೊಡ್ಡ ಜಯವಾಗಿತ್ತು ಅದು.

ತಿರುವನಂತಪುರದಲ್ಲಿ ಅಂದು ಅಫಿಷಿಯೇಟಿಂಗ್ ದಿವಾನರ ಅಧ್ಯಕ್ಷತೆಯಲ್ಲಿ ಸೇರಿದ ಗಂಭೀರವಾದ ಸಭೆಯಲ್ಲಿ ಕಾಂಗ್ರೆಸ್ಸಿನ ಮುಖಂಡ ಅತ್ಯುಜ್ವಲವಾದ ಒಂದು ಭಾಷಣ ಮಾಡಿದರು. ಸ್ವಾತಂತ್ರ್ಯದ ಹೋರಾಟವನ್ನು ವಿಜಯದ ಕಡೆಗೆ ಸಾಗಿಸಿದ ಆ ಸೇನಾನಿಯ ಭಾಷಣ ಆವೇಶದಿಂದ ಕೂಡಿದ್ದುದು ಆಶ್ಚರ್ಯಕ್ಕೆ ಅವಕಾಶವಿರಲಿಲ್ಲ. ಅದು ಹಾಗೆಯೇ ಆಗಬೇಕಾದದ್ದು. ಆ ಭಾಷಣಕ್ಕೆ ಅದಕ್ಕಿಂತಲೂ ಒಂದು ಅರ್ಥವೂ ಪ್ರಾಧಾನ್ಯವೂ ಇತ್ತು. ಇನ್ನು ಮೇಲೆ ರಾಜ್ಯ ಆಳುವುದಕ್ಕೆ ಹೋಗುವುದು ಕಾಂಗ್ರೆಸ್ ಎನ್ನುವುದರಲ್ಲಿ ಸಂಶಯವಿಲ್ಲ. ಸಂಘಟನೆಯ ಅಗ್ರಸ್ಥಾನದಲ್ಲಿರುವ ಆತ ಹಾಗೆ ಪ್ರಧಾನವಾದ ದಿನದ ಭಾಷಣದಲ್ಲಿ ಒಂದು ವಿನೀತ ಸ್ವಭಾವದಿಂದ ಕೂಡಿ ಇರುವುದು ಸಹಜ. ಹಾಗೆ ಅದೊಂದು ಕೃತಜ್ಞತೆಯನ್ನು ವ್ಯಕ್ತಪಡಿಸುವುದಾಗಿತ್ತು. ಕಳೆದ ಕಾಲದ ಹೋರಾಟದ ಚರಿತ್ರೆಯನ್ನು ನೆನಸಿಕೊಳ್ಳುತ್ತ ಈ ದಿವಸದ ಪ್ರಾಧಾನ್ಯವನ್ನು ವಿವರಿಸಿ ಅವರು ಭವಿಷ್ಯದ ಕಡೆಗೆ ಬೆರಳು

ತೋರಿಸಿದರು. ಓಟು ಕೊಡುವ ವಯಸ್ಸಾದವರು ಕೊಡುವ ಓಟಿನ ಹಕ್ಕಿನ ಮೇಲೆ ಒಂದು ಆಡಳಿತ ಸಮಿತಿಯನ್ನು ತಿರುವಾಂಕೂರಿನಲ್ಲಿ ಆರಿಸಲಾಗುವುದೆಂದು ಅವರು ಭಾಷಣದಲ್ಲಿ ತಿಳಿಸಿದರು. ತಿರುವಾಂಕೂರಿನಲ್ಲಿ ಎಂತಹ ಸರ್ಕಾರ ಇರಬೇಕು ಎಂಬು ದನ್ನು ಆ ಆಡಳಿತ ಸಮಿತಿ ತೀರ್ಮಾನಿಸುತ್ತದೆ. ಹಾಗೆ ಹೇಳುತ್ತಿದ್ದಾಗ ಈ ರೀತಿಯಲ್ಲೂ ಆತ ಹೇಳುತ್ತಿದ್ದರು:

"ನಮಗೆ ಮೊದಲಿನಿಂದ ಸಶಕ್ತವಾದ ಆಡಳಿತ ಗುಂಪಿದೆ. ಇಂದೂ ನಮ್ಮ ಆಡಳಿತ ಮಂಡಳಿ ಸಶಕ್ತವಾಗಿದೆ. ಅದೂ ಒಂದು ಅನುಗ್ರಹವೇ. ಹಿಂದಿನ ದಿವಾನರ ಕಿರಾತ ಆಡಳಿತ ಕಾಲದಲ್ಲಿ ಆ ಸರ್ಕಾರದ ರೀತಿನೀತಿಗಳನ್ನು ಆಚರಣೆಗೆ ತಂದ ಉದ್ಯೋ ಗಸ್ಥರನ್ನು ಸ್ವಾತಂತ್ರ್ಯ ಚಳವಳಿಯಲ್ಲಿ ನಾವು ಶತ್ರುಗಳಂತೆ ಕಾಣಬೇಕಾಗಿ ಬಂತು. ನಮ್ಮ ಜೊತೆಯಲ್ಲಿ ಹೆಗಲಿಗೆ ಹೆಗಲು ಕೊಟ್ಟು ಹೋರಾಡಿದವರನ್ನು ಪೋಲೀಸಿನವರು ಗುಂಡಿಕ್ಕಿ ಕೊಂದಿರುವುದುಂಟು. ನಮ್ಮ ತಲೆಗೆ ಲಾಠಿಯ ಏಟು ಬಿದ್ದಿದೆ. ನಮ್ಮ ಕೈಕಾಲಿಗೆ ಹೊಡೆತ ಬಿದ್ದಿದೆ. ನಮ್ಮ ಕೈಕಾಲು ಮುರಿದಿವೆ. ಈ ರಾಜ್ಯದ ಉದ್ಯೋ ಗಸ್ಥರು ಶತ್ರುಗಳಾಗಿ ನಮ್ಮ ಮುಂದೆ ನಿಂತದ್ದನ್ನು ನಾವು ಕಂಡದ್ದು. ಅವರು ಹೀಗೆ ಸಿದ್ಧರಾಗದಿದ್ದಲ್ಲಿ......... ಅಂದುಕೊಂಡೆವು. ನಾವು ಅವರ ಮೇಲೆ ಆಕ್ರೋಶ ಗೊಂಡೆವು. ಅಂದಿನ ಆಕ್ರೋಶದಲ್ಲಿ ನಾವು ಅವರಿಗೆದುರಾಗಿ ಘೋಷಣೆಗಳನ್ನು ಕೂಗಿದೆವು. ಆದರೆ ನಾವು ಇಂದು ಕುಳಿತು ಆಲೋಚಿಸಬೇಕಾದ ಒಂದು ವಿಷಯವಿದೆ. ನಮ್ಮ ಅಂದಿನ ಆಕ್ರೋಶ. ಕೆಲವು ಸಲ ಉಂಟಾದ ಪ್ರತೀಕಾರ ಬುದ್ಧಿ. ಅವುಗಳನ್ನೇ ಮುಂದುವರಿಸಿಕೊಂಡು ಹೋಗಬೇಕೇ ಅಥವಾ ಆ ಉದ್ಯೋಗಸ್ಥರನ್ನೂ ಆ ಪೋಲೀಸಿ ನವರನ್ನೂ ಹಿಂದಕ್ಕೆ ಕಳಿಸಬೇಕೇ. ನಿಜವಾಗಿಯೂ ಅವರು ಮಾಡಿದುದು ಕರಾಳ ಹಸ್ತದ ಕೆಲಸ ಎಂದು ಭಾವಿಸಿಕೊಂಡು ಹೋಗಬೇಕೆ? ನಿಜವಾಗಿಯೂ ಅವರು ಮಾಡಿ ದುದು ಕ್ರೂರ ಕೆಲಸ ಎಂದು ತೋರದೆ ಇಲ್ಲ. ಅದು ಮನುಷ್ಯ ಸ್ವಭಾವ ನಿಜ. ಆದರೆ ಆ ದ್ವೇಷವನ್ನು ಈಗ ಸಾಧಿಸಬೇಕೆ? ಅದು ಇಂದಿನ ಪ್ರಶ್ನೆ. ನಾವೀಗ ಮನೋವಿಕಾರ ಗಳನ್ನು ನಿಯಂತ್ರಿಸಿಕೊಳ್ಳಬೇಕಾಗಿದೆ. ನಮ್ಮ 'ಆಲೋಚನೆ. ಪ್ರಜ್ಞೆ—ಪ್ರಾಯೋಗಿಕ ಬುದ್ಧಿ—ಈಗ ನಮ್ಮ ಸಹಾಯಕ್ಕೆ ಬರಬೇಕಾಗಿದೆ. ವಿಕಾರವಶರಾಗಿ ನಾವು ಮುಂದೆ ಸಾಗುವುದೆ? ಅದು ಸರಿಯಲ್ಲವೆಂದು ನನ್ನ ಅಭಿಪ್ರಾಯ. ನಾಳೆ ಕಾಂಗ್ರೆಸ್ ಅಧಿಕಾರ ದಲ್ಲಿ ಬರುತ್ತದೆ. ತಿರುವಾಂಕೂರಿನ ಉದ್ಯೋಗಸ್ಥರಿಗೆ ಶತಮಾನಗಳಿಂದ ಒಂದು ಪರಂಪರೆಯಿದೆ. ಅವರು ಸಮರ್ಥರು. ಅರ್ಹತೆಯುಳ್ಳವರು. ಬುದ್ಧಿವಂತರು. ರಾಮಯ್ಯನ್ ದಳವಾಯಿಯಿಂದ ಹಿಡಿದು. ರಾಜಾ ಕೇಶವದಾಸನ್. ವೇಲುತಂಬಿ ಮುಂತಾದವರ ಪರಂಪರೆಯನ್ನು ನೋಡಿ. ಕಾಂಗ್ರೆಸ್ಸಿನ. ಇಂದಿನ ಕಾರ್ಯಪ್ರಾಪ್ತಿಯೂ ಪರಿಚಯ ಸಂಪತ್ತುಳ್ಳ ಉದ್ಯೋಗಸ್ಥರ ಸೇವೆಯೂ ಅವರ ದಿವಾನರ ಕಿರಾತ ರೀತಿನೀತಿ ಗಳನ್ನು ಪಾಲಿಸಿದರು ಎಂದು ಹೇಳಿ ಅವರು ಬೇಡ ಎಂದು ಹೇಳಲು ಸಾಧ್ಯವೆ? ಅದು

ಸರಿಯೆ? ಕಾಂಗ್ರೆಸ್ ಆಳುವಾಗ ಅದರ ಜನಾಧಿಪತ್ಯಕ್ಕೆ ಪರವಾದ ಕಾರ್ಯಕ್ರಮಗಳನ್ನು ನಶಿಸುವ ಏಕಾಧಿಪತ್ಯದಲ್ಲಿ ನಂಬಿಕೆಯಿಟ್ಟಿರುವ ಒಂದು ಗುಂಪು ಜನ ಸನ್ನದ್ಧರಾದರು ಎಂದಿಟ್ಟುಕೊಳ್ಳಿ. ಈ ಉದ್ಯೋಗಸ್ಥರೇ ಅಲ್ಲವೆ ಅವರನ್ನೂ ಎದುರಿಸಬೇಕಾದವದ್ದು? ಅವರು ಅದನ್ನೂ ಮಾಡಬೇಕಾಗಿ ಬರುತ್ತದೆ. ಸ್ಥಿರವಾದ ಆಡಳಿತ ಮಂಡಳಿಯನ್ನು ದುರ್ಬಲಗೊಳಿಸಬಾರದು. ಅದರ ಯೋಗ್ಯತೆಯನ್ನು ಹಾಳುಮಾಡಬಾರದು. ಯಾವ ರಾಜ್ಯದಲ್ಲೂ ಸ್ಥಿರವಾಗಿರುವುದು ಉದ್ಯೋಗಮಂಡಲ. ಜನಾಧಿಪತ್ಯದಲ್ಲಿ ಸರ್ಕಾರ ಬದಲಾಗುತ್ತವೆ. ಉದ್ಯೋಗಮಂಡಲ ಶಾಶ್ವತವಾಗಿರಬೇಕು. ನಾನು ಇಷ್ಟನ್ನೂ ಹೇಳುವುದಕ್ಕೆ ಕಾರಣವಿದೆ. ನಮ್ಮ ರಾಜ್ಯದ ಉದ್ಯೋಗಸ್ಥರ ಜೊತೆಯಲ್ಲಿ ನಮಗೆ ಹಗೆತನ ಕೂಡದು. ನೇಣುಹಾಕಬೇಕು–ಜೈಲಿಗೆ ಹಾಕಬೇಕು—ಎಂದೆಲ್ಲ ನಾವು ಘೋಷಣೆ ಮಾಡಿದೆವು. ಮಾಡಿಸಿದೆವು. ಆದರೆ ಅದು ಏಕಾದಾಧಿಕ್ಯದಿಂದ. ಅಲ್ಲಲ್ಲಿ ಈಗಲೂ ಆ ಘೋಷಣೆ ಕೇಳಿಬರುತ್ತಿದೆ. ಅದಕ್ಕಾಗಿ ನನಗೆ ವಿಷಾದವಿದೆ. ನಾವು ಯಾವ ಉದ್ಯೋಗಸ್ಥನನ್ನೂ ನೇಣುಹಾಕಬಾರದು. ಯಾರನ್ನೂ ಜೈಲಿಗೆ ಹಾಕಬಾರದು. ಪ್ರಾಯೋಗಿಕ ಬುದ್ಧಿಯಿಂದ ನಾವು ಮುಂದೆ ಹೋಗೋಣ."

ಸುದೀರ್ಘವಾದ ಚಪ್ಪಾಳೆ ಮತ್ತು ಹರ್ಷಧ್ವನಿಯಿಂದ ಅಂತರಿಕ್ಷ ಮೊಳಗಿತು.

ಕೇಶವ ಪಿಳ್ಳೆ ಪ್ರಸನ್ನವದನರಾಗಿ ಪ್ಲಾಟ್‌ಫಾರಂನಲ್ಲಿದ್ದರು. ಫಿಲಿಪ್ಸ್ ಮುಂತಾದ ಕೆಲವು ಸೆಕ್ರೆಟರಿಗಳ ತಲೆ ಬಾಗಿದ್ದಂತೆ ತೋರಿತು.

## ಸನ್ಯಾಸಿನಿ

ದಫೇದಾರ್, ಅಚ್ಚು ಮಾಡಿದ ಒಂದು ಸಣ್ಣ ಕಾಗದವನ್ನು ಚೀಫ್ ಸೆಕ್ರೆಟರಿಯ ಮೇಜಿನ ಮೇಲೆ ತಂದಿಟ್ಟ. ಅದೊಂದು ವಿಸಿಟಿಂಗ್ ಕಾರ್ಡ್. ಕೇಶವ ಪಿಳ್ಳೆಯ ದೃಷ್ಟಿ ಅದರ ಕಡೆಗೆ ಬಿದ್ದಿತು. "ದೇವಿ ಜ್ಯೋತಿರ್ಮಯಿ ಮಾತಾ" ಕೇಶವ ಪಿಳ್ಳೆಯ ಅಂತರಂಗ ದಲ್ಲಿ ಒಂದು ಮಿಂಚು ಪ್ರಕಾಶಿಸಿದಂತಾಯಿತು. ದೇವಿ ಜ್ಯೋತಿರ್ಮಯಿ ಮಾತಾ ಕಾಣಲು ಬಂದಿದ್ದಾರೆ! ಒಂದು ನಿಮಿಷ ಚೀಫ್ ಸೆಕ್ರೆಟರಿಗೆ ಏನು ಮಾಡಬೇಕೆಂದು ತಿಳಿಯದಾಗಿತ್ತು. ಈಗ ಕಾಣಲು ಸಮಯವಿಲ್ಲವೆಂದು ಹೇಳಿ ಕಳುಹಿಸುವುದೇ? ಅಥವಾ ಒಳಗೆ ಬರಹೇಳುವುದೇ? ಅದೊಂದು ದುರ್ಬಲ ಸನ್ನಿವೇಶವಾಗಿತ್ತು. ತೀರ್ಮಾನ ಮಾಡಲು ಶಕ್ತಿಯಿಲ್ಲದಂತಾದ ಸ್ಥಿತಿ!

"ದೇವಿ ಜ್ಯೋತಿರ್ಮಯಿ ಮಾತಾ."

ಅವಳು ಹೇಗಿದ್ದಾಳೆಂದು ಒಂದು ಕ್ಷಣ ಕೇಶವ ಪಿಳ್ಳೆ ಚಿಂತಿಸಿದರು. ಈಗ ಕಣ್ಣುಗಳ ಅಗಾಧತೆಯಲ್ಲಿ ಆ ಬೆಂಕಿಯ ಜ್ವಾಲೆ ಕಂಡೀತೇ? ಆ ಕೆನ್ನೆಗುಳಿಗಳು ಕಾಣಸಬಹುದೇ? ಮುಖದಲ್ಲಿ ಆ ಮಾದಕತ್ವ ಇರಬಹುದೇ? ಎಲ್ಲವೂ ಕಾವಿವಸ್ತ್ರದಲ್ಲಿ ಮುಚ್ಚಿ ಹೋಗಿರಬಹುದು.

ಮತ್ತೆಂದೂ ಅವಳನ್ನು ಕಾಣಬೇಕಾಗಿ ಬರಬಹುದೆಂದು ಕೇಶವ ಪಿಳ್ಳೆ ಆಲೋಚಿ ಸಿರಲಿಲ್ಲ. ಅವಳು ತನ್ನನ್ನು ಕಾಣಲು ಬರುತ್ತಾಳೆಂದೂ ಊಹಿಸಿರಲಿಲ್ಲ. ಆ ಅಧ್ಯಾಯ ಹಾಗೆ ಮುಗಿದುಹೋಯಿತೆಂದು ನಂಬಿದ್ದರು. ಅವಳೇಕೆ ಇಲ್ಲಿಗೆ ಬರುತ್ತಾಳೆ? ನಾನು ನೆಮ್ಮದಿಯಿಂದಿರುವುದಕ್ಕೆ ಬಿಡುವುದಿಲ್ಲವೇ? ಸನ್ಯಾಸಿನಿಯಾದ ಅವಳಿಗೆ ಸೆಕ್ರೆಟರಿ ಯೇಟ್‌ನಲ್ಲಿ ಏನು ಕೆಲಸ? ಬಂದರೂ ತನ್ನನ್ನು ಕಾಣಬೇಕಾದದ್ದೇಕೆ?

ಆತ್ಮಕ್ಕೆ ಬೆಳಕು ದೊರೆತ ಒಬ್ಬ ಸನ್ಯಾಸಿನಿಯಾಗಿ ಪರಿವರ್ತನೆ ಹೊಂದಿದ ಒಬ್ಬಳಾಗಿ ತಾನು ಹೇಗಿದ್ದೇನೆ ಎಂದು ತಿಳಿಸುವುದಕ್ಕಾಗಿ ಬಂದದ್ದಾಗಿರಬಹುದೆ? ಆದರೆ ಕೇಶವ ಪಿಳ್ಳೆ ಅವಳ ವಿಶ್ವರೂಪವನ್ನು ಕಂಡದ್ದುಂಟು. ಅಥವಾ ಗತಿಗೆಟ್ಟು ಪುನಃ ಬಂದಿರಬಹುದೇ? ಅವಳಿಗೆ ಸೆಕ್ರೆಟರಿಯೇಟ್‌ನಲ್ಲಿ ಹಾಗೆ ಬರಲು ನಾಚಿಕೆಯಾಗುವು ದಿಲ್ಲವೇ? ಹಳೆಯ ವಿಷಯಗಳೆಲ್ಲವನ್ನೂ ಜ್ಞಾಪಿಸಿಕೊಂಡು ಹಾಗೆಯೇ ತನ್ನನ್ನು ಅಪಮಾನ ಮಾಡಬೇಕೆಂದು ಸಲಹೆ ಕೊಟ್ಟವರ ಒಂದು ಯೋಜನೆಯೇ ಅದು ಎನ್ನುವ ವರೆಗೆ ಕೇಶವ ಪಿಳ್ಳೆ ಸಂಶಯಪಟ್ಟರು. "ತಂಗಮ್ಮ ಚೀಫ್ ಸೆಕ್ರೆಟರಿಯನ್ನು ಕಾಣಲು ಬಂದಿದ್ದಳು" ಎನ್ನುವುದೊಂದು ಸುದ್ದಿಯಾಗಿರುತ್ತದೆ. ಎಲ್ಲರಿಗೂ ಮಾತನಾಡುವುದಕ್ಕೆ

ವಿಷಯ ದೊರೆಯುತ್ತದೆ. ಹಳೆಯ ಕಥೆ ತಿಳಿದಿರುವವರು ಅದನ್ನು ಮಾತನಾಡುತ್ತಾರೆ. ತಿಳಿಯದಿರುವ ಹೊಸಬರು ಅದನ್ನು ಕುತೂಹಲದಿಂದ ಕೇಳುತ್ತಾರೆ. ಅನಂತರ ಶತ್ರುಗಳಿಗೆ ಇಷ್ಟ ಬಂದ ಹಾಗೆ ಮಾತನಾಡುವುದಕ್ಕೆ ವಿಷಯ ದೊರೆಯಿತು.

"ಯಾಕೆ ಬಂದಿರುವುದು?" ಎಂದು ಕೇಳಲು ದಫೇದಾರನಿಗೆ ಹೇಳಿಕಳುಹಿಸಲೇ ಎಂದು ಕೇಶವ ಪಿಳ್ಳೆ ಆಲೋಚಿಸಿದರು. ಔದ್ಯೋಗಿಕ ನೆಲೆಯಲ್ಲಿ ಹಾಗೆ ಸಂದರ್ಶನೋದ್ದೇಶವನ್ನು ತಿಳಿಯುವುದರಲ್ಲಿ ತಪ್ಪೇನು? ಆಗ ಯಾರೋ ತನ್ನೊಳಗಿದ್ದುಕೊಂಡು ಅದು ಬೇಡ ಎಂದು ಸಲಹೆ ಮಾಡುತ್ತಿದ್ದಂತೆ ಅವರಿಗೆ ತೋರಿತು. ಅವಳನ್ನು ಕುರಿತು ಜ್ಞಾಪಿಸಿಕೊಳ್ಳಬೇಕಾಗಿಯೇ ಇಲ್ಲವೇ? ಆ ಕುರ್ಚಿಯಲ್ಲಿ ಕುಳಿತು ಸಂದರ್ಶನದ ಉದ್ದೇಶವನ್ನು ತಿಳಿಸಿದ ನಂತರ ಕಾಣಬಹುದು ಎಂದು ಹೇಳುವುದು ಸರಿಯೆ? ಅವಳು ಕೇವಲ ಅನ್ಯಳೆ? ಅವಳನ್ನು ಇಡೀ ಜೀವನದಲ್ಲಿ ಮರೆಯಲು ಸಾಧ್ಯವೆ? ಅವಳ ವಿಚಾರದಲ್ಲಿ ಯಾವ ಆಸಕ್ತಿಯಿಲ್ಲವಾಗಿತ್ತು ಎಂದು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳುವುದು ಕಷ್ಟ. ಆ ಹಳೆಯ ದಿನಗಳೆಲ್ಲ ಕೇಶವ ಪಿಳ್ಳೆಯ ನೆನಪಿಗೆ ಬಂದುವು. ವೈವಿಧ್ಯತೆಗಳಿಂದ ಕೂಡಿದ್ದ ಅನುಭವಗಳು ! ಹೇಗೆ ಅವಳನ್ನು ಕಾಣುವುದು? ಏನೆಂದು ಅವಳನ್ನು ಸಂಭೋಧಿಸುವುದು? 'ಮಾತಾಜಿ' ಎಂತಲೇ? ಅದು ಸಾಧ್ಯವಿಲ್ಲ. 'ತಂಗಮ್ಮ' ಎಂದು ಕರೆಯುವುದೇ? ಇಂದು ಅವಳು ಹಳೆಯ ತಂಗಮ್ಮನೇ? ಹೇಗೆ ಅವಳ ಹತ್ತಿರ ವ್ಯವಹರಿಸಬೇಕು? ಇಂತಹ ಸ್ಥಿತಿ ಜೀವನದಲ್ಲಿ ಉಂಟಾಗುತ್ತದೆಂದು ಕೇಶವ ಪಿಳ್ಳೆ ಊಹಿಸಿರಲಿಲ್ಲ.

ಆರ್ಡರ್ ಕಾಯುತ್ತ ದಫೇದಾರ್ ನಿಂತಿದ್ದ. ದಫೇದಾರ್, ಧನ್ಯಾನಂದ ಸ್ವಾಮಿಯ ಭಕ್ತನೆಂದು ತೋರುತ್ತದೆ. ಕೇಶವ ಪಿಳ್ಳೆ ಆರ್ಡರ್ ಮಾಡಿದರು: "ಸ್ವಲ್ಪ ಸಮಯ ಕಳೆಯಲಿ."

"ಹುಜೂರ್."

ದಫೇದಾರ್ ವಿಷಯ ತಿಳಿಸುವುದಕ್ಕಾಗಿ ಹೊರಟ. ಅದೇಕೆ ಎಂದು ಕೇಶವ ಪಿಳ್ಳೆ ಆಲೋಚಿಸಿದರು. ಅವಳು ಏತಕ್ಕೆ ಕಾದಿರಬೇಕು. ಅದು ಸರಿಯೆ?

ಕೇಶವ ಪಿಳ್ಳೆ ದಫೇದಾರನನ್ನು ಕರೆದರು:

"ಇಲ್ಲದಿದ್ದರೆ ಬೇಡ."

ಆದರೆ ಬರಹೇಳುವಂತೆ ಆಜ್ಞಾಪಿಸಲಿಲ್ಲ. ದಫೇದಾರ್ ಮತ್ತೂ ಕಾಯುತ್ತ ನಿಂತಿದ್ದ. ಅವನು ಚೀಫ್ ಸೆಕ್ರೆಟರಿಯ ತಳಮಳವನ್ನು—ಹೌದು ಅದು ತಳಮಳವೇ ಆಗಿತ್ತು—ಅದನ್ನು ಕಂಡನೋ ಏನೋ !

ಯಾಕೆ ಈ ರೀತಿ ಪರಿಭ್ರಮಿಸಬೇಕು? ಬಂದು ಕಾಣಲು ಸಮಯವಿಲ್ಲವೆಂದು ಹೇಳಿಕಳಿಸಬೇಕು. ಇಲ್ಲದಿದ್ದರೆ ಬರಹೇಳಬೇಕು. ಕಾಣಲು ಅನುಕೂಲವಿಲ್ಲವೆಂದು ತೀರ್ಮಾನಿಸಲು ಶಕ್ತಿಯಿಲ್ಲ. ಈ ದೌರ್ಬಲ್ಯಕ್ಕೆ ಕಾರಣವೇನೆಂದೂ ತಿಳಿಯದು.

ಆಗ ಒಂದು ಪ್ರಶ್ನೆ ಹೊರಟಿತು. ಈ ಸ್ಥಾನಕ್ಕೇರಲು ಕಾರಣ ಯಾರು? ಅವಳಲ್ಲವೆ? ಹೌದೆಂದು ಸ್ಥಾಪಿಸಬೇಕೆನ್ನುವ ಒಂದು ಆಗ್ರಹ ಕೇಶವ ಪಿಳ್ಳೆಗಿತ್ತು. ತಾನು ವಿವಾಹ ಮಾಡಿಕೊಂಡಿಲ್ಲದಿದ್ದರೂ ಈ ರೀತಿಯಲ್ಲೋ ಅಥವಾ ಕಷ್ಟವಾಗಿಯೋ ಇದು ಸಂಭವಿಸುತ್ತಿತ್ತು ಎಂದು ಅವರು ಸ್ವತಃ ವಾದಿಸಿದರು. ಅವಳ ಚರಿತ್ರೆಯನ್ನೆಲ್ಲ ಒಟ್ಟಿಗೆ ನೋಡುವಾಗ ತಪ್ಪು ಮಾಡಿದವಳು ಅವಳಲ್ಲವೆ? ಆದರೆ ತಾನು ತಪ್ಪುಗಾರನಲ್ಲ ಎಂದು ವಾದಿಸಲು ಕೇಶವ ಪಿಳ್ಳೆಗೆ ಸಾಧ್ಯವಿಲ್ಲ.

ಓ ದಫೇದಾರ್ ಎಲ್ಲವನ್ನೂ ನೋಡಿಯಾನು ! ಚೀಫ್ ಸೆಕ್ರೆಟರಿ ಅಪ್ಪಣೆ ಮಾಡಿದರು:

"ಬರಹೇಳು."

ಕೇಶವ ಪಿಳ್ಳೆ ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೇಳಿದರು. ಗೋಡೆಯ ಮೇಲೆ ದೃಷ್ಟಿಯಿಟ್ಟು ಕುಳಿತಿದ್ದದ್ದು. ಅದು ವಿಚಾರಗಳ ಸಂಘಟನೆಯನ್ನು ಮುಖದಿಂದ ಮರೆಮಾಡುವ ಒಂದು ಮಾರ್ಗವಾಗಿತ್ತು. ಅದು ಫಲಿಸಿದಂತೆಯೂ ಇತ್ತು.

ಅವರಿಗೆ ಈಗಲೂ ಧಾರಾಳವಾಗಿ ತಲೆಗೂದಲಿದೆ. ಎಲ್ಲೋ ಒಂದೆರಡು ನರೆತಿವೆ ಅಷ್ಟೆ.. ಆ ಮುಖದಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲ—ಸೀರೆ ರವಕೆ ಮೇಲಿನ ವಸ್ತ್ರ ಕಾವಿಯದು. ಕೈಯಲ್ಲೂ ಕತ್ತಿನಲ್ಲೂ ಆಭರಣಗಳಿಲ್ಲ. ಕೇಶವ ಪಿಳ್ಳೆ ಒಂದು ಕುರ್ಚಿಯನ್ನು ತೋರಿಸಿದರು. ಕುಳಿತುಕೊಳ್ಳಲು ಹೇಳಿದರು. ದೇವಿ ಜ್ಯೋತಿರ್ಮಯಿ ಮಾತಾ ಕುಳಿತರು. ಕೇಶವ ಪಿಳ್ಳೆಯ ಮುಖ ನಿರ್ವಿಕಾರವಾಗಿತ್ತು. ಏನೂ ಮಾತನಾಡದೆ ಸ್ವಲ್ಪ ಹೊತ್ತು ಕಳೆಯಿತು.

ಜ್ಯೋತಿರ್ಮಯಿ ಮಾತಾಜಿಗೆ ಯಾವ ಗಾಬರಿಯೂ ಇಲ್ಲ. ಅಂದರೆ ಯಾವ ಪರಿಚಯವೂ ಇಲ್ಲದ ಒಬ್ಬ ಮನುಷ್ಯನ ಮುಂದೆ ಕುಳಿತಿರುವುದೆನ್ನುವ ಭಾವನೆಯಿಲ್ಲ. ಒಬ್ಬ ಉದ್ಯೋಗಸ್ಥನನ್ನು ಕಾಣಲು ಬಂದಾಗ. ಬಂದ ಕಾರ್ಯವನ್ನು ಹೇಳಲು ತೊಡಗಬಹುದು ತಾನೇ? ಅದಲ್ಲವೇ ಮಾಡಬೇಕಾದದ್ದು? ಏತಕ್ಕೆ ಬಂದದ್ದು ಎಂದು ಆ ಅಧಿಕಾರಿ ಕೇಳಬೇಕೆ? ಆಗತ್ಯವಿರುವವರು ಹೇಳಲು ಪ್ರಾರಂಭಿಸಬೇಕು. ಅದು ಬೇಕಾದದ್ದು. ಆದರೆ ಕೇಶವ ಪಿಳ್ಳೆ ಹೇಳಬೇಕು ಎನ್ನುವ ರೀತಿಯಲ್ಲಿ ಜ್ಯೋತಿರ್ಮಯಿ ಮಾತಾ ಕುಳಿತಿರುವುದು.

ಹಾಗೆ ಹೆಚ್ಚು ಗೋಡೆಯನ್ನೇ ನೋಡುತ್ತ ಬಿಟ್ಟ ಕಣ್ಣು ಬಿಟ್ಟಹಾಗೆ ಕುಳಿತಿರುವುದು ಕೇಶವ ಪಿಳ್ಳೆಗೆ ಸಾಧ್ಯವಾಗಲಿಲ್ಲವೆಂದು ತೋರುತ್ತದೆ. ಏಕೆ ಬಂದದ್ದು ಎಂದು ಸಂದರ್ಶನ ಕಾರಣವನ್ನು ಕೇಳದೆ ಒಳಗೆ ಬರಲು ಅನುಮತಿ ಕೊಡಲ್ಪಟ್ಟ ಸಂದರ್ಶಕರ ಹತ್ತಿರ ಕೇಳಬೇಕು. ಕೇಳಬೇಕಾದದ್ದು ಕೂಡ. ಆದರೆ. ಆ ಪ್ರಶ್ನೆಯನ್ನು ಕೇಶವ ಪಿಳ್ಳೆಗೆ ಕೇಳಲು ಸಾಧ್ಯವಿಲ್ಲದಂತೆ ತೋರಿತು. ಅವರು ಪೆನ್ನು ತೆಗೆದುಕೊಂಡು ಏನೋ ಬರೆಯುತ್ತಿದ್ದರು. ಅವರಿಗೆ ಯಾವುದೋ ದೂರು ಹೇಳುವುದಿದ್ದಂತೆ ತೋರಿತು.

ಅವರು ಅದನ್ನು ಹೇಳಬೇಕಾಗಿದ್ದದ್ದು. ಜ್ಯೋತಿರ್ಮಯಿ ಮಾತಾಜಿ ಆ ನಿಶ್ಶಬ್ದತೆಯನ್ನು ಹೋಗಲಾಡಿಸಿದ್ದು. ಅವರು ಹೇಳಿದರು: "ನಾನು ಆಶ್ರಮದ ಕೆಲಸದ ವಿಷಯವಾಗಿ ಬಂದದ್ದು."

ಕೇಶವ ಪಿಳ್ಳೆ ತಲೆಯೆತ್ತಿ ನೋಡಿದರು. ಅವರು ನೇರವಾಗಿ ಉಸಿರಾಡಿದರು. ಒಂದು ವಿಷಯ ಮಾತಾಜಿಗೆ ಮಾತನಾಡುವುದಿತ್ತು.

ಜ್ಯೋತಿರ್ಮಯಿ ದೇವಿ ಹೇಳಿದರು:

"ಕರಗುಳದಲ್ಲಿರುವ ಸ್ವಲ್ಪ ಭೂಮಿಯನ್ನು ಹಂಚಿಕೊಡಬೇಕು. ಆಶ್ರಮ ಅಲ್ಲಿಯೇ ಸ್ಥಾಪಿಸಬೇಕು ಅಂದುಕೊಂಡಿರುವುದು. ಉದಾರವಾಗಿ ಹಂಚಿಕೊಟ್ಟರೆ ಒಳ್ಳೆಯದು."

ಕೇಶವ ಪಿಳ್ಳೆಗೆ ಸ್ವಲ್ಪ ಕ್ಲೇಶವುಂಟಾಯಿತಾದರೂ ಒಬ್ಬ ಉದ್ಯೋಗಸ್ಥನಾಗಿ ಬಲವಾಯಿಸಿದರು.

"ಪ್ರಾಪರ್ ಛಾನಲ್ ಮೂಲಕ ಅರ್ಜಿ ಬಂದರೆ ಅದಕ್ಕೆ ಸಂಬಂಧಪಟ್ಟದ್ದನ್ನು ಆಲೋಚಿಸಲಾಗುತ್ತೆ."

ಆ ಮಾತು ತನ್ನನ್ನೇ ನೋಡುತ್ತ ತನ್ನನ್ನು ಇರಿಯುತ್ತಿದ್ದಂತೆ ಕೇಶವ ಪಿಳ್ಳೆಗೆ ತೋರಿತು. ತನ್ನ ದುಗುಡವೆಲ್ಲ ಹೊರಗೆ ಹೋಯಿತು. ಸ್ವಲ್ಪ ಅಸಭ್ಯ ರೀತಿಯಲ್ಲಿ ನಡೆದುಕೊಂಡಂತೆ ಅವರಿಗೆ ತೋರಿತು. ಹಾಗಲ್ಲ ನಡೆದುಕೊಳ್ಳಬೇಕಾಗಿದ್ದದ್ದು. ಮತ್ತೆ ಹೇಗೆ ಎಂದು ತಿಳಿಯದು. ಆದರೆ......... ನಿಂತ ನಿಲುವಿನಲ್ಲಿಯೇ ನಿಲ್ಲಲು ಅವರು ತೀರ್ಮಾನಿಸಿದರು. ಇನ್ನು ಮೇಲೂ ಆ ಕೇವಲ ಔದ್ಯೋಗಿಕ ಭಾವನೆಯನ್ನು ಕೈಬಿಡಬಾರದು.

ಜ್ಯೋತಿರ್ಮಯಿ ಮಾತಾ ಒಂದು ಹೂನಗು ನಕ್ಕಳು. ಆ ನಗುವನ್ನು ಕಂಡು ತನ್ನ ಔದ್ಯೋಗಿಕ ಬಿಗುಮಾನ ಕೈಬಿಟ್ಟುಹೋದಂತೆ ಕೇಶವ ಪಿಳ್ಳೆಗೆ ತೋರಿತು. ಕೈಬಿಟ್ಟು ಹೋದದ್ದನ್ನು ಪುನಃ ಪಡೆಯಬೇಕು. ಪಡೆದೇ ತೀರಬೇಕು.

ಜ್ಯೋತಿರ್ಮಯಿ ಮಾತಾ ಹೇಳಿದರು:

"ಪ್ರಾಪರ್ ಛಾನಲ್ ನನಗೆ ಗೊತ್ತು. ಅರ್ಜಿ ಆ ಮೂಲಕವೇ ಕಳಿಸ್ತೀನಿ."

"ಸರಿ ಹಾಗಿದ್ದರೆ ಅದನ್ನು ಕುರಿತು ಆಲೋಚಿಸುತ್ತೇನೆ" ಎಂದಲ್ಲವೇ ಹೇಳಬೇಕಾದದ್ದು? ಹಾಗೆ ಹೇಳಲು ಕೇಶವ ಪಿಳ್ಳೆ ಹಿಂದುಳಿದರು. ಅದು ತನ್ನನ್ನು ನಡವಳಿಕೆ ತಿಳಿಯದವನು ಎನ್ನುವಂತೆ ಮಾಡಿಬಿಡಬಹುದೆಂದು ಕೇಶವ ಪಿಳ್ಳೆಗೆ ತೋರಿತು. ಹಾಗೆ ಹೇಳಿದರೆ ಗಟ್ಟಿಯಾಗಿ ನಗಬಹುದು ಎಂದು ಕೇಶವ ಪಿಳ್ಳೆ ಹೆದರಿದರು. ಆ ಗಟ್ಟಿ ನಗು ಅವಳು ನಗದೆಯೇ, ಅವರ ಕಿವಿಯೊಳಗೆ ಮೊಳಗಿದಂತಾಯಿತು!

ಈಗ ಚೀಫ್ ಸೆಕ್ರೆಟರಿ ಈ ವಿಷಯದಲ್ಲಿ ಏನು ಮಾಡಬೇಕೆಂದು ಜ್ಯೋತಿರ್ಮಯಿ ಮಾತಾ ಹೇಳಲಿಲ್ಲ.

"ಹಾಗಾದರೆ ಅದನ್ನು ಕುರಿತು ಆಲೋಚಿಸೋಣ" ಎಂದು ಕೇಶವ ಪಿಳ್ಳೆಯೂ ಹೇಳಲಿಲ್ಲ. ಹಾಗೆ ಯಾರಾದರೂ ಒಮ್ಮೆ ಹೇಳಿದ್ದಿದ್ದರೆ ಒಂದು ವೇಳೆ ಆ ವಿಷಯ ಹಾಗೆ ಅಂತ್ಯಗೊಳ್ಳುತ್ತಿತ್ತು. ಈಗ ಅದು ಅಂತ್ಯಗೊಳ್ಳದೆ ಇದೆ. ಜ್ಯೋತಿರ್ಮಯಿಗೆ ಮತ್ತಾವುದೋ ಉದ್ದೇಶವಿದ್ದಂತೆ ತೋರಿತು.

ಅವರು ಹೇಳಿದರು: "ಹಿಂದೂಗಳಿಗೆ ಮಾತ್ರವಲ್ಲ, ಎಲ್ಲರ ಆತ್ಮೋನ್ನತಿ ಗೋಸ್ಕರ ಆಶ್ರಮ ಸ್ಥಾಪಿಸುತ್ತಿರುವುದು."

ಕೇಶವ ಪಿಳ್ಳೆ ತನಗರಿವಿಲ್ಲದಂತೆಯೇ ತಾತ್ಸಾರವಾಗಿ ಹೇಳಿಬಿಟ್ಟರು: "ಹೌದು, ಹೌದು, ಆತ್ಮೋನ್ನತಿಗೋಸ್ಕರ. ನನಗೆ ಚೆನ್ನಾಗಿ ಗೊತ್ತಿದೆ."

ಜ್ಯೋತಿರ್ಮಯಿ ಕೇಳಿದರು: "ಅದ್ಯಾಕೆ ಹಾಗೆ ಹೇಳ್ತೀರಿ?"

ಕೇಶವ ಪಿಳ್ಳೆ ಸ್ವಲ್ಪ ಗಡುಸಾಗಿ ಹೇಳಿದರು: "ನಾನು ಎಲ್ಲ ಕೇಳಿದ್ದೇನೆ."

"ಒಂದು ಸಲ ಬಂದು ಆಶ್ರಮ ನೋಡಬೇಕು. ಒಂದು ದಿನ ಅಲ್ಲಿಯ ಕಾರ್ಯಕ್ರಮದಲ್ಲಿ ಭಾಗವಹಿಸಬೇಕು. ಆಗ ಗೊತ್ತಾಗುತ್ತೆ. ಯಾರೋ ಅಸೂಯೆಯಿಂದ ಹೇಳಿದ್ದನ್ನ ಕೇಳಿ ನಂಬಿಕೊಳ್ಳಬೇಡಿ."

ಕೇಶವ ಪಿಳ್ಳೆಗೆ ಹೇಳಬೇಕಾದ ವಿಷಯಗಳಿದ್ದುವು.

"ನೀನು ನನ್ನ ಮನಸ್ಸನ್ನು ಪರಿವರ್ತನೆ ಮಾಡಿ ಆ ಗುಂಪಿನೊಳಕ್ಕೆ ಕರೆದುಕೊಂಡು ಹೋಗೋದಕ್ಕೆ ಪ್ರಯತ್ನಿಸ್ತಿದ್ದೀಯಾ?"

ಜ್ಯೋತಿರ್ಮಯಿ ಮಾತಾ "ಅಲ್ಲ" ಎಂದು ಖಂಡಿತವಾಗಿ ಹೇಳಿದರು. ಆಶ್ರಮದಲ್ಲೇ ಶಾಶ್ವತವಾಗಿ ಇರುವುದಕ್ಕೆ ಮಾಡುವುದಕ್ಕಾಗಿಲೀ ಅಥವಾ ಒಬ್ಬ ಭಕ್ತನನ್ನಾಗಿ ಮಾಡುವುದಕ್ಕಾಗಲೀ ಅಲ್ಲ ಆಕೆ ಬಂದದ್ದು. ಒಂದು ಒಳ್ಳೆಯ ಕಾರ್ಯಕ್ಕೆ ಸಹಾಯವನ್ನು ಕೇಳುವುದಕ್ಕಾಗಿ ಬಂದಿದ್ದದ್ದು. ಅದು ಒಂದು ಒಳ್ಳೆಯ ಉದ್ದೇಶಕ್ಕಾಗಿ ಎಂದು ತಿಳಿಸಲು ಬಂದು ವಿಷಯ ಹೇಳಿದ್ದು ಅಷ್ಟೆ.

ಕೇಶವ ಪಿಳ್ಳೆ ತಿರಸ್ಕಾರದಿಂದ ನಕ್ಕರು. ಅನಂತರ ಹೇಳಿದರು: "ಆ ಮನೆಗೆ ಅಡಿಗಲ್ಲಿಟ್ಟದ್ದು ಒಳ್ಳೆಯ ಮುಹೂರ್ತದಲ್ಲಲ್ಲ. ಅಲ್ಲೇ ತಾನೆ ಇದೆಲ್ಲ ನಡೆಯುವುದು?"

ಮುಂದುವರಿಸುತ್ತ ಅವರು ಸ್ವಲ್ಪ ಅಧಿಕಾರಯುತವಾಗಿ ಹೇಳಿದರು: "ಆ ಮನೆ ಕಟ್ಟಿಸಿದ್ದು ನಿನಗೆ ತೋರಿದ ಹಾಗೆ ಮಾಡಲಿ ಅಂತ ಅಲ್ಲ. ಆ ಮುದಂಕಿ, ನಿನ್ನ ತಾಯಿ, ವಾಸಮಾಡಿಕೊಂಡಿರಲಿ ಅಂತ. ಆಕೆಯೂ ಅಲ್ಲಿಂದ ಹೊರಟರು. ಈಗ ಸರ್ಕಾರದ ಭೂಮಿಯನ್ನ ನಿನ್ನ ಮತ್ತು ನಿನ್ನ ಹಾಗೆ ದಾರಿ ತಪ್ಪಿದ ಕೆಲವರಿಗೆ ತೋರಿದ ಹಾಗೆ ಮಾಡೋದಕ್ಕೆ ಬಿಟ್ಟುಕೊಡಬೇಕಾ?"

ಜ್ಯೋತಿರ್ಮಯಿ ಮಾತಾಜಿಗೆ ಸಂಬಂಧಿಸಿದಂತೆ ಕೇಶವ ಪಿಳ್ಳೆಯ ಭಾವನೆಯೂ ಆ ರೀತಿಯ ಮಾತುಕತೆಯೂ ಅನಿರೀಕ್ಷಿತವಾಗಿತ್ತು. ಹಾಗೆ ಅವರು ನೇರವಾಗಿ ಕೇಳುತ್ತಾರೆ ಎಂದು ಊಹಿಸುವುದಕ್ಕೂ ಸಾಧ್ಯವಿರಲಿಲ್ಲ. ಜ್ಯೋತಿರ್ಮಯಿ ಮಾತಾಜಿ

ನೇರವಾಗಿ ಹೋಗಿ ಕೇಳಿಕೊಂಡರೆ ಚೀಫ್ ಸೆಕ್ರೆಟರಿ ಆ ಅರ್ಜಿಯನ್ನು ತಳ್ಳಿಹಾಕುವುದಿಲ್ಲ ವೆಂದು ಆಶ್ರಮದಲ್ಲಿದ್ದವರೆಲ್ಲ ನಂಬಿದ್ದರು. ಆ ಹಳೆಯ ಕಥೆಯನ್ನು ತಿಳಿಯದವ ರಾರಿದ್ದಾರೆ? ಜ್ಯೋತಿರ್ಮಯಿಗೂ ಒಂದು ಧೈರ್ಯವಿತ್ತು. ಆ ಮನುಷ್ಯನನ್ನು ತಂಗಮ್ಮ ಚೆನ್ನಾಗಿ ತಿಳಿದಿದ್ದಳು. ಒಮ್ಮೆಯೂ ಸಿಟ್ಟು ಮಾಡಿಕೊಳ್ಳುವ ಸ್ವಭಾವದವ ನನ್ನಾಗಿ ಕೇಶವ ಪಿಳ್ಳೆಯನ್ನು ಕಂಡದ್ದಿಲ್ಲ. ಒದೆದು ಹೊರಗೆ ಹಾಕಿದಾಗಲೂ, ತಪ್ಪು ಮಾಡಿದಾಗಲೂ ಸ್ವಲ್ಪವೂ ಲೆಕ್ಕಿಸದೆ ಇದ್ದಾಗಲೂ ಅಪಮಾನಿಸಿದಾಗಲೂ, ಎಂತಹ ಸಂದರ್ಭದಲ್ಲೂ ಅದೇತಕ್ಕೆ ಎಂದು ನೇರವಾಗಿ ಪ್ರಶ್ನಿಸಿದ್ದೇ ಇರಲಿಲ್ಲ. ಇಂದು ಆ ಹಳೆಯ ತಂಗಮ್ಮ ಪರಿವರ್ತನೆ ಹೊಂದಿ ಬಂದಿದ್ದಾಳೆ. ಹೇಗೆ ಈ ಪರಿವರ್ತನೆಯನ್ನು ನಿರೀಕ್ಷಿಸಲು ಸಾಧ್ಯ? ಒಂದು ನಿಮಿಷದ ವರೆಗೆ ಜ್ಯೋತಿರ್ಮಯಿಗೆ ಮಾತು ಹೊರಬರ ಲಿಲ್ಲ. ಕೇಶವ ಪಿಳ್ಳೆ ಜ್ಯೋತಿರ್ಮಯಿಯ ಮುಖವನ್ನು ದುರುಗುಟ್ಟಿಕೊಂಡು ನೋಡುತ್ತ ಕೇಳಿದರು: "ನಿನ್ನ ಹೆಸರಿನಲ್ಲೇ ಆ ಮನೆ ಇದ್ದರೂ ಅದು ನಿನ್ನದು ಅಂತ ನೀನು ಆಲೋಚಿಸುತ್ತಿದ್ದೀಯಾ?"

ಜ್ಯೋತಿರ್ಮಯಿ ಮಾತಾಜಿಗೆ ಉಸಿರು ಕಟ್ಟಿದಂತೆ ತೋರಿತು. ಬಹುಶಃ ಆ ಪ್ರಶ್ನೆ ಅವರಿಗೆ ಅರ್ಥವಾಗದೆಯೂ ಇರಬಹುದು.

"ನಾನು ಅದನ್ನ ಕಟ್ಟಿಸಿದ್ದು ನಿನ್ನ ಅಮ್ಮನಿಗೋಸ್ಕರ.

ಜ್ಯೋತಿರ್ಮಯಿ ಮಾತಾ ಸಮಾಧಾನ ಹೇಳಿದರು: "ಅಮ್ಮ ಅಲ್ಲಿಂದ ಹೊರಟು ಹೋದಳು. ನಾನು ಹೊರಗೆ ಕಳಿಸಿದ್ದಲ್ಲ. ಹೋಗುವಂತೆ ಹೇಳಿದ್ದೂ ಅಲ್ಲ."

"ಹೌದು, ಅವರು ಅಲ್ಲಿ ಹೇಗೆ ಜೀವಿಸುವುದಕ್ಕೆ ಸಾಧ್ಯ? ಸಹಿಸುವುದಕ್ಕೆ ಸಾಧ್ಯ ವಿಲ್ಲದೆ ಅವರು ಅಲ್ಲಿಂದ ಹೊರಟುಹೋದರು. ಅದು ಹೋಗಲಿ, ಯಾರನ್ನ ಕೇಳಿ ನೀನು ಅಲ್ಲಿ ಆಶ್ರಮ ಸ್ಥಾಪಿಸಿದೆ?"

"ನನ್ನ.......... ನನ್ನ......... ಆತ್ಮೋನ್ನತಿಗಾಗಿ."

"ಆತ್ಮೋನ್ನತಿ! ಆತ್ಮೋನ್ನತಿ! ಆಹಾ! ಎಂಥ ಆತ್ಮೋನ್ನತಿ ನೀನು ಸಂಪಾದಿ ಸೋದು? ಅದನ್ನು ನಾನೇ ಕಣ್ಣಾರೆ ಕಂಡದ್ದಲ್ಲವೆ? ಅವತ್ತು ಕಂಡ ಆ ಯುವಕ ತಾನೇ ನಿನಗೆ ಆತ್ಮೋನ್ನತಿ ತಂದುಕೊಡೋದು?"

ಜ್ಯೋತಿರ್ಮಯಿ ಕೇಶವ ಪಿಳ್ಳೆಯನ್ನು ಸೂಕ್ಷ್ಮವಾಗಿ ನೋಡಿದರು. ಕೇಶವ ಪಿಳ್ಳೆಗೆ ಇಂತಹ ಒಂದು ದೃಷ್ಟಿಯಿದೆ ಎಂದು ಒಮ್ಮೆಯೂ ಆ ಸ್ತ್ರೀ ಕಂಡದ್ದಿಲ್ಲ. ತನ್ನೆದುರಿಗೆ ಕುಳಿತಿರುವುದು ಹಿಂದೆ, ಬಹಳ ಹಿಂದೆ, ತನ್ನ ಪ್ರೇಮಿಯಾಗಿದ್ದ ಕೇಶವ ಪಿಳ್ಳೆಯೇ ಎಂದು ಜ್ಯೋತಿರ್ಮಯಿ ಮಾತಾ ಸಂಶಯಪಡುತ್ತಿದ್ದಿರಬೇಕು. ಆ ಕೇಶವ ಪಿಳ್ಳೆ ಸಿಟ್ಟು ಮಾಡಿಕೊಳ್ಳದವನಾಗಿದ್ದ. ಬಿಗುಮಾನವುಳ್ಳವನಾಗಿರಲಿಲ್ಲ. ಅಧಿಕಾರ ಪ್ರಜ್ಞೆ ಆ ಮನುಷ್ಯನಲ್ಲಿರಲಿಲ್ಲ. ಆಜ್ಞೆ ಮಾಡಲು ಶಕ್ತಿಯಿಲ್ಲದ ಮನುಷ್ಯ. ಯಾವಾ ಗಲೂ ಎಲ್ಲವನ್ನೂ ಸಹಿಸುತ್ತಿದ್ದವನು. ಒಬ್ಬ ಸಾಧು ಮನುಷ್ಯ!

ಮತ್ತೂ ಜ್ಯೋತಿರ್ಮಯಿಗೆ ಉತ್ತರ ಹೇಳಲಾಗಲಿಲ್ಲ. ಆದರೆ ಕೇಶವ ಪಿಳ್ಳೆ ಬಿಡಲಿಲ್ಲ. ಸ್ವಲ್ಪ ಧ್ವನಿಯನ್ನು ತಗ್ಗಿಸಿ ಕೇಳಿದರು: "ಆ ಮಹಾ ಸನ್ಯಾಸಿ ಇದ್ದಾನಲ್ಲ ನಿನ್ನ ಗುರು ! ಅವನನ್ನು ಕಂಡ ಕೂಡಲೆ ನಿನ್ನ ಆತ್ಮಕ್ಕೆ ಸಮಾಧಾನ ದೊರೆಯಿತಾ?"

ಅದು ಜ್ಯೋತಿರ್ಮಯಿ ದೇವಿಯನ್ನು ಬಾಧಿಸಿತು.

"ಇದೇನು ನೀವು ಹೇಳ್ತಾ ಇರೋದು?"

ಕೇಶವ ಪಿಳ್ಳೆ ಸ್ವಲ್ಪ ಕ್ರೂರವಾಗಿಯೇ ಹಲ್ಲು ಕಡಿಯುತ್ತ ಹೇಳಿದರು: "ಹೌದು, ನಿಜವಾಗಿಯೂ ಅದೇ. ನೀನು ಸಂತೃಪ್ತಳಾಗಿದ್ದೀಯಾ?"

"ಓ ! ಪಾಪ !" ಜ್ಯೋತಿರ್ಮಯಿ ಕಿವಿಮುಚ್ಚಿಕೊಂಡರು. "ನಾನು ಇಲ್ಲಿಗೆ ಬರಬಾರದಾಗಿತ್ತು."

ಕೇಶವ ಪಿಳ್ಳೆ ಪುನಃ ಅದೇ ಕಟುವಾದ ಧ್ವನಿಯಲ್ಲಿ ಹೇಳಿದರು: "ಹೌದು. ಅದು ನಿಜ. ನೀನು ಬರಬಾರದಾಗಿತ್ತು. ನಿನ್ನ ಎಲ್ಲ ರಹಸ್ಯಗಳೂ ಗೊತ್ತಿದ್ದ ಒಬ್ಬ ಮನುಷ್ಯನ ಹತ್ತಿರಕ್ಕೆ ನೀನು ಬರಬಾರದಾಗಿತ್ತು. ಅದು ತಪ್ಪಾಯ್ತು."

ದೇವಿ ಜ್ಯೋತಿರ್ಮಯಿಗೆ ಸಹಿಸಲು ಸಾಧ್ಯವಾಗಲಿಲ್ಲ. ಸಕಲ ನಿಯಂತ್ರಣವನ್ನು ಕಳೆದುಕೊಂಡು ಅವರು ಹೇಳಿದರು: "ನೀವು ನನ್ನನ್ನು ಹಾಳು ಮಾಡಿದಿರಿ. ನೀವೇ ನನ್ನನ್ನು ಹಾಳು ಮಾಡಿದ್ದು."

ಕೇಶವ ಪಿಳ್ಳೆ ಆ ಮಾತಿಗೆ ಯಾವ ಲಕ್ಷ್ಯವನ್ನೂ ಕೊಡದೆ ಹೇಳಿದರು: "ಓಹೋ ! ಅದು ಹೀಗೆ ತಿರುಗಿತಾ?"

"ಹೌದಲ್ಲವಾ? ಜ್ಞಾಪಿಸಿಕೊಂಡು ನೋಡಿ."

"ನಾನೂ ಅದನ್ನೇ ಹೇಳೋದು ಮಾತಾಜೀ."

"ನೀವು ನನ್ನನ್ನು ಹಾಳು ಮಾಡಿದಿರಿ. ನನ್ನಿಂದಾಗಿ ನೀವು ಮೇಲೆ ಬಂದಿರಿ.

ಕೇಶವ ಪಿಳ್ಳೆ ತಾತ್ಸಾರದಿಂದ ನುಡಿದರು: "ಹಾಗೆ ನೂರು ಸಲ ಹೇಳು. ಆ ಮೇಲೋ?"

"ನಿಮಗೆ ಕೃತಜ್ಞತೆಯಿಲ್ಲ."

"ಆ ಮೇಲೆ?"

"ನೀವು ನನ್ನನ್ನ ಹಾಳು ಮಾಡಿದಿರಿ."

ಹೆಚ್ಚು ಶಬ್ದ ಮಾಡದಂತೆ ಕೇಶವ ಪಿಳ್ಳೆ ನಕ್ಕರು. ಅವರು ಮತ್ತೆ ಹೇಳಿದರು— ಅದನ್ನೊಂದು ನೂರು ಸಲ ಹೇಳುವಂತೆ. ಬಳಿಕ ರೂಕ್ಷವಾಗಿ ಅವರು ಕೇಳಿದರು: "ಹಾಳು ಮಾಡಿದಿರಿ ಹಾಳು ಮಾಡಿದಿರಿ ಅನ್ನೋದನ್ನು ಬಿಟ್ಟು ಹೇಗೆ ಯಾವಾಗ ಅಂತ ನಿನಗೆ ಹೇಳೋದಕ್ಕೆ ಸಾಧ್ಯವಾ?"

"ನೀವು ಈ ಕುರ್ಚಿಯಲ್ಲಿ ಕುಳಿತುಕೊಳ್ಳುವುದಕ್ಕೆ ಸಾಧ್ಯವಾದದ್ದು ಯಾವುದರಿಂದ ಅಂತ ಜ್ಞಾಪಿಸಿಕೊಳ್ಳಿ."

"ಓಹ್ ! ಅದಕ್ಕೆ ನೀನು ಕಾರಣ ಅಲ್ಲ. ನಿನ್ನ ತಂದೆ ಕಾರಣ. ನಿನ್ನ ತಾಯಿ ಕಾರಣ. ಅವರ ಬಗ್ಗೆ ನನಗೆ ಕೃತಜ್ಞತೆಯಿದೆ. ಆ ಮನುಷ್ಯನಿಗಾಗಿ ನಾನು ನನ್ನ ಕರ್ತವ್ಯ ಮಾಡಿದೆ. ಆ ಸ್ತ್ರೀ ಈಗ ಯಾವ ತೊಂದರೆಯೂ ಇಲ್ಲದೆ ಜೀವಿಸುತ್ತಿದ್ದಾರೆ. ಅವರು ಸಾಯುವ ವರೆಗೆ ನಾನು ಕಾಪಾಡ್ತೇನೆ."

ಕೇಶವ ಪಿಳ್ಳೆಗೆ ಅಷ್ಟಕ್ಕೆ ತೃಪ್ತಿಯುಂಟಾದಂತೆ ತೋರಲಿಲ್ಲ. ಅವರಿಗೆ ಇನ್ನೂ ಕೇಳಬೇಕಾದದ್ದೂ ಹೇಳಬೇಕಾದದ್ದೂ ಇತ್ತು. ಅದು ಕೇವಲ ಸ್ವಾಭಾವಿಕ. ಮೊದಲಾಗಿ ಒಂದು ಚುಂಬನ ದೊರೆತದ್ದು ಅವಳಿಂದ. ಅವಳು ಅವನಿಗಾಗಿ ಕಾದು ನಿದ್ದೆಗೆಟ್ಟು ಕುಳಿತಿರುತ್ತಿದ್ದಳು. ಅದಾವುದಕ್ಕೂ ಜೀವನದಲ್ಲಿ ಯಾವ ಅರ್ಥವೂ ಇಲ್ಲದಂತಾಗುತ್ತದೆಯೆ? ಅವೆಲ್ಲವೂ ಕೆಲವು ಹಕ್ಕುಗಳನ್ನು ಸ್ಥಾಪಿಸದೇ ಇರುತ್ತವೆಯೇ? ಅವಳು ಸಮಾಧಾನ ಹೇಳುವ ಹಕ್ಕುಳ್ಳವಳು.

ಕೇಶವ ಪಿಳ್ಳೆ ಹೇಳಿದ್ದಕ್ಕೆ ಉತ್ತರ ಹೇಳಲು ಜ್ಯೋತಿರ್ಮಯಿಗೆ ನಾಲ್ಕೈದು ನಿಮಿಷಗಳು ಬೇಕಾಗಿ ಬಂದುವು.

"ಅದು......... ಅದು......... ತಂದೆ ನಿಮಗೆ ಕೆಲಸ ಕೊಡಿಸಿಕೊಟ್ಟದ್ದು ನಾನು ನಿಮ್ಮನ್ನು ಪ್ರೇಮಿಸಿದ್ದರಿಂದ."

ಕೇಶವ ಪಿಳ್ಳೆ ಕೇಳಿದರು: "ಪ್ರೇಮಿಸಿದ್ದಾ? ನಿನಗೇನಾದರೂ ಹುಚ್ಚಾ?"

ಜ್ಯೋತಿರ್ಮಯಿಗೆ ಪ್ರೇಮಿಸಿದ್ದೆ ಎಂದು ಹೇಳಲು ಧೈರ್ಯವಿಲ್ಲ. ಆಕೆ ಬಿಟ್ಟ ಕಣ್ಣು ಬಿಟ್ಟ ಹಾಗೆ ಕುಳಿತು ನೋಡುತ್ತಿದ್ದರು. ಕಣ್ಣೆವೆಯಾಡಿದರೆ ನೀರು ತೊಟ್ಟಿಕ್ಕುತ್ತದೆ.

"ನಿನಗೆ ಅಳೋದಕ್ಕೂ ಬರುತ್ತಾ? ನಿನ್ನ ಕಣ್ಣಿನಲ್ಲಿ ನೀರು ಬರುತ್ತಾ?" ಕಾವಿ ವಸ್ತ್ರದ ಸೆರಗಿನಿಂದ ಜ್ಯೋತಿರ್ಮಯಿ ದೇವಿ ಕಣ್ಣು ಒರೆಸಿಕೊಂಡರು. ಅನಂತರವೂ ಆಕೆಗೆ ಹೇಳಬೇಕಾಗಿದ್ದದ್ದು "ನನ್ನನ್ನು ಹಾಳು ಮಾಡಿದಿರಿ" ಎಂದು.

ಅದು ಹೇಗೆ ಎಂದು ಕೇಶವ ಪಿಳ್ಳೆ ಕೇಳಿದರು. "ನೀನಾಗಿ ಹಾಳಾಗಿ ಹೋಗಿದ್ದು ಅಂತ ಹೇಳು. ನಾನು ಹಾಳು ಮಾಡಿದೆ ಅಂತ ಹೇಳಬೇಡ. ಇಲ್ಲದೇ ಇದ್ರೆ ನಾನು ಹೇಗೆ ನಿನ್ನನ್ನು ಹಾಳು ಮಾಡಿದೆ ಅಂತ ಹೇಳು."

"ನನಗೆ ಹೇಳಬೇಕಾದದ್ದೇನೂ ಇಲ್ಲ."

"ಅದು ಸರಿ. ಆದರೆ ನೀನೂ ನಿನ್ನ ಸ್ವಾಮಿಯೂ ಅವನ ಜೊತೆಯವರೂ ಸೇರಿ ಯಾಕೆ ಈ ಪರಿಶುದ್ಧವಾದ ವಸ್ತ್ರಕ್ಕೆ ಅಪಮಾನ ಮಾಡ್ತೀರಿ? ಇಲ್ಲದೆ ಇದ್ದರೆ ನಾನು ಅದನ್ನು ಹೇಳುವುದಿಲ್ಲ. ಮನುಷ್ಯರು ಒಂದೊಂದು ರೀತಿಯಲ್ಲಿ ಜೀವಿಸ್ತಾರೆ. ಹೋಗಲಿ ನಿನ್ನ ಭವಿಷ್ಯವನ್ನು ಕುರಿತು ನೀನು ಆಲೋಚಿಸಿದ್ದುಂಟಾ? ಹಾಗೆ ಆಲೋಚನೆ ಮಾಡಿ ನೀನು ಈ ವಸ್ತ್ರ ಧರಿಸಿದೆಯಾ? ನಿನಗಿದ್ದ ಸರ್ವಸ್ವವನ್ನೂ ಕಳೆದು ಕೈತೊಳೆದು ಕೊಂಡದ್ದಾ?"

ಜ್ಯೋತಿರ್ಮಯಿ ದೇವಿ ಒಂದು ಶಬ್ದ ಉಚ್ಚರಿಸಲಿಲ್ಲ. ಪ್ರತಿಮೆಯಂತೆ ಅವರು ಕುಳಿತಿದ್ದರು. ಹಾಗೆ ಕಟುವಾಗಿ ಮಾತನಾಡುವುದು ಕೇಶವ ಪಿಳ್ಳೆಗೆ ಒಂದು ವಿನೋದ ವಾಗಿ ತೋರಿತು. ಎಷ್ಟು ಮಾತನಾಡಿದರೂ ತೃಪ್ತಿಯುಂಟಾಗುವುದಿಲ್ಲ. ಆಕೆಯನ್ನು ನೋಯಿಸಿದಷ್ಟೂ ಸಾಕಾಗುವುದಿಲ್ಲ. ತುಂಬ ಆನಂದವನ್ನು ಆ ಮನುಷ್ಯ ಅದರಲ್ಲಿ ಕಾಣುತ್ತಿದ್ದದ್ದು. ಅವರು ಆನಂದಿಸುತ್ತಿದ್ದರು, ಸಂತೋಷಪಡುತ್ತಿದ್ದರು.

ಕೇಶವ ಪಿಳ್ಳೆ ಮತ್ತೆ ಕೇಳಿದರು. ಆ ಪ್ರಶ್ನೆಯ ಧ್ವನಿಯೂ ಸ್ವರೂಪವೂ ಜ್ಯೋತಿರ್ಮಯಿಯನ್ನು ಕುರಿತು ಅನುಕಂಪವಿದ್ದ ಒಬ್ಬ ಮನುಷ್ಯನದಾಗಿತ್ತು. "ಸತ್ಯ ಹೇಳಬೇಕು. ಸಪತ್ನಿಯ ಹೆಸರು ನಿನ್ನ ಅನುಭವಕ್ಕೆ ಬರಲಿಲ್ಲವೆ?"

ಜ್ಯೋತಿರ್ಮಯಿಗೆ ಅದು ಅರ್ಥವಾಗಲಿಲ್ಲವೆಂದು ತೋರುತ್ತದೆ. ಪ್ರಶ್ನೆಯನ್ನು ಮತ್ತೆ ಕೇಳಲೆಂದು ಆಕೆ ಅವರ ಮುಖದ ಕಡೆಗೆ ನೋಡಿದರು.

ಕೇಶವ ಪಿಳ್ಳೆ ಸಹಾನುಭೂತಿಯುಳ್ಳ ಒಬ್ಬ ಮನುಷ್ಯನಂತೆ, ವಿಷಯ ವಿವರ ವನ್ನೆಲ್ಲ ತಿಳಿದುಕೊಂಡವನಂತೆ ಅದನ್ನು ವಿಶದೀಕರಿಸಿದರು.

"ನಿನ್ನ ಜೊತೆಯಲ್ಲಿ ರಾಜೀನಾಮೆ ಕೊಟ್ಟು ಬಂದವರು, ಬೇರೆಯವರು; ಆದ ಸನ್ಯಾಸಿನಿಯರಿದ್ದಾರಲ್ಲ. ಅಲ್ಲಿ ನಿಮನಿಮಗೆ ಹೊಡೆದಾಟ ಇಲ್ಲವೇ ಅಸೂಯೆಯುಂಟಾ ಗುವುದಿಲ್ಲವೆ?" ಎಂದು.

ಜ್ಯೋತಿರ್ಮಯಿ ದೇವಿ ಉತ್ತರಿಸಿದರು:

"ನಾನು ಮಾತಾಜಿ. ನನ್ನ ಕೈಕೆಳಗೆ ಎಲ್ಲರೂ."

"ಹೌದು. ಅದಕ್ಕೇ ನಾನು ಹೇಳಿದ್ದು ಜಗಳವಾಡುವುದಿಲ್ಲವೇ ಎಂದು. ರಾಜೀ ನಾಮೆ ಕೊಟ್ಟು ಬಂದವರಲ್ಲೇ ನಿನಗಿಂತ ದೊಡ್ಡ ಉದ್ಯೋಗ ಇದ್ದವರಿಲ್ಲವಾ? ಅವರಿಗೆ ನೀನು ಮಾತಾಜಿ ಆಗಿರುವುದು ಸಹಿಸುತ್ತಾ?"

ಜ್ಯೋತಿರ್ಮಯಿ ಮಾತಾ ಹೇಳಿದರು: "ಅದನ್ನೆಲ್ಲ ನಾನು ಆಲೋಚನೆ ಮಾಡಿ ದ್ದೀನಿ. ಅವರಾರಿಗೂ ಇನ್ನೂ ಕಾವಿ ಸಿಕ್ಕಿಲ್ಲ. ಅವರಿಗೆ ನನ್ನ ಹತ್ರ ಏನು ಮಾಡುವು ದಕ್ಕೂ ಸಾಧ್ಯವಿಲ್ಲ."

"ಆದರೂ ಮನಸ್ಸಿನಲ್ಲಿ ಅಸಹನೆಯಿರುವುದಿಲ್ಲವೇ ನೀನು ಮಾತಾಜಿ ಆಗಿರು ವುದು? ಅದು ಸ್ವಾಭಾವಿಕವಲ್ಲವೆ?"

ಅನ್ಯರ ವಿಷಯವಾಗಿ ಅಷ್ಟೊಂದು ಆಲೋಚಿಸದೆ ಮಾತಾಜಿ ಹೇಳಿದರು: "ಕಾಣಿಸಬಹುದು, ಇರಬಹುದು. ಆದರೆ ನಾನು ಮಾತಾಜಿ."

ಕೇಶವ ಪಿಳ್ಳೆ ತಮ್ಮ ಮಾತಿನ ಧಾಟಿಯನ್ನು ಬದಲಾಯಿಸಿದರು. ಅವಳನ್ನು ನೋಯಿಸುವುದಕ್ಕೆ ಹೊರಟು ಕಟುವಾಗಿ ಮಾತನಾಡಿದ ನಂತರ ಅವರು ಅನುಕಂಪ ದಿಂದ ನೋಡತೊಡಗಿದರು. ಇನ್ನು ಮೇಲೆ ಅವಳು ಎಲ್ಲವನ್ನೂ ಹೇಳಬಹುದು. ನಿಜವಾಗಿಯೂ ಏನೇನೋ ಆಗಿಹೋದಳು, ಪಾಪ!

ಕೇಶವ ಪಿಳ್ಳೆ ಮೂರು ನಾಲ್ಕು ನಿಮಿಷ ಬಿಟ್ಟು ಹೇಳಿದರು: "ನಾನು ನಿನ್ನ ಹತ್ರ ಸ್ವಲ್ಪ ಕಟುವಾಗಿ ಮಾತನಾಡಿದೆ ಅಲ್ಲವೇ? ನಿನಗೆ ಹಾಗನ್ನಿಸೋದಿಲ್ಲವಾ?"

ಜ್ಯೋತಿರ್ಮಯಿ ಮಾತಾ ಏನೂ ಮಾತಾಡಲಿಲ್ಲ. ಅವರು ತಲೆತಗ್ಗಿಸಿ ಒಂದು ಕೈಬೆರಳಿನ ಉಗುರನ್ನು ಆ ಕೈನ ಹೆಬ್ಬೆರಳಿನಿಂದ ಕೀಳುತ್ತಿದ್ದರು. ಆಕೆ ಅತ್ತುಬಿಡಬಹುದೇ ಎಂದು ಕೇಶವ ಪಿಳ್ಳೆ ಸಂಶಯಪಟ್ಟರು. ಅವರು ಹೇಳಿದರು: "ಹಾಗೆ ನಿನ್ನ ಹತ್ತಿರ ಸ್ವಲ್ಪ ಅಧಿಕಾರದಿಂದ ಹೇಳುವುದಕ್ಕೂ ಸ್ವಲ್ಪ ಬಯ್ದು ಹೇಳುವುದಕ್ಕೂ ನನಗೆ ಹಕ್ಕಿದೆ ಅಂತ ಭಾವಿಸಿ ನಾನು ಹಾಗೆಲ್ಲ ಹೇಳಿದ್ದು. ಹೆದರಿಕೆ ಎಂದರೆ ಏನು ಎನ್ನುವುದು ತಿಳಿಯದವಳು ನೀನು. ಅದರ ದೋಷಗಳೂ ಈಗ ಸಂಭವಿಸಿದುವು. ಕಷ್ಟ! ನಿನ್ನ ಹಣೆಬರಹ ನೆನಸಿ ಕೊಂಡರೆ ಅಯ್ಯೋ ಪಾಪ ಅನ್ನಿಸುತ್ತೆ."

"ಎಲ್ಲರೂ ನನ್ನನ್ನು ವಂಚಿಸಿದರು."

ಅಶರೀರವಾಣಿಯಂತೆ ಆ ಶಬ್ದ ಕೇಶವ ಪಿಳ್ಳೆಯ ಕಿವಿಯೊಳಕ್ಕೆ ಹೊಕ್ಕಿತು. ಅದಕ್ಕಿದ್ದ ಮಾರುತ್ತರ ಕೇಶವ ಪಿಳ್ಳೆಯ ಗಂಟಲ ವರೆಗೆ ಬಂದಿತು. ಅದನ್ನು ಅದುಮಿ ಕೊಂಡರು. ಅದು ಹೊರಗೆ ಬರಲಿಲ್ಲ. ಅವರು ಹೇಳಲಿದ್ದದ್ದು ಹೀಗಿತ್ತು:

"ನೀನು ಎಲ್ಲರನ್ನೂ ವಂಚಿಸಿದುದು" ಎಂದು.

ಕೇಶವ ಪಿಳ್ಳೆ ಹೇಳಿದರು: "ಹೌದು ಹೌದು. ಎಲ್ಲರೂ ನಿನ್ನನ್ನು ವಂಚಿಸಿದರು."

"ನನ್ನನ್ನು ಯಾರೂ ಪ್ರೀತಿಸಲಿಲ್ಲ."

ಅದಕ್ಕಿರುವ ಉತ್ತರವನ್ನು ಅದುಮಿಕೊಳ್ಳಲು ಅವರಿಗೆ ಸಾಧ್ಯವಾಗಲಿಲ್ಲ. ಆಗ ಅಭಿನಯಿಸುವ ಸ್ವಭಾವದ ಗಂಡನ ಬದಲಾವಣೆಯ ಮಾತಿನಂತಿತ್ತು ಆ ಉತ್ತರ.

"ಹೌದು ಹೌದು. ನೀನು ಪ್ರೇಮಾನ್ವೇಷಣೆ ಮಾಡುತ್ತಾ ಬಂದೆ. ಅದು ಹೋಗಲಿ ಬಿಡು."

ಅನಂತರ ಅವರು ಕೇಳಿದರು: "ತೆರೆದು ಹೇಳಬೇಕು. ನನ್ನ ಹತ್ತಿರ ಯಾವುದನ್ನೂ ಮುಚ್ಚಿಟ್ಟುಕೊಳ್ಳಬೇಡ. ನಿನ್ನನ್ನು ಈಗ ಲೋಕ ಮಾತಾಜಿ ಅಂತ ಒಪ್ಪಿಕೊಂಡಿದೆ. ನಿಜ. ನಿನಗೆ ಗೌರವವೂ ದೊರೆಯುತ್ತಿದೆ. ನೀನು ಒಬ್ಬಳು ದಿವ್ಯ ವ್ಯಕ್ತಿಯಾಗಿ ಬದಲಾಯಿಸಿದ್ದೀಯೆ ಅಂತಲೇ ಇಟ್ಟುಕೊ. ಒಂದು ಕಾಲಕ್ಕೆ ಲೋಕ ನಿನ್ನನ್ನು ಆರಾಧಿಸು ತ್ತದೆ. ಅಂತಲೇ ಇರಲಿ. ನಿನಗೆ ಸಂತೃಪ್ತಿಯೂ ದೊರೆಯುತ್ತದೆ ಅಂತಲೇ ಇಟ್ಟುಕೋ. ನೀನು ಸ್ವೀಕರಿಸಿರುವ ಈ ಜೀವನದಲ್ಲಿ ಇರುವ ಸಾಧನೆಗಳು ಬಹಳ ದೊಡ್ಡವು. ನನಗೆ ಎಲ್ಲ ಗೊತ್ತು. ಆದರೆ ನಿನ್ನನ್ನು ನಾನು ಅರ್ಥಮಾಡಿಕೊಂಡ ಹಾಗೆ ಈ ಲೋಕದಲ್ಲಿ ಒಂದೇ ಒಂದು ವ್ಯಕ್ತಿಗೂ ಅರ್ಥಮಾಡಿಕೊಳ್ಳಲಿಕ್ಕಾಗುವುದಿಲ್ಲ ಅನ್ನುವುದನ್ನು ನೆನಪಿ ನಲ್ಲಿಟ್ಟುಕೊ. ಈ ಕಾವಿ ತೊಟ್ಟುಕೊಂಡು ನೀನು ನನ್ನನ್ನು ವಂಚಿಸೋದಕ್ಕಾಗೋದಿಲ್ಲ. ಈ ಕಾವಿ ವಸ್ತ್ರದ ಒಳಗಿರುವ ತಂಗಮ್ಮ ನನಗೆ ಚೆನ್ನಾಗಿ ಗೊತ್ತಿದೆ. 'ಹೀಗೆ ದೇವಿ ಜ್ಯೋತಿರ್ಮಯಿ ಮಾತಾಜಿಯ ಹತ್ತಿರ ನನ್ನ' ಹಾಗೆ ಮಾತನಾಡುವುದಕ್ಕೆ ಯಾರಿಗೂ

ಸಾಧ್ಯವಿಲ್ಲ. ಯಾರಿಗಾವರೂ ಧೈರ್ಯ ಬರುತ್ತೆ ಅಂತ ನಾನು ನಂಬೋದಿಲ್ಲ. ಆ ದೃಷ್ಟಿಯಲ್ಲಿ ನಿನ್ನ ಹತ್ತಿರ ಕೇಳ್ತಿದ್ದೇನೆ. ಎಲ್ಲವನ್ನೂ ಸರಿಯಾಗಿ ನಾನು ತಿಳಿದುಕೊಳ್ಳಬೇಕು. ಯಾವುದನ್ನೂ ಮುಚ್ಚಿಡದೆ ಹೇಳ್ತೀಯಾ?"

ಜ್ಯೋತಿರ್ಮಯಿ ದೇವಿ ತಲೆಯೆತ್ತಿ ಕೇಳಿದರು: "ಅದೇನು ತಿಳೀಬೇಕು?"

ಜ್ಯೋತಿರ್ಮಯಿ ದೇವಿಯ ಕಣ್ಣಿನ ಆಳದಲ್ಲಿ ಆ ಬೆಂಕಿ ಸ್ವಲ್ಪ ಹೊತ್ತು ಜ್ವಲಿಸಿದಂತೆ ಕೇಶವ ಪಿಳ್ಳೆಗೆ ತೋರಿತು. ಜ್ಯೋತಿರ್ಮಯಿ ಮಾತಾ ಹೇಳಿದರು: "ಇದೆಲ್ಲ ನನ್ನ ಕರ್ಮ!"

ಆ ಮಾತಿನಲ್ಲಿ, ಆ ಧ್ವನಿಯಲ್ಲಿ ಒಂದು ಸಂತಾಪ, ನಿರಾಶೆ ಇರುವುದಿಲ್ಲವೆ? ಇರುತ್ತದೆ. ನಿಜವಾಗಿಯೂ ಇರುತ್ತದೆ. ಈ ಕಾಷಾಯವಸ್ತ್ರ ಕರ್ಮಫಲವೆಂದಲ್ಲವೇ ಅದರ ಅರ್ಥ? ಕೇಶವ ಪಿಳ್ಳೆ ಆ ಮಾತನ್ನು ಕೇಳಿ ಆಶ್ಚರ್ಯಪಡಲಿಲ್ಲ.

ಅವರು ಕೇಳಿದರು: "ಇದ್ದದ್ದನ್ನೆಲ್ಲ, ಮನೆ, ಉದ್ಯೋಗ ಎಲ್ಲವನ್ನೂ ಬೇಡ ಅಂತ ಹೇಳಿ ಕೈಬಿಟ್ಟು ಒಂದು ವೇಷ ಹಾಕಿಕೊಳ್ಳುವುದಕ್ಕೆ ಮೊದಲು ನೀನು ಚೆನ್ನಾಗಿ ಆಲೋಚನೆ ಮಾಡಿದೆಯಾ? ಭವಿಷ್ಯದ ಕುರಿತು ಆಲೋಚನೆ ಮಾಡಿದ್ದೆಯಾ?"

ಆ ಪ್ರಶ್ನೆಗೆ ಉತ್ತರಿಸಲು ಜ್ಯೋತಿರ್ಮಯಿ ದೇವಿಗೆ ಯಾವ ಕಷ್ಟವೂ ಉಂಟಾಗಲಿಲ್ಲ.

"ಹಾಗೆ ನಾನು ನೌಕರಿಯಲ್ಲಿದ್ದುಕೊಂಡು, ಪ್ರತಿ ತಿಂಗಳು ಸಂಬಳ ತೆಗೆದುಕೊಂಡು, ಒಳ್ಳೆ ಊಟ ಮಾಡಿ, ಒಳ್ಳೆ ಬಟ್ಟೆ ಉಟ್ಟುಕೊಂಡು, ದಿವಸಗಳು ವಾರಗಳು ತಿಂಗಳುಗಳನ್ನು ತಳ್ಳುವುದರಿಂದೇನು ಫಲ? ಆ ರೀತಿ ತಳ್ಳೋದಾದರೆ ಹೇಗಿದ್ದರೂ ತಳ್ಳಬಹುದು, ಅಷ್ಟೇ. ಆ ಮೇಲೆ ಒಂದು ದಿನ ಆ ಕಡೆ ಕಣ್ಣುಮುಚ್ಚಿಕೊಳ್ಳೋದು ಅಷ್ಟೆ! ಆ ಜೀವನದಲ್ಲಿ ಯಾವ ಪ್ರಯೋಜನವೂ ಇಲ್ಲದಾಗಿತ್ತು."

ಒಂದು ನಿಮಿಷದ ವರೆಗೆ ಕೇಶವ ಪಿಳ್ಳೆ ವಿಷಮ ಸ್ಥಿತಿಗೊಳಗಾದರು. ಜ್ಯೋತಿರ್ಮಯಿ ದೇವಿಗೆ ಆ ಜೀವನದ ನಿಷ್ಪ್ರಯೋಜನವನ್ನು ಕುರಿತು ಹೇಳುವುದಿತ್ತು.

"ನನಗೆ ಸ್ವಂತ ಮನೆಯಿದೆ, ಸಂಬಳ ಇದೆ, ಧಾರಾಳವಾಗಿ ಹಣ ಇದೆ—ಅದರಿಂದೇನು ಫಲ?" ಎಂದು ಆಕೆ ಪ್ರಶ್ನೆ ಹಾಕಿದರು.

ಕೇಶವ ಪಿಳ್ಳೆ ಕೇಳಿದರು: "ಹಾಗಾದರೆ ಆ ಜೀವನ ವ್ಯರ್ಥ ಅಂತ ಅನ್ನಿಸಿ ಕಾವಿ ಸ್ವೀಕರಿಸಿದ್ದಾ?"

ಜ್ಯೋತಿರ್ಮಯಿ ಆದಕ್ಕೆ ಪ್ರತಿಯಾಗಿ ತಾನೊಂದು ಪ್ರಶ್ನೆ ಕೇಳಿದರು: "ಜೀವನ ವ್ಯರ್ಥವಾಗಿರಲಿಲ್ಲವಾ?"

ಕೇಶವ ಪಿಳ್ಳೆ ಅದಕ್ಕೆ ಉತ್ತರಿಸದೆ ಅವರೂ ಒಂದು ಪ್ರಶ್ನೆ ಕೇಳಿದರು: "ಇಲ್ಲಿ ಕೇಳು, ನನಗೆ ನೀನು ಯಾರು ಅಂತ ಗೊತ್ತಿದೆ. ಸರಿಯಾಗಿ ತಿಳಿದುಕೊಂಡಿದ್ದೇನೆ. ನಿನ್ನನ್ನೇ ನೀನು ಮರೆಯುವವಳಾಗಿದ್ದೆ. ಅರ್ಥವಾಯ್ತಾ ನಾನು ಯಾವುದನ್ನು

ಉದ್ದೇಶಿಸಿ ಹೇಳ್ತಿದ್ದೇನೆ ಅನ್ನೋದು? ಬಿಚ್ಚುಮನಸ್ಸಿನಿಂದ ಹೇಳ್ತೀನಿ. ನೀನು ಹುಚ್ಚು ಹಿಡಿದವಳಾಗಿದ್ದೆ. ಆ ಹುಚ್ಚಿನಲ್ಲಿ ನೀನು ಹುಡುಕ್ತಾ ಹುಡುಕ್ತಾ ಎಲ್ಲೆಲ್ಲಿ ಹೋದೆ! ಅಂಥವಳು ಜೀವನ ವ್ಯರ್ಥವಾಯ್ತು ಅಂತ ಹೇಳಿದರೆ ನನಗೆ ಅರ್ಥವಾಗುವು ದಿಲ್ಲವಾ? ನಿನಗೇನು ನಷ್ಟವಾಯ್ತು ಅನ್ನಿಸುತ್ತೆ, ಹೇಳು?"

ಆ ಪ್ರಶ್ನೆಗೆ ಜ್ಯೋತಿರ್ಮಯಿ ನೇರವಾದ ಉತ್ತರವನ್ನು ಕೊಡಲಿಲ್ಲ. ಬಹುಶಃ ಆ ಪ್ರಶ್ನೆ ಅರ್ಥವಾಗದೆ ಹೋಗಿರಬಹುದು. ಇಲ್ಲದೇ ಇದ್ದರೆ ಆ ಉತ್ತರವನ್ನು ಸ್ಪಷ್ಟಪಡಿಸುವುದಕ್ಕಾಗಿರಬಹುದು, ಜ್ಯೋತಿರ್ಮಯಿ ದೇವಿ ಹೇಳಿದರು: "ನನಗೋಸ್ಕರ 'ಶೇಖರವಿಲಾಸ' ಕಟ್ಟಿಸಿದಿರಿ. ಯಾವ ನಿಬಂಧನೆಯನ್ನೂ ವಿಧಿಸದೆ ನನಗೆ ಕೊಟ್ಟಿರಿ. ಅದು ಒಳ್ಳೆಯ ಮನೆ. ಅಷ್ಟು ಚೆನ್ನಾಗಿರೋ ಮನೆ ಕಟ್ಟಿಸುವುದು ಯಾರಿಗಾದರೂ ಸಂತೋಷದ ವಿಷಯವೇ ಹೌದು. ನಿಜವಾಗಿಯೂ ಅದೊಂದು ಒಳ್ಳೆಯ ಆಸ್ತಿ. ನಿಮಗೆ ಗೊತ್ತಾ? ನನಗೆ ಅದರಿಂದ ಸಂತೋಷವಾಗಲೀ ಆಹ್ಲಾದವಾಗಲೀ ಉಂಟಾಗ ಗಿಲ್ಲ. ಆ ಕಟ್ಟಡದ ಪ್ಲ್ಯಾನ್ ಬರೆಸಿಕೊಂಡು ಬಂದ ದಿನ ನಿಮಗೆ ನೆನಪಿದೆಯಾ? ಆ ಮೇಲಾದರೂ ನನ್ನ ಅಭಿಪ್ರಾಯ ಕೇಳಬಾರದಾಗಿತ್ತಾ? ಅದನ್ನು ಕುರಿತು ನಾನೇನಾ ದರೂ ಹೇಳಿದ್ದುಂಟಾ? ನನಗೆ ಯಾವ ಸಂತೋಷವೂ ಇರಲಿಲ್ಲ. ನನಗೆ ಆ ಮನೆ ಇರೋದು ಇಲ್ಲದ್ದು ಎಲ್ಲ ಒಂದೇ ಆಗಿತ್ತು. ನಾನು ಸುಮ್ಮನೆ ಹೇಳ್ತಾ ಇಲ್ಲ. ಆದರೆ ಯಾರೂ ಅದನ್ನ ನಂಬೋದಿಲ್ಲ."

ಉಸಿರಾಡುವುದಕ್ಕೆ ಸ್ವಲ್ಪ ಹೊತ್ತು ಬಿಟ್ಟ ಹಾಗೆ ಸ್ವಲ್ಪ ಹೊತ್ತು ಬಿಟ್ಟು ಜ್ಯೋತಿರ್ಮಯಿ ದೇವಿ ಹೇಳಿದರು: "ಅಲ್ಲಿಯ ಜೀವನ ನನಗೆ ಸಹಿಸದ ಹಾಗಾಗಿತ್ತು. ಬೆಳಗ್ಗೆ ಏಳೋದು, ಸಿದ್ಧವಾಗೋದು, ಆಫೀಸಿಗೆ ಹೋಗೋದು, ಹಿಂದಿರುಗಿ ಬರೋದು; ಆ ಮೇಲೆ ನೀವು ಬಂದು ಹೋದ ನಂತರ ಕೆಲಸ ಮುಗೀತು. ಆ ಮೇಲೆ ಮಲಗೋದು. ಅದೂ ಒಂದು ಕೆಲಸ ಆಗಿತ್ತು. ನಿದ್ದೆ! ಆಗ ನಾನು ಯಾತಕ್ಕಾಗಿ ಜೀವಿಸ್ತಿದ್ದೀನಿ ಅನ್ನಿಸಿತ್ತು. ಸತ್ಯ ಹೇಳಲಾ? ಸಾಯೋದಕ್ಕಾಗಿ ಎಷ್ಟೋ ಸಲ ತೀರ್ಮಾನಿಸಿದ್ದೆ ಅಂತ?"

ಕೇಶವ ಪಿಳ್ಳೆ ಕಿವಿಗೊಟ್ಟು ಕೇಳಿಸಿಕೊಂಡರು. ಅದೆಲ್ಲವೂ ನಿಜ. ಅವಳು ಆ ಕಾಲ ದಲ್ಲಿ ನಿರುತ್ಸಾಹಿಯಾಗಿದ್ದಳು. ನಗುತ್ತಿರಲಿಲ್ಲ. ಅವಳಲ್ಲಿದ್ದ ಹೆಣ್ಣುತನವೂ ಜಾಗೃತಿ ಯಲ್ಲಿರಲಿಲ್ಲ. ಅವಳು ಅಂದು ನಿರುತ್ಸಾಹದಿಂದ ಆಕಳಿಸುತ್ತ ಕಾದಿರುತ್ತಿದ್ದುದನ್ನು ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು. ಇನ್ನು ಒಂದು ಕೆಲಸ ಬಾಕಿ ಇದೆ ಎನ್ನುವಂತೆ.

ಆ ಕಥಾನಕ ತಂಗಮ್ಮನ ಹಿಂದಿನ ಜೀವನದ ಮೇಲೆ ಇದು ವರೆಗೆ ಕೇಶವ ಪಿಳ್ಳೆ ಕೂಡ ಕಾಣದೆ ಇದ್ದ ತಿಳಿಯದೆ ಇದ್ದ ಭಾಗಗಳಿಗೆ ಬೆಳಕು ಬೀರುತ್ತಿದ್ದಂತೆ ತೋರಿತು. ಅವಳು ಹಾಳಾಗಿಹೋದ ಹೆಣ್ಣಾಗಿದ್ದಳು. ಯಾವುದೂ ಅವಳನ್ನು ಉತ್ಸಾಹಶೀಲ ಳನ್ನಾಗಿ ಮಾಡಲು ಸಾಧ್ಯವಾಗಿರಲಿಲ್ಲ. ಯಾರೂ ಅವಳನ್ನು ಕಚಗುಳಿಯಿಟ್ಟಂತೆ ನಗಿಸಿಲ್ಲ. ಅವಳು ನಗಬೇಕು ಎಂದು ಯಾರೂ ಆಶಿಸಿರಲಿಲ್ಲ. ಆಶಿಸುವುದಕ್ಕಿದ್ದವರು

ಯಾರು? ಎಲ್ಲೆ ಮೀರಿದ ಲೈಂಗಿಕ ವಿಕಾರಕ್ಕೊಳಗಾಗಿದ್ದವಳು. ಅದು ಕೈಮೀರಿದರೆ ಸಕಲ ಸೀಮೆಗಳನ್ನು ಪುಡಿಪುಡಿ ಮಾಡುತ್ತದೆ. ಅವಳಿಗೂ ಸಂತೃಪ್ತಿ ಆವಶ್ಯಕವಲ್ಲವೆ? ಲೋಕದಲ್ಲಿ ಯಾರಿಗೂ ಅವಳ ಸಂತೃಪ್ತಿಯನ್ನು ಕುರಿತು ಆಲೋಚಿಸುವ ಅಗತ್ಯವಿರಲಿಲ್ಲ. ಹಾಗಿದ್ದ ಅವಳು ಆತ್ಮಹತ್ಯೆ ಮಾಡಿಕೊಳ್ಳಲು ಆಶಿಸಿದ್ದಲ್ಲಿ, ಬಯಸಿದ್ದಲ್ಲಿ ಅದು ಸ್ವಾಭಾವಿಕ. ಪಾಪ! ಅವಳನ್ನು ಸೃಷ್ಟಿಸಬೇಕಾದ ಮಣ್ಣಿನಲ್ಲಿ ಅಷ್ಟೊಂದು ವಿಕಾರವನ್ನು ಬೆರೆಸಿ ಬ್ರಹ್ಮ ಏತಕ್ಕೆ ಸೃಷ್ಟಿಸಿದ? ನಿಜವಾದ ಅನುಕಂಪದಿಂದ ಕೇಶವ ಪಿಳ್ಳೆ ಕೇಳಿದರು: "ನೀನು ಯಾವಾಗಲಾದರೂ ಒಂದು ಮಗು ಬೇಕು ಅಂತ ಆಶಿಸಿದ್ದುಂಟಾ ತಂಗಮ್ಮಾ? ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಒಂದು ಮಗು ಬೇಕು ಅಂತ ನೀನು ಬಯಸಿದ್ದುಂಟಾ?"

"ಅದು ನನಗೆ ಬೇಡ ಅಂತ ವಿಧಿ ನಿಶ್ಚಯಿಸಿದೆ."

ಕೇಶವ ಪಿಳ್ಳೆ ನೇರವಾಗಿ ತೆರೆದು ಹೇಳಿದ ಮಾತು ಜ್ಯೋತಿರ್ಮಯಿ ದೇವಿಯನ್ನು ನಡುಗಿಸಲಿಲ್ಲ. ವಿಕಾರವಶವಾದ ಬಿರುಗಾಳಿಯನ್ನೂ ಎಬ್ಬಿಸಲಿಲ್ಲ. ಅವರು ಕೇಳಿದರು: "ಹಾಗಾದರೆ ನಿನ್ನನ್ನು ಆ ಅವಸ್ಥೆಯಿಂದ ಕಾಪಾಡಿದ್ದು ಆ ದಿನ ನಾನು ಕಂಡ ಯುವಕನಾ? ಅವನ ಹೆಸರೇನು? ಚಿದಾನಂದ ಅಂತಲಾ?"

ನಿಸ್ಸಂಕೋಚವಾಗಿ ಜ್ಯೋತಿರ್ಮಯಿ ದೇವಿ ಹೇಳಿದರು: "ಹೌದು. ನನ್ನ ಜೀವನದ ಗತಿಯನ್ನು ಬದಲಿಸಿದ ಒಬ್ಬ ಮನುಷ್ಯ. ದಿಕ್ಕು ಕಾಣದೆ ಇದ್ದ ನಾನು ಹೊಸ ಪ್ರಪಂಚವನ್ನು ಹೊಕ್ಕೆ. ನನ್ನನ್ನು ಹೊಸ ಪ್ರಪಂಚಕ್ಕೆ ಕರೆದುಕೊಂಡು ಹೋಗಿಬಿಟ್ಟ."

"ಈ ಹೊಸ ಜೀವನದಲ್ಲಿ ನಿನಗೆ ಹೇಗೆ ತೃಪ್ತಿ ಸಿಕ್ಕುತ್ತೆ ಅಂತ ನೀನು ಆಲೋಚಿಸಿದ್ದೀಯಾ?"

ಅದೆಲ್ಲವನ್ನೂ ತಂಗಮ್ಮ ಎನ್ನುವ ಸ್ತ್ರೀ ಮೊದಲೇ ಆಲೋಚಿಸಿದ್ದಂತೆ ತೋರಿತು. ಆದ್ದರಿಂದಲೇ ಆಕೆಗೆ ಕೂಡಲೇ ಉತ್ತರ ಹೇಳಲು ಸಾಧ್ಯವಾಯಿತು.

"ನಾನೀಗ ಈಶ್ವರನ ಭಜನೆ ಮಾಡಬಹುದು. ನನಗೆ ನನ್ನ ಹಾಗೆ ಕರ್ಮಫಲದಿಂದ ನಿರ್ಭಾಗ್ಯರಾದವರ ಒಡನಾಟ ದೊರೆಯುತ್ತೆ. ಅನಾಥರಾದ ಸ್ತ್ರೀಯರಿಗೂ ಮಕ್ಕಳಿಗೂ ಅಭಯ ನೀಡುವುದಕ್ಕೆ ಸಾಧ್ಯ. ಹಾಗೆ ಬದುಕಿದ್ದರಾಯ್ತು. ನನ್ನ ಬದುಕನ್ನು ಬೇರೊಂದು ರೀತಿಯಲ್ಲಿ ಪ್ರಯೋಜನಪಡಿಸಲು ನನಗೆ ಸಾಧ್ಯವಿಲ್ಲ ಅಂತ ತೋರಿತು."

"ಹಾಗಿದ್ದರೆ......... ಹಾಗಿದ್ದರೆ......... ನಾನು ತೆರೆದು ಕೇಳಲೆ? ಅದರಲ್ಲಿ ನಿನಗೆ ವಿಷಮತೆ ಉಂಟಾಗುವುದಿಲ್ಲವೆ?"

"ಇಲ್ಲ. ಅದೇನು ಕೇಳಿ?"

ಆ ಪ್ರಶ್ನೆ ಸ್ವರೂಪವನ್ನು ಪಡೆಯದೆ ಇದ್ದುದರಿಂದ ಕೇಶವ ಪಿಳ್ಳೆ ಸ್ವಲ್ಪ ಹೊತ್ತು ಪರದಾಡಿದರು. ಆ ಪ್ರಶ್ನೆಗೋಸ್ಕರ ಜ್ಯೋತಿರ್ಮಯಿ ಕಾದಿದ್ದರು. ಕೇಶವ ಪಿಳ್ಳೆಗೆ ಕೇಳಿ ತಿಳಿಯಬೇಕಾದದ್ದಿದೆ ಎಂದು ಅವರಿಗೆ ತಿಳಿಯಿತು. ಆಕೆ ಕೇಶವ ಪಿಳ್ಳೆಯ ಪರದಾಟ

ವನ್ನು ನೋಡಿದರು. ಜ್ಯೋತಿರ್ಮಯಿ ದೇವಿ ಹೇಳಿದರು: "ನಾನು ಹೇಳ್ತೀನಿ. ಏನು ಕೇಳಬೇಕೂಂತಿದ್ದೀರಿ ಅಂತ ನನಗೆ ಗೊತ್ತಾಯ್ತು. ನಾನಾಗಿಯೇ ಆ ವಿಷಯ ಹೇಳ್ತೀನಿ. ಒಬ್ಬ ಪುರುಷ ವಶೀಕರಣ ಪ್ರಯೋಗ ನಡೆಸಿ ಒಂದೇ ದಿನದಲ್ಲಿ ಹಾಗೆ ಪರಿವರ್ತನೆ ಮಾಡಿದ್ದಲ್ಲ. ಆದರೆ ಆತ ನನ್ನನ್ನು ಅರ್ಥಮಾಡಿಕೊಂಡ. ನನ್ನನ್ನು ಉಳಿಸಿದ. ನನಗೆ ಮಾರ್ಗ ತೋರಿಸಿದ."

ಕೇಶವ ಪಿಳ್ಳೆ ಕೇಳಿದರು: "ನನಗೆ ಅದು ಅರ್ಥವಾಯಿತು. ನನಗೆ ತಿಳಿಯಬೇಕಾದದ್ದು ಅದಲ್ಲ. ನಿನ್ನನ್ನು ಹೀಗೆ ಮಾಡುವುದಕ್ಕೆ ಆ ಯುವಕ ಅನುಸರಿಸಿದ ಮಾರ್ಗ ಯಾವುದು? ಅದು ಉಪದೇಶವೋ? ಸಂತೃಪ್ತಿ ಪಡೆಯದ ನಿನ್ನ ಸ್ತ್ರೀತ್ವವೋ?"

ಜ್ಯೋತಿರ್ಮಯಿ ದೇವಿಯ ಮುಖ ಕೆಂಪಾಯಿತು. ಅದಕ್ಕೆ ಉತ್ತರ ಸಿಕ್ಕಬೇಕಾಗಿಲ್ಲವೆಂದು ಆಗ ಕೇಶವ ಪಿಳ್ಳೆಗೆ ತೋರಿತು. ಆ ಪ್ರಶ್ನೆಯನ್ನು ಕೇಳಬಾರದಾಗಿತ್ತು. ತಪ್ಪು ಮಾಡಿದ ಹೆಂಡತಿ ಗಂಡನ ಮುಂದೆ ತಪ್ಪು ಒಪ್ಪಿಕೊಂಡಳು. ಅವಳು ಸೋತು ಕುಸಿದದ್ದಾಯಿತು. ಆದರೆ ಗಂಡನಿಗೆ ತೃಪ್ತಿ ಸಿಗಲಿಲ್ಲ. ಅವನಿಗೆ ಆ ತಪ್ಪುಗಳ ವಿವರವನ್ನು ತಿಳಿಯಬೇಕಾಗಿದ್ದಂತಿತ್ತು. ಅದಾಗಿತ್ತು ಕೇಶವ ಪಿಳ್ಳೆಯ ಸ್ಥಿತಿ.

ಅವಳು ಕೇಳಿದಳು: "ಇನ್ನು ಮೇಲೂ ನನ್ನನ್ನು ಹಾಳು ಮಾಡಬೇಕಾ? ಇಷ್ಟರಿಂದ ತೃಪ್ತಿಯಾಗಲಿಲ್ಲವಾ?"

ತಾನು ಅವಳನ್ನು ಹಾಳು ಮಾಡಿದ್ದೆ ಎಂದು ಹೇಳುವುದು ಕೇಶವ ಪಿಳ್ಳೆಗೆ ಅರ್ಥವಾಗುವುದಿಲ್ಲ: "ನಾನು ನಿನ್ನನ್ನು ಹಾಳು ಮಾಡಿದೆ ಅಂತಲೇ?"

"ಹೌದು. ನೀವು ಒಬ್ಬರಲ್ಲ. ನೀವೆಲ್ಲ ನನ್ನನ್ನು ಹಾಳು ಮಾಡಿದಿರಿ."

ಅದು ಹೇಗೆ ಎನ್ನುವುದನ್ನು ಜ್ಯೋತಿರ್ಮಯಿ ವಿವರಿಸಿದರು: "ನನ್ನನ್ನು ಒಮ್ಮೆಯೂ ನೀವು ಬಯ್ಯಲಿಲ್ಲ. ಹತೋಟಿ ಇಡಲಿಲ್ಲ. ನಿಮಗೆ ನಾನು ವಶಳಾದೆ. ಆದರೆ ನನ್ನನ್ನು ಬಯ್ದೋ ಮಾಡಿಯೋ ಏನಾದರೂ ಮಾಡಿ ನೀವು ನಿಮ್ಮ ಕೈಕೆಳಗೆ ನನ್ನನ್ನು ಸಂರಕ್ಷಿಸಿಕೊಂಡು ಹೋಗಲಿಲ್ಲ. ನನಗೆ ಅದು ಬೇಕಾಗಿತ್ತು. ನಾನು ಒಬ್ಬ ಮನುಷ್ಯನ ಸಂರಕ್ಷಣೆಯಲ್ಲಿ ಜೀವಿಸಬೇಕಾಗಿತ್ತು. ಆದರೆ ನೀವು ಯಾರೂ ನನ್ನ ವಿಚಾರವಾಗಿ ಅನುಕಂಪವಾಗಲೀ ಪ್ರೀತಿಯನ್ನಾಗಲೀ ತೋರಿಸಲಿಲ್ಲ. ಹೌದಲ್ಲವಾ? ಜ್ಞಾಪಿಸಿಕೊಂಡು ನೋಡಿ."

ಅವಳು ಹೇಳುವುದರಲ್ಲಿ ಸತ್ಯವಿದೆ ಎಂದು ಕೇಶವ ಪಿಳ್ಳೆ ಭಾವಿಸಿದರು.

ಜ್ಯೋತಿರ್ಮಯಿ ದೇವಿ ಹೇಳಿದರು: "ಹಾಗಾಗಿದ್ದಿದ್ದಲ್ಲಿ ನನ್ನ ಸ್ಥಿತಿ ಹೀಗಿರ್ತಿರಲಿಲ್ಲ. ನನಗೆ ಬೇಕಾಗಿದ್ದದ್ದು ಒಬ್ಬ ಯಜಮಾನ. ಶಿಕ್ಷಿಸುವ ಒಬ್ಬ ಯಜಮಾನ! ಒಮ್ಮೆಯಾದರೂ ನೀವು ನನ್ನ ಮೇಲೆ ಸಿಟ್ಟು ಮಾಡಿಕೊಂಡದ್ದುಂಟಾ? ನನ್ನನ್ನು ಹತೋಟಿಯಲ್ಲಿಟ್ಟುಕೊಂಡದ್ದುಂಟಾ? ಜ್ಞಾಪಿಸಿಕೊಂಡು ನೋಡಿ. ನಾನು ಏನೂ ತಿಳಿಯದವಳಾಗಿರಲಿಲ್ಲವೆ? ನನ್ನನ್ನು ಪ್ರೀತಿಸಲಿಲ್ಲ. ಪ್ರೇಮಕ್ಕಾಗಿ ನಾನು ಬಾಯಾರಿದೆ.

ನೀವು ಮೊದಲು ಹೇಳಿದಂತೆ ಪ್ರೇಮಾನ್ವೇಷಣೆ ಮಾಡಿಕೊಂಡು ಹೋದೆ. ನನ್ನನ್ನು ರಕ್ಷಿಸುವ ಒಬ್ಬ ಮನುಷ್ಯನನ್ನು ಕಂಡುಹಿಡಿದೆ."

ಕೇಶವ ಪಿಳ್ಳೆಗೆ ಅರ್ಥವಾಗದ ಒಂದು ವಿಷಯವಿತ್ತು. ಅವರು ಕೇಳಿದರು:

"ಹಾಗಾದರೆ ಪ್ರೇಮಿಸುವುದು ಎಂದರೆ ಶಿಕ್ಷಿಸುವುದೋ? ಬಯ್ಯುವುದೋ? ಆಳುವುದೋ?"

ಜ್ಯೋತಿರ್ಮಯಿಗೆ ಆ ಮಾತಿನಲ್ಲಿ ಸಂಶಯವೇ ಇಲ್ಲ.

"ಹೌದು ಅದೇ ಅಲ್ಲವೇ? ಬಯ್ಯುವುದೇ ಅಲ್ಲವೇ? ಪ್ರೇಮಿಸುವುದಿಲ್ಲದೇ ಹೋದರೆ ಬಯ್ಯುವುದೋ ಶಿಕ್ಷಿಸುವುದೋ ಇದ್ದೀತೇ?"

ಇಬ್ಬರೂ ಸ್ವಲ್ಪ ಹೊತ್ತು ಮಾತನಾಡದೆ ಕುಳಿತಿದ್ದರು.

ಕೇಶವ ಪಿಳ್ಳೆ ಆ ಹಿಂದಿನ ಕಾಲವನ್ನು ಕುರಿತು ಈಗ ಸಿಕ್ಕಿದ ಹೊಸ ಬೆಳಕಿನ ಅರಿವಿನಲ್ಲಿ ತಮ್ಮದೇ ಆದ ದೃಷ್ಟಿಯಲ್ಲಿ ಆಲೋಚಿಸಿಕೊಂಡಿದ್ದರು. ಮಾತಾ ಜ್ಯೋತಿರ್ಮಯಿ ತನ್ನಷ್ಟಕ್ಕೇ ಆಲೋಚಿಸಿಕೊಂಡಿದ್ದರು.

ಆ ಸ್ತ್ರೀ ಮತ್ತೂ ಒಮ್ಮೆ ಅರ್ಥವಾಗದ ಪ್ರಶ್ನೆಯಾಗಿ ಅವರ ಮುಂದೆ ಪ್ರತ್ಯಕ್ಷಳಾಗಿದ್ದಳು. ಅವಳು ಸಂರಕ್ಷಣೆಯನ್ನು ಇಷ್ಟಪಡುತ್ತಾಳೆ. ಅಂದು ಅವಳನ್ನು ಬಯ್ಯಬೇಕಾಗಿತ್ತು ಎಂದು. ಅವಳನ್ನು ಶಿಕ್ಷಿಸಬೇಕಾಗಿತ್ತಂತೆ. ಅವಳನ್ನು ಕಾಪಾಡಿದ್ದರೆ ಸಾಕಾಗಿತ್ತು. ಚಿಕ್ಕ ವಯಸ್ಸಿನಲ್ಲಿ ಅಶಕ್ತವಾದ ಹಸ್ತಗಳಿಗೆ ಸಿಕ್ಕಿ ಜೀವನ ಈ ರೀತಿಯಲ್ಲಾಗಿ ಹೋಯಿತು ಎನ್ನುವ ವಿಚಾರವಾಗಿರಬೇಕು ಈಗ ಜ್ಯೋತಿರ್ಮಯಿಗಿರುವುದು.

ದೀರ್ಘವಾಗಿ ಉಸಿರು ಬಿಡುತ್ತ ಕೇಶವ ಪಿಳ್ಳೆ ಹೇಳಿದರು: "ನಾವು ತುಂಬ ಹೊತ್ತು ಮಾತಾಡ್ತಾ ಕುಳಿತುಕೊಂಡೆವು ಅಲ್ಲವಾ?"

"ಹೌದು."

"ಸೆಕ್ರೆಟರಿಯೆಟ್‌ಗೆ ಇಡೀ ನಮ್ಮ ಹಳೆಯ ಕಥೆ ಗೊತ್ತು. ಈಗ ಎಲ್ಲರೂ ಇಲ್ಲಿ ಏನು ನಡೆಯುತ್ತಿರಬಹುದು ಅಂತ ಕುತೂಹಲದಲ್ಲಿರಬಹುದು."

"ಹೌದು. ಒಂದು ಹೊಸ ಅಪವಾದದ ವಿಷಯವೂ ಆಗಬಹುದು."

ಕೇಶವ ಪಿಳ್ಳೆ ಅದು ಸರಿಯೆಂದು ಹೇಳಿದರು. ಮಾತಾ ಜ್ಯೋತಿರ್ಮಯಿ ದೇವಿ ಹೋಗಲು ಎದ್ದು ನಿಂತರು. ಆಗ ಕೇಶವ ಪಿಳ್ಳೆ ಹೃತ್ಪೂರ್ವಕವಾಗಿ ಹೇಳಿದರು:

"ನನಗೆ ಇಷ್ಟೆಲ್ಲ ಗೊತ್ತಿರಲಿಲ್ಲ ತಂಗಮ್ಮ. ನಾನು ನಿನ್ನನ್ನು ತಂಗಮ್ಮ ಅಂತಲೇ ಕರೆಯುತ್ತೇನೆ. ಈಗಲೂ ನಿನ್ನನ್ನು ಕುರಿತು ಸರಿಯಾಗಿ ಅರ್ಥ ಮಾಡಿಕೊಳ್ಳೋದಕ್ಕೆ ಸಾಧ್ಯವಾಗಿಲ್ಲ. ಅದೇನೇ ಇರಲಿ. ಒಂದು ವಿಷಯ ನಾನು ಹೇಳಬಲ್ಲೆ. ನೀನು ಆಶೆ ಪಡುವ ರೀತಿಯಲ್ಲಿ ಸುಖವೂ ನೆಮ್ಮದಿಯೂ ನಿನಗೆ ನಿನ್ನ ಜೀವನದಲ್ಲಿ ಉಂಟಾಗಲಿ— ನನ್ನ ಹಾರ್ದಿಕವಾದ ಹಾರೈಕೆ. ನಿನಗೋಸ್ಕರ ಮಾಡಬೇಕಾದದ್ದನ್ನೆಲ್ಲ ಮಾಡಿ ಮುಗಿಸಿದೆ ಅನ್ನುವ ವಿಚಾರ ನನಗಿದ್ದದ್ದು. ಅಂದಿನ ಸ್ಥಿತಿಯಲ್ಲಿ ನಾನು ನನ್ನ ಕರ್ತವ್ಯ ಮಾಡಿ

ಮುಗಿಸಿದೆ ಅಂದುಕೊಂಡಿದ್ದೆ. ಈಗ ಅನ್ನಿಸುತ್ತೆ, ಪೂರ್ತಿ ಆಗಿಲ್ಲ ಅಂತ. ನಾನು ತಪ್ಪುಗಾರ—ನನಗೆ ಅನ್ನಿಸುತ್ತೆ. ನನಗೆ ಇನ್ನೂ ಸ್ವಲ್ಪ ಮಾಡಬೇಕಾದ ಕೆಲಸ ಇದೆ ಅಂತ. ನಿನ್ನನ್ನು ನಾನು ಅಭಿನಂದಿಸುತ್ತೇನೆ."

ಮಾತಾ ಜ್ಯೋತಿರ್ಮಯಿ ದೇವಿ ಹೊರಟುಹೋದರು. ಅವರು ಹೋಗುವುದನ್ನು ಕಿಟಕಿಯ ಮೂಲಕ ಕೇಶವ ಪಿಳ್ಳೈ ನೋಡುತ್ತ ನಿಂತರು. ಪರಾಜಯ ಹೊಂದಿದ ಒಂದು ಕಾವಿ ವಸ್ತ್ರದ ಗಂಟು ನಡೆದುಹೋಗುತ್ತಿದ್ದಂತೆ ಕಾಣಿಸಿತು. ತುಂಬ ಹೊತ್ತು ಕೇಶವ ಪಿಳ್ಳೈ ಚಿಂತಾಮಗ್ನರಾಗಿ ನಿಂತುಕೊಂಡಿದ್ದರು.

ಹೆಚ್ಚು ದಿನ ಕಳೆದಿರಲಿಲ್ಲ. ಒಂದು ದಿನ ಭಾಗೀರಥಿಯಮ್ಮ ಇದ್ದಕ್ಕಿದ್ದ ಹಾಗೆ ತಲೆಸುತ್ತಿ ಬಿದ್ದರು. ಆ ಮೇಲೆ ಅವರು ಮೇಲೆದ್ದು ತಿರುಗಾಡಲಾಗಲಿಲ್ಲ. ಗಂಡು ಮಕ್ಕಳು ಬಂದು ಅವರನ್ನು ಪಾರ್ಕ್ ವ್ಯೂವಿನಿಂದ ಕರೆದುಕೊಂಡುಹೋದರು.

ಮಾರನೆಯ ದಿನ ಭಾಗೀರಥಿಯಮ್ಮ ತೀರಿಕೊಂಡರು. ಕೇಶವ ಪಿಳ್ಳೈಯೂ ಕಾತ್ಯಾಯಿನಿಯಮ್ಮನೂ ಶವದಹನದ ಸಮಯದಲ್ಲಿ ಹೋಗಿದ್ದರು.

ತಾಯಿ ಸಾಯುವಾಗಲಾಗಲೀ ಅಂತ್ಯಕ್ರಿಯೆ ನಡೆಯುವಾಗಲಾಗಲೀ ಜ್ಯೋತಿರ್ಮಯಿ ದೇವಿ ಬಂದಿರಲಿಲ್ಲ. ಆಕೆ ದೂರದಲ್ಲಿ ಎಲ್ಲಿಯೋ ಆಶ್ರಮದ ಕೆಲಸದ ವಿಚಾರವಾಗಿ ಹೋಗಿದ್ದರು.

## [30]

## ದಾಳ ನಡೆಸುವುದು

ಕಾಂಗ್ರೆಸ್ ಪ್ರೆಸಿಡೆಂಟ್ ಮತ್ತು ಚೀಫ್ ಸೆಕ್ರೆಟರಿ ಬಹಳ ಹತ್ತಿರದವರಾಗಿ ವ್ಯವಹರಿಸಬೇಕಾಗಿ ಬಂದಿತು. ಓಟಿನ ಹಕ್ಕನ್ನು ಪ್ರಕಟಿಸಿದ್ದಾಯಿತು. ರಾಜ್ಯದಲ್ಲಿ ಚುನಾವಣೆ ನಡೆಯಲಿತ್ತು. ಯಾವಾಗಲೂ ಕಾಂಗ್ರೆಸ್ ಅಧ್ಯಕ್ಷರೂ ಚೀಫ್ ಸೆಕ್ರೆಟರಿಯೂ ಆಲೋಚಿಸಬೇಕಾಗಿ ಬಂದಿತು. ಚೀಫ್ ಸೆಕ್ರೆಟರಿ ಒಳ್ಳೆಯ ಅನುಭವವೂ ವಿದ್ಯೆಯೂ ಇರುವ ಮನುಷ್ಯನೆಂದು ಅವರಿಗೆ ಅರಿವಾಯಿತು. ವಿಶ್ವಾಸವನ್ನು ಕುರಿತೂ ಆತನಿಗೆ ಸಂಶಯ ವಿಲ್ಲ. ಕಾಂಗ್ರೆಸ್ ಚುನಾವಣೆಯ ಕಾಲದಲ್ಲಿ ಸ್ವೀಕರಿಸಬೇಕಾಗಿ ಬಂದ ವಿಷಯಗಳ ಬಗ್ಗೆ ಒಮ್ಮೆ ಪ್ರೆಸಿಡೆಂಟ್‌ಗೂ ಕೇಶವ ಪಿಳ್ಳೆಗೂ ಅಭಿಪ್ರಾಯ ವ್ಯತ್ಯಾಸವುಂಟಾಯಿತು. ಕಾಂಗ್ರೆಸ್ಸಿನಲ್ಲಿ ಮೇಲುಮಟ್ಟದಲ್ಲಿ ಅಭಿಪ್ರಾಯ ಸಂಘಟನೆಗಳು ವಿಷಯಕ್ಕೆ ಸಂಬಂಧಿಸಿದಂತೆ ನಡೆಯಬೇಕಾಗಿದ್ದ ಕಾಲವಾಗಿತ್ತು. ವಿನಯದಿಂದ ಪ್ರೆಸಿಡೆಂಟ್ ಜೊತೆಯಲ್ಲಿ ಕೇಶವ ಪಿಳ್ಳೆ ಸ್ವಲ್ಪ ಸಂಕೋಚದಿಂದಲೇ ಹೇಳಿದರು:

"ನಾನೊಬ್ಬ ಸರ್ಕಾರಿ ಉದ್ಯೋಗಸ್ಥ. ನಾನೊಂದು ಅಭಿಪ್ರಾಯ ಹೇಳುವುದು—" ಕೇಶವ ಪಿಳ್ಳೆ ನಿಲ್ಲಿಸಿದರು. ಪ್ರೆಸಿಡೆಂಟ್ ಮುಖ ಸ್ವಲ್ಪ ಮ್ಲಾನವಾಯಿತು. ಅದನ್ನು ಕೇಶವ ಪಿಳ್ಳೆ ನೋಡಿದರು. ಒಂದು ವೇಳೆ ಅದು ಕೇಶವ ಪಿಳ್ಳೆಯ ಉದ್ದೇಶವಾಗಿರಬೇಕು. ಪ್ರೆಸಿಡೆಂಟ್ ಹೇಳಿದರು:

"ಉದ್ಯೋಗಸ್ಥ ಮಾತ್ರವಲ್ಲವಲ್ಲ. ಈ ರಾಜ್ಯದ ಪ್ರಧಾನನಾದ ಒಬ್ಬ ಪೌರ ಕೂಡ ಅಲ್ಲವೆ? ಆ ದೃಷ್ಟಿಯಲ್ಲೂ ಅಲ್ಲ ನಾನು ಕೇಳ್ತಿರೋದು. ಸ್ನೇಹಿತರು ಎನ್ನುವ ನೆಲೆಯಲ್ಲಿ ಮಾತ್ರ. ನಾನು ನನಗೆ ಸಂಬಂಧಿಸಿದ ವಿಷಯದಲ್ಲಿ ಸಲಹೆ ಮಾಡಬಲ್ಲೆ."

ಕೇಶವ ಪಿಳ್ಳೆ ನಗುತ್ತ ಹೇಳಿದರು: "ನಾನು ಏನು ಹೇಳಬೇಕು? ಕಾಂಗ್ರೆಸ್ ಕಮಿಟಿ ಸೇರಿ ಆಲೋಚಿಸಬೇಕಾದ ವಿಷಯ ಅದು."

"ಅಂತೂ ಆಡಳಿತದ ಪರಿಚಯ ಇರೋ ನಿಮ್ಮ ಅಭಿಪ್ರಾಯಕ್ಕೂ ಒಂದು ಬೆಲೆ ಇರುತ್ತಲ್ಲ."

ಏನನ್ನೋ ಬರೆಯುತ್ತ ಕುಳಿತಿದ್ದು ಕೇಶವ ಪಿಳ್ಳೆ ಹೇಳಿದರು: "ಸಾಮಾನ್ಯವಾಗಿ ಕೆಲವು ವಿಷಯ ನಾನು ಹೇಳಬಲ್ಲೆ. ಇನ್ನು ಮೇಲೆ ಬರುವ ಸರ್ಕಾರ ಹೇಗಿದ್ದರೆ ಒಳ್ಳೆಯದು ಎನ್ನುವ ನನ್ನ ಅಭಿಪ್ರಾಯವನ್ನು ಮಾತ್ರ......... ಅದು ನನ್ನ ಸಂಕಲ್ಪ. ಅದನ್ನು ಹೇಳುವುದರಲ್ಲಿ ತಪ್ಪಿಲ್ಲವಲ್ಲ?"

ಪ್ರೆಸಿಡೆಂಟ್ ಈ ಮಧ್ಯೆ ಹೇಳಿದರು: "ಅದೊಂದೂ ಅಲ್ಲ. ಎಲ್ಲವನ್ನೂ ಸ್ಪಷ್ಟವಾಗಿ ಮಾತಾಡೋಣ."

"ಚುನಾವಣೆಗೆ ನಿಲ್ಲಬೇಕಾದದ್ದು ರಾಜ್ಯದ ಅತ್ಯುತ್ತಮ ಮಟ್ಟದ ಪೌರರನ್ನು. ಅಂತಸ್ತು. ಮನೆತನ. ಲೋಕಪರಿಚಯ—ಎಲ್ಲವೂ ಇರುವ ಯೋಗ್ಯರು—ಅವರಿಂದ ಮಂತ್ರಿಸಭೆ ರಚಿಸಬೇಕು."

ಪ್ರೆಸಿಡೆಂಟಿಗೆ ಆ ವಿಷಯದಲ್ಲಿ ಸಂಶಯವಿಲ್ಲ. ಕೇಶವ ಪಿಳ್ಳೆ ಹೇಳಿದರು: "ನಾನು ಹೀಗೆ ಹೇಳುವುದಕ್ಕೆ ವಿಶೇಷವಾದ ಒಂದು ಅರ್ಥವಿದೆ. ತಪ್ಪಾಗಿದ್ದರೆ ಕ್ಷಮಿಸಬೇಕು."

ಯಾವುದನ್ನೂ ತೆರೆದು ಹೇಳುವುದಕ್ಕೆ ಪ್ರೆಸಿಡೆಂಟ್ ಒಪ್ಪಿದರು.

ಕೇಶವ ಪಿಳ್ಳೆ ನಿರ್ಭಯವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಿದರು: "ಹೋರಾಟ ಕಾಲದಲ್ಲಿ ಏಟು ತಿಂದು ಅಥವಾ ದೀರ್ಘಕಾಲ ಜೈಲಿನಲ್ಲಿದ್ದು ಸಾಯುವ ಹಾಗೆ ಏಟು ತಿಂದರೂ ಮೈದಾನದಲ್ಲಿ ನಿಂತು ಭಾಷಣ ಮಾಡಿದ ಸಾಮರ್ಥ್ಯವಿರುವ—ಇಂಥವರು ಕಾಂಗ್ರೆಸ್ಸಿನ ಮೇಲುಮಟ್ಟಕ್ಕೆ ಬಂದಿದ್ದಾರೆ. ಹಾಗಿರುವವರು ಜನರನ್ನು ಹಿಡಿತದಲ್ಲಿಟ್ಟುಕೊಂಡಿರುತ್ತಾರೆ. ಆಳಬೇಕು ಎನ್ನುವುದು ಬೇರೆ ವಿಚಾರ. ಅದಕ್ಕೇ ನಾನು ಮೊದಲು ಹೇಳಿದ ಮಾನ್ಯತೆ, ಆಡಳಿತದ ಪರಿಚಯ ಎಲ್ಲವೂ ಬೇಕು."

ಪ್ರೆಸಿಡೆಂಟ್‌ಗೆ ಆ ವಿಷಯದಲ್ಲೂ ಅಭಿಪ್ರಾಯ ವ್ಯತ್ಯಾಸವಿಲ್ಲ. ಕೇಶವ ಪಿಳ್ಳೆ ಸ್ಪಷ್ಟವಾಗಿ ಹೇಳಿದರು:

"ಕಾಂಗ್ರೆಸ್ಸಿನಲ್ಲಿ ಕುಟುಂಬ ಸಾಗಿಸೋದಕ್ಕೆ ಗತಿಯಿಲ್ಲದವನೂ ಕಾಸಿಗೆ ಗತಿಯಿಲ್ಲದೆ ಅಲೆದು ನಡೆಯುವವನೂ ಮುಂತಾದವರೇ ಹೆಚ್ಚಾಗಿ ಸೇರಿಕೊಂಡಿದ್ದಾರೆ. ಪರೀಕ್ಷೆಯಲ್ಲಿ ಪಾಸಾಗಿ ಉದ್ಯೋಗಕ್ಕಾಗಿ ಅಲೆದಾಡಿದವರೂ ಇದ್ದಾರೆ. ಆವೇಶದಿಂದ ಕಾಂಗ್ರೆಸ್ಸಿಗಿಳಿದವರೂ ಇದ್ದಾರೆ."

ಅನಂತರ ಸ್ವಲ್ಪ ಧ್ವನಿ ತಗ್ಗಿಸಿ ಕೇಶವ ಪಿಳ್ಳೆ ಕೇಳಿದರು: "ಹಾಗೆ ತೆರೆದು ಹೇಳಲು ಸಾಧ್ಯವಿಲ್ಲದಿದ್ದರೂ ಒಮ್ಮೆ ಆಲೋಚಿಸಬೇಕು. ಈ ಪರೆಯರವನೂ ಹೊಲೆಯರವನೂ ಎಲ್ಲ ಹೇಗೆ ರಾಜ್ಯ ಆಳಿಯಾರು?"

ಕಾಂಗ್ರೆಸ್ ಪ್ರೆಸಿಡೆಂಟ್ ಅದನ್ನು ಒಪ್ಪಿಕೊಂಡರು. ಸತ್ಯ ಯಾರ ಸ್ವತ್ತೂ ಅಲ್ಲ.

"ಹೌದು. ನಿನ್ನೆಯ ವರೆಗೆ ಬೀದಿ ಅಲೆದವನನ್ನು, ಬುಡ ಭದ್ರವಿಲ್ಲದವನನ್ನು ಹಿಡಿದು ಮಂತ್ರಿ ಮಾಡಿದರೆ ಆಡಳಿತ ಕುಸಿದುಬೀಳುತ್ತದೆ. ಬೇಕಾದದ್ದು ಅದಲ್ಲ."

ಕೇಶವ ಪಿಳ್ಳೆ ಅನಂತರ ತಮ್ಮ ಸಲಹೆಗಳನ್ನು ತಿಳಿಸಿದರು:

"ಈ ರಾಜ್ಯದಲ್ಲಿ ಎಲ್ಲ ಕಡೆಯಲ್ಲೂ ಗಣ್ಯರಾದ ಜನರಿದ್ದಾರೆ. ಅವರಿಗೆ ಅಂತಸ್ತು, ಪಾರಂಪರ್ಯ, ಕುಲೀನತೆ ಎಲ್ಲವೂ ಇವೆ. ಕಾಂಗ್ರೆಸ್ ಚಳವಳಿಯ ಕಾಲದಲ್ಲಿ ಅವರು ಕಾಂಗ್ರೆಸಿನ ಅಭಿಪ್ರಾಯಗಳೊಂದಿಗೆ ಮನಸಾರೆ ಹೊಂದಿಕೆಯುಳ್ಳವರಾಗಿದ್ದರು. ಈ ನಾಡಿನಲ್ಲಿ ಜನಿಸಿ ಬೆಳೆದ ಯಾರಿಗಾದರೂ ವಿರೋಧವಾಗಿ ನಡೆದುಕೊಳ್ಳುವುದಕ್ಕೆ

ಸಾಧ್ಯವೇ? ಈ ನಾಡನ್ನು ನಾವೇ ಆಳಬೇಕು, ನಾವು ಉದ್ಯೋಗಸ್ಥರ ವಿಷಯವನ್ನು ಆಲೋಚಿಸಬೇಕು. ನಿಜವಾಗಿಯೂ ಕಾಂಗ್ರೆಸ್ ವಾಲಂಟಿಯರ ಕಾಲು ಮುರಿಯ ಬೇಕಾದ ಎದೆಗೆ ಗುಂಡಿಡಬೇಕಾಗಿ ಬಂದಂತಹ ಪೋಲೀಸ್ ನೌಕರರು ಮುಂತಾದವರು ಎಂತಹ ಮನೋವೇದನೆಯನ್ನು ಅನುಭವಿಸಿದರು ಎನ್ನುವುದನ್ನು ನೀವಾರೂ ನಂಬುವು ದಿಲ್ಲ. ಪ್ರತಿಯೊಂದು ಸಂದರ್ಭದಲ್ಲಿಯೂ ಹೃದಯ ಒಡೆಯುತ್ತಿತ್ತು. ಕೈನಡುಗು ತ್ತಿತ್ತು. ದೇವರ ಹತ್ತಿರ ಕ್ಷಮೆ ಕೇಳುತ್ತಿದ್ದದ್ದು. ಈ ಅನ್ನ ಬೇಡ ಎಂದು ಕೊಂಡ ಸಂದರ್ಭಗಳು ಎಷ್ಟೋ ಇವೆ. ಜನಿಸಿದ ನಾಡಿಗಾಗಿ ಏನು ಮಾಡಲೂ ಸಾಧ್ಯವಿಲ್ಲ ಎನ್ನುವುದು ಹೋಗಲಿ, ವಿರುದ್ಧವಾಗಿ ಮಾಡಬೇಕಾಗಿ ಬಂತಲ್ಲ ಎನ್ನುವ ವಿಷಮಂತೆಯೋ ದೊಡ್ಡದಾಗಿತ್ತು. ನಮಗೆ ದೇಶಪ್ರೇಮ ಇಲ್ಲವೆಂದಲ್ಲ. ಆದರೆ ನಾವು ಸಂದರ್ಭಕ್ಕೆ ತಕ್ಕಂತೆ ಅಧೀನರಾಗಿದ್ದೆವು."

ಪ್ರೆಸಿಡೆಂಟ್ ಕೂಡ ಈ ಸಂದರ್ಭದಲ್ಲಿ ಸ್ವಲ್ಪ ವಾಗ್ಮಿಯಾದರು. "ನೀವು ದೇಶ ಸೇವೆ ಮಾಡಿದವರು. ಜನರು ಅವರ ಸರ್ಕಾರವನ್ನು ರೂಪೀಕರಿಸುವಾಗ ಭದ್ರವಾದ ಆಡಳಿತ ಮಂಡಳಿಯನ್ನು ನೀವು ಕಾದು ರಕ್ಷಿಸಿದಿರಿ. ಅದು ನಿಜವಾದ ಸೇವೆ. ಕೇವಲ ಬಾವುಟ ಹಿಡಿಯುವುದೂ ಘೋಷಣೆ ಮಾಡುವುದೂ ಸೇವೆಯಲ್ಲ. ನಾನು ಎಲ್ಲ ಕಡೆ ಗಳಲ್ಲೂ ಇದನ್ನು ಹೇಳುವುದುಂಟು."

ಕೇಶವ ಪಿಳ್ಳೆ ಪ್ರಧಾನ ವಿಷಯಕ್ಕೆ ಬಂದರು.

"ಆಗ ನಾನು ಹೇಳ್ತಿದ್ದದ್ದು. ಅಂದು ರಾಜ್ಯದಲ್ಲಿದ್ದ ಯೋಗ್ಯ ಮನುಷ್ಯರು ಕಾಂಗ್ರೆಸ್ಸಿನೊಳಕ್ಕೆ ಪ್ರವೇಶಿಸದೇ ಇದ್ದದ್ದು ಅವರಿಗೆ ಎಷ್ಟೋ ತಾಪತ್ರಯಗಳಿದ್ದದ್ದ ರಿಂದ. ಉಳಿದವರ ಹಾಗೆ ನೆಗೆದಾಡುವುದಕ್ಕೆ ಅವರಿಗೆ ಸಾಧ್ಯವಿಲ್ಲ. ಎಸ್ಟೇಟ್ ಇರುತ್ತದೆ. ಅವರು ಅವರ ಸ್ವಂತ ವಿಷಯಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಕಲವು ಸಲ ನಮ್ಮ ಭಯಕ್ಕೆ ಯಾವುದನ್ನಾದರೂ ಮನಸ್ಸಿಲ್ಲದ ಮನಸ್ಸಿನಿಂದ ಮಾಡಿರಬಹುದು. ಆಗಲೂ ನಮಗೆ ಇದೆಲ್ಲ ಗೊತ್ತಿತ್ತು. ಅವರನ್ನು ರಾಜ್ಯದ್ರೋಹಿಗಳು ಅಂತ ಕರೆದು ತುಚ್ಛವಾಗಿ ಮಾತಾಡಬೇಡಿ."

ಕಾಂಗ್ರೆಸ್ ಪ್ರೆಸಿಡೆಂಟಿಗೆ ಆ ವಾದಕ್ಕೆ ಎದುರಿಲ್ಲವೆಂದು ತೋರುತ್ತದೆ. ಅವರು ಕೇಳಿಸಿಕೊಳ್ಳುತ್ತಿದ್ದರು. ಕೇಶವ ಪಿಳ್ಳೆ ಹೇಳಿದರು:

"ಚಳವಳಿ ನಿಂತಿತು. ಇನ್ನು ಕಾಂಗ್ರೆಸ್ ಆಳುವುದಕ್ಕೆ ಸಿದ್ಧಮಾಡಿಕೊಳ್ತಿದೆ. ಕಳೆದ ದಿನಗಳ ಸೋಲನ್ನು ಒಮ್ಮೆಯೂ ಮನಸ್ಸಿನಲ್ಲಿಟ್ಟುಕೊಳ್ಳಬಾರದು. ಹೆಬ್ಬಾಗಿಲನ್ನು ತೆರ ದಿಡಬೇಕು. ರಾಜ್ಯದ ಗಣ್ಯ ವ್ಯಕ್ತಿಗಳು ಅದರಲ್ಲಿ ಬಂದು ಸೇರಿಕೊಳ್ಳಲಿ. ಅವರನ್ನು ಸ್ವಾಗತಿಸಬೇಕು. ಅವರು ಬರುವಾಗ ಸಾಧಾರಣ ಮನುಷ್ಯನೂ ಯಾತಕ್ಕೂ ಬೇಡ ದವನೂ ಸ್ವಾಭಾವಿಕವಾಗಿ ಬದಲಾಯಿಸುತ್ತಾರೆ. ಇಂದು ಯೋಗ್ಯರು ಬರಲು ಸಂಕೋಚಪಟ್ಟುಕೊಳ್ಳುವುದಿದ್ದರೆ ಅದಕ್ಕಾಗಿ ಅವರ ಮೇಲೆ ತಪ್ಪು ಹೊರಿಸುವ ಕಾರಣ

ವಿಲ್ಲ. ನನ್ನ ಅಭಿಪ್ರಾಯದಲ್ಲಿ ಕಾಂಗ್ರೆಸ್ಸನ್ನು ಒಂದು ರೀತಿಯ ಶುದ್ಧೀಕರಣಕ್ಕೆ ಒಳಗು ಮಾಡಬೇಕು. ಅದರಲ್ಲಿರುವ ಹೊಲಸು, ದುರ್ವಾಸನೆಗಳನ್ನು ಹೋಗಲಾಡಿಸಿ ಅಭಿಮಾನವುಳ್ಳವರೊಡನೆ ಸಂಘಟನೆ ಮಾಡಬೇಕು. ಅವರು ಈ ರಾಜ್ಯದಲ್ಲಿ ಆಳುವುದಕ್ಕೆ ಸಾಧ್ಯ." ಕೇಶವ ಪಿಳ್ಳೆ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿದರು. ಆ ಸಲಹೆಯನ್ನು ತೀರ ನಿಷೇಧಿಸುವುದಕ್ಕೆ ಪ್ರೆಸಿಡೆಂಟ್‌ಗೆ ಸಾಧ್ಯವಾಗಲಿಲ್ಲ. ಆದರೆ ಹಲವು ತೊಂದರೆಗಳಿವೆ. ಒಂದು ಜೀವಿತ ಕಾಲವಿಡೀ ಕಾಂಗ್ರೆಸ್‌ಗೋಸ್ಕರ ಕೆಲಸಮಾಡಿದ ತುಂಬ ಜನರಿದ್ದಾರೆ. ಅವರೆಲ್ಲ ಆತನ ಜೊತೆಯಲ್ಲಿ ಎಲ್ಲ ಕಾಲದಲ್ಲಿಯೂ ಇದ್ದಾರೆ. ಅವರನ್ನು ಮರೆತು ಎಂದೆಂದೂ ಕಾಂಗ್ರೆಸ್ಸನ್ನು ಎದುರಿಸಿದವರ ಹೆಗಲಿನ ಮೇಲೆ ಹೇಗೆ ಕೈ ಇಡುತ್ತಾರೆ? ಕಾಂಗ್ರೆಸ್ಸಿನಲ್ಲಿ ಈಗ ನಡೆ ುಕೊಂಡಿರುವ ಅಭಿಪ್ರಾಯ ಸಂಘಟನೆಗಳ ಭಾವೀರೂಪ ಏನಾಗಿರುತ್ತದೆ?

"ಕಾಂಗ್ರೆಸ್ಸಿನ ಶಕ್ತಿಸಾಮರ್ಥ್ಯಗಳಿರುವ ಒಂದು ಒಳ್ಳೆಯ ಭಾಗ ಹೋಗುತ್ತದೆ. ಅವರು ಜನರ ನಡುವೆ ಓಡಾಡಿದವರು." ಕೇಶವ ಪಿಳ್ಳೆಗೆ ಅದೊಂದು ಪ್ರಧಾನವಾದ ಸಂಗತಿಯಾಗಿ ತೋರಲಿಲ್ಲ. ಅವರು ಹೇಳಿದರು: "ಹೋಗಲಿ ಬಿಡಿ. ಅವರು ಒಂದಿರುಗಿ ಹೋಗಲಿ. ಕಾಂಗ್ರೆಸ್ಸಿನ ಶುದ್ಧಿಗೆ ಅದು ಅತ್ಯಾವಶ್ಯಕ. ಭತ್ತ, ಜಳ್ಳು ಬೇರೆ ಬೇರೆ ಮಾಡಲೇಬೇಕು. ಇದರಲ್ಲಿ ಭಯಪಡಬೇಕಾದದ್ದೇನಿದೆ?"

"ಚುನಾವಣೆ ಒಂದು ಸ್ಪರ್ಧೆಯಾಗಿ ಬರುತ್ತದೆ."

ಆ ವಿಷಯದಲ್ಲೂ ಕೇಶವ ಪಿಳ್ಳೆಗೆ ಭಯವಿಲ್ಲ. "ಸ್ಪರ್ಧೆಯಾಗೇ ಬರಲಿ. ಕಾಂಗ್ರೆಸ್ ಜಯಿಸುವುದಿಲ್ಲ ಅನ್ನುವ ಹೆದರಿಕೆಯಿದೆಯಾ?"

"ಅಂತಹ ಹೆದರಿಕೆಯಿಲ್ಲ."

ಕೇಶವ ಪಿಳ್ಳೆ ಧೈರ್ಯವಾಗಿ ಹೇಳಿದರು:

"ನಾನು ಕಾಂಗ್ರೆಸ್ಸಿನ ಸಕಲ ಅಭ್ಯರ್ಥಿಗಳೂ ಜಯಿಸುವ ಹಾಗೆ ಮಾಡಿಕೊಡುತ್ತೇನೆ. ಚುನಾವಣೆಯ ತಂತ್ರ ನನಗೆ ಗೊತ್ತಿದೆ."

ಪ್ರೆಸಿಡೆಂಟ್ ನಗುತ್ತ ಹೇಳಿದರು: "ಅದು ನಮಗೆ ಗೊತ್ತು."

"ಹೌದು. ನನಗೆ ಯಾವ ಭಯವೂ ಇಲ್ಲ. ಎನ್. ಎಸ್. ಎಸ್. ಮತ್ತು ಎಸ್. ಎನ್. ಡಿ. ಪಿ.ಗಳನ್ನೂ, ರಾಜ್ಯದ ಯೋಗ್ಯರನ್ನೂ ಪ್ರತ್ಯೇಕಗೊಳಿಸಿ ಕಾಂಗ್ರೆಸ್ ಚುನಾವಣೆಗೆ ಸ್ಪರ್ಧಿಸುವುದಾದಲ್ಲಿ ಒಂದು ಕೆಲಸಕ್ಕೆ ತೊಂದರೆಯಾಗುತ್ತದೆ. ನನಗೆ ಅದು ಹೆದರಿಕೆ."

ಕೇಶವ ಪಿಳ್ಳೆಯ ಸಲಹೆಗಳನ್ನು ಸ್ವೀಕರಿಸುವ ಪಕ್ಷದಲ್ಲಿ ಸಂಘಟನೆಯ ಸ್ಥಿತಿ ಏನಾಗಬಹುದು ಎಂದು ಸ್ವಲ್ಪ ಹೊತ್ತು ಪ್ರೆಸಿಡೆಂಟ್ ಆಲೋಚಿಸಿದರು. ಕಾಂಗ್ರೆಸ್ಸಿಗೆ ಯಾರೆಲ್ಲ ಬಂದು ಸೇರಿಕೊಳ್ಳುತ್ತಾರೆ! ಕೆಲವು ಮುಂದಾಳುಗಳನ್ನು ಒಂದು ಕ್ಷಣದಲ್ಲಿ ನೆನಸಿಕೊಂಡರು. ಕಾಂಗ್ರೆಸ್ಸಿನ ಪ್ರಾರಂಭದಿಂದ ದಿವಾನರ ಹತ್ತಿರ ಹಲವು ಕಾರ್ಯ

ಗಳನ್ನು ಸಾಧಿಸಿಕೊಂಡಿರುವ ಕೆಲವರೆಲ್ಲ ಖಾದಿ ವೇಷದಲ್ಲಿ ಟೋಪಿ ಧರಿಸಿ ಆತನ ಕಣ್ಣು ಮುಂದೆ ಹಾದುಹೋದರು. ಜಾತಿಯನ್ನು ಹೇಳಿ ಕಾಂಗ್ರೆಸ್ಸನ್ನು ಛಿದ್ರಿಸಲು ನಡೆಸಿದ ಪ್ರಯತ್ನಗಳು ಅವರ ಗಮನಕ್ಕೆ ಬಂದುವು. ವರ್ಗೀಯ ಸಂಘಟನೆಗಳನ್ನು ಹಳ್ಳಿಗಳ ವರೆಗೆ, ಮನೆಮನೆಗಳಿಗೆ ತಲುಪಿಸಿದ ಚರಿತ್ರೆಯನ್ನು ಮರೆಯುವಂತಿಲ್ಲ. ವರ್ಗೀಯ ಸಂಘಟನೆಗಳು ಇದರ ಜೊತೆಗೆ ಒಂದು ಸೇರಿಕೊಂಡರೆ ಕಾಂಗ್ರೆಸ್ಸಿನೊಳಗೇ ಎನ್. ಎಸ್. ಎಸ್. ಮತ್ತು ಎನ್. ಎನ್. ಡಿ. ಪಿ.ಯ ಜೊತೆಗೆ ಕ್ರಿಶ್ಚಿಯನ್ ಕಾಂಗ್ರೆಸ್ಸಿನ ಎಲ್ಲ ಘೋಷಣೆಗಳನ್ನೂ ಕೇಳಬಹುದು. ಅವರಿಗೋ ಅಥವಾ ಮತ್ತಾರಿಗೋ ಅವರ ಕಾರ್ಯಸಾಧನೆ ಮಾಡಿಕೊಳ್ಳುವುದಾಗಿರುತ್ತದೆ. ಪ್ರೆಸಿಡೆಂಟ್ ಅಸಹಾಯಕತೆಯಿಂದ ಕೇಳಿದರು:

"ತಾವು ಮೊದಲು ಹೇಳಿದ ಹಾಗಿದ್ದಲ್ಲಿ ಪರಸ್ಪರ ಇಷ್ಟಾರ್ಥಗಳನ್ನು ಸಾಧಿಸುವುದ ಕ್ಕಾಗಿ ಸ್ಪರ್ಧಿಸುವ ವೇದಿಕೆಯಾಗಿ ಕಾಂಗ್ರೆಸ್ ಬದಲಾಯಿಸುವುದಿಲ್ಲವೆ?"

ಅದಕ್ಕೆ ಸಮಾಧಾನ ಹೇಳಲು ಕೇಶವ ಪಿಳ್ಳೆಗೆ ಯಾವ ಕಷ್ಟವೂ ಇರಲಿಲ್ಲ. "ಎಲ್ಲರ ಮನಸ್ಸನ್ನೂ ಸಂತೋಷಪಡಿಸಿಕೊಂಡು ಹೋಗಬೇಕು. ಅದು ತಮ್ಮ ಹೊಣೆ ಗಾರಿಕೆ. ನನಗೆ ಆ ವಿಷಯದಲ್ಲಿ ಯಾವ ಅಧೈರ್ಯವೂ ಇಲ್ಲ. ತಮಗೆ ಅದರಲ್ಲಿ ಸಾಮರ್ಥ್ಯವಿದೆ. ತಮ್ಮ ವ್ಯಕ್ತಿತ್ವ ಅಷ್ಟು ಬೆಳೆದೂ ಇದೆ."

ನಂತರ ಕೇಶವ ಪಿಳ್ಳೆ ಹೇಳಿದರು:

"ಇನ್ನು ಅದರ ಮತ್ತೊಂದು ಪಕ್ಷವನ್ನು ನೋಡೋಣ. ಈ ರಾಜ್ಯದ ಜನರು ಎಂದರೆ—ನಾಯರರೂ, ಕ್ರಿಶ್ಚಿಯನ್ನರೂ, ಈಳವರೂ, ಮುಸ್ಲಿಮರೂ ಕೂಡಿಕೊಂಡಿರು ವುದು. ಅವರ ಸಂಘಟನೆಗಳ ಉದ್ದೇಶಗಳನ್ನು ಪರಿಗಣಿಸುವುದು ಎಂದರೆ ರಾಜ್ಯದ ಜನರ ಇಷ್ಟಗಳನ್ನು ಪರಿಗಣಿಸಿದಂತೆಯೇ ಅಲ್ಲವೆ?"

ಯಾತಕ್ಕೋ ಏನೋ ಆ ವಾದ ಕಾಂಗ್ರೆಸ್ ಪ್ರೆಸಿಡೆಂಟಿಗೆ ಅಷ್ಟೊಂದು ಅರ್ಥ ವಾದಂತೆ ತೋರಲಿಲ್ಲ. ಅದರಲ್ಲಿ ಮಾತ್ರ ಯಾವುದೋ ಒಂದು ತೊಂದರೆಯಿದೆ ಯೆಂದು ಅವರಿಗೆ ತೋರಿತು. ಒಂದು ವೇಳೆ ಸುದೀರ್ಘವಾದ ರಾಜಕೀಯ ಚರಿತ್ರೆ ಯಿರುವುದರಿಂದಾಗಿರಬೇಕು ಆ ಮನುಷ್ಯನಿಗೆ ಅಂತಹ ಒಂದು ಅನ್ನಿಸುವಿಕೆಯುಂಟಾ ದದ್ದು. ಆ ದೋಷ ಇರುವುದು ಎಲ್ಲಿ ಎಂದು ಆ ಮನುಷ್ಯನಿಗೆ ಅರ್ಥವಾಗುತ್ತಿಲ್ಲ. ಅದು ಸರಿಯಲ್ಲವೆಂದೂ ಗೊತ್ತು. ಆ ವಿಷಯವನ್ನು ನೋಡಬೇಕಾದದ್ದು ಆ ರೀತಿ ಯಲ್ಲಲ್ಲ ಎಂದು ತೋರಿತು.

ಪ್ರೆಸಿಡೆಂಟಿನ ಆಲೋಚನೆಯನ್ನು ಕೇಶವ ಪಿಳ್ಳೆ ಓದಿ ಅರ್ಥಮಾಡಿಕೊಂಡಂತೆ ತೋರಿತು. ತನ್ನ ವಾದ ಗುರಿ ತಪ್ಪಿ ಹೋಯಿತೇ ಎಂದು ಅವರು ಸಂದೇಹಪಟ್ಟರು. ಕೇಶವ ಪಿಳ್ಳೆ ಸ್ವಲ್ಪ ಕ್ರಮ ತಪ್ಪಿ ಮುಗ್ಗರಿಸಿದರು.

"ಅಲ್ಲ, ಉನ್ನತವಾದ ಆದರ್ಶದಿಂದ ನೋಡುವಾಗ ಇದು ಸರಿಯಲ್ಲ. ಜಾತೀಯತೆ

ಹೋಗಬೇಕು. ಹೋಗಲೇಬೇಕು. ಆದರೆ ಒಂದೇ ಸಲಕ್ಕೆ ಅದನ್ನು ಹೋಗಲಾಡಿಸೋದಕ್ಕೆ ಸಾಧ್ಯವೆ? ನಾನು ಇಂದಿಗೆ ಹೊಂದಿಕೊಳ್ಳುವ ಪ್ರಾಯೋಗಿಕ ಮಾರ್ಗ ಹೇಳಿದೆ ಅಷ್ಟೆ."

ಪ್ರೆಸಿಡೆಂಟ್ ಈ ಸಂದರ್ಭದಲ್ಲಿ ಹಳೆಯ ಅನುಭವಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಒಂದು ವಿಷಯವನ್ನು ಹೇಳಿದರು:

"ಸಂಘಟನೆಯಲ್ಲಿ ಎಂದೆಂದೂ ಜಾತೀಯತೆಯ ಗೊಂದಲ ಇತ್ತು. ಸಂಘದ ಚುನಾವಣೆ ಮುಂತಾದುವುಗಳಲ್ಲೂ ಕಾರ್ಯಕ್ರಮಗಳಲ್ಲೂ ಅದು ಮೇಲೆ ಬಂದಿತ್ತು. ಅದು ಅನಿವಾರ್ಯವೂ ಆಗಿತ್ತು. ಆದರೆ ಒಂದು ವಿಷಯ ಹೇಳದಿರುವುದಕ್ಕೆ ಸಾಧ್ಯವಿಲ್ಲ. ಇಂದಿನ ನಮ್ಮ ಕಾರ್ಯಕ್ರಮಗಳನ್ನು ಒಪ್ಪಿಕೊಳ್ಳುವ ಸಂದರ್ಭದಲ್ಲಿ ಬೇರೆ ಹೋಗುವವರಿದ್ದಾರೋ ಏನೋ! ಅವರು ಯಾವಾಗಲೂ ಜಾತೀಯತೆಯ ಹಾಳು ಉದ್ದೇಶವನ್ನು ಸಂಘದಲ್ಲಿಟ್ಟುಕೊಂಡೇ ಎದುರಿಸಿರುವುದು. ಅವರು ಪ್ರಾಯೋಗಿಕ ಬುದ್ಧಿಯಿಲ್ಲದ ಆದರ್ಶವಾದಿಗಳಾಗಿರಬಹುದು. ಅಂತೂ ಅವಿಶುದ್ಧಿಯನ್ನು ಉಂಟುಮಾಡಿದ್ದಾದರೆ ಅವರು ಬೇರ ಹೋಗಬಹುದು. ಒಂದು ಕ್ಷಣ ಕಳೆದು ಒಂದು ಸ್ವಪ್ನದಲ್ಲೋ ಎನ್ನುವಂತೆ ಅವರು ಹೇಳಿದರು:

"ಅವರು ಬೀಳ್ಕೊಂಡು ಬೇರೆ ಹೋಗುವುದನ್ನು ನಾನು ನೋಡುತ್ತೇನೆ—" ಕೇಶವ ಪಿಳ್ಳೆ ಗಟ್ಟಿಯಾಗಿ ನಕ್ಕರು. ಅವರು ಹೇಳಿದರು:

"ಪ್ರಾಯೋಗಿಕ ಬುದ್ಧಿಯಿಲ್ಲದವರು ಹೋಗಲಿ. ಅವರು ಒಂದು ಕಾಲಕ್ಕೆ ಬುದ್ಧಿ ಕಲಿತು ಹಿಂದಕ್ಕೆ ಬರ್ತಾರೆ—" ಅವರು ಹೇಳಿದರು.

"ನಿಮ್ಮ ತೊಂದರೆಯನ್ನು ಅರ್ಥಮಾಡಿಕೊಳ್ಳಬಲ್ಲೆ. ಈ ಕಾಲವಿಡೀ ನಿಮ್ಮನ್ನು ಅನುಸರಿಸಿ ನಿಮ್ಮ ಸಲಹೆಗಳನ್ನು ಅನುಸರಿಸಿಕೊಂಡು ಬಂದ ಅನುಯಾಯಿಗಳಲ್ಲಿ ಕೆಲವರು ಬೇರೆ ಹೋಗ್ತಾರೆ. ಅವರು ನಿಮ್ಮ ಪ್ರಿಯರಾದವರಿರಬಹುದು. ಅವರ ಬದಲಿಗೆ ಬಂದವರು—ಎದುರಿಸುವವರಾಗಿರಬಹುದು. ಅವರನ್ನು ನಂಬುವುದಕ್ಕೂ ಕಷ್ಟ. ಹೊಸ ಸಂವಿಧಾನವನ್ನು ಕುರಿತು ಜಯಿಸುವುದೋ ಸೋಲುವುದೋ ಯಾವುದೇ ಇದ್ದರೂ ತೊಂದರೆಗಳಿವೆ. ಯಾರೂ ಈ ನೆಲೆಗೆ ಬಂದಾಗ ಕುಗ್ಗಿ ಹೋಗುತ್ತಾರೆ."

ಅಧ್ಯಕ್ಷರ ಸರಿಯಾದ ಸ್ಥಿತಿಯನ್ನು ಅರ್ಥಮಾಡಿಕೊಂಡ ಈ ಮಾತುಕತೆ ಅವರ ಹೃದಯವನ್ನು ಸ್ಪರ್ಶಿಸಿತು. ತನ್ನ ಜೊತೆಯಲ್ಲಿ ಅನುಕಂಪ ಪಡುವ ಒಬ್ಬನ ಧ್ವನಿಯೂ ಭಾಷೆಯೂ ಆಗಿತ್ತು ಅದು.

ಪ್ರೆಸಿಡೆಂಟ್ ಹೇಳಿದರು:

"ಹೌದು. ಹೌದು. ವ್ಯಸನಕರವಾದದ್ದು. ನಾನು ಆ ಕಷ್ಟ ಅನುಭವಿಸುತ್ತಿದ್ದೇನೆ." ಕೇಶವ ಪಿಳ್ಳೆ ಧೈರ್ಯ ನೀಡಿದರು.

"ನೀವು ಎಂತೆಂತಹ ವಿಷಮ ಸಂಧಿಗಳನ್ನು ಎದುರಿಸಿದವರು. ಒಮ್ಮೆಯೂ ನೀವು ಧೈರ್ಯಗೆಟ್ಟವರಲ್ಲ. ಮುನ್ನುಗ್ಗಬೇಕು. ಈಗಲೂ ಹಾಗೆ ನಿರ್ಧರಿಸಿ ಮುನ್ನುಗ್ಗುವ

ಕರ್ಮಸಾಮರ್ಥ್ಯ ಪ್ರಸಿದ್ಧವಾದುದು."

ಸ್ವಲ್ಪ ಹೊತ್ತು ಇಬ್ಬರೂ ಏನೂ ಮಾತಾಡಲಿಲ್ಲ.

ಪ್ರೆಸಿಡೆಂಟ್ ಆಲೋಚನೆಯಲ್ಲಿ ಮುಳುಗಿದ್ದರು. ಕೇಶವ ಪಿಳ್ಳೆ ಅವರನ್ನು ಸೂಕ್ಷ್ಮವಾಗಿ ನೋಡುತ್ತಿದ್ದರು. ಪ್ರೆಸಿಡೆಂಟ್ ಆಲೋಚನೆಯಿಂದ ಎಚ್ಚರಗೊಂಡರು.

"ಓ ! ತುಂಬ ಹೊತ್ತಾಗಿ ಹೋಯ್ತು. ನಾನು ತಮ್ಮ ಸಮಯ ಹಾಳುಮಾಡಿದೆ ಅಂತ ಕಾಣಿಸುತ್ತೆ !"

ಕೇಶವ ಪಿಳ್ಳೆ ಹೇಳಿದರು: "ಇಲ್ಲ. ದೇಶದ ವಿಚಾರ ಅಲ್ಲವೇ ನಾವು ಮಾತಾಡಿದ್ದು? ಅದು ನನ್ನ ಕೆಲಸವೂ ಹೌದು. ಬಹುಶಃ ನಾನು ಕೆಲವು ಫೈಲ್ ನೋಡಿ ಮುಗಿಸುತ್ತಿದ್ದೆ ಅಷ್ಟೆ. ಅದಕ್ಕಿಂತ ಹೆಚ್ಚು ಪ್ರಯೋಜನಕರವಾದ ಕೆಲಸ ನಾನು ಮಾಡಿದ್ದು." ಪ್ರೆಸಿಡೆಂಟ್ ಧನ್ಯವಾದ ತಿಳಿಸಿದರು.

"ಹೌದು, ಒಂದು ಬೆಳಕು ದೊರೆತ ಹಾಗಾಯ್ತು. ಇದುವರೆಗೆ ನಾನು ಈ ವಿಷಯ ಆಲೋಚಿಸಿರಲಿಲ್ಲ. ನಾನು ಆಲೋಚಿಸಬೇಕಾಗಿದ್ದ ವಿಷಯವೇ. ಇದನ್ನು ನಾನು ಯಾವಾಗಲೂ ಒಂದು ಕಡೆಗೆ ತಳ್ಳುತ್ತಿದ್ದೆ. ಒಂದು ದೊಡ್ಡ ತೊಂದರೆ ಮುಂದೆ ಆಕಾರ ತಾಳ್ತಿದೆ ಎಂದುಕೊಂಡಿದ್ದೆ. ಅದನ್ನು ಹೋಗಲಾಡಿಸಿದ್ದು ನೀವು. ಈ ವಿಷಯ ನಾನು ಪುನಃ ಆಲೋಚಿಸುತ್ತೇನೆ. ಈಗ ಮಾರ್ಗ ಸರಿಯಾಗಿ ತಿಳಿದಿದೆ." ಒಂದು ಕ್ಷಣ ಕಳೆದು ಅವರು ಹೇಳಿದರು: "ಮುಖಸ್ತುತಿ ಅಂತ ಮಿ|| ಕೇಶವ ಪಿಳ್ಳೆ ಭಾವಿಸಬಾರದು. ಎಲ್ಲ ದಿಕ್ಕುಗಳಲ್ಲೂ ಸ್ಪಷ್ಟವಾದ ಅನುಭವ ತಮಗಿದೆ. ನಾನು ಒಂದು ವೇಳೆ ತಮ್ಮ ಹತ್ತಿರ ಕೆಲವು ವಿಷಯ ಕೇಳದೆ ಇರಬಹುದು. ಯಾವ ಕಾಲದಲ್ಲೂ ತಾವು ನನಗೆ ಸಲಹೆಗಾರರಾಗಿದ್ದರೆ ಒಳ್ಳೆಯದು ಅನ್ನಿಸುತ್ತೆ."

ಕೇಶವ ಪಿಳ್ಳೆ ಏನೂ ಹೇಳಲಿಲ್ಲ. ವಿನಯಪೂರ್ವಕವಾದ ಮೌನವನ್ನು ಅವರು ಪಾಲಿಸಿದರು. ಪ್ರೆಸಿಡೆಂಟ್ ಹೋಗಿಬರುವುದಾಗಿ ಹೇಳಿ ಹೋದರು.

ಹಿಂದೊಮ್ಮೆಯೂ ಇಲ್ಲದ ಸಂತೃಪ್ತಿ ಕೇಶವ ಪಿಳ್ಳೆಗೆ ಉಂಟಾಯಿತು. ಜಯಿಸಿದೆ ಎನ್ನಿಸಿತ್ತು. ದಿವಾನರು ಹೋದರು. ಕಾಂಗ್ರೆಸ್ ಅಧಿಕಾರದಲ್ಲಿ ಬರುತ್ತದೆ. ಬಂದರೇನಂತೆ? ಈ ಸಂದಿಗ್ಧ ಸಮಯದಲ್ಲಿ ಕಾಂಗ್ರೆಸ್ಸಿನ ಮೂಲವನ್ನೇ ಕೈವಶ ಮಾಡಿಕೊಂಡದ್ದನ್ನು ನೆನಸಿಕೊಂಡು ಕೇಶವ ಪಿಳ್ಳೆ ತಮಗೆ ತಾವೇ ನಕ್ಕರು. ಎಂತಹ ಭಯವಾಗಿತ್ತು ಅಂದು. ಇನ್ನೂ ಒಂದು ನಾಟಕ ಆಡಬಹುದು. ಅದಕ್ಕೆ ಬೇಕಾದ ಶಕ್ತಿ ಕೇಶವ ಪಿಳ್ಳೆಗೆ ಉಂಟಾಯಿತು.

ಚುನಾವಣೆಗೆ ಮೊದಲೇ ರಾಜಕೀಯ ಸೆರೆಯಾಳುಗಳನ್ನೆಲ್ಲ ಬಿಡಿಸಬೇಕೆಂದು ಕಾಂಗ್ರೆಸ್ ಕಮಿಟಿಯಲ್ಲಿ ಒಂದು ವಿನಂತಿಯನ್ನು ಪಾಸು ಮಾಡಿದರು. ಸರ್ಕಾರ ಆ ವಿಷಯದಲ್ಲಿ ಅಡ್ಡಿಪಡಿಸುವುದಿಲ್ಲ. ಆದರೆ, ಚೀಫ್ ಸೆಕ್ರೆಟರಿಗೆ ಆ ಸಂಹಿತೆಯಲ್ಲಿ ಒಂದು ಸಂಶಯವುಂಟಾಯಿತು. ಕೊಲೆ ಪಾತಕದಂತಹ ತಪ್ಪುಗಳಿಗೆ ಶಿಕ್ಷೆ ವಿಧಿಸಲ್ಪಟ್ಟವ

ರಿದ್ದಾರೆ. ಅವರನ್ನು ರಾಜಕೀಯ ಸೆರೆಯಾಳುಗಳೆಂದು ಪರಿಗಣಿಸಬೇಕೇ ಎಂದಾಗಿತ್ತು ಅವರ ಸಂಶಯ. ಆಗ ಒಬ್ಬೊಬ್ಬನ ಕೇಸುಗಳನ್ನೂ ಪ್ರತ್ಯೇಕವಾಗಿ ಪರಿಗಣಿಸಬೇಕಾಗುತ್ತದೆ. ಈ ಸ್ಥಿತಿ ಒಂದು ತಡೆಯಾಗಿ ನಿಂತಿತು. ಚೀಫ್ ಸೆಕ್ರೆಟರಿ ಮನಃಪೂರ್ವಕವಾಗಿ ಒಂದು ತೊಂದರೆಯನ್ನು ಉಂಟುಮಾಡುತ್ತಿದ್ದಾರೆ ಎಂದು ಕಾಂಗ್ರೆಸ್ಸಿನ ಒಳ್ಳೆಯ ವಿಭಾಗದ ಅಭಿಪ್ರಾಯ. ಯಾವುದಕ್ಕೋಸ್ಕರವಾಗಿ ಅನೇಕ ಜನರು ಎಲ್ಲವನ್ನೂ ತ್ಯಜಿಸಿ ಕಾರಾಗೃಹದ ಕಂಬಿಗಳೊಳಗೆ ಹೋದರೋ ಅವರಿಗೆ ಅದರ ಫಲ ಅನುಭವಿಸಬೇಕಾದ ಹಕ್ಕನ್ನು ನಿಷೇಧಿಸುತ್ತಿದ್ದಾರೆ ಎಂದು ಆ ಗುಂಪು ವಾದಿಸಿದ್ದು. ದಿವಾನರು ಹೋದದ್ದರಿಂದಲೂ ಸ್ವಾತಂತ್ರ್ಯ ದೊರೆತದ್ದರಿಂದಲೂ ಸಿಕ್ಕಿದ ಫಲವೇನು ಎಂದು ಆ ಗುಂಪು ಕೇಳಿತು. ದೋಣಿ ಇನ್ನೂ ದಡದಲ್ಲೇ ಇದೆ. ಭವಿಷ್ಯದ ಒಂದು ಸೂಚನೆ ಇದು ಎಂದು ತೀವ್ರವಾದಿಗಳು ಮುನ್ಸೂಚನೆ ಕೊಟ್ಟರು. ಈ ನಿಲೆಯನ್ನು ಚೀಫ್ ಸೆಕ್ರೆಟರಿ ಕೈಗೆತ್ತಿಕೊಂಡದ್ದರಲ್ಲಿ ಯಾವುದೋ ಉದ್ದೇಶವಿರಬೇಕೆಂದು ಪ್ರೆಸಿಡೆಂಟ್ ನಂಬುವುದು. ವಿಚಾರವಿಲ್ಲದೆ ಚೀಫ್ ಸೆಕ್ರೆಟರಿ ಇಂತಹುದನ್ನು ಸೃಷ್ಟಿಸುವುದಿಲ್ಲ. ಕೇಶವ ಪಿಳ್ಳೆಯ ಬುದ್ಧಿಯನ್ನು ಕುರಿತೂ ದೀರ್ಘಾಲೋಚನೆಯನ್ನು ಕುರಿತೂ ಪ್ರೆಸಿಡೆಂಟ್‌ಗೆ ಸಮಾಧಾನವಾಗಿತ್ತು. ಹಾಗೆ ಆ ವಿಷಯವನ್ನು ಕುರಿತು ಅಧ್ಯಕ್ಷರಿಗೂ ಚೀಫ್ ಸೆಕ್ರೆಟರಿಗೂ ಪರಸ್ಪರವಾಗಿ ಔದ್ಯೋಗಿಕ ನೆಲೆಯಲ್ಲಲ್ಲದೆ ಮಾತುಕತೆಗಳು ನಡೆದುವು.

ಪ್ರೆಸಿಡೆಂಟ್‌ಗೆ ಈ ಸಲಹೆಯನ್ನು ಸ್ವೀಕರಿಸುವಂತೆ ಮಾಡುವ ಉಪಾಯವನ್ನು ತಿಳಿಸುವುದರಲ್ಲಿ ಕೇಶವ ಪಿಳ್ಳೆಗೆ ವಿಶೇಷ ತೊಂದರೆಯುಂಟಾಗಿರಲಿಲ್ಲ. ಅಂತಸ್ತು. ಶಕ್ತಿ ಇರುವ ಒಂದು ಸರ್ಕಾರವನ್ನೇ ಪ್ರಜಾಪ್ರತಿನಿಧಿಗಳ ಕೈಗಳಿಗೆ ಒಪ್ಪಿಸಬೇಕಾದದ್ದು. ದೌರ್ಬಲ್ಯವೂ ನೀತಿನ್ಯಾಯಗಳನ್ನು ಕುರಿತು ತಿಳುವಳಿಕೆಯಿಲ್ಲದ್ದೂ ಆದ ಒಂದು ಆಡಳಿತ ಪಕ್ಷ ಪ್ರಜಾಪ್ರತಿನಿಧಿಗಳಿಗೆ ಭಾರವಾಗಿರುತ್ತದೆ. ಕೆಲವು ಸಲ ಅದು ಕುಸಿದು ಕೆಳಗೆ ಬೀಳಲೂಬಹುದು. ಪೀನಲ್ ಕೋಡು ಅನುಸರಿಸಿ ಸ್ವಭಾವ ದೋಷಗಳಿಂದ ಕೂಡಿರುವ ಪಕ್ಷಗಳಲ್ಲಿ. ಶಿಕ್ಷಿಸಲ್ಪಟ್ಟವರನ್ನು ರಾಜಕೀಯ ಚಳವಳಿಯ ಹೆಸರಿನಲ್ಲಿ ಬಿಟ್ಟು ಕಳುಹಿಸುವುದು ಸರ್ಕಾರದ ನೀತಿನಿರ್ವಹಣಾ ಪ್ರಜ್ಞೆಯನ್ನು ಸಾರುತ್ತದೆಯೇ? ಎಂದು ಚೀಫ್ ಸೆಕ್ರೆಟರಿ ಕೇಳಿದರು. ನಾಳೆಗೂ ನೀತಿನ್ಯಾಯಗಳನ್ನು ಸರ್ಕಾರ ನಡೆಸಿಕೊಂಡು ಹೋಗಬೇಕಾದದ್ದಿದೆ. ಸರಿ. ಒಪ್ಪೋಣ. ಎಷ್ಟೋ ಜನರನ್ನು ಕಳ್ಳ ಕೇಸುಗಳಲ್ಲಿ ಸಿಕ್ಕಿಸಿ ಆ ಕಾಲದಲ್ಲಿ ಜೈಲಿಗೆ ಕಳಿಸಿದ್ದಾಗಿದೆ. ಹಾಗಿರುವಾಗ ಒಂದೊಂದು ಕೇಸನ್ನೂ ಸಂಗ್ರಹವಾಗಿ ಪರಿಶೋಧಿಸಬೇಕಾದದ್ದಲ್ಲವೆ? ಕೇಶವ ಪಿಳ್ಳೆ ಹೇಳಿದರು.

"ಕಾಂಗ್ರೆಸ್ ಅಧಿಕಾರದಲ್ಲಿ ಬರುವಾಗ ಅಂತಸ್ತುಳ್ಳ ಸರ್ಕಾರದ ಪರಂಪರೆಯನ್ನು ಸೃಷ್ಟಿಸಬೇಕು. ಕಾಂಗ್ರೆಸ್ಸನ್ನು ಸಮನಿಸಿಯೇ ನಾನು ಈ ಸಂಗತಿಯನ್ನು ಕೈಗೆತ್ತಿಕೊಂಡದ್ದು. ಈಗ ನನ್ನನ್ನು ಕಂಡರೆ ಎಲ್ಲರಿಗೂ ಸಿಟ್ಟು ಬರುತ್ತದೆ. ಮುಂದೆ ನಾನು ಮಾಡಿದ್ದನ್ನು ನೋಡಿ ಅಭಿನಂದಿಸುತ್ತಾರೆ. ನನಗೆ ಗೊತ್ತಿದೆ. ಆಳುವುದು ಎಂದರೆ

ಗಲಭೆ ಉಂಟುಮಾಡೋದಲ್ಲ."

ಇದಕ್ಕೆ ಮತ್ತೊಂದು ಮುಖವೂ ಇದೆ ಎಂದು ಕೇಶವ ಪಿಳ್ಳೆ ರಹಸ್ಯವಾಗಿ ಹೇಳಿದರು. ಕಾಂಗ್ರೆಸ್ಸಿಗೂ ತುಂಬ ತೊಂದರೆಗಳಿಲ್ಲದಂತಾಗಬೇಕಾದದ್ದು ಈ ಮಾರ್ಗ. ಕಾಂಗ್ರೆಸ್ಸನ್ನು ಎದುರಿಸುವ ಕೆಲವರು ಒಳಗೇ ಈ ಚುನಾವಣೆಯ ಕಾಲದಲ್ಲಿ ಇರುತ್ತಾರೆ. ಅವರು ತೀವ್ರವಾದಿಗಳು. ಸೆರೆಮನೆವಾಸಿಗಳ ಲಿಸ್ಟನ್ನು ಕೇಶವ ಪಿಳ್ಳೆ ಪರಿಶೀಲಿಸಿದರು. ಅಹಿಂಸೆ, ಅಕ್ರಮ ನಿವಾರಣೆಗೆ ಹೊರಟವರು, ನೀತಿನ್ಯಾಯಗಳನ್ನು ಗೌರವಿಸುವವರು ಕಾನೂನನ್ನು ಕೈಗೆತ್ತಿಕೊಳ್ಳುವವರು—ಹೀಗೆ ರಾಜ್ಯದಲ್ಲಿ ಪೌರ ಪ್ರಜ್ಞೆಯುಳ್ಳ ಎಷ್ಟೋ ಜನರು ಹೊರಗೆ ಬರುತ್ತಾರೆ. ಕೇಶವ ಪಿಳ್ಳೆ ಹೀಗೆ ಹೇಳಿ ಮುಗಿಸಿದರು.

"ನಾನು ಚೆನ್ನಾಗಿ ಆಲೋಚನೆ ಮಾಡಿ ಈ ತೀರ್ಮಾನ ಕೈಗೊಂಡದ್ದು. ಚುನಾವಣೆ ಕಳೆಯಲಿ. ಹೊಸ ಸರ್ಕಾರದ ಸನ್ಮನೋಭಾವಕ್ಕೆ ಸಾಕ್ಷಿಯಾಗಿ ಎಲ್ಲರನ್ನೂ ಬಿಡುಗಡೆ ಮಾಡೋಣ. ಯಾಕೆ ಈಗಲೇ ತೊಂದರೆ ಉಂಟುಮಾಡಿಕೊಳ್ಳೋದು?"

ಪ್ರೆಸಿಡೆಂಟ್ ಕೇಳಿದರು:

"ಹಾಗೆ ತೊಂದರೆ ಮಾಡೋರು ತುಂಬ ಜನರಿದ್ದಾರಾ?"

"ತುಂಬ ಜನರಿದ್ದಾರೆ. ಅಂಥ ದೊಡ್ಡ ತೊಂದರೆಯಿಲ್ಲ. ಅಂತು ಅವರನ್ನೂ ಕಟ್ಟಿಕೊಂಡು ಓಡಾಡುವ ಜನರು ಕಾಣಿಸ್ತಾರೆ. ಎಲ್ಲರೂ ಕಮ್ಯುನಿಸ್ಟರು. ನಿಜವಾಗಿಯೂ ಸಹಜವಾದ ತಪ್ಪುಗಳನ್ನು ಮನಃಪೂರ್ವಕವಾಗಿ ಮಾಡಿದವರೂ ಉಂಟು."

ಕೇಶವ ಪಿಳ್ಳೆಯ ಮನೋಧರ್ಮವನ್ನು ಅರಿತು ಪ್ರೆಸಿಡೆಂಟ್ ಹಿಂದಿರುಗಿದ್ದು.

ಮಾರನೆಯ ದಿನದಿಂದ ಒಂದೊಂದು ಗುಂಪುಗಳಾಗಿ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಲು ಪ್ರಾರಂಭವಾಯಿತು. ರಾಜ್ಯವಿಡೀ ಜೈಲಿನಿಂದ ಹಿಂದಿರುಗಿ ಬಂದ ಮುಂದಾಳುಗಳಿಗೆ ಅದ್ಭುತ ಸ್ವಾಗತ ದೊರೆಯಿತು. ಒಂದೊಂದು ದಿವಸವೂ ಮೂರು ನಾಲ್ಕು ಮಂದಿ ಹೊರಗೆ ಬರುತ್ತಿದ್ದರು. ಅದೊಂದು ಒಳ್ಳೆಯ ಕಾರ್ಯಕ್ರಮವಾಗಿತ್ತು. ಸೆರೆಮನೆಯಿಂದ ವಿಮೋಚನೆ ಪಡೆದು ಹೊರಗೆ ಬಂದವರನ್ನು ಸ್ವಾಗತಿಸುವ ಹೊತ್ತಿನಲ್ಲಿ ಜೈಲಿನಲ್ಲಿದ್ದವರನ್ನು ರಾಜ್ಯದ ಜನತೆ ಮರೆತರು. ಆದರೆ ರಾಜ್ಯದಲ್ಲಿ ಅಲ್ಲಿ ಇಲ್ಲಿ ಎಷ್ಟೋ ಜನರು ತಮ್ಮ ಪೈಕಿಯವರು ಜೈಲಿನಲ್ಲಿರುವವರು ಇಂದು ಬರುತ್ತಾರೆ, ನಾಳೆ ಬರುತ್ತಾರೆ ಎಂದು ನಿರೀಕ್ಷಿಸಿಕೊಂಡಿದ್ದರು. ಅವರು ಸ್ವಾತಂತ್ರ್ಯ ಸಮರದಲ್ಲಿ ಆವೇಶದಿಂದ ಭಾಗವಹಿಸಿದವರಾಗಿದ್ದರು. ಇಲ್ಲದಿದ್ದಲ್ಲಿ ಇಂದೂ ಆ ಆವೇಶ ಆಸಕ್ತಿಯಿರುವವರಾಗಿಯೂ ಇರಬಹುದು. ಅದೂ ಅಲ್ಲದಿದ್ದಲ್ಲಿ ಇನ್ನು ಮುಂದೆ ಬರುವ ಸರ್ಕಾರಕ್ಕಾಗಿ ಬಲಿದಾನವನ್ನರ್ಪಿಸುವವರೂ ಆಗಿರಬಹುದು.

* * * *

ಗೋಪಿಯನ್ನೂ ನಾರಾಯಣನ್ ನಾಯರನ್ನೂ ಇನ್ನೂ ಹೊರಗೆ ಬಿಟ್ಟಿರಲಿಲ್ಲ. ಚೀಫ್ ಸೆಕ್ರೆಟರಿಗೆ ನೇರವಾದ ಪರಿಚಯವಿದ್ದವರು ಅವರು. ಮ್ಯಾಥ್ಯೂಗೆ ಅವರ ವಿಷಯದಲ್ಲಿ ಸ್ವಲ್ಪ ಬೇಸರವಿದೆ. ಲೂಕೋಸನ ಹತ್ತಿರ ಆ ವಿಷಯವನ್ನು ಹೇಳುವುದುಂಟು. ಅಪರಾಧಗಳಿಗಾಗಿ, ಪೀನಲ್ ಅಪರಾಧಕ್ಕಾಗಿ ಅವರನ್ನು ಶಿಕ್ಷಿಸಿರುವುದು ಎಂದು. ಆದುದರಿಂದ ಅವರನ್ನು ಬಿಟ್ಟು ಕಳಿಸುವ ವಿಷಯ ಸಾಮಾನ್ಯವಾಗಿ ಸಂಶಯದಲ್ಲಿತ್ತು. ಅದಕ್ಕಾಗಿ ಏನಾದರೂ ಮಾಡದೆ ಇದ್ದರೆ ಅದು ಸಾಧ್ಯವಿಲ್ಲವೆಂದು ಲೂಕೋಸನ ಅಭಿಪ್ರಾಯ. ಮ್ಯಾಥ್ಯು ಕೇಳಿದ:

"ನಾವು ಸ್ವಲ್ಪ ಪ್ರಯತ್ನಪಟ್ಟರೆ?"

"ಪ್ರಯತ್ನಿಸೋಣ" ಎಂದು ಲೂಕೋಸ್ ಹೇಳಿದ.

"ಆದರೆ—"

"ಹ್ಞ! ಏನು ಆದರೆ?"

"ಅವರು ಸ್ವಲ್ಪ ಭಯಂಕರ ಜನರಲ್ಲವಾ? ಅವರು ನಮಗೆ ಗೊತ್ತಿಲ್ಲವಾ?"

"ಅದರಲ್ಲೇನು ಲೂಕೋಸ್. ಅವರೂ ನಾವೂ ಒಟ್ಟಿಗೆ ಜೀವಿಸಿದವರು. ಅವರ ಕಾಸು ನಮ್ಮ ಕೈಯಲ್ಲಿಲ್ಲವೆ? ಒಂದು ರೀತಿಯಲ್ಲಿ ನಾವು ಹೊರಗಡೆಯಲ್ಲಿ ಅವರ ಪ್ರತಿನಿಧಿಗಳಾಗಿದ್ದೆವು. ನಮ್ಮ ಪ್ರತಿನಿಧಿಗಳಾಗಿ ಅವರು ಜೈಲಿನ ಒಳಗೆ ಹೋದರು ಅಂತ ವಿಚಾರಿಸಬಾರದೆ?"

"ಅದು ಸರಿ. ಎಲ್ಲವನ್ನು ಒಪ್ಪಿದೆ. ನಾನು ಬಿಚ್ಚಿ ಹೇಳ್ತೀನಿ. ಅವರ ಸ್ವಭಾವ ಬೇರೆ. ನೋಡ್ತಿರು ಅವರು ಹೊರಗೆ ಬಂದಾಗ."

"ಹಾಗಿದ್ದರೆ ಹಾಗೇ ಆಗಿರಲಿ. ಅದರಲ್ಲೇನು? ಈ ಹಣನ ಅವರಿಗೆ ಕೊಟ್ಟು ನಾವು ಪ್ರತ್ಯೇಕವಾಗಿ ದೂರ ಇರೋಣ. ಅದಲ್ಲವೇ ನಾವು ಮಾಡಬೇಕಾದದ್ದು?"

ಲೂಕೋಸ್ ಅದನ್ನು ಒಪ್ಪಿದ: "ಕಾಂಗ್ರೆಸ್ ಪ್ರೆಸಿಡೆಂಟರನ್ನು ಕಂಡರೆ ಈ ಕಾರ್ಯ ಸಾಧನೆಯಾಗುವುದಿಲ್ಲ. ಒಂದೊಂದು ಕೇಸನ್ನೂ ಪರಿಶೀಲಿಸುವುದು ಚೀಫ್ ಸೆಕ್ರೆಟರಿ. ನಾವು ಅವರನ್ನು ಕಾಣಬೇಕಾದದ್ದು. ಆ ಕೆಲಸದಲ್ಲಿ ಒಂದು ತೊಂದರೆಯಿದೆ. ಕಾಣೋದಕ್ಕೆ ಹೋದರೆ ಏನಾದರೂ ಕಾಣಿಕೆ ಇಡಬೇಕು."

ಲೂಕೋಸ್ ಕೇಳಿದ: "ಅವನು ಯಾರು ಅಂತ ನಮಗೆ ಗೊತ್ತಿಲ್ಲವಾ?"

"ಹಾಗೆ ಬೇಕಾಗಿ ಬಂದರೆ ನಾವು ಕೊಡೋಣ."

ಲೂಕೋಸ್ ಕೇಳಿದ: "ಅವರ ಪಾಲಿನದಾಗಿ ಅಷ್ಟು ಹೋಗಲಿ. ಅಲ್ಲವಾ?"

"ಹೌದು."

ಲೂಕೋಸ್ ಮತ್ತು ಮ್ಯಾಥ್ಯೂ ಚೀಫ್ ಸೆಕ್ರೆಟರಿಯನ್ನು ಕಂಡರು. ಎಂದಿಗಿಂತ ಹೆಚ್ಚು ಪ್ರೀತಿಯಿಂದ ಅವರನ್ನು ಸ್ವಾಗತಿಸಿದ್ದು ಚೀಫ್ ಸೆಕ್ರೆಟರಿ. ಎಂದಿಗಿಂತ ಹೆಚ್ಚು ಅವರು ಉತ್ಸಾಹಿಗಳಾಗಿದ್ದರು. ಕುಶಲ ಪ್ರಶ್ನೆಯ ನಂತರ ಅವರು ಬಂದ ವಿಷಯ

ವೇನೆಂದು ಕೇಳಿದರು. ಲೂಕೋಸ್ ಮಾತನಾಡುತ್ತಿದ್ದದ್ದು. ಅವರು ಅದನ್ನೆಲ್ಲ ಕೇಳಿಸಿ ಕೊಂಡು ಕೇಳಿದರು:

"ಅದು ಈಗ ಬೇಕಾ?"

ಲೂಕೋಸ್ ಮ್ಯಾಥ್ಯೂವಿನ ಮುಖ ನೋಡಿದ.

ಬೇಕು ಎಂದಾಗಿತ್ತು ಮ್ಯಾಥ್ಯೂವಿನ ಆಗ್ರಹ. ಮ್ಯಾಥ್ಯೂ ಹೇಳಿದ: "ಸ್ವಲ್ಪ ಲೆಕ್ಕಾಚಾರ ತೀರಿಸೋದಿದೆ. ಅದನ್ನು ಮುಗಿಸಿಕೊಳ್ಳಬಹುದಲ್ಲ."

ಕೇಶವ ಪಿಳ್ಳೆ ಹೇಳಿದರು: "ಸರಿ, ಆಗಲಿ. ಆದರೆ ಸ್ವಲ್ಪ ತೊಂದರೆಯಾಗ ಬಹುದು. ನಾನು ಮುನ್ಸೂಚನೆ ಕೊಟ್ಟಿರ್ತೇನೆ."

ಅವರು ಸ್ವಲ್ಪ ಅರ್ಥವತ್ತಾಗಿ ಹೇಳಿದರು:

"ಮ್ಯಾಥ್ಯೂವಿಗೇ ತೊಂದರೆಯಾಗಬಹುದು."

ಆದರೂ ಆ ಕೆಲಸ ಆಗಬೇಕು ಎಂದು ಮ್ಯಾಥ್ಯೂವಿನ ಅಭಿಪ್ರಾಯ. ಒಂದು ಕೆಲಸ ಅದೆಷ್ಟು ಗೌಣವಾದರೂ ಕೇಳಿದ ಕೂಡಲೇ ಒಪ್ಪಿಬಿಡುವುದು ಕೇಶವ ಪಿಳ್ಳೆಯ ಜೀವನ ದಲ್ಲಿ ಇದುವರೆಗೆ ಬಂದಿಲ್ಲ. ಇಂದು ಹಾಗಾದದ್ದು ಒಂದು ವೇಳೆ ಬದಲಾಯಿಸಿದ ಪರಿಸರದ ಕಾರಣವಾಗಿರಬೇಕು ಎಂದು ಲೂಕೋಸ್‌ಗೂ ಮ್ಯಾಥ್ಯೂವಿಗೂ ತೋರಿತು.

ಅನಂತರ ಅವರು ಊರಿನ ವಿಷಯ ಮಾತನಾಡಿದರು. ಆ ಮಾತುಕತೆ ಮ್ಯಾಥ್ಯೂ ಲೂಕೋಸ್‌ನ ಉದ್ಯೋಗವನ್ನು ಕುರಿತದ್ದಾಗಿತ್ತು. ಅವರಿಗೆ ಹೊಸ ಕೆಲಸ ಯಾವುದೂ ಇಲ್ಲ. ಹೊಸ ಸರ್ಕಾರ ರೂಪುಗೊಳ್ಳುವ ವರೆಗೆ ಯಾವುದನ್ನೂ ನಿರೀಕ್ಷಿಸುವಂತಿಲ್ಲ. ಹೈಡ್ರೋ ಇಲೆಕ್ಟ್ರಿಕ್ ಪ್ರಾಜೆಕ್ಟಿನಲ್ಲಿ ಮಾಡಿ ತೀರಿಸಬೇಕಾಗುವ ವರೆಗಿನ ಕೆಲಸಗಳು, ಯಾರೂ ನೋಡಿಕೊಳ್ಳುವವರಿಲ್ಲದೆ ನಷ್ಟವಾಗಿದ್ದುವು. ಎಲ್ಲವೂ ನಷ್ಟಗೊಂಡಿತ್ತು. ಇನ್ನು ಮೇಲೆ ಪುನಃ ಮೊದಲಿನಿಂದ ಪ್ರಾರಂಭ ಮಾಡಬೇಕಾಗಿತ್ತು. ಅಲ್ಲಿ ಒಂದು ಕಾಡು ಪ್ರದೇಶವಾಗಿ ಹೋಯಿತು ಎಂದು ಲೂಕೋಸ್ ಹೇಳಿದ. ಭಾರಿ ಹಣ ಹಾಳಾಗಿ ಹೋಯ್ತು. ಏನು ಮಾಡೋದು?

ಕೇಶವ ಪಿಳ್ಳೆ ಹೇಳಿದರು: "ಏನು ಮಾಡೋದು? ಸರ್ಕಾರದ ಕೆಲಸವಲ್ಲವೆ?"

ಇನ್ನು ಅದನ್ನು ಪುನಃ ಮುಂದುವರಿಸುವುದನ್ನು ಕುರಿತು ಮ್ಯಾಥ್ಯುವಿಗೂ ಲೂಕೋಸ್‌ಗೂ ಕೆಲವು ಅಭಿಪ್ರಾಯಗಳಿದ್ದುವು. ಸ್ವಲ್ಪ ಸ್ಥಳ ಬದಲಾಯಿಸಬೇಕು. ಮೊದಲನೆಯ ಸಲವೂ ಎರಡನೆಯ ಸಲವೂ ಅದರ ಡಿಸೈನ್ ಮಾಡಿದ ಕೆಲವು ಇಂಜಿನೀ ಯರ್‌ಗಳಿಂದ ಕೆಲವು ದೋಷಗಳುಂಟಾಗಿವೆ. ತಜ್ಞರನ್ನು ಬರಮಾಡಿ ಮೊದಲಿನಿಂದ ಕೆಲಸ ಪ್ರಾರಂಭಿಸಬೇಕು.

ಕೇಶವ ಪಿಳ್ಳೆ ಒಂದು ಸಣ್ಣ ನಗುವಿನೊಡನೆ ಹೇಳಿದರು:

"ಅದೆಲ್ಲವನ್ನೂ ಮ್ಯಾಥ್ಯು ನಿಯಮ ಸಭೆಯ ಸದಸ್ಯನಾದ ಮೇಲೆ ಆಲೋಚನೆ ಮಾಡೋಣ. ಇಲ್ಲದೆ ಇದ್ದರೆ ಆ ವಿಭಾಗದ ಮಂತ್ರಿಯೋ ಆದಾಗ ನಡೆಸಿದರಾಯ್ತು".

ಮ್ಯಾಥ್ಯುವೂ ಲೂಕೋಸೂ ಏನೂ ಮಾತನಾಡಲಿಲ್ಲ. ಚೀಫ್ ಸೆಕ್ರೆಟರಿಯ ಮಾತಿಗೆ ಥಟ್ಟನೆ ಉತ್ತರ ಹೇಳಲು ಅವರಿಗೆ ಏನೂ ಹೊಳೆಯಲಿಲ್ಲ. ಕೇಶವ ಪಿಳ್ಳೆ ಹೇಳಿದರು:

"ಅಲ್ಲ, ನಾನಂ ತಮಾಷೆಗೆ ಹೇಳಿದ್ದಲ್ಲ. ಎಂ. ಎಲ್. ಎ. ಆಗಬೇಕು. ಮಂತ್ರಿಯೇ ಆದರೇನಂತೆ?"

ಮ್ಯಾಥ್ಯು ಒಮ್ಮೆಯೂ ಯೋಚಿಸದ ವಿಷಯ ಅದು. ಅಷ್ಟೆಲ್ಲ ಆತನ ಅಭಿಲಾಷೆ ಬೆಳೆದಿರಲಿಲ್ಲ. ಕೇಶವ ಪಿಳ್ಳೆ ಅನಂತರ ಗಂಭೀರವಾಗಿ ಹೇಳಿದರು:

"ಯಾಕೆ ಸಾಧ್ಯವಿಲ್ಲ ಮ್ಯಾಥ್ಯು? ನಿಮಗೆ ಒಬ್ಬ ಮಂತ್ರಿಯಾಗುವ ಯೋಗ್ಯತೆ ಯಿಲ್ಲವೆ?"

ಮ್ಯಾಥ್ಯು ಸ್ವಲ್ಪ ಸಂಕೋಚದಿಂದ ತನ್ನ ಸ್ಥಿತಿಯನ್ನು ತಿಳಿಸಿದ: "ನಾನು ಅದನ್ನು ನನ್ನ ಜೀವನದಲ್ಲಿ ಆಲೋಚನೆ ಮಾಡಿಲ್ಲ. ಕಾಂಗ್ರೆಸ್ ಕಾರ್ಯಕರ್ತನಾಗಿದ್ದೆ. ಯಾವು ದಾದರೂ ಒಂದು ಉದ್ದೇಶ ಮನಸ್ಸಿನಲ್ಲಿಟ್ಟುಕೊಂಡಲ್ಲ ಆ ಸಂಸ್ಥೆಗೆ ಸೇರಿದ್ದು."

"ಅದು ಸರಿಯಿರಬಹುದು" ಎಂದು ಚೀಫ್ ಸೆಕ್ರೆಟರಿ ಹೇಳಿದರು. "ಆದರೆ ಅದ ರಿಂದ ಎಂ. ಎಲ್. ಎ. ಆಗಬಾರದು ಅಂತಿದೆಯಾ?"

ಲೂಕೋಸ್ ಹೇಳಿದ: "ಎಂ. ಎಲ್. ಎ.ಗಳು, ಮಂತ್ರಿಗಳು ಆಗುವುದರಲ್ಲಿ ಹೆಚ್ಚು ಭಾಗ ಮ್ಯಾಥ್ಯುವಿನ ಹಾಗೆ ಯೋಗ್ಯತೆಯುಳ್ಳವರಾಗಿರೋದಿಲ್ಲ. ಈಗ ಕೆಲವು ಹೆಸರುಗಳು ಕೇಳಿಬರ್ತಿವೆ. ಅವರೇ ಅಭ್ಯರ್ಥಿಗಳಾಗಿದ್ದಲ್ಲಿ ಅವರಿಗಿಂತ ಮ್ಯಾಥ್ಯು ಎಷ್ಟೋ ಮೇಲು."

ಕೇಶವ ಪಿಳ್ಳೆ ಅದನ್ನು ಒಪ್ಪಿಕೊಂಡರು. ಮ್ಯಾಥ್ಯುವಿನ ಮನಸ್ಸಿನೊಳಗೆ ಸಣ್ಣ ಹುಳುವಿನ ಹಾಗೆ ಆಶೆ ಹೊಕ್ಕಂತೆ ತೋರಿತು. ಅಸಹಾಯಕತೆಯಿಂದ ಮ್ಯಾಥ್ಯು ಹೇಳಿದ: "ನನ್ನನ್ನು ಅಭ್ಯರ್ಥಿಯಾಗಿ ಕಾಂಗ್ರೆಸ್ ಅಂಗೀಕರಿಸುತ್ತಾ? ನಾನು ಸರ್ಕಾರದ ಚಪ್ಪಲಿ ನೆಕ್ಕುವ ಮನುಷ್ಯನಲ್ಲವೇ. ನನ್ನ ಹೆಸರನ್ನು ಸೂಚಿಸೋದಕ್ಕೆ ಯಾರಿದ್ದಾರೆ?"

ಕೇಶವ ಪಿಳ್ಳೆ ಗಟ್ಟಿಯಾಗಿ ನಕ್ಕರು. ಅವರು ಕೇಳಿದರು: "ಅದೇನು ಮಿ॥ ಮ್ಯಾಥ್ಯು ಹಿಗಿರುವ ತೊಂದರೆ? ಕಾಂಗ್ರೆಸ್‌ನ ಒಬ್ಬ ಅಭ್ಯರ್ಥಿಯಾಗಿ ನಿಮ್ಮನ್ನು ನಿಲ್ಲಿಸಬೇಕು ಅಂತ ತೀರ್ಮಾನಿಸಿತು ಎಂದಿಟ್ಟುಕೊಳ್ಳಿ. ನೀವು ಅದನ್ನು ಸ್ವೀಕರಿಸೋದಕ್ಕೆ ತಯಾರಾಗಿ ದ್ದೀರಾ?"

ಮ್ಯಾಥ್ಯುವಿಗೆ ನಂಬಿಕೆ ಬರಲಿಲ್ಲ. ಇದೆಲ್ಲ ತಮಾಷೆ ಮಾಡುವುದಕ್ಕಾಗಿ ಎಂದು ಆತನ ನಂಬಿಕೆ. ಚೀಫ್ ಸೆಕ್ರೆಟರಿಯ ಈಗಿನ ಉತ್ಸಾಹದಿಂದ ಉದ್ಭವಿಸಿದ ಕೆಲವು ತಮಾಷೆಯ ಮಾತುಗಳು ಮಾತ್ರ ಎನ್ನಿಸಿತು. ಮ್ಯಾಥ್ಯು ಹೇಳಿದ: "ಓ! ಅದೊಂದೂ ನಡೆಯೋದಲ್ಲ."

"ಅಯ್ಯೊ ಮನುಷ್ಯ, ನಿಜವಾಗಿಯೂ ಕೇಳ್ತಿದ್ದೇನೆ."

ಲೂಕೋಸ್ ಮ್ಯಾಥ್ಯುವಿಗೆ ಧೈರ್ಯ ಕೊಟ್ಟ: "ಒಪ್ಪಿಗೆಯಿದ್ದರೆ ಅದನ್ನು ಹೇಳು. ಸಾಹೇಬರು ಸುಮ್ಮನೆ ತಮಾಷೆ ಮಾಡ್ತಾರಾ? ಅದು ಅವರ ಸ್ವಭಾವವಾ?"

ಸ್ವಲ್ಪ ಬಿಳುಚಿಕೊಂಡ ಮುಖದಲ್ಲಿ ನಗು ತಂದುಕೊಂಡು, ಆದರೂ ವಿಶ್ವಾಸ ಮೂಡದೆ ಮ್ಯಾಥ್ಯು ಹೇಳಿದ:

"ನನಗೆ ಒಪ್ಪಿಗೆ."

ತುಂಬು ಗಾಂಭೀರ್ಯದಿಂದ ಕೇಶವ ಪಿಳ್ಳೆ ಹೇಳಿದರು:

"ಹಾಗಿದ್ದರೆ ನೀವು ಖಂಡಿತ ಜಯಿಸೋದಕ್ಕೆ ಸಾಧ್ಯತೆಯಿರುವ ಒಂದು ನಿಯೋಜಕ ಮಂಡಲದಲ್ಲಿ ಕಾಂಗ್ರೆಸ್ಸಿನ ಒಬ್ಬ ಅಭ್ಯರ್ಥಿ."

ಮ್ಯಾಥ್ಯುವೂ ಲೂಕೋಸೂ ಮೌನವಾಗಿದ್ದರು.

ಕೇಶವ ಪಿಳ್ಳೆ ಕೇಳಿದರು: "ಏನು? ನಂಬಿಕೆ ಇಲ್ಲವೇನೊ?"

"ಅಲ್ಲ, ನಂಬಿಕೆಯಿದೆ."

ಕೇಶವ ಪಿಳ್ಳೆ ಹೇಳಿದರು: "ಹಾಗಿದ್ದರೆ ಸಿದ್ಧಮಾಡಿಕೊಳ್ಳಿ. ಸ್ವಲ್ಪ ಹಣ ಖರ್ಚು ಮಾಡಬೇಕಾಗುತ್ತೆ. ಅಷ್ಟ ಮಾತ್ರ."

ಲೂಕೋಸ್ ಹೇಳಿದ:

"ಎಷ್ಟು ಬೇಕಾಗಬಹುದೋ?"

ಮ್ಯಾಥ್ಯುವಿಗೆ ಧೈರ್ಯ ಬಂದಿತು:

"ಅದೆಷ್ಟಾದರೂ ಆಗಲಿ, ಮಾಡೋಣ."

ಲೂಕೋಸ್‌ಗೆ ಅದನ್ನು ಕುರಿತು ಒಂದು ಅಂದಾಜು ಬೇಕಾಗಿತ್ತು.

ಕೇಶವ ಪಿಳ್ಳೆ ಹೇಳಿದರು:

"ಲೂಕೋಸ್ ಹಣ ಅಂತ ಹೇಳಿದರೆ ಹಿಂದುಳೀತಾನೆ. ಚಿಂತೆಯಿಲ್ಲ. ಹಣ ಇಲ್ಲದೆ ಇದ್ರೆ ನಾನು ಕೊಡ್ತೇನೆ."

ಲೂಕೋಸ್‌ಗೂ ಮ್ಯಾಥ್ಯುಗೂ ನಿಜವಾಗಿಯೂ ಏನೂ ಅರ್ಥವಾಗಲಿಲ್ಲ. ಚೀಫ್ ಸೆಕ್ರೆಟರಿ ಕಾಂಗ್ರೆಸ್ ಸ್ಥಾನಾರ್ಥಿಗಳನ್ನು ನಿಶ್ಚಯಿಸುತ್ತಾರೆ. ಇದೆಂತಹ ಮಾಯ ಮಂತ್ರವೋ?

ಕೇಶವ ಪಿಳ್ಳೆ ಕೇಳಿದರು: "ಹಾಗಿದ್ದರೆ ನಿರ್ಧಾರ ಆಯ್ತಲ್ಲ?"

ಮ್ಯಾಥ್ಯು ಲೂಕೋಸ್ ಇಬ್ಬರೂ ಒಟ್ಟಾಗಿ ಹೇಳಿದರು:

"ಆಯ್ತು."

ಕೇಶವ ಪಿಳ್ಳೆ ಹೇಳಿದರು: "ಆದರೆ ಇದು ಸಂಪೂರ್ಣವಾಗಿ ಗುಟ್ಟಾಗಿರಬೇಕು."

ಇಬ್ಬರೂ ಆಣೆಯಿಟ್ಟು ಅದನ್ನು ಒಪ್ಪಿದರು.

ಮ್ಯಾಥ್ಯು ಲೂಕೋಸ್ ಹೊರಟು ಹೆಜ್ಜೆಯಿರಿಸಿದಾಗ ಕೇಶವ ಪಿಳ್ಳೆ ಹೇಳಿದರು:

"ಬಹುಶಃ ಮ್ಯಾಥ್ಯು ಮಂತ್ರಿ. ಲೂಕೋಸ್ ತಿರುವಾಂಕೂರ್ ಕಾಂಗ್ರೆಸ್ ಪ್ರೆಸಿಡೆಂಟ್."

ನಡೆದುಹೋಗುತ್ತಿದ್ದ ಮ್ಯಾಥ್ಯುವೂ ಲೂಕೋಸೂ ಸ್ವಲ್ಪ ಹೊತ್ತು ಏನೂ ತೋರದೆ ನಿಂತುಕೊಂಡಿದ್ದರು.

ಮ್ಯಾಥ್ಯು ಮಂತ್ರಿಸ್ಥಾನದ, ಲೂಕೋಸ್ ಪ್ರೆಸಿಡೆಂಟ್ ಸ್ಥಾನದ ಸ್ವಪ್ನ ಕಾಣುತ್ತಿದ್ದಿರಬೇಕು.

ಅಂದು ಅದೇ ಮೊದಲಾಗಿ ಕಾಣಿಕೆ ತೆಗೆದುಕೊಂಡು ಹೋಗಿ ಅದನ್ನು ಕೊಡದೇ ಹಿಂದಿರುಗಿ ಬಂದದ್ದು. ಅದಕ್ಕೆ ಸಂದರ್ಭವೇ ಬರಲಿಲ್ಲ.

ಎಷ್ಟೋ ಹೊತ್ತಾದ ಮೇಲೆ ಲೂಕೋಸ್ ಹೇಳಿದ: "ಗೋಪೀಗೂ ನಾಯರ್‌ಗೂ ನಾವು ಎಷ್ಟು ಹಣ ಕೊಡಬೇಕಾದದ್ದಿದೆ?"

"ಇಪ್ಪತ್ತೈದು ಸಾವಿರ."

ಲೂಕೋಸ್ ಒಂದು ಸಲ "ಹ್ಞು" ಎಂದ.

●

# [31]

## ಮಂತ್ರಿ ಸಭೆ

ಕೆಲವು ತಿಂಗಳು ಕಳೆದುವು. ಆ ಮಧ್ಯೆ ಚರಿತ್ರಾರ್ಹವಾದ ಕೆಲವು ಘಟನೆಗಳು ನಡೆದುವು. ತಿರುವಾಂಕೂರಿನಲ್ಲಿ ಓಟಿನ ಪ್ರಾಯಕ್ಕೆ ಬಂದವರು ಅವರ ಪ್ರತಿನಿಧಿಗಳನ್ನು ಆರಿಸಿದರು. ಮೊದಲನೆಯ ಪ್ರಜಾ ಸರ್ಕಾರ ಆಡಳಿತವನ್ನು ಕೈಗೆತ್ತಿಕೊಂಡಿತು. ಮಿ॥ ಮ್ಯಾಥ್ಯು ಪಿ. ಡಬ್ಲ್ಯು. ಡಿ. ವಿಭಾಗದ ಮಂತ್ರಿ. ಚೀಫ್ ಸೆಕ್ರೆಟರಿ ಆಲೋಚಿಸಿದ್ದ ಕಾರ್ಯವನ್ನು ಸರಿಯಾಗಿ ಮಾಡಿದರು.

ಮಿ॥ ಮ್ಯಾಥ್ಯುವಿನ ಔದ್ಯೋಗಿಕ ವಸತಿಗೆ ಒಂದು ದಿನ ಬೆಳಗ್ಗೆ ಒಬ್ಬ ಸಂದರ್ಶಕ ಬಂದ. ಪ್ರೈವೇಟ್ ಸೆಕ್ರೆಟರಿಯ ಹತ್ತಿರ ಮಂತ್ರಿಗಳನ್ನು ಕಾಣಲು ಸಾಧ್ಯವೇ ಎಂದು ಕೇಳಿದ. ಹೆಸರು ಬರೆದುಕೊಡುವಂತೆ ಅವರು ಹೇಳಿದರು. ಆ ಸಂದರ್ಶಕ ತನ್ನ ಹೆಸರನ್ನು ಒಂದು ತುಂಡು ಕಾಗದದಲ್ಲಿ ಬರೆದು ಕೊಟ್ಟ. ಆ ಹೆಸರು 'ಗೋಪಿ.'

ದಫೇದಾರ್ ಮೇಲಿನ ಅಂತಸ್ತಿಗೆ ಹೋದ. ಮಂತ್ರಿ ಆಗ ಒಂದು ಕಪ್ಪು ಕಾಫಿ ಕುಡಿಯುತ್ತಿದ್ದರು. ಕುರ್ಚಿಯ ಒಂದು ಕೈ ಮೇಲೆ ಹೆಂಡತಿ ಕುಳಿತುಕೊಂಡು ಕಾಫಿ ಬಗ್ಗಿಸಿ ಕೊಡುತ್ತಿದ್ದಳು. ಆ ಹೊತ್ತಿನಲ್ಲಿ ಒಳಗೆ ಹೋಗುವುದು ಸರಿಯಲ್ಲವೆಂದು ತೋರಿ, ದಫೇದಾರ್ ಒಳಗೆ ಹೋಗಲಿಲ್ಲ. ಅವನು ಕೆಳಗೆ ಬಂದು ಸಂದರ್ಶಕನ ಹತ್ತಿರ ಸ್ವಲ್ಪ ಹೊತ್ತು ಕಳೆಯಲಿ ಎಂದ. ಪುನಃ ಸ್ವಲ್ಪ ಹೊತ್ತು ಗೋಪಿ ಕಾದಿದ್ದ. ಅಷ್ಟರಲ್ಲಿ ಮುಂದಾಳುಗಳಾದ ಮೂರು ನಾಲ್ಕು ಜನ ಖಾದಿ ವಸ್ತ್ರಧಾರಿಗಳು ಒಂದು ಕಾರಿನಲ್ಲಿ ಅಲ್ಲಿಗೆ ಬಂದರು. ಆಫೀಸಿನಲ್ಲಿದ್ದವರೆಲ್ಲ ಗೌರವಪೂರ್ವಕವಾಗಿ ಎದ್ದು ನಿಂತರು. ಅವರು ಆಡಳಿತ ವಿಷಯದಲ್ಲಿ ಮುಖಂಡರಾಗಿದ್ದರೆಂದು ತೋರುತ್ತದೆ. ಅದರಲ್ಲಿ ಒಬ್ಬ ಕೇಳಿದ: "ಮೇಲಿಲ್ಲವೆ?"

ಪ್ರೈವೇಟ್ ಸೆಕ್ರೆಟರಿ ವಿನಯದಿಂದ "ಇದ್ದಾರೆ" ಎಂದು ಹೇಳಿದರು.

ಅವರು ವಿಸಿಟಿಂಗ್ ಕಾರ್ಡು ಕೊಡದೆ ಮೇಲೆ ಹೋದರು.

ಗೋಪಿಯ ಶರೀರದ ರೋಮಗಳೆಲ್ಲ ನೆಟ್ಟಗೆ ನಿಂತುವು. ಸಂದರ್ಭಕ್ಕೆ ಹೊಂದಿಕೆಯಾಗುವ ಘೋಷಣೆ ಅವನ ತುದಿನಾಲಗೆಗೆ ಬಂದಿತು. ಅಂತು ಆತ ಅದನ್ನು ತಡೆದುಕೊಂಡ. ಸ್ವಲ್ಪ ಸಮಯ ಬಿಟ್ಟು ಆ ಆವೇಶವನ್ನು ತಡೆದುಕೊಂಡು ಗೋಪಿ ಕೇಳಿದ:

"ಅವರು ಯಾರು?"

ಕ್ಷಮಾಯಾಚನೆ ಬೆರೆತ ಸ್ವರದಲ್ಲಿ ಪ್ರೈವೇಟ್ ಸೆಕ್ರೆಟರಿ ಹೇಳಿದರು: "ಅದು ಈಗಿನ

ಕಾಂಗ್ರೆಸ್ ಪ್ರೆಸಿಡೆಂಟು ಉಲಹನ್ನಾನ್. ಮೊದಲು ಕ್ಯಾಥೊಲಿಕ್ ಕಾಂಗ್ರೆಸ್ ಪ್ರೆಸಿಡೆಂಟಾಗಿದ್ದವರು."

ಉಲಹನ್ನಾನ್! ಗೋಪಿ ಆ ಹೆಸರು ಕೇಳಿದ್ದಾನೆ. ಒಂದು ದೊಡ್ಡ ತೋಟದ ಯಜಮಾನ. ಚಳವಳಿಯ ಕಾಲದಲ್ಲಿ ಪಿರಮಿಡ್‌ನಲ್ಲಿ ಒಂದು ಕಾಂಗ್ರೆಸ್ ಮೀಟಿಂಗನ್ನು ಚದುರಿಸಿದ್ದು ಆತ. ತೋಟದಲ್ಲಿದ್ದ ತಮಿಳರಾದ ಕಾರ್ಮಿಕರಿಂದ ಕಲ್ಲು ಹೊಡೆಸಿದ. ಅಂದು ಒಂದು ಕಲ್ಲಿನೇಟು ಗೋಪಿಗೂ ಬಿದ್ದಿದೆ. ಅನಂತರವೂ ಮಿ॥ ಉಲಹನ್ನಾನನ್ನು ಕುರಿತು ಗೋಪಿಗೆ ಗೊತ್ತು. ಸ್ವತಂತ್ರ ತಿರುವಾಂಕೂರು ಇರಬೇಕೆಂದು ಇಷ್ಟು ವೀರಾವೇಶದಿಂದ ಮತ್ತೊಬ್ಬ ವಾದಿಸಿಲ್ಲ. ಮತ್ತೂ ಸ್ವಲ್ಪ ಹೊತ್ತು ಕಳೆಯಿತು. ಗೋಪಿ ಪ್ರೈವೇಟ್ ಸೆಕ್ರೆಟರಿಯನ್ನು ಕಂಡು ಹೇಳಿದ: "ಆ ತುಂಡು ಕಾಗದವನ್ನು ತೆಗೆದುಕೊಂಡು ಹೋಗಿ ಕೊಡಬಾರದಾಗಿತ್ತು."

ವಿನಯದಿಂದ ಪ್ರೈವೇಟ್ ಸೆಕ್ರೆಟರಿ ಉತ್ತರಿಸಿದ್ದು:

"ಹೋದವರು ಬಂದಿಲ್ಲ. ಅದರ ನಂತರವೇ ಮತ್ತೊಬ್ಬ ಸಂದರ್ಶಕರು ಬಂದಿರುವ ವಿಷಯ ತಿಳಿಸುವುದು.........

ದಫೇದಾರ್ ಗೋಪಿಗೆ ಹೇಳಿದ:

"ಇನ್ನು ಕಾಯ್ತಾ ಕುಳಿತುಕೊಳ್ಳಬೇಡಿ ಸಾರ್! ಅವರು ಬಂದರೆ ಈಗಲೇ ಹೋಗೋದಿಲ್ಲ. ನಾಳೆ ಬೆಳಗ್ಗೆ ಬನ್ನಿ."

ಪ್ರೈವೇಟ್ ಸೆಕ್ರೆಟರಿಯೂ ಹಾಗೆಯೇ ಹೇಳಿದರು.

ಎಷ್ಟು ಹೊತ್ತು ಕಾದರೂ ಚಿಂತೆಯಿಲ್ಲ, ಕಂಡೇ ಹೋಗಬೇಕು ಎಂದು ಗೋಪಿ ತೀರ್ಮಾನಿಸಿದ್ದದ್ದು. ಆಗ ದಫೇದಾರ್ ಅಲಕ್ಷ್ಯವಾಗಿ ಹೇಳಿದ: "ಹಾಗಾದರೆ ಕುಳಿತುಕೊಳ್ಳಿ."

ಸಂದರ್ಶಕರಾಗಿ ಮುಖಂಡರು ಪದ್ಧತಿಯಂತೆ ಹೆಚ್ಚು ಹೊತ್ತು ಕುಳಿತಿರಲಿಲ್ಲ. ಅವರು ಹೊರಟುಹೋದರು. ದಫೇದಾರ್ ಮೇಲೆ ಚೀಟಿ ತೆಗೆದುಕೊಂಡು ಹೋದ.

"ಗೋಪಿ."

ಮಿ॥ ಮ್ಯಾಥ್ಯುಗೆ ಒಳಗೇ ನಡುಕವುಂಟಾಯಿತು. ಅದೊಂದು ಭಯವಾಗಿರಲಿಲ್ಲ. ಹಾಗಾದರೆ ಭಯದಿಂದ ಕೂಡಿದ ನಡುಕವಾಗಿರಲಿಲ್ಲವೇ ಅದು? ಇನ್ನು ಒಮ್ಮೆಯೂ ಗೋಪಿಯನ್ನು ಕಾಣುವುದೋ ಎದುರಿಸುವುದೋ ಜೀವನದಲ್ಲಿ ಬರುತ್ತದೆ ಎನ್ನುವ ಚಿಂತೆ ಆತನಿಗಿರಲಿಲ್ಲ. ಹಾಗೆ ಆತ ನೆನಸಿಕೊಂಡಿರಲಿಲ್ಲ. ಅವರು ಒಮ್ಮೆಯೂ ಹೊಂದಿಕೆಯಾಗದ ಎರಡು ದಾರಿಗಳಲ್ಲಿ ಹೋದವರು. ಥಟ್ಟನೆ ಆ ಮನುಷ್ಯ ಮ್ಯಾಥ್ಯುವಿನ ಮುಂದೆ ಆವಿರ್ಭವಿಸಿದ್ದ. ಜೈಲಿನಿಂದ ಬಿಡುಗಡೆಯಾದ ನಂತರ ನಾಯರನ್ನೂ ಗೋಪಿಯನ್ನೂ ಒಮ್ಮೆಯೂ ಮ್ಯಾಥ್ಯು ಕಂಡಿರಲಿಲ್ಲ. ಅದಕ್ಕೆ ಅವಕಾಶವುಂಟಾಗಿರಲಿಲ್ಲ. ಜೈಲಿನಿಂದ ಹೊರಗೆ ಬಂದ ದಿನವೇ ಅವರಿಬ್ಬರೂ ಅವರ ನಿಜವಾದ

ಬಣ್ಣವನ್ನು ಹೊರಗೆ ತೋರಿಸಿದರು. ಅವರು ಕಾಂಗ್ರೆಸ್ಸನ್ನು ಅತಿ ಕಠಿಣವಾಗಿ ವಿಮರ್ಶಿಸಿದರು. ಅನಂತರ ಚುನಾವಣೆಯ ಕಾಲದಲ್ಲಿ ಕಾಂಗ್ರೆಸ್ಸಿನಿಂದ ಬಿಟ್ಟುಹೋದ ತೀವ್ರವಾದಿಗಳೊಂದಿಗೆ ಗುಂಪುಕಟ್ಟಿ ಅಭ್ಯರ್ಥಿಗಳಾಗಿ ನಿಂತರು. ಮಿ॥ ಮ್ಯಾಥ್ಯುವಿನ ನಿಯೋಜಕ ಮಂಡಲದಲ್ಲಿ ಗೋಪಿ ತುಂಬ ತೊಂದರೆ ಕೊಟ್ಟ. ಅವರನ್ನುವೈಯುಕ್ತಿಕವಾಗಿ ಟೀಕಿಸಿದರು. ಅನೇಕ ಭಾಷಣ ಮಾಡಿದರು. ಟೀಕೆಗಳನ್ನು ಪ್ರಕಟಿಸಿದರು. ಮಿ॥ ಮ್ಯಾಥ್ಯುವಿಗೆ ತಮಗೆ ಸಾಧ್ಯವಿದ್ದಷ್ಟು ಕಾಟ ಕೊಟ್ಟರು. ಅದು ಒಂದು ವೈಯುಕ್ತಿಕ ದ್ವೇಷವಾಗಿ ವ್ಯಾಖ್ಯಾನಿಸಬಹುದಾದ ಘಟ್ಟವನ್ನು ತಲಪಿತು. ಅದರದೇ ಆದ ಅವಿಶ್ವಾಸವೂ ಚುನಾವಣೆಯ ಕಾಲದಲ್ಲುಂಟಾಯಿತು. ಅಂದು ಅಷ್ಟು ಮಾತ್ರ ದ್ವೇಷದ ವಿಷವುಂಟಾದದ್ದು ಒಳ್ಳೆಯದಾಯಿತು. ಅಂತು ಮಿ॥ ಮ್ಯಾಥ್ಯುಗೆ ಅತ್ಯಧಿಕ ನೋವಾಯಿತು. ಆಗ ಅತ್ತದ್ದೂ ಉಂಟು. ಗೋಪಿಗೆ ಮಿ॥ ಮ್ಯಾಥ್ಯುವನ್ನು ಪರಾಜಯ ಪಡಿಸುವುದು ಒಂದು ಜೀವನದ ಗುರಿಯಾಗಿರಬೇಕು. ಎಷ್ಟು ಆಲೋಚಿಸಿದರೂ ಆ ವೈಯುಕ್ತಿಕವಾದ ದ್ವೇಷದ ಕಾರಣವನ್ನು ಕಂಡುಹಿಡಿಯಲು ಯಾರಿಗೂ ಸಾಧ್ಯವಾಗಿರಲಿಲ್ಲ. ನಾಯರ್ ಮತ್ತು ಗೋಪಿಯ ಹಣವನ್ನು ಮ್ಯಾಥ್ಯು ಮತ್ತು ಲೂಕೋಸ್ ಕೊಟ್ಟಿರಲಿಲ್ಲ. ಅದನ್ನು ಕೊಡಕೂಡದೆಂದು ಲೂಕೋಸ್ ನಿಶ್ಚಯಿಸಿದ. ಲೂಕೋಸನ ಅಭಿಪ್ರಾಯದಲ್ಲಿ ಆ ಹಣ ಕೊಡುವುದು ಮ್ಯಾಥ್ಯುವಿನ. ಲೂಕೋಸನ ಕತ್ತು ಕತ್ತರಿಸಿಕೊಳ್ಳುವುದಕ್ಕಾಗಿ. ಒಂದು ವೇಳೆ ನೇರವಾಗಿ ಕಂಡು ಆ ಹಣವನ್ನು ಕೊಟ್ಟಿದ್ದಿದ್ದಲ್ಲಿ ದ್ವೇಷ ಕಡಮೆಯಾಗುತ್ತಿತ್ತು ಎಂದು ಮಿ॥ ಮ್ಯಾಥ್ಯುವಿಗೆ ಎಷ್ಟೋ ಸಲ ಅನ್ನಿಸಿತ್ತು. ಗೋಪಿಯ ಟೀಕೆಗಳಲ್ಲೂ ಭಾಷಣಗಳಲ್ಲೂ ಅದನ್ನೊಂದು ಕೊಳ್ಳೆಹೊಡೆದಂತೆ ಬಣ್ಣಿಸಲಾಗಿತ್ತು.

ಮಿ॥ ಮ್ಯಾಥ್ಯುವಿನ ನಡುಕ ಹೋಯಿತು. ಆ ಹಳೆಯ ಸ್ನೇಹಿತನನ್ನು ಎರಡೂ ಕೈಗಳನ್ನು ನೀಡಿ ಸ್ವಾಗತಿಸಿದರೇನೆಂದು ಆತನಿಗೆ ಅನ್ನಿಸಿತು. ಒಂದು ಆಲಿಂಗನದಲ್ಲಿ ಎಲ್ಲ ಸಿಟ್ಟೂ ಬಹುಶಃ ಕಡಿಮೆಯಾಗಬಹುದು. ರಾಜಕೀಯ ವಿರೋಧಗಳೂ ಅಭಿಪ್ರಾಯ ವ್ಯತ್ಯಾಸಗಳೂ ಹಾಗಿರಲಿ. ಅದರಿಂದ ಏನು ಸಂಭವಿಸುವುದಕ್ಕಾಗಿ? ಅನಂತರ ಆ ಹಣ ಕೊಡುವುದು. ತತ್ಕಾಲದಲ್ಲಿ ಅಷ್ಟು ಹಣ ಕೈಯ್ಯಲ್ಲಿಲ್ಲದಿದ್ದರೋ? ಸಾಧ್ಯವಾದಷ್ಟು ಬೇಗ ಆ ಹಣ ಮಾಡಿಕೊಡಬೇಕು......... ಬೇಗನೆ ಮತ್ತೊಂದು ಚಿಂತೆ ಶಕ್ತಿಯುತವಾಗಿ ಆತನನ್ನು ಮೃದುಗೊಳಿಸಿತು. ಅದು ಚುನಾವಣೆ ಕಾಲದ ಅನುಭವಗಳಿಂದ ಉಂಟಾದದ್ದು. ಆ ದ್ವೇಷ ರಾಜಕೀಯದ ದ್ವೇಷವಾಗಿರಲಿಲ್ಲ. ಗೋಪಿ ಹೇಳಿದ್ದ: "ಸ್ವಾತಂತ್ರ್ಯದ ಬಳಿಕ ಕಾಂಗ್ರೆಸಿಗೆ ಸೇರಿಕೊಂಡ ಹಕ್ಕಿಗೆ ಸಂಬಂಧಿಸಿದಂತೆ ಇದೊಂದು ಬಹು ಮುಖ್ಯ ಉದಾಹರಣೆ" ಎಂದು. ಈ ದ್ವೇಷ ವೈಯುಕ್ತಿಕವಾದದ್ದು ಅಷ್ಟೆ. ರಾಜಕೀಯವಾದ ಅಭಿಪ್ರಾಯ ವ್ಯತ್ಯಾಸವನ್ನೂ ವೈಯುಕ್ತಿಕವಾದ ದ್ವೇಷವನ್ನೂ ಪ್ರತ್ಯೇಕಿಸುವುದಕ್ಕಾಗುವುದಿಲ್ಲವೆಂದು ಗೋಪಿ ಎಷ್ಟೋ ಸಲ ಹೇಳಿದ್ದ. ಆಗ ಆಲಿಂಗನದಲ್ಲಿ ಭರವಸೆಯಿಡಬಹುದೇ? ಒಂದು ವೇಳೆ ಆಲಿಂಗನದ ಮಧ್ಯೆ ಶೇರ್‌ಖಾನನ ಚರಿತ್ರೆಯಂತೆ

ಒಂದು ಕಠಾರಿಯಿಂದ ಇರಿದರೊ? ಕಾಣಲು ಬಂದ ಒಬ್ಬ ಪರಿಚಯಸ್ಥನನ್ನು, ದೀರ್ಘ ಕಾಲದ ಪರಿಚಯ ಮಾತ್ರವಲ್ಲ ತುಂಬ ವಿಶ್ವಾಸವಿರುವ ಒಬ್ಬ ಸ್ನೇಹಿತನಿಗೇ ಹಾಗೇ ಹೇಳಿಕಳುಹಿಸಲು ಸಾಧ್ಯವೇ?

ದಫೇದಾರ್ ಕಾದು ನಿಂತಿದ್ದ. ಲೂಕೋಸ್ ಒಂದು ಹೋಟೆಲಿನಲ್ಲಿ ವಾಸಮಾಡು ತ್ತಿದ್ದ. ಒಮ್ಮೆ ಕರೆದು ಕೇಳಿದರೇನು? ಮಂತ್ರಿ ಟೆಲಿಫೋನಿನಲ್ಲಿ ಕರೆದರು. ಲೂಕೋಸ್ ಸ್ಥಳದಲ್ಲಿಲ್ಲ. ಗೋಪಿಯನ್ನು ಹೊರಗೆ ಹಾಕಬೇಕೋ ಬೇಡವೋ ಎಂದು ಕೂಡಲೇ ನಿಶ್ಚಯಿಸಬೇಕಾಗಿತ್ತು. ಅವನು ಏತಕ್ಕೆ ಬಂದಿರಬಹುದು? ಹಣಕ್ಕಾಗಿರಬಹುದೆ? ಅಥವಾ ದುರುದ್ದೇಶದಿಂದಲೇ? ಯಾವುದಾದರೂ ಆಯುಧಗಳನ್ನು ಉಟ್ಟ ಬಟ್ಟೆ ಯೊಳಗೆ ಬಚ್ಚಿಟ್ಟಿರಬಹುದು. ಯಾರಿಗೆ ಗೊತ್ತು? ಅವನಿಗೆ ರಾಜಕೀಯದ ಹುಚ್ಚು ಹಿಡಿದಿರಬಹುದು. ಹಣಕ್ಕಾಗಿಯಾದರೆ ಅಷ್ಟೊಂದು ಹಣವನ್ನು ಸಂಗ್ರಹಿಸುವುದು ಕಷ್ಟ. ಅಷ್ಟು ಮಾತ್ರವಲ್ಲ, ಅದು ಕೊಡಬೇಕಾದದ್ದಲ್ಲವೆಂದು ಲೂಕೋಸ್ ನಿಶ್ಚ ಯಿಸಿ ಆಗಿತ್ತು. ಆತನೂ ಆ ತೀರ್ಮಾನವನ್ನು ಒಪ್ಪಿಕೊಂಡದ್ದಾಗಿತ್ತು. "ಈಗ ಕಾಣುವು ದಕ್ಕೆ ಅನುಕೂಲವಿಲ್ಲ—" ಇದು ಮಂತ್ರಿಯ ಬಾಯಿಯಿಂದ ಬಂದ ಮಾತು. ಆ ಮಾತು ಹೊರಗೆ ಬಂದದ್ದಾಯಿತು. ಮರುಕ್ಷಣವೇ ಅದು ಬೇಕಾಗಿರಲಿಲ್ಲ ಎಂದು ಮ್ಯಾಥ್ಯುವಿಗೆ ತೋರಿತು. ಅದು ಸ್ವಲ್ಪ ಕಷ್ಟ. ಅಲ್ಲದಿದ್ದರೆ ಯಾಕೆ ಹಾಗೆ ಅನ್ನಿಸಬೇಕು? ಗೋಪಿ ನಡೆದುಕೊಂಡದ್ದು ಒಮ್ಮೆಯೂ ಮರೆಯಲು ಸಾಧ್ಯವಿಲ್ಲದ ರೀತಿಯಲ್ಲಿ. ಮತ್ತೊಮ್ಮೆ ಕಾಣಬೇಕಾಗಿ ಬರಬಹುದು ಎನ್ನುವ ರೀತಿಯಲ್ಲಲ್ಲ. ಭವಿಷ್ಯದ ವಿಚಾರ ಗಳು ಹಾಗಿರಲಿ. ಲೆಕ್ಕಾಚಾರ ತಿಳಿಸುವುದಕ್ಕಾಗಿದ್ದಿರಬೇಕು. ಇಲ್ಲ......... ಅವನ ಜೊತೆಯಲ್ಲಿ ಯಾವ ಲೆಕ್ಕಾಚಾರ ಮಾಡುವುದೂ ಇಲ್ಲ. ಅವನಿಗೆ ಹಣ ಯಾವ ರೀತಿ ಯಲ್ಲಿ ಸಿಕ್ಕಬೇಕಾಗಿದೆ? ಕಾನೂನಿನ ರೀತಿಯಲ್ಲಿ ಒಂದು ಕಾಸೂ ಇಲ್ಲ. ಸ್ನೇಹದ ಹೆಸರಿನಲ್ಲಾದರೂ ಅವನಿಗೆ ಅರ್ಹತೆಯಿಲ್ಲ. ಧೈರ್ಯವಾಗಿ ತನ್ನನ್ನು ಕಾಣಲು ಅನುಕೂಲವಿಲ್ಲವೆಂದೇ ಹೇಳಬಹುದು. ಆದರೆ ಒಂದು ಬಹು ಮುಖ್ಯವಾದ ಕೆಲಸವಿದೆ. ಗೋಪಿ ಸ್ವಲ್ಪ ಕಡುಪಿನ ಮನುಷ್ಯ. ಸಾಹಸಿಯೂ ಹೌದು. ಹೇಗೆಲ್ಲ ಆ ಸಿಟ್ಟು ಪ್ರಕಟಗೊಳ್ಳುತ್ತದೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಕೆಲವು ಸಲ ಅನಿರೀಕ್ಷಿತ ವಾದಂತಹ ಅಪಾಯಗಳನ್ನು ಕೈಗೊಳ್ಳಲೂಬಹುದು. ಒಂದು ಹಾವನ್ನು ನೋಯಿಸಿ ಈಗ ಬಿಟ್ಟಿರುವುದು.

ಮಂತ್ರಿಯ ಮನಸ್ಸಮಾಧಾನ ಹೊರಟುಹೋಯಿತು. ಲೂಕೋಸನ್ನು ಕಂಡಾಗ ಮಾತ್ರ ಇನ್ನು ಮನಸ್ಸಮಾಧಾನ ಉಂಟಾಗುವುದು. ಕಾಲಿಂಗ್ ಬೆಲ್ ಅದುಮಿ ಅವರು ದಫೇದಾರನನ್ನು ಬರಮಾಡಿದರು. ಆ ಸಂದರ್ಶಕ ಹೊರಟುಹೋಗಿದ್ದ. ತನಗೊಬ್ಬ ಎದುರಾಳಿಯಾಗುತ್ತಿದ್ದಾನೆ ಎಂದು ಮ್ಯಾಥ್ಯುವಿಗೆ ತೋರಿತು.

ಮಿ॥ ಮ್ಯಾಥ್ಯುವಿಗೆ ಸಂಬಂಧಪಟ್ಟ ಹಾಗೆ ಅದೊಂದು ಗಂಡಾಂತರದ ದಿನ

ವಾಗಿತ್ತು. ಹೈಡ್ರೊ ಇಲೆಕ್ಟ್ರಿಕ್ ಪ್ರಾಜೆಕ್ಟ್ ಕೆಲಸದ ಸ್ಥಳವನ್ನು ಬದಲಾಯಿಸಿ ಬೇರೊಂದು ಕಡೆಯಲ್ಲಿ ಪ್ರಾರಂಭಿಸುವುದಕ್ಕಾಗಿ ಅನುಮತಿಯನ್ನು ಕಾಯುತ್ತಿದ್ದರು. ಅದರಲ್ಲಿ ಯಾವ ಕೆಲಸವೂ ನಡೆಯುತ್ತಿಲ್ಲ. ಮಂತ್ರಿಸಭೆಯ ಅಂಗೀಕಾರವೂ ಅದಕ್ಕೆ ದೊರಕಿ ಆಗಿತ್ತು. ಇನ್ನು ಅದರ ಬಗ್ಗೆ ಕೈಯಾಡಿಸಿದರೆ ಸಾಕು. ಆದರೆ ಅದಕ್ಕೂ ಒಂದು ಸಂಶಯ ಇತ್ತು. ಸಾಯಂಕಾಲ ಲೂಕೋಸ್ ಮ್ಯಾಥ್ಯುವಿನ ಬಂಗಲೆಗೆ ಬಂದ. ಎಲ್ಲ ವನ್ನೂ ಶ್ರದ್ಧೆಯಿಂದ ಲೂಕೋಸ್ ಕೇಳಿಸಿಕೊಂಡ. ಮ್ಯಾಥ್ಯು ಹೀಗೆ ಹೇಳಿ ಮುಗಿಸಿದರು:

"ನನ್ನ ಮನಸ್ಸಿಗೆ ನೆಮ್ಮದಿಯೇ ಇರಲಿಲ್ಲಾಂತ ಹೇಳಲಿಲ್ಲವೆ ಲೂಕೋಸ್? ನನಗೆ ಸ್ವಲ್ಪವೂ ನೆಮ್ಮದಿಯಿಲ್ಲ. ನನ್ನ ಆಲೋಚನೆಗಳೆಲ್ಲ ದಿಕ್ಕಾಪಾಲಾದುವು. ಏನು ಮಾಡಬೇಕು? ನನ್ನ ಮನಸ್ಸಿನ ನೆಮ್ಮದೀನ ಸಂಪೂರ್ಣವಾಗಿ ಕಳೆದುಕೊಂಡೆ."

ಅದೊಂದು ಮುಖ್ಯವಾದ ವಿಷಯವಲ್ಲವೆಂಬಂತೆ ಲೂಕೋಸ್ ಹೇಳಿದ: "ಏನು ಆಗಬೇಕೂಂತ ಹೇಳೋದು? ನನಗೆ ಅರ್ಥವಾಗೋದಿಲ್ಲ. ಅವನು ಬಂದದ್ದು ಆ ಹಣ ಕ್ಕೋಸ್ಕರ ಇರಬೇಕು. ಅಲ್ಲದೆ ಇದ್ದರೆ ಯಾವುದೋ ಕೆಲಸಕ್ಕಾಗಿರಬೇಕು. ಇವತ್ತು ಕಾಣೋದಕ್ಕೆ ಸೌಕರ್ಯವಿಲ್ಲ ಅಂತ ಹೇಳಿದ್ದಷ್ಟೆ. ಅದಕ್ಕೆ ಇಷ್ಟೊಂದು ಆಲೋಚನೆ ಮಾಡೋ ಅಂಥಾದ್ದೇನಿದೆ? ಏನೂ ಇಲ್ಲ. ಏನೂ ಇಲ್ಲ. ಇನ್ನು ಮೇಲೂ ಬಂದಾಂತ ಇಟ್ಟುಕೊ. ಸೌಕರ್ಯ ಇದ್ದರೆ ಬಾ ಅನ್ನಬೇಕು. ಹಣ ಕೇಳಿದರೆ ಧೈರ್ಯವಾಗಿ ಯಾವು ದೂಂತ ಕೇಳಬೇಕು. ಏನಾದರೂ ಕೆಲಸ ಮಾಡಬೇಕೂಂತಿದ್ರೆ ಮಾಡಿಕೊಡಬೇಕು ಅಷ್ಟೆ."

ಮಿ॥ ಮ್ಯಾಥ್ಯುವಿಗೆ ಧೈರ್ಯ ತುಂಬುವುದಕ್ಕೆ ತನಗೆ ಸಾಧ್ಯವಾಯಿತು ಎಂದು ಲೂಕೋಸನಿಗೆ ಅನ್ನಿಸಲಿಲ್ಲ. ಲೂಕೋಸ್ ನಿರ್ದೇಶಿಸಿದ ಮಾರ್ಗವನ್ನು ಸರಿಯಾಗಿ ಅನುಸರಿಸುವುದುಂಟು. ಆದರೆ ಆತನಿಗೆ ಮನಸ್ಸಮಾಧಾನವುಂಟಾಗಲು ಅವಕಾಶವಿಲ್ಲ. ಮಿ॥ ಮ್ಯಾಥ್ಯುವನ್ನು ಬಾಧಿಸುತ್ತಿರುವುದು ಏನು ಎಂದು ಆತನಿಗೂ ಗೊತ್ತಿಲ್ಲ. ಭಯವೇ ಅಥವಾ ಅಪರಾಧ ಮಾಡಿದ ಭೀತಿಯೇ?

ಅನಂತರದ ದಿನಗಳ ಪತ್ರಿಕೆಗಳಲ್ಲಿ ಮಿ॥ ಮ್ಯಾಥ್ಯುವಿನ ಹಿಂದಿನ ಕಾಲದ ಅಕ್ರಮ ಗಳನ್ನು ಕುರಿತು ಗೋಪಿಯ ಹೆಸರಿನಲ್ಲಿ ಒಂದು ಲೇಖನ ಬಂದಿತು. ಅಲ್ಲಿಂದ ಪ್ರಾರಂಭ ವಾಗಿ ಆ ಹಿಂದಿನ ವರ್ಷಗಳಲ್ಲಿ ಮಾಡಿದ ಎಲ್ಲಾ ಅಕ್ರಮಗಳನ್ನು ಕುರಿತೂ ಹೊಸದಾಗಿ ಹೈಡ್ರೊ ಎಲೆಕ್ಟ್ರಿಕ್ ಪ್ರಾರಂಭವಾಗುವುದನ್ನು ಕುರಿತೂ ವಿಮರ್ಶಿಸಲಾಗಿತ್ತು. ಅದು ಸತ್ಯವೂ ನಗ್ನವೂ ಆದ ಅನೀತಿಯಾಗಿತ್ತು. ಸರ್ಕಾರವನ್ನು ಲೇಖಕ ಧೈರ್ಯವಾಗಿ ವಾದಕ್ಕೆ ಕರೆದಿದ್ದ! ತನಗೂ ನಾರಾಯಣನ್ ನಾಯರ್‌ಗೂ ದೊರೆಯಬೇಕಾಗಿದ್ದ ಹಣ, ಮಿ॥ ಮ್ಯಾಥ್ಯು ಸ್ವತಂತ್ರ ತಿರುವಾಂಕೂರಿನವರ ಜೊತೆ ಸೇರಿ ಕಳ್ಳಲೆಕ್ಕ ಬರೆದು ಸಂಪಾದಿಸಿದ ಎಂದು ಬರೆಯಲಾಗಿತ್ತು. ಎಲ್ಲವನ್ನೂ ಆಧಾರ ಸಹಿತವಾಗಿ ಹೇಳಿದ್ದದ್ದು. ಸರ್ಕಾರಕ್ಕೆ ಧೈರ್ಯವಿದ್ದರೆ ಇದಕ್ಕೆ ಉತ್ತರ ಕೊಡಲಿ ಎಂದಾಗಿತ್ತು.

ಸರ್ಕಾರದ ಮಟ್ಟದಲ್ಲಿ ದೊಡ್ಡ ಗಾಬರಿಯನ್ನುಂಟು ಮಾಡಿದ್ದ ಸಂಗತಿಯಾಗಿತ್ತು ಅದು. ರಾಜ್ಯದಲ್ಲಿ ಅಕ್ರಮ, ಲಂಚ—ಇವೆಲ್ಲ ಹೊಸದೇನಲ್ಲ. ಆದರೆ ತಾವು ಆರಿಸಿದ ಮಂತ್ರಿ ಅಕ್ರಮಕ್ಕೆ ತೊಡಗಿದ್ದಾನೆ ಎಂದು ಜನತೆ ಭಾವಿಸುತ್ತದೆ. ಜನತೆಯ ಮುಂದಾಳು ಈ ಮೊದಲು ದೇಶವನ್ನು ಆಳಿರಲಿಲ್ಲ. ಈ ಅಕ್ರಮಗಳನ್ನು ತಡೆಗಟ್ಟುವುದಕ್ಕಾಗಿಯೇ ಮಂತ್ರಿಗಳನ್ನು ಮಾಡಿದ್ದು. ಆ ಮಂತ್ರಿಮಂಡಲ ಆಳುತ್ತಿದ್ದ ಮೊದಲನೆಯ ಹಂತದಲ್ಲೇ ಕಂಡುಬಂದಿದ್ದ ಅಕ್ರಮ ಇದು. ಹಾಗಾದರೆ ಮೊದಲನೆಯ ಅನೀತಿ ಪ್ರಾಮುಖ್ಯವಲ್ಲವೆ? ಅದನ್ನು ಹಗುರವಾಗಿ ಕೈಬಿಡಲು ಸಾಧ್ಯವಿಲ್ಲ. ನಂತರವೂ ಟೀಕೆಗಳು ಪತ್ರಿಕೆಗಳಲ್ಲಿ ಬರುತ್ತಲೇ ಇದ್ದುವು. ಸರ್ಕಾರ ಅದಕ್ಕೆ ಉತ್ತರ ಕೊಡಲೇ ಬೇಕು ಎನ್ನುವಲ್ಲಿಗೆ ಮುಟ್ಟಿತು. ಮೊದಲನೆಯ ಉತ್ತರ ಗೋಪಿ ಎನ್ನುವ ಮನುಷ್ಯ ಒಬ್ಬ ಕಮ್ಯೂನಿಸ್ಟ್ ಎಂದು. ಗೋಪಿಯ ವಿಧ್ವಂಸಕ ಕೃತ್ಯಗಳನ್ನು ಕುರಿತು ಸರ್ಕಾರ ಒಂದು ಪಟ್ಟಿಯನ್ನು ಹಾಜರುಪಡಿಸಿತು. ಜನತಾ ಸರ್ಕಾರವನ್ನು ದೃಷ್ಟಿಯಲ್ಲಿಟ್ಟುಕೊಂಡು ದೂಷಿಸುತ್ತಿರುವುದು ಹೀನವಾದ ಒಂದು ಕಾರ್ಯಕ್ರಮ ಎಂದು ಸರ್ಕಾರ ಪತ್ರಿಕೆಯಲ್ಲಿ ಒಂದು ಹೇಳಿಕೆ ಕೊಟ್ಟಿತು. ಆದರೆ ಜನಗಳಿಗೆ ಅದು ಅಷ್ಟಾಗಿ ಅರ್ಥವಾಗಲಿಲ್ಲ. ಚೀಫ್ ಸೆಕ್ರೆಟರಿ, ಲೂಕೋಸ್, ಮಿ॥ ಮ್ಯಾಥ್ಯು ಎಲ್ಲರೂ ಸೇರಿ ಮ್ಯಾಥ್ಯುವಿನ ಔದ್ಯೋಗಿಕ ವಸತಿಯಲ್ಲಿ ಒಂದು ಆಲೋಚನೆ ನಡೆಸಿದರು. ಈ ಆರೋಪಣೆಯನ್ನು ಹೋಗಲಾಡಿಸುವುದಕ್ಕೆ ಇದ್ದದ್ದು ಒಂದೇ ಒಂದು ಮಾರ್ಗ. ಅದನ್ನು ನಿರ್ದೇಶಿಸಿದ್ದು ಚೀಫ್ ಸೆಕ್ರೆಟರಿ. ನಾಯರನ್ನು ಕಂಡುಹಿಡಿಯುವುದು. ಆತನಿಂದ ಗೋಪಿಯ ಆರೋಪಗಳನ್ನೆಲ್ಲ ಅಲ್ಲಗಳೆಯುವಂತೆ ಮಾಡಿಸುವುದು. ಆಗ ನಾಯರ ದೃಷ್ಟಿ ಏನಾಗಿರಬಹುದು ಎಂದು ತಿಳಿಯಬೇಕಾಗಿತ್ತು. ಮ್ಯಾಥ್ಯು ಹೇಳಿದ: "ಅವನು ಚುನಾವಣೆಗೆ ನಿಂತುಕೊಂಡದ್ದು ಅವರ ಸಹಾಯದಿಂದಲೇ. ಹಾಗಾದರೆ ಅವರೆಲ್ಲಾ ಒಂದು ಗುಂಪಾಗಿರೋದಕ್ಕೆ ಸಾಧ್ಯ."

ಲೂಕೋಸ್‌ಗೆ ನಾಯರ ಬಗ್ಗೆ ಒಂದು ಅಭಿಪ್ರಾಯವಿತ್ತು. ಏನೇ ಆದರೂ ನಾಯರ್ ಗೋಪಿಯ ಹಾಗೆ ಕಮ್ಯೂನಿಸ್ಟ್ ಆಗುವುದಿಲ್ಲ. ಕೂಡಲೇ ಒಂದು ಸಲ ಅವನನ್ನು ಕಂಡುಹಿಡಿದು ಅದಕ್ಕಾಗಿ ಪ್ರಯತ್ನಿಸಬೇಕು ಎಂದು ಎಲ್ಲರೂ ತೀರ್ಮಾನಿಸಿದರು. ಆ ಶ್ರಮದ ಫಲ ಏನಾಗುತ್ತದೆ ಎಂದು ಯಾರಿಗೂ ಸ್ಪಷ್ಟವಾಗಿ ತಿಳಿಯದೆ ಇದ್ದರೂ ಪ್ರಯತ್ನಿಸಬೇಕು ಎಂದುಕೊಂಡರು. ಅದರ ಜವಾಬ್ದಾರಿಯನ್ನು ಲೂಕೋಸ್‌ಗೆ ಹೊರಿಸಿದರು. ಗೋಪಿ ಹಾಜರುಪಡಿಸಿದ್ದಂತಹ ಮಾಹಿತಿಗಳು ಸ್ಪಷ್ಟವಾಗಿದ್ದವು. ಪ್ರಸ್ತಾಪಗಳು ಆ ಸ್ಪಷ್ಟತೆಯ ತಳಹದಿಯಲ್ಲಿ ಸರಿಯೂ ಆಗಿದ್ದುವು. ಈ ಮಾಹಿತಿಗಳೆಲ್ಲ ಗೋಪಿಗೆ ಹೇಗೆ ದೊರೆತುವು ಎನ್ನುವುದು ಅವರ ಆಲೋಚನೆಯ ವಿಷಯವಾಗಿತ್ತು. ಸರ್ಕಾರದ ರಹಸ್ಯಗಳು ಈ ರೀತಿಯಲ್ಲಿ ಬಹಿರಂಗಗೊಳ್ಳಬಾರದು. ಕೇಶವ ಪಿಳ್ಳೆ ಕೇಳಿದರು:

"ನಾಳೆಯ ಕ್ಯಾಬಿನೆಟ್‌ನಲ್ಲಿ ಮ್ಯಾಥ್ಯು ಈ ವಿಷಯವನ್ನು ಮುಂದಿಡಬಹುದೆ?"

"ನಿಜವಾಗಿಯೂ. ಈ ರೀತಿಯ ರಹಸ್ಯಗಳು ಬಹಿರಂಗಗೋಂಡಲ್ಲಿ ಆಡಳಿತ ಹೇಗೆ ನಡೆಯೋದಕ್ಕೆ ಸಾಧ್ಯ?"

ಯಾರೂ ಉತ್ತರ ಹೇಳಲಿಲ್ಲ. ಲೂಕೋಸೂ ಕೇಶವ ಪಿಳ್ಳೆಯೂ ನಿಶ್ಶಬ್ದರಾಗಿ ಕುಳಿತಿದ್ದರು. ಅಂದು ಸ್ನೇಹಿತರನ್ನು ಕಾಪಾಡಬೇಕು ಎನ್ನುವ ಒಂದು ಒಳ್ಳೆಯ ಉದ್ದೇಶದಿಂದ ಲೂಕೋಸ್‌ನನ್ನು ಮುಂದಿಟ್ಟುಕೊಂಡು ಮಾಡಿದ ಕೆಲಸ ಇದು. ಯಾರಿಗೋಸ್ಕರ ಒಳ್ಳೆಯದನ್ನು ಮಾಡಲಾಯಿತೋ ಅದೇ ಮನುಷ್ಯ ಈಗ ತಿರುಗಿಬಿದ್ದಿದ್ದಾನೆ. ಅವರ ಫಲ ಆತನಿಗೆ ದೊರೆತಿಲ್ಲ ಎನ್ನುವುದು ಸರಿಯಾಗಿರಬಹುದು. ಅಂದು ತಾನು ಏನೆಲ್ಲಾ ಮಾಡಿದ್ದು ಎಂದು ಲೂಕೋಸ್ ವಿಶದವಾಗಿ ಜ್ಞಾಪಿಸಿಕೊಳ್ಳುತ್ತಿದ್ದ. ಕೇಶವ ಪಿಳ್ಳೆಯ ಮುಖ ಅಸಾಮಾನ್ಯ ರೀತಿಯಲ್ಲಿ ಗಾಂಭೀರ್ಯಕ್ಕೊಳಗಾಗಿತ್ತು. ಆತನ ಕಣ್ಣುಗಳು ಸರ್ಪದ ಕಣ್ಣುಗಳ ಹಾಗೆ ರೂಕ್ಷಗೊಂಡುವು. ಯಾವುದೋ ಒಂದು ವಿಷಯದಲ್ಲಿ ಮಾತ್ರ ಅವರು ಆಸಕ್ತಿಯಿಟ್ಟಿದ್ದರು. ಮಿ॥ ಮ್ಯಾಥ್ಯು ಕೇಳಿದರು:

"ಯಾಕೆ ಯಾರೂ ಮಾತಾಡೋದಿಲ್ಲ?"

ಲೂಕೋಸ್ ನಗುತ್ತಾ ಹೇಳಿದ:

"ನಾನು ಈ ವಿಷಯದಲ್ಲಿ ಏನು ಹೇಳಬೇಕು? ಇದನ್ನು ನೀವು ಹೇಳಿ ತೀರ್ಮಾನ ಮಾಡಬೇಕಾದದ್ದಲ್ಲವೆ?"

ಕೇಶವ ಪಿಳ್ಳೆ ತುಂಬ ಗಂಭೀರವಾಗಿ ಹೇಳಿದರು:

"ನನಗೆ ಗೊತ್ತು, ಇದು ಹೇಗೆ ಹೊರಬಿದ್ದಿತು ಅಂತ. ಮೊದಲಾಗಿದ್ದಿದ್ದರೆ ತಪ್ಪು ಮಾಡಿದವರನ್ನು ಹಿಡಿದು ಶಿಕ್ಷಿಸುವುದರಲ್ಲಿ ನಾನು ಒಂದನ್ನೂ ನೋಡದೆ ಕೆಲಸ ಕೈಗೊಳ್ಳುತ್ತಿದ್ದೆ. ನನಗೆ ಈಗಲೂ ಅದಕ್ಕೆ ಅಧಿಕಾರವಿದೆ. ಆದರೆ ಹೊಸ ಸಂವಿಧಾನದಲ್ಲಿ ನಾನು ಆ ಅಧಿಕಾರಾನ ಉಪಯೋಗಿಸಿಕೊಳ್ಳೋದಿಲ್ಲ. ಅದೆಲ್ಲ ಯಾಕೆ ಅನ್ನಿಸುತ್ತೆ ನನಗೆ."

ಮಿ॥ ಮ್ಯಾಥ್ಯು ಕೇಳಿದರು: "ಯಾಕೆ ಹಾಗೆ ಹಿಂದಕ್ಕೆ ಹೋಗ್ತೀರಿ?"

ಕೇಶವ ಪಿಳ್ಳೆ ಬಿಗುಮಾನದಿಂದ ನಗುತ್ತ ಹೇಳಿದರು: "ನಾನು ಹಿಂದುಹಿಂದಕ್ಕೆ ಹೋಗ್ತಾ ಇಲ್ಲ. ನನ್ನ ಅಧಿಕಾರ ನಾನು ಪ್ರಯೋಗಕ್ಕೆ ತಂದಾಗ ಏನಾಗಬಹುದು...... ಬೇಡ, ನಾನು ಹೇಳೋದಿಲ್ಲ."

ಮಿ॥ ಮ್ಯಾಥ್ಯು ಕೇಳಿದರು: "ನಾಳೆಯ ಕ್ಯಾಬಿನೆಟ್‌ನಲ್ಲಿ ಆ ಬಗ್ಗೆ ತೀರ್ಮಾನ ಕೈಗೊಂಡರೂ?"

"ನಾನು ಅನುಸರಿಸುವಂಥವನು. ಅದನ್ನು ನಾನು ಆಚರಣೆಗೆ ತರ್‍ತೇನೆ. ತಪ್ಪು ಮಾಡಿದೋನು ಶಿಕ್ಷೆಗೆ ಒಳಗಾಗ್ತಾನೆ."

ಲೂಕೋಸ್ ಕೇಳಿದ:

"ಅವನು ಯಾರು ಆ ಯಜಮಾನ?"

"ಯಾರೋ ನನಗೆ ಗೊತ್ತಿಲ್ಲ. ಯಾರಾದರೇನು?"

ಅಂದಿನಿಂದಲೇ ಲೂಕೋಸ್ ತನಗೆ ಒಪ್ಪಿಸಿದ ಕೆಲಸ ಆರಂಭಿಸಿದ.

ಕಾಂಗ್ರೆಸ್ಸಿನಿಂದ ಪ್ರತ್ಯೇಕಗೊಂಡಿದ್ದ ತೀವ್ರಗಾಮಿಗಳ ಜೊತೆ ಸೇರಿ ಚುನಾವಣೆಯಲ್ಲಿ ನಾಯರ್ ಸ್ಪರ್ಧಿಸಿದ್ದದ್ದು. ಪ್ರಾಮಾಣಿಕನಾದ ಒಬ್ಬ ಕಾಂಗ್ರೆಸ್ಸಿನವನಂತೆ ಆತ ಸ್ಪರ್ಧಿಸಿದ್ದು. ಆ ಸ್ಪರ್ಧೆಯಲ್ಲಿ ನಾಯರ್ ಕರುಣಾಜನಕವಾಗಿ ಸೋತುಹೋದ. ಬರಿ ಐವತ್ತೈದು ಓಟು ಅವನಿಗೆ ಸಿಕ್ಕಿದ್ದು. ಆ ಸೋಲು ಬಹು ದೊಡ್ಡ ಸೋಲಾಗಿತ್ತು. ನಾಯರ್ ಬಹು ಬೇಗ ನಿಷ್ಕ್ರಿಯನಾಗಿ ಹೋದ. ಗೋಪಿಗೆ ಸಿಟ್ಟೂ ಬಂದಿತು. ಚುನಾವಣೆ ಕಳೆದ ಮೇಲೆ ನಾಯರಿಗೆ ಮತ್ತೊಂದು ವಿಷಯ ಸ್ಪಷ್ಟವಾಯಿತು. ಕಾಂಗ್ರೆಸ್ಸಿನಿಂದ ಪ್ರತ್ಯೇಕವಾಗಿ ನಿಂತ ಜನರು ಕಮ್ಯೂನಿಸ್ಟ್ ಪಾರ್ಟಿ ಸೇರುತ್ತಿದ್ದರು. ನಾಯರಿಗೆ ಅದು ಇಷ್ಟವಾಗಿದ್ದ ಕೆಲಸವಾಗಿರಲಿಲ್ಲ. ಅದಕ್ಕೆ ತುಂಬ ಕಾರಣಗಳೂ ಇದ್ದವು. 1942 ಆಗಸ್ಟ್ ತಿಂಗಳಲ್ಲಿ ಎಲ್ಲಾ ಮರೆತು ಪ್ರಾಣವನ್ನು ಪಣವಾಗಿಟ್ಟು ಧುಮುಕಿದ ಮನುಷ್ಯ ಅವನು. ಜೀವನದಲ್ಲಿ ಮರೆಯುವುದಕ್ಕಾಗಲೀ ಕ್ಷಮಿಸುವುದಕ್ಕಾಗಲೀ ಸಾಧ್ಯವಿಲ್ಲದ ರೀತಿಯಲ್ಲಿ ಜೊತೆಯಲ್ಲೇ ಇದ್ದ ಇಬ್ಬರು ಅವನನ್ನೂ ಅವನ ಜೊತೆಯವರನ್ನೂ ಪೋಲೀಸಿನವರಿಗೆ ಹಿಡಿದುಕೊಟ್ಟರು. ಹಾಗೆ ನಾಯರಿಗೆ ಚಳುವಳಿ ಸಮಿತಿ ತೀರ್ಮಾನಿಸಿದ ಕೆಲಸಗಳನ್ನು ನಡೆಸಲು ಸಾಧ್ಯವಾಗಲಿಲ್ಲ ಅಷ್ಟೆ. ಪೋಲೀಸಿನವರಿಗೆ ಹಿಡಿದುಕೊಟ್ಟವರು ಕಮ್ಯೂನಿಸ್ಟರಾಗಿದ್ದರು. ಈಗಲೂ ನಾಯರ್‌ಗೆ ಅದನ್ನು ನೆನಸಿಕೊಂಡಾಗ ಎದೆ ಒಡೆದ ಹಾಗಾಗುತ್ತೆ. ಒಮ್ಮೆಯೂ ಕಮ್ಯೂನಿಸ್ಟರನ್ನು ಕ್ಷಮಿಸಲು ತನಗೆ ಸಾಧ್ಯವಿಲ್ಲ ಎಂದು ಆತ ಹೇಳುವುದು. ಭಾರತದಲ್ಲಿ ಸ್ವಾತಂತ್ರ್ಯಕ್ಕೋಸ್ಕರ ಹೋರಾಡುತ್ತಿದ್ದಾಗ, ಎರಡನೇ ಮಹಾಯುದ್ಧ ನಡೆಯುತ್ತಿದ್ದಾಗ, ಅದು ಜನತಾ ಚಳವಳಿ ಎಂದು ಕಮ್ಯೂನಿಸ್ಟರು ಹೇಳಿಕೊಂಡು ತಿರುಗುತ್ತಿದ್ದದ್ದು ನಾಯರಿಗೆ ಈಗಲೂ ಅರ್ಥವಾಗುತ್ತಿರಲಿಲ್ಲ. ಅವರು ಅಂದು ಇಂಗ್ಲೀಷಿನವರ ಜತೆ ಸೇರಿದ್ದರು. ಎಲ್ಲಕ್ಕಿಂತಲೂ ಹೆಚ್ಚಾಗಿ ಒಂದು ಸಭೆಯಲ್ಲಿ ಕಮ್ಯೂನಿಸ್ಟರು ಸುಭಾಸ್‌ಚಂದ್ರ ಬೋಸರನ್ನು 'ನಾಯಿ' ಎಂದೂ, 'ಅಮೇಧ್ಯವನ್ನು ತಿನ್ನುವ ಹಂದಿ' ಎಂದೂ ಕರೆದರು. ಅಂದು ತನ್ನನ್ನು ತಾನು ಮರೆತು ನಾಯರ್ ಸಭೆಯಲ್ಲಿ ಗಲಾಟೆ ಮಾಡಿದ. ಆ ವಿಷಯಕ್ಕಾಗಿಯೇ ಆತ ಆರು ತಿಂಗಳು ಜೈಲಿನಲ್ಲಿ ಮಲಗಿದ್ದ. ನಾಯರ್ ಹೇಳುವುದು ಅವರು ಈ ದೇಶವನ್ನು ಸ್ವರ್ಗವಾಗಿ ಮಾಡುತ್ತೇವೆ ಎಂದರೂ ತಾನು ನಂಬುವುದಿಲ್ಲ ಎಂದು. ಅವರ ಜೊತೆಯಲ್ಲಿ ಯಾವ ಸ್ನೇಹವೂ ಬೇಡ.

ಹಾಗೆ ಜೊತೆಯಲ್ಲಿದ್ದವರೆಲ್ಲಾ ಒಂದು ಪ್ರವಾಹದಲ್ಲಿ ಸಿಕ್ಕಿ ಕಮ್ಯೂನಿಸ್ಟ್ ಪಾರ್ಟಿಯಲ್ಲಿ ಹೋಗುತ್ತಿದ್ದುದನ್ನು ನಾಯರ್ ನೋಡುತ್ತಾ ನಿಂತಿದ್ದ. ಆ ದೃಶ್ಯವನ್ನು ನೋಡುತ್ತಾ ಆ ಮನುಷ್ಯ ಒಂದೊಂದು ದಿವಸವನ್ನೂ ಒಂದೊಂದು ಗಂಟೆಯನ್ನೂ ಒಂದೊಂದು ನಿಮಿಷವನ್ನೂ ಅಸಹಾಯಕನಾಗಿ ಕಳೆಯುತ್ತಿದ್ದ. ಆ ದೃಶ್ಯವನ್ನು ನೋಡಿ

ಅವನಿಗೆ ಸಹಿಸಲು ಸಾಧ್ಯವಾಗಿರಲಿಲ್ಲ. ಅವರು ಎಲ್ಲಿಗೆ ಹೋಗುತ್ತಿದ್ದಾರೆ? ಹಳೆಯ ಚರಿತ್ರೆಯನ್ನೆಲ್ಲಾ ನೋಡಿದರೆ ಅವರೆಲ್ಲರೂ ಹೋಗಿ ಸೇರುವ ಆ ಊರು ಯಾವುದು ಎಂದು ಆತನಿಗೆ ಹೆದರಿಕೆಯಾಯಿತು. ಗೋಪಿಯೂ ಆ ಕಡೆಗೇ ಹೊರಟಿದ್ದ. ಎಲ್ಲಿಂದ ಬಂದನೋ ಅಲ್ಲಿಗೇ ಹೋಗುವುದು ಎಂದು ತೀರ್ಮಾನಿಸಿದರೆ ಓಹ್! ಅಲ್ಲಿಯೂ ಕಮ್ಯೂನಿಸ್ಟ್ ಗೂಡಿನ ಹಾಗೆ ತೋರಿ ನಾಯರನ್ನು ಬೀದಿಪಾಲು ಮಾಡುವ ಒಂದು ಸ್ಥಳವಾಗಿತ್ತು. ಅದರೊಳಗೆ ಈಗ ಎಲ್ಲ ರೀತಿಯ ಹಿಂಸ್ರ ಜೀವಿಗಳೂ ಇವೆ. ಅಲ್ಲಿಗೆ ಹಿಂದಿರುಗಿ ಹೋಗುವುದು—ಅದೊಂದು ನಾಚಿಗೆಗೇಡು.

ರಾಜ್ಯದ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ನಾಯರ್‌ಗೆ ಯಾವ ರೀತಿಯಲ್ಲಿಯೂ ಹೊಂದಿಕೊಳ್ಳಲು ಸಾಧ್ಯವಾಗಲಿಲ್ಲ. ಸ್ವಾತಂತ್ರ್ಯ ಚಳುವಳಿಯನ್ನೂ ಗಾಂಧೀಜಿಯನ್ನೂ ಬಹಿರಂಗವಾಗಿಯೇ ಬೈದವರು ಖಾದಿ ಧರಿಸುತ್ತಾರೆ, ಟೋಪ್ಪಿ ಧರಿಸುತ್ತಾರೆ. ಆ ಮೇಲೆ ಕಾಂಗ್ರೆಸ್‌ನವರು ಅಂದುಕೊಂಡು ತಿರುಗುತ್ತಾರೆ. ಅವರು ಬಹಿರಂಗವಾಗಿಯೇ ಕಾಂಗ್ರೆಸ್‌ಗೆ ದೋಷಾರೋಪಣೆ ಮಾಡುತ್ತಾರೆ. ದೇಶವಿಡೀ ಕಾಂಗ್ರೆಸ್‌ಮಯ. ಹೆದರಿಕೆ ಹುಟ್ಟಿಸುವ ರೀತಿಯಲ್ಲಿ ಒಂದು ಕಡೆ ಕಮ್ಯೂನಿಸ್ಟರು ಸಂಘಟಿತರಾಗುತ್ತಿದ್ದಾರೆ. ನಾಯರ್‌ಗೆ ಎಲ್ಲಿ ಹೋಗುವುದಕ್ಕೂ ಏನು ಮಾಡುವುದಕ್ಕೂ ಸಾಧ್ಯವಿರಲಿಲ್ಲ.

ಒಬ್ಬನೇ ಒಬ್ಬ ಸ್ನೇಹಿತನೂ ಇಲ್ಲದೆ ಕೆಳಗಿಳಿದ ಒಬ್ಬ ಮನುಷ್ಯ, ದೇಶದಲ್ಲೆಲ್ಲ ಅಲೆದಾಡುತ್ತಿದ್ದುದನ್ನು ಆ ಕಾಲದಲ್ಲಿ ಕಾಣಬಹುದಾಗಿತ್ತು. ಅವನಿಗೆ ಏನೂ ಮಾಡುವುದಿರಲಿಲ್ಲ. ಒಬ್ಬನೇ ಒಬ್ಬ ಜೊತೆಗಾರನಿಲ್ಲ. ಎಲ್ಲರ ಮೇಲೆ ಎಲ್ಲದಕ್ಕೂ ಅವನು ಸಿಟ್ಟು ಮಾಡಿಕೊಳ್ಳತೊಡಗಿದ. ಒಂದು ಹೊತ್ತಿನ ಆಹಾರ ಕೂಡ ಅವನಿಗೆ ದೊಡ್ಡ ಪ್ರಶ್ನೆಯಾಗಿತ್ತು. ಒಂದು ವೇಳೆ ನಿಷ್ಪ್ರಯೋಜನವಾಗಿದ್ದ ಒಂದು ಬದುಕನ್ನು ಅವನು ತಿರುಗಿ ನೋಡುತ್ತಿದ್ದುದಾಗಿರಬೇಕು. ಇದಕ್ಕಾಗಿಯೇ ಅಲ್ಲವೇ ಎಲ್ಲವನ್ನೂ ಹಾಳುಮಾಡಿಕೊಂಡದ್ದು—ಏನು ಲಭಿಸಿತು ಎನ್ನುವ ವರೆಗೂ ಆತ ಆಲೋಚಿಸುತ್ತಿರಬಹುದು. ತಾನು ಇನ್ನು ಮೇಲೆ ಯಾವ ಪ್ರಯೋಜನಕ್ಕೆ ಬರದವನು ಎನ್ನಿಸಿತು. ತನ್ನ ಸಾಮರ್ಥ್ಯವಿಡೀ ಹಾಳಾದಂತೆ ನಾಯರಿಗೆ ತೋರಿತು. ಒಂದು ಕಡೆ ಹೋಗಿ ಒಂದು ಹೊತ್ತಿನ ಆಹಾರವನ್ನು ಕೇಳಿ ಪಡೆಯುವುದಕ್ಕೂ ಆತನಿಗೆ ಸಾಧ್ಯವಿಲ್ಲವಾಯಿತು.

ಹುಡುಕಿ ಹುಡುಕಿ ನಾಯರನ್ನು ಪೆರುಂಬಾವೂರಿನಲ್ಲಿ ಕಂಡುಹಿಡಿದದ್ದಾಯಿತು. ಯಾಕೆ ಪೆರುಂಬಾವೂರಿಗೆ ತಲುಪಿದೆ ಎಂದು ಕೇಳಿದರೆ ಅದಕ್ಕೆ ಸ್ಪಷ್ಟವಾದ ಉತ್ತರವಿಲ್ಲ. ಆದರೆ ನಾಯರ್ ತಲೆಯಲ್ಲಿ ಚಿಂತೆಗಳು ತುಂಬಿಕೊಂಡಿದ್ದುವು. ಸಮರ್ಥನಾದ ಲೂಕೋಸ್ ನಾಯರನ್ನು ಬಳಸಿಕೊಂಡ.

ಮುಂದೆ ಕೆಲವಾರು ದಿನಗಳ ಪತ್ರಿಕೆಗಳಲ್ಲಿ ನಾಯರ ಹೆಸರಿನಲ್ಲಿ ಗೋಪಿಯ ಆರೋಪಗಳಿಗೆ ಉತ್ತರ ಹೊರಗೆ ಬಂದಿತು. ಕಮ್ಯೂನಿಸ್ಟ್ ಪಾಳಯಕ್ಕೆ ಹೋಗಿ ಅಭಯ ಪಡೆದ ಗೋಪಿ ತನ್ನನ್ನು ಕೂಡ ಕಮ್ಯೂನಿಸ್ಟ್ ಗುಂಪಿನಲ್ಲಿ ಸೇರಿಸಿದವನೆಂದು

ಭಾವಿಸಿ ತನ್ನ ಹೆಸರನ್ನು ದುರುಪಯೋಗ ಮಾಡಬೇಕಾಗಿರಲಿಲ್ಲವೆಂದು ಆ ಲೇಖನದಲ್ಲಿ ವ್ಯಕ್ತವಾಗಿತ್ತು. ನಾಯರ್‌ಗೆ ಗೋಪಿಯೊಡನೆಯೂ ಕಮ್ಯೂನಿಸ್ಟ್ ಪಾರ್ಟಿಯೊಡನೆಯೂ ಇದ್ದ ಸಿಟ್ಟನ್ನು ಕೇಶವ ಪಿಳ್ಳೆಯೂ ಸದುಪಯೋಗಪಡಿಸಿಕೊಂಡಿದ್ದರು.

ಈ ಮಧ್ಯೆ ದೇಶವಿಡೀ ಸಭೆಗಳು ನಡೆಯುತ್ತಿದ್ದುವು. ಜನಸಾಮಾನ್ಯರ ಹೆಸರಿನಲ್ಲಿ ಕಮ್ಯೂನಿಸ್ಟ್ ಪಾರ್ಟಿಯ ಸಭೆಗಳು ಕೂಡಿದುವು. ಕಾಂಗ್ರೆಸ್ಸೂ ಸುಮ್ಮನಿರಲಿಲ್ಲ. ಅವರೂ ಸಭೆಗಳನ್ನು ನಡೆಸಿದರು. ಮಂತ್ರಿಗಳು. ಮುಖಂಡರು ಕಾಂಗ್ರೆಸ್ಸಿನ ಪರವಾಗಿ ಭಾಷಣ ಮಾಡುತ್ತಿದ್ದರು. ಆದರೆ ಕಮ್ಯೂನಿಸ್ಟರ ಪ್ರಕಟನೆಗಳಿಗೂ ಮೀಟಿಂಗುಗಳಿಗೂ ಹೆಚ್ಚು ಶಕ್ತಿಯಿದ್ದದ್ದು. ಅವರು ಸಭೆಗಳೊಂದಿಗೆ ನಾಟಕಗಳು. ತುಳ್ಳಲ್[1]. ಕೋಲನ್ ತುಳ್ಳಲ್[2] ಮುಂತಾದ ಕಲಾಕಾರ್ಯಕ್ರಮಗಳನ್ನೇರ್ಪಡಿಸುತ್ತಿದ್ದರು. ಮಂತ್ರಿಗಳನ್ನು ಕುರಿತು ಕಥಾಕಾಲಕ್ಷೇಪ ನಡೆಸುತ್ತಿದ್ದರು. ಮಂತ್ರಿಯರ ಹೆಂಡತಿಯರನ್ನು ನಾಟಕದಲ್ಲಿ ಕಥಾಪಾತ್ರಗಳನ್ನಾಗಿ ಮಾಡಿಕೊಂಡರು. ಒಟ್ಟಿನಲ್ಲಿ ಒಂದು ಚುನಾವಣೆಯ ಪ್ರಚಾರ ದೇಶದಲ್ಲೆಲ್ಲ ಕೇಳಿಬರುತ್ತಿತ್ತು.

ಔದ್ಯೋಗಿಕ ರಹಸ್ಯ ಬಹಿರಂಗಗೊಂಡದ್ದಕ್ಕೆ ಸಂಬಂಧಿಸಿದಂತೆ ಒಂದು ರಹಸ್ಯ ಅನ್ವೇಷಣೆ ನಡೆಸಲು ಮಂತ್ರಿಸಭೆ ಒಮ್ಮತದಿಂದ ತೀರ್ಮಾನಿಸಿತು. ಅದರ ಜವಾಬ್ದಾರಿಯನ್ನು ಪೂರ್ಣವಾಗಿ ಚೀಫ್ ಸೆಕ್ರೆಟರಿಗೆ ಬಿಟ್ಟುಕೊಟ್ಟರು. ರಹಸ್ಯಾನ್ವೇಷಣೆ ಹಾಗೆ ನಡೆಯುತ್ತಿದ್ದಾಗ ಮತ್ತೊಬ್ಬ ಮಂತ್ರಿಯ ಹೆಸರಿನಲ್ಲಿ ಅಕ್ರಮದ ಆರೋಪಣೆ ಹೊರಟಿತು. ಮಂತ್ರಿ ಕುರುಪ್ ಆಹಾರ ವಿಭಾಗ. ರಸ್ತೆ ಸಾರಿಗೆ ವಿಭಾಗವನ್ನು ವಹಿಸಿಕೊಂಡಿದ್ದರು. ರಾಜ್ಯಕ್ಕೆ ಅಗತ್ಯವಿದ್ದ ಗೊಬ್ಬರ ತರಿಸಿದ್ದರಲ್ಲಿ ಒಂದು ದೊಡ್ಡ ಮೊತ್ತವನ್ನು ಅವರು ನುಂಗಿದ್ದರು. ಹಾಗೆಯೇ ಬಸ್ಸುಗಳನ್ನು ಕೊಂಡುಕೊಂಡದ್ದರಲ್ಲೂ ಆತ ಕಿಸೆಗೆ ಹಾಕಿಕೊಂಡಿದ್ದ. ಈ ಆರೋಪಣೆಯನ್ನು ಹೊರಿಸಿದ್ದು ಮತ್ತಾರೂ ಅಲ್ಲ. ವಿಧಾನ ಸಭೆಯ ಒಬ್ಬ ಕಾಂಗ್ರೆಸ್ ಸದಸ್ಯ. ಆತನ ಜೊತೆಯಲ್ಲಿ ಆರೇಳು ವಿಧಾನಸಭಾ ಸದಸ್ಯರಿದ್ದರು. ಎದುರಾಳಿಗಳು ಕೆಲವು ಕಾರ್ಯಗಳನ್ನು ಸಾಧಿಸುವುದಕ್ಕಾಗಿ ನಿಯಮಗಳನ್ನೂ ಸಂಪ್ರದಾಯಗಳನ್ನೂ ಕೈಬಿಟ್ಟು ಬಂದು: ಎಂದೂ ಅವನ್ನು ಸಾಧಿಸಲಾಗದ ಹಗೆತನ ಕಾರಣವಾಗಿ ಈ ಆರೋಪವನ್ನು ಹೊರಿಸಿದ್ದು ಎಂದಾಗಿತ್ತು ಮಂತ್ರಿಯ ವಾದ. ಆಗ ಮಂತ್ರಿಯ ಅನೀತಿಯನ್ನು ಕುರಿತು ಬಹಿರಂಗ ವಿಚಾರಣೆ ಮಾಡಬೇಕೆಂದು ಕಮ್ಯೂನಿಸ್ಟ್ ಪಾರ್ಟಿ ವಾದಿಸಿತು.

ಬಡ ಜನರು ! ಅವರಿಗೆ ಈ ಪ್ರತ್ಯಕ್ಷ ವಿಚಾರಣೆ ಬೇಡವಾಗಿತ್ತು. ಆದರೆ ಪ್ರತ್ಯಕ್ಷ ವಿಚಾರಣೆ ಬೇಕೆಂದು ಎಲ್ಲ ಗ್ರಾಮಗಳಲ್ಲೂ ನಗರದಲ್ಲೂ ಪ್ರಕಟಿಸಲಾಗಿತ್ತು.

ಔದ್ಯೋಗಿಕ ರಹಸ್ಯ ಬಹಿರಂಗವಾದದ್ದರ. ರಹಸ್ಯಾನ್ವೇಷಣೆಯ ಪ್ರಾರಂಭದ

1, 2.: ಕೇರಳದಲ್ಲಿ ಹಾಡು ಮತ್ತು ಅಭಿನಯದ ಮೂಲಕ ಪೌರಾಣಿಕ ಕಥೆಗಳನ್ನು ಹೇಳುವುದು.

ರಿಪೋರ್ಟನ್ನು ಮಂತ್ರಿಸಭೆಯಲ್ಲಿ ಹಾಜರ್‌ಪಡಿಸಲಾಯಿತು. ಸೆಕ್ರೆಟರಿ ಮಿಸ್ಟರ್ ಫಿಲಿಪ್ಸ್ ಅಪರಾಧಿ ಎನ್ನುವುದು ಪ್ರಾರಂಭಾನ್ವೇಷಣೆಯಲ್ಲಿ ಅರ್ಥವಾಗಿತ್ತು. ವಿವರವಾದ ಅನ್ವೇಷಣೆಯ ರಿಪೋರ್ಟು ದೊರೆಯುವ ವರೆಗೆ ಆ ಉದ್ಯೋಗಸ್ಥನನ್ನು ಸಸ್ಪೆನ್ಶನ್‌ನಲ್ಲಿ ನಿಲ್ಲಿಸಬೇಕೆಂಬ ಒಂದು ಸಲಹೆಯೂ ಇತ್ತು. ಮತ್ತೊಬ್ಬ ಉದ್ಯೋಗಸ್ಥನೂ ಈ ಕಾರ್ಯದಲ್ಲಿ ಅಪರಾಧಿ. ಹೈಡ್ರೊ ಎಲೆಕ್ಟ್ರಿಕ್ ಪ್ರಾಜೆಕ್ಟ್‌ನ ಜವಾಬ್ದಾರಿ ವಹಿಸಿಕೊಂಡಿದ್ದ ಮಿ॥ ಕೈಮಳು, ರಹಸ್ಯವನ್ನು ತಿಳಿಸಿಕೊಡುವುದರಲ್ಲಿ ಭಾಗವಹಿಸಿದ್ದ. ಅವನನ್ನೂ ಸಸ್ಪೆನ್ಶನ್‌ನಲ್ಲಿ ಇರಿಸಬೇಕಾದದ್ದು. ಹೊಸ ಸ್ಕೀಮ್ ರೂಪೀಕರಿಸಲು ಮತ್ತೊಬ್ಬ ಇಂಜಿನೀಯರನ್ನು ಬರಮಾಡಿದಾಗ ಮಿ॥ ಕೈಮಳ್‌ಗೆ ಸ್ವಾಭಾವಿಕವಾದ ದ್ವೇಷ ಅದಕ್ಕೆ ಸಂಬಂಧಪಟ್ಟ ಮಂತ್ರಿಯೊಡನೆ ತೋರಿರಬಹುದೆಂದು, ಹಾಗೆ ಆ ರಹಸ್ಯವನ್ನು ಶತ್ರು ಪಕ್ಷಕ್ಕೆ ತಿಳಿಸಿಕೊಟ್ಟದ್ದು ಎನ್ನುವ ಹೇಳಿಕೆ ದೊರೆತದ್ದೆಂದೂ ರಿಪೋರ್ಟಿನಲ್ಲಿ ಹೇಳಲಾಗಿತ್ತು.

ಮಂತ್ರಿಸಭೆ ಒಂದು ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿಹಾಕಿಕೊಂಡಿತು. ಮಂತ್ರಿಸಭೆಯೊಳಗೆ ದೊಡ್ಡ ಭಿನ್ನಾಭಿಪ್ರಾಯ ಉಂಟಾಗುವುದು ಎನ್ನುವ ವಿಷಯದಲ್ಲಿ ಸಂಶಯವಿಲ್ಲ. ಮಿಸ್ಟರ್ ಫಿಲಿಪ್ಸ್‌ಗೆ ಅನುಕೂಲನಾಗಿ ಮಂತ್ರಿ ಮಿಸ್ಟರ್ ಉಮ್ಮನ್ ಇದ್ದಾರೆ. ಆತ ಶಕ್ತನಾದ ಒಬ್ಬ ಮನುಷ್ಯ. ಜೊತೆಗೆ ಕಾಂಗ್ರೆಸ್ ಪ್ರೆಸಿಡೆಂಟ್ ಉಲಹನ್ನಾನನ ಹತ್ತಿರದ ಸಂಬಂಧಿ ಮಿಸ್ಟರ್ ಫಿಲಿಪ್ಸ್. ಅವರ ಪಕ್ಷವೂ ಮಿ॥ ಫಿಲಿಪ್ಸ್ ಕಡೆಯಲ್ಲಿ ನಿಲ್ಲುತ್ತದೆ. ಕೈಮಳ್ ಎನ್. ಎಸ್. ಎಸ್.ನ ಮನುಷ್ಯ. ಮಂತ್ರಿಸಭೆಯಲ್ಲಿ ಎನ್.ಎಸ್. ಎಸ್.ನ ಪ್ರತಿನಿಧಿ ಮಿ॥ ಕೈಮಳ್‌ಗೋಸ್ಕರ ವಾದಿಸುವುದುಂಟು. ಆ ಪಕ್ಷವೂ ಅದರ ಪ್ರತಿನಿಧಿಗಳಾದ ಎಂ. ಎಲ್. ಎ.ಗಳೂ ಆತನನ್ನು ಕೈಬಿಡುವುದಿಲ್ಲ. ಏನಿದ್ದರೂ ಈ ವಿಷಯದಲ್ಲಿ ಸಶಕ್ತವಾಗಿ ನಿಲ್ಲಬೇಕೆಂದು ಮುಖ್ಯಮಂತ್ರಿಯ ವಾದ. ಮಂತ್ರಿಸಭೆಯೂ ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿಯೂ ಕುಸಿದುಬೀಳುವ ಸ್ಥಿತಿಗತಿಗಳುಂಟಾಗುತ್ತಿದ್ದುವು.

ಲೂಕೋಸ್‌ಗೆ ಮನಸ್ಸಮಾಧಾನವೇ ಇರಲಿಲ್ಲ. ಎಂತೆಂತಹ ಕೋಟೆಗಳನ್ನೋ ಆತ ಮನಸ್ಸಿನಲ್ಲಿ ಕಟ್ಟಿಕೊಂಡು ಬಂದಿದ್ದ. ಎಲ್ಲವೂ ಕುಸಿದಂಬೀಳುವಂತಾಗಿತ್ತು. ಕೇಶವ ಪಿಳ್ಳೆಯ ಹತ್ತಿರವೇ ಆತ ಅಭಯವನ್ನು ಬಯಸಿದ.

ಲೂಕೋಸ್ ಕೇಳಿದ:

"ಇನ್ನು ಮೇಲೆ ಮಾಡಬೇಕಾದದ್ದು ಸರ್, ಎಲ್ಲ ನಾಶವಾಗುವ ಹಾಗೆ ಕಾಣಿಸುತ್ತೆ."

ಕೇಶವ ಪಿಳ್ಳೆ ಕೈ ಅಲ್ಲಾಡಿಸಿದರು. ಅವರಿಗೆ ಯಾವುದೂ ತಿಳಿಯದಾಗಿತ್ತು. ಲೂಕೋಸ್ ತಿಳಿದುಕೊಳ್ಳಬೇಕಾಗಿದ್ದದ್ದು ಒಂದು ವಿಷಯ. ಅದು ಮ್ಯಾಥ್ಯು ಕಳಗಿಳಿಯಬೇಕಾಗಿ ಬರುತ್ತದೆಯೋ ಎಂಬುದು.

ಕೇಶವ ಪಿಳ್ಳೆ ಹೇಳಿದರು: "ಮಂತ್ರಿಸಭೆ ಹೋದರೆ ಕೆಳಗಿಳಿಯಬೇಕಾಗಿ ಬರುತ್ತೆ."

ನಿರಾಶನಾದ ಲೂಕೋಸ್ ದಿಕ್ಕುಕಾಣದಂತಾಗಿ ಹೇಳಿದ: "ಆದ್ರೊಳ್ಳೆ ಕಷ್ಟ ಆಯ್ತಲ್ಲ! ಮ್ಯಾಥ್ಯುವಿಗೆ ಅವರ ಸಾಮರ್ಥ್ಯವನ್ನು ತೋರಿಸಲು ಸಮಯವೇ ಸಿಕ್ಕಿರಲಿಲ್ಲ. ಕೇಂದ್ರದಲ್ಲಿ ಪಂಚವಾರ್ಷಿಕ ಯೋಜನೆ ರೂಪುಗೊಳ್ಳುತ್ತಿದೆಯಲ್ಲ."

"ಹೌದು" ಎಂದರು ಕೇಶವ ಪಿಳ್ಳೆ. ಕೋಟಿಗಟ್ಟಲೆ ಖರ್ಚಿನ ಒಂದು ಏರ್ಪಾಟು. ಯಾವುದೋ ಹೊರಲಾರದ ನಷ್ಟದ ಭಾರವನ್ನು ಹೊರಿಸಿದಂತೆ ಲೂಕೋಸ್ ಕಷ್ಟ ಪಡುತ್ತಿದ್ದ.

ಲೂಕೋಸ್ ಹೇಳಿದ: "ಎಲ್ಲವನ್ನೂ ತಾವು ಯೋಚಿಸಿದರೆ ಸರಿಯಾಗುತ್ತೆ."

ಕೇಶವ ಪಿಳ್ಳೆ ಕೇಳಿದರು: "ನಾನು ಯೋಚಿಸಿದರೆ ಏನು ಮಾಡೋದಕ್ಕೆ ಸಾಧ್ಯ?"

"ಫಿಲಿಪ್ಸ್ ಆ ದಿನ ಅಷ್ಟೆಲ್ಲ ಯಾರಿಗೂ ನಷ್ಟವಿಲ್ಲದ ಹಾಗೆ ಮಾಡಿಕೊಟ್ಟರು. ಎಂಜಿನೀರ್ ಕೈಮಳ್ ಕೂಡ ಮಾಡಿಕೊಟ್ಟರು. ಅದು ಈಗ ಅವರಿಗೆ ತೊಂದರೆಯಾಯ್ತು."

ಒಂದು ಕ್ಷಣ ಬಿಟ್ಟು ಲೂಕೋಸ್ ಹೇಳಿದ: "ನೀವು ಮನಸ್ಸು ಮಾಡಿದರೆ ಎಲ್ಲ ಸರಿಹೋಗುತ್ತೆ. ಕೆಟ್ಟ ಪರಿಸ್ಥಿತಿಯನ್ನು ಪರಿಹರಿಸಬಹುದು."

ಕೇಶವ ಪಿಳ್ಳೆಗೆ ಒಂದು ತೀಕ್ಷ್ಣವಾದ ಸಂತೃಪ್ತಿಯುಂಟಾಗಿತ್ತು. ಫಿಲಿಪ್ಸ್‌ಗೆ ಒಂದು ಪಾಠ ಕಲಿಸಲು ತಕ್ಕ ಕಾಲ ಬಂದ ಹಾಗಿದೆ. ಎಂದೆಂದೂ ಅವನು ಕೇಶವ ಪಿಳ್ಳೆಯನ್ನು ತೊಂದರೆಪಡಿಸಲು, ದ್ರೋಹಬಗೆಯಲು ಶ್ರಮಿಸಿದ್ದವನು. ಚುನಾವಣೆಗೆ ಮೊದಲು ನಡೆದ ಆ ದೊಡ್ಡ ಕ್ರಾಂತಿಯ ಹಿಂದೆ ಫಿಲಿಪ್ಸ್ ಇದ್ದ. ಈಗಲೂ ಗೋಪಿಯ ಮೂಲಕ ಈ ಅಕ್ರಮ ಆರೋಪಣಗಳನ್ನು ಹೊರಿಸಿ ಈ ಬಿರುಗಾಳಿಯನ್ನೆಬ್ಬಿಸಿದುದು ಬೇರೆ ಯಾರೂ ಅಲ್ಲ. ಕೈಮಳು ತಾತ್ಕಾಲಿಕವಾಗಿ ಜೊತೆ ಸೇರಿಕೊಂಡ. ಹಾಗೆ ಪ್ರತೀಕಾರದ ಒಂದು ಆನಂದವನ್ನು ಆತ ಅನುಭವಿಸುತ್ತಿದ್ದಾನೆ.

ಆದರೆ ಅದರ ಜೊತೆಗೆ ಒಂದು ಭಯ. ಗಾಬರಿ ಅವರಿಗಿದೆ. ಸಂತೃಪ್ತಿ ಸುಖದಾಯಕವಲ್ಲ. ಜೀವನದಲ್ಲಿ ಮೊಟ್ಟಮೊದಲು ಒಬ್ಬನ ಮೇಲೆ ಪ್ರತೀಕಾರವೆಸಗಬೇಕೆಂದು ತೋರಿರುವುದು. ಇದಕ್ಕೆ ಮೊದಲು ಒಮ್ಮೆಯೂ ಯಾರೊಡನೆಯೂ ಕೇಶವ ಪಿಳ್ಳೆಗೆ ಪ್ರತೀಕಾರಲಾಲಸೆಯುಂಟಾಗಿರಲಿಲ್ಲ. ಔದ್ಯೋಗಿಕ ಕೆಲಸದ ಮಧ್ಯೆ ತಪ್ಪಿತಸ್ಥರಾದ ಉದ್ಯೋಗಸ್ಥರನ್ನು ಮನೆಗೆ ಕಳಿಸಿ, ಸಸ್ಪೆಂಡ್ ಮಾಡಿ, ಪ್ರೊಮೋಶನ್ ತಡೆಹಿಡಿದು—ಇವೇ ಮುಂತಾದ ಆರ್ಡರ್‌ಗಳಲ್ಲಿ ಸೈನು ಮಾಡಬೇಕಾಗಿಯೂ ಎಷ್ಟೋ ಕೇಸುಗಳಲ್ಲಿ ಒಂದು ತೀರ್ಮಾನಕ್ಕೆ ಬರಬೇಕಾಗಿಯೂ ಬಂದಿತ್ತು. ಆದರೆ ಆಗ ಒಮ್ಮೆಯೂ ಆ ಉದ್ಯೋಗಸ್ಥರ ಜೊತೆಯಲ್ಲಿ ಸಿಟ್ಟುಂಟಾಗಿರಲಿಲ್ಲ. ಆ ಆರ್ಡರ್‌ಗಳಿಗೆ ಸಹಿ ಹಾಕುವಾಗ ಕಷ್ಟವೆನಿಸುತ್ತಿತ್ತು. ಒಂದು ಸಂತೋಷವೂ ಸಂತೃಪ್ತಿಯೂ ಉಂಟಾಗಿರಲಿಲ್ಲ. ಆದರೆ ಮಿ॥ ಫಿಲಿಪ್ಸ್‌ನನ್ನು ಕುರಿತ ಪ್ರಾರಂಭ ರಿಪೋರ್ಟನ್ನು ತಯಾರು ಮಾಡಿ

ದಾಗ ಹಾಗಿರಲಿಲ್ಲ. ಆ ರಿಪೋರ್ಟ್ ಬರೆಯುವುದೇ ಒಂದು ಸ್ವಾರಸ್ಯವೆನ್ನಿಸಿತು. ಅದು ಕೇಶವ ಪಿಳ್ಳೆಯನ್ನು ಭಯಂಗೊಳಿಸಿದ್ದದ್ದು. ಆ ಸ್ವಾರಸ್ಯ ಈಗ ತಪ್ಪಾಗಿಹೋಯಿತು. ಯಾರೋ ಒಳಗೆ ಕುಳಿತು ಬಯ್ಯುತ್ತಿದ್ದಂತೆ ತೋರಿತು. ಆ ಬಯ್ಯುವಿಕೆ ಹೀಗೆ:

"ನೀನು ಅಷ್ಟು ದೊಡ್ಡ ಮನುಷ್ಯನಾದೆಯಾ?"

ಆದರೆ ಕೇಶವ ಪಿಳ್ಳೆಗೆ ಸಮಾಧಾನವಿತ್ತು.

"ನನಗೆ ಯಾವಾಗಲೂ ಕಾಟಕೊಟ್ಟವನು ಅವನು."

ಆ ಸಮಾಧಾನ ಸರಿಯಾದದ್ದಲ್ಲ. ಮಂತ್ರಿಸಭೆ ಉರುಳುವುದೂ ಕಾಂಗ್ರೆಸ್ ಛಿದ್ರಗೊಳ್ಳುವುದೂ ಯಾವುದೂ ಕೇಶವ ಪಿಳ್ಳೆಗೆ ಒಂದು ಪ್ರಶ್ನೆಯಲ್ಲ. ಅದನ್ನು ಕುರಿತು ಯಾವ ಬೇಸರವೂ ಇಲ್ಲ. ಈ ಮಂತ್ರಿಸಭೆ ಹೋದರೆ ಮತ್ತೊಂದು ಬರುತ್ತೆ. ತೊಂದರೆಯಿಲ್ಲ.

ಅಂದು ಸಂಜೆ, ಕಾತ್ಯಾಯಿನಿಯಮ್ಮನನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು ಕೇಶವ ಪಿಳ್ಳೆ ವಿಷಯವನ್ನು ತಿಳಿಸತೊಡಗಿದರು. ಔದ್ಯೋಗಿಕ ರಹಸ್ಯವೆಂದೋ ಅದು ಕೈತಪ್ಪಿಹೋಯಿತೆಂದೋ ರಹಸ್ಯಾನ್ವೇಷಣೆಯೆಂದೋ ಮುಂತಾಗಿ ಹೇಳಿದರೆ ಯಾವುದೂ ಆ ಸ್ತ್ರೀಗೆ ಅರ್ಥವಾಗುವ ವಿಷಯಗಳಲ್ಲ. ಎಲ್ಲವನ್ನೂ ವಿಸ್ತರಿಸಿ ಕೇಶವ ಪಿಳ್ಳೆ ತಿಳಿಸಿದರು. ಏತಕ್ಕೆಂದರೆ ಏನು ಮಾಡಬೇಕು ಎನ್ನುವುದಕ್ಕೆ ಒಂದು ಸಲಹೆಗೋಸ್ಕರ. ಅದಕ್ಕಾಗಿ ಮಾತ್ರ. ಮತ್ತೆ ಯಾರ ಹತ್ತಿರ ಕೇಳುವುದು? ಎಲ್ಲವನ್ನೂ ಕೇಳಿಸಿಕೊಂಡು ಕಾತ್ಯಾಯಿನಿಯಮ್ಮ ಕೇಳಿದಳು:

"ಹಾಗಾದರೆ ಅವರ ಉದ್ಯೋಗ ಕೈಬಿಟ್ಟು ಹೋಗುತ್ತೆ ಅಂತ ತೀರ್ಮಾನಿಸಿದಿರಾ?"

"ನಾನು ಮಂತ್ರಿಗಳ ಮುಂದೆ ಬರೆದು ಕೊಟ್ಟದ್ದು ತಾತ್ಕಾಲಿಕವಾಗಿ ಬೇರೆ ಕಡೆ ಇರಿಸಿಕೊಡಬೇಕು ಅಂತ."

"ಅದರಂತೆ ಅವರು ಮಾಡ್ತಾರಾ?"

"ನಾನು ಸ್ವತಃ ಹಾಗೆ ಒಬ್ಬ ಮನುಷ್ಯನನ್ನೂ ಶಿಕ್ಷಿಸಬೇಕೆಂದು ಇದು ವರೆಗೆ ಬರೆದಿಲ್ಲ."

"ಮತ್ತೆ ಹೀಗೆ ಬರೆಯಬೇಕು ಅನ್ನಿಸಿದ್ದು ಯಾಕೆ?"

"ಯಾವಾಗಲೂ ಅವನು ನನ್ನ ಶತ್ರುವಾಗಿದ್ದ."

ಕಾತ್ಯಾಯಿನಿಯಮ್ಮ ಕೇಳಿದಳು: "ಅದಕ್ಕೆ ಶಿಕ್ಷೆ ಕೊಡಬೇಕಾದದ್ದು ನಾವೇನು?"

ಕೇಶವ ಪಿಳ್ಳೆ ಉತ್ತರ ಹೇಳಲಿಲ್ಲ. ಅದೇ ಪ್ರಶ್ನೆಯನ್ನು ಅವರ ಒಳಗಿದ್ದು ಕೊಂಡು ಯಾರೋ ಕೇಳುತ್ತಿದ್ದರು. ಒಂದು ಉತ್ತರವನ್ನು ಅದಕ್ಕೆ ಸಮಾಧಾನವಾಗಿ ಹೇಳಬೇಕಾಗಿದ್ದದ್ದು. ಒಬ್ಬ ನ್ಯಾಯಾಧಿಪತಿಯ ಮುಂದೆ ಎನ್ನುವಂತೆ ಕೇಶವ ಪಿಳ್ಳೆ ತನ್ನ ತಪ್ಪಿಗೆ ಆ ಸಮಾಧಾನವನ್ನು ಹೇಳಿದರು:

"ಸರ್ಕಾರದ ಕೆಲಸ. ಅದನ್ನು ನಾನು ಮಾಡಬೇಕು. ಅದು ನನ್ನ ಕರ್ತವ್ಯ. ಅದನ್ನು ನಾನು ಮಾಡಿದೆ."

ಆ ನ್ಯಾಯಾಧಿಪತಿಗೆ ಆ ಸಮಾಧಾನ ಏನೇನೂ ಹಿಡಿಸಲಿಲ್ಲ. "ಸರ್ಕಾರದ ಕೆಲಸ. ಅದು ಬೇರೆಯವರಿಗೆ ತೊಂದರೆ ಕೊಡೋದಕ್ಕಲ್ಲ. ಒಮ್ಮೆ ಆಲೋಚನೆ ಮಾಡಿ ನೋಡಿ. ಒಂದು ಕೆಲಸ ಸಿಕ್ಕಿತು. ಅದರಲ್ಲಿ ಅಭಿವೃದ್ಧಿಯೂ ಆಯ್ತು. ಬುದ್ಧಿವಂತಿಕೆಯಿಂದ ಅವನವನ ಕೆಲಸ ನೋಡಿಕೊಂಡು, ಅಲ್ಲಿಂದ ಕಳಗಿಳಿಯಬೇಕು. ಅದು ಬೇಕಾದದ್ದು. ಮನುಷ್ಯರ ಶಾಪ ತಲೆ ಮೇಲೆ ಹಾಕಿಕೊಳ್ಳಬಾರದು."

ಮೌನವಾಗಿದ್ದ ಗಂಡನ ಎದುರಿಗೆ ಕಾತ್ಯಾಯಿನಿಯಮ್ಮ ಒಂದು ಪ್ರಶ್ನೆಯನ್ನು ಹಾಕಿದಳು:

"ಇಷ್ಟು ದಿನ ಮಾಡಿದ ಕೆಲಸವೆಲ್ಲ ಸರಿಯಾಗಿತ್ತಾ?"

ಕೇಶವ ಪಿಳ್ಳೆ ತಲೆಯೆತ್ತಿ ನೋಡಿದರು. ಅವಳು ಉತ್ತರವನ್ನು ಬಯಸಿ ಕೇಳಿದ ಪ್ರಶ್ನೆಯಲ್ಲ ಅದು. ಕಾತ್ಯಾಯಿನಿಯಮ್ಮನೇ ಉತ್ತರ ಹೇಳಿದ್ದು:

"ಅಲ್ಲ, ನಿಜವಾಗಿಯೂ ಅಲ್ಲ. ಬೇರೊಬ್ಬರು ತಪ್ಪು ಮಾಡಿದರೆ ನಾವು ಅದರಲ್ಲಿ ಪ್ರವೇಶಿಸಿ ಶಿಕ್ಷೆ ಕೊಡಬಹುದಾ?"

ಕೇಶವ ಪಿಳ್ಳೆ ಹೇಳಿದರು: "ನಾನು ಈ ದೇಶದ ಪ್ರಧಾನ ಉದ್ಯೋಗಸ್ಥ. ನನಗೆ ಜವಾಬ್ದಾರಿಗಳಿವೆ. ತಪ್ಪು ಮಾಡಿದವರನ್ನು ಶಿಕ್ಷಿಸಬೇಕು. ಮುಖ ನೋಡುವುದಕ್ಕೆ ಸಾಧ್ಯವಿಲ್ಲ."

ಅದಕ್ಕೆ ಥಟ್ಟನೆ ಉತ್ತರ ಬಂದಿತು:

"ಅದಕ್ಕೆ ತಪ್ಪು ಮಾಡದವನಾಗಿರಬೇಕು."

ಕಾತ್ಯಾಯಿನಿಯಮ್ಮ ಒತ್ತಾಯಪೂರ್ವಕವಾಗಿ ತಡೆದಳು:

"ಯಾರು ಯಾರ ಕೈಯಲ್ಲೋ ಶಾಪ ಹಾಕಿಸಿಕೊಳ್ಳೋದು ಬೇಡಿ."

ಆದರೆ ಕೇಶವ ಪಿಳ್ಳೆಯಲ್ಲಿ ಅಡಗಿದ್ದ ಪ್ರತೀಕಾರಲಾಲಸೆ ಕೆಲವು ಸಲ ತಲೆ ಎತ್ತಿ ಬರುತ್ತಿತ್ತು.

ಮಾರನೆಯ ದಿನ ಮಿ॥ ಫಿಲಿಪ್ಸ್ ಚೀಫ್ ಸೆಕ್ರೆಟರಿಯನ್ನು ಕಂಡರು.

ಅದು ಲೂಕೋಸನ ಸಾಮರ್ಥ್ಯದಿಂದ. ಮಿ॥ ಫಿಲಿಪ್ಸ್ ತೀರ ಕಳೆಗುಂದಿದ್ದರು. ಸೋತುಹೋದ ಮನುಷ್ಯನಾಗಿದ್ದರು. ಹಾಗೆ ಬಂದ ಮನುಷ್ಯನನ್ನು ಕೇಶವ ಪಿಳ್ಳೆ ಅಂತಸ್ತಿನಿಂದ ಸ್ವಾಗತಿಸಿದ್ದು. ಮಿ॥ ಫಿಲಿಪ್ಸ್ ತಾವು ಮಾಡಿದ ಅಪಕಾರಕ್ಕೆ ಕ್ಷಮೆ ಕೇಳಲು ಸಿದ್ಧರಾಗಿದ್ದರು. ಆದರೆ ಕೇಶವ ಪಿಳ್ಳೆ ಅದಕ್ಕೆ ಒಪ್ಪಲಿಲ್ಲ. ಅವರು ಹೇಳಿದರು:

"ಮಿ॥ ಫಿಲಿಪ್ಸ್, ನಾನು ಇಲ್ಲಿ ಕುಳಿತಿರುವುದು ಕೇವಲ ಒಂದು ಯಾದೃಚ್ಛಿಕ ಸಂಬಂಧ. ನೀವು, ಬೇಕಾದರೆ ಅದಕ್ಕೆ ಭಾಗ್ಯ ಅಂತ ಹೆಸರಿಟ್ಟುಕೊಳ್ಳಿ. ಅದರ ಹೆಸರಿನಲ್ಲಿ ಯಾರೂ ಯಾರೊಡನೆಯೂ ಕ್ಷಮಾಯಾಚನೆ ಮಾಡಬೇಕಾಗಿಲ್ಲ."

ಬಾಗಿಲ ಮರೆಯಲ್ಲಿ ನಿಂತು ಕಾತ್ಯಾಯಿನಿಯಮ್ಮ ತಲೆ ಅಲ್ಲಾಡಿಸಿದಳು. ಅದು ಅವಳಿಗೆ ತುಂಬ ಇಷ್ಟವಾಯಿತು. ಫಿಲಿಪ್ಸ್‌ಗೆ ಸ್ವಲ್ಪ ಹೇಳಿಕೊಳ್ಳುವುದಿತ್ತು.

"ನಾನು ಏನೇನೋ ಮಾಡಿಬಿಟ್ಟೆ."

ಫಿಲಿಪ್ಸ್‌ನಿಂದ ಹೆಚ್ಚಿಗೆ ಮಾತನಾಡಿಸಲಿಲ್ಲ ಕೇಶವ ಪಿಳ್ಳೆ.

"ನೀವು ಏನೂ ತಪ್ಪು ಮಾಡಿದ್ದಾಗಿ ಆಲೋಚಿಸಬೇಡಿ. ಅಥವಾ ಏನಾದರೂ ಮಾಡಿದ್ದರೂ ನನಗೆ ಅದು ಯಾವುದೂ ತೊಂದರೆ ಮಾಡಿಲ್ಲ. ಆದ್ದರಿಂದ ಅದಕ್ಕೆ ವ್ಯಾಕುಲಪಡಬೇಕಾಗಿಯೂ ಇಲ್ಲ."

ಎಲ್ಲವನ್ನೂ ಮರೆಯಬೇಕು ಎಂದು ಫಿಲಿಪ್ಸ್ ಕೇಳಿಕೊಂಡರು.

ಯಾವುದನ್ನೂ ಜ್ಞಾಪಕದಲ್ಲಿಟ್ಟುಕೊಂಡಿಲ್ಲ. ಆದ್ದರಿಂದ ಮರೆಯುವಂಥಾದ್ದೂ ಇಲ್ಲ ಎಂದು ಕೇಶವ ಪಿಳ್ಳೆಯೂ ಹೇಳಿದರು. ಹಾಗೆ ಅವರು ತಮ್ಮಲ್ಲಿದ್ದ ತರ್ಕವನ್ನು ಮುಗಿಸಿದರು.

ನಿಜವಾಗಿಯೂ ಕೇಶವ ಪಿಳ್ಳೆಗೆ ಒಂದು ಸಮಾಧಾನವುಂಟಾಗಿತ್ತು. ಒಂದು ಮನಃಕ್ಲೇಶ ಕಡಿಮೆಯಾಯಿತು. ಹಾಗೆ ಒಳ್ಳೇ ರೀತಿಯಲ್ಲಿ ನಡೆದುಕೊಂಡದ್ದಕ್ಕೆ ಕಾತ್ಯಾಯಿನಿ ಗಂಡನನ್ನು ಅಭಿನಂದಿಸಿದಳು.

ಮುಂದಿನ ಕ್ಯಾಬಿನೆಟ್ ಸಭೆ ಹೊಂದಾಣಿಕೆಯಿಂದ ಐಕ್ಯಮತ್ಯದಿಂದ ನಡೆಯುವುದಕ್ಕೆ ಅವಕಾಶವಿಲ್ಲ. ಸ್ವಲ್ಪ ಕಾಲ ತಡೆದು ಸಭೆ ಸೇರಿದರೆ ಸಾಕು ಎಂದು ಕೇಶವ ಪಿಳ್ಳೆಗೆ ತೋರಿತು. ಅವರು ಕ್ಯಾಬಿನೆಟ್ ಸೆಕ್ರೆಟರಿ ಕೂಡ. ಮಂತ್ರಿಗಳಿಗೂ ಅದೇ ಉದ್ದೇಶವಿತ್ತು. ಈ ಮಧ್ಯೆ ಲೂಕೋಸ್ ಅಲ್ಲಿ ಇಲ್ಲಿ ಓಡಾಡಿದ್ದು ಸಾಮಾನ್ಯ ಓಡಾಟವಲ್ಲ. ಕ್ಯಾಥೊಲಿಕ್ ಕಾಂಗ್ರೆಸ್ ಪ್ರೆಸಿಡೆಂಟಾಗಿದ್ದವನು ಅಲ್ಲಿ ಇಲ್ಲಿ ಒಂದು ಹೇಳಿಕೆಯನ್ನು ಹೊರಡಿಸಿದನು. ಅದರಲ್ಲಿ ಸ್ವಲ್ಪ ಭಯಾನಕ ವಿಷಯವಿತ್ತು. ಆದರೂ ಅದೇನೂ ತೊಂದರೆ ಉಂಟುಮಾಡುವುದಲ್ಲ. ನಾಯರ್ ಸರ್ವೀಸ್ ಸೊಸೈಟಿಯ ಮನುಷ್ಯ ಆ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಕಾಂಗ್ರೆಸ್ ಸೆಕ್ರೆಟರಿ ಆದದ್ದು. ಆತನೂ ಭಯಾನಕ ಸ್ವರದಲ್ಲಿ ಒಂದು ಹೇಳಿಕೆಯನ್ನು ಹೊರಡಿಸಿದ. ನಾಯರ್ ಮಂತ್ರಿಗಳೂ. ಉದ್ಯೋಗಸ್ಥರೂ ತಮಗೆ ಯಾರ್‍ಯಾರೂ ಇಲ್ಲದವರೆಂದು ಭಾವಿಸಬಾರದೆನ್ನುವ ಒಂದು ಧ್ವನಿ ಅದರಲ್ಲಿತ್ತು. ಆದರೆ ಅನಂತರ ಅದಕ್ಕೆ ಟೀಕೆ. ಮಾರುತ್ತರ—ಯಾವುದೂ ಅದರಲ್ಲಿರಲಿಲ್ಲ. ಫಿಲಿಪ್ಸ್. ಕೇಶವ ಪಿಳ್ಳೆ ಪರಸ್ಪರ ಹೊಂದಿಕೊಂಡ ನಂತರ ಕಾಂಗ್ರೆಸ್ ಪ್ರೆಸಿಡೆಂಟೂ ಸೆಕ್ರೆಟರಿಯೂ ಪ್ರತ್ಯೇಕವಾಗಿಯೂ ಒಟ್ಟಾಗಿಯೂ ಚೀಫ್ ಸೆಕ್ರೆಟರಿಯನ್ನು ಕಂಡರು. ಅವರೆಲ್ಲ ತಮ್ಮಲ್ಲಿರುವ ವಿಷಯಗಳನ್ನು ಒಂದು ರೀತಿಯಲ್ಲಿ ಪರಸ್ಪರ ವ್ಯಕ್ತಪಡಿಸಿದ್ದರು. ಮಂತ್ರಿ ಕುರುಪ್‌ಗೆ ವಿರೋಧವಾಗಿ ಆರೋಪವನ್ನೆತ್ತಿದ್ದ ಮಂತ್ರಿಗಳೂ ಒಂದು ಸಲ ಬಾಯಿ ಮುಚ್ಚಿದರು. ಮಂತ್ರಿ ಎಂ॥ ಕುರುಪ್ ಅವರೂ ಪರಸ್ಪರ ಒಂದು ಹೊಂದಾಣಿಕೆಗೂ ಅಭಿಪ್ರಾಯಕ್ಕೂ ಬಂದರು. ಆರೋಪಣೆಯನ್ನು ಎತ್ತಿದ ಎಂ. ಎಲ್. ಎ.ಯ ಹೆಂಡತಿಯ ಸಹೋದರನಿಗೆ ಒಂದು ಬಸ್ಸು ರೂಟಿನ ಪರ್ಮಿಟ್ ಸಿಕ್ಕಬೇಕಾಗಿತ್ತು ಅಷ್ಟೆ. ಆದರೆ ಮುಖ್ಯಮಂತ್ರಿ ಒಂದು ಬಿಗಿಯಲ್ಲಿ ನಿಂತಿದ್ದರು. ಅಕ್ರಮವಿದ್ದಲ್ಲಿ ವಿಚಾರಣೆ

ನಡೆಸಲೇಬೇಕು ಎಂದು ಅವರ ವಾದ. ತಪ್ಪು ಮಾಡಿದ ಉದ್ಯೋಗಸ್ಥರನ್ನು ಅವರು ಯಾರೇ ಆಗಿದ್ದರೂ ಶಿಕ್ಷಿಸಬೇಕು. ಆ ಕಾರಣದಿಂದ ವಿಧಾನ ಸಭೆ ಭಿನ್ನಾಭಿಪ್ರಾಯ ಹೊಂದುವುದಿದ್ದರೂ ಮಂತ್ರಿಸಭೆ ಉರುಳುವುದಿದ್ದರೂ ಅವರಿಗೆ ಬೇಸರವಿಲ್ಲ.

ಮುಖ್ಯ ಮಂತ್ರಿಯ ಮನಸ್ಸಿನಲ್ಲಿ ಏನಿದೆ ಎಂದು ಯಾರಿಗೂ ಒಂದು ಸುಳುಹೂ ಸಿಕ್ಕಿರಲಿಲ್ಲ. ಅವರೊಡನೆ ವಿಶ್ವಾಸ ಸಂಪಾದಿಸಲು ಎಲ್ಲರೂ ಒಟ್ಟಿಗೆ ಹಾಗೂ ಪ್ರತ್ಯೇಕ ಪ್ರತ್ಯೇಕವಾಗಿ ಪ್ರಯತ್ನಗಳನ್ನು ನಡೆಸಿದರು. ಯಾವುದೂ ಕೈಗೂಡಲಿಲ್ಲ. ಕಡೆಗೆ ಚೀಫ್ ಸೆಕ್ರೆಟರಿಯೂ ಉಳಿದ ಮಂತ್ರಿಗಳೂ ಕಾಂಗ್ರೆಸ್ ಪ್ರೆಸಿಡೆಂಟೂ ಒಟ್ಟಾಗಿ ಒಂದು ತೀರ್ಮಾನಕ್ಕೆ ಬಂದರು. ಮುಖ್ಯ ಮಂತ್ರಿ ಒಪ್ಪದಿದ್ದರೆ ಬೇಡ. ಆತ ರಾಜೀನಾಮೆ ಕೊಡಲಿ. ಹೊಸಬನನ್ನು ಆರಿಸೋಣ. ಆತ ತನ್ನ ಮಂತ್ರಿಗಳನ್ನು ಆರಿಸಿಕೊಳ್ಳಲಿ. ಈಗ ಇರುವ ಎಲ್ಲ ಮಂತ್ರಿಗಳೂ ಆ ಮಂತ್ರಿಸಭೆಯಲ್ಲಿರಬೇಕು.

ಬುದ್ಧಿಪೂರ್ವಕವಾಗಿ ಕೇಶವ ಪಿಳ್ಳೈ ನಿರ್ಣಾಯಕವಾದ ಕ್ಯಾಬಿನೆಟ್ ಸಭೆಯನ್ನು ನಿಯಂತ್ರಿಸಿದರು. ಯಾವ ಕಡೆಯಲ್ಲೂ ಅದು ಶಿಥಿಲವಾಗದಂತೆ, ಕುಸಿಯದಂತೆ ಶಕ್ತಿ ಮೀರಿ ಶ್ರಮಿಸಿದರು. ಚೀಫ್ ಸೆಕ್ರೆಟರಿ ನಿಷ್ಪಕ್ಷಪಾತ ದೃಷ್ಟಿಯುಳ್ಳವರು, ಸತ್ಯಸಂಧರು. ಎಂದು ಎಲ್ಲರಿಗೂ ಅನ್ನಿಸಿತು. ಆದರೆ ಮುಖ್ಯ ಮಂತ್ರಿ ರಾಜೀನಾಮೆ ಸಲ್ಲಿಸಿದರು

ಮಾರನೆಯ ದಿನದ ಪತ್ರಿಕೆಗಳಲ್ಲಿ ದೊಡ್ಡ ಅಕ್ಷರಗಳಲ್ಲಿ ಆ ದೊಡ್ಡ ಸುದ್ದಿ ಬಂದಿತು. ಕೂಡಲೇ ಒಬ್ಬ ಹೊಸ ಮುಖಂಡನನ್ನು ಆರಿಸಲು ವಿಧಾನಸಭೆಯ ಸದಸ್ಯರ ಒಂದು ಸಭೆ ಸೇರಿತು. ಅಂತೂ ವಿಧಾನ ಸಭೆಯ ಅಂಗಗಳು ಮುಖ್ಯಮಂತ್ರಿಯ ಜೊತೆಯಲ್ಲಿ ಕೈಬಿಟ್ಟು ಹೋದುವು. ಆದರೂ ವಿಧಾನಸಭೆಯಲ್ಲಿ ಕಾಂಗ್ರೆಸ್ಸಿಗೆ ಬಹುಮತವಿತ್ತು. ಅವರು ಹೊಸ ನಾಯಕನನ್ನು ಆರಿಸಿದರು. ಪುನಃ ಪಾರ್ಟಿಯೊಳಗೇ ಕೆಲವು ಬದಲಾವಣೆಗಳುಂಟಾದುವು. ಕೆಲವರೆಲ್ಲ ಮಂತ್ರಿಸ್ಥಾನಕ್ಕಾಗಿ ಶ್ರಮಿಸಿದರು. ಸರಿಯಾಗಲಿ, ತಪ್ಪಾಗಲಿ, ಅಕ್ರಮ ಆರೋಪಣೆಗೆ ಗುರಿಯಾದವರನ್ನು ಮಂತ್ರಿಗಳನ್ನಾಗಿ ಮಾಡಬಾರದೆಂದು ಒಂದು ವಾದ—ಪತ್ರಿಕೆಗಳ ಪುಟಗಳಲ್ಲಿ ಕಂಡುಬಂದುವು. ಹೊಸ ಮಂತ್ರಿಗಳ ಹೆಸರುಗಳೂ ಕೇಳಿಬಂದುವು.

ಹೊಸ ನಾಯಕ ಆತನ ಮಂತ್ರಿಗಳ ಹೆಸರನ್ನು ಪ್ರಕಟಿಸಿದ. ಮುಖ್ಯಮಂತ್ರಿ ಮಾತ್ರ ಬದಲಾವಣೆಯಾಗಿದ್ದದ್ದು. ಮಂತ್ರಿಸಭೆಯಲ್ಲಿ ಮೊದಲಿದ್ದವರೆಲ್ಲರೂ ಇದ್ದರು. ಲೂಕೋಸ್‌ಗೆ ಸಮಾಧಾನವಾಯಿತು. ಇನ್ನು ಸ್ವಲ್ಪ ಕಾಲ ವಿಶ್ರಾಂತಿ ಪಡೆಯಬಹುದು. ಎನ್ನಿಸಿತು.

## [32]

# ಅಕ್ರಮ ನಿರೋಧ

ಎಲ್ಲಿ ನೋಡಿದರೂ ಅಕ್ರಮವನ್ನು ಕುರಿತ ಆರೋಪಗಳು. ಯಾವುದೋ ಒಂದು ಹೊಸ ಕಾರ್ಯ ಇದು ಎನ್ನುವಂತೆ—ಇದುವರೆಗೆ ತಿರುವಾಂಕೂರಿನವರಿಗೆ ತಿಳಿಯದ ಒಂದು ವಿಷಯ ಅನುಭವಕ್ಕೆ ಬಂದಂತೆ ಎಲ್ಲ ಉದ್ಯೋಗಸ್ಥರೂ ಮಾತನಾಡಿಕೊಂಡರು.

ಸರ್ಕಾರಕ್ಕೆ ಏನೂ ಮಾಡದಿರುವುದಕ್ಕೆ ಸಾಧ್ಯವಿಲ್ಲದಾಯಿತು. ಸರ್ಕಾರ ಅವಶ್ಯಪಟ್ಟದ್ದನ್ನು ಅನುಸರಿಸಿ ಒಂದು ಅಕ್ರಮ ನಿರೋಧ ಕಾರ್ಯಕ್ರಮವನ್ನು ಕೇಶವ ಪಿಳ್ಳೈ ರೂಪೀಕರಿಸಿದರು. ಸರ್ಕಾರದ ಅಂಗೀಕಾರದೊಡನೆ ಅದು ಕಾರ್ಯಾಚರಣೆಗೂ ಬಂದಿತು. ಪ್ರತಿ ಮೂರು ತಿಂಗಳಿಗೊಮ್ಮೆ ಅಕ್ರಮವನ್ನು ನಡೆಸುವವರೊಡನೆ ಯಾವ ದಾಕ್ಷಿಣ್ಯವನ್ನೂ ತೋರಿಸಲಾಗುವುದಿಲ್ಲವೆಂದು ಮುನ್ಸೂಚನೆ ನೀಡುತ್ತ ಸರ್ಕಾರದ ಸರ್ಕ್ಯುಲರುಗಳು ಪ್ರತಿ ವರ್ಷವೂ ಬರುತ್ತಿದ್ದವು. ಆ ಲೆಕ್ಕದಲ್ಲೇ ಇದೂ ಇರುವುದು ಎಂದು ಹಲವು ಉದ್ಯೋಗಸ್ಥರು ತಿಳಿದುಕೊಂಡದ್ದು. ಇದಕ್ಕೆ ವಿಶೇಷ ಮಹತ್ವವನ್ನೇ ಯಾರೂ ಕೊಟ್ಟಿರಲಿಲ್ಲ.

ಈ ವಿಷಯವನ್ನು ಕೇಶವ ಪಿಳ್ಳೈ ಹೆಂಡತಿಗೆ ತಿಳಿಸಿದರು. ಎಲ್ಲವನ್ನೂ ಶ್ರದ್ಧೆಯಿಂದ ಕೇಳಿಸಿಕೊಂಡು ಕಾತ್ಯಾಯಿನಿಯಮ್ಮ ಕೇಳಿದಳು:

"ಹಾಗಾದರೆ ನಮ್ಮ ದೇವೀಕುಳದ ಟೀ ತೋಟಕ್ಕೆ ಇನ್ನು ಮೇಲೆ ನಾವೂ ಹಣ ಕೊಡಬೇಕಲ್ಲ?"

ಅದು ಕೊಡಬೇಕಾಗಿ ಬರಬಹುದೆಂದು ಕೇಶವ ಪಿಳ್ಳೈ ಹೇಳಿದರು. ಕಾತ್ಯಾಯಿನಿ ಗಂಡನಿಗೆ ಸ್ವಲ್ಪ ಬುದ್ಧಿಗೇಡಿತನವುಂಟಾಗುವಂತೆ ಕೇಳಿದಳು: "ಹಾಗಿದ್ದರೆ ನಮ್ಮ ಟೀ ತೋಟ ಸರಿಮಾಡಿದ ಮೇಲೆ ಆಗಿದ್ದರೆ ಆಗ್ತಿರಲಿಲ್ಲವಾ?"

ಕೇಶವ ಪಿಳ್ಳೈಗೆ ಮಾತನಾಡುವುದಕ್ಕೆ ಅವಕಾಶ ಸಿಕ್ಕಿತು.

"ಇರೋ ಅಷ್ಟೇ ಸಾಕು ಅಂತ ನೀನು ಹೇಳ್ತಿದ್ದೆಯಲ್ಲ. ಈಗ ಯಾಕೆ ಹಾಗಂತೀಯ?"

ಕಾತ್ಯಾಯಿನಿಯಮ್ಮನಿಗೆ ಸಂಬಂಧಿಸಿದಂತೆ ಅದು ಬಾಯಿ ಮುಚ್ಚಿಸುವ ಒಂದು ಪ್ರಶ್ನೆಯಾಗಿರಲಿಲ್ಲ.. ಅವಳು ಹೇಳಿದಳು: "ಅದು ಸರಿ. ನನಗೆ ಯಾವಾಗಲೂ ತೃಪ್ತಿ. ಇರೋ ಅಷ್ಟರಲ್ಲೇ ಸಂತೋಷ. ಆದರೆ ಹೆಚ್ಚಿಗೆ ಬೇಡ ಅಂತಲ್ಲ. ನಾನೂ ಮನುಷ್ಯಳು. ಟೀ ತೋಟವೂ ಇದ್ದರೆ ಅದೂ ಸಂತೋಷ. ಇಲ್ಲದೆ ಇದ್ದರೂ ದುಃಖವಿಲ್ಲ ಅಷ್ಟೆ."

ಆದರೂ ಅವಳು ಕೇಳಬೇಕಾದ ಪ್ರಶ್ನೆಯೊಂದಿತ್ತು. ಅದು ಈ ಅಕ್ರಮ ನಿರೋಧನದ ಏರ್ಪಾಟನ್ನು ಕುರಿತಾಗಿತ್ತು: ಈ ಅಕ್ರಮ ಎನ್ನುವುದು ಏನು? ಅನ್ಯಾಯವಾಗಿ ನಿಯಮವಿರುದ್ಧವಾಗಿರುವುದೆಂದು ಅವಳಿಗೆ ಅರ್ಥವಾಗುವುದಿಲ್ಲ. ಅವಳು ಹೇಳಿದಳು:

"ಮಾವ ಹೇಳ್ತಿದ್ದರು: ಕಡಲಿನ ಕರೆಯಲ್ಲಿ ಸಂಬಳವಿಲ್ಲದೆ ತೆರೆ ಎಣಿಸೋ ಕೆಲಸ ಸಿಕ್ಕಿದರೂ ಸಾಕು. ಜೀವನ ಮಾಡಬಹುದು ಅಂತ. ಅದಿರಲಿ. ನಾನೊಂದು ವಿಷಯ ಕೇಳ್ತೀನಿ. ಒಬ್ಬ ಮನುಷ್ಯನಿಗೆ ಒಂದು ಕೆಲಸ ಮಾಡಿಕೊಡಬೇಕು. ಅದಕ್ಕೆ ನಾಲ್ಕು ಕಾಸು ಅವನು ಕೊಟ್ಟ. ಅದರಲ್ಲಿ ತಪ್ಪೇನು? ಕೆಲಸ ಮಾಡಿಕೊಟ್ಟ ಮೇಲಲ್ಲವಾ ನಾಲ್ಕು ಕಾಸು ಕೊಡೋದು? ಸುಮ್ಮನೇನಾ?"

ಕೇಶವ ಪಿಳ್ಳೆಗೆ ನಿಜವಾಗಿಯೂ ಗಂಟಲು ಕಟ್ಟಿತು. ಒಂದು ದೊಡ್ಡ ಸಂಸ್ಥಾನದಲ್ಲಿ ಬಹು ದೊಡ್ಡ ಉದ್ಯೋಗಸ್ಥ ಆತ. ಆ ಪ್ರಶ್ನೆಗೆ ಯಾವ ಉತ್ತರ ಹೇಳಬೇಕೆನ್ನುವುದು ತಿಳಿಯದೆ ಇಲ್ಲ. ಅಂತಹ ಒಂದು ಸಂಭವವೇ ಆದರೂ ಎಲ್ಲಿ, ಹೇಗೆ ಅನೀತಿ? ಅದು ಹೇಗೆ ಅಕ್ರಮವಾಗುತ್ತದೆ ಎನ್ನುವುದೆಲ್ಲ ನಿಜವಾಗಿಯೂ ಆ ಉದ್ಯೋಗಸ್ಥನಿಗೆ ಗೊತ್ತು. ಅಕ್ರಮದ ಎಲ್ಲ ರೂಪಗಳನ್ನೂ ಕುರಿತ ತಿಳಿವಳಿಕೆಗಳಿವೆ. ಆದರೆ ಕೇಶವ ಪಿಳ್ಳೆಗೆ ಅದನ್ನು ತಿಳಿಸಲು ಸಾಧ್ಯವಿಲ್ಲ. ಹೇಳತೊಡಗಿದರೆ ನೀತಿಯನ್ನು ಕುರಿತು, ನ್ಯಾಯವನ್ನು ಕುರಿತು ಎಲ್ಲವನ್ನೂ ಹೇಳಬೇಕಾಗುತ್ತದೆ. ಅದು ಸಮುದ್ರಕ್ಕಿಂತ ಹೆಚ್ಚಾಗಿ ಹರಡಿಕೊಳ್ಳುತ್ತದೆ. ತಿಳಿಸುವುದಕ್ಕೆ ಅದೊಂದು ಸಾಮರ್ಥ್ಯರಹಿತವಾದದ್ದಾಗಿತ್ತು.

ಕಾತ್ಯಾಯಿನಿಯಮ್ಮ ಕೇಳಿದಳು:

"ಯಾಕೆ ಏನೂ ಮಾತಾಡೋದಿಲ್ಲ? ನಾನು ಇದ್ದದ್ದು ಹೇಳಿದೆ. ಅಲ್ಲವಾ?"

ಅದು ಸರಿಯಲ್ಲ ಎಂದು ಖಡಾಖಂಡಿತವಾಗಿ ಹೇಳಲೂ ಸಾಧ್ಯವಿಲ್ಲ. ನೂರಾರು ವರ್ಷಗಳಿಂದಲೇ ಎಂದು ಹೇಳಬಹುದು—ನೆಲೆಗೊಂಡಿದ್ದ ಒಂದು ಸಮಾಜದ ನೀತಿ ನ್ಯಾಯಗಳು ಸೃಷ್ಟಿಗೊಂಡು ಬಂದಿದ್ದ ಒಂದು ವ್ಯವಸ್ಥೆಯ ಹಕ್ಕುದಾರ ಕೇಶವ ಪಿಳ್ಳೆ. ಅಕ್ರಮದ ಎಲ್ಲ ಮುಖಗಳೂ ತಪ್ಪೆಂದಾಗಲೀ ಪಾಪವೆಂದಾಗಲೀ ಖಚಿತವಾಗಿ ಹೇಳಲು ಕೇಶವ ಪಿಳ್ಳೆಗೆ ಸಾಧ್ಯವಿಲ್ಲ. ಈ ಬದಲಾವಣೆಯನ್ನು ಅದೇ ರೀತಿ ಅಂಗೀಕರಿಸಲೂ ಸಾಧ್ಯವಿಲ್ಲ. ಆದರೆ ಎಲ್ಲ ಅಕ್ರಮಗಳಿಗೂ ಎದುರಾಗಿ ಪರೀಕ್ಷೆಗೆ ಪಾಠ ಕಲಿತು ತಯಾರಾಗುವ ಒಬ್ಬ ವಿದ್ಯಾರ್ಥಿಯಂತೆ ಸರಿಯಾಗಿ ವಾದಿಸುವುದಕ್ಕೆ ಮಾತ್ರ ಸಾಧ್ಯ. ಮಧ್ಯೆ ಏನಾದರೂ ಹೇಳಬೇಕಾಗಿ ಬಂದರೆ ಆ ವಿದ್ಯಾರ್ಥಿಯಂತೆ ಸೂತ್ರ ಕಿತ್ತುಹೋಗಲೂ ಬಹುದು. ಅಕ್ರಮವೆನ್ನುವುದೂ ತೋರಿಬರುವುದಿಲ್ಲ. ಆ ಪ್ರಜ್ಞೆಯುಂಟಾಗುವಂತಹ ಶಿಕ್ಷಣ ಲಭಿಸಿಲ್ಲ. ಲಂಚ ತೆಗೆದುಕೊಳ್ಳುವುದನ್ನು ಯಾರೂ ಕಾಣಬಾರದು ಎನ್ನುವುದಷ್ಟೇ ಗೊತ್ತು. ಕೇಶವ ಪಿಳ್ಳೆ ಇಂದಿನ ಮತ್ತು ಮೊದಲಿನ ಹಾಗೆ ಅಥವಾ ಮತ್ತಾವ ಉದ್ಯೋಗಸ್ಥನ ಹಾಗೆ ಹದಿನೈದು ರೂಪಾಯಿಯ ಉದ್ಯೋಗಸ್ಥನಾದದ್ದು ಜೀವಿಸುವುದಕ್ಕೆ

ಮಾತ್ರ. ಶ್ರೀ ಪದ್ಮನಾಭನ ಹೆಸರಿನ ಹತ್ತು ಹಣ ಪಡೆಯುವುದಕ್ಕಾಗಿ. ಹದಿನೈದು ರೂಪಾಯಿ ಪ್ರತಿ ತಿಂಗಳ ಸಂಬಳ, ನಂತರ ಯಾವುದಾದರೂ ಸಿಕ್ಕಿದರೆ ಜೀವನ ಮಾಡ ಬಹುದು ಎನ್ನುವ ವಿಶ್ವಾಸದಲ್ಲಿ ಅಷ್ಟೆ. ಆ ಹದಿನೈದು ರೂಪಾಯಿಗಳಿಂದಲೇ ಜೀವಿಸ ಬೇಕು ಎಂದಲ್ಲ. ಜೀವನದಲ್ಲಿ ಒಂದು ಸಂತೋಷವೂ ಸಂರಕ್ಷಿತತೆಯೂ ಉಂಟಾಯಿತು ಎಂದು. ಅನಂತರ ಏನಾದರೂ ಲಭಿಸುವುದಿದ್ದರೆ ಎಲ್ಲ ಮೆಟ್ಟಿಲುಗಳಲ್ಲೂ ಇರುವುದು ಸ್ಪರ್ಧೆಯಲ್ಲವೇ? ಉದ್ಯೋಗಸ್ಥರ ಅಸೂಯೆ ಒಂದು ಕಡೆ; ಮತ್ತೊಂದು ಕಡೆ ಮೇಲಧಿಕಾರಿಗಳ ಸೇವೆ ಮಾಡೋದು ಮುಂತಾದ್ದೆಲ್ಲ ಇರುವುದೇ. ಆ ಪರಂಪರೆಯ ಹಕ್ಕುದಾರರಾದ ಕೇಶವ ಪಿಳ್ಳೆಗೆ ಆ ವಿಧದಲ್ಲಿಯೇ ಅಲ್ಲವೇ ಅಕ್ರಮವನ್ನು ಕುರಿತು ಹೇಳುವುದಕ್ಕೆ ಸಾಧ್ಯ? ಹೊಸ ವ್ಯವಸ್ಥೆಯಲ್ಲಿ ಗತಿಗೆಟ್ಟು, ರಾಜಿಯಾಗುವಂತೆ ಕೇಶವ ಪಿಳ್ಳೆ ಹೇಳಿದರು:

"ಎಲ್ಲರಿಗೂ ಓಟಿನ ಹಕ್ಕಿಲ್ಲವೆ? ತಿನ್ನೋದಕ್ಕೆ ಗತಿಯಿಲ್ಲದವನು, ಕೆಲಸಕ್ಕೆ ಬಾರದವನು, ಕುಂಟ, ಮುಂತಾದವರೆಲ್ಲರೂ ಸೇರಿ ಚುನಾವಣೆಯಲ್ಲಿ ಆಯ್ಕೆಯಾಗಿ ಆಳುವುದು. ಆ ಗತಿಗೆಟ್ಟ ಒಬ್ಬೊಬ್ಬನೂ ರಾಜ."

ಆ ಉತ್ತರ ಸರಿಯಾದದ್ದೆಂದು ತೋರಿತು. ಅಂತಸ್ತು, ಅಭಿಮಾನ, ಹಣ, ಪ್ರತಾಪ ಇದ್ದವರ ಕಾಲ ಹೋಯಿತು.

ಕಾತ್ಯಾಯಿನಿಯಮ್ಮ ಕೇಳಿದಳು: "ಹಾಗಿದ್ದರೆ ನಾನೊಂದು ವಿಷಯ ಕೇಳ್ತೀನಿ. ಈ ಅನ್ಯಾಯದ ಬೆಲೆ ವಿಪರೀತ ಏರಿರೋ ಕಾಲದಲ್ಲಿ ಮೇಲುತ್ಪತ್ತಿಯಿಲ್ಲದೆ ಈ ಉದ್ಯೋಗಸ್ಥರು ಜೀವನ ಮಾಡೋದು ಹೇಗೆ?"

"ನೌಕರಿ ಬೇಕಾಗಿದ್ದರೆ ಜೀವನ ಮಾಡಬೇಕು."

"ಚೆನ್ನಾಗಿ ಹೋಯ್ತು." ಕಾತ್ಯಾಯಿನಿಗೆ ಮತ್ತೂ ಒಂದು ವಿಷಯ ಕೇಳುವು ದಿತ್ತು: "ಏನೋ ತಕ್ಕೊಂಡರು ಅಂತ ಹೇಳಿ ಒಬ್ಬೊಬ್ಬರನ್ನೂ ಹೊರಗೆ ಕಳಿಸಿ ಮಕ್ಕಳ ಶಾಪ ಪಡೆಯೋದಾ?"

ಕೇಶವ ಪಿಳ್ಳೆ ಸಮಾಧಾನ ನೀಡಿದರು:

"ಬೇಕಾಗಿ ಬಂದರೆ ಮಾಡದೇ ಇರೋದಕ್ಕೆ ಸಾಧ್ಯವಾ?"

ಕಾತ್ಯಾಯಿನಿಯಮ್ಮ ಅದನ್ನು ಖಡಾಖಂಡಿತವಾಗಿ ವಿರೋಧಿಸಿದರು.

"ಬೇಡ, ಅದು ಬೇಡ. ಹಾಗಾದರೆ ಅದು ಕಷ್ಟ."

ಹಾಗೆ ಕೆಲಸ ಹೋಗಿ ಕಷ್ಟಪಡುವ ಕುಟುಂಬದವರನ್ನು ಕುರಿತು ಆಲೋಚಿಸಿ ನೋಡ ಬೇಕೆಂದು ಕಾತ್ಯಾಯಿನಿಯಮ್ಮ ಹೇಳಿದಳು. ಹೊಸ ಅಕ್ರಮ ನಿರೋಧದ ಕಾರ್ಯಕ್ರಮದ ಮೊದಲನೆಯ ಬಲಿಮೃಗ ನಾಣುನಾಯರ್ ಎನ್ನುವ ಪೆರುಂಬಾವೂರ್ ರಿಜಿಸ್ಟರ್ ಆಫೀಸಿನ ಜವಾನನಾಗಿದ್ದ. ಒಬ್ಬ ಕಕ್ಷಿ ಹತ್ತಿರ ರಿಜಿಸ್ಟರ್ ಆದ ಪತ್ರವನ್ನು ಹಿಂದಕ್ಕೆ ಕೊಡುವುದಕ್ಕೆ ಹತ್ತು ರೂಪಾಯಿ ತೆಗೆದುಕೊಂಡಿದ್ದ. ಕಕ್ಷಿ ಒಬ್ಬ ಹಣವಂತನಾದ ಕಾಂಗ್ರೆಸ್ಸಿನವ

ನಾಗಿದ್ದ. ಅವನಿಗೆ ನಷ್ಟದ ಬಗ್ಗೆ ತೊಂದರೆಯಿರಲಿಲ್ಲ. ಒಬ್ಬ ಕಾಂಗ್ರೆಸ್ಸಿನವನು ಗಾಂಧೀಜಿಯ ಅನುಯಾಯಿ ಎನ್ನುವ ದೃಷ್ಟಿಯಲ್ಲಿ ಅಕ್ರಮವಿಲ್ಲದ ಆಡಳಿತ ನಡೆಸ ಬೇಕೆಂಬ ದೃಷ್ಟಿಯಿದ್ದವನು. ಕಾಂಗ್ರೆಸ್ಸಿನ ಒಳ್ಳೆಯ ಹೆಸರನ್ನು ಉಳಿಸಬೇಕು. ಆತ ನೇರವಾಗಿ ಮಂತ್ರಿಗೆ ದೂರು ಕೊಟ್ಟರು. ಮಂತ್ರಿ ಅದರ ವಿಚಾರಣೆಗಾಗಿ ಕೆಳಕ್ಕೆ ಕಳಿಸಿದರು. ನಾಣು ನಾಯರ್‌ಗೆ ಪೆನ್ಶನ್ ಸಿಕ್ಕುವುದಕ್ಕೆ ಕೇವಲ ಎರಡು ವರ್ಷ ಇತ್ತು. ಆಗ ಈ ಅನಾಹುತ ನಡೆದದ್ದು. ಸಾಧಾರಣವಾಗಿ ಪತ್ರವನ್ನು ಕೊಡುವ ರಿಜಿಸ್ಟರ್ ಕಛೇರಿಯಲ್ಲಿರುವ ದರ ಹದಿನಾಲ್ಕು ರೂಪಾಯಿ. ನಾಣು ನಾಯರ್ ತನ್ನ ಹದಿನೆಂಟ ನೆಯ ವಯಸ್ಸಿನಲ್ಲಿ ಕೆಲಸಕ್ಕೆ ಸೇರಿದ್ದು. ಆತ ಆಗ ಡಿಸ್ಟ್ರಿಕ್ಟ್ ರಿಜಿಸ್ಟ್ರಾರರ ಅಡಿಗೆಯವ ನಾಗಿದ್ದ. ಯಜಮಾನ ಕನಿಕರಿಸಿ ಕೊಟ್ಟ ಕೆಲಸ. ಕೆಲಸಕ್ಕೆ ಸೇರಿದ ಕಾಲದಲ್ಲಿ ಒಂದು ಆಧಾರ ಪತ್ರದ ಸಿಪಾಯಿಯ ಮಾಮೂಲು ಎರಡು ರೂಪಾಯಿಯಾಗಿತ್ತು. ಅನಂತರ ಅದು ಹೆಚ್ಚಿಹೆಚ್ಚಿ ಹದಿನಾಲ್ಕು ರೂಪಾಯಿ ಆಯ್ತು. ಆ ಕಾಸು ತೆಗೆದುಕೊಳ್ಳುವುದು ತಪ್ಪು ಎಂದು ನಾಣು ನಾಯರ್‌ಗೆ ತೋರಿರಲಿಲ್ಲ. ರಿಜಿಸ್ಟರ್ ಫೀಸಿನಂತೆಯೇ ಕಕ್ಷಿ ಪತ್ರವನ್ನು ತೆಗೆದುಕೊಳ್ಳುವಾಗ ಮಾಡಬೇಕಾದ ಖರ್ಚು ಅದು. ಹಾಗೆ ಅವನು ತೆಗೆದು ಕೊಂಡದ್ದು

ಪೆರುಂಬಾವೂರಿನ ರಿಜಿಸ್ಟ್ರಾರ್ ಕಛೇರಿಯ ಜವಾನ ನಾಣು ನಾಯರ ಭುಜ ಸರ್ಕಾರದ ನೀತಿ ನಿಷ್ಠೆಯ ಕಬ್ಬಿಣದ ಹಿಡಿಗೆ ಸಿಕ್ಕಿ ಕಣ್ಣು ಕಣ್ಣು ಬಿಡುತ್ತಿದ್ದಾಗ ಬೇರೆ ಕೆಲಸದವರು ಒಬ್ಬೊಬ್ಬರಾಗಿ ಉಳಿದುಕೊಳ್ಳಲು ಕೈಕಾಲುಗಳನ್ನು ಬಡಿಯುತ್ತಿದ್ದರು. ಏನಾತ್ತು ಪಾರ್‍ವತ್ಯಂ ವರ್ಗೀಸ್, ತಾನ್ನಿಕೋಡ್ ಹೆಡ್‌ಕಾನ್‌ಸ್ಟೇಬಲ್ ಕುಟ್ಟನ್ ಪಿಳ್ಳೆ, ಚೇರ್ತ್ತಲ ಮುನ್ಸೀಫ್ ಕೋರ್ಟಿನ ಜವಾನ ಪಪ್ಪು—ಹೀಗೆ ಹೋಯಿತು ಆ ದೀರ್ಘ ಪಟ್ಟಿ. ಪತ್ರಿಕೆಗಳಲ್ಲಿ ದೊಡ್ಡದಾಗಿ ಆ ಸುದ್ದಿ ಬಂದಿತು. ಸರ್ಕಾರದ ಅಕ್ರಮ ನಿರೋಧ ಎನ್ನುವ ದಯೆಯಿಲ್ಲದ ಸ್ಟೀಮ್ ರೋಲರ್ ಉರುಳುತ್ತಿತ್ತು. ಅಲ್ಲಿ ಇಲ್ಲಿ ಸೇರುವ ಸಭೆಗಳಲ್ಲಿ ಮಂತ್ರಿಗಳು ಹೀಗೆ ಹೇಳುತ್ತಿದ್ದರು:

"ಈ ಸ್ಟೀಮ್ ರೋಲರ್ ಅದರ ಕಾರ್ಯಕ್ರಮ ಪ್ರಾರಂಭಿಸಿದೆ. ಅದು ಉರುಳಿ ಕೊಂಡೇ ಇರುತ್ತೆ. ಕೆಲವಾರು ವರ್ಷಗಳೊಳಗೆ ಈ ದೇಶದಿಂದ ಅಕ್ರಮ ಸಂಪೂರ್ಣವಾಗಿ ನಾಶವಾಗುತ್ತದೆ."

ಕೇವಲ ಜವಾನರು ಮಾತ್ರವಲ್ಲ ಅದಕ್ಕೂ ಮೇಲ್ಪಟ್ಟ ಕೆಲವರೂ ಸೇರಿದರು. ಕೃಷಿ ಇಲಾಖೆಯ ಇಬ್ಬರು ಕ್ಲಾರ್ಕ್‌ಗಳಿಗೆ ಬಾಧಿಸಿತು. ಒಬ್ಬ ಫಾರೆಸ್ಟ್ ರೇಂಜರ್, ಒಬ್ಬ ಎಕ್ಸೈಜ್ ಇನ್ಸ್‌ಪೆಕ್ಟರ್, ಒಬ್ಬ ಹವಿಲ್‌ದಾರ್—ಹೀಗೆ ಕೆಲವರು ಆ ಪಟ್ಟಿಯಲ್ಲಿ ಸೇರಿದ್ದರು. ಲಂಚದ ವಿಷಯ ಮಾತ್ರವಲ್ಲ, ಸ್ವಜನ ಪಕ್ಷಪಾತ, ಸರ್ಕಾರಕ್ಕೆ ನಷ್ಟ ವುಂಟುಮಾಡಿದ್ದು ಹೀಗೆ ಎಷ್ಟೋ ರೀತಿಯ ಅಕ್ರಮಗಳು ಎಲ್ಲ ದಿಕ್ಕುಗಳಿಗೂ ವ್ಯಾಪಿಸಿತ್ತು. ಅವರಲ್ಲಿ ಕೆಲವರು ಸಸ್ಪೆನ್ಶನ್‌ನಲ್ಲೂ ಇಡಲ್ಪಟ್ಟರು.

ಅಂದು ಮಂತ್ರಿಸಭೆಯ ಗೋದಲಕ್ಕೆ ಮೊದಲು, ಗೋಪಿಯ ಆರೋಪಣೆಗಳಿಗೆ ಉತ್ತರ ಬರೆದ ನಂತರ ನಾರಾಯಣನ್ ನಾಯರ್ ಹೊರಗೆಲ್ಲೂ ಬರುತ್ತಿರಲಿಲ್ಲ. ಅದು ಬೇಕಾಗಿತ್ತೆ? ಎನ್ನುವ ಪ್ರಶ್ನೆಯನ್ನು ನಾಯರ್ ತನಗೆ ತಾನೇ ಕೇಳಿಕೊಳ್ಳುತ್ತಿದ್ದ. ಗೋಪಿ ಹೇಳಿದ್ದೆಲ್ಲ ಸರಿಯಾಗಿತ್ತು. ಆದರೆ ಅದಕ್ಕೆ ಆಧಾರವಿಲ್ಲ. ನಾಯರರ ಹೇಳಿಕೆಯನ್ನು ಸ್ಥಾಪಿಸಲು ಸರ್ಕಾರದ ಉಲ್ಲೇಖವುಂಟು. ಆದರೂ ಸತ್ಯ ಅವನನ್ನು ನೋಡಿ ಬಿಕ್ಕಿಬಿಕ್ಕಿ ಅಳುತ್ತಿದ್ದಂತೆ ತೋರಿತು. ಸುದೀರ್ಘವೂ ಕಳಂಕ ರಹಿತವೂ ಆದ ದೇಶ ಸೇವೆಯ ಪರಂಪರೆ ಎಂತಹವನ ಮನಸ್ಸನ್ನೂ ನೀತಿಯ ಮಾರ್ಗದಲ್ಲಿ ಸ್ವಲ್ಪ ಮಟ್ಟಿಗೆ ಬದಲಾಯಿಸುವುದಿಲ್ಲವೇ?

ಅಂತೂ ನಾಯರ್‌ಗೆ ಉಳಿದವರ ಮುಖದ ಕಡೆಗೆ ನೋಡಲು ನಾಚಿಕೆಯಾಗಿತ್ತು. ಮಾಡಬಾರದ್ದನ್ನು ಮಾಡಿದ್ದಾಯಿತು ಎಂದು. ಅದು ನಾಚಿಕೆಯನ್ನುಂಟು ಮಾಡುವುದಿಲ್ಲವೇ? ಏನನ್ನೂ ಮಾಡದೆ, ಯಾರನ್ನೂ ಕಾಣದೆ ಆತ ತನ್ನ ಮನೆಯಲ್ಲಿ ಅಡಗಿ ಜೀವಿಸುತ್ತಿದ್ದ. ಆದರೂ ನಾಯರ್‌ಗೆ ಒಂದು ಸಮಾಧಾನವಿತ್ತು. ಕಮ್ಯೂನಿಸ್ಟರ ನಿಜಬಣ್ಣವನ್ನು ಹೊರಗೆ ಹಾಕಲು ಆ ಲೇಖನ ಉಪಕರಿಸಿತು ಎನ್ನುವುದಾಗಿತ್ತು ಆ ಸಮಾಧಾನ. ಅಂದು ಸ್ವಲ್ಪ ಹಣ ಸಿಕ್ಕಿತ್ತು. ನಿಜವಾಗಿಯೂ ಗತಿಯಿಲ್ಲದೆ ನಾಯರ್ ತೆಗೆದುಕೊಂಡದ್ದು. ಜೈಲಿನಿಂದ ಹೊರಗೆ ಬಂದಾಗ ಉಡುವುದಕ್ಕೆ ಬಟ್ಟೆಯಿರಲಿಲ್ಲ. ಒಂದು ಹೊತ್ತಿನ ಊಟಕ್ಕೂ ಗತಿಯಿರಲಿಲ್ಲ. ಚಳುವಳಿಯ ಕಾಲದಲ್ಲಿ ಅದಾವುದೂ ಒಂದು ಕಡೆಯಲ್ಲೂ ಒಂದು ಪ್ರಶ್ನೆಯಾಗಿರಲಿಲ್ಲ. ಸ್ವಾತಂತ್ರ್ಯ ಸಿಕ್ಕಿದ ನಂತರ ಒಂದು ಹೊತ್ತಿನ ಆಹಾರಕ್ಕಾಗಿ ಎಲ್ಲಿ ಹೋದರೂ ಅದು ದೊರೆಯುತ್ತಿಲ್ಲ. ಹೋರಾಟಕಾಲವನ್ನು ಕುರಿತು ಮನೆಯವನು ಮಾತಾಡಿಕೊಂಡೇ ಇರುತ್ತಿದ್ದ.

"ಊಟ ಆಯ್ತಾ?" ಎಂದು ಕೇಳುವುದಿಲ್ಲ. ಊಟ ಬೇಕು ಎಂದು ಕೇಳಿಕೊಳ್ಳುವುದಕ್ಕೆ ಆ ರಾಷ್ಟ್ರವೀರನಿಗೆ ಸಂಕೋಚ. ಹಾಗೆ ಕೇಳಲು ಹಕ್ಕಿಲ್ಲವೆನ್ನುವ ಅನ್ನಿಸುವಿಕೆ.

ಅದು ಸರಿಯಲ್ಲವೆ? ಎಷ್ಟೋ ಸಲ ನಾಯರ್‌ಗೆ ಅನ್ನಿಸಿತ್ತು, ಚಳವಳಿಯಲ್ಲಿ ಭಾಗವಹಿಸಬಾರದಿತ್ತು ಎಂದು. ತನ್ನ ಕೆಲಸ ತಾನು ಮಾಡಿದ್ದರೆ ಸಾಕಾಗಿತ್ತು. ಒಂದು ಜೀವಮಾನವಿಡೀ ಹಾಳಾಗಿ ಹೋಯಿತು. ಯಾವುದೊಂದನ್ನೂ ಪಡೆಯಲು ಸಾಧ್ಯವಾಗಲಿಲ್ಲ. ಇನ್ನು ಮೇಲಾದರೂ ನಾಲ್ಕು ಕಾಸು ಸಂಪಾದಿಸುವ ಮಾರ್ಗ ಯಾವುದು? ಯಾವುದೂ ಇಲ್ಲ. ನಿಜವಾಗಿಯೂ ನಾಯರನ ಬುದ್ಧಿ ಕೆಲಸ ಮಾಡುತ್ತಿರಲಿಲ್ಲ. ಅಂದು ಲೂಕೋಸ್ ಕೊಟ್ಟಿದ್ದ ಹಣ ಮುಗಿಯುತ್ತಾ ಬಂದಿತ್ತು. ಒಂದೊಂದು ರೂಪಾಯಿಯಾಗಿ ತೆಗೆದು ಖರ್ಚು ಮಾಡುತ್ತಿದ್ದ.

ಹೀಗೆಯೇ ಇದ್ದಾಗ ಆ ದುರಾಶೆಯ ತಹಸೀಲ್ದಾರ್ ಹೇಗೋ ತಿಳಿದುಕೊಂಡು ನಾರಾಯಣನ್ ನಾಯರ ಹತ್ತಿರ ಬಂದ. ಪೇಷ್ಕಾರ್ ವಿಚಾರಣೆ ನಡೆಸಿದ ರಿಪೋರ್ಟನ್ನು ಸರ್ಕಾರಕ್ಕೆ ಕಳಿಸಿದ್ದ. ತನ್ನಿಂದ ಏನು ಮಾಡುವುದಕ್ಕೆ ಸಾಧ್ಯವೆಂದು ಆತನಿಗೆ ತಿಳಿಯದು.

ಆ ವಿಷಯ ನಾಯರ್‌ಗೆ ತಿಳಿದಿರುವುದಿಲ್ಲ. ತಹಸೀಲ್ದಾರ್ ಹಾಗೆ ಹಿಂದಿರುಗಿ ಹೋಗುವ ಮಟ್ಟಿಲ್ಲ.

"ನೀವು ಮನಸ್ಸು ಮಾಡಿದರೆ ನಾನು ಉಳಿದುಕೊಳ್ತೀನಿ. ಇಲ್ಲದೇ ಇದ್ದರೆ ನಾನೂ ಕುಟುಂಬವೂ ಉಪವಾಸ ಬೀಳಬೇಕಾಗುತ್ತೆ. ಯಾವ ತಪ್ಪೂ ಮಾಡದೆ ನಾನು ಶಿಕ್ಷೆ ಅನುಭವಿಸಬೇಕಾಗಿ ಬರುತ್ತೆ."

ನಾರಾಯಣನ್ ನಾಯರ್‌ಗೆ ಆ ಕಥೆ ಕೇಳಬೇಕು ಅನ್ನಿಸಿತು.

"ತಪ್ಪಿತಸ್ಥನಲ್ಲದವನನ್ನು ಶಿಕ್ಷಿಸುವುದು ಸರಿಯೇ?" ಅವನ ಧರ್ಮಬುದ್ಧಿ ಜಾಗೃತವಾಯಿತು.

ತಹಸೀಲ್‌ದಾರ್ ಆ ಆರೋಪಣೆಯ ಕಥೆಯನ್ನು ವಿವರಿಸಿದ. ನಾಯರ್ ಕೇಳಿಸಿಕೊಂಡ. ಒಂದು ಹೊಸ ಕೆಲಸದಲ್ಲಿ ಅದ ಆದದ್ದು. ಪತ್ತನಂತಿಟ್ಟ ತಾಲೂಕಿನ ಒಂದು ಕೂಪನ್ನು ಕಡಿಮೆ ಬೆಲೆಗೆ ಹಂಚಿಕೊಡಬೇಕು ಎಂದು ಒಬ್ಬ ಎಂ. ಎಲ್. ಎ.ಯ ತಮ್ಮ ಆಶೆಪಟ್ಟಿದ್ದ. ಅದಕ್ಕಿಂತ ಹೆಚ್ಚಿನ ಬೆಲೆಗೆ ಆ ಕೂಪು ಹಂಚಿಕೊಡಬೇಕಾದದ್ದು. ಎಂ. ಎಲ್. ಎ.ಯ ತಮ್ಮನ ಅರ್ಜಿ ಸ್ವೀಕರಿಸುವಂಥಾದ್ದಾಗಿರಲಿಲ್ಲ. ಇದರ ಮಧ್ಯೆ ಎಂ. ಎಲ್. ಎ.ಯ ತಮ್ಮ ಇಡೀ ಕೂಪನ್ನು ಒಳಪಡಿಸಿಕೊಳ್ಳಲು ಶ್ರಮಿಸಿದ. ತಹಸೀಲ್ ದಾರ್ ಅದನ್ನು ತಡೆಯಬೇಕಾಗಿ ಬಂದಿತು. ಮತ್ತೊಬ್ಬ ಅರ್ಜಿದಾರನಿಗೆ ಕೂಪ್ ಹಂಚಿಕೊಡಲಾಯಿತು. ಎಂ. ಎಲ್. ಎ. ಈ ವಿಷಯವನ್ನು ಕುರಿತು ಮಾತನಾಡುವುದಕ್ಕೆ ಬಂದ. ತನಗೊಂದು ಪಾಠ ಕಲಿಸುವುದಾಗಿ ಹೇಳಿ ಆತ ಹೋದ. ಈಗ ಕೆಲವು ಜನರಿಂದ ಲಂಚ ಕೇಳಿದ ಎಂದು ಹೇಳಿ ದೂರು ಕೊಟ್ಟಿದ್ದಾನೆ. ಆ ಮೇಲೆ ಎಂ. ಎಲ್. ಎ.ಯನ್ನು ಕುರಿತು ತಹಸೀಲ್‌ದಾರ್ ಎಷ್ಟೋ ಕಥೆಗಳನ್ನು ಹೇಳಿದ.

"ಆತ ಹೇಳುವುದನ್ನು ಎಲ್ಲ ಉದ್ಯೋಗಸ್ಥರೂ ಕೇಳಬೇಕು. ಇಲ್ಲದಿದ್ದರೆ ವರ್ಗ. ಅದೂ ಇಲ್ಲದಿದ್ದರೆ ಪ್ರೊಮೋಶನ್ ಇಲ್ಲದೇ ಹೋಗೋದು—ಅದೂ ಇಲ್ಲದಿದ್ದರೆ ದೂರು. ಇವು ಖಂಡಿತ. ಈಗ ಈ ಅಕ್ರಮ ನಿರೋಧ ಬಂದ ನಂತರ ಉದ್ಯೋಗವೂ ಇಲ್ಲ."

ಯಾವುದಾದರೂ ಒಂದು ಕೇಸಿನಲ್ಲಿ ಅವನಿಗೆ ಬೇಕಾದ ಒಬ್ಬ ಮನುಷ್ಯನನ್ನು ಅರೆಸ್ಟ್ ಮಾಡಿದರೆ ಆತನನ್ನು ಬಿಟ್ಟುಬಿಡಬೇಕು. ಅವನಿಗೆ ವಿರೋಧವುಳ್ಳವರ ಹೆಸರಿನಲ್ಲಿ ಪೋಲೀಸಿನವರು ಕೇಸು ಹಾಕಬೇಕು. ಯಾವುದೊಂದೂ ಆತನಿಗೆ ಇಷ್ಟವಿಲ್ಲದವರಿಗೆ ಸಿಕ್ಕಬಾರದು. ಇದು ಪದ್ಧತಿ. ಆತ ರೆವಿನ್ಯೂ ಮತ್ತು ಗೃಹ ಇಲಾಖೆಯ ಮಂತ್ರಿಯ ಸಂಬಂಧಿಯಂತೆ. ಗೃಹ ಇಲಾಖೆಯ ಮಂತ್ರಿ ಆ ಮಾರ್ಗವಾಗಿ ಬಂದರೆ ಆತನ ಜೊತೆಯಲ್ಲಿ ವಾಸ.

ನಾರಾಯಣನ್ ನಾಯರ್ ಕೇಳಿದ:

"ನಿಮ್ಮ ಕೇಸಿನ ವಿಚಾರ ಎಲ್ಲಿಗೆ ಬಂತು?"

ತಹಸೀಲ್‌ದಾರ್ ಹೇಳಿದ. ಏನೋ ತೀರ ತೊಂದರೆಯಿಂದೆ. ಎಲ್ಲ ಕಟ್ಟಿದ ಕಥೆ. ಎಂ. ಎಲ್. ಎ. ಹುಟ್ಟಿಸಿದ ಸುಳ್ಳು ಸಾಕ್ಷಿಗಳು.

ಎಲ್ಲವನ್ನೂ ಕೇಳಿ ಆ ವಿಚಾರದಲ್ಲಿ ಪ್ರವೇಶಿಸಬೇಕು ಎನ್ನಿಸಿತು. ನಾಯರಲ್ಲಿ ಅಡಗಿ ಕುಳಿತಿದ್ದ ಕ್ರಾಂತಿಕಾರ ಅಲುಗಾಡಲಿಲ್ಲವೆಂದು ಹೇಳುವಂತಿಲ್ಲ. ಹಲವು ಜನ ಪ್ರತಿನಿಧಿಗಳನ್ನು ಕುರಿತು ಆತ ಕೇಳಿದ್ದುಂಟು. ಕೆಲವು ಕಥೆಗಳನ್ನು ತಿಳಿಯಲೂ ಸಾಧ್ಯವಾಗಿತ್ತು. ಆ ದೃಷ್ಟಿಯಲ್ಲಿ ತಹಸೀಲ್‌ದಾರ್ ಹೇಳಿದ ಕಥೆಗಳೂ ಸುಳ್ಳಾಗಿರಲು ಸಾಧ್ಯವಿಲ್ಲ. ನಾಯರ್ ಕೇಳಿದ:

"ಇದೆಲ್ಲವನ್ನೂ ಸೇರಿಸಿ ನಾನೊಂದು ಲೇಖನ ಬರೆಯಲಿ? ಅದು ಎಲ್ಲರಿಗೂ ತಲಪುತ್ತೆ. ಅದು ನಾನು ಆಲೋಚಿಸಿರುವ ವಿಷಯ."

ಗಾಬರಿಯಿಂದ ತಹಸೀಲ್‌ದಾರ್ ಹೇಳಿದ: "ಅಯ್ಯೋ ಅದು ಬೇಡಿ."

ಅರ್ಥವಾಗದೆ ನಾರಾಯಣನ್ ನಾಯರ್ ಕೇಳಿದ: "ಮತ್ತೆ ನನ್ನಿಂದ ಏನು ಸಾಧ್ಯ?"

ತಹಸೀಲ್ದಾರ್ ಆ ಮಾರ್ಗವನ್ನು ನಿರ್ದೇಶಿಸಿದ:

"ನೀವು ನನ್ನ ಜೊತೆಯಲ್ಲಿ ತಿರುವನಂತಪುರದ ವರೆಗೆ ಬಂದರೆ ಸಾಕು. ಆಮೇಲೆ ಒಂದೆರಡು ಸ್ಥಳಗಳಿಗೆ ಒಮ್ಮೆ ಬಂದು ಹೇಳಬೇಕು."

ತಾನು ಹೋಗಿ ಎಲ್ಲಿ ಮಾತನಾಡಬೇಕೆಂದು ತಿಳಿಯದೆ ನಾರಾಯಣನ್ ನಾಯರ್ ಕೇಳಿದ:

"ನಾನು ಯಾರ ಹತ್ರ ಏನು ಮಾತಾಡಬೇಕು?"

"ಚೀಫ್ ಸೆಕ್ರಟರಿ ಹತ್ರ ಮಾತಾಡಬೇಕು. ಈ ಪೇಪರ್ ಅವರ ಕೈಗೆ ಹೋಗುತ್ತೆ."

ನಾಯರ್ ನಡುಗುತ್ತ ಕೇಳಿದ:

"ಚೀಫ್ ಸೆಕ್ರಟರಿಯಾ? ಪರವಾಯಿಲ್ಲ. ಆ ಮನುಷ್ಯ ಒಬ್ಬ ದೊಡ್ಡ ಕಾಡಾನೆ."

ತಹಸೀಲ್‌ದಾರ್ ಹೇಳಿದ: "ಅವರು ತುಂಬ ಸಮರ್ಥರು. ಪ್ರಸಿದ್ಧರು ಕೂಡ. ಅದಕ್ಕೇ ಅವರನ್ನು ಕಾಣಬೇಕು ಅಂದದ್ದು. ಈ ತೊಂದರೆಗಳನ್ನು ಪರಿಹರಿಸಲು ಅವರಿಗೆ ಮಾತ್ರ ಸಾಧ್ಯ. ಎಂ. ಎಲ್. ಎ. ಆದರೂ ಅವರ ಹತ್ತಿರ ಏನೂ ಮಾಡಲಿಕ್ಕೆ ಸಾಧ್ಯವಿಲ್ಲ. ಮಾಡುವುದಕ್ಕಾಗದೇ ಇದ್ದರೆ. ಎಂ. ಎಲ್. ಎ.ಯನ್ನೂ ಕೈಗೆ ತೆಗೆದುಕೊಳ್ತಾರೆ."

ಹಳೆಯ ಅನುಭವಗಳು ನಾಯರ ನೆನಪಿಗೆ ಬಂದುವು. ನಾಯರ್ ಹೇಳಿದ:

"ಆತ ತುಂಬ ಲಂಚ ತೆಗೆದುಕೊಳ್ತಾನೆ. ಈಗ ಹೋಗಿ ಈ ವಿಷಯ ಹೇಳಿದರೆ ಕಾಲ ಬದಲಾಯಿಸಿತು ಅಂದುಕೊಳ್ಳಬೇಡಿ. ಕೂಡಲೇ ಕೈನೀಡ್ತಾನೆ."

ತಹಸೀಲ್ದಾರ್ ಅದಕ್ಕೆ ಏನೂ ಹೇಳಲಾಗಲಿಲ್ಲ. ಆತ ಹೇಳಿದ: "ಅದಕ್ಕೇನು. ನಾವು ಅವರ ಸ್ಥಾನಕ್ಕನುಸಾರವಾಗಿ ಏನಾದರೂ ಕೊಡೋಣ."

ಹಾಗೆ ನಾಯರ್ ಮತ್ತು ತಹಸೀಲ್ದಾರ್ ಒಂದು ತೀರ್ಮಾನಕ್ಕೆ ಬಂದರು.

ಕೇಶವ ಪಿಳ್ಳೆ ನಾರಾಯಣನ್ ನಾಯರನ್ನು ಆತ್ಮೀಯತೆಯಿಂದಲೇ ಸ್ವಾಗತಿಸಿದ್ದು. ಬೇಸರವೋ ಸಿಟ್ಟೋ ಇರುತ್ತದೆ ಎಂದು ನಾಯರ್ ಭಾವಿಸಿದ್ದು. ಆದರೆ ಅದಾವುದೂ ಇರಲಿಲ್ಲ.

"ನಾಯರ್ ಬಂದ ವಿಷಯವೇನು?" ಎಂದು ಚೀಫ್ ಸೆಕ್ರೆಟರಿ ಕೇಳಿದರು. ಯಾವ ಸಂಕೋಚವೂ ಇಲ್ಲದೆ ನಾಯರ್ ವಿಷಯ ತಿಳಿಸಿದ. ಅಸಹಾಯಕತೆಯಿಂದ ಎಲ್ಲವನ್ನೂ ಶ್ರದ್ಧೆಯಿಂದ ಕೇಳಿದ ಬಳಿಕ ಉತ್ತರ ಹೇಳಿದ್ದು.

"ನಾನು ಈ ವಿಷಯದಲ್ಲಿ ಅಸಹಾಯಕನಾಗಿದ್ದೇನೆ ಅಂತ ನನಗೆ ಅನ್ನಿಸುತ್ತೆ ಮಿಸ್ಟರ್ ನಾಯರ್. ಈ ರೀತಿಯ ಕೇಸುಗಳಲ್ಲಿ ನಿರ್ದಾಕ್ಷಿಣ್ಯವಾಗಿ ವ್ಯವಹರಿಸಬೇಕು ಅಂತ ನಿರ್ದೇಶನ ಇದೆ. ನಾನೇನಾದರೂ ಮಾಡಿದರೆ ಅದು ನ್ಯಾಯ ನೀತಿಗೆ ಅನುಸರಿಸಿದ್ದೇ ಆದರೂ ತಪ್ಪು ಕಲ್ಪನೆಯುಂಟಾಗುತ್ತೆ. ಜೊತೆಗೆ ಇದೊಂದು ಎಂ. ಎಲ್. ಎ.ಗೆ ಸಂಬಂಧಪಟ್ಟ ಕೇಸು. ಅಸೆಂಬ್ಲಿಯಲ್ಲಿ ಚೀಫ್ ಸೆಕ್ರೆಟರಿಯೇ ಅಕ್ರಮಕಾರ ಅಂತ ಹೇಳಿದರೆ ನನ್ನ ಗತಿಯೇನು? ಹಾಗೆ ಹೇಳುವುದಿಲ್ಲ ಅಂದುಕೊಂಡಿದ್ದೀರಾ?"

ನಾರಾಯಣನ್ ನಾಯರ್ ಒಪ್ಪಿದ. "ಹಾಗೆ ಸಂಭವಿಸಬಹುದು."

ಚೀಫ್ ಸೆಕ್ರೆಟರಿ ಹೇಳಿದರು:

"ಇನ್ನು ಮೇಲೆ ಅದೊಂದನ್ನೂ ನೋಡೋದು ಬೇಡ ಅಂತಲೇ ಇಟ್ಟುಕೊಳ್ಳಿ. ಅಕ್ರಮ ನಿರೋಧದ ಕಾರ್ಯಾಚರಣೆಯನ್ನು ನಿರ್ವಹಿಸುವ ಜವಾಬ್ದಾರಿ ಹೊತ್ತವನು ನಾನು. ನಾನು ಕಣ್ಣು ತಪ್ಪಿಸುವುದು ಸರಿಯಾ?"

ಸರಿ ಎಂದು ನಾಯರ್‌ಗೆ ಹೇಳಲು ಸಾಧ್ಯವಿಲ್ಲ. ಅದೊಂದು ದೋಷ. ಅಂತು ನಾಯರ್ ಹೇಳಿದ:

"ನಿಜವಾಗಿಯೂ ತಹಸೀಲ್‌ದಾರ್ ತಪ್ಪಿತಸ್ಥನಲ್ಲ. ಅವನ ಮೇಲೆ ಎಂ. ಎಲ್. ಎ.ಗೆ ಇರುವ ಸಿಟ್ಟಿನಿಂದ ಉಂಟು ಮಾಡಿದ ಕೇಸು ಇದು. ಒಬ್ಬ ನಿರಪರಾಧಿಯನ್ನು ಶಿಕ್ಷಿಸುವುದು........."

ನಾರಾಯಣನ್ ನಾಯರ್ ಹೇಳಿ ಮುಗಿಸುವ ಮೊದಲೇ ಕೇಶವ ಪಿಳ್ಳೆ ಅದನ್ನು ಒಪ್ಪಿಕೊಂಡು ಹೇಳಿದರು:

"ಕಷ್ಟ. ಅದು ತಪ್ಪು. ನೀವು ಹೇಳುವ ಹಾಗೆ ಎಲ್ಲವೂ ಸುಳ್ಳಿರಬಹುದು. ಆದರೆ ಪೇಪರಿನಲ್ಲಿ ನೀವು ಹೇಳಿದ್ದಕ್ಕೆ ವಿರೋಧವಾಗಿ ಕಾಣಿಸುತ್ತೆ. ದೂರು ಕೊಟ್ಟಿರುವುದು ಸತ್ಯ ಸಂಗತಿ ಎಂದಾಗುತ್ತದೆ. ನಿಜವಾಗಿ ಎಲ್ಲವನ್ನೂ ಹುಟ್ಟಿಸಿಕೊಂಡದ್ದಾದರೂ."

ಒಂದು ಕ್ಷಣ ಕಳೆದು ಚೀಫ್ ಸೆಕ್ರೆಟರಿ ಕೇಳಿದರು: "ಹಾಗೆ ಕಾರ್ಯ ನಡೆಯುವುದಕ್ಕೆ ಮಾರ್ಗಗಳನ್ನು ಹುಡುಕಿಕೊಂಡು ಹೋಗಬೇಕೇ? ಗೋಪಿಯ ಆರೋಪಣೆಗಳೇ ಸಾಕಲ್ಲ? ಗೋಪಿಯ ಆರೋಪಣೆ ಸರಿಯಾಗಿರಲಿಲ್ಲವೆ? ಹಾಗೆಯೇ ಯಾವಾಗಲೂ

ಕಾರ್ಯಗಳು ನಡೆಯುವುದು."

ನಾರಾಯಣನ್ ನಾಯರ್‌ಗೆ ಒಂದು ರೀತಿ ಆಯಿತು. ಚೀಫ್ ಸೆಕ್ರೆಟರಿ ಮತ್ತೆ ಹೇಳಿದರು:

"ಆದರೆ ಒಂದು ವಿಷಯ ಹೇಳೋಣ. ಎಷ್ಟೋ ಬಲೆ ತುಂಡು ಮಾಡಿದ ಒಂದು ಮೀನು ಹಳೆ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತೆ. ಈ ತಹಸೀಲ್ದಾರ್ ಈ ಕೇಸಿನಲ್ಲಿ ನಿರಪರಾಧಿಯಿರಬಹುದು. ಮೊದಲು ತಪ್ಪು ಮಾಡಿದವನಾಗಿರಲೇಬೇಕು."

ಅದೂ ನಿಜವಾಗಿರಬೇಕು ಎಂದು ನಾರಾಯಣನ್ ನಾಯರ್ ಒಪ್ಪಿದ. ಆದರೆ ......... "ನನ್ನಿಂದ ಈ ಕೆಲಸ ಸಾಧ್ಯವಿಲ್ಲ" ಎಂದು ಹೇಳಿ ತಪ್ಪಿಸಿಕೊಳ್ಳಲು ಆತನಿಗೆ ಮನಸ್ಸು ಬರುತ್ತಿಲ್ಲ. ಒಂದು ಕೊರತೆ ಎನ್ನುವುದು ಮಾತ್ರವಲ್ಲ, ಅನಂತರವೂ ವಿಷಯ ಇದೆ. ತನ್ನ ಜೊತೆಯಲ್ಲಿ ಭಾಗವಹಿಸಿದವರು ಕಾಂಗ್ರೆಸ್ಸನ್ನು ನೇರವಾಗಿ ಎದುರಿಸಿ ದವರು ಎಲ್ಲರೂ ಎಂ. ಎಲ್. ಎ.ಗಳಾಗಿಯೂ ಕಾಂಗ್ರೆಸ್ ಪ್ರೆಸಿಡೆಂಟಾಗಿಯೂ ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಹಣ ಸಂಗ್ರಹಿಸುವುದನ್ನು ನಾಯರ್ ಕಂಡಿದ್ದ. ಯಾಕೆ ತನಗೂ ಅದು ಸಾಧ್ಯವಿಲ್ಲ ಎನ್ನುವ ವಿಷಯ ತಲೆಗೆ ಹೊಕ್ಕರೆ ಅದು ತಪ್ಪೇ? ಹಾಗಲ್ಲದೆ ಹೇಗೆ ಜೀವಿಸಬೇಕು? ದೇಶಕ್ಕಾಗಿ ಹೋರಾಡಿದ ಆ ದೇಶವೇ ಇನ್ನು ಮೇಲೆ ಆಹಾರ ನೀಡಬೇಕು.

ನಾಯರ್ ಅಸಹಾಯಕನಾಗಿ ಕೇಳಿದ:

"ಮತ್ತೆ ಯಾವ ದಾರಿ ಇರೋದು?"

"ಹೇಗಾದರೂ ಮಾಡಿ ತಾವು ಈ ಕೆಲಸ ಮಾಡಿಕೊಡಬೇಕು. ನಾನು ತಮಗೆ ಮೊರೆಹೊಕ್ಕಿದ್ದೇನೆ. ಬೇರೆ ಯಾವ ದಿಕ್ಕೂ ಇಲ್ಲ."

ಆ ತಹಸೀಲ್ದಾರನ, ಅವನ ಕುಟುಂಬದ ದೈನ್ಯಾವಸ್ಥೆಯನ್ನು ನಾಯರ್ ವಿವರಿಸಿದ. ಎಲ್ಲವನ್ನೂ ಕೇಳಿಸಿಕೊಂಡು ಕೇಶವ ಪಿಳ್ಳೆ ಹೇಳಿದರು:

"ನಾನು ಏನು ಮಾಡಬೇಕು? ಹೀಗೆ ಮಾಡಿ ಅಂತ ಹೇಳಿ. ನಾನು ಮಾಡ್ತೀನಿ. ನನಗೆ ತೊಂದರೆಯಾಗಬಾರದು. ಇಂತಹ ಕೇಸುಗಳ ಹಿಂದಿರುವ ಕುಟುಂಬಗಳನ್ನೂ ನಾನು ನೋಡ್ತಿದ್ದೀನಿ. ಯಾರಿಗೂ ತೊಂದರೆ ಮಾಡದೆ, ನನ್ನ ಹೆಂಡತಿಯ ಭಾಷೆಯಲ್ಲಿ ಹೇಳೋದಾದರೆ, ಶಾಪ ಪಡೆಯದೆ ಪೆನ್ಶನ್ ಪಡೆಯಬೇಕು ಅನ್ನೋದು ನನ್ನ ಆಶೆ. ಆದ್ದರಿಂದ ತಹಸೀಲ್ದಾರ್‌ಗೆ ಸಹಾಯ ಮಾಡೋದು ನನಗೆ ಇಷ್ಟ."

ಚೀಫ್ ಸೆಕ್ರೆಟರಿ ಯಾವ ಹಿಡಿತವನ್ನೂ ಕೊಡದೆ ಇದ್ದರು. ಹಾಗೆ ಪ್ರತ್ಯೇಕವಾಗಿ ನಿಲ್ಲುವುದರ ಕಾರಣ ಹಳೆಯ ಅನುಭವಗಳಿಂದ ಕಂಡುಹಿಡಿಯಲು ನಾರಾಯಣನ್ ನಾಯರ್ ಶ್ರಮಿಸಿದ. ಹಿಡಿತಕ್ಕೆ ತೆಗೆದುಕೊಳ್ಳಬೇಕಾದರೆ ಕೈನೀಡಿಯೇ ಆಗಬೇಕು. ನಾಯರ್ ಸೊಂಟದಿಂದ ರಹಸ್ಯವಾಗಿ ಒಂದು ಕವರನ್ನು ಕೈಯಲ್ಲಿ ತೆಗೆದುಕೊಂಡು ಮೇಜಿನ ಮೇಲಿಟ್ಟ.

ಚೀಫ್ ಸೆಕ್ರೆಟರಿ ಕೇಳಿದರು: "ಇದೇನು?"

ಒಂದು ಸಂಕೋಚದಿಂದ ನಾಯರ್ ಕುಳಿತಿದ್ದ ಅಷ್ಟೆ. ಏನೂ ಮಾತನಾಡಲಿಲ್ಲ. ಚೀಫ್ ಸೆಕ್ರೆಟರಿ ಹೇಳಿದರು:

"ಬೇಡ. ಅದಕ್ಕೋಸ್ಕರ ಉದ್ದೇಶಪಟ್ಟು ನಾನು ಹೇಳಿದ್ದಲ್ಲ. ಆ ಏರ್ಪಾಟು ನಾನು ನಿಲ್ಲಿಸಿದೆ. ಅಕ್ರಮ ನಿರೋಧದ ಜವಾಬ್ದಾರಿ ಹೊತ್ತವನು ನಾನು. ನೀವಾದ್ದರಿಂದ ಈ ತಪ್ಪನ್ನ ಕ್ಷಮಿಸ್ತೀನಿ."

ಸ್ವಲ್ಪ ಆಜ್ಞೆಯ ಧ್ವನಿಯಲ್ಲಿ ಕೇಶವ ಪಿಳ್ಳೆ ಹೇಳಿದರು:

"ಅದನ್ನು ಕೈಗೆ ತೆಗೆದುಕೊಳ್ಳಿ ಮಿ॥ ನಾಯರ್ !"

ನಾಯರ್ ಸಂಕೋಚಪಟ್ಟುಕೊಂಡ.

ಕೇಶವ ಪಿಳ್ಳೆ ಅದೇ ಸ್ವರದಲ್ಲಿ ಆಜ್ಞಾಪಿಸಿದರು:

"ಹ್ಞಂ ! ತೆಗೆದುಕೊಳ್ಳಿ."

ನಾಯರ್ ಆ ಕವರ್ ಕೈಗೆತ್ತಿಕೊಂಡ. ಕೇಶವ ಪಿಳ್ಳೆ ಹೇಳಿದರು: "ಅದೆಲ್ಲಿಂದ ಈಚೆಗೆ ತೆಗೆದಿರೋ ಅಲ್ಲಿಯೇ ಭದ್ರವಾಗಿಟ್ಟುಕೊಳ್ಳಿ."

ನಾಯರ್ ಅದರಂತೆ ಮಾಡಿದ. ಒಂದು ನಿಮಿಷ ಬಿಟ್ಟು ಕೇಶವ ಪಿಳ್ಳೆ ನಗುತ್ತ ಹೇಳಿದರು:

"ಬೇಸರ ಮಾಡಿಕೊಳ್ಳಬೇಡಿ. ಸಂಕೋಚಪಟ್ಟುಕೊಳ್ಳಬೇಡಿ. ನನಗೆ ಅದು ಸರಿಯಲ್ಲ ಅನ್ನಿಸಿತು ಅಷ್ಟೆ. ಇನ್ನು ಮೇಲೆ ನಾವು ಹಿಂದಿನ ಹಾಗೇ ಮಾತಾಡೋಣ."

ನಾಯರ್‌ಗೆ ಮಾತನಾಡುವುದಕ್ಕೆ ಸ್ವಲ್ಪ ಸಮಯ ಬೇಕಾಗಿ ಬಂದಿತು. ಆಗಲೂ ಹೇಳಬೇಕಾಗಿದ್ದದ್ದು ಒಂದೇ ಒಂದು ವಿಷಯ. "ಒಂದು ಮಾರ್ಗ ತೋರಿಸಬೇಕು. ತೋರಿಸಿಕೊಡಲೇಬೇಕು."

ಒಂದು ಮಂದಹಾಸದೊಡನೆ ಚೀಫ್ ಸೆಕ್ರೆಟರಿ ಹೇಳಿದರು: "ನಾನು ಯಾವ ಮಾರ್ಗ ತೋರಿಸಬೇಕು?"

"ಇಲ್ಲದೆ ಇದ್ದರೆ ನಾನು ಹೋಗೋದಿಲ್ಲ. ತಾವು ಮನಸ್ಸು ಮಾಡಿದರೆ ಮಾರ್ಗ ಇದೆ."

ಸ್ವಲ್ಪ ಹೊತ್ತು ಕೇಶವ ಪಿಳ್ಳೆ ಆಲೋಚಿಸಿ ಧ್ವನಿ ತಗ್ಗಿಸಿ ಹೇಳಿದರು: "ನಾನೊಂದು ಮಾರ್ಗ ಸೂಚಿಸಿ ಕೊಡ್ತೀನಿ. ಪ್ರಯುತ್ನಿಸ್ತೀರಾ?"

"ಖಂಡಿತವಾಗಿಯೂ. ಹಾಗಲ್ಲದೆ ನಾನೇನು ಮಾಡಲಿ?"

"ಸರಿ. ನಿಮಗೆ ಮಂತ್ರಿ, ಮಿಸ್ಟರ್ ಉಮ್ಮನ್ ಹತ್ರ ಹೇಗಿದೆ?"

ನಾಯರ್‌ಗೆ ಅಷ್ಟೊಂದು ಹತ್ತಿರ ಅಲ್ಲ. ಮಿ॥ ಉಮ್ಮನ್ ಸ್ವಾತಂತ್ರ್ಯದ ಹೋರಾಟಕಾಲದಲ್ಲಿ ಇದ್ದ ಮನುಷ್ಯನಲ್ಲ.

ಚೀಫ್ ಸೆಕ್ರೆಟರಿ ಹೇಳಿದರು: "ಹಾಗಿದ್ದರೆ ಮಿ॥ ಮ್ಯಾಥ್ಯುವನ್ನು ಗಟ್ಟಿಯಾಗಿ

ಹಿಡಿದುಕೊಳ್ಳಬೇಕು. ಅವರಿಂದ ಮಿ|| ಉಮ್ಮನ್ ಹತ್ರ ಹೇಳಿಸಬೇಕು. ಮಿ|| ಉಮ್ಮನ್ ನನ್ನ ಹತ್ತಿರ ಸಮಾಧಾನವಾಗಿ ಆ ಕೇಸು ತೀರ್ಮಾನಿಸಬೇಕು ಅಂತ ಹೇಳಿದರೆ ಸಾಕು."

ನಾಯರ್ ಹೇಳಿದ: "ಮ್ಯಾಥ್ಯೂ ಕೇಳ್ತಾರಾ?"

"ಅದು ನನಗೆ ಗೊತ್ತಿಲ್ಲ. ನೀವು ಹೇಳಿದರೆ ಕೇಳದೆ ಇರ್ತಾರಾ?"

ನಾಯರ್ ಆಲೋಚಿಸಿ ಹೇಳಿದ: "ಒಪ್ಪದೇ ಇದ್ದರೋ?

"ಹಾಗಾದೀತಾ? ಇಲ್ಲದೆ ಇದ್ದರೆ ಲೂಕೋಸನನ್ನು ಹಿಡಿಯಬೇಕು."

"ಅದೆಲ್ಲ ಮಾಡಿದರೂ ಕೆಲಸ ಮಾಡಬೇಕಾದದ್ದು ನೀವೇ ಅಲ್ಲವೇ?" ಎಂದ ನಾಯರ್.

"ಮಂತ್ರಿಗಳು ಹೇಳಿದರೆ ಕೇಳದೇ ಇರೋದಕ್ಕೆ ಸಾಧ್ಯವಾ? ನೀವು ಅಷ್ಟು ಮಾಡ ಬೇಕು."

ನಾರಾಯಣನ್ ನಾಯರ್‌ಗೆ ಒಂದು ಮಾರ್ಗ ಸಿಕ್ಕಿದ ಸಮಾಧಾನದಲ್ಲಿ ಆತ ಹೋದದ್ದು.

* * * *

ರಿಜಿಸ್ಟರ್ ಆಫೀಸಿನ ಜವಾನ ನಾಣು ನಾಯರನ್ನು ಸರ್ವೀಸಿನಿಂದ ತೆಗೆದುಹಾಕ ಲಾಯಿತು. ಅದಕ್ಕಿದ್ದ ಅಧಿಕಾರ ರಿಜಿಸ್ಟ್ರೇಶನ್ ಡೈರೆಕ್ಟರದಾಗಿತ್ತು. ಆ ಸುದ್ದಿ ದೊಡ್ಡ ದಾಗಿ ಪತ್ರಿಕೆಗಳಲ್ಲಿ ಬಂದಿತು.

ವರ್ಗೀಸನನ್ನು ನಿರ್ಬಂಧಿತ ಪೆನ್ಶನ್ ಕೊಟ್ಟು ಮನೆಗೆ ಕಳಿಸಿದ್ದಾಗಿ ಲ್ಯಾಂಡ್ ರೆವಿನ್ಯೂ ಕಮಿಷನರ್ ಆಫೀಸಿನಿಂದ ಆರ್ಡರ್ ಹೊರಟಿತು. ಪುಪ್ಪುವಿನ ವಿಚಾರಣೆ ನಡೆಯು ತ್ತಿತ್ತು. ಎಕ್ಸೈಜ್ ಇನ್ಸ್‌ಪೆಕ್ಟರಿಗೆ ತೊಂದರೆಯಾಗುವ ಹಾಗಿಲ್ಲ. ಆತ ತಿರುವನಂತ ಪುರದವನು. ಅಲ್ಲಿ ಅವನಿಗೆ ಬೇಕಾದ ಜನರಿದ್ದಾರೆ ಎಂದು ಹೇಳುತ್ತಾರೆ.

ಉದ್ಯೋಗಸ್ಥ ಜಗತ್ತೆಲ್ಲ ಭಯಗೊಂಡಿತು. ಆದರೆ ಒಟ್ಟಿನಲ್ಲಿ ಒಂದು ವ್ಯತ್ಯಾಸ ವುಂಟಾಯಿತು. ಯಾವ ಆಫೀಸಿನಲ್ಲಿ ಯಾವ ಕೆಲಸವೂ ಸರಿಯಾಗಿ ನಡೆಯುವುದಿಲ್ಲ. ನಿಯಮ ಪ್ರಕಾರ ನಡೆಯುತ್ತದೆ. ಒಂದು ಅತ್ಯಾವಶ್ಯಕ ಕಾರ್ಯಕ್ಕಾಗಿ ಓಡಿಹೋದರೆ ಅದನ್ನು ಮಾಡಿಸಿಕೊಂಡು ಬರಲು ಸಾಧ್ಯವಿಲ್ಲ. ಆಗ ಅದರ ಹೆಸರಿನಲ್ಲಿ ಆಕ್ಷೇಪ. ತಕ್ಕಲ ತಾಲೂಕು ಕಛೇರಿ ಕ್ಲಾರ್ಕು, ಆಲಪ್ಪುಳ ಎಂಜಿನಿಯರಿಂಗ್ ಆಫೀಸಿನ ಒಬ್ಬ ಉದ್ಯೋಗಸ್ಥ, ಆಲ್ವ ಮ್ಯಾಜಿಸ್ಟ್ರೇಟ್ ಕೋರ್ಟಿನ ಕಾಪಿ ತೆಗೆಯುವವನು, ಇವರೆಲ್ಲ ವಿಚಾರಣೆಗೆ ಗುರಿಯಾದರು. ಅದಕ್ಕೆ ಅವರಿಗೆ ತೃಪ್ತಿಕರವಾದ ಸಮಾಧಾನವನ್ನು ಹೇಳುವುದಿತ್ತು. ಅಂತು ಅಲ್ಲಿ ಇಲ್ಲಿ ಎಲ್ಲ ಜವಾನರು ಕ್ಲಾರ್ಕುಗಳನ್ನೆಲ್ಲ ಅಕ್ರಮ ನಿರೋಧ ಕತ್ತರಿ ಹಿಡಿದುಕೊಂಡು ನಡೆಯುತ್ತಿತ್ತು. ಈಗ ಕಾಂಗ್ರೆಸ್ ಮುಖಂಡರು, ಮಂತ್ರಿಗಳು ಎಲ್ಲಿ ಮಾತಾಡಿದರೂ ಈ ಪರಿಷ್ಕಾರವನ್ನು, ಅದರ ಕಾರ್ಯಾಚರಣೆಯನ್ನು ಕುರಿತೇ ಮಾತನಾಡುವುದು.

ನಾರಾಯಣನ್ ನಾಯರ್ ಮಂತ್ರಿ ಮ್ಯಾಥ್ಯುವನ್ನು ಕಂಡ. ಮ್ಯಾಥ್ಯುಗೆ ನಾಯರನ್ನು ಮರೆಯಲು ಸಾಧ್ಯವಿಲ್ಲವಲ್ಲ. ಹೇಗಿದ್ದರೂ ಆ ವಿಷಯವನ್ನು ಉಮ್ಮನ್ ಹತ್ತಿರ ಹೇಳಬೇಕೆಂದುಕೊಂಡ. ಅವರವರಿಗೆ ಸ್ನೇಹವಿದೆ. ಆದರೂ ಆಕ್ರಮ ನಿರೋಧವನ್ನು ಜಯಕರವಾಗಿ ನಡೆಸಿಕೊಂಡು ಹೋಗಬೇಕೆಂಬ ಉದ್ದೇಶದಿಂದ ಎಲ್ಲರೂ ಇರುವುದು. ಮತ್ತೆ ಯಾವ ವಿಷಯವಾದರೂ ಹೇಳಬಹುದು. ಆದರೆ ಇದನ್ನು ಹೇಗ ಹೇಳುವುದು ಎಂದು ಆಲೋಚಿಸುತ್ತಿದ್ದರು ಮ್ಯಾಥ್ಯು. ನಾರಾಯಣನ್ ನಾಯರ್ ಏನು ಮಾಡಿದರೂ ಬಿಡುವ ಹಾಗೆ ಕಾಣುತ್ತಿರಲಿಲ್ಲ. ಹಾಗೆ ಒಂದೆರಡು ದಿನಗಳು ಕಳೆದುವು. ವಿಷಯಗಳು ಎಲ್ಲಿಯ ವರೆಗೆ ಬಂದುವು ಎಂದು ಕೇಶವ ಪಿಳ್ಳೆ ಯಾವಾಗಲೂ ನಾಯರ್ ಹತ್ತಿರ ಕೇಳುತ್ತಿದ್ದರು. ಎಲ್ಲವನ್ನೂ ವಿಶದವಾಗಿ ನಾಯರ್ ಹೇಳುತ್ತಿದ್ದ. "ನೀವು ಗಟ್ಟಿಯಾಗಿ ಹಿಡಿದುಕೊಳ್ಳಬೇಕು. ನಿಮಗೆ ಹಿಡಿದುಕೊಳ್ಳೋದಕ್ಕೆ ಬರೋದಿಲ್ಲ" —ಹೀಗೆ ಚೀಫ್ ಸೆಕ್ರೆಟರಿ ಹೇಳುತ್ತಿದ್ದದ್ದು. ಇದಕ್ಕಿಂತ ಹೆಚ್ಚಾಗಿ ಬಲವಾಗಿ ಹಿಡಿದುಕೊಳ್ಳುವುದು ಹೇಗೆ ಎಂದು ನಾರಾಯಣನ್ ನಾಯರ್‌ಗೆ ತಿಳಿಯದು. ಮಿಸೆಸ್ ಮ್ಯಾಥ್ಯು ಕೂಡ ಮಂತ್ರಿಯ ಹತ್ತಿರ ಒತ್ತಡ ಹೇರಿದ್ದಾರೆ. ಇದುವರೆಗೆ ಸರ್ಕಾರದ ಕೆಲಸ ಯಾವುದರಲ್ಲೂ ತಾನು ಪ್ರವೇಶಿಸಿಲ್ಲವೆಂದು ಆತ ಹೇಳುತ್ತಿದ್ದದ್ದು.

ಮೂರನೆಯ ದಿನ ಚೀಫ್ ಸೆಕ್ರೆಟರಿ ಕಟುವಾಗಿ ಒಂದು ಮುನ್ನೂಚನೆ ಕೊಟ್ಟರು:

"ನನಗೆ ಇನ್ನು ಮೇಲೆ ಹೆಚ್ಚು ದಿನ ಈ ಫೈಲ್ ಇಟ್ಟುಕೊಳ್ಳೋದಕ್ಕೆ ಸಾಧ್ಯವಿಲ್ಲ ಮಿ॥ ನಾಯರ್."

ನಾಯರ್‌ಗೆ ದಿಕ್ಕೇ ತೋರದಾಯಿತು.

"ಅಯ್ಯೋ ಹಾಗೆ ಹೇಳಬೇಡಿ. ಒಂದು ವಾರ ಕಾಲಾವಕಾಶ ಕೊಡಿ. ನಾನು ಅಷ್ಟರಲ್ಲಿ ಪ್ರಯತ್ನಿಸ್ತೀನಿ."

"ಫೈಲ್ ಇಟ್ಟುಕೊಂಡು ತಡ ಮಾಡುವುದಕ್ಕೆ ನನಗೆ ಯಾವ ಕಾರಣವೂ ಇಲ್ಲ. ಕೇಳಿದರೆ ನಾನು ಏನು ಹೇಳಬೇಕು? ಹಾಗೆ ಆಗೋದಿಲ್ಲ." ಚೀಫ್ ಸೆಕ್ರೆಟರಿಗೆ ಈ ಕೆಲಸ ಮಾಡುವುದು ಅನಿವಾರ್ಯವಾಗಿದ್ದ ಹಾಗೆ ತೋರಿತು.

ಮಾರನೆಯ ದಿನ ಚೀಫ್ ಸೆಕ್ರೆಟರಿ ಒಂದು ಒಳ್ಳೆಯ ಸುದ್ದಿಯನ್ನು ನಾರಾಯಣನ್ ನಾಯರ್‌ಗೆ ತಿಳಿಸುವುದಿತ್ತು. ಅವರಿಗೆ ಒಂದು ಒಳ್ಳೆಯ ಮಾರ್ಗ ಕಾಣಿಸುತ್ತಿತ್ತು. ಪ್ರಯೋಜನಪಡಿಸಿಕೊಳ್ಳುವುದಿದ್ದರೆ ಆಗಲಿ. ಅದೊಂದು ತುಂಬ ರಹಸ್ಯ ಸಂಗತಿ. ತಹಸೀಲ್‌ದಾರರಂತೆಯೇ ತೊಂದರೆಗೆ ಸಿಕ್ಕಿಹಾಕಿಕೊಂಡಿದ್ದ ಒಬ್ಬ ರೇಂಜರ್ ಇದ್ದರು. ಲಂಚ ತೆಗೆದುಕೊಂಡು, ಕೂಪಿನ ಮರ ಕತ್ತರಿಸಿ ಮಾರಿದರು ಎನ್ನುವುದು ಕೇಸು. ಸರಿಯಾದ ವಿವರಗಳೂ ಇದ್ದುವು. ಆ ಕೇಸು ಸತ್ಯವಾಗಿದ್ದಂತೆ ತೋರಿತು. ಆದರೆ ಆತನನ್ನು ಕಾಪಾಡಬೇಕೆಂದು ಮಂತ್ರಿ ಮಿ॥ ಉಮ್ಮನ್ ಚೀಫ್ ಸೆಕ್ರೆಟರಿಗೆ ಹೇಳಿದ್ದಾರೆ.

"ಈಗ ತಾನೇ ಹತ್ತು ನಿಮಿಷ ಆಯ್ತು ಅಷ್ಟೆ. ನಾನು ನೋಡಿದೆ. ನಿಮ್ಮ ಕೇಸಿನ

ಹಾಗೇ ಯಾವ ಮಾರ್ಗವೂ ಇಲ್ಲದೇ ಇರೋ ಕೇಸು. ಆ ವಿವರ ಬಾಯಿಬಿಟ್ಟು ಹೇಳಿದ. ಯಾವ ರೀತಿಯಲ್ಲಾದರೂ ಕಾಪಾಡಲೇಬೇಕು ಎಂದು ಮಂತ್ರಿಯ ಅಭಿಪ್ರಾಯ."

ನಾರಾಯಣನ್ ನಾಯರ್‌ಗೆ ಜೀವ ಬಂದಿತು. ಆತ ಹೇಳಿದ: "ಉಮ್ಮನ್ ಹತ್ತಿರ ಹೇಗೆ ಇದನ್ನು ಹೇಳುವುದು ಎಂದಾಗಿತ್ತು ಮ್ಯಾಥ್ಯುವಿನ ಶಂಕೆ. ಈ ರೀತಿ ಯಲ್ಲಾದರೆ ಯಾಕೆ ನನ್ನ ವಿಷಯವನ್ನು ಮ್ಯಾಥ್ಯುವಿಗೆ ಹೇಳಬಾರದು?"

ಚೀಫ್ ಸೆಕ್ರೆಟರಿ ಅದನ್ನು ಒಪ್ಪಿಕೊಂಡರು.

"ಹೌದು. ಅದನ್ನೇ ನಾನು ಕೇಳುವುದು." ನಾರಾಯಣನ್ ನಾಯರ್ ಹೊರ ಟಾಗ ಚೀಫ್ ಸೆಕ್ರೆಟರಿ ಕಟುವಾದ ಒಂದು ಮುನ್ಸೂಚನೆ ಕೊಟ್ಟರು:

"ಇದನ್ನು ನಾನು ಹೇಳಿಕಳಿಸಿದ್ದು ಅಂತ ಉಮ್ಮನ್ ಭಾವಿಸಬಾರದು. ಈ ವಿಷಯ ನಮಗೋ ಮ್ಯಾಥ್ಯುವಿಗೋ ಗೊತ್ತಿದೆ ಅಂತ ಕೂಡ ಅವರು ಭಾವಿಸಬಾರದು. ಹಾಗೆ ಹೇಳಿದರೆ ನನ್ನ ರಕ್ಷಣೆಗೋಸ್ಕರ ತಹಸೀಲ್ದಾರರಿಗೆ ತೊಂದರೆ ಕೊಡ್ತೀನಿ. ಹೇಳಿದ್ದೀನಿ. ಯಾವ ದಾಕ್ಷಿಣ್ಯವನ್ನೂ ತೋರಿಸುವುದಿಲ್ಲ."

ಮಂತ್ರಿ ಮ್ಯಾಥ್ಯುವಿಗೂ ನಾರಾಯಣನ್ ನಾಯರ್‌ಗೆ ಸಹಾಯ ಮಾಡಬೇಕೆನ್ನುವ ಉದ್ದೇಶವಿತ್ತು. ಋಣಾನುಬಂಧಗಳನ್ನು ಅಷ್ಟು ಬೇಗ ಮರೆಯುವ ವ್ಯಕ್ತಿಯಾಗಿರಲಿಲ್ಲ ಆತ. ಸ್ವಲ್ಪ ಸಂಕೋಚಪಟ್ಟುಕೊಂಡಿದ್ದರು ಅಷ್ಟೆ.

ಆ ವಿವರವೆಲ್ಲ ತಿಳಿದಾಗ ಆತನಿಗೆ ಧೈರ್ಯ ಬಂದಿತು. ಆತನೂ ನಾರಾಯಣನ್ ನಾಯರ್ ಹೇಳಿದಂತೆಯೇ ಹೇಳಿದರು: "ಹಾಗಿದ್ದರೆ ನಮ್ಮ ಕೆಲಸವೂ ಇದರ ಜೊತೆ ಆದರೇನು?"

ಆದರೆ ಅಲ್ಲಿಯೂ ಒಂದು ತೊಂದರೆ. ತಹಸೀಲ್‌ದಾರರ ಕೇಸಿನಲ್ಲಿ ಎದುರು ಕಕ್ಷಿ ಎಂ. ಎಲ್. ಎ. ಅವರನ್ನು ಸಮಾಧಾನಪಡಿಸಬೇಕು. ಇಲ್ಲದೇ ಇದ್ದರೆ ನಿಯಮಸಭೆ ಯಲ್ಲೂ, ನಾಡಿಡೀ ಆತ ವ್ಯಾಖ್ಯಾನಿಸುವುದಕ್ಕೆ ಸಿದ್ಧನಾಗುತ್ತಾನೆ. ಈ ಸಂಗತಿಯನ್ನು ಚೀಫ್ ಸೆಕ್ರೆಟರಿಯೇ ಮಂತ್ರಿ ಮಿ॥ ಮ್ಯಾಥ್ಯುವಿನ ಹತ್ತಿರವೂ ಮಂತ್ರಿ ಉಮ್ಮನ್ ಹತ್ತಿರವೂ ಹೇಳಿದ್ದು. ಅದಕ್ಕೆ ಕೇಶವ ಪಿಳ್ಳೆ ಒಂದು ಮಾರ್ಗವನ್ನು ನಿರ್ದೇಶಿಸಿದರು.

ತಹಸೀಲ್‌ದಾರ್ ಎಂ. ಎಲ್. ಎ. ಹತ್ತಿರ ಅಭಯ ಪಡೆಯಬೇಕು. ಒಂದು ವೇಳೆ ಕೇವಲ ಕ್ಷಮಾ ಯಾಚನೆಯಿಂದ ತೃಪ್ತಿಪಡದೇ ಇರಬಹುದು. ಇಂದು ಆತನ ತಮ್ಮನಿಗೆ ಕೂಪು ಹಂಚಿ ಕೊಡದೇ ಇದ್ದದ್ದರಿಂದ ಪತ್ರನಂತಿಟ್ಟದಲ್ಲೇ ಒಳ್ಳೆ ಕೂಪು ಹಂಚಿಕೊಡ ಬೇಕಾಗಿ ಬರುತ್ತೆ. ಅದು ತೊಂದರೆಯಿಲ್ಲ. ತಾನು ಮಾಡಿಕೊಡುವುದಾಗಿ ಚೀಫ್ ಸೆಕ್ರೆಟರಿ ಒಪ್ಪಿದರು. ಕೇಸಿನಲ್ಲಿ ಸಾಧಾರಣ ತಿಳಿವಿದೆ. ಒಂದೆರಡು ಪಾಯಿಂಟ್‌ಗಳನ್ನು ತಿಳಿಯುವುದಕ್ಕಾಗಿ ತಾನು ಕೇಸು ಕೆಳಕ್ಕೆ ಕಳಿಸಬಹುದು. ಅಂತಹದೇ ಕೆಲಸವನ್ನು ರೇಂಜರ ವಿಷಯವಾಗಿ ಸ್ವೀಕರಿಸಿರುವುದು. ಆಗ ಕೇಸು ಹಿಂದಿರುಗಿ ಬರುವ ಹೊತ್ತಿಗೆ ಎಲೆಗೂ ಮುಳ್ಳಿಗೂ ದೋಷವುಂಟಾಗದ ರೀತಿಯಲ್ಲಿ ಕಾರ್ಯವನ್ನು ಸರಿಪಡಿಸಬಹುದು.

ಹಾಗೆ ದಾರಿಗಳು ಒಂದು ರೀತಿಯಲ್ಲಿ ಸುಗಮವಾದುವು. ಶ್ರಮ ಅಷ್ಟಕ್ಕೇ ಅಂತ್ಯ ಗೊಳ್ಳಲಿಲ್ಲ ಅಷ್ಟೆ. ಒಂದು ತಿಂಗಳೊಳಗೆ ಎಲ್ಲ ಕಾರ್ಯಗಳು ಅಚ್ಚುಕಟ್ಟಾಗಿ ನಡೆದುವು. ರೇಂಜರೂ ತಹಸೀಲ್‌ದಾರರೂ ನಿರಪರಾಧಿಗಳೆಂದು ಆರ್ಡರ್ ಬಂದಿತು. ತಹಸೀಲ್ ದಾರರಿಗೆ ಐದು ಸಾವಿರ ರೂಪಾಯಿ ಖರ್ಚಾಯಿತು. ಚಿಂತೆಯಿಲ್ಲ. ಆತ ಆ ಖರ್ಚನ್ನು ತಿಳಿದೇ ದೇವೀಕುಳಕ್ಕೆ ಸ್ಥಳ ಬದಲಾಯಿಸಿದರು. ಸ್ವಲ್ಪ ಅನಾನುಕೂಲತೆಗಳನ್ನು ಸಹಿಸ ಬೇಕು ಅಷ್ಟೆ. ಎರಡು ತಿಂಗಳೇನೂ ಬೇಡ ಆ ಹಣವನ್ನು ಹಿಂದಕ್ಕೆ ಪಡೆಯುವುದಕ್ಕೆ.

ನಾರಾಯಣನ್ ನಾಯರ್‌ಗೆ ಒಂದು ಜೀವಿತಕಾಲದ ಕಷ್ಟಕ್ಕೆ ಮೊದಲ ಫಲ ದೊರೆಯಿತು.

ಕೇಶವ ಪಿಳ್ಳೆಗೋ? ಅವರಿಗೂ ಉದ್ದೇಶಿಸಿದ್ದು ಸಾಧನೆಯಾಯಿತು. ಮಂತ್ರಿ ಗಳೇ ಅನೀತಿ ತಡೆಗಟ್ಟುವಿಕೆಯನ್ನು ಹಾಳು ಮಾಡಲು ಅವರ ಹತ್ತಿರ ಬಂದರು. ಎಲ್ಲಕ್ಕಿಂತ ಹೆಚ್ಚಾಗಿ ಮಂತ್ರಿ ಮಿ॥ ಉಮ್ಮನ್‌ಗೆ ಕೇಶವ ಪಿಳ್ಳೆಯನ್ನು ಕುರಿತು ಒಳ್ಳೆಯ ಅಭಿಪ್ರಾಯವುಂಟಾಯಿತು.

ಎಂ. ಎಲ್. ಎ.ಗೆ ಐನೂರು ಎಕರೆ ಒಳ್ಳೆಯ ಭೂಮಿ ಕಡಿಮೆ ಬೆಲೆಗೆ ಹಂಚಿದ್ದು ಸಿಕ್ಕಿತು. ಆತನೂ ಚೀಫ್ ಸೆಕ್ರೆಟರಿಗೆ ಋಣಿಯಾಗಿದ್ದ.

## ಕೊಚ್ಚಿಯವನು

ಸುಕೇಶಿನಿ ಎನ್ನುವ ಒಬ್ಬ ಲೇಡಿ ಟೈಪಿಸ್ಟನ್ನು. ಪದ್ಮಾವತಿ ಎನ್ನುವ ಮತ್ತೊಬ್ಬ ಲೇಡಿ ಕ್ಲಾರ್ಕು ಹೊಡೆದಳು. ಕೆನ್ನೆಗೆ ಎರಡೇಟು ಬಿಗಿದಿದ್ದಳು. ಆ ಘಟನೆ ನಡೆದದ್ದು ಸೆಕ್ರೆಟರಿಯೇಟ್‌ನಲ್ಲಿ. ಮಧ್ಯಾಹ್ನ ಸುಕೇಶಿನಿ ಬರುವಾಗ ಪದ್ಮಾವತಿ ಕಾದುನಿಂತು ಹೊಡೆದದ್ದು. ಅವಳಿಗೆ ಗೊತ್ತಿಲ್ಲದ ಹಾಗೆ ಹೊಡೆದದ್ದು. ಅನಂತರ ಪದ್ಮಾವತಿ ವಿಶೇಷವೇನೂ ಇಲ್ಲದಂತೆ ಅಲ್ಲಿಂದ ಹೊರಟುಹೋಗಿದ್ದಳು. ಒಂದು ನಿಮಿಷದಲ್ಲಿ ಅದೆಲ್ಲ ನಡೆದುಹೋಗಿತ್ತು. ಸುಕೇಶಿನಿಯ ಕೆನ್ನೆಯ ಮೇಲೆ ಬೆರಳಿನ ಗೆರೆ ಮೂಡಿ ಕೆನ್ನೆ ಕೆಂಪಾಗಿ ಕಾಣುತ್ತಿತ್ತು.

ಸುಕೇಶಿನಿ ಪಂಚವಾರ್ಷಿಕ ಯೋಜನೆಯ ಸೆಕ್ಷನ್ನಿನಲ್ಲಿದ್ದವಳು. ಪದ್ಮಾವತಿ ಪಿ. ಡಬ್ಲ್ಯು. ಡಿ. ಮೊದಲು ಪಂಚವಾರ್ಷಿಕ ಯೋಜನೆಯ ಆಫೀಸಿನಲ್ಲಿದ್ದಳು. ಆ ದಿನ ಮಧ್ಯಾಹ್ನದ ನಂತರ ಸೆಕ್ರೆಟರಿಯೇಟಿನ ಒಂದು ಸೆಕ್ಷನ್‌ನಲ್ಲಿ ಯಾವ ಕೆಲಸವೂ ನಡೆಯಲಿಲ್ಲ. ನಡೆದದ್ದು ಒಂದು ಅಸಾಧಾರಣ ಘಟನೆಯಾಗಿತ್ತು. ಹೆಣ್ಣು ಹೆಣ್ಣನ್ನು ಹೊಡೆದದ್ದು. ಎಲ್ಲರೂ ಅದೇ ವಿಷಯ ಮಾತಾಡುತ್ತಿದ್ದರು. ಕಾರಣವೇನು ಎನ್ನುವ ಪ್ರಶ್ನೆ ಮೊದಲು ಹುಟ್ಟಿದ್ದು. ಪಂಚವಾರ್ಷಿಕ ಯೋಜನೆಯ ಆಫೀಸಿನಲ್ಲಿದ್ದವರಿಗೆ ಕಾರಣವನ್ನು ಕುರಿತ ಊಹೆಯಿತ್ತು. ಕರುಣಾಕರನ್ ನಾಯರ್ ಎನ್ನುವ ಕ್ಲಾರ್ಕ್ ಪದ್ಮಾವತಿಯ ಸೆಕ್ಷನ್‌ನಲ್ಲಿದ್ದಾನೆ. ಅವನು ಪದ್ಮಾವತಿಯ ಪ್ರೇಮಿಯಾಗಿದ್ದ. ಪದ್ಮಾವತಿ ಆ ಆಫೀಸನ್ನು ಬಿಟ್ಟ ಮೇಲೆ ಆತ ಸುಕೇಶಿನಿಯನ್ನು ಪ್ರೇಮಿಸಿದ. ಸುಕೇಶಿನಿ ತ್ರಿಚ್ಚೂರಿನವರ ಹಾಗೆ ಒಳ್ಳೆಯ ಉಡುಗೆತೊಡುಗೆಯಿಂದ ಬರುತ್ತಿದ್ದಳು. ಮೊದಲು ಅವರಿಬ್ಬರಲ್ಲೂ ಮಾತಿಗೆ ಮಾತು ಬೆಳೆದಿತ್ತು ಎಂದು ವದಂತಿ. ಅದೇ ಕಾರಣವಿರಬೇಕು. ಸೆಕ್ರೆಟರಿಯೇಟಿನ ಕ್ಲಾರ್ಕುಗಳೆಲ್ಲರೂ ಪಂಚವಾರ್ಷಿಕ ಯೋಜನೆಯ ಆಫೀಸಿಗೂ ಲೋಕೋಪಯೋಗಿ ಆಫೀಸಿಗೂ ಹೋಗಿ ಬರುತ್ತಿದ್ದರು.

ಸುಕೇಶಿನಿ ಕೊಚ್ಚಿಯವಳು. ತಿರುವಿಲ್ಲಾಮಲದಲ್ಲೋ, ದೇಶಮಂಗಳದ ಪತ್ತಿರವೋ ಎಲ್ಲಿಯೋ ಅವಳ ಮನೆ. ಪಂಚವಾರ್ಷಿಕ ಯೋಜನೆಯ ಆಫೀಸಿನಲ್ಲಿ ಕೊಚ್ಚಿಯವರೆಲ್ಲರೂ ತಕ್ಷಣ ಒಂದು ಕಡೆ ಸೇರಿ ಆಲೋಚಿಸಿದರು. ತಿರುವನಂತಪುರದಲ್ಲಿ ತಮಗೆ ರಕ್ಷಣೆಯಿಲ್ಲದಾಗುತ್ತದೆ ಎಂದಾಗಿತ್ತು ಅವರ ಆಕ್ಷೇಪ. ಈಗ ಕೈ ಮಾಡಿದ್ದೂ ಆಯಿತು.

ಲೋಕೋಪಯೋಗಿ ಆಫೀಸಿನಲ್ಲಿ ತಿರುವಾಂಕೂರು ಭಾಗದವರೂ ಒಂದು ಕಡೆ

ಸೇರಿ ಆಲೋಚಿಸಿದರು. ಕೊಚ್ಚಿಯವರು ಸುಕೇಶಿನಿಯಿಂದ ದೂರು ಕೊಡಿಸಿದರೆ ಪದ್ಮಾವತಿಯ ಮಾನ ಕಾಪಾಡುವುದು ಹೇಗೆ ಎಂದು ಅವರು ಆಲೋಚಿಸುತ್ತಿದ್ದದ್ದು. ಈ ರೀತಿಯಲ್ಲಿ ಆ ಎರಡು ಸೆಕ್ಷನ್‌ನಲ್ಲಿಯೂ ಆಲೋಚನೆ ನಡೆದಿತ್ತು. ಆ ಮೇಲೆ ಆ ಎರಡು ಸೆಕ್ಷನ್‌ನಲ್ಲಿ ಮಾತ್ರವಲ್ಲ ಸೆಕ್ರೆಟರಿಯೇಟ್‌ನ ಎಲ್ಲ ವಿಭಾಗಗಳಲ್ಲೂ ಆಲೋಚನೆ ನಡೆದಿತ್ತು. ಕೊಚ್ಚಿಯವರು ಬದುಕಬೇಡವೇ? ಕೊಚ್ಚಿಯ ರಾಜ ಕೊಚ್ಚಿ ರಾಜ್ಯವನ್ನು ಬಿಟ್ಟುಕೊಟ್ಟರು. ಅದನ್ನು ಇವರಿಗೆ ಸ್ಮರಿಸಿಕೊಳ್ಳುವುದಕ್ಕೂ ಸಾಧ್ಯವಾಗಿಲ್ಲ. ಎಷ್ಟು ಚೆನ್ನಾಗಿ ಆಳ್ವಿಕೆ ನಡೆಯುತ್ತಿದ್ದ ರಾಜ್ಯ ಅದು! ತಿರುವಾಂಕೂರಿನವರ ದೂರು ಅದಲ್ಲ. ಅವರಿಗಿಂತ ಕಡಿಮೆ ಸಂಬಳ ತೆಗೆದುಕೊಳ್ಳುತ್ತಿದ್ದವರು ಒಂದು ಸುಪ್ರಭಾತದಲ್ಲಿ ಅವರಿಗೆ ಸಮಾನರಾಗಿಯೋ ಸೀನಿಯರ್ ಆಗಿಯೋ ಬಂದಿದ್ದಾರೆ! ಇವರೆಲ್ಲ ಬಂದು ಸೇರಿದ್ದರಿಂದ ಪ್ರೊಮೋಶನ್ ಅವಕಾಶ ತಪ್ಪಿತು. ಯಾಕೆ ಅದೊಂದು ತುಂಡು ಭೂಮಿಯನ್ನು ತಿರುವಾಂಕೂರಿನ ಜೊತೆ ಸೇರಿಸಿದರು? ಎಷ್ಟೋ ಜನ ಸ್ತ್ರೀಪುರುಷರು ಬಂದು ಸೇರಿಕೊಂಡಿದ್ದಾರೆ! ಎಂದೆಂದೂ ಎರಡು ಭಾಗದವರಿಗೂ ಪ್ರೊಮೋಷನ್ ಮತ್ತು ಸ್ಕೇಲಿಗೆ ಸಂಬಂಧಪಟ್ಟ ದೂರು ಸರ್ಕಾರಕ್ಕೆ ಬರುತ್ತಿತ್ತು. ಕೆಲವು ಸಲ ಅವರವರೊಳಗೆ ಸ್ವಲ್ಪ ಕಸಿವಿಸಿಯೂ ಉಂಟಾಗುತ್ತಿತ್ತು. ಕೊಚ್ಚಿಯವರು ತಿರುವಾಂಕೂರಿನವರಿಗೆ ಸಮನಲ್ಲ ಎನ್ನುವುದು ತಿರುವಾಂಕೂರಿನವರ ಅಭಿಪ್ರಾಯ. ತಿರುವಾಂಕೂರು ಪ್ರದೇಶದವರು ಲಂಚಕೋರರು, ವಂಚಕರು, ಕಳ್ಳರು—ಎಂದು ಕೊಚ್ಚಿಯವರ ಅಭಿಪ್ರಾಯ. ಆ ಗೊಣಗಾಟದ ಮಧ್ಯೆ ಸುಕೇಶಿನಿಗೆ ಏಟು ಬಿದ್ದದ್ದು.

ಲೋಕೋಪಯೋಗಿ ವಿಭಾಗದ ಕುಂಞ್ಞಿಪ್ಪಾಲನ ಸಲಹೆ ಅದೇ ದಿನ ಸುಕೇಶಿನಿಯ ಕೈಯಿಂದ ಪದ್ಮಾವತಿಯ ಕೆನ್ನೆಗೆ ಹೊಡೆಸಬೇಕು ಎಂದು. ಏಟು ಬಲವಾಗಿ ಬೀಳಬೇಕು ಅಂತ ಇಲ್ಲ. ಏಟಿಗೆ ಏಟು ಕೊಡಬೇಕು. ಅರವಿಂದಾಕ್ಷನಿಗೆ ಆ ಸಲಹೆ ಹಿಡಿಸಲಿಲ್ಲ. ಆತ ಹೇಳಿದ: "ಆ ಮೇಲೆ ನಾವಿಲ್ಲಿ ಜೀವಿಸಬೇಡವಾ? ತಿರುವನಂತಪುರವಿಡೀ ತಿರುಗಿ ಬಿದ್ದೀತು! ಇವರು ನಮಗೆ ಒಬ್ಬೊಬ್ಬರಿಗೂ ಹೊಡೆದಾರು."

ಫಾರೆಸ್ಟ್ ಸೆಕ್ಷನ್ನಿನ ಸೇತುಮಾಧವನ್ ನಾಯರ್ ಹೇಳುವುದು ದೂರು ಕೊಡಬೇಕು ಎಂದು. ಉಣ್ಣಿಕ್ಕಂಡ ವಾರ್ಯರ್ ಮತ್ತು ಅಪ್ಪುಕುಟ್ಟಿ ಪುದುವಾಳ್ ಆ ಸಂಗತಿಯನ್ನು ದೊಡ್ಡದು ಮಾಡುವುದು ಬೇಡ ಎಂದು ಅಭಿಪ್ರಾಯಪಟ್ಟರು. ಅವರೆ ಪೊದುವಾಳ್, ಒಂದು ಸಲಹೆ ಕೊಡುವುದಿತ್ತು.

"ಇದೊಂದು ಒಳ್ಳೆಯ ಸಂದರ್ಭ. ಕೊಚ್ಚಿಯಿಂದ ಬಂದ ನಾವೆಲ್ಲ ಒಂದು ಅಸೋಸಿಯೇಶನ್ ಪ್ರಾರಂಭಿಸಬೇಕು. ನಾನು ಅದನ್ನು ಆಗಿನಿಂದಲೂ ಹೇಳ್ತಿದ್ದೀನಿ. ಈಗ ಎಲ್ಲರೂ ಎದ್ದಿದ್ದಾರೆ. ಅಲ್ಲವಾ ವಾರ್ಯರೇ?"

ವಾರ್ಯರಿಗೂ ಅದೇ ಅಭಿಪ್ರಾಯವಿದ್ದದ್ದು. ಹಾಗೆ ಮಾಡದೇ ಇದ್ದರೆ ಕೊಚ್ಚಿಕಾರರಿಗೆ ಜೀವಿಸೋದಕ್ಕೆ ಸಾಧ್ಯವಿಲ್ಲ.

ಕುಞ್ಞಿಪ್ಪಾಲು ಆ ಸಲಹೆಗೆ ದನಿಗೂಡಿಸಿದ. ಆದರೆ ಆತ ಪ್ರಶ್ನಿಸಿದ್ದು ಹೀಗೆ: "ಅಯ್ಯೋ! ಇದಕ್ಕೇನು ಮಾಡಬೇಕು?"

ಪೊದುವಾಳ್ ಹೇಳಿದ: "ನೀನು ಹೋಗಿ ಅವಳ ಪತ್ರ ಕೇಳು!"

ಕುಞ್ಞಿಪ್ಪಾಲು ಸುಕೇಶಿನಿಯ ಹತ್ತಿರ ಹೋದ. ಅವಳು ಯಾವುದನ್ನೂ ನಿರ್ಮಾಣಿಸಿಲ್ಲ.........

ಉಣ್ಣಿಕ್ಕಂಡ ವಾರ್ಯರಿಗೆ ಅದೇತಕ್ಕೆ ಎಂದು ಗೊತ್ತಿತ್ತು.

"ಆ ನಾಯರ್ ಇವತ್ತು ರಜಮಲ್ಲಿದ್ದಾನೆ. ಅವನಲ್ಲವೇ ಕಾರಣಕರ್ತೃ? ಅತ ಬರಲಿ ಅಂತ ಸುಕೇಶಿನಿ ತೀರ್ಮಾನಿಸಿದ್ದಾಳೆ."

ಸುಕೇಶಿನಿ ದೂರು ಕೊಡದೇ ಇದ್ದರೂ ತಾನು ದೂರು ಕೊಡಬೇಕು ಎನ್ನಿಸಿತು ಕುಞ್ಞಿಪ್ಪಾಲುಗೆ. ಎಲ್ಲರೂ ಅದನ್ನು ವಿರೋಧಿಸಿದರು. ದೂರು ಕೊಟ್ಟರೆ ಚೀಫ್ ಸೆಕ್ರೆಟರಿ ಎರಡೂ ಕಡೆಯವರ ಗ್ರಹಚಾರ ಬಿಡಿಸುತ್ತಾರೆ. ಸೇತು ಮಾಧವನ್ ನಾಯರ್ ಹೇಳಿದರು:

"ಚೀಫ್ ಸೆಕ್ರೆಟರಿ ಒಬ್ಬ ಅಸಲು ತಿರುವಾಂಕೂರಿನ ಮನುಷ್ಯ."

ಕುಞ್ಞಿಪ್ಪಾಲು ಯೋಗ್ಯತೆಯಿಲ್ಲದ. ಕೊಚ್ಚಿಯಿಂದ ಬಂದ ಮಂತ್ರಿಯನ್ನು ಕುರಿತು ಒಂದು ನೂರು ಬೈಗಳ ಬಯ್ದು. ಪಂಚವಾರ್ಷಿಕ ಯೋಜನೆ ಸೆಕ್ಷನ್ನಿನ ಸೆಕ್ರೆಟರಿ ಕುಞ್ಞಿಶಂಕರ ಮೆನನ್. ಆತ ಕೊಚ್ಚಿಯ ರಾಜನ ಮಗ. ರಾಜ್ಯ ಆಳಿದ್ದ ರಾಜನ ಪ್ರಿಯ ತಮ್ಮೆಯ ಸಹೋದರಿಯ ಹೆಸರೂ ಆತನ ಹೆಸರಿನ ಜೊತೆಯಲ್ಲಿತ್ತು.

ಸೆಕ್ಷನ್‌ನಲ್ಲಿ ನಡೆದ ಈ ಕೋಲಾಹಲಗಳೊಂದೂ ಕುಞ್ಞಿಶಂಕರ ಮೆನೋನ್‌ಗೆ ತಿಳಿಯದು. ಅವರಿಗೆ ಊಟ ಮಾಡಿ ಬಂದ ಮೇಲೆ ಒಂದು ನಿದ್ದೆ ಮಾಡುವ ಪದ್ಧತಿಯಿತ್ತು. ಅದು ಇಂದು ನಿನ್ನೆ ಪ್ರಾರಂಭವಾದದ್ದಲ್ಲ. ಎರ್ನಾಕುಲಂನಲ್ಲಿ ಯಾರೂ ಆ ಹೊತ್ತಿನಲ್ಲಿ ತೊಂದರೆ ಮಾಡುತ್ತಿರಲಿಲ್ಲ. ಆದರೆ ಸಂರಕ್ಷಣೆಗೆ ಆಳಿಲ್ಲದೆ ಹೋದ ತಿರುವನಂತಪುರದಲ್ಲಿ ಅವರಿಗೆ ಆ ನಿದ್ದೆ ಈಗ ಸರಿಯಾಗಿ ದೊರೆಯುತ್ತಿಲ್ಲ. ಸೆಕ್ಷನ್‌ನಲ್ಲಿ ಯಾರೂ ತೊಂದರೆಪಡಿಸದೇ ಇದ್ದರೂ ಉಳಿದ ಸೆಕ್ಷನ್‌ನಿಂದ ಕೆಲವು ಸಲ ಚೀಫ್ ಸೆಕ್ರೆಟರಿ, ಮಂತ್ರಿ ಇವರಿಂದೆಲ್ಲ ಟೆಲಿಫೋನ್ ಕರೆ ಬರುತ್ತಿತ್ತು. ಆ ದಿನವೂ ಅದು ಸಂಭವಿಸಿತು. ಲೋಕೋಪಯೋಗಿ ವಿಭಾಗದ ಸೆಕ್ರೆಟರಿ ಅವರನ್ನು ಕರೆದರು:

"ನಾಳೆ ಕ್ಯಾಬಿನೆಟ್ ಸೇರುತ್ತೆ. ಹೈಡ್ರೋ ಎಲೆಕ್ಟ್ರಿಕ್‌ಗೆ ಸಂಬಂಧಿಸಿದ ಫೈಲು ಕ್ಯಾಬಿನೆಟ್ಟಿನಲ್ಲಿ ಸಮರ್ಪಿಸುವುದಕ್ಕೆ ತಯಾರಾಯ್ತಾ?" ಎಂದು ಕೇಳಿದ್ದು. ಮೆನೋನ್ ನಡುಗಿದರು. ಕೆಲವು ದಿನಗಳಿಗೆ ಮೊದಲು ಮಂತ್ರಿ ಪಿ॥ ಮ್ಯಾಥ್ಯು ಪ್ರತ್ಯೇಕವಾಗಿ ಹೇಳಿದ್ದರು. ಪಂಚವಾರ್ಷಿಕ ಯೋಜನೆ ಮತ್ತು ಲೋಕೋಪಯೋಗಿ ಇಲಾಖೆಗಳನ್ನು ಅವರು ನೋಡಿಕೊಳ್ಳುತ್ತಿದ್ದದ್ದು. ಮೆನೋನ್‌ಗೆ ಅದು ಮರೆತುಹೋಗಿತ್ತು. ನಿದ್ದೆ ಓಡಿತು. ಆತ ಅಸಿಸ್ಟೆಂಟ್ ಸೆಕ್ರೆಟರಿಯನ್ನು ಕರೆದರು. ಕ್ಲಾರ್ಕ್ ವಾರಿಯರನ್ನೂ ಕರೆದರು.

ಎಲ್ಲರೂ ಮರೆತುಬಿಟ್ಟಿದ್ದ ಫೈಲ್ ಅದು. ಮೆನ್ಸೋನ್‌ಗೆ ಪ್ರಜ್ಞೆ ತಪ್ಪಿದ ಹಾಗಾಯಿತು. ಆತ ಒಬ್ಬ ರಾಜಪುತ್ರನ ಅಧಿಕಾರದಲ್ಲಿ ಕೇಳಿದರು: "ಫೈಲ್ ಎಲ್ಲಿ?"

ವಾರಿಯರ್ ಫೈಲನ್ನು ಹುಡುಕುವುದಕ್ಕೆ ಹೋದ. ಆ ಹೊತ್ತಿನಲ್ಲಿ ಸುಕೇಶಿನಿಯ ಪ್ರಶ್ನೆಯನ್ನು ಎಲ್ಲರೂ ಮರೆತರು. ಅಸಿಸ್ಟೆಂಟ್ ಸೆಕ್ರೆಟರಿ ಪರ್ಸನಲ್ ರಿಜಿಸ್ಟರನ್ನು ಪರಿಶೀಲಿಸುತ್ತಿದ್ದರು. ಸೂಪರಿಂಟೆಂಡೆಂಟ್‌ಗೆ ಆಲೋಚನೆಯ ನಂತರ ನೆನಪಾಯಿತು. ಆತ ಕುಞ್ಞಿ ಶಂಕರ ಮೆನ್ಸೋನ್ ಹತ್ತಿರ ಸ್ವಲ್ಪ ಭಯದಿಂದ ಹೇಳಿದ: "ಅದನ್ನು ಮನೆಗೆ ಕಳಿಸಿದೆ ಅಂತ ತೋರುತ್ತೆ."

ರಿಜಿಸ್ಟರಿನಲ್ಲೂ ಅದು ಕಾಣುತ್ತಿತ್ತು. ಅಸಿಸ್ಟೆಂಟ್ ಸೆಕ್ರೆಟರಿಯೂ ಅದನ್ನೇ ತಿಳಿಸಿದರು.

ಆಗ ವಾರಿಯರ್‌ಗೆ ಒಂದು ಆಶ್ವಾಸನೆ ಉಂಟಾದದ್ದು. ಮೇನ್ಸೋನ್ ಆದರೂ ಬಿಡಲಿಲ್ಲ. "ಒಳ್ಳೆ ಕರ್ತವ್ಯಪ್ರಜ್ಞೆಯಿದೆ ಎಲ್ಲರಿಗೂ."

ಆದರೆ ಮೆನ್ಸೋನ್‌ಗೆ ಒಂದು ಭಯವಿತ್ತು. ಫೈಲು ಮನೆಯಲ್ಲುಂಟೋ ಎಂದು. ಗುಡ್ಡದ ಹಾಗೆ ಅಲ್ಲಿ ಫೈಲುಗಳು ಬಿದ್ದಿವೆ. ಈ ಫೈಲ್ ಅಲ್ಲಿರುವುದಾಗಿ ತಿಳಿಯುವುದಿಲ್ಲ. ಅಥವಾ ಅಲ್ಲಿಯೇ ಇದ್ದರೂ ನಾಳೆ ಅದನ್ನು ಸಿದ್ಧಪಡಿಸಿ ಕೊಡುವುದಕ್ಕೆ ಸಾಧ್ಯವೇ? ಎನ್ನುವುದು ಸಂಶಯ. ಆ ಪ್ರಾಜೆಕ್ಟನ್ನು ಪಂಚವಾರ್ಷಿಕ ಯೋಜನೆಯೊಳಗೆ ಸೇರಿಸಿದ್ದದ್ದು ಅವರಿಗೆ ಗೊತ್ತಿತ್ತು. ಅದರ ಭೂತಕಾಲದ ಚರಿತ್ರೆಯನ್ನು ಕುರಿತು ಒಂದೂ ತಿಳಿಯದು. ಪಂಚವಾರ್ಷಿಕ ಯೋಜನೆಯಲ್ಲಿ ದೊಡ್ಡ ಮೊತ್ತದ ಹಣವನ್ನು ಇಡಲಾಗಿದೆ. ಏನು ಮಾಡಬೇಕೆಂದು ಈಗ ಏನೂ ಹೊಳೆಯುವುದಿಲ್ಲ. ಹಾಳಾದ್ದು ! ಈ ರಾತ್ರಿ ನಿದ್ದೆ ಮಾಡೋ ಹಾಗಿಲ್ಲ.

ಮೆನ್ಸೋನ್ ಅಸ್ವಸ್ಥರಾಗಿದ್ದರು. ಉದ್ಯೋಗದ ವಿಷಯದಲ್ಲಿ ಯಾವುದೋ ಒಂದು ತೊಂದರೆ ಸಂಭವಿಸಲಿದೆ ಎಂದು ಅವರಿಗೆ ಅನ್ನಿಸಿತು. ಎರಡು ಸಲ ಚೀಫ್ ಸೆಕ್ರೆಟರಿ ಎಚ್ಚರಿಕೆ ಕೊಟ್ಟಿದ್ದರು. ಮೂರನೆಯ ಸಲ ಬರುತ್ತಿದೆ. ಇನ್ನು ಮೇಲೆ ಸಿಕ್ಕುವುದು ಎಚ್ಚರಿಕೆ ಮಾತ್ರವಾಗಿರುತ್ತದೆಯೇ? ಅದು ಇದ್ದ ಭಯ.

ಎರ್ನಾಕುಲದಲ್ಲಿದ್ದಾಗಲೇ ಸುಖವಾಗಿತ್ತು. ಅಲ್ಲಿ ಸರ್ಕಾರದ ಕೆಲಸ ನಿಯಮದಂತೆ ನಡೆಯುತ್ತಿತ್ತು. ಕೆಲಸ ಹೊರೆಯಾಗಿರಲಿಲ್ಲ. ಯಾವುದಾದರೂ ತಪ್ಪುಂಟಾದರೆ ಅದು ಹಾಗೆಯೇ ಮರೆಯಾಗುತ್ತಿತ್ತು. ಅಲ್ಲಿಯ ಸಂವಿಧಾನ ಅದು. ತಂದೆ ಜೀವಂತವಾಗಿದ್ದಾರೆ. ಆದರೆ ಆ ವ್ಯಕ್ತಿಗೆ ಏನನ್ನಾದರೂ ಮಾಡುವುದು ಸಾಧ್ಯವೆ? ಅಲ್ಲಿ ಆ ತಂದೆಯ ಮಗನೆಂದು ಎಲ್ಲರಿಗೂ ಗೊತ್ತಿತ್ತು. ಇಲ್ಲಿ ತನ್ನ ಪರ ವಹಿಸಿಕೊಳ್ಳುವುದಕ್ಕೆ ಯಾರಿದ್ದಾರೆ?

ಚೀಫ್ ಸೆಕ್ರೆಟರಿ ಟೆಲಿಫೋನಿನಲ್ಲಿ ಕರೆಯುತ್ತಾರೆ ಎನ್ನುವ ಭಯ. ಯಾವ ನಿಮಿಷದಲ್ಲಿ ಬೇಕಾದರೂ ಅದು ಸಂಭವಿಸಬಹುದು. ಕೇಳಿದರೆ ಏನು ಹೇಳುವುದು?

ಸೆಕ್ಷನ್ನಿನಲ್ಲಿ ಸುಕೇಶಿನಿಯ ಪ್ರಶ್ನೆ ಹಾಗೆಯೇ ತಣ್ಣಗಾಯಿತು. ಸೂಪರಿಂಟೆಂಡೆಂಟ್

ಪದ್ಮನಾಭ ಆ ಕೆಲಸ ಅಲ್ಲಿಗೆ ನಿಲ್ಲಿಸಿ ಸರ್ಕಾರದ ಕೆಲಸ ಮಾಡುವಂತೆ ಆಜ್ಞಾಪಿಸಿದ. ಸುಕೇಶಿನಿ ಟೈಪು ಮಾಡುವುದಕ್ಕೆ ತೊಡಗಿದಳು. ಕುಞ್ಞಿಪ್ಪಾಲು ಆಗಲೂ ಗೊಣಗುತ್ತಿದ್ದ. ಪೊದುವಾಳ್ ಅಸೋಸಿಯೇಶನ್ ಕುರಿತು ಆಲೋಚಿಸುತ್ತಿದ್ದ. ವಾರ್ಯರ್ ಭರವಸೆಯಿಂದಿದ್ದನಾದರೂ ರಿಜಿಸ್ಟರ್ ನೋಡಿ ಸ್ಟಡಿ ಮಾಡುತ್ತಿದ್ದ. ಆತನ ಭಯ ಇದೇ, ಆದರೂ ಒಂದು ಸಮಾಧಾನವಾದ ಕಾರಣವನ್ನು ಬರೆಯಬೇಕಾಗುತ್ತದೆ ಎಂದು.

ಮೆನನ್ ಅಸಿಸ್ಟೆಂಟ್ ಸೆಕ್ರೆಟರಿಯನ್ನು ಕರೆದರು. ತಿರುವಾಂಕೂರು ಸರ್ವೀಸಿನಲ್ಲೇ ಇದ್ದು ಪ್ರೊಮೋಷನ್ ಸಿಕ್ಕಿ ಅಸಿಸ್ಟೆಂಟ್ ಸೆಕ್ರೆಟರಿ ಆದ ಮನುಷ್ಯ ಮಿಸ್ಟರ್-ರಾಮಕೃಷ್ಣನ್ ನಾಯರ್. ತಿರುವಾಂಕೂರು ವಿಷಯ ನಂಬುವುದಕ್ಕೆ ಸಾಧ್ಯವಿಲ್ಲ ಎಂದು ಮೆನನ್ನನ ಅಭಿಪ್ರಾಯ. ಆದರೂ ಉಪದೇಶವನ್ನು ಕೇಳಬೇಕೆಂದೇ ತೀರ್ಮಾನಿಸಿದ.

"ಕೇಳಿದಿರಾ ನಾಯರೇ, ನಮಗೆ ಈ ಪ್ರಾಜೆಕ್ಟಿಗೆ ಸಂಬಂಧಿಸಿದ ಹಾಗೆ ಏನೂ ಗೊತ್ತಿಲ್ಲ. ಅದೇನು ಅದರ ಕಥೆ?"

ರಾಮಕೃಷ್ಣನ್ ನಾಯರ್ ದೀರ್ಘವಾದ ಕಥೆ ವಿವರಿಸಿದರು. ಆಸಕ್ತಿಯಿಂದ ಮೆನನ್ ಅದನ್ನು ಕೇಳಿಸಿಕೊಂಡಿದ್ದರು. ಆತನಿಗೆ ಒಂದು ಭರವಸೆಯುಂಟಾಯಿತು. ಹಾಗಾದರೆ ಆ ಹಳೆಯ ಫೈಲ್ ನೋಡೋದು ಬೇಡ.

"ಅದು ಲೋಕೋಪಯೋಗಿ ಶಾಖೆಯಲ್ಲಿ."

"ಹೌದು ಹೌದು. ನಂಬಿಕೆ ಬಂತು."

ಅಷ್ಟೊಂದು ನಂಬಬೇಡಿ ಎನ್ನುವ ರೀತಿಯಲ್ಲಿ ರಾಮಕೃಷ್ಣನ್ ನಾಯರ್ ಹೇಳಿದರು: "ಈಗ ಬೇಡ ಅಷ್ಟೆ. ಫೈನಾನ್ಸ್ ಡಿಪಾರ್ಟ್‌ಮೆಂಟಿನವರು ನಮಗೆ ಆ ಫೈಲ್ ಇಟ್ಟುಕೊಂಡು ತೊಂದರೆ ಮಾಡ್ತಾರೆ."

"ಅವರಿಗೇನು ಕೆಲಸ? ಇಲ್ಲದಿದ್ದರೆ ಅದು ಆಗ ಅಲ್ಲವಾ?"

ಒಂದು ಕ್ಷಣ ಬಿಟ್ಟು ಮೆನೋನ್ ಹೇಳಿದರು: "ಹ್ಹಾಗಾದರೆ ನಾಳೆ ಆ ಫೈಲ್ ಪಿ. ಡಬ್ಲ್ಯು. ಡಿ. ವಿಭಾಗಕ್ಕೆ ಕಳಿಸಬೇಕು ಅಲ್ಲವೆ?"

"ಹೌದು."

ಸ್ವಲ್ಪ ಹೊತ್ತು ಆಲೋಚಿಸಿ ಮೆನೋನ್ ಹೇಳಿದರು:

"ಗುಟ್ಟು! ಅವರಿಗೆ ಈಗ ಏನು ಮಾಡಬೇಕಾದದ್ದು ಅಂತ ತಿಳಿಯೋಣ. ಅದಕ್ಕೆ ದಾರಿಯಿದೆಯಾ?"

ರಾಮಕೃಷ್ಣನ್ ನಾಯರ್ ಹೇಳಿದರು. "ಆ ಕೆಲಸಕ್ಕೆ ಒಪ್ಪಿಗೆ ಕೊಡೋದಕ್ಕಿರಬಹುದು."

ಕುಞ್ಞಿಶಂಕರ ಮೆನೋನ್‌ಗೆ ಅಷ್ಟೊಂದು ವಿಶ್ವಾಸವಿಲ್ಲ. ಆತ ನಿಷೇಧಾರ್ಥದಲ್ಲಿ ತಲೆ ಅಲ್ಲಾಡಿಸಿದರು.

"ಛೇ! ಛೇ! ದೊಡ್ಡ ಹಣದ ಖರ್ಚು. ಮೊದಲು ನಾವು ಕಳಿಸಿದ ಮೈನರ್

ಇರಿಗೇಶನ್ ಸ್ಕೀಮ್‌ಗಳೂ ಆಗಿಲ್ಲ. ಈಗ ಇದು! ಅದೊಂದೂ ಅಲ್ಲ. ಬೇರೆ ಏನೋ ಇದೆ."

ಮೆನೋನ್ ಹೇಳಿದರು:

"ಏನಾದರೂ ಆಗಲಿ—ನಿದ್ದೆ ಮಾಡಬಾರದು ಅಂತ ತಾನೆ? ನಾಳೆ ನಾವು ಫೈಲ್ ಕಳಿಸೋಣ."

ರಾಮಕೃಷ್ಣನ್ ನಾಯರ್ ನೇರವಾಗಿ ಪಿ. ಡಬ್ಲ್ಯು. ಡಿ. ವಿಭಾಗಕ್ಕೆ ಹೋದದ್ದು. ಆ ವಿಭಾಗದ ಅಸಿಸ್ಟೆಂಟ್ ಸೆಕ್ರೆಟರಿ ಮಿ|| ಸುಗದನ್. ಕುಞ್ಞಿಶಂಕರ ಮೆನೋನ್ ಕೆಲವು ನಿಶ್ಚಯಗಳನ್ನೆಲ್ಲ ಮಾಡಿದರು. ಖಂಡಿತವಾಗಿಯೂ ಅಂದಂದಿನ ಫೈಲುಗಳನ್ನು ಮುಗಿಸಿಯೇ ತೀರಬೇಕು. ಆ ಹಳೆಯ ಸ್ವಭಾವವನ್ನು ಬದಲಾಯಿಸದೇ ಇದ್ದರೆ ಉದ್ಯೋಗಕ್ಕೆ ತೊಂದರೆ ಬರುತ್ತೆ. ಸಮಯಕ್ಕಿರುವ ಒಂದು ದಿನವನ್ನೇ ಆತ ಮನಸ್ಸಿನಲ್ಲಿ ಆಲೋಚಿಸಿದರು. ನಾಳೆಯಿಂದ ಖಂಡಿತವಾಗಿ ಅದನ್ನು ನಡೆಸಬೇಕು. ಹೆಚ್ಚು ತಡ ಮಾಡದೆ ರಾಮಕೃಷ್ಣನ್ ನಾಯರ್ ಹಿಂದಿರುಗಿ ಬಂದರು. ಪಿ. ಡಬ್ಲ್ಯು. ಡಿ.ಯಿಂದ ಕೆಲವು ವಿವರಗಳನ್ನು ಸಂಗ್ರಹಿಸಿ ಆತ ಬಂದದ್ದು. ಮೆನೋನನ್ನು ಕಂಡು ಆತ ವಿವರವನ್ನು ತಿಳಿಸಿದ. ಫೈಲ್ ಇಡೀ ನೋಡಿ ಸರಿ ಮಾಡಬೇಕಾಗಿಲ್ಲವೆಂದು ತೋರಿತು. ಅದೊಂದು ಒಳ್ಳೆಯ ಸಂದರ್ಭವಾಗಿತ್ತು. ಮೆನನ್‌ಗೆ ಹೆಚ್ಚು ವಿಷಯ ತಿಳಿಯಲು ಆಸಕ್ತಿಯುಂಟಾಯಿತು. ಅಸಿಸ್ಟೆಂಟ್ ಸೆಕ್ರೆಟರಿ ಹೇಳಿದರು:

"ಇಲ್ಲಿಂದ ನಾವು ಕಳಿಸಿರುವ ಯೋಜನೆಯ ಫೈಲುಗಳಲ್ಲಿ ಕೆಲವನ್ನೆಲ್ಲ ಹಾಗೇ ಇಟ್ಟು ಪ್ರಾಜೆಕ್ಟಿನ ಮೊದಲ ಘಟ್ಟವನ್ನು ಪ್ರಾರಂಭಿಸಬೇಕು ಎನ್ನುವುದು ಉದ್ದೇಶ."

ಮೆನೋನ್‌ಗೆ ವಿಷಯ ಸರಿಯಾಗಿ ತಿಳಿಯಲಿಲ್ಲ. ಅಸಿಸ್ಟೆಂಟ್ ಸೆಕ್ರೆಟರಿ ಅದನ್ನು ವಿವರಿಸಿದರು.

"ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್‌ನ ಮೊದಲ ಘಟ್ಟದಲ್ಲಿ ಹೊಸ ಸ್ಥಳಕ್ಕೆ ಬದಲಾಯಿಸುವುದು. ತತ್ಕಾಲದಲ್ಲಿ ಅದು ಪ್ರಾರಂಭವಾಗುತ್ತದೆ."

ಮೆನೋನ್ ಆ ವಿಷಯದ ಬಗ್ಗೆ ತಮಗಿದ್ದ ಅಜ್ಞಾತೆಯನ್ನು ತಿಳಿಸಿದರ.

"ಏನೋ ನಾನು ಆ ಫೈಲ್ ನೋಡಿಲ್ಲ."

"ನಾನು ಎಲ್ಲ ನೋಡಿ ನೋಟೀಸ್ ಕಳಿಸಿದ್ದೇನೆ."

ಸಲ್ಲಿಸುವುದಕ್ಕೆ ತೀರ್ಮಾನಿಸಿದ ಕೆಲಸಗಳು ಯಾವುವು ಎಂದು ಮೆನೋನ್ ಕೇಳಿದರು.

ಆಹಾರೋತ್ಪನ್ನಗಳಿಗೆ ಸಂಬಂಧಪಟ್ಟ ಕೆಲವು ವಿಷಯಗಳೆಂದು ರಾಮಕೃಷ್ಣನ್ ನಾಯರ್ ಹೇಳಿದರು. ಹೈಡ್ರೋ ಎಲೆಕ್ಟ್ರಿಕ್ ಸಂಬಂಧಿಸಿದಂತೆ ಕೆಲವು ಅಭಿಪ್ರಾಯಗಳು ರಾಮಕೃಷ್ಣನ್ ನಾಯರ್‌ಗಿದೆ. ಆತ ಅದನ್ನು ತನ್ನ ಸೆಕ್ರೆಟರಿಗೆ ತಿಳಿಸಿದರು. ಹೊಸ ಸ್ಥಳದಲ್ಲಿ ಆ ಕೆಲಸ ನಡೆಯುವುದು. ಅದಕ್ಕೆ ಸಮೀಪದಲ್ಲಿ ಈಟ್ಟಿಕ್ಕಾಡು ಪರ್ವತ.

ಆ ಪರ್ವತದಲ್ಲಿ ಒಂದು ರೋಡು ಮಾಡಬೇಕು. ಕಾಂಗ್ರೆಸ್ ಚಳುವಳಿಯ ಕಾಲದಲ್ಲಿ ಯಾತನೆಯನ್ನನುಭವಿಸಿದವರಿಗೆ ಆ ಪರ್ವತವನ್ನು ತಲಾ ಐದು ಎಕರೆಯಂತೆ ಹಂಚಿ ಕೊಡುವುದಕ್ಕಾಗಿ ನಿಶ್ಚಯಿಸಲಾಗಿದೆ. ಆದುದರಿಂದ ಪ್ರಾಜೆಕ್ಟಿನ ಮೊದಲ ಹಂತದ ಕೆಲಸ ನಡೆಯಲಿ ಎಂದು ನಿಶ್ಚಯಿಸಿದ್ದು.

ಕೇಳಿಸಿಕೊಂಡಿದ್ದ ಮೆನೋನ್ ತನಗರಿವಿಲ್ಲದಂತೆ ಹೇಳಿದರು:

"ಅಯ್ಯೋ ! ಅದೊಂದು ವಂಚನೆ ಹಾಗೆ ಕಾಣುತ್ತಲ್ಲ ನಾಯರೇ?"

ರಾಮಕೃಷ್ಣನ್ ನಾಯರ್ ಒಮ್ಮೆ ನಕ್ಕದ್ದು ಅಷ್ಟೆ. ಅದು ಹಾಗೇ ಎಂತಲೋ, ಅಲ್ಲ ಎಂತಲೋ ರಾಮಕೃಷ್ಣನ್ ನಾಯರ್ ಹೇಳಲಿಲ್ಲ.

ಮೆನನ್ ಮನಸ್ಸಿಗೆ ಅನ್ನಿಸಿದ್ದನ್ನು ತೆರೆದು ಹೇಳುವ ಸ್ವಭಾವದವರು. ಕಾಂಗ್ರೆಸ್ ನವರಿಗೆ ಒಂದು ಪರ್ವತವನ್ನು ಹಂಚಿಕೊಡಲು ನಿಶ್ಚೈಸಲಾಗಿದೆ ಎಂದು ಕೇಳಿದಾಗ ಒಂದು ಆಕ್ರೋಶವುಂಟಾಗಿತ್ತು. ಕೂಡಲೇ ಉಂಟಾದ ಪ್ರತ್ಯಾಘಾತ ಅದು ಹೀಗೆ ಹೊರಗೆ ಬಂದಿತು:

"ಊಂಡೀ ಹೊಡೆದು ಬಡಿದು ಸಾಯಿಸಲ್ಪಟ್ಟವರಿಗೆ ಅದನ್ನು ಕೊಡ್ತಾರಾ? ಏನು ಕಥೆ? ಅವರಿಗೆ ಯೋಜನೆಯ ಹೆಸರಿನಲ್ಲಿ ರೋಡನ್ನು ಮಾಡಿಸಿಕೊಡಬೇಕಾ? ಒಳ್ಳೆಯದಾಯ್ತು."

ರಾಮಕೃಷ್ಣನ್ ನಾಯರ್ ನಯವಾಗಿ ಹೇಳಿದರು:

"ಥಟ್ಟನೆ ಅದೆಲ್ಲ ನಡೆಯದೇ ಇರೋದಕ್ಕೆ ಅವಕಾಶ ಇದೆ."

ಮೆನೋನ್ ಕುತೂಹಲಿಯಾದರು.

"ಏನು ಅದು?"

"ನಿಲ್ಲಿಸಿದ ಕೆಲಸಗಳನ್ನು ಪ್ರಾರಂಭಿಸಬೇಕೆಂದೂ, ಕೃಷಿ ವಿಕಸನವನ್ನೂ ಅದು ಬಾಧಿಸುವುದೆಂದೂ ಹೇಳುವುದಕ್ಕೆ ನಮಗೆ ಹಕ್ಕಿದೆ."

ಮೆನೋನ್ ಹೇಳಿದರು:

"ಕ್ಯಾಬಿನೆಟ್ ಅದನ್ನು ನಿಷೇಧಿಸಲು ನಿಶ್ಚಯಿಸಿದರೊ?"

ರಾಮಕೃಷ್ಣನ್ ನಾಯರ್‌ಗೆ ಬೇರೆಯೂ ಕೆಲಸಗಳಿವೆ. ಬೇಕಾಗಿ ಬಂದರೆ ಫೈನಾನ್ಸ್ ಡಿಪಾರ್ಟ್‌ಮೆಂಟ್ ಮೂಲಕ ತಡೆಗಟ್ಟಬಹುದು. ಮೆನೋನ್ ಸ್ವಲ್ಪ ಹೊತ್ತು ಆಲೋಚಿಸಿದರು. ಆತನ ಮನಸ್ಸು ಬದಲಾಯಿಸಿದಂತೆ ತೋರಿತು.

"ಅವರು ಮಾಡಿಕೊಳ್ಳಲಿ. ನಾವು ಯಾಕೆ ಮಾತಾಡಬೇಕು?"

ಕಾರ್ಯಕ್ರಮ ಸರಿಯಾಗಿ ಗೊತ್ತಿದ್ದ ರಾಮಕೃಷ್ಣನ್ ನಾಯರ್ ಹೇಳಿದರು: "ಅದಕ್ಕೆ ಅವರಿಗೆ ದಾರಿ ತೋರಿಸಿಕೊಡಬೇಕು. ಆಗ ಅದು ಸುಲಭ."

ಮೆನೋನರ ಮನಸ್ಸು ಬದಲಾಯಿತು.

"ಹಾಳಾಗಲಿ ನಾಯರೇ. ಹಾಳಾಗಲಿ. ನಾವು ಯಾಕೆ ಹುಲಿಬಾಲ ಹಿಡಿಯಬೇಕು?

ಏನು ಬೇಕಾದರೂ ನಡೆಯಲಿ." ರಾಮಕೃಷ್ಣನ್ ನಾಯರ್‌ಗೆ ಸ್ವಲ್ಪ ಬೇಸರವಾಯಿತು. ಆತ ಒಂದು ಹುಸಿ ನಗು ನಕ್ಕರು. ತನ್ನ ಸೆಕ್ರೆಟರಿ ಗುಟ್ಟು ಬಿಟ್ಟುಕೊಡದೆ ತಪ್ಪಿಸಿಕೊಳ್ಳುತ್ತಿದ್ದಾನೆ. ಒಂದು ತೊಂದರೆಯಲ್ಲಿ ಸಿಕ್ಕಿಹಾಕಿಕೊಂಡಂತೆ ಆತನಿಗೆ ತೋರಿತು. ಕೆಲವುಸಲ ಉಳಿದ ಸೆಕ್ರೆಟರಿಗಳ ಜೊತೆಯಲ್ಲಿ ಸಂಗತಿವಶಾತ್ ತನ್ನ ಅಸಿಸ್ಟೆಂಟ್ ಸೆಕ್ರೆಟರಿ ಈಟ್ಟಿ ಕಾಡು ಪರ್ವತದ ರೋಡು ಮಾಡಿಸುವುದನ್ನು ತಡೆಯುವುದಕ್ಕೆ ಹೇಳಿಕೊಟ್ಟ ಹಾಗೂ ಆಗಬಹುದು. ಹಾಗಿದ್ದರೆ ಅದು ತೋದರೆ. ಈ ಮಾರ್ಗದಲ್ಲಿ ಹೇಗಾದರೂ ಅದನ್ನು ಮಾಡಿಸಿಯೇ ತೀರಬೇಕು ಎಂದು ರಾಮಕೃಷ್ಣನ್ ನಾಯರ್‌ಗೆ ಅನ್ನಿಸಿದ್ದು. ಅವರಿಗೆ ಒಂದು ಹೊಸ ವಿಷಯವನ್ನು ಹೇಳುವುದಿತ್ತು.

ಮೆನೋನ್ ಕೇಳಿದರು: "ಏನು ಅದ ?"

"ಈ ಪ್ರಾಜೆಕ್ಟ್ ಬಹಳ ಕಾಲದ ವರೆಗೆ ಕೆಲಸ ಮಾಡದೇ ಹೋಗಬಹುದು."

ಅದೇತಕ್ಕೆ ಎಂದು ಕೇಳುವವನಂತೆ ಮೆನೋನ್ ರಾಮಕೃಷ್ಣನ್ ನಾಯರನ್ನು ನೋಡಿದರು.

ರಾಮಕೃಷ್ಣನ್ ನಾಯರ್ ಹೇಳಿದರು:

"ತುಂಬ ಮರ ಇರುವ ಕಾಡು ಅದು. ಆ ಮರ ಕತ್ತರಿಸಿ ನದಿ ಮೂಲಕ ತೆಗೆದು ಕೊಂಡು ಬರೋದಕ್ಕಾಗುತ್ತಾ? ಮರ ಕತ್ತರಿಸುವುದಕ್ಕೆ ತೊಡಗಿದರೆ ಅದು ಮುಗಿಯುವ ಮೊದಲು ಪ್ರಾಜೆಕ್ಟ್ ನಿರ್ಮಿಸುವುದಕ್ಕಾಗುವುದಿಲ್ಲ. ಮರದ ಕಂಟ್ರಾಕ್ಟ್ ದೊಡ್ಡ ಕಾಂಗ್ರೆಸ್ ಮುಂದಾಳುಗಳಿಗಿರಬಹುದು. ಕೆಲಸ ನಡೆಯದೇನೂ ಹೋಗಬಹುದು."

ಅದೊಂದು ಬೇಸರದ ಕೆಲಸವೆನ್ನುವಂತೆ ಮೆನನ್ ಹೇಳಿದರು: "ನಡೆಯದೆ ಇದ್ದರೆ ಹೋಗಲಿ. ಏನು ನಷ್ಟ? ಎಷ್ಟು ಕಾಲದಿಂದ ನಡೆಯದೆ ಹಾಗೇ ಬಿದ್ದಿದೆ? ಇನ್ನೂ ಒಂದು ನೂರು ವರ್ಷ ನಡೆಯೋದು ಬೇಡ."

ರಾಮಕೃಷ್ಣನ್ ನಾಯರ್‌ಗೆ ಹೇಳುವುದಕ್ಕೇನೂ ಇರಲಿಲ್ಲ.

ಮೆನೋನ್ ಕೇಳಿದರು: "ಯಾಕೆ ನಾಯರ್ ಒಂದು ಥರಾ ಬೇಸರದಲ್ಲಿದ್ದೀರಲ್ಲ? ಮನೆ ತಾಪತ್ರಯನಾ? ಅನ್ನದ ತಲೆ ಮೇಲೆ ಕಲ್ಲು ಬೀಳಬಾರದು. ಅಷ್ಟು ನೋಡಿ. ಸಾಕು."

ಆಫೀಸಿನಿಂದ ರಾಮಕೃಷ್ಣನ್ ನಾಯರ್ ಹೊರಗೆ ಬಂದದ್ದು ದೊಡ್ಡ ಅನರ್ಥ ವುಂಟಾಯಿತು ಎನ್ನುವ ರೀತಿಯಲ್ಲಿ.

ಹಾಗೆ ತೆರೆದು ಹೇಳಬಾರದಾಗಿತ್ತು. ಸೆಕ್ರೆಟರಿ ತಪ್ಪು ತಿಳಿದುಕೊಳ್ಳುವಂತೆ ಮಾಡಿದ್ದಾಯಿತು. ಹೇಳುತ್ತ ಹೇಳುತ್ತ ಹೇಳಬಾರದ್ದನ್ನೆಲ್ಲ ಹೇಳಿದ್ದಾಯಿತು. ಮತ್ತೊಂದು ರೀತಿ ಆಲೋಚಿಸಿ ನೋಡಿದರೆ ಹೇಳದೇ ಇರುವಂಥಾದ್ದೇ ಅದು?

ಈ ದುರ್ನೀತಿ ಪ್ರಾರಂಭವಾಗುವುದನ್ನು ಒಪ್ಪಿಕೊಳ್ಳುವುದು ಸರಿಯೇ? ಒಬ್ಬ ಉದ್ಯೋಗಸ್ಥನೆನ್ನುವ ದೃಷ್ಟಿಯಲ್ಲಿ ದೇಶದಲ್ಲೂ ಜನರಿಗೆ ಸಂಬಂಧಪಟ್ಟ ಜವಾಬ್ದಾರಿ

ಯಿಲ್ಲವೆ? ಆದರೆ ಈ ಸಂವಿಧಾನದಲ್ಲಿ ಆ ಜವಾಬ್ದಾರಿಯನ್ನು ಕುರಿತಾದ ತಿಳುವಳಿಕೆಯೂ ಅಪಾಯ. ಅದರಿಂದಾಗಿ ಅನೇಕ ಕಷ್ಟಗಳುಂಟಾಗುತ್ತವೆ. ಇನ್ನು ಮೇಲೆ ಈ ಸೆಕ್ರೆಟರಿ ಜೊತೆಯಲ್ಲಿ ವ್ಯವಹರಿಸುವಾಗ ಎಚ್ಚರಿಕೆಯಿಂದಿರಬೇಕೆಂದು ರಾಮಕೃಷ್ಣನ್ ನಾಯರ್ ನಿಶ್ಚಯಿಸಿದರು.

ಆಫೀಸಿನಿಂದ ಹೊರಗೆ ಬಂದ ಮೇಲೆ ಕುಞ್ಞಿಶಂಕರ ಮೆನೋನ್ ಎಷ್ಟೋ ದೂರ ನಡೆಯುತ್ತಿದ್ದರು. ಅದು ಅವರ ಪದ್ಧತಿ. ಆ ದಿನವೂ ಹಾಗೆ ನಡೆದರು. ರಾತ್ರಿ ಇಡೀ ನಿದ್ದೆ ಇಲ್ಲದೆ ಕೆಲಸ ಮಾಡಬೇಕಾಗಿತ್ತು. ಹಾಳಾದ್ದು! ಅದು ಅಂದು ಉದ್ಭವಿಸಿದ ತೊಂದರೆ. ಒಂದು ಕ್ಷಣ ಮೆನೋನ್ ರಾಮಕೃಷ್ಣನ್ ನಾಯರ್ ಜೊತೆಯಲ್ಲಿ ಮಾತನಾಡಿದ್ದನ್ನು ನೆನಸಿಕೊಂಡರು. ಬೇಕಾಗಿದ್ದರೆ ಅಡಚಣೆ ಮಾಡುವುದಾಗಿ ರಾಮಕೃಷ್ಣನ್ ನಾಯರ್ ಹೇಳಿದರು. ಅದಕ್ಕೆ ಬೇಕಾದ ಮಾರ್ಗವನ್ನು ಸೂಚಿಸಿದ್ದೂ ಆಯಿತು. ಹಾಗೇತಕ್ಕೆ ರಾಮಕೃಷ್ಣನ್ ನಾಯರ್ ಹೇಳಿದ್ದು? ಅಡಚಣೆಯುಂಟುಮಾಡಬೇಕೆನ್ನುವ ಉದ್ದೇಶ ರಾಮಕೃಷ್ಣನ್ ನಾಯರ್‌ಗೆ ಉಂಟಾಗುವುದಕ್ಕೆ ಕಾರಣವೇನು?............ ಆತ ತಿರುವಾಂಕೂರಿನವನು. ಹಾಗೆ ಆತನನ್ನು ನಂಬಬಹುದೆ? ತನ್ನನ್ನು ತೊಂದರೆಗೊಳಗು ಮಾಡುವುದಕ್ಕಲ್ಲ ಅದು ಎಂದು ಹೇಗೆ ನಂಬುವುದು? ಆ ರೀತಿಯಲ್ಲಿ ಮೆನೋನ್ ಆಲೋಚಿಸಿದ್ದು. ತಿರುವಾಂಕೂರ್ ನೌಕರರು ವಂಚಕರು. ಅವರ ಉದ್ದೇಶಗಳನ್ನು ಕಂಡುಹಿಡಿಯುವುದಕ್ಕೆ ಸಾಧ್ಯವಿಲ್ಲ. ಅದು ಬಹುಶಃ ಉದ್ದವಾದ ಹಗ್ಗವಾಗಿರಬೇಕು.

ಒಂದು ಕಾಲದಲ್ಲೂ ಮೆನೋನ್‌ಗೆ ಈ ಕಾಂಗ್ರೆಸ್ಸನ್ನು ಕಂಡರೆ ಆಗುತ್ತಿರಲಿಲ್ಲ. ಅವರ ಕಾರಣದಿಂದಲೇ ಕೊಚ್ಚಿ ರಾಜವಂಶದಿಂದ ರಾಜ್ಯ ಕೈಬಿಟ್ಟುಹೋದದ್ದು. ಆತನ ತಂದೆಗೆ ಎರಡು ವರ್ಷವಾದರೂ ರಾಜ್ಯವಾಳುವುದಕ್ಕೆ ಅವಕಾಶ ದೊರೆಯುವುದೆಂದು ತಾಯಿ ಯಾವಾಗಲೂ ಹೇಳುತ್ತಿದ್ದರು. ಆತ ಆ ಕಾಲದ ಸ್ವಪ್ನವನ್ನೂ ಕಂಡಿದ್ದರು. ಕಾಂಗ್ರೆಸ್ಸಿನ ಕಾರ್ಯಕ್ರಮಗಳಿಗೆ ಅಡಚಣೆಯುಂಟುಮಾಡುವುದು ನಿಜವಾಗಿಯೂ ಆ ಮನುಷ್ಯನಿಗೆ ಇಷ್ಟವಾದ ಕೆಲಸವೇ. ಅಂತೂ ಅವರ ಕೈಯಲ್ಲಿ ಅಧಿಕಾರವಿದ್ದಷ್ಟು. ಅವರನ್ನು ಬೇಸರಪಡಿಸದಿರುವುದಲ್ಲವೇ ಒಳ್ಳೆಯದು?

ಮೆನೋನ್ ಮನೆಗೆ ಬಂದಾಗ ಮಕ್ಕಳು ತಾಳ್ಮೆಗೆಟ್ಟು ಅವರನ್ನು ಕಾಯುತ್ತಿದ್ದರು. ಮಗಳು ಹೇಳಿದಳು:

"ಈ ತಂದೆಗೆ ನೆನಪೇ ಇಲ್ಲ.

"ಏನು?"

"ಸಿನಿಮಕ್ಕೆ ಹೋಗೋದಕ್ಕೆ ಬೇಗನೆ ಬರ್‍ತೀನಿ ಅಂತ ಅಲ್ಲವಾ ನೀವು ಹೇಳಿದ್ದು?"

"ಸಿನಿಮ—ಸಿನಿಮ, ಇವತ್ತು ಆಗೋದಿಲ್ಲ. ಈವತ್ತು ನನಗೆ ಕೆಲಸ ಇದೆ. ಉದ್ಯೋಗ ಹೋಗೋ ಸಮಾಚಾರ."

ಪಾರುಕುಟ್ಟಿ ಅಮ್ಮ ಬಾಗಿಲಿನ ಹತ್ತಿರ ಬಂದಳು. ಅವಳು ಹೇಳಿದಳು:

"ನೋಡಿ ಮಕ್ಕಳೇ, ಯಾವಾಗಲೂ ತಂದೆ ಮನೆಗೆ ಬರುವಾಗ ಕೆಲಸ ಹೋಗುತ್ತೆ ಕೆಲಸ ಹೋಗುತ್ತೆ ಅಂತಲೇ ಇರ್ತಾರೆ?"

ಮೆನೋನ್ ತುಸು ಗಂಭೀರವಾಗಿ ಹೇಳಿದರು:

"ನೋಡೆ ಪಾರೂ—ಇವತ್ತು ಹಾಗಲ್ಲ. ಕೆಲಸ ಹೋಯ್ತು ಅಂತಲೇ ಇಟ್ಟುಕೊ. ಕೆಲಸ ಹೋಯ್ತು. ಈಗ ಆಶ್ರಯಿಸೋದಕ್ಕೆ ದೇಶಮಂಗಲದ ನಂಬೂದಿರಿ—ನಿನ್ನ ತಂದೆ —ಇಲ್ಲ."

"ಯಾಕೆ ನನ್ನ ತಂದೆಯ ವಿಷಯ ಮಾತಾಡ್ತೀರಿ?"

"ಅದು ಹಾಗೇನೇ. ಈವತ್ತು ಫೈಲುಗಳನ್ನು ನೋಡಬೇಕು. ಅಷ್ಟು ಪ್ರಧಾನವಾದ ಕೆಲಸ."

ಮೆನೋನ್ ವಿಷಯವನ್ನೆಲ್ಲ ವಿವರಿಸಿದರು. ಆಗ ಪಾರುಕುಟ್ಟಿ ಅಮ್ಮನಿಗೆ ಬೇರೆ ಒಂದು ಸಂಗತಿ ಹೇಳುವುದಿತ್ತು.

"ಈಗ ಆ ಪೊದುವಾಳ್, ವಾರಿಯರ್, ಕುಞ್ಞಿಪ್ಪಾಲು ಎಲ್ಲರೂ ಬಂದಿದ್ದರು. ಸೆಕ್ಷನ್‌ನಲ್ಲಿ ಒಬ್ಬಳು ಟೈಪಿಸ್ಟ್ ಇಲ್ಲವಾ? ಅವಳ ಹೆಸರೇನು? ಸುಕೇಶಿನಿ. ಅವಳನ್ನ ತಿರುವನಂತಪುರದ ಒಬ್ಬಳು ಲೇಡಿ ಕ್ಲಾರ್ಕ್ ಹೊಡೆದಳಂತೆ!"

ಮೆನೋನ್ ಸ್ವಲ್ಪ ಆಶ್ಚರ್ಯದಿಂದ ಕೇಳಿದರು:

"ಯಾವಾಗ? ಎಲ್ಲಿ?"

"ಮಧ್ಯಾಹ್ನ ಗೇಟಿನ ಹತ್ತಿರ."

"ಅವರು ನನಗೆ ತಿಳಿಸಲಿಲ್ಲವಲ್ಲ?"

"ಆಗ ತೂಕಡಿಕೆ ಬಂದಿತ್ತು."

"ವಿಷಯ ಏನು?"

"ಏನೋ ಪ್ರೇಮವಂತೆ!"

ಸ್ವಲ್ಪ ಹೊತ್ತು ಕುಞ್ಞಿಶಂಕರ ಮೆನೋನ್ ಆಲೋಚಿಸುತ್ತಿದ್ದರು. ಆ ಮೇಲೆ ಗಂಭೀರವಾಗಿ ಹೇಳಿದರು: "ಅದೆಲ್ಲ ನಡೆಯುತ್ತೆ. ನಡೆಯದೇ ಇರೋದಕ್ಕೆ ಸಾಧ್ಯವಿಲ್ಲ. ಈ ತಿರುವನಂತಪುರಕ್ಕೆ ಬಂದ ಕೊಚ್ಚಿಯ ಗಂಡಸು ಹೆಂಗಸಾಗ್ತಾನೆ. ಏಟು ತಿನ್ತಾನೆ. ಸಂಶಯವಿಲ್ಲ. ಕೊಚ್ಚಿಯವರನ್ನು ರಾಜ ವಂಚಿಸಿದ. ಈ ಕಾಂಗ್ರೆಸ್‌ನವರು ಹಾಗೆ ಮಾಡಿದರು. ಇದು ಪ್ರಾರಂಭ ಅಷ್ಟೆ. ಇನ್ನು ಮೇಲೆ ಎಲ್ಲರಿಗೂ ಕೆಲಸದಲ್ಲಿ ತೊಂದರೆ ಬರುತ್ತೆ."

ಪಾರುಕುಟ್ಟಿ ಅಮ್ಮ ಕೇಳಿದಳು:

"ಅದ್ಯಾಕೆ?"

"ಅದು ಹಾಗೇನೆ! ಈಗ ನೋಡು. ನನ್ನನ್ನು ಅಸಿಸ್ಟೆಂಟ್ ಸೆಕ್ರೆಟರಿ ತೊಂದರೆ

ಗೊಳಗು ಮಾಡೋದಕ್ಕೆ ನೋಡ್ತಿದ್ದಾನೆ. ಅವನು ಸಮರ್ಥ. ಎಲ್ಲವೂ ನಿಜ. ಎಂಥಾ ತಂತ್ರ ಅವನದು! ಶಿವಶಿವ! ಯಾವುದೋ ಒಡಗು ದಿಕ್ಕಿನ ದೇವರು ನೇರವಾದ ಮಾರ್ಗ ತೋರಿಸಿದ. ಆಗಲಿ ಆಗಲಿ! ಮೊದಲು ಬೇಗ ಸ್ನಾನ ಊಟ ಆಗಲಿ. ಇಲ್ಲಿ ನೋಡೇ ಪಾರುಕುಟ್ಟಿ, ಇವತ್ತು ನಿದ್ದೆ ಮಾಡೋ ಹಾಗಿಲ್ಲ."

ಪಾರುಕುಟ್ಟಿಯಮ್ಮ ಸಿನಿಮಕ್ಕೆ ನಾಳೆ ಹೋಗುವುದಾಗಿ ಮಕ್ಕಳನ್ನು ಸಮಾಧಾನ ಪಡಿಸಿದಳು.

ಕಂಡುಹಿಡಿಯುವುದಕ್ಕೆ ಸ್ವಲ್ಪ ಸಮಯ ಬೇಕಾಗಿ ಬಂದರೂ ಫೈಲ್ ಮನೆಯಲ್ಲೇ ಇತ್ತು. ಕಟ್ಟನ್ನು ಬಿಚ್ಚುತ್ತ ಹೆಂಡತಿಯ ಹತ್ತಿರ ಕಟುವಾಗಿ ಹೇಳಿದರು:

"ಇಲ್ಲಿ ನೋಡೇ ಪಾರುಕುಟ್ಟಿ. ರಾತ್ರಿ ಎಷ್ಟು ಹೊತ್ತಾದರೂ ಸರಿ. ಇಲ್ಲಿ ಬಂದು ತೊಂದರೆ ಕೊಡಬೇಡ. ಹೇಳಿದ್ದೀನಿ. ನಾನು ಇವತ್ತು ಇದನ್ನು ಮಾತ್ರ ಅಲ್ಲ, ಆಗುವಷ್ಟು ಫೈಲು ನೋಡುವುದಕ್ಕೆ ತೀರ್ಮಾನಿಸಿದ್ದೀನಿ. ಮಲಗೋದಿಲ್ಲವಾ? ಮಲಗೋದಿಲ್ಲವಾ ಅಂತ ಮಧ್ಯೆ ಬರಬೇಡ. ಸುಖವಾಗಿ ನಿದ್ದೆ ಮಾಡು."

ರಾತ್ರಿ ಇಡೀ ಮೆನೋನರ ಶಾಸ್ತಮಂಗಲದ ಮಾಳಿಗೆಯಲ್ಲಿ ಬೆಳಕು ಕಾಣಿಸುತ್ತಿತ್ತು. ಅವರು ಫೈಲ್ ಮುಂದಿಟ್ಟುಕೊಂಡು ಮಲಗುವುದಿರಲಿ, ತೂಕಡಿಕೆ ಕೂಡ ಬರಲಿಲ್ಲ. ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಸರಿಯಾಗಿ ಕೆಲಸ ಮಾಡುತ್ತಿದ್ದರು. ಎಷ್ಟೋ ಫೈಲುಗಳನ್ನು ಅವರು ನೋಡಿದರು.

ವಿಶೇಷವಾದ ಸಂತೋಷದೊಂದಿಗೆ ಕುಞ್ಞಿಶಂಕರ ಮೆನೋನ್ ಆಫೀಸಿಗೆ ಹೋದದ್ದು. ಎಲ್ಲ ಫೈಲುಗಳನ್ನೂ ನೋಡಿ ಮುಗಿಸಲು ಅವರಿಗೆ ಸಾಧ್ಯವಾಯಿತು. ರಾಮಕೃಷ್ಣನ್ ನಾಯರನ್ನೂ ಸೂಪರಿಂಟೆಂಡೆಂಟರನ್ನೂ ಬರಮಾಡಿದರು. ತಾನೊಂದು ದೊಡ್ಡ ಕೆಲಸ ಮಾಡಿದ ರೀತಿಯಲ್ಲಿ ಹೇಳಿದರು:

"ಅಯ್ಯಾ ನಾಯರ್, ಇದು ಯಾವುದೂ ಅಷ್ಟೊಂದು ದೊಡ್ಡ ಕೆಲಸ ಅಲ್ಲ. ಎರಡು ದಿನ ಸರಿಯಾಗಿ ಕುಳಿತರೆ ಎಲ್ಲವನ್ನೂ ಮಾಡಿ ಮುಗಿಸಬಹುದು, ಅಷ್ಟೆ. ನಾನು ಇವತ್ತು ತೀರ್ಮಾನ ಮಾಡಿದ್ದೇನೆ. ಆದರೆ ಒಂದು ವಿಷಯ. ಅಬ್ಬ! ಕಣ್ಣು ಉರಿಯುತ್ತೆ. ರಾತ್ರಿ ಕಣ್ಣುರೆಪ್ಪೆ ಮುಚ್ಚಿಲ್ಲ!"

ಏನಾದರೂ ಉತ್ತರ ಹೇಳಬೇಕಲ್ಲ ಎಂದು ರಾಮಕೃಷ್ಣನ್ ನಾಯರ್ ಹೇಳಿದರು:

"ಪಟ್ಟಾಗಿ ಕುಳಿತು ಮಾಡಿ ಮುಗಿಸೋದಕ್ಕೆ ತೀರ್ಮಾನಿಸಿದರೆ ದೊಡ್ಡ ಕಷ್ಟ ಆಗೋದಿಲ್ಲ ಸಾರ್."

ಮೆನೋನ್ ಆ ಮಾತನ್ನು ಒಪ್ಪಿದರು. ನಂತರ ಕೇಳಿದರು:

"ನಿಮ್ಮ ಬಾಕಿ ಫೈಲ್ ಮನೆಯಲ್ಲಿವೆಯಾ?"

"ಹೆಚ್ಚಿಗೆ ಇಲ್ಲ."

ಮೆನೋನ್ ತನ್ನ ಸೆಕ್ಷನನ್ನು ಮಾಡಿ ಮುಗಿಸಲು ತೀರ್ಮಾನಿಸಿದ್ದಾಯ್ತು.

"ಅದನ್ನ ಈವತ್ತು ಮುಗಿಸಿ ತನ್ನಿ. ನಮ್ಮದು ಒಂದೇ ಒಂದು ಫೈಲ್ ಬಾಕಿ ಇರಬಾರದು. ಐಡಿಯಲ್ ಅಪ್‌ಟುಡೇಟ್ ಮಾಡಬೇಕು. ಬಾಕಿ ಕೆಲಸ ಮಾಡಿ ಮುಗಿಸಿದರೆ ಚಿಂತೆಯಿಲ್ಲ. ಎಲ್ಲರ ಪತ್ರಿರವೂ ಹೇಳುತ್ತಿದ್ದರು: ಒಂದೇ ಒಂದು ಪೇಪರೂ ಬಾಕಿ ಇರಬಾರದು ಅಂತ. ನಾನು ರಿಜಿಸ್ಟರ್ ಚೆಕ್ ಮಾಡೋವಕ್ಕೆ ಹೋಗ್ತೀನಿ. ಕೆಲಸ ಆಗದೇ ಇದ್ದರೆ ಸುಮ್ಮನಿರೋದಿಲ್ಲ ತಿಳೀತಾ?"

ಹಾಗೆ ಕಟುವಾದ ಅಪ್ಪಣೆಯನ್ನು ಆತ ಮಾಡಿದ್ದು.

ಆ ರೀತಿಯಲ್ಲಿ ಹೊಸ ತೀರ್ಮಾನಗಳನ್ನು ಮಾಡಿದಾಗ ಮೆನೋನ್‌ಗೆ ಮನಸ್ಸು ಒಂದು ರೀತಿ ಹಗುರಾದಂತೆ ತೋರಿತು. ಪ್ರಾಜೆಕ್ಟ್ ಫೈಲುಗಳನ್ನು ತೆಗೆದುಕೊಂಡು ಹೋಗಿ ಚೀಫ್ ಸೆಕ್ರೆಟರಿಯನ್ನು ಒಮ್ಮೆ ಕಂಡುಬಂದರೇನು ಎಂದೂ. ಅನಂತರ ಅದನ್ನು ಲೋಕೋಪಯೋಗಿ ಶಾಖೆಗೆ ಕಳಿಸುವುದು ಎಂದೂ ತೋರಿತು. ಮರುನಿಮಿಷವೇ ಹಾಗೆಯೇ ಮಾಡುವುದೇದು ನಿಶ್ಚೈಸಿ ಆತ ಹೊರಟರು.

ಚೀಫ್ ಸೆಕ್ರೆಟರಿಯ ಮುಂದೆ ಬಂದಾಗ ಮೆನೋನ್‌ಗೆ ಇಲ್ಲಿಗೆ ಬರಬಾರದಾಗಿತ್ತು ಎನ್ನಿಸಿತು. ವಿಶೇಷವಾದ ಕೆಲಸವೇನೂ ಇರಲಿಲ್ಲ. ಮಾತುಕಥೆಯಲ್ಲಾಗಲೀ ಮುಖಭಾವದಲ್ಲಾಗಲೀ ಹಾಗನ್ನಿಸುವುದಕ್ಕೆ ವಿಶೇಷವಾಗಿ ಏನೂ ಇರಲಿಲ್ಲ. ಅಂತೂ ತಾನು ಬಂದದ್ದಾದರೂ ಯಾಕೆ ಅನ್ನಿಸಿತು. ಆ ಪ್ರಶ್ನೆಯನ್ನೇ ಚೀಫ್ ಸೆಕ್ರೆಟರಿ ಕೇಳಿದ್ದು !

"ಏನು ವಿಶೇಷ ಮಿ॥ ಮೆನನ್?"

"ವಿಶೇಷ ಏನೂ ಇಲ್ಲ. ಆ ಪ್ರಾಜೆಕ್ಟಿಗೆ ಸಂಬಂಧಿಸಿ ಒಂದು ಸಂಶಯ."

"ಏನು ಅದು?"

ತಾನು ಬುದ್ಧಿಪೂರ್ವಕವಾಗಿ ಒಂದು ಕೆಲಸ ಮಾಡಿದೆ ಎನ್ನುವ ಧಾಟಿಯಲ್ಲಿ ಮೆನೋನ್ ಹೇಳಿದರು:

"ಪ್ರಾಜೆಕ್ಟಿಗೆ ವಿಪರೀತ ಹಣ ಬೇಕು. ನಾನು ಅದನ್ನು ನಾಲ್ಕು ಹಂತಗಳಾಗಿ ವಿಭಾಗಿಸಿದೆ. ಮೊದಲು ಆ ಪರ್ವತಕ್ಕೆ ದಾರಿ. ಅನಂತರ ಉಳಿದ ಕೆಲಸಗಳು—ಒಬ್ಬನೇ ಶಿಫಾರಸ್ ಮಾಡಿರೋದಲ್ಲ."

ಅದೊಂದು ಅಷ್ಟೊಂದು ಬುದ್ಧಿವಂತಿಕೆಯಿಂದ ಏನೂ ಮಾಡಿಲ್ಲ ಎನ್ನುವ ಧಾಟಿಯಲ್ಲಿ ಚೀಫ್ ಸೆಕ್ರೆಟರಿ ಹೇಳಿದರು—

"ಹೌದು ! ಹಾಗೇ ಅಲ್ಲವೇ ಆಗಬೇಕಾದದ್ದು? ದಾರಿ ಸರಿಯಾಗದೆ ಆ ಪರ್ವತದ ತುದಿಯಲ್ಲಿ ಕಾಡಿನಲ್ಲಿ ಏನಾದರೂ ನಡೆಯೋದುಂಟಾ?"

ಮೆನೋನ್‌ಗೆ ಸ್ವಲ್ಪ ಮಂಕು ಕವಿದಂತಾಯಿತು. ಅನಂತರ ಅದನ್ನು ವಿವರಿಸುವುದಕ್ಕೆ ಸಿದ್ಧರಾದರು.

"ಅಲ್ಲ. ಒಟ್ಟಿಗೆ ಅದನ್ನು ಶಿಫಾರಸ್ ಮಾಡಬೇಕು ಅಂತ."

"ಅದಕ್ಕೇನು? ಮೊದಲನೆಯ ಹಂತದಲ್ಲಿ ಮೊದಲ ಕೆಲಸ ಮಾಡಿ ಮುಗಿಸ

ಬೇಕು. ನೀವೆಲ್ಲರೂ ಶಿಫಾರಸ್ ಮಾಡಬೇಕು."

ರಾಮಕೃಷ್ಣನ್ ನಾಯರ್ ಹಿಂದಿನ ದಿನ ಹೇಳಿದ್ದರಲ್ಲಿ ಏನೋ ತೊಂದರೆಯಿದೆ ಯೆಂದು ಮೆನೋನ್‌ಗೆ ತೋರಿತು. ವಂಚಿಸುವುದಕ್ಕೆ ಹೇಳಿದ್ದಾಗಿರಬೇಕು. ತಮ್ಮ ಅದೃಷ್ಟವನ್ನು ಮೆನೋನ್ ಮನಸಾರೆ ಮೆಚ್ಚಿಕೊಂಡರು. ಅನಂತರ ಆತ ಹೇಳಿದರು:

"ನಾನು ಇಲ್ಲಿಗೆ ಬಂದದ್ದು ಅದಕ್ಕಲ್ಲ. ಪಂಚವಾರ್ಷಿಕ ಯೋಜನೆ, ಲೋಕೋಪ ಯೋಗಿ, ಫೈನಾನ್ಸ್—ಎಲ್ಲ ವಿಭಾಗದವರೂ ಚೀಫ್ ಸೆಕ್ರೆಟರಿಯೂ ಸೇರಿ ಅನುಕೂಲ ವಾದಾಗ ಒಂದು ಕಾನ್ಫರೆನ್ಸ್ ಇಟ್ಟರೆ ಒಂದು ಅಭಿಪ್ರಾಯ ಸಂಗ್ರಹಿಸಬಹುದಾಗಿತ್ತು."

ಚೀಫ್ ಸೆಕ್ರೆಟರಿ ಹೇಳಿದರು:

"ಒಳ್ಳೆ ಸಲಹೆ ಮಿ॥ ಮೆನನ್. ಅದನ್ನು ಸರ್ಕಾರ ತೀರ್ಮಾನಿಸಿದೆ."

ಹಿಂದಿರುಗಿ ಹೋಗುವ ಮುನ್ನ ಕಾಂಗ್ರೆಸ್‌ನವರಿಗೆ ಈಟ್ಟಿಕಾಡು ಪರ್ವತವನ್ನು ಹಂಚಿ ಕೊಡುವುದರ ಕುರಿತು ಒಮ್ಮೆ ಕೇಳಬೇಕಾಗಿತ್ತು ಎನ್ನಿಸಿತು.

ಅದನ್ನು ಪಂಚವಾರ್ಷಿಕ ಯೋಜನೆಯ ಸೆಕ್ಷನ್ ಸೆಕ್ರೆಟರಿ ತಿಳಿದಿರಬೇಕಾದ ವಿಷಯ. ಹಂಚಿಕೊಟ್ಟರೆ ಪ್ರಾಜೆಕ್ಟಿನ ಕೆಲಸದಲ್ಲಿ ತಡೆಯುಂಟಾಗುತ್ತದೆ. ತಕ್ಷಣ ಮೆನೋನ್‌ಗೆ ಅನ್ನಿಸಿದ್ದು—ಅದನ್ನು ಕೇಳದೆ ಇದ್ದಿದ್ದರೆ ಚೆನ್ನಾಗಿತ್ತು ಅಂತ. ಅಂತು ರಾಮಕೃಷ್ಣನ್ ನಾಯರ್‌ಗೆ ಯಾವುದೋ ದುರುದ್ದೇಶವಿತ್ತು ಎನ್ನುವ ವಿಷಯದಲ್ಲಿ ಮೆನೋನ್‌ಗೆ ಈಗ ಸಂಶಯವಿಲ್ಲ. ಆತ ಹೇಳಿದ ಸಂಗತಿಗಳೆಲ್ಲ ಸರಿಯೆಂದು ತೋರು ತ್ತಿದ್ದುವು. ಆದರೆ ಸರ್ಕಾರದ ಇಷ್ಟವಾದ ಕೆಲಸದಲ್ಲಿ ತಡೆಯುಂಟುಮಾಡಬೇಕೆಂದು ಹೇಳಿದ್ದೇತಕ್ಕೆ? ಅಡಚಣೆಯುಂಟುಮಾಡುವ ನೋಟಸ್ಸೋ ಶಿಫಾರಸನ್ನೋ ಮಾಡಿ ದರೆ ಅದರ ಫಲಿತಾಂಶ ಸರ್ಕಾರಕ್ಕೆ ಒಪ್ಪಿಗೆಯಾಗುವುದಿಲ್ಲ. ಆ ಅಪ್ರಿಯವನ್ನುಂಟು ಮಾಡಿಬಿಡಬೇಕು ಎನ್ನುವುದಿರಬಹುದೇ ಆತನ ಉದ್ದೇಶ? ಏನೇ ಆಗಲಿ, ರಾಮ ಕೃಷ್ಣನ್ ನಾಯರನ್ನು ನಂಬಬಾರದು ಎಂದು ಮೆನೋನ್ ತೀರ್ಮಾನಿಸಿದರು.

ಚೀಫ್ ಸೆಕ್ರೆಟರಿಯನ್ನು ಮೆನೋನ್ ಕಾಣುವುದಕ್ಕೆ ಹೋದಂದಿನಿಂದ ರಾಮ ಕೃಷ್ಣನ್ ನಾಯರ್‌ಗೂ ಒಳಗೆ ಒಂದು ರೀತಿಯ ಭಯವುಂಟಾಯಿತು. ಯಾವುದಕ್ಕೂ ಯಾವ ಹಿಡಿತವೂ ನಿರ್ಧಾರವೂ ಇಲ್ಲದ ವಾಚಾಳಿಯಾದ ಆ ಮನುಷ್ಯ ಹಿಂದಿನ ದಿನ ತಾನು ಹೇಳಿದ್ದನ್ನೆಲ್ಲ ಚೀಫ್ ಸೆಕ್ರೆಟರಿಯ ಹತ್ತಿರ ಹೇಳಿಬಿಡುತ್ತಾನೆ. ಅದು ರಾಮಕೃಷ್ಣನ್ ನಾಯರ ಭಯ. ಅವಲ್ಲದೇ ಇದ್ದರೆ ಯಾಕೆ ಈಗ ಚೀಫ್ ಸೆಕ್ರೆಟರಿ ಹತ್ತಿರಕ್ಕೆ ಹೋಗ ಬೇಕಾಗಿತ್ತು? ರಾಮಕೃಷ್ಣನ್ ನಾಯರ್ ತಮಗುಂಟಾದ ದೌರ್ಬಲ್ಯವನ್ನು ಹಳಿದು ಕೊಂಡರು. ಆತ ತನ್ನ ಮನಸ್ಸಿನ ಸಮಾಧಾನಕ್ಕಾಗಿ ಲೋಕೋಪಯೋಗಿ ಶಾಖೆಯ ಸೆಕ್ರೆಟರಿ ಸುಗದನ್ ಹತ್ತಿರಕ್ಕೆ ಓಡಿದರು. ಸುಗದನ್ ರಾಮಕೃಷ್ಣನ್ ನಾಯರನ್ನು ಬಯ್ದರು ಅಷ್ಟೆ. ಅವರು ಕೇಳಿದರು:

"ನಿಮಗೆ ಮಾತ್ರ ತಿಳಿದಿರಲಿ ಅಂತ ಅಲ್ಲವಾ ನಾನು ಆ ವಿಷಯ ಹೇಳಿದ್ದು?

ನೀವು ಅವನ್ನೆಲ್ಲ ಯಾಕೆ ಈ ತಿಳಿವಳಿಕೆಯಿಲ್ಲದ ಮಂಡೆಯನ ಹತ್ತಿರ ಹೇಳಿದಿರಿ?"

ರಾಮಕೃಷ್ಣನ್ ನಾಯರ್ ತಮ್ಮ ತಪ್ಪನ್ನು ಒಪ್ಪಿಕೊಂಡರು. "ಹಾಗೆ ನಡೆದು ಹೋಯ್ತು. ಒಂದು ಬಹು ಮುಖ್ಯವಾದ ವಿಸ್ತರಣಾ ಯೋಜನೆಗೆ ತೊಂದರೆಯಾಗ ಬಾರದಲ್ಲ ಅಂದು."

"ದೇಶಪ್ರೇಮ ಅಲ್ಲವಾ?"

ರಾಮಕೃಷ್ಣನ್ ನಾಯರ್ ಹೇಳಿದರು: "ಆದರೆ ಒಂದು ಪ್ರಾಮುಖ್ಯವುಂಟಾಯಿತು. ಈಟ್ಟಿಕಾಡು ಪರ್ವತವನ್ನು ಇವರೆಲ್ಲರೂ ಸೇರಿ ಟೀ ತೋಟ ಮಾಡುವುದಕ್ಕೆ ಹೋಗುವ ವಿಷಯ ಹೇಳಿರಲಿಲ್ಲ. ಅದನ್ನು ಹೇಳಿದ್ದರೆ ಕೆಲಸ ಕೆಡ್ತಿತ್ತು. ಆತ ಅದನ್ನೂ ತುಂಡರಿಸಿಬಿಡ್ತಾನೆ."

ಸುಗದನ್ ಸಮಾಧಾನಪಡಿಸಿದರು.

"ನೀವು ಗಾಬರಿಯಾಗುವಂಥಾದ್ದೇನೂ ಇಲ್ಲ. ಹಾಗೆ ವಂಚಿಸುವುದಕ್ಕೋಸ್ಕರ ಮನಃಪೂರ್ವಕವಾಗಿ ಆತ ಸುಳ್ಳು ಹೇಳುವುದಿಲ್ಲ. ಮಂಡೆಯನಾದ್ದರಿಂದ ಇಂಥಾದ್ದನ್ನು ಹೇಳಬೇಕು, ಇಂಥಾದ್ದನ್ನು ಹೇಳಬಾರದು ಅನ್ನೋ ಪರಿಜ್ಞಾನವಿಲ್ಲ ಅಷ್ಟೆ. ಆ ವಿದ್ಯೆ ಗೊತ್ತಿರೋದು ನಮ್ಮ ಕಡೆ ಜನರಿಗೆ. ಆದ್ದರಿಂದ ಅಷ್ಟೊಂದು ಹೆದರಬೇಕಾಗಿಲ್ಲ. ನೋಡೋಣಂತೆ."

ಸುಗದನ್ ಹೇಳಿದ್ದು ಸರಿ. ಆದರೂ ರಾಮಕೃಷ್ಣನ್ ಹೇಳಿದರು:

"ಈ ಹಾಳು ಕೊಚ್ಚಿಯುವನ ಕೈಕೆಳಗಿನಿಂದ ಒಮ್ಮೆ ಹೋಗಿದ್ದರೆ ಸಾಕಾಗಿತ್ತು. ಸೆಕ್ಷನ್ ಇಡೀ ತೊಂದರೆ. ಅಲ್ಲಿ ಕ್ಲಾರ್ಕ್‌ಗಳು ಕೆಲಸ ಮಾಡುವುದಿಲ್ಲ."

ಸುಗದನ್ ಹೇಳಿದರು:

"ಮತ್ತೆ ಯಾವ ಸೆಕ್ಷನ್‌ನಲ್ಲಿ ವಿಶೇಷ? ಎಲ್ಲ ಸರಿ. ಕೊಚ್ಚಿಕಾರ ಆದದ್ದು ಅದೃಷ್ಟ ಅಂತಲೇ ಇಟ್ಟುಕೊಳ್ಳಿ. ಮನಃಪೂರ್ವಕವಾಗಿ ದ್ರೋಹ ಮಾಡೋದಿಲ್ಲ—ಸಾಮರ್ಥ್ಯ ಇಲ್ಲದ್ದರಿಂದ. ಉಳಿದವರಾದರೂ—ಒಮ್ಮೆ ಆಲೋಚಿಸಿ ನೋಡಿ. ಇನ್ನು ಕ್ಲಾರ್ಕ್‌ಗಳ ಕೆಲಸ—ಅವರಿಗೆ ಹರಟೆ ಹೊಡೆಯೋದಕ್ಕೆ ಮಾತ್ರ ಸಮಯ ಇರುತ್ತೆ."

ಸುಗದನ್ ಹೇಳಿದರು:

"ತಾಳ್ಮೆಯಿಂದಿರಿ. ಸೆಕ್ರೆಟರಿ ಹೇಳಿದರು ಅಂತ ಭಯಪಡೋದಿದೆಯಾ?"

ರಾಮಕೃಷ್ಣ ನಾಯರ್ ಒಂದು ವಿಷಯ ತೀರ್ಮಾನ ಮಾಡಿ ಆಗಿತ್ತು: "ಆತ ದೊಡ್ಡ ತೊಂದರೆ ಮಾಡಿಟ್ಟರೆ ಒಂದು ವಿಷಯ ನಿಜ. ನಾನು ಆತನನ್ನು ಮತ್ತೆಂದೂ ತಪ್ಪಿಸಿಕೊಂಡು ಹೋಗೋದಕ್ಕೆ ಆಗದ ರೀತಿಯಲ್ಲಿ ಹಳ್ಳಕ್ಕೆ ಹಾಕ್ತೀನಿ. ಅದು ಖಂಡಿತ."

## ಯಾತನಾವೇತನ

ಕೋಟ್ಟಯಂ ಜಿಲ್ಲಾ ಕಾಂಗ್ರೆಸ್ ಕಮಿಟಿ ಆಫೀಸ್. ಅದೊಂದು ದೊಡ್ಡ ಕಟ್ಟಡ. ಆಫೀಸಿನ ಮುಂದೆ ಹತ್ತು ಹದಿನೈದು ಕಾರುಗಳು ನಿಂತಿವೆ. ಆಫೀಸಿನಲ್ಲಿ ಎಂದಿಗಿಂತ ಹೆಚ್ಚು ಕೆಲಸದ ಗಡಿಬಿಡಿ. ಜನರು ಬಂದುಹೋಗುತ್ತಿದ್ದಾರೆ.

ಚಳುವಳಿಯ ಕಾಲದಲ್ಲಿ ಏಟು ತಿಂದು ಜೈಲು ಶಿಕ್ಷೆ ಅನುಭವಿಸಿ ಅಥವಾ ಮತ್ತಿತರ ತೊಂದರೆಗೊಳಗಾದವರಿಗೆ ಸಹಾಯ ಮಾಡುವುದಕ್ಕಾಗಿ ಸರ್ಕಾರ ಒಂದು ಕಾರ್ಯಕ್ರಮ ವನ್ನು ಕೈಗೆತ್ತಿಕೊಂಡಿತ್ತು. ತಲಾ ಐದು ಎಕರೆ ಸ್ಥಳವನ್ನು ಈಟ್ಟಿಮಲೆ ಕಾಡಿನಲ್ಲಿ ಹಂಚಿ ಕೊಡಲಾಗುತ್ತದೆ ಎಂದು ಅದಕ್ಕೆ ಬೇಕಾದ ಅರ್ಜಿಯನ್ನು ಜಿಲ್ಲಾ ಕಾಂಗ್ರೆಸ್ ಆಫೀಸಿನಲ್ಲಿ ಕೊಡಲಾಗುತ್ತಿತ್ತು. ಹಾಗಿರುವ ಅರ್ಜಿಯನ್ನು ನೋಡಿ ಜಿಲ್ಲಾ ಪ್ರೆಸಿಡೆಂಟ್ ಅಭಿಪ್ರಾಯ ವನ್ನು ಬರೆಯುವುದೂ ಇತ್ತು. ಆ ವಿಷಯಕ್ಕಾಗಿ ಅರ್ಜಿದಾರರು ಬಂದುಹೋಗು ತ್ತಿದ್ದರು.

ತುಂಬ ಕ್ಷೀಣಿಸಿದ್ದ, ಕೆಮ್ಮಿನಿಂದ ನರಳುತ್ತಿದ್ದ ಅರ್ಜಿದಾರ ಆ ವರಾಂಡಕ್ಕೆ ಬಂದ. ಇಷ್ಟೊಂದು ಕಾರುಗಳನ್ನು ಕಂಡು ಆತ ಅಚ್ಚರಿಗೊಂಡ. ಒಳಗೆ ಹೋದಾಗ ಖಾದಿ ಧರಿಸಿದ್ದ ಕೆಲವು ಜನರನ್ನು ನೋಡಿದ. ಒಬ್ಬನೂ ಆತನಿಗೆ ಪರಿಚಯವಿಲ್ಲ. ಅಲ್ಲಿದ್ದವ ರೆಲ್ಲ ಕಾಂಗ್ರೆಸ್ಸಿನವರು, ಸಂಶಯವಿಲ್ಲ. ಕೆಲವರಿಗೆ ಗಾಂಧಿ ಟೋಪಿಯೂ ಇದೆ.

ಸ್ಟೇಟ್ ಕಾಂಗ್ರೆಸ್ ಪ್ರಾರಂಭದ ಕಾಲದಿಂದಲೂ ಅದಕ್ಕಾಗಿ ದುಡಿಯುತ್ತಿದ್ದವನು ಆ ಅರ್ಜಿದಾರ. ಯಾವಾಗಲೂ ಬಾವುಟವನ್ನು ಹಿಡಿದುಕೊಂಡು ಘೋಷಣೆಗಳನ್ನು ಕೂಗುತ್ತಿದ್ದ ಒಬ್ಬ ವೀರ. ಆತನ ಹೆಸರು ಶಂಕರ ಪಿಳ್ಳೆ ಎಂದು. ಸ್ವಂತ ಊರು ಮೀನಚ್ಚಿಲ್ ತಾಲ್ಲೂಕಿನಲ್ಲಿ. ಎಷ್ಟೋ ಸಲ ಜೈಲಿಗೆ ಹೋಗಿದ್ದಾನೆ. ಜೈಲಿನ ಒಳಗೂ ಹೊರಗೂ ಏಟು ತಿಂದವನು. ಎಷ್ಟು ಏಟು ತಿಂದರೂ ಅಳುತ್ತಿರಲಿಲ್ಲ. 'ಭಾರತ ಮಾತಾ ಕೀ ಜೈ' ಎಂದು ಕೂಗುತ್ತಿದ್ದ. ಈಗ ಶರೀರದಲ್ಲಿ ಶಕ್ತಿಯಿಲ್ಲದಾಯಿತು. ಒಂದು ಸಣ್ಣ ಮನೆಯೂ ಮನೆಗಂಟಿದಂತೆ ಸ್ವಲ್ಪ ಸ್ಥಳವೂ ಮಾತ್ರ ಇದೆ. ಅಲ್ಲಿ ವೃದ್ಧಳಾದ ತಾಯಿಯೂ ಆತನನ್ನು ಹಿಂಬಾಲಿಸಿ ರಾಜಕೀಯ ಚಳುವಳಿಗಿಳಿದ ಒಬ್ಬ ತಮ್ಮ ಮಾತ್ರ ಇರುವುದು. ಯಾವ ರೀತಿಯಲ್ಲಾದರೂ ಸಹಾಯ ಮಾಡುವ ಒಬ್ಬಾತ ಶಂಕರ ಪಿಳ್ಳೆ.

ವರಾಂಡದ ಮೂಲೆಯಲ್ಲಿ ಒಂದು ಬೆಂಚಿನ ಮೇಲೆ ಕುಳಿತುಕೊಂಡು ಅಲ್ಲಿಗೆ ಬರುವವರನ್ನೂ ಹೋಗುವವರನ್ನೂ ಶಂಕರ ಪಿಳ್ಳೆ ಗಮನಿಸುತ್ತಿದ್ದ. ಅವರಲ್ಲಿ ಒಬ್ಬ ನಾದರೂ ಜೈಲಿಗೆ ಹೋಗಿ ಕಷ್ಟಪಟ್ಟಂತೆ ತೋರುತ್ತಿರಲಿಲ್ಲ. ಒಬ್ಬನೇ ಒಬ್ಬನಾದರೂ

ಒಂದು ಏಟು ತಿಂದವನು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಎಂತಹ ಉತ್ಸಾಹ! ನಗು, ವಿನೋದ! ಕೆಲಸ ಕೈಗೂಡಿದವರಂತೆ ಎಲ್ಲರೂ ಇದ್ದದ್ದು. ಯಾರೂ ಒಮ್ಮೆಯೂ ದುಃಖಿಸಿದವರಲ್ಲವೆಂದು ತೋರುತ್ತಿತ್ತು. ಸ್ವಲ್ಪ ಸಮಯ ಕಳೆದ ಮೇಲೆ ಒಬ್ಬ ಹಳೆಯ ಸ್ನೇಹಿತ ಅಲ್ಲಿಗೆ ಬಂದ. ಒಬ್ಬ ರಾಮನ್ ಇಳಯದು ಎನ್ನುವವನು—ಮೂವಾಟ್ಟು ಪುಳದವನು. ಅವನೂ ಚಳುವಳಿಯ ಕಾಲದಲ್ಲಿ ಮೊದಲಿನಿಂದಲೂ ಒಬ್ಬ ಹೋರಾಟ ಗಾರನಾಗಿದ್ದವನು. ಜೈಲಿನಲ್ಲಿ ಅವರಿಬ್ಬರೂ ಒಟ್ಟಿಗೆ ಇದ್ದರು. ಇಳಯದು ಶಂಕರ ಪಿಳ್ಳೆಯ ಹತ್ತಿರಕ್ಕೆ ಬಂದ. ಇಳಯದನ ಶರೀರ ಶಂಕರ ಪಿಳ್ಳೆಯ ಶರೀರದಷ್ಟು ದುರ್ಬಲ ಗೊಂಡಿರಲಿಲ್ಲ. ಕುಶಲಪ್ರಶ್ನೆಗಳಾದ ನಂತರ ಶಂಕರ ಪಿಳ್ಳೆ ಕೇಳಿದ:

"ಇವರೆಲ್ಲ ಯಾರು?"

ಇಳಯದು ಹೇಳಿದ:

"ಇವರೆಲ್ಲ ಅರ್ಜಿದಾರರು ಮತ್ತು ಶಿಫಾರಸ್ಸು ಮಾಡಿಸುವುದಕ್ಕೆ ಬಂದವರು. ನಮ್ಮ ನಾರಾಯಣನ್ ಅವರ ಕಾಗದ ತೆಗೆದುಕೊಂಡು ನಾನು ಒಮ್ಮೆ ಇಲ್ಲಿಗೆ ಬಂದಿದ್ದೆ. ಆ ದಿನವೂ ಇಲ್ಲಿ ಗಲಾಟೆಯಿತ್ತು. ಸಾಯಂಕಾಲದ ವರೆಗೆ ಕಾದು ಕುಳಿತ ಮೇಲೆಯೇ ಪ್ರೆಸಿಡೆಂಟರನ್ನು ಕಾಣುವುದಕ್ಕೆ ಸಾಧ್ಯವಾದದ್ದು." ಒಂದು ಸಣ್ಣ ಕೆಮ್ಮಿನ ಮಧ್ಯೆ ಶಂಕರ ಪಿಳ್ಳೆ ಕೇಳಿದ: "ಅನಂತರ ಇವರೆಲ್ಲ ಮೇಲೆ ಬಂದದ್ದೋ!"

"ಅವರಿಗೆಲ್ಲ ಶಿಫಾರಸ್ಸು, ಹಿಡಿತವೂ ಇದೆ. ನಮಗಲ್ಲವಾ ಕೆಲಸ ಕೈಗೂಡ ಬೇಕಾದದ್ದು?"

ಶಂಕರ ಪಿಳ್ಳೆ ಆಶ್ಚರ್ಯಪಟ್ಟುಕೊಂಡಿದ್ದ ಒಂದು ವಿಷಯ ಪ್ರಶ್ನೆಯಾಗಿ ಹೊರ ಬಂದಿತ್ತು.

"ಇವರಲ್ಲಿ ಯಾರನ್ನಾದರೂ ಒಂದು ಮೆರವಣಿಗೆಯಲ್ಲಾಗಲೀ ಜೈಲಿನಲ್ಲಾಗಲೀ ಇಳಯದು ಕಂಡದ್ದುಂಟಾ?"

ಇಳಯದೂ ಅದನ್ನೇ ನೆನಸಿಕೊಂಡದ್ದು. ಒಬ್ಬನೇ ಒಬ್ಬನನ್ನೂ ಆ ಕಾಲದಲ್ಲಿ ಕಂಡದ್ದಿಲ್ಲ.

"ಮತ್ತೆ ಹೇಗೆ ಇವರು ನೊಂದವರಾಗುವುದು?"

ಒಬ್ಬ ತುಂಬ ಲೆಕ್ಕಾಚಾರದ ಮನುಷ್ಯನಾದ ಇಳಯದು ಹೇಳಿದ: "ಅದು ಯಾವುದನ್ನೂ ಕೇಳಬೇಡ ಮಿತ್ರಾ, ಮಾತಾಡಬೇಡ. ಇನ್ನು ಮೇಲೆ ನಮ್ಮ ಕೆಲಸ ಸಾಧಿಸೋದಕ್ಕಾಗುತ್ತಾ ಅಂತ ನೋಡಿದರೆ ಸಾಕು."

ಇಳಯದು ತಗ್ಗಿದ ಸ್ವರದಲ್ಲಿ ಶಂಕರ ಪಿಳ್ಳೆಯ ಕಿವಿಯಲ್ಲಿ ಹೇಳಿದ: "ಈ ಪ್ರೆಸಿಡೆಂಟ್ ಚಳುವಳಿ ಕಾಲದಲ್ಲಿ ಎಲ್ಲಿದ್ದ ಅಂತ ನಮಗೆ ಗೊತ್ತಿಲ್ಲವಾ? ಇವತ್ತು ಗಾಂಧೀ ಟೋಪಿ ಧರಿಸಿಕೊಂಡು ಓಡಾಡ್ತಾನೆ. ಅಂದು ಶೇಂದಿ ಅಂಗಡಿ ಕಂಟ್ರಾಕ್ಟರಾಗಿರಲಿಲ್ಲವಾ?

ಅನಂತರ ಗೂಂಡಾಗಳಿಗೆ ಶೇಂದಿ ಕುಡಿಸಿ ಮೆರವಣಿಗೆ ಚದುರಿಸಿದವನಲ್ಲವಾ? ಅಂಥಾದ್ದೇ ಒಂದು ಸಭೆಯಲ್ಲಿ ಲಾಠಿಚಾರ್ಜು ಆದಾಗ ನನ್ನ ಕೈ ಮುರಿದದ್ದು."

ಇಳಯದು ಇಟ್ಟುಕೊಂಡಿರುವ ದೃಷ್ಟಿಯಂತೆಯೇ ಶಂಕರ ಪಿಳ್ಳೆಗೆ ಇರಲು ಸಾಧ್ಯವಾಗಲಿಲ್ಲ. ಆತನ ರಕ್ತ ಬಿಸಿಯಾಗುತ್ತಿತ್ತು. ಯಾರ ಹತ್ತಿರವಾದರೂ ಒಮ್ಮೆ ಜಗಳ ಮಾಡಿದರೆ ಒಳ್ಳೆಯದು ಎನ್ನಿಸಿತ್ತು. ಅನಂತರ ಎಷ್ಟೋ ವಿಷಯಗಳನ್ನು ತಿಳಿಸಬೇಕೆನ್ನಿಸಿತು. ಅದರ ಫಲವಾಗಿ ತುಂಬ ಹೊತ್ತು ಕೆಮ್ಮಬೇಕಾಯಿತು. ಆ ಕೆಮ್ಮು ಅಲ್ಲಿದ್ದವರ ಗಮನವನ್ನು ಸೆಳೆಯಿತು. ದಯಾಳುವಾದ ಇಳಯದು ಶಂಕರ ಪಿಳ್ಳೆಯ ಬೆನ್ನಿನ ಮೇಲೆ ಕೈಯಾಡಿಸಿದ. ಅಷ್ಟರಲ್ಲಿ ಕೆಲವು ಜನರು ಬಂದರು. ಮೇಲಿನ ಮಾಳಿಗೆಯ ಪ್ರೆಸಿಡೆಂಟರ ರೂಮಿಗೆ ಹೋಗುತ್ತಿದ್ದರು. ಕಾರ್ಯ ಸಾಧಿಸಿದ ರೀತಿಯಲ್ಲಿ ಹಿಂದಿರುಗಿ ಬರುತ್ತಿದ್ದರು. ಹಿಂದೆ ಜಿಲ್ಲಾ ಕಾಂಗ್ರೆಸ್ ಆಫೀಸು ನಿರ್ಜನವಾಗಿದ್ದುದನ್ನು ಶಂಕರ ಪಿಳ್ಳೆ ನೆನಸಿಕೊಂಡ. ಒಬ್ಬನೇ ಎಷ್ಟೋ ದಿನಗಳನ್ನು ಅಲ್ಲಿ ಕಳೆದಿದ್ದ. ಅಂದು ಅಲ್ಲಿಗೆ ನೇರವಾಗಿ ಬರಲು ಜನರಿಗೆ ಹೆದರಿಕೆಯಿತ್ತು. ಇಳಯದು ಕೇಳಿದ: "ಶಂಕರ ಪಿಳ್ಳೆ ಮೊದಲೇ ಅರ್ಜಿ ಕೊಟ್ಟಿಲ್ಲವಾ?"

ಶಂಕರ ಪಿಳ್ಳೆ ಹೇಳಿದ: "ಕೊಟ್ಟಿದ್ದೆ. ಒಮ್ಮೆ ಪ್ರೆಸಿಡೆಂಟ್ ಪಾಲಕ್ಕೆ ಬಂದಿದ್ದಾಗ ಹೋಗಿ ಕಂಡೂ ಇದ್ದೆ. ಆದರೆ ನನ್ನ ವಿಷಯದಲ್ಲಿ ಒಂದು ತೊಂದರೆಯಿದೆ."

ಇಳಯದು ಆಶ್ಚರ್ಯದಿಂದ ಕೇಳಿದ:

"ತೊಂದರೆಯಾ? ನಿಮಗಾ? ನಿಮಗೇ ತೊಂದರೆಯಿದ್ದರೆ ಮತ್ತೆ ಯಾರಿಗೆ ತೊಂದರೆಯಿಲ್ಲದೇ ಇರೋದು?"

ಶಂಕರ ಪಿಳ್ಳೆ ಹೇಳಿದ:

"ಈಗ ಸನ್ನಿವೇಶ ಹಾಗಾಗಿದೆ."

"ಅದ್ಯಾಕೆ?"

ಶಂಕರ ಪಿಳ್ಳೆ ಆ ವಿಷಯ ಹೇಳುವುದಕ್ಕೆ ಪ್ರಾರಂಭಿಸಿದ:

"ನನಗೊಬ್ಬ ತಮ್ಮ ಇದ್ದಾನೆ—ಚಂದ್ರನ್. ಇಳಯದುಗೆ ಅವನು ಗೊತ್ತು. ಕಾಂಗ್ರೆಸ್ಸಿನಲ್ಲಿದ್ದ. ಅವನೀಗ ಕಮ್ಯೂನಿಸ್ಟ್! ಒಬ್ಬ ಭಾಷಣಕಾರನೂ ಹೌದು. ಕಮ್ಯೂನಿಸ್ಟ್ ಪಾರ್ಟಿಯ ಒಬ್ಬ ದೊಡ್ಡ ಸೇವಕನೂ ಹೌದು."

ಅದಕ್ಕೆ ಇಳಯದು ಕೇಳಿದ: "ಅದಕ್ಕೆ ನಿಮಗೇನಾಗಬೇಕು?" ಶಂಕರ ಪಿಳ್ಳೆ ಕೇಳಿದ—"ಇಂದು ನಮಗಲ್ಲವಾ ಗೊತ್ತಾಗೋದು ಅದರ ಕಷ್ಟ? ಇದಕ್ಕೆ ಮೊದಲು ಜಿಲ್ಲಾ ಪ್ರೆಸಿಡೆಂಟನ್ನು ನಾನು ಕಂಡಾಗ ಆತ ಕೇಳಿದ್ದು ಇದು."

ಇಳಯದು ಹೇಳಿದ: "ಈಗ ಅವರಿಗೆ ದೊಡ್ಡ ತೊಂದರೆಯುಂಟಾಗಿದೆ. ಒಳ ಜಗಳ ಮಾಡಿಕೊಳ್ಳೋದಕ್ಕೆ ಹೋಗುತ್ತಿದ್ದಾರೆ."

ದಿಕ್ಕು ತೋರದೆ ಶಂಕರ ಪಿಳ್ಳೆ ಹೇಳಿದ: "ನಾನು ಏನು ಮಾಡಬೇಕು. ಅವನ

ಹತ್ತಿರ ಹೇಳಿ ನೋಡಿದೆ. ಜಗಳ ಆಡಿ ನೋಡಿದೆ. ಮನೆ ಬಿಟ್ಟು ಹೋಗುವ ವರೆಗೂ ಹೇಳಿದೆ."

ಶಂಕರ ಪಿಳ್ಳೆಯು, ಅವನ ತಮ್ಮನ ಸ್ಥಿತಿ ಇಳಯದನಿಗೆ ಸರಿಯಾಗಿ ಅರ್ಥವಾಗುತ್ತಿತ್ತು. ಇಳಯದು ಹೇಳಿದ:

"ಒಬ್ಬೊಬ್ಬನ ವಿಶ್ವಾಸ. ಆದ್ದರಿಂದ ಯಾರು ಆಲೋಚಿಸಿದರೂ ಅದನ್ನು ಬದಲಾಯಿಸೋದಕ್ಕೆ ಸಾಧ್ಯವಾ? ನಮ್ಮ ವಿಷಯ ಆಲೋಚಿಸಿ ನೋಡಿ. ಸ್ಟೇಟ್ ಕಾಂಗ್ರೆಸ್‌ಗೆ ಸೇರಿದ ಕಾಲದಲ್ಲಿ ನನ್ನನ್ನು ತಂದೆ, ಮನೆಯಿಂದ ಹೊರಗೆ ಹಾಕಿದರು. ಮೊದಲು ಜೈಲಿಗೆ ಹೋಗಿ ಬಂದ ಮೇಲೆ ವಾಸಕ್ಕೆ ಒಂದು ಮನೆಯಿರಲಿಲ್ಲ. ಮನೆಗೆ ಹೋಗೋದಕ್ಕೆ ಸಾಧ್ಯವಾ?

"ನನಗೆ ಒಬ್ಬ ಉಪಾಧ್ಯಾಯರ ಕೆಲಸ ಕೊಡುತ್ತೇವೆ ಅಂತ ಎಷ್ಟೋ ಸಲ ವಾಗ್ದಾನ ಮಾಡಿದ್ದರು—ನಿಮಗೂ ಯಾವುದೋ ಕೆಲಸ ಕೊಡಿಸುವುದಾಗಿ ಹೇಳಿರಲಿಲ್ಲವಾ? ಹಾಗಿದ್ದರೂ ನಾವು ಯಾಕೆ ಬದಲಾಯಿಸದೇ ಹೋದದ್ದು? ಅದು ನಮ್ಮ ವಿಶ್ವಾಸ!"

ಶಂಕರ ಪಿಳ್ಳೆ ಒಪ್ಪಿದ. ಚಂದ್ರನ್ ಅವನ ವಿಶ್ವಾಸವನ್ನು ಅಚಲವಾಗಿ ನಂಬಿದ್ದ. ಚಳುವಳಿಯ ಕಾಲದಲ್ಲಿ ತಾಯಿಯ ಕಷ್ಟಗಳು ಶಂಕರ ಪಿಳ್ಳೆಗೆ ಅಷ್ಟೊಂದು ದೊಡ್ಡದಾಗಿ ತೋರಿರಲಿಲ್ಲ. "ಅದನ್ನು ನೆನಸಿಕೊಳ್ಳುವಾಗ ಇಂದಿನ ಕಷ್ಟಗಳನ್ನು ನೆನಸಿಕೊಳ್ಳದೇ ಇರುವುದನ್ನು ಕುರಿತು ಚಂದ್ರನನ್ನು ದೂರುವುದು ಬೇಡ. ನಾನು ಎಷ್ಟೋ ಸಲ ನನ್ನ ಹಿಂದಿನ ದಿನಗಳನ್ನು ನೆನಸಿಕೊಳ್ಳುತ್ತೇನೆ."

ಹಾಗೆ ಶಂಕರ ಪಿಳ್ಳೆ ಆ ವಿಷಯ ಹೇಳಿ ಮುಗಿಸಿದ್ದು. ಇಳಯದು ಕೇಳಿದ: "ಅನಂತರ ಆ ದಿನ ಪಾಲದಲ್ಲಿ ಪ್ರೆಸಿಡೆಂಟನ್ನು ಕಂಡಾಗ ಏನು ಹೇಳಿದ? ಸಾಧ್ಯವಿಲ್ಲ ಅಂತಲಾ?"

ಶಂಕರ ಪಿಳ್ಳೆ ಆ ಕಥೆ ವಿವರಿಸಿದ:

"ಹಾಗಂತ ಹೇಳಲಿಲ್ಲ. ತಮ್ಮ ಕಮ್ಯೂನಿಸ್ಟ್ ಆದದ್ದು ಒಂದು ದೊಡ್ಡ ತೊಂದರೆ ಅಂತ ಹೇಳಿದ. ಆದರೂ ನೋಡೋಣ ಎಂದು ಹೇಳಿದ."

"ತಮ್ಮನ ನಂಬಿಕೆಯನ್ನು ಈ ವಿಷಯದಲ್ಲಿ ಯಾಕೆ ಇವರು ಲೆಕ್ಕಕ್ಕೆ ತೆಗೆದು ಕೊಳ್ತಾರೆ?" ಎಂದು ಇಳಯದು ಕೇಳುವುದು.

ಅದು ಇಳಯದನಿಗೆ ಅರ್ಥವಾಗುವುದಿಲ್ಲ. ಶಂಕರ ಪಿಳ್ಳೆ ಹೇಳಿದ: "ಅದನ್ನ ಯಾರು ಕೇಳ್ತಾರೆ? ಯಾರ ಹತ್ತಿರ ಕೇಳುವುದು?"

ಈಗ ಶಂಕರ ಪಿಳ್ಳೆ ಬಂದಿರುವುದು ಪ್ರೆಸಿಡೆಂಟನ್ನು ಕಂಡು ತನ್ನ ವಿಷಯದಲ್ಲಿ ಯಾವುದಾದರೂ ತೀರ್ಮಾನ ಉಂಟಾಯಿತೇ ಎಂದು ತಿಳಿಯಲು. ಇದು ವರೆಗೆ ಆಗಿಲ್ಲದಿದ್ದಲ್ಲಿ ಅನುಕೂಲವಾದ ತೀರ್ಮಾನಕ್ಕೆ ಸಂಬಂಧಿಸಿದ ಒಂದು ಸಹಕಾರವೂ ಉಂಟಾ

ಗಿತ್ತು. ಶಂಕರ ಪಿಳ್ಳೆ ಕಣ್ಣಿನಲ್ಲಿ ನೀರು ತಂದುಕೊಂಡು ಹೇಳಿದ: "ನಾನು—ನಾನು ನನ್ನ ತಮ್ಮನನ್ನು ಮನೆಯಿಂದ ಹೊರಗೆ ಕಳಿಸಿದೆ."

ಶಂಕರ ಪಿಳ್ಳೆ ಬಿಕ್ಕಿಬಿಕ್ಕಿ ಅತ್ತ. ಅನಂತರವೂ ಆತನಿಗೆ ಕೆಮ್ಮು ಬಂದಿತು. ಆ ಮನುಷ್ಯನಿಗೆ ಜೀವನದಲ್ಲಿ ಒಬ್ಬನೇ ಒಬ್ಬ ಇರುವುದು. ಅದು ತಮ್ಮ. ಅವನನ್ನು ಬೆಳಸಿಕೊಂಡು ಬಂದದ್ದು ಆತ. ಈ ಐದು ಎಕರೆ ಭೂಮಿಗೋಸ್ಕರ ಅವನನ್ನು ಆತ ಕೈಬಿಟ್ಟ. ಈಗ ರೋಗಿಯಾದ ಆ ಮನುಷ್ಯನ ಹೃದಯ ರೋದಿಸುತ್ತದೆ. ಆ ಘಟನೆಯನ್ನು ಶಂಕರ ಪಿಳ್ಳೆ ವಿವರಿಸತೊಡಗಿದ. ಬಿಕ್ಕಿಬಿಕ್ಕಿ ಅಳುತ್ತಿದ್ದುದರಿಂದ ಆತನಿಗೆ ವಿವರಿಸಲು ಕಷ್ಟವಾಯಿತು.

ಇಳಯದು ಹೇಳಿದ: "ಬೇಡ ಶಂಕರ ಪಿಳ್ಳೆ. ಹೇಳೋದು ಬೇಡ. ಅದನ್ನ ನಾನು ಅರ್ಥಮಾಡಿಕೊಳ್ಳಬಲ್ಲೆ."

ಶಂಕರ ಪಿಳ್ಳೆ ಕೆಲವು ವಿಷಯಗಳನ್ನು ಹೇಳಲೇಬೇಕಾಗಿತ್ತು. "ಅವನು ಕಮ್ಯೂನಿಸ್ಟ್ ಆದರೂ ನನ್ನ ಮೇಲೆ ಪ್ರೀತಿಯಿದ್ದವನು. ನನ್ನ ಎದುರಿಗೆ ನಿಂತು ಮಾತಾಡಿದವನಲ್ಲ. ಒಂದು ದಿನ ಅವನು ಮನೆಗೆ ಬಂದಾಗ ನಾನು ಹೇಳಿದೆ—ಹೊರಟುಹೋಗೋ ಅಂತ; ಹೊಸಲು ಒಳಕ್ಕೆ ಕಾಲಿರಿಸಬೇಡ ಅಂತ. ಹೇಗೆ ಅದನ್ನು ಹೇಳುವುದಕ್ಕೆ ನನ್ನ ನಾಲಿಗೆ ಬಂತು ಅಂತ ನನಗೆ ತಿಳಿಯದು. ಯಾವ ಕಾರಣವೂ ಇಲ್ಲದೆ—ಹಾಗೆ ಹೇಳಬೇಕು ಎಂದು ನಾನು ವಿಚಾರಿಸಿರಲೂ ಇಲ್ಲ. ಹೇಳಿಬಿಟ್ಟೆ—ಅವನು ಅತ್ತುಕೊಂಡು ಹೊರಟುಹೋದ. ನನಗೆ ಅದನ್ನು ನೆನಸಿಕೊಳ್ಳೋದಕ್ಕೂ ಸಾಧ್ಯವಿಲ್ಲ ಇಳಯದೂ. ನಾನು ನನ್ನ ತಮ್ಮನನ್ನ ಹೊರಗೆ ಹಾಕಿದೆ."

ಶಂಕರ ಪಿಳ್ಳೆಗೆ ಮತ್ತೂ ಹೇಳಬೇಕಾದದ್ದಿತ್ತು. ಆದರೆ ಹೇಳುವುದಕ್ಕಾಗುತ್ತಿಲ್ಲ. ಹೇಗೆ ಆತನನ್ನು ಸಮಾಧಾನಪಡಿಸಬೇಕು ಎಂದು ತಿಳಿಯದೆ ಇಳಯದು ವಿಷಮಕ್ಕೊಳಗಾದ. ಶಂಕರ ಪಿಳ್ಳೆ ಪುನಃ ಹೇಳಿದ:

"ನನಗೆ ಯಾರೂ ಇಲ್ಲ. ಒಂಟಿ. ನನಗೆ ಭಯ ಆಯ್ತು. ನಾನು ಎರಡು ದಿವಸ ಅವರ ಆಫೀಸಿಗೆ ಹೋಗಿ ಅವನನ್ನು ಕೇಳಿದೆ. ಅವರು ಹೇಳಿದ್ದು ಸುಳ್ಳೋ ನಿಜವೋ ತಿಳಿಯದು. 'ಎಲ್ಲಿದ್ದಾನೋ ಗೊತ್ತಿಲ್ಲ' ಅಂದರು. ಆಗ ಸರ್ಕಾರ ಕೊಡೋ ಭೂಮಿ ಯಾಕೆ ಅನ್ನಿಸಿತು."

ಇಳಯದು ಹೇಳಿದ: "ಹಾಗಂದರೆ ಸಾಧ್ಯವಾ? ಸಾಯುವ ವರೆಗೆ ಜೀವಿಸಬಾರದಾ? ಇದೊಂದು ಭಿಕ್ಷೆ ಬೇಡೋದೇ. ಸರಿ. ಕಷ್ಟ. ಆದರೂ ನಮ್ಮಂಥವರಿಗೆ ಮತ್ತೇನು ಗತಿ?"

ಶಂಕರ ಪಿಳ್ಳೆ ಮತ್ತೊಂದು ತೀರ್ಮಾನಕ್ಕೆ ಬಂದಿದ್ದಾನೆ. "ಈ ಹೋರಾಟವೂ ಸಮತ್ವ ಸುಂದರತ್ವದ ಶ್ರಮವೆಲ್ಲ ಮುಗಿದ ಮೇಲೆ ಅವನು ಒಮ್ಮೆ ಕೈಬೀಸಿ, ಕೆಮ್ಮಿಕೊಂಡು ಉಟ್ಟ ಬಟ್ಟೆಯಲ್ಲಿ ಹಿಂದಿರುಗಿ ಬರುತ್ತಾನೆ. ಆಗ ಅವನನ್ನು ನೋಡಿಕೊಳ್ಳೋ

ದಕ್ಕೆ ಯಾರೂ ಇರೋದಿಲ್ಲ. ಸ್ವಾತಂತ್ರ್ಯ ಸಂಪಾದನೆಯಾದ ಮೇಲೆ ಈಗ ನಾವು ಇಲ್ಲವಾ? ಅದೇ ರೀತಿ. ಅಂದು ಅವನು ಬಂದಾಗ ನನ್ನ ಪಾಲಿನದಾಗಿ ಏನಾದರೂ ಅವನಿಗೆ ಇರಬೇಕು. ಅದಕ್ಕೋಸ್ಕರ ನಾನು ಈಗ ಕೈಯಲ್ಲಾಗದಿದ್ದರೂ ಇಲ್ಲಿಗೆ ಬಂದದ್ದು."

ಒಂದು ಕ್ಷಣ ಕಳೆದು ವೇದನೆಯಿಂದ ಶಂಕರ ಪಿಳ್ಳೆ ಹೇಳಿದ: "ನಾನು ನನ್ನ ತಮ್ಮನ್ನ ಹೊಡೆದು ದಬ್ಬಿದೆ. ಅವನು ಒಬ್ಬ ಹಠಗಾರ. ಸಣ್ಣ ಹುಡುಗನಿಂದಲೂ ಹಾಗೇನೇ. ಅವನನ್ನು ಒಮ್ಮೆ ಕಂಡಿದ್ದರೆ ಸಾಕಿತ್ತು."

ರಾಮನ್ ಇಳಯುದನಿಗೆ ಏನೂ ಹೇಳುವುದಕ್ಕಿರಲಿಲ್ಲ. ಆ ಹಿರಿಯ ಸಹೋದರನ ದುಃಖವನ್ನು ನೋಡುತ್ತ ಸ್ವಲ್ಪ ಹೊತ್ತು ಆತ ಕುಳಿತುಕೊಂಡ. ಸಮಾಧಾನ ಮಾಡುವುದಕ್ಕಾಗಿ ಆತ ಹೇಳಿದ: "ಹಾಗೆ ನಿರಾಶೆ ಪಡಬೇಡಿ. ಅವನು ಬರುತ್ತಾನೆ."

"ಬರುವುದಿದ್ದರೆ ಬರಲಿ. ಇಲ್ಲದೇ ಇದ್ದರೆ ಅವನು ಬಂದಾಗ ಏನಾದರೂ ಗೊತ್ತಾಗಬೇಕು. ನಾನು ಇಲ್ಲಿಗೆ ಬಂದದ್ದು ಕಮ್ಯೂನಿಸ್ಟ್‌ಕಾರನಾದ ತಮ್ಮನನ್ನು ಮನೆಯಿಂದ ಹೊರಗೆ ಹಾಕಿದೆ ಅಂತ ಹೇಳೋದಕ್ಕೆ. ಒಬ್ಬ ತಮ್ಮ ನನಗಿಲ್ಲ ಅಂತ ನನ್ನ ನಾಲಿಗೆಯಿಂದ ಹೇಳೋದಕ್ಕೆ ಬಂದೆ. ನಾನು ಇದನ್ನು ಹೇಗೆ ಹೇಳಲಿ? ಅಂತರಂಗವನ್ನ ವಂಚಿಸಿ ಹಾಗೆ ನಾನಿದುವರೆಗೆ ಒಂದೇ ಒಂದು ಅಕ್ಷರ ಹೇಳಿಲ್ಲ. ಈ ಖಾದಿ ಹಾಕಿಕೊಂಡು ನಾನು ಅದನ್ನ ಹೇಳಬೇಕು. ಇವರು ನನ್ನಿಂದ ಅದನ್ನು ಹೇಳಿಸ್ತಾರೆ."

ಶಂಕರ ಪಿಳ್ಳೆಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಎಷ್ಟೋ ಹೊತ್ತಿನ ವರೆಗೆ ಆ ಸ್ನೇಹಿತರಿಬ್ಬರೂ ಏನೂ ಮಾತಾಡಲಿಲ್ಲ. ಆಗಲೂ ರಾಜಕೀಯದಲ್ಲಿ ನೊಂದವರು ಮುಂತಾದವರು ಅಲ್ಲಿಗೆ ಬಂದು ಹೋಗುತ್ತಿದ್ದರು. ಒಟ್ಟಿನಲ್ಲಿ ಒಂದು ದೊಡ್ಡ ಅಕ್ರಮದಂತೆ ಇಳಯುದನಿಗೆ ತೋರಿತು. ಮುಖ ಒರೆಸಿಕೊಳ್ಳುತ್ತ ಶಂಕರ ಪಿಳ್ಳೆ ಕೇಳಿದ:

"ಇಳಯುದು ಅರ್ಜಿ ಕೊಟ್ಟಿದ್ದೀರಾ?"

"ಕೊಟ್ಟಿದ್ದೀನಿ."

"ತೊಂದರೆ ಏನೂ ಇಲ್ಲವಾ?"

"ಇಲ್ಲ ಅಂತ ಕಾಣಿಸುತ್ತೆ."

"ನಾರಾಯಣನ್ ನಾಯರಲ್ಲವಾ? ಅವರ ನೆನಪಿದೆಯಾ? ಮಧ್ಯೆ ಜಗಳ ಮಾಡಿಕೊಂಡು ಕಂಟ್ರಾಕ್ಟ್ ಮಾಡೋದಕ್ಕೆ ಹೋದ ಮನುಷ್ಯ. ನಂತರ ಸ್ವತಂತ್ರ ತಿರುವಾಂಕೂರು ಕಾಲದಲ್ಲಿ ಹಿಂದಿರುಗಿ ಬಂದ."

ಶಂಕರ ಪಿಳ್ಳೆ ಆ ಮನುಷ್ಯನನ್ನು ನೆನಸಿಕೊಳ್ಳುತ್ತಿದ್ದ.

ಇಳಯುದು ಪ್ರಾರಂಭಿಸಿದ: "ಅವನನ್ನು ಕರೆದುಕೊಂಡು ಬಂದು ಒಂದು ಸಲ ಹೇಳಿಸಿದೆ."

ನಿರಾಶೆಯಿಂದ ಶಂಕರ ಪಿಳ್ಳೆ ಹೇಳಿದ:

"ನನಗೆ ಅಂಥವನೊಬ್ಬ ಮನುಷ್ಯನನ್ನು ಕಂಡುಹಿಡಿಯೋದಕ್ಕೆ ಸಾಧ್ಯವಾಗಿಲ್ಲ."

ಇಳಯದು ಹೇಳಿದ: "ಅಂತು ನಾರಾಯಣನ್ ನಾಯರನ್ನು ಹಿಡಿಯೋದು ದೊಡ್ಡ ಖರ್ಚು. ಮೊದಲನೆಯದಾಗಿ ಕಂಡುಹಿಡಿಯೋದೇ ಕಷ್ಟ. ಒಬ್ಬೊಬ್ಬ ದೊಡ್ಡ ಕಂಟ್ರಾಕ್ಟರರೂ ಉದ್ಯೋಗಸ್ಥರೂ ಎಲ್ಲರೂ ಕಾರು ತೆಗೆದುಕೊಂಡು ಬಂದು ಕರೆದು ಕೊಂಡು ಹೋಗ್ತಾರೆ. ಯಾರ ಹತ್ತಿರ ಹೋಗಿ ಹೇಳಿದರೂ ಕಾರ್ಯ ನಡೆಯುತ್ತೆ. ಅದು ಇಂದಿನ ಕಾಲ. ಒಳ್ಳೆ ಶುಕ್ರದೆಸೆ. ಚೆನ್ನಾಗಿದೆ. ಇಷ್ಟು ರೂಪಾಯಿ ಬೇಕು ಅಂತ ಹೇಳ್ತಾನೆ. ತರಹಂರೆ ಏನೂ ಅಲ್ಲ. ಅದನ್ನು ಕೊಡಬೇಕು. ಕೆಲಸ ಆಗುತ್ತೆ. ತುಂಬ ಹಣ ಬೇಕು."

ಶಂಕರ ಪಿಳ್ಳೆ ಕೇಳಿದ:

"ಇಳಯದು ಏನಾದರೂ ಕೊಟ್ಟೆಯಾ?"

"ಕೊಡದೇ ಇರೋದಕ್ಕೆ ಸಾಧ್ಯವಿಲ್ಲ. ನಾನಾದ್ದರಿಂದ ನನ್ನ ಕೆಲಸ ಗೊತ್ತಿದ್ದರಿಂದ ಒಂದು ಆಶೆ ತೋರಿಸಿದೆ. ಐವತ್ತು ರೂಪಾಯಿ. ಈ ಕೆಲಸಕ್ಕೆ ಅವನಿಗಾಗಿ ಇನ್ನೂರು ರೂಪಾಯಿ ಜೊತೆಗೆ ಕಾರಿನ ಖರ್ಚು ವಹಿಸಿಕೊಳ್ಳಬೇಕಾಗಿತ್ತು. ನನಗೆ ಒಟ್ಟು ಎಪ್ಪತ್ತೈದು ರೂಪಾಯಿ ಆಯ್ತು."

ಶಂಕರ ಪಿಳ್ಳೆ ಒಂದು ನಿಟ್ಟುಸಿರೊಡನೆ ಹೇಳಿದ: "ಒಳ್ಳೆ ಕಾಂಗ್ರೆಸ್ಸು; ಒಳ್ಳೆ ಆಡಳಿತ."

ಇಳಯದನಿಗೆ ನಾರಾಯಣನ್ ನಾಯರನ್ನು ಕುರಿತು ಸ್ವಲ್ಪ ಹೆಚ್ಚಿಗೆ ಹೇಳುವುದಿತ್ತು.

"ಇಲ್ಲಿ ಕೇಳಿ ಶಂಕರ ಪಿಳ್ಳೆ. ನಾರಾಯಣನ್ ನಾಯರ್ ಹೇಳೋದು ಒಂದು ದೃಷ್ಟಿಯಲ್ಲಿ ನ್ಯಾಯವೇ. ಪ್ರತಿಯೊಬ್ಬನೂ ಸಿಕ್ಕಿದ ಸಂದರ್ಭ ಉಪಯೋಗಿಸಿಕೊಂಡು ಹಣ ಸಂಪಾದಿಸ್ತಾನೆ. ಆದರ್ಶ ಮಾತಾಡೋದು ದಡ್ಡತನ. ಒಮ್ಮೆ ಆಲೋಚಿಸಿದರೆ ಅದು ಸರಿತಾನೆ? ಒಬ್ಬರೋ ಇಬ್ಬರೋ ಹಾಗೆ ಆದರ್ಶದ ಹಾದಿಯಲ್ಲಿ ನಿಲ್ಲೋದರಲ್ಲೇನಿದೆ ವಿಶೇಷ?"

ಶಂಕರ ಪಿಳ್ಳೆ ಕೇಳಿದ:

"ನಾರಾಯಣನ್ ನಾಯರ್‌ಗೆ ಅಷ್ಟೊಂದು ಹಿಡಿತ ಇದೆಯಾ?"

"ಪರವಾಯಿಲ್ಲ ! ಎಲ್ಲಿ ನೋಡಿದರೂ ಹಿಡಿತ ಇದೆ. ತಿರುಕೊಚ್ಚಿ ಕಾಂಗ್ರೆಸ್ ಪ್ರೆಸಿಡೆಂಟ್ ಲೂಕೋಸನ ಬಲಗೈಯಲ್ಲವಾ ಅವನು?"

ಇಳಯದು ಅರ್ಥವತ್ತಾಗಿ ಹೇಳಿದ: "ಈ ಪ್ರೆಸಿಡೆಂಟ್ ಈ ಕುರ್ಚಿಯಲ್ಲಿ ಕುಳಿತಿರುವುದಕ್ಕೆ ಯಾರು ಕಾರಣ ಅಂತ ಭಾವಿಸಿದಿರಿ? ನಾರಾಯಣನ್ ನಾಯರ್ ಕಾರಣ. ಲೂಕೋಸ್ ಪ್ರೆಸಿಡೆಂಟ್ ಆಗೋದಕ್ಕೆ ಯಾರು ಶ್ರಮಿಸಿದ್ದು?"

ಇಳಯದು ಹೇಳುತ್ತಿದ್ದುದನ್ನು ಮುಂದುವರಿಸಿದ: ಎಲ್ಲ ಕಡೆಯಲ್ಲೂ ಒಳ್ಳೆ

ಹಿಡಿತ ಇದೆ. ಚೀಫ್ ಸೆಕ್ರೆಟರಿಯ ಸ್ವಂತ ಮನುಷ್ಯ. ಈಗ ಚೀಫ್ ಸೆಕ್ರೆಟರಿಯ ಮಗಳಿಗೆ ಒಬ್ಬ ವರನನ್ನೂ ಹುಡುಕುತ್ತಿದ್ದಾನೆ."

ಇಳಯುದು ನಾರಾಯಣನ್ ನಾಯರ ವಿಷಯದಲ್ಲಿ ತುಂಬ ಮಾತಾಡ್ತಿದ್ದ, ಮಾತ್ರವಲ್ಲ ಆತನ ವಿಷಯವಾಗಿ ಸಮರ್ಥಿಸುವುದಕ್ಕೆ ಶ್ರಮಿಸುತ್ತಿದ್ದ. ಶಂಕರ ಪಿಳ್ಳೆ ಅದನ್ನು ಗಮನಿಸದೆ ಇರಲಿಲ್ಲ. ಭೂಮಿ ಸಿಕ್ಕುವ ಕೆಲಸದಲ್ಲಿ ಮಾಡಿದ ಸಹಾಯ ಮಾತ್ರ ಇದಕ್ಕೆ ಕಾರಣವೇ ಎಂದು ಶಂಕರ ಪಿಳ್ಳೆಗೆ ಸಂಶಯವುಂಟಾಯಿತು. ಆತ ಕೇಳಿದ: "ಇಳಯುದನಿಗೆ ತುಂಬ ಹತ್ತಿರ ಅಂತ ಕಾಣಿಸುತ್ತಲ್ಲ!"

"ಅಷ್ಟೊಂದು ಹತ್ತಿರ ಏನೂ ಅಲ್ಲ. ಅಂದರೆ ಇಲ್ಲ ಅಂತ ಹೇಳೋದಕ್ಕೂ ಸಾಧ್ಯ ವಿಲ್ಲ. ಕೆಲವು ಜನರು ಚಿಲ್ಲರೆ ಕೆಲಸಕ್ಕಾಗಿ ನನ್ನ ಹತ್ತಿರ ಬಂದರು. ತಿರುವನಂತಪುರದಲ್ಲಿ ಮಾತ್ರ ಅಲ್ಲ. ಪೇಷ್ಕಾರರ ಹತ್ತಿರ, ಪೋಲೀಸು ಸೂಪರಿಂಟೆಂಡೆಂಟ್‌ನ ಹತ್ತಿರ ಮುಂತಾದ ಕಡೆಗಳಲ್ಲೆಲ್ಲ ನಾನು ಕೆಲಸ ಮಾಡಿಸಿಕೊಟ್ಟೆ. ಅವರ ಕೆಲಸವೂ ಕೈಗೂಡಿತು. ಕೇಳಿದ ಹಣನೂ ಕೊಟ್ಟರು."

ಇಳಯುದನ ಬಗ್ಗೆ ಇದ್ದ ಗೌರವ ಥಟ್ಟನೆ ಕಡಿಮೆಯಾಯಿತು. ಈ ಶಿಫಾರಸ್ಸಿನ ಅಕ್ರಮ ಯಂತ್ರದ ಸಾಧಾರಣವಾದ ಭಾಗ ಅವನು ಎನ್ನಿಸಿತು.

ಶಂಕರ ಪಿಳ್ಳೆ ಸ್ವಲ್ಪ ತಿರಸ್ಕಾರದಿಂದ ಕೇಳಿದ:

"ಇಳಯುದನಿಗೆ ಆ ವ್ಯವಹಾರದಲ್ಲಿ ಏನಾದರೂ ಸಿಕ್ಕಿತಾ?"

"ಕೇಳಿದ್ದು ಸ್ವಲ್ಪ ಹೆಚ್ಚಾಯ್ತು."

ಇಳಯುದು ಹೇಳಿದ: "ಅಯ್ಯೋ, ಶಂಕರ ಪಿಳ್ಳೆ ಹಾಗೆ ಯಾಕೆ ಕೇಳಿದಿರಿ? ನಾನು ಈ ಆಯುಷ್ಯವಿಡೀ ಖಾದಿ ಹಾಕಿದವನು. ಈ ನಾಲಗೆಯಿಂದ ಮಹಾತ್ಮಾ ಗಾಂಧಿಗೆ ಜೈ ಅಂತಲೂ ವಂದೇ ಮಾತರಂ ಅಂತಲೂ ಕರೆದವನು."

ಶಂಕರ ಪಿಳ್ಳೆ ತನ್ನ ಉದ್ದೇಶವನ್ನು ತಪ್ಪಾಗಿ ಭಾವಿಸಿದಂತೆ ಹೇಳಿದ:

"ಅಲ್ಲ, ನಾನು ಕೇಳಿದೆ ಅಷ್ಟೆ."

"ಇಲ್ಲಿ ಕೇಳಿ ಶಂಕರ ಪಿಳ್ಳೆ, ಅವರು ಇಬ್ಬರು ಮೂವರು ಸಹಾಯ ಮಾಡಿ ಅಂತ ಬಂದರು. ನಾನು ಅವರ ಜೊತೆಯಲ್ಲಿ ಹೋಗಿದ್ದೆ. ಅದನ್ನು ಮಾಡಿಸಿಕೊಟ್ಟೆ ಅಷ್ಟೆ. ಪ್ರತಿಫಲ ಆಶೆಪಟ್ಟಲ್ಲ ಹೋಗಿದ್ದದ್ದು. ಒಂದು ಸಹಾಯ ಆಗಲಿ ಅಂತ. ಈ ಉದ್ಯೋಗಸ್ಥರ ಹತ್ತಿರ ಹೋದಾಗ ಏನಾದರೂ ಕೆಲಸ ಆದೀತಾ? ಒಂದು ಕಾಗದ ಕಳಿಸಿದರೆ ನೇರವಾದ ಮಾರ್ಗದಲ್ಲಿ ಏನಾದರೂ ನಡೆಯುಬಹುದಾ? ಈಚೆ ತುದಿ ಯಿಂದ ಆಚೆ ತುದಿಯ ವರೆಗೆ ಹಾಗೆ. ಹಾಗಿರುವಾಗ ಆದರ್ಶ ಹೇಳಿಕೊಂಡಿದ್ದರೆ ಒಂದು ಕೆಲಸವೂ ನಡೆಯೋದಿಲ್ಲ. ಲೋಕವೇ ಹಾಗೆ."

ಸ್ವಲ್ಪ ಉಸಿರಾಡಿ ಇಳಯುದು ಹೇಳಿದ: "ಆದರೆ ನನಗೆ ಯಾವ ಉಪಕಾರವೂ ಆಗಿಲ್ಲ ಅಂತ ಹೇಳೋದಕ್ಕೆ ಸಾಧ್ಯವಿಲ್ಲ. ಐವತ್ತು ರೂಪಾಯಿಗೆ ಕೆಲಸ ಮಾಡಿಸಿ

ಕೊಡ್ತೀನಿ ಅಂತ ಹೇಳಿದ್ದು ಯಾಕೆ? ಹಾಗೆ ನನ್ನ ಮೇಲಿರೋ ಪ್ರೀತಿಯಿಂದ ಅಂತ ಭಾವಿಸೋದು ಬೇಡ. ನಾನು ಎಷ್ಟೋ ಸಲ ಜೈಲಿಗೆ ಹೋದದ್ದರಿಂದಾಗಲೀ ಲಾಕಪ್ಪಿನಲ್ಲಿದ್ದುಕೊಂಡು ಹೊಡೆತ ತಿಂದದ್ದರಿಂದಾಗಲೀ ಅಲ್ಲ. ನನ್ನ ಕಾರಣದಿಂದ ಎಷ್ಟೋ ಹಣ ಸಿಕ್ಕಿತು. ಆ ರೀತಿಯಲ್ಲಿ ಆದರೆ ನಾನು ಅದರಲ್ಲಿ ಪಾಲುಗೋಡೆ ಅಂತ ಭಾವಿಸಿ ಶಂಕರ ಪಿಳ್ಳೈ."

ಇಳಯಿದಂ ಒಮ್ಮೆ ನಕ್ಕ. ಶಂಕರ ಪಿಳ್ಳೈಗೆ ನಗು ಬರಲಿಲ್ಲ. ಅವನು ತನ್ನ ದೈನ್ಯಾವಸ್ಥೆಯನ್ನು ವಿವರಿಸಿದ.

"ಎಪ್ಪತ್ತೈದು ರೂಪಾಯಿ ಹೋಗಲಿ. ಎಪ್ಪತ್ತೈದು ಪೈಸೆ ನನ್ನ ಹತ್ತಿರ ಇಲ್ಲ. ಆದರೆ ನಾನು ಕಷ್ಟಪಟ್ಟವನು. ನನಗೆ ಸಿಕ್ಕುತ್ತೋ ಇಲ್ಲವೋ ಅಂತ ಒಮ್ಮೆ ನೋಡೋಣ. ಇಲ್ಲದ್ದೇ ಇದ್ದರೆ ಬೇಡ."

ಪಾಪ, ಇಳಯದನಿಗೆ ಏನು ಹೇಳುವುದಕ್ಕೂ ತೋರಲಿಲ್ಲ. ಶಂಕರ ಪಿಳ್ಳೈ ಏನೋ ಹೇಳಿಕೊಂಡಿದ್ದ. ಅದಕ್ಕೆ ಇಳಯದು ಏನು ಹೇಳಿಯಾನು? ಶಂಕರ ಪಿಳ್ಳೈಗೆ ಭೂಮಿಯನ್ನು ಹಂಚಿ ಕೊಡುವುದರಲ್ಲಿ ಇಳಯದನಿಗೆ ಸಂತೋಷವೇ ಇದೆ.

ಬಂದು ಸ್ವಲ್ಪ ಹೊತ್ತಾಯಿತು. ಹಾಗೆ ಅಲ್ಲಿ ಕುಳಿತರೆ ಕುಳಿತೇ ಇರಬೇಕಾಗುತ್ತದೆ. ಸಂಜೆಗೆ ಮೊದಲು ಶಂಕರ ಪಿಳ್ಳೈ ಮನೆಗೆ ಹೋಗಬೇಕು. ಪ್ರೆಸಿಡೆಂಟರ ರೂಮಿಗೆ ಒಮ್ಮೆ ಹೋಗಬೇಕು ಎಂದು ಶಂಕರ ಪಿಳ್ಳೈ ತೀರ್ಮಾನಿಸಿದ. ಇಳಯದು ಅಗತ್ಯ ಬಂದರೆ ಅಂದು ಉಳಿದುಕೊಳ್ಳುವುದಕ್ಕೆ ತಯಾರಾಗಿ ಬಂದದ್ದು. ಪ್ರೆಸಿಡೆಂಟನ್ನು ಅನುಕೂಲವಾಗಿ ಕಾಣುವುದು ಕಾರ್ಯಸಾಧನೆಗೆ ಒಳ್ಳೆಯದೆಂದು ಅವನಿಗೆ ಗೊತ್ತು. ಶಂಕರ ಪಿಳ್ಳೈ ಹೋಗಿ ಏನಾದರೂ ಜಗಳ ಮಾಡಿಕೊಳ್ಳುತ್ತಾನೋ ಎಂದು ಭಯಪಟ್ಟಹಾಗಿತ್ತು, ಶಂಕರ ಪಿಳ್ಳೈಯ ಸ್ಥಿತಿ.

ಇಳಯದು ಕೇಳಿದ: "ಈಗ ಹೋಗಬೇಕಾ ಶಂಕರ ಪಿಳ್ಳೈ? ಜನ ಕಡಿಮೆಯಾದ ಮೇಲೆ ಸಾಲದಾ?"

"ಇಲ್ಲಿ ಜನ ಕಡಿಮೆಯಾಗೋ ಹಾಗೆ ಕಾಣೋದಿಲ್ಲ. ಯಾವಾಗಲಾದರೂ ಕಾಣಲೇಬೇಕಲ್ಲ. ಅದಕ್ಕೆ ಈಗಲೇ ಆಗಲಿ."

ಶಂಕರ ಪಿಳ್ಳೈ ಹೆಚ್ಚೇನೂ ಹೇಳದೆ ಮಾಳಿಗೆಯ ಮೆಟ್ಟಲನ್ನು ಹತ್ತಿದ. ಪ್ರೆಸಿಡೆಂಟ್ ಕೆಲಸದಲ್ಲಿ ಮಗ್ನರಾಗಿದ್ದರು. ಮೇಜಿನ ಸುತ್ತ ಇದ್ದ ಕುರ್ಚಿಗಳಲ್ಲಿ ನಾಲ್ಕೈದು ಮಂದಿ ಗಣ್ಯ ವ್ಯಕ್ತಿಗಳು ಕುಳಿತಿದ್ದರು. ಅವರ ಹಿಂದೆ ಕೆಲವರು ನಿಂತಿದ್ದರು. ತನ್ನ ಕೊಳಕಾದ ಗಾಂಧಿ ಟೋಪಿಯನ್ನು ಬಾಗಿಲಿನ ಹತ್ತಿರ ಬಂದಾಗ ತೆಗೆದು ತಲೆಯ ಮೇಲಿಟ್ಟುಕೊಂಡ. ಸರಿಯಾದ ಕಾಂಗ್ರೆಸ್ಸಿನವನಂತೆ ಅಧ್ಯಕ್ಷರ ಮುಂದೆ ಹೋಗಿ ನಿಂತುಕೊಳ್ಳಬೇಕೆಂದು.

ಶಂಕರ ಪಿಳ್ಳೈ ಹೋದಾಗ ಪ್ರೆಸಿಡೆಂಟನ್ನುಳಿದು ಎಲ್ಲರೂ ಶಂಕರ ಪಿಳ್ಳೈಯ ಕಡೆಗೆ ನೋಡಿದರು. ಅವನೊಬ್ಬ ಸ್ವಾತಂತ್ರ್ಯ ಸಮರದಲ್ಲಿ ನೊಂದವನು. ಪ್ರೆಸಿಡೆಂಟ್

ಒಂದು ಅರ್ಜಿಯಲ್ಲಿ ಅವರ ಅಭಿಪ್ರಾಯವನ್ನು ಬರೆಯುತ್ತಿದ್ದರು.

ಸ್ವಲ್ಪ ಹೊತ್ತು ಕಳೆದ ಮೇಲೆ ಪ್ರೆಸಿಡೆಂಟ್ ತಲೆ ಎತ್ತಿ ನೋಡಿದ್ದು. ಶಂಕರ ಪಿಳ್ಳೆ ಕೈಮುಗಿಯುತ್ತ ಹೇಳಿದ: "ಜೈ ಹಿಂದ್ !"

ಪ್ರೆಸಿಡೆಂಟ್ ಪ್ರತಿಯಾಗಿ ನಮಸ್ಕರಿಸಲಿಲ್ಲ. 'ಜೈ ಹಿಂದ್' ಎನ್ನುವುದಕ್ಕೆ ಅವರಿಗೆ ಸಂಕೋಚವಾದಂತೆ ತೋರಿತು. ಬಹುಶಃ ಒಮ್ಮೆಯೂ ಆ ವಾಕ್ಯವನ್ನು ಉಚ್ಚರಿಸುವುದಕ್ಕಾಗಿ ಆ ಮನುಷ್ಯನ ನಾಲಗೆ ಪಳಗದೇ ಇರಬಹುದು.

ಶಂಕರ ಪಿಳ್ಳೆ ಮೇಜಿನ ಸಮೀಪಕ್ಕೆ ಹೋದ. ಅವರಿಗೆ ಶಂಕರ ಪಿಳ್ಳೆ ಗೊತ್ತಾಗಲಿಲ್ಲ. ಆದರಿಂದ ಶಂಕರ ಪಿಳ್ಳೆಗೆ ಬೇಸರವುಂಟಾಗಲಿಲ್ಲ. ಶಂಕರ ಪಿಳ್ಳೆ ಸ್ವತಃ ಪರಿಚಯ ಮಾಡಿಕೊಂಡ. "ನಾನು ಮೀನಚ್ಚಿಲ್ಲಿರುವ ಒಬ್ಬಾತ. ನೊಂದವನು. ಕಾಂಗ್ರೆಸ್ ಆರಂಭಕಾಲದಿಂದ ಒಬ್ಬ ಚಳವಳಿಗಾರನಾಗಿದ್ದೆ. ಹದಿನೇಳು ಸಲ ಜೈಲಿಗೆ ಹೋಗಿದ್ದೇನೆ. ಏಟು ತಿಂದುದರ ಫಲವಾಗಿ ಒಂಬತ್ತು ಸಲ ಆಸ್ಪತ್ರೆಯಲ್ಲಿ ಮಲಗಿದ್ದೇನೆ. ಹೆಸರು ಶಂಕರ ಪಿಳ್ಳೆ."

ಒಂದೇ ಉಸುರಿಗೆ ಶಂಕರ ಪಿಳ್ಳೆ ಹೇಳುತ್ತಿದ್ದ. ಹೇಳಬೇಕಾದದ್ದನ್ನೆಲ್ಲ ಹೇಳಬೇಕಾಗಿತ್ತು.

ಪ್ರೆಸಿಡೆಂಟ್ ಕೇಳಿದರು: "ಅರ್ಜಿ ಕೊಟ್ಟಿದ್ದೀರಾ?"

"ಕೊಟ್ಟಿದ್ದೇನೆ. ಮೊದಲೇ ಕೊಟ್ಟಿದ್ದೇನೆ. ಪಾಲಾದಲ್ಲಿ ತಮ್ಮನ್ನು ಒಂದು ಸಲ ಕಂಡು ಮಾತಾಡಿದೆ."

ಪ್ರೆಸಿಡೆಂಟ್‌ಗೆ ನೆನಪಾಯಿತು. ಅವರು ಹೇಳಿದರು: "ಸರಿ, ಸರಿ. ನೆನಪಾಯ್ತು. ನಿಮ್ಮ ತಮ್ಮ ಒಬ್ಬ ಕಮ್ಯೂನಿಸ್ಟ್ ಅಲ್ಲವಾ?"

"ಹೌದು."

ಆಗ ಅಲ್ಲಿದ್ದವರಿಗೆಲ್ಲ ಕುತೂಹಲವುಂಟಾಯಿತು. ಅವರು ಶಂಕರ ಪಿಳ್ಳೆಯನ್ನು ಸೂಕ್ಷ್ಮವಾಗಿ ನೋಡಿದರು. ಅಲ್ಲಿಯ ವರೆಗೆ ಒಬ್ಬ ಕಮ್ಯುನಿಸ್ಟನನ್ನು ನೋಡಿಲ್ಲ. ಕಮ್ಯುನಿಸ್ಟ್ ಪಾರ್ಟಿಯ ಮನುಷ್ಯ ಎದುರಿಗಿದ್ದಾನೆ. ಕುತೂಹಲವುಂಟು ಮಾಡುವ ಮನುಷ್ಯನಲ್ಲವೇ ಆತ?

ಪ್ರೆಸಿಡೆಂಟ್ ಅಸಹಾಯಕರಾಗಿ ಹೇಳಿದರು: "ಈಗ ನಾನೇನು ಮಾಡಬೇಕು? ನಿಮಗೆ ಸಹಾಯ ಮಾಡಬೇಕು ಅನ್ನಿಸುತ್ತೆ. ಏನು ಮಾಡುವುದು?"

ಶಂಕರ ಪಿಳ್ಳೆ ಹೇಳಿದ: "ನಾನು ಅವನನ್ನು ಮನೆಯಿಂದ ಓಡಿಸಿದೆ." ಆ ಮಾತು ನಾಲಿಗೆಯಿಂದ ಹೊರ ಬಿದ್ದಾಗ ಶಂಕರ ಪಿಳ್ಳೆಯ ಹೃದಯಕ್ಕೆ ಬೆಂಕಿ ಸುರಿದ ಹಾಗಾಯಿತು.

ಪ್ರೆಸಿಡೆಂಟ್ ತನ್ನ ನಿಸ್ಸಹಾಯಕತೆಯನ್ನು ಪುನಃ ತಿಳಿಸಿದರು: "ನೀವು ತಪ್ಪು ಭಾವಿಸಬೇಡಿ. ನಾನು ನಿಮಗೆ ವಿರೋಧಿಯಲ್ಲ."

"ಆ ವಿಶ್ವಾಸದಿಂದಲೇ ನಾನು ಬಂದದ್ದು."

ಪ್ರೆಸಿಡೆಂಟ್ ಹೇಳಿದರು: "ನಿಮ್ಮ ಅರ್ಜೀನ ನಾನು ಶಿಫಾರಸ್ ಮಾಡಿ ಕಳಿಸ್ತೀನಿ. ಆದರೆ ಅಷ್ಟಾದರೆ ಸಾಲದು. ಪೋಲೀಸಿನವರು ಬಂದು ಅನ್ವೇಷಣೆ ಮಾಡಿದಾಗ ನಿಮ್ಮ ತಮ್ಮ ಕಮ್ಯುನಿಸ್ಟ್ ಅಂತ ಬರೀತಾರೆ. ಇಲ್ಲಿ ನೋಡಿ. ನಿನ್ನೆಯೂ ಆತ ಭಾಷಣ ಮಾಡಿದ್ದಾನೆ—ಮಂತ್ರಿಗಳು ಮತ್ತಿತರರ ರಕ್ತದ ಬೊಟ್ಟನ್ನು ಹಣೆಗಿಟ್ಟುಕೊಳ್ಳಬೇಕು ಅಂತ."

ಶಂಕರ ಪಿಳ್ಳೆ ಆಶ್ಚರ್ಯದಿಂದ ಕೇಳಿದ: "ಪೋಲೀಸ್ ರಿಪೋರ್ಟ್ರಾ!"

ಪ್ರೆಸಿಡೆಂಟ್ ಉತ್ತರಿಸಿದರು: "ಹೌದು. ಈ ಅರ್ಜಿ ಪೋಲೀಸ್ ರಿಪೋರ್ಟಿಗೆ ಕಳಿಸ್ತಾರೆ. ಅವರು ಬಂದು ಅನ್ವೇಷಣೆ ಮಾಡ್ತಾರೆ. ಆಗ ನಿಮ್ಮ ತಮ್ಮನ ವಿಚಾರವಾಗಿ ಬರೀತಾರೆ. ಇಲ್ಲಿಂದ ಕಳಿಸುವ ರಿಪೋರ್ಟೂ. ಅವರ ಅನ್ವೇಷಣೆಯ ರಿಪೋರ್ಟ್. ಎರಡೂ ವ್ಯತ್ಯಾಸವಿರುವುದು ಸರಿಯೊ?"

ಶಂಕರ ಪಿಳ್ಳೆ ಬೇಸರ, ನಿರಾಶೆ, ದ್ವೇಷದಿಂದ ಕೇಳಿದ:

"ಇನ್ನು ಮೇಲೂ ನಮ್ಮನ್ನು ಕುರಿತು ಪೋಲೀಸ್ ರಿಪೋರ್ಟೂ, ಸಿ. ಐ. ಡಿ. ರಿಪೋರ್ಟೂ ಇವೆ ಅಂತಲೇ?"

ಪ್ರೆಸಿಡೆಂಟಿಗೆ ಆ ಪ್ರಶ್ನೆಯಲ್ಲಿ ಅಡಗಿದ್ದ ವೇದನೆ ಸರಿಯಾಗಿ ತಿಳಿಯಲು ಸಾಧ್ಯವಾಗಲಿಲ್ಲ. ಎಂದರೆ ಪೋಲೀಸ್ ಅನ್ವೇಷಣೆ, ಸಿ. ಐ. ಡಿ. ರಿಪೋರ್ಟ್ ಎಂದೆಲ್ಲ ಹೇಳುವುದು ಏನೆಂದು ಅವರಿಗೆ ನಿಶ್ಚಯವಿಲ್ಲ. ಆತ ಚಳುವಳಿಯ ಕಾಲದಲ್ಲಿ ಯಾವುದನ್ನೂ ಅನುಭವಿಸಿದ ಮನುಷ್ಯನಲ್ಲ. ಅವರು ಹೇಳಿದರು: "ಸರ್ಕಾರದ ಕೆಲಸ ಅಲ್ಲವೇ? ಅದಕ್ಕೆ ಕೆಲವು ಸಂಪ್ರದಾಯಗಳಿವೆ."

"ಹಾಗಾದರೆ ಆ ಸಂಪ್ರದಾಯಗಳು ಈಗಲೂ ಈ ಕೆಲಸದಲ್ಲೂ ಬೇಕಾ?" ಸ್ವಲ್ಪ ಸಿಟ್ಟಿನಿಂದಲೇ ಕೇಳಿದ ಪ್ರಶ್ನೆ ಅದು. ಪ್ರೆಸಿಡೆಂಟ್ ಶಂಕರ ಪಿಳ್ಳೆಯನ್ನು ಸೂಕ್ಷ್ಮವಾಗಿ ನೋಡಿದರು. ಅವರು ಕೇಳಿದರು: "ನೀವು ವಾದಿಸೋದಕ್ಕೆ ಬಂದಿದ್ದೀರಾ?"

ಶಂಕರ ಪಿಳ್ಳೆ ಬಿಡಲಿಲ್ಲ. "ಹೌದು, ಹಾಗೇ ಅಂದುಕೊಳ್ಳಿ. ನನ್ನ ವಿಷಯ ಹೇಳೋದಕ್ಕೆ ನಾನಲ್ಲದೆ ಬೇರೆ ಜನರಿಲ್ಲ. ನನಗೆ ಲಂಚ ಕೊಡೋದಕ್ಕೆ ಶಕ್ತಿಯಿಲ್ಲ. ಶಿಫಾರಸ್ಸಿಗೂ ಜನರಿಲ್ಲ." ಒಂದು ಕ್ಷಣ ಕಳೆದು ಶಂಕರ ಪಿಳ್ಳೆ ಉಸಿರು ಬಿಟ್ಟು ಹೇಳಿದ: "ಅದ್ಯಾವುದನ್ನೂ ಇಲ್ಲದ ಹಾಗೆ ಮಾಡುವುದಕ್ಕೆ ನಾನೂ ನನ್ನ ಹಾಗೆ ಆರೋಗ್ಯವಿರುವ ಶರೀರವೂ ಒಳ್ಳೆಯ ಮನಸ್ಸೂ ಇರುವ ಎಷ್ಟೋ ಜನರು ಬದುಕನ್ನೆಲ್ಲ ಹಾಳು ಮಾಡಿಕೊಂಡು ಇಂದು ಈ ರೀತಿ ಕೆಮ್ಮಿ ಕೆಮ್ಮಿ ಬದುಕುವ ಸ್ಥಿತಿಗೆ ಬಂದದ್ದು. ಅದಕ್ಕೆ ಆ ಸಂಪ್ರದಾಯಗಳು ಬೇಕಾ ಅಂತ ಕೇಳಿದ್ದು."

ಪ್ರೆಸಿಡೆಂಟ್ ಗೌರವವಾಗಿ ಹೇಳಿದರು: "ಅದನ್ನೆಲ್ಲ ನೀವು ಕೇಳೋ ಕಡೆ ಕೇಳಬೇಕು. ಇಲ್ಲಿ ಅಲ್ಲ ಕೇಳಬೇಕಾದದ್ದು."

ತುಂಬ ತಿರಸ್ಕಾರದಿಂದ ತುಟಿಯನ್ನು ಕೂಡಿಸಿ ಶಂಕರ ಪಿಳ್ಳೆ ಮಾರುತ್ತರ ಕೊಟ್ಟ: "ಹೌದು. ನಿಮಗೆ ಹಾಗೆ ನಾನು ಹೇಳಬೇಕು ಅಷ್ಟೆ. ಇದಕ್ಕಾಗಿ ಕಷ್ಟಪಟ್ಟು ಒಂದು ಹನಿ ಬೆವರು ಕೂಡ ನಿಮ್ಮ ಶರೀರದಿಂದ ಬಿದ್ದಿಲ್ಲ. ಈಗ ಈ ಅಧಿಕಾರ ಮಂಡಲ ಉಂಟಾದಾಗ ಅದರೊಳಕ್ಕೆ ನೀವು ಬಂದು ಹೊಕ್ಕಿರಿ."

ಆ ಮಾತು ಹೆಚ್ಚಾಯಿತು. ಪ್ರೆಸಿಡೆಂಟಿಗೆ ಸಹಿಸುವುದಕ್ಕೆ ಸಾಧ್ಯವಿರಲಿಲ್ಲ. ಅವರು ಕುರ್ಚಿಯನ್ನು ಹಿಂದಕ್ಕೆ ನೂಕಿ ಮೇಲೆದ್ದರು. "ಛಿ. ನಡೆಯೋ ಆಚೆ !"

ಅಲ್ಲಿದ್ದವರೆಲ್ಲರೂ ಅವರ ಜೊತೆಗೆ ಸೇರಿಕೊಳ್ಳುವುದಕ್ಕೆ ಸಿದ್ಧರಾದರು. ಶಂಕರ ಪಿಳ್ಳೆ ಹೇಳಿದ:

"ನೀವು ಶಾಪ್ರ ಕಂಟ್ರಾಕ್ಟರ್ ಆಗಿದ್ದ ಕಾಲದಲ್ಲಿ ಗೂಂಡಾಗಳಿಂದ ಸಭೆ ಚದುರಿಸಿದ್ದವರು. ನೀವು ಈಗಲೂ ಜನರನ್ನು ಕರಿಯಬಹುದು—ಅಂತ ನನಗೆ ಗೊತ್ತು."

ಅಲ್ಲಿ ಕುಳಿತಿದ್ದವನೊಬ್ಬ ಶಂಕರ ಪಿಳ್ಳೆಗೆ 'ಇವನೊಬ್ಬ ಕಮ್ಯುನಿಸ್ಟ್' ಎಂದ. ಶಂಕರ ಪಿಳ್ಳೆ ಆ ಮನುಷ್ಯನ ಕಡೆಗೆ ತಿರುಗಿದ. "ನೀವೂ ನನ್ನ ಹಾಗೆ ಯಾತನೆ ಅನುಭವಿಸಿದವರಾ?"

ಆ ಮನುಷ್ಯ ಧರಿಸಿದ್ದದ್ದು ಖಾದಿ ವಸ್ತ್ರ. ಆತನ ಮುಖ ಬಿಳುಚಿಕೊಂಡಿತು.

ಶಂಕರ ಪಿಳ್ಳೆ ಕೇಳಿದ: "ನೀವು ಜೈಲಿಗೆ ಹೋಗಿದ್ದೀರಾ? ಏಟು ತಿಂದಿದ್ದೀರಾ? ನೀವು ಏನು ಮಾಡಿದ್ದೀರಿ?"

ತನಗೆ ಉತ್ತರ ಹೇಳುವುದಕ್ಕೆ ಹಕ್ಕಿದೆಯೆಂದು ಆತನಿಗೆ ತೋರಿತು.

"ನಾನು ಕೆಲವು ಸಲ ಹೋಗಿದ್ದುಂಟು."

ಶಂಕರ ಪಿಳ್ಳೆ ಹೇಳಿದ: "ಓಹೋ !"

ಪ್ರೆಸಿಡೆಂಟ್ ಶಂಕರ ಪಿಳ್ಳೆಯ ಹತ್ತಿರ ಹೊರಟುಹೋಗುವಂತೆ ಹೇಳಿದರು.

"ನೀವು ಇಲ್ಲಿ ಬಂದು ಹೀಗೆ ಗಲಾಟೆ ಮಾಡಿದರೆ......... ನಾನು ಪೋಲೀಸಿನವರನ್ನು ಕರೆಯಬೇಕಾಗುತ್ತೆ; ಹೇಳಿದ್ದೀನಿ."

ಶಂಕರ ಪಿಳ್ಳೆಗೆ ಸ್ವಲ್ಪವೂ ಹೆದರಿಕೆ ಬರಲಿಲ್ಲ.

"ಅದನ್ನು ಕೂಡ ಮಾಡಿ. ಆಗ ಎಲ್ಲ ಪೂರ್ತಿಯಾಗುತ್ತೆ. ಆಗ ನನ್ನ ಐದು ಎಕರೆ ಕೂಡ ಕಾಂಗ್ರೆಸ್ಸಿನ ಮರೆಯಲ್ಲಿರುವವರಿಗೆ ಕೊಡಬಹುದು."

ಶಂಕರ ಪಿಳ್ಳೆಯ ಉಸಿರಾಟದ ಗತಿ ಹೆಚ್ಚಿತು. ಕ್ಷೋಭೆಯನ್ನು ಸಹಿಸಲು ಆತನಿಗೆ ಶಕ್ತಿಯಿರಲಿಲ್ಲ. ಆತ ಹೇಳಿದ—

"ನೀವು ಪೋಲೀಸಿನವರನ್ನೇನೂ ಕರೆಯಬೇಡಿ. ನಾನೇ ಹೋಗ್ತೀನಿ. ಒಂದು ವಿಷಯ ನಿಮ್ಮ ಹತ್ರ ಹೇಳೋದಿದೆ. ನಾನು ಕಮ್ಯುನಿಸ್ಟ್ ಅಲ್ಲ. ನನಗೆ ಕಮ್ಯುನಿಸ್ಟ್ ಆಗೋದಕ್ಕೆ ಸಾಧ್ಯವೂ ಇಲ್ಲ."

ಶಂಕರ ಪಿಳ್ಳೆ ಅಲ್ಲಿಂದ ಹೊರಟ. ಬಾಗಿಲಿನ ಹತ್ತಿರ ಹೋದಾಗ ಏನೋ ಹೇಳುವುದಕ್ಕಾಗಿ ಆತ ಹಿಂದಿರುಗಿ ನೋಡಿದ.

ಆಗ ಪ್ರೆಸಿಡೆಂಟ್ ಹೇಳಿದರು:

"ನೀನು ಎಚ್ಚರಿಕೆಯಿಂದ ಇರಬೇಕು. ಗೊತ್ತಾಯ್ತಾ?"

ಒಂದು ಅನಾಸ್ಥೆಯಿಂದ ಶಂಕರ ಪಿಳ್ಳೆ ಹೇಳಿದ:

"ಯಾಕೆ ಜಾಗ್ರತೆಯಿಂದ ಇರಬೇಕು ಇಷ್ಟಾದ ಮೇಲೆ?"

ಜೀವನದಲ್ಲಿ ದಿಕ್ಕುಗಾಣದೆ ಆ ಮನುಷ್ಯ ಕೆಲವಾರು ನಿಮಿಷಗಳಲ್ಲಿ ಕಳೆದುಹೋದ ಜೀವನದ ಬೆಲೆಯೇನು ಎಂದು ಯೋಚಿಸಿದ. ಜೀವಿಸುವುದಕ್ಕೆ ಮಾರ್ಗವಿಲ್ಲ ಎನ್ನುವುದು ಹೋಗಲಿ. ಈಗಲೂ ಭಯ ಹಿಂಬಾಲಿಸುತ್ತಿದೆ. ಇಲ್ಲದಿದ್ದರೆ ಇವರನ್ನೆಲ್ಲ ದೂರಬೇಕಾಗಿತ್ತೇ ಎಂದು ಆತ ಆಲೋಚಿಸಿದ. ಅವರೆಲ್ಲ ಏನು ತಪ್ಪು ಮಾಡಿದರು— ಜೀವನವೆಲ್ಲ ತೀವ್ರವಾದ ಒಂದು ಸ್ಪರ್ಧೆ. ಸಂದರ್ಭಗಳನ್ನು ಹಾಳು ಮಾಡದವರು ಸಮರ್ಥರು. ರಾಜ್ಯದ ಸ್ವಾತಂತ್ರ್ಯಕ್ಕೋಸ್ಕರ ಕಷ್ಟಪಟ್ಟರು. ಅಂದು ಈ ಐದು ಎಕರೆ ಭೂಮಿ ಸಿಕ್ಕುತ್ತದೆ ಎಂದು ಭಾವಿಸಿ ಅದಕ್ಕೆ ಪ್ರವೇಶಿಸಿದ್ದೇ? ಏನಾದರೂ ಲಾಭ ಮಾಡಬೇಕು ಅಂತಲೆ? ಅದು ಹೃದಯದ ಕರೆಯಾಗಿತ್ತು. ಪ್ರತಿಯಾಗಿ ಏನನ್ನಾದರೂ ಸಂಪಾದಿಸಬೇಕು ಎಂದಲ್ಲ. ಅವನು ತನ್ನ ಕರ್ತವ್ಯ ಮಾಡಿದ. ಕಾಂಗ್ರೆಸ್ ಚಳುವಳಿ ಹೂಡಿದ್ದು ಕಾಂಗ್ರೆಸ್ ಮುಂದಾಳುಗಳಿಗಾಗಿ ಮತ್ತು ಹೋರಾಟಗಾರರಿಗಾಗಿ ಮಾತ್ರವೇ? ರಾಜ್ಯವನ್ನೆಲ್ಲ ಅವರು ವಶಪಡಿಸಿಕೊಳ್ಳಬೇಕು ಎಂತಲೇ?

ಈ ಪ್ರೆಸಿಡೆಂಟೂ ಅಲ್ಲಿಗೆ ಬಂದವರೂ ಎಲ್ಲ ಈ ದೇಶದ ಜನರು—ಪ್ರತ್ಯೇಕವಾದ ಪರಿಗಣನೆಯನ್ನು ಬಯಸುತ್ತಿದ್ದಾರೆ. ಈ ಪರಿಶುದ್ಧವಾದ ಟೋಪಿಗೂ ಉಟ್ಟಿರುವ ವಸ್ತ್ರಕ್ಕೂ ತೋರಿಸುವ ಅನೀತಿಯಲ್ಲವೇ ಇದು? ಚಳುವಳಿಯಲ್ಲಿ ಭಾಗವಹಿಸಿದವರು ಒಂದು ಪ್ರತ್ಯೇಕ ಪರಿಗಣನೆಯನ್ನು ಪಡೆಯುವ ವರ್ಗವಾಗಿ ಬದಲಾಯಿಸಬೇಕೇ? ಸ್ವಾತಂತ್ರ್ಯ ಈ ಮಣ್ಣಿನ ಮಕ್ಕಳಿಗುಳ್ಳದ್ದು. ಅದಕ್ಕಾಗಿ ಕಷ್ಟಪಟ್ಟವನಿಗೆ ಮಾತ್ರ ಇರುವುದಲ್ಲ. ಎದುರಿಸಿದವನೂ ಅದರ ಫಲದ ಹಕ್ಕನ್ನು ಅನುಭವಿಸಬಹುದು. ತಾನು ಹೇಳಿದ್ದೆಲ್ಲ ತಪ್ಪಾಗಿ ಹೋಯಿತು ಎಂದು ಶಂಕರ ಪಿಳ್ಳೆಗೆ ತೋರಿತು.

ಸ್ವಲ್ಪ ದೂರ ನಡೆದು ಶಂಕರ ಪಿಳ್ಳೆ ಹಿಂದಿರುಗಿ ನೋಡಿದ. ಕಾಂಗ್ರೆಸ್ಸಿನ ಆಫೀಸಿನ ತುದಿಯಲ್ಲಿ ತ್ರಿವರ್ಣ ಧ್ವಜ ಗಾಳಿಗೆ ಹಾರಾಡುತ್ತಿತ್ತು. ಅದೇ ಧ್ವಜವನ್ನು ತಾನು ಹಿಡಿದುಕೊಂಡು ನಡೆದಾಡಿದುದು. ಆದರೆ ಆ ಧ್ವಜಕ್ಕೆ ಬಣ್ಣದಲ್ಲಿ ಸ್ವಲ್ಪ ವ್ಯತ್ಯಾಸ ಇದ್ದಂತೆ ತೋರಿತು.

ಶಂಕರ ಪಿಳ್ಳೆಗೆ ಚಂದ್ರನನ್ನು ಎಲ್ಲಿದ್ದರೂ ಹುಡುಕಿ ಕಂಡುಹಿಡಿಯ ಬೇಕು ಎನ್ನಿಸಿತು. ತಾನೊಬ್ಬ ಕಮ್ಯುನಿಸ್ಟ್ ಆಗುವುದಕ್ಕಾಗಿ ಅಲ್ಲ. ಸಹೋದರ ಸಂಬಂಧವನ್ನು

ಉಳಿಸಿಕೊಳ್ಳುವುದಕ್ಕಾಗಿ. ಅವನ ಗಟ್ಟಿಯಾದ, ಕರ್ಣಕಠೋರವಾದ ಘರ್ಜನೆ ಈಗಲೂ ಕಿವಿಯಲ್ಲಿ ಮೊಳಗುತ್ತಿದ್ದಂತೆ ಶಂಕರ ಪಿಳ್ಳೆಗೆ ತೋರಿತು:

"ಇಂಕ್ವಿಲಾಬ್—ಜಿಂದಾಬಾದ್."

ಒಂದು ಕಾಲದಲ್ಲಿ ತಾನೂ ಗಟ್ಟಿಯಾಗಿ ಒಂದು ಘೋಷಣೆಯ ವಾಕ್ಯವನ್ನು ಉಚ್ಚರಿಸಿಲ್ಲವೆ? ಅಂದು ಅದು ಎಷ್ಟೋ ಜನರಿಗೆ ಕರ್ಣಕಠೋರವಾಗಿತ್ತು.

ಶಂಕರ ಪಿಳ್ಳೆ ನಡೆಯುತ್ತಾ ನಡೆಯುತ್ತಾ ಮುಂದೆ ಸಾಗಿದ. ಪ್ರೆಸಿಡೆಂಟರ ಕೊಠಡಿಯಲ್ಲಿ ಅಲ್ಲಿದ್ದವರೊಡನೆ ಪ್ರೆಸಿಡೆಂಟ್ ಹೇಳಿದರು: "ಏನೆಲ್ಲ ಕಷ್ಟ ಬರುತ್ತೇಂತ ನೋಡಬೇಕೋ. ಏನೆಲ್ಲಾ ಕೇಳಬೇಕಾಗಿದೆಯೋ."

ಅಲ್ಲಿದ್ದವನೊಬ್ಬ ಸಹಾನುಭೂತಿಯಿಂದ ಹೇಳಿದ: "ಪಾಪ! ಆ ಮನುಷ್ಯ ತುಂಬಾ ಕಷ್ಟಪಟ್ಟಿರಬೇಕು. ಆರೋಗ್ಯವೂ ಕೆಟ್ಟುಹೋಗಿದ್ದದ್ದರಿಂದ ಅಷ್ಟು ಸಿಟ್ಟು ಬಂದಿರಬೇಕು."

ಮತ್ತೊಬ್ಬ ಹೇಳಿದ: "ನಡವಳಿಕೆ ತಿಳಿಯದವನು. ಇವನು ಹೊಡೆಸಿಕೊಂಡಿದ್ರೂ ಜೇಲಿಗೆ ಹೋಗಿದ್ರೂ ಆಶ್ಚರ್ಯವೇನಲ್ಲ."

ಮೂರನೆಯವನ ಅಭಿಪ್ರಾಯವೇ ಬೇರೆ. "ಇವನು ಹೊಡೆಸ್ಕೊಂಡಿದ್ರೂ ಅದು ಕಾಂಗ್ರೆಸ್ ಚಳವಳಿಯಿಂದಾಗಿ ಅಲ್ಲ. ನಾಲಗೆ ಹತೋಟಿಯಲ್ಲಿಟ್ಟುಕೊಳ್ಳೋದಕ್ಕಾಗದೇ ಇದ್ದದ್ದರಿಂದ."

ಆ ಮಾತನ್ನು ಕೇಳಿ ಎಲ್ಲರೂ ನಕ್ಕರು. ಪ್ರೆಸಿಡೆಂಟ್ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದು. "ಈ ಯಾತನೆ ಅನುಭವಿಸಿದವರು ಅಂತ ಹೇಳ್ಕೊಂಡು ಬರೋ ಹಳೇ ಕಾಂಗ್ರೆಸ್‌ನೋರೆಲ್ಲಾ ಇದೇ ಜಾತಿಗೆ ಸೇರಿದೋರು. ದಿಕ್ಕು ತಪ್ಪಿದವರು. ಅವರಿಗೆ ಏನೋ ಹಕ್ಕುಂಟು ಅಂತ—ನಾಲ್ಕು ಏಟು ತಿಂದದ್ದರ ಹೆಸರಿನಲ್ಲಿ. ಅವರು ಏಟು ತಿನ್ನೋದಕ್ಕೆ ಯೋಗ್ಯರು."

ಎರಡನೆಯವನು ಹೇಳಿದ: "ರೌಡಿಗಳು, ಅಪ್ರಯೋಜಕರು, ಗತಿಗೆಟ್ಟವರು ಮಾತ್ರ ಅಂದಿನ ಕಾಂಗ್ರೆಸ್‌ನವರಾಗಿದ್ರಾ? ಅಂತಸ್ತು—ಅಭಿಮಾನ ಇದ್ದ ಬಿಸಿರಕ್ತದ ಎಷ್ಟೋ ಮಂದಿ ಯುವಕರಿರಲಿಲ್ಲವೇ?"

ಅಧ್ಯಕ್ಷರ ಅಭಿಪ್ರಾಯ ಇವರೆಲ್ಲ ಕಮ್ಯೂನಿಸ್ಟರು ಎಂದು. ಆತ ಹೇಳಿದರು: "ಇವರನ್ನೆಲ್ಲ ಕೈಬಿಟ್ಟು ಪಾರ್ಟೀನ ಶುದ್ಧೀಕರಿಸಬೇಕು."

# [35]

## ಆಶ್ರಮದ ನಿಟ್ಟುಸಿರುಗಳು

ಆಶ್ರಮದಲ್ಲಿ ನಾಲ್ಕು ಮಂದಿ ಸನ್ಯಾಸಿನಿಯರಿದ್ದರು. ಪ್ರಧಾನ ವ್ಯಕ್ತಿ ಮಾತಾ ಜ್ಯೋತಿರ್ಮಯಿ ದೇವಿ. ಉಳಿದ ಮೂವರು ಪ್ರಭಾವತಿ ದೇವಿ, ನಿತ್ಯಾನಂದಮಯಿ, ತೇಜಸ್ವರೂಪಿಣಿ.

ಪೂಜೆ, ಭಜನೆ—ದಿನನಿತ್ಯದ ಕಾರ್ಯಕ್ರಮಗಳು. ಸಾಯಂಕಾಲದ ಹೊತ್ತಿನಲ್ಲಿ ಭಜನೆಗೆ ತುಂಬ ಜನರು ಬರುತ್ತಿದ್ದರು. ವಾರಕ್ಕೆ ಒಂದು ಸಲವೋ ಎರಡು ಸಲವೋ ವಿಶೇಷವಾದ ಆಧ್ಯಾತ್ಮಿಕ ಪ್ರವಚನಗಳೋ ವೇದಾಂತ ವಿಚಾರ ವಿಮರ್ಶೆಯೋ, ಅಖಂಡ ನಾಮಜಪಯಜ್ಞವೋ, ಗೀತಾ ಪ್ರವಚನವೋ—ಯಾವುದಾದರೊಂದು ಇರುತ್ತಿತ್ತು. ಸನ್ಯಾಸಿಗಳು ಆಗಾಗ ಆಶ್ರಮಕ್ಕೆ ಸಂದರ್ಶನವನ್ನು ನೀಡುತ್ತಿದ್ದರು. ಆಶ್ರಮದ ಆಶ್ರಯದಲ್ಲಿ ಧರ್ಮ ಸಮ್ಮೇಳನಗಳೂ ನಡೆದು ಬಂದಿದ್ದುವು. ಒಟ್ಟಿನಲ್ಲಿ ತಿರುವನಂತಪುರದ ನೌಕರರ, ಶ್ರೀಮಂತರ—ಕೇಂದ್ರಸ್ಥಳವಾಗಿತ್ತು ಚಿದಾನಂದಾಶ್ರಮ.

ಸ್ತೋತ್ರಗಳೂ ಭಕ್ತಿರಸದಿಂದೊಡಗೂಡಿದ ಕೀರ್ತನೆಗಳೂ ಅಲ್ಲಿಂದ ಹೊರಟು ಸುತ್ತುಮುತ್ತಿನ ಜಗತ್ತಿಗೆಲ್ಲ ಒಂದು ಆಧ್ಯಾತ್ಮಿಕ ಚೈತನ್ಯವನ್ನುಂಟುಮಾಡಿತ್ತು. ಆದರೆ ಒಳಗೆ ನಿಂತು ನೋಡುವಾಗ ಆ ದೊಡ್ಡ ಕಟ್ಟಡ ನಿಟ್ಟುಸಿರು ಬಿಡುತ್ತಿದ್ದಂತೆ ತೋರುತ್ತಿತ್ತು. ಅದು ಹಾಗಿರಬೇಕಾದದ್ದಾಗಿರಲಿಲ್ಲ ಎಂದು ಗದ್ಗದ ಸ್ವರದಲ್ಲಿ ಹೇಳುತ್ತಿದ್ದಂತಿತ್ತು. ಅದನ್ನು ಕಟ್ಟಿಸಿದ್ದು ಅದನ್ನೊಂದು ಆಶ್ರಮ ಮಾಡಬೇಕೆಂದಲ್ಲ. ಅದರ ಶಂಕುಸ್ಥಾಪನೆ ಮಾಡಿದ್ದು ಮತ್ತೊಂದಾಗಿರಬೇಕು ಎಂದು. ಆ ದಾರಿಯಲ್ಲಿ ಹೋಗುವವರು ಕೆಲವು ಸಲ ಆ ಕಥೆ ಹೇಳಿಕೊಂಡು ಹೋಗಿರಬಹುದು. ಅವರು ಹೀಗೆ ಹೇಳಿರಬಹುದು: "ಈ ಮನೆ ಕಟ್ಟಿಸಿದ್ದು ಯಾರು ಗೊತ್ತಾ? ಹೇಳ್ತೀನೆ.........." ಈ ರೀತಿ ಕಥೆಯನ್ನು ಪ್ರಾರಂಭಿಸುವುದು. ಯಾರ ಜ್ಞಾಪಕವನ್ನು ಸದಾ ಉಳಿಸಿಕೊಂಡು ಹೋಗುವುದಕ್ಕಾಗಿ ಆ ಕಟ್ಟಡಕ್ಕೆ 'ಶೇಖರ ವಿಲಾಸ' ಎಂದು ನಾಮಕರಣ ಮಾಡಿದ್ದು? ಆ ಒಳ್ಳೆಯ ಮನುಷ್ಯ ಶೇಖರ ಪಿಳ್ಳೆಯ ಆತ್ಮ ಆ ಕಟ್ಟಡದ ಇಂದಿನ ಅವಸ್ಥೆಯನ್ನು ನೋಡಿ ಸಂತುಷ್ಟಗೊಂಡೀತೆ?

ಅದೊಂದು ಮನೆಯಾಗಿರಬೇಕೆಂದು ಕಟ್ಟಿಸಿದ ಕಟ್ಟಡ. ನಿಜವಾಗಿಯೂ ಮನೆಯಾಗಿರಬೇಕು ಎಂತಲೆ? ಗಂಡಹೆಂಡತಿಗೆ—ಇಲ್ಲದಿದ್ದರೆ ಕಾಮುಕ ಕಾಮಿನಿಯರ ಸರಸಸಲ್ಲಾಪಕ್ಕಾಗಿ ಕಟ್ಟಿಸಿದ ಕೋಣೆಗಳಿವೆ. ಅಲ್ಲಿ ಒಳ್ಳೆಯ ಮಲಗುವ ಕೋಣೆಗಳಿವೆ. ಮಕ್ಕಳು ಕುಳಿತು ಓದುವುದಕ್ಕೆ—ಮುಂತಾದುವಕ್ಕೆ ಬೇಕಾದ ಕೋಣೆಗಳಿವೆ. ಅಲ್ಲಿ

ಮಕ್ಕಳೂ ಇರಬೇಕೆಂದು ಕಟ್ಟಿಸಿದ ಮನುಷ್ಯನಿಗೆ ಆ ಉದ್ದೇಶವಿತ್ತೆ? ಸಾಧಾರಣ ಮನೆಗಳಿಗಿಲ್ಲದ, ಹಾಗೂ ಆವಶ್ಯಕತೆಯಿಲ್ಲದ ಒಂದು ಅನುಕೂಲತೆಯಿದೆ. ಹಿಂದುಗಡೆಯಿಂದ ಹೊರಗೆ ಹೋಗಲೂ ಒಳಗೆ ಬರಲೂ ಒಂದು ಬಾಗಿಲಿದೆ. ಆ ಕಟ್ಟಡವನ್ನು ಕಟ್ಟಿಸಿದ ಮನುಷ್ಯ. ತನ್ನ ಅಗತ್ಯಕ್ಕೆ ಮಾಡಿಸಿಕೊಂಡದ್ದು ಅದು. ಕೇಶವ ಪಿಳ್ಳೆ ಆ ಬಾಗಿಲಿನ ಮೂಲಕವೇ ಯಾರಿಗೂ ತಿಳಿಯದಂತೆ ಬಂದು ಹೋಗುತ್ತಿದ್ದದ್ದು. ಪ್ರತಿದಿನ ಆ ಮಾರ್ಗವಾಗಿ ತಿರುಗಾಡುತ್ತಿದ್ದ ಒಂದು ಪತ್ತು ಜನರಾದರೂ ಆ ಕಥೆ ಹೇಳುತ್ತಾರೆ.

ಅದು ಒಬ್ಬ ಗಂಡ, ಹೆಂಡತಿಗೆ ಕಟ್ಟಿಸಿಕೊಟ್ಟ ಮನೆಯೆ? ಪ್ರೇಮಿ ಪ್ರೇಯಸಿಗೆ ಕಟ್ಟಿಸಿಕೊಟ್ಟ ಮನೆಯೆ? ಅಲ್ಲ; ಇಟ್ಟುಕೊಂಡವಳ ಸ್ಥಾನ ಅದರ ಯಜಮಾನಿಗೆ ದೊರೆಯುವುದು ಸರಿಯೆ?. ಅದು ಹಾಗಿರಲಿ. ಅದೊಂದು ಲಂಚವೆ? ಉಪಕಾರ ಸ್ಮರಣೆಗೆ ಕಟ್ಟಿಸಿಕೊಟ್ಟ ಸಂಭಾವನೆಯೆ? ಅದೆಲ್ಲವೂ ಆಗಿ ಅದು ಸ್ವರೂಪವನ್ನು ತಾಳಿತ್ತು. ಈಗ ಆ ಕಟ್ಟಡ ಯಾವುದು ಎನ್ನುವುದನ್ನು ಸ್ಪಷ್ಟವಾಗಿ ತಿಳಿಸಲಾಯಿತು. ಆಶ್ರಮ ! ಹಿಂದಿನ ತಂಗಮ್ಮನ ಜೀವನ, ಇಂದು ಸನ್ಯಾಸಿನಿಯ ಜೀವನವಾಗಿದೆ ಎಂದು ಹೇಳುವಂತೆ !

ಆ ಬದಲಾವಣೆ ಶ್ಲಾಘನೀಯವೆಂದು ಹೇಳುವುದುಂಟು. ಆ ಗೃಹ ಅನುಗೃಹೀತವಾಯಿತೆಂದೂ ತಂಗಮ್ಮ ಮಾತಾ ಜ್ಯೋತಿರ್ಮಯಿ ದೇವಿ ಆದದ್ದೂ ಪೂರ್ವಜನ್ಮದ ಸುಕೃತದಿಂದಾಗಿ ಎಂದೂ ನಂಬುವವರಿದ್ದಾರೆ. ಅದಲ್ಲದೆ ಹಳೆಯ ಕಥೆಯನ್ನು ಹೇಳಿಕೊಂಡು ಹೋಗುವ ದಾರಿಹೋಕರೂ ಇದ್ದಾರೆ. ಆಗಲೂ ಆ ಕಟ್ಟಡ ನಿಟ್ಟುಸಿರುಬಿಡುತ್ತಿತ್ತು. ಆ ಕಟ್ಟಡಕ್ಕೆ ಮೊದಲು ಇಟ್ಟ ಕಲ್ಲು ಬೆವರುತ್ತಿತ್ತು.

ದೇವಿ ನಿತ್ಯಾನಂದಮಯಿಗೆ "ಅಳುವ ಅಮ್ಮ" ಎನ್ನುವ ಮತ್ತೊಂದು ಹೆಸರಿತ್ತು. ಆಕೆಗೆ ಸುಮ್ಮನೆ ಆ ಹೆಸರು ಬಂದದ್ದಲ್ಲ. ಮಂತ್ರೋಚ್ಚಾರಣೆಯನ್ನು ಕೇಳುವಾಗ ಆಕೆಯ ಕಣ್ಣುಗಳಲ್ಲಿ ನೀರಾಡುತ್ತಿತ್ತು. ಭಕ್ತಿಯ ಕೀರ್ತನೆಗಳನ್ನು ಹಾಡುವಾಗ ಅವಳ ಕೆನ್ನೆಯ ಮೇಲೆ ಧಾರಾಕಾರವಾಗಿ ಕಣ್ಣೀರು ಹರಿಯುತ್ತಿತ್ತು. ಭಜನೆ ಮುಗಿದ ಮೇಲೆ ಆಕೆ ತನ್ನೆರಡು ಕೈಗಳಿಂದಲೂ ಮುಖಮುಚ್ಚಿಕೊಂಡು ಅಳತೊಡಗುತ್ತಿದ್ದಳು. ಭಜನೆಯೋ ಅಖಂಡ ನಾಮ ಜಪಯಜ್ಞವೋ ಮುಗಿದ ಮೇಲೆ ಆಕೆ ಕುಳಿತಲ್ಲಿಯೇ ಕುಳಿತು ಅಳುತ್ತಿದ್ದಳು. ಆ ಕಣ್ಣೀರಿನ ಮೂಲಕ, ಬಿಕ್ಕಿಬಿಕ್ಕಿ ಅಳುವುದರ ಮೂಲಕ ಆಕೆ ಏನನ್ನೋ ಪ್ರಾರ್ಥಿಸುವುದುಂಟು. ಆ ಪ್ರಾರ್ಥನೆಯನ್ನು ಮುಂದುವರಿಸಿಕೊಂಡೇ ಇರುತ್ತಿದ್ದಳು. ಪ್ರಾರ್ಥನೆಯ ಮೂಲಕ ಸ್ವಂತವಾಗಿ ಹೇಳಿಕೊಳ್ಳುವ ವಿಷಯಗಳಿರಬೇಕು. ಇದುವರೆಗೆ ಅದನ್ನು ಕುರಿತು ಯಾರೂ ಕೇಳಿಲ್ಲ. ಆಕೆ ಭಗವಂತನ ಪಾದದಲ್ಲಿ ಎಲ್ಲವನ್ನೂ ಅರ್ಪಿಸಿಕೊಳ್ಳುವುದಾಗಿರಬೇಕು. ಭಜನೆಗೆ ಬಂದವರು ಬಂದದ್ದಾಗಲೀ ಹೋದದ್ದಾಗಲೀ ಆಕೆಗೆ ತಿಳಿಯುತ್ತಿರಲಿಲ್ಲ. ತೇಜಸ್ವರೂಪಿಣಿಯೋ ಪ್ರಭಾವತಿಯೋ ಯಾರಾದರೂ ಹೋಗಿ ಅವಳನ್ನು ಎಚ್ಚರಗೊಳಿಸಬೇಕಾಗುತ್ತಿತ್ತು. ಆಗ ಮುಖವನ್ನೊರಸಿಕೊಳ್ಳುತ್ತ ಎದ್ದು

ನಿಂತುಕೊಳ್ಳುತ್ತಿದ್ದಳು. ಆ ಸಂದರ್ಭದಲ್ಲಿ ಅವಳ ಕೆಂಪಾದ ಮುಖವನ್ನು ಯಾರೂ ನೋಡುತ್ತ ನಿಂತುಕೊಳ್ಳಬೇಕಾಗುತ್ತಿತ್ತು.

ವೇದಾಂತ ಪಾಠಗಳಿಗೋ ಧರ್ಮ ಪ್ರವಚನಗಳಿಗೋ ಸಂಬಂಧಿಸಿದಾಗಲೂ ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತಿತ್ತು. ಆ ಕಣ್ಣೀರಿನೊಂದಿಗೆ ಅವಳ ಚೈತನ್ಯ ವರ್ಧಿಸುತ್ತಿತ್ತು. ಪ್ರಭಾವತಿ ಹೇಳುತ್ತಿದ್ದುದು ಸ್ವಲ್ಪ ಹೆಚ್ಚಾಯಿತು ಎನ್ನಿಸುತ್ತಿತ್ತು. ಅದೊಂದು ಅಭಿನಯ ಎನ್ನುವ ವರೆಗೂ ಆಕೆಯ ಅಭಿಪ್ರಾಯವಿತ್ತು. ಆ ಕಣ್ಣೀರನ್ನೂ ಮುಖವನ್ನೂ ಕಣ್ಣು ಮುಚ್ಚಿಕೊಂಡಿರುವ ಪ್ರಾರ್ಥನಾಭಂಗಿಯನ್ನೂ ಕಾಣುವಾಗ ಪ್ರಭಾವತಿಗೇ ಕೆಲವು ಸಲ ನಾಚಿಕೆಯಾಗಿರುವುದುಂಟು. ಜೊತೆಯಲ್ಲಿರುವವರು ಅಳುತ್ತ ಅಭಿನಯಿಸುವಾಗ ಉಳಿದವರು ಏನು ತಿಳಿದುಕೊಂಡಾರು ಎಂದು ತೋರಿತು. ಯಾರಿಗಾದರೂ ನಾಚಿಕೆಯುಂಟಾಗುವುದಿಲ್ಲವೇ? ಅದೇ ರೀತಿ ಹಲ್ಲು ಉಬ್ಬಾಗಿ, ಕಪ್ಪಾಗಿ ಕುರೂಪಿಯಾಗಿದ್ದ ತೇಜಸ್ವರೂಪಿಣಿ ಮಾತ್ರ ನಿತ್ಯಾನಂದಮಯಿಯೊಡನೆ ಸಹತಾಪವನ್ನು ತೋರಿಸುತ್ತಿದ್ದಳು. ಆ ಕಣ್ಣೀರನ್ನು ಕಾಣುವಾಗ ಆ ಪ್ರಾರ್ಥನೆಯಲ್ಲಿ ಲೀನವಾಗಿ ಕಚ್ಚಿ ಹಿಡಿದ ಹಲ್ಲಿನ ಮಧ್ಯೆ ಹೇಳಬೇಕಾದದ್ದನ್ನು ಹೇಳುತ್ತಿದ್ದಾಗ ತೇಜ ಸ್ವರೂಪಿಣಿ ಸ್ತೋತ್ರಗಳಲ್ಲಿ ಹಾಡಿನಲ್ಲಿ ಮಾತ್ರವಲ್ಲ, ಗಹನವಾದ ವೇದಾಂತ ವಿಷಯ ದಲ್ಲೂ ಅಲ್ಲ ಶ್ರದ್ಧೆಯಿಡುತ್ತಿದ್ದದ್ದು; ನಿತ್ಯಾನಂದಮಯಿಯ ಮೇಲೆ. ಆಕೆಯನ್ನೇ ನೋಡುತ್ತ ಕುಳಿತುಬಿಡುತ್ತಿದ್ದಳು. ಅವಳ ಕಣ್ಣುಗಳು ತೇವವಾಗುತ್ತಿದ್ದವು. ಬಹುಶಃ ಅದು ಅನುಕಂಪದ ಕಣ್ಣೀರಾಗಿರಬಹುದು.

ಹಾಗೆ "ಅಳುವ ಅಮ್ಮ"ನಿಗೆ ತೇಜಸ್ವರೂಪಿಣಿ ಜೊತೆಗಾತಿಯಾಗಿದ್ದಳು. ಮಾತಾ ಜ್ಯೋತಿರ್ಮಯಿಯೂ ನಿತ್ಯಾನಂದಮಯಿಯನ್ನು ಗಮನಿಸುತ್ತಿದ್ದರು. ಆದರೆ ಅವರಿಗೆ ಆಕೆಯ ಬಗ್ಗೆ ಅನುಕಂಪವುಂಟಾಗಿರಲಿಲ್ಲ.

ನಿತ್ಯಾನಂದಮಯಿ ಸುಂದರಿಯಾಗಿದ್ದಳು, ಯೌವ್ವನದಲ್ಲಿ ಅತ್ಯಂತ ಸುಂದರಿ ಯಾಗಿದ್ದಿರಬೇಕು. ಅವಳಿಗೆ ಅನುರೂಪನಾದ ಗಂಡನೂ ದೊರಕಿದ್ದ. ಆನಂದದಾಯಕ ವಾದ ಎಲ್ಲ ಅನುಕೂಲತೆಗಳೂ ಅವಳ ಜೀವನದಲ್ಲಿದ್ದುವು. ಜೀವನದ ಸಿಹಿಯನ್ನು ಅನುಭವಿಸಿದವಳು. ಆ ಸಿಹಿಯನ್ನು ಅನುಭವಿಸಲು ಪ್ರಾರಂಭವಾದಾಗಲೇ ವಿಧಿ ಅದನ್ನು ನಿಷೇಧಿಸಿತು. ಗಂಡ ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿಯಾಗಿಬಿಟ್ಟ. ಈ ಕಥೆ ಜನರಿಗೂ ಅಲ್ಪಸ್ವಲ್ಪ ಗೊತ್ತಿತ್ತು. ಮಾತಾ ಜ್ಯೋತಿರ್ಮಯಿ ದೇವಿಗೂ ಪ್ರಭಾ ವತಿ ದೇವಿಗೂ ಆ ಕಥೆಗೆ ಸಂಬಂಧಪಟ್ಟದ್ದು ಸ್ವಲ್ಪ ಗೊತ್ತಿತ್ತು. ಅವರು ಅವಳ ಹತ್ತಿರ ಆ ವಿಚಾರವಾಗಿ ಕೇಳಿರಲಿಲ್ಲ. ಆ ಗಂಡ ಎಲ್ಲವನ್ನೂ ಉಪೇಕ್ಷಿಸಿದುದು, ನಿತ್ಯಾನಂದ ಮಯಿ ತಪ್ಪುಗಾರ್ತಿಯೆಂದು ತಿಳಿದ ಮೇಲೆ ಎನ್ನುವ ಸಂಶಯ ಅವರಿಗಿತ್ತು. ಆದ್ದ ರಿಂದಲೇ ಇರಬೇಕು ಅದನ್ನು ಕೇಳದೇ ಇದ್ದದ್ದು. ಆ ಕಪ್ಪು ನೆರಳು ಹಾಗೆಯೇ ಇರಲಿ ಎಂದು ಕೈಬಿಟ್ಟಿದ್ದರು. ಆ ದೃಷ್ಟಿಯಲ್ಲಾದರೂ ಒಂದಿಷ್ಟಾದರೂ ಅನುಕಂಪ ಪ್ರಭಾವತಿ

ಗಿಲ್ಲವೇ ಎನ್ನುವ ಸಂಶಯವುಂಟು.

ಪಾಪ! ದೇವಿ ತೇಜಸ್ವರೂಪಿಣಿಯ ಕಥೆ ಅದಲ್ಲ. ಒಮ್ಮೆಯೂ ಅವಳನ್ನು ಯಾರೂ ಪ್ರೇಮಿಸಿಲ್ಲ. ಅವಳು ಪ್ರೇಮಿಸುವುದಕ್ಕೆ ಸಿದ್ಧಳಾಗಿದ್ದರೂ ಒಬ್ಬನೇ ಒಬ್ಬ ಗಂಡಸು ಅವಳನ್ನು ಕಣ್ಣೆತ್ತಿ ನೋಡಿದ್ದಿಲ್ಲ. ಚಪಲನೇತ್ರೆಯಾಗಲು ಸಾಧ್ಯವಿಲ್ಲದ ಕಣ್ಣುಗಳೂ. ಮಂದಹಾಸವನ್ನು ಬೀರಲು ಸಾಧ್ಯವಿಲ್ಲದ ತುಟಿಗಳೂ ಒಂದು ಕಾಲದಲ್ಲಿ ಸ್ವಲ್ಪ ಪ್ರಯತ್ನ ನಡೆಸಿದ್ದಿರಬೇಕು. ದೇವ ಸೃಷ್ಟಿಯ ಮಹತ್ವ ಅಂಗಸೌಷ್ಠವದಲ್ಲಿಲ್ಲ ದಿದ್ದರೂ ಚೈತನ್ಯದಲ್ಲಿಲ್ಲವೇ? ಅದು ಅವಳ ಅಭಿಪ್ರಾಯ.

ತೇಜಸ್ವರೂಪಿಣಿಯೂ, ನಿತ್ಯಾನಂದಮಯಿಯೂ ಮೊದಲಿನಿಂದಲೇ ಜೊತೆಗಾತಿ ಯರಾಗಿದ್ದರು. ಪ್ರತ್ಯೇಕತೆಗಳಿಂದಾಗಿ ಹಾಗೆ ಆದದ್ದಲ್ಲ. ಅವರ ಜೀವನದ ರಹಸ್ಯಗಳು ಪರಸ್ಪರ ತಿಳಿದಿದ್ದುವು. ಇಬ್ಬರಿಗೂ ಮಾತನಾಡಿಕೊಳ್ಳಲು ವಿಷಯಗಳಿರುವುದಿಲ್ಲವೆ? ಅವನ್ನು ಅವರು ಪರಸ್ಪರ ಹೇಳಿಕೊಂಡರು. ಒಬ್ಬರನ್ನೊಬ್ಬರು ನಂಬಿದರು. ಎಲ್ಲವನ್ನೂ ವಿಶದವಾಗಿ ಅರಿತರು. ತೇಜಸ್ವರೂಪಿಣಿಗೆ ಪ್ರೇಮಿಸಲು ಸಾಧ್ಯವಾಗಲಿಲ್ಲ ಎನ್ನುವ ದುಃಖದ ಸತ್ಯ ಸರಿಯಾಗಿ ನಿತ್ಯಾನಂದಮಯಿಗೆ ಅರ್ಥವಾಯಿತು. ಹೆಣ್ಣಾಗಿ ಜನ್ಮವೆತ್ತಿ ದುದು ನಿಷ್ಫಲವಾಯಿತು. ನಿತ್ಯಾನಂದಮಯಿ ತಪ್ಪುಗಾರ್ತಿಯಲ್ಲ. ತೇಜಸ್ವರೂಪಿಣಿಗೆ ಅದರ ಪೂರ್ಣ ಅರಿವಿದೆ. ಗಂಡ ಸನ್ಯಾಸಿಯಾದದ್ದು ಹೆಂಡತಿ ಕಾರಣವಾಗಿ. ಹೆಂಡತಿ ಯಲ್ಲಿ ವಿರಕ್ತಿ ಹುಟ್ಟಿ ಅಲ್ಲ ಎಂದು ಅವಳಿಗೆ ಗೊತ್ತಿದೆ. ಆದರೆ ಬೇರೆಯವರು ಅದನ್ನು ನಂಬಲಿಲ್ಲ ಎಂದೂ ಆಗಬಹುದು. ಆ ಸನ್ಯಾಸವನ್ನು ಕುರಿತು ಹಲವರು ಹಲವು ರೀತಿ ಯಲ್ಲಿ ಮಾತನಾಡಿಕೊಂಡರು.

ನಿತ್ಯಾನಂದಮಯಿ ಹಾಗೆ ಭಕ್ತಿಪರವಶಳಾಗಿ ಪ್ರಾರ್ಥಿಸುವುದೇತಕ್ಕೆ ಎಂದು ತೇಜಸ್ವರೂಪಿಣಿಗೆ ಗೊತ್ತಿತ್ತು. ಮುಂದಿನ ಜನ್ಮದಲ್ಲಿಯಾದರೂ ಇಂತಹ ಒಂದು ಅನುಭವವಾಗದಿರಲಿ ಎಂದು ಪ್ರಾರ್ಥಿಸುತ್ತಿದ್ದದ್ದು. ತೇಜಸ್ವರೂಪಿಣಿ ಪ್ರಾರ್ಥಿಸು ವುದು ಏನೆಂದು ನಿತ್ಯಾನಂದಮಯಿಗೆ ತಿಳಿದಿತ್ತು. ಮುಂದಿನ ಜನ್ಮದಲ್ಲಿ ಇಂತಹ ಒಂದು ಅನುಭವವುಂಟಾಗದಿರಲಿ ಎಂದು ಅವಳು ಪ್ರಾರ್ಥಿಸುತ್ತಿದ್ದದ್ದು.

ಒಂದು ದಿನ ರಾತ್ರಿಯಲ್ಲಿ ಒಂದು ಪ್ರಶ್ನೆ ತೇಜಸ್ವರೂಪಿಣಿಯ ಕಿವಿಗೆ ಬಿದ್ದಿತು. ಅದು ನಿತ್ಯಾನಂದಮಯಿಯ ಆತ್ಮದಿಂದ ಹೊರಟದ್ದಾಗಿತ್ತು.

"ಹೆಂಡತಿಯೂ ಗಂಡನೂ ಸನ್ಯಾಸಿಗಳಾಗಿ ಒಟ್ಟಿಗೆ ಬಾಳಿದರೇನು?"

ಅದರ ಮರುಕ್ಷಣದಲ್ಲಿಯೇ ಮತ್ತೊಂದು ಮಾತು ಕೇಳಿತು: "ಸನ್ಯಾಸಿಗಳಾ ಗಿಯೇ ಪರಸ್ಪರ ಪ್ರೇಮಿಸಿ ಹೆಂಡತಿ ಗಂಡನ ಪಾದಸೇವೆ ಮಾಡಿ ಮನೋವಿಕಾರಗಳನ್ನು ಗೆಲ್ಲಬಹುದಲ್ಲವೆ?"

ಒಂದು ಘಂಟಾನಾದ ಆಕೃತಿಯನ್ನು ಪಡೆದಂತೆ ಆ ಪ್ರಶ್ನೆ ತೇಜಸ್ವರೂಪಿಣಿಯ ಅಂತರಂಗದಲ್ಲಿ ವ್ಯಾಪಿಸತೊಡಗಿತು. ತಕ್ಷಣ ಅವಳಿಗೆ ಉತ್ತರ ಹೇಳಲು ಸಾಧ್ಯವಾಗ

ಲಿಲ್ಲ. ನಿತ್ಯಾನಂದಮಯಿ ಉತ್ತರವನ್ನು ನಿರೀಕ್ಷಿಸುತ್ತಿದ್ದಳು. ತೇಜಸ್ವರೂಪಿಣಿಯ ಬುದ್ಧಿಗೆ ಅವಳಿಗೆ ತಿಳಿಯದೆಯೇ ಒಂದು ಉತ್ತರ ಲಭಿಸಿತು. ಅವಳು ಹೇಳಿದಳು: "ಆಗಬಹುದು. ಶ್ರೀರಾಮಕೃಷ್ಣ ಪರಮಹಂಸರೂ ಶಾರದಾದೇವಿಯೂ ಹೇಗಿದ್ದರು?"

ನಿತ್ಯಾನಂದಮಯಿಯ ಆತ್ಮ ಒಮ್ಮೆ ಪುಳಕಗೊಂಡಿತು. ಅದು ಆಗಬಹುದು. ಅವಳು ಹೇಳಿದಳು:

"ನಾನು ಅದಕ್ಕಾಗಿ ಪ್ರಾರ್ಥಿಸುತ್ತಿದ್ದೇನೆ. ಒಮ್ಮೆಯೂ ನಾನು ಸನ್ಯಾಸದ ನಿಯಮಗಳನ್ನು ಮೀರುವುದಿಲ್ಲ."

ಅದರ ನಂತರ ತೇಜಸ್ವರೂಪಿಣಿಯ ಆಗ್ರಹಗಳೂ ರೂಪುಗೊಳ್ಳಲು ತೊಡಗಿದ್ದುವು. ಒಬ್ಬ ಸನ್ಯಾಸಿನಿಯನ್ನು ಮತ್ತೊಬ್ಬ ಸನ್ಯಾಸಿಗೆ ಮದುವೆ ಮಾಡಿಸಬಹುದೇ ಎನ್ನುವ ಮತ್ತೊಂದು ಪ್ರಶ್ನೆ ಆಕಾರ ತಾಳಿತು. ಆದರೆ ಅದಕ್ಕೆ ಬೇರೊಬ್ಬರು ಉತ್ತರ ಹೇಳಬೇಕಾಗಿ ಬರಲಿಲ್ಲ. ಅವಳಿಗೆ ಆ ಉತ್ತರವನ್ನು ಹೇಳಬಹುದಿತ್ತು.

"ಸಾಧ್ಯವಿಲ್ಲ."

ಸನ್ಯಾಸಧರ್ಮವೂ ವಿವಾಹಧರ್ಮವೂ ಬೇರೆ ಬೇರೆ. ಸನ್ಯಾಸದಲ್ಲಿ ವಿವಾಹ ಕೂಡದು. ವಿವಾಹಬಂಧನದಲ್ಲಿ ಸನ್ಯಾಸವನ್ನು ಸ್ವೀಕರಿಸಬಹುದು ಎಂದು ಅವಳಿಗೆ ಅರಿವಾಯಿತು. ಆದ್ದರಿಂದಲೇ ಮುಂದಿನ ಜನ್ಮಕ್ಕಾಗಿ ತೇಜಸ್ವರೂಪಿಣಿ ಪ್ರಾರ್ಥಿಸಲು ತೊಡಗಿದ್ದದ್ದು. ನಿತ್ಯಾನಂದಮಯಿ ಎಷ್ಟೋ ದಿನಗಳು ಈ ಜನ್ಮದಲ್ಲಿಯೇ ಅದಕ್ಕಾಗಿ ಪ್ರಾರ್ಥಿಸಿದ್ದಳು. ಆ ಮೇಲೆ ಮುಂದಿನ ಜನ್ಮಕ್ಕಾಗಿ ಪ್ರಾರ್ಥಿಸತೊಡಗಿದಳು. ಇದು ಒಂದು ಹಳೆಯ ಕಥೆ.

ಸರ್ಕಾರದ ಸರ್ವೀಸಿನಲ್ಲಿ ಅಸಿಸ್ಟೆಂಟ್ ಸೆಕ್ರೆಟರಿ ಸ್ಥಾನದ ವರೆಗೆ ಬಂದ ಪ್ರಭಾವತಿ ದೇವಿ ಸಾಧಾರಣ ಹೆಂಗಸಾಗಿರಲಿಲ್ಲ. ಅವಳಿಗೆ ಎಲ್ಲವೂ ತಿಳಿದಿತ್ತು. ತಾನು ಯಾವ ಸ್ಥಾನದಲ್ಲಿದ್ದಳೋ ಆ ಸ್ಥಾನದ ಮಾನ್ಯತೆಯನ್ನೂ ಅಂತಸ್ತನ್ನೂ ಸರಿಯಾಗಿ ಪಾಲಿಸಿ ಕೊಂಡು ಹೋಗಲು ಬಲ್ಲವಳಾಗಿದ್ದಳು. ನಿರ್ವಹಿಸುತ್ತಿದ್ದ ಕಾರ್ಯಗಳಲ್ಲಿ ಗಾಂಭೀರ್ಯವೂ ತೀಕ್ಷ್ಣತೆಯೂ ಇದ್ದುವು. ಆಜ್ಞಾಶಕ್ತಿ ಮತ್ತು ನಿಯಂತ್ರಣ ಶಕ್ತಿಗಳಿದ್ದುವು. ಆದರೆ ಆ ಸ್ಥಿತಿಗೂ ಸ್ಥಾನಕ್ಕೂ ಹೊಂದಿಕೆಯಾಗುವ ಜೊತೆಗಾತಿಯಿದ್ದಿದ್ದರೆ ತಾನೇತಕ್ಕಾಗಿ ಪ್ರಾರ್ಥಿಸುತ್ತಿದ್ದೇನೆ ಎನ್ನುವುದನ್ನು ಹೇಳುತ್ತಿದ್ದಳು. ಅದು ಯಾರಿಗೂ ತಿಳಿಯದು.

ಮಾತಾ ಜ್ಯೋತಿರ್ಮಯಿ ದೇವಿ ಅಲ್ಲಿದ್ದಳು. ಆದರೆ ನೌಕರಿಯಲ್ಲಿ ಆಕೆ ಒಂದು ಮೆಟ್ಟಲು ಕೆಳಗೆ. ಆಕೆ ಒಬ್ಬ ಅಂಡರ್ ಗ್ರಾಜ್ಯುಯೇಟ್. ಪ್ರಭಾವತಿ ದೇವಿ ಬಿ. ಎ. ಪದವೀಧರೆ. ಪ್ರಭಾವತಿಯ ಕೈಕೆಳಗೆ ತಾನಿದ್ದರೂ ಆ ಕಾಲದಲ್ಲಿ ಹಾಗೆ ಸಂಭವಿಸದೇ ಹೋಗಿದ್ದಿದ್ದರೆ ಜ್ಯೋತಿರ್ಮಯಿ ದೇವಿಯೂ ಪ್ರಭಾವತಿ ದೇವಿಯ ನಿರ್ದೇಶನಗಳನ್ನನುಸರಿಸಿ ಕೆಲಸ ನೋಡಿಕೊಂಡು ಹೋಗುತ್ತಿದ್ದಳು. ಔದ್ಯೋಗಿಕ ಜೀವನದಲ್ಲೂ ಹೊರಗೂ ನಿಜವಾಗಿ ಆ ಸ್ಥಾನ ವ್ಯತ್ಯಾಸವಿರುವುದಿಲ್ಲವೆ?

ಹಿಂದಿನ ತಂಗಮ್ಮ ಯಾರೆಂದು ಎಲ್ಲರಿಗೂ ಗೊತ್ತಿತ್ತು. ಎಷ್ಟೋ ಸಲ ಅವಳ ವಿಷಯ ಸಣ್ಣ ದೊಡ್ಡ ಉದ್ಯೋಗಮಂಡಲದಲ್ಲಿ ಮಾತಿನ ವಿಷಯವಾಗಿರುತ್ತಿತ್ತು. ಈಗಲೂ ಕೆಲವರಾದರೂ ಕೆಲವು ಸಲವಾದರೂ ಅವನ್ನು ಜ್ಞಾಪಿಸಿಕೊಳ್ಳುತ್ತಾರೆ. ಪ್ರಭಾವತಿ ದೇವಿ ಎಂದೆಂದೂ ಆ ಕಥೆಗಳನ್ನು ನೆನಸಿಕೊಳ್ಳುತ್ತಿರುತ್ತಾಳೆ. ಅದಕ್ಕೆ ಕಾರಣ ಇದೆ. ಆಶ್ರಮದ ಮಾತಾಜಿ ಜ್ಯೋತಿರ್ಮಯಿ ದೇವಿ. ಉಳಿದವರಿಗೆ ಸಲಹೆ ಕೊಡುವ ಅಧಿಕಾರ ಮಾತ್ರವೇ ಇರುವುದು. ಯಾವುದನ್ನೂ ತೀರ್ಮಾನಿಸುವುದು ಜ್ಯೋತಿರ್ಮಯಿ ದೇವಿಯೇ. ಆಹಾರದ ವಿಷಯದಿಂದ ಹಿಡಿದು ಎಲ್ಲ ವಿಷಯಗಳಲ್ಲೂ ಆಕೆಯೇ ಅಲ್ಲಿಯ ಸರ್ವಾಧಿಕಾರಿ. ಸ್ವಾಮಿ ತಿರುವಡಿಗಳು ಆ ಚಿನ್ನಸ್ವಾಮಿಯ ಮಾತನ್ನು ಕೇಳಿ ಹಾಗೆ ತೀರ್ಮಾನಿಸಿದರು. ಆ ಕಟ್ಟಡವನ್ನೂ ಸ್ಥಳವನ್ನೂ ದಾನ ಮಾಡಿದುದಕ್ಕಾಗಿರಬಹುದು ಅದು. ಏನಿದ್ದರೂ ಎಷ್ಟೋ ಸಲ ಪ್ರಭಾವತಿ ದೇವಿಗೆ ಆ ಸರ್ವಾಧಿಕಾರವನ್ನು ಧಿಕ್ಕರಿಸಿದರೇನು ಎಂದು ತೋರಿತ್ತು. ಅವಳಿಗ್ಗೂ ಹೇಳಲು ಎಷ್ಟೋ ವಿಷಯಗಳಿವೆ. ಸ್ವಪ್ರಯತ್ನದಿಂದ ಸಂಪಾದಿಸಿದ ಹನ್ನೆರಡು ಸಾವಿರ ರೂಪಾಯಿಯನ್ನು ಆಶ್ರಮಕ್ಕೆ ಅವಳು ಎಣಿಸಿಕೊಟ್ಟಿದ್ದಳು. ಆ ಹಣವನ್ನು ಬೇರೊಂದು ಮಾರ್ಗದಲ್ಲಿ ಸಂಪಾದಿಸಿದುದಲ್ಲ. ಅದರ ಒಂದು ಚಿಲ್ಲರೆ ಕಾಸನ್ನೂ ಯಾರೂ ಅಕ್ರಮ ಮಾರ್ಗದಲ್ಲಾಗಲೀ ಬಳಸುಮಾರ್ಗದಲ್ಲಾಗಲೀ ಕೊಟ್ಟದ್ದಲ್ಲ. ಆದ್ದರಿಂದ ಪ್ರಭಾವತಿ ದೇವಿಯಲ್ಲಿಯೂ ಎಷ್ಟೋ ಸಲ ತನಗೂ ಹಕ್ಕಿದೆ ಎನ್ನುವ ವಿಷಯ ಎದ್ದು ನಿಲ್ಲುತ್ತಿತ್ತು. ಹಾಗಿದ್ದರೂ ಅವಳು ಆಶ್ರಮದ ಒಳ್ಳೆಯ ಹೆಸರಿಗೋಸ್ಕರ ತನ್ನನ್ನು ತಾನೇ ನಿಯಂತ್ರಿಸಿಕೊಳ್ಳುತ್ತಿದ್ದಳು. ಕೆಲವು ಸಲ ಆ ಸ್ಥಳದಲ್ಲಿ ಕಳೆಯಬೇಕಾದ ಬದುಕಿನ ಸ್ಥಿತಿಯನ್ನು ಕುರಿತು ಅವಳು ವ್ಯಸನಪಡುತ್ತಿದ್ದುದೂ ಉಂಟು.

ಆ ಆಶ್ರಮದ ಮಾತಾಜಿ ಇದೇ ಸ್ಥಿತಿಯಲ್ಲಿ ಎಂದೆಂದೂ ಇರುತ್ತಾಳೆನ್ನುವ ವಿಷಯದಲ್ಲಿ ಪ್ರಭಾವತಿಗೆ ವಿಶ್ವಾಸವಿಲ್ಲ. ಹಳೆಯ ಚರಿತ್ರೆಯನ್ನು ನೆನಸಿಕೊಂಡರೆ ಅದರಲ್ಲಿ ಅನುಮಾನವಿಲ್ಲ. ಅವಳ ಸ್ವಭಾವವೇ ಹಾಗೆ. ಸನ್ಯಾಸಿನಿಯಾದ ಮೇಲೂ ಕಾವಿ ವಸ್ತ್ರಕ್ಕೆ ಅನುಗುಣವಾದ ರೀತಿಯಲ್ಲಲ್ಲ ಅವಳು ನಡೆದುಕೊಳ್ಳುತ್ತಿರುವುದು ಎಂದು ಪ್ರಭಾವತಿಗೆ ಅನ್ನಿಸಿರುವುದುಂಟು. ಮಾತ್ರವಲ್ಲ ಅವಳು ತನ್ನನ್ನು ತಾನೇ ಮರೆಯುತ್ತಾಳೆ ಎನ್ನುವುದೂ ನಿಜ.

ಪ್ರಭಾವತಿ ಆಕೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದಳು. ಸುಮ್ಮನೆ ಹಾಗೆ ಸೂಕ್ಷ್ಮವಾಗಿ ನೋಡುತ್ತಿರಲಿಲ್ಲ. ಪ್ರಭಾವತಿ ದೇವಿಗೆ ನಿಜವಾದ ಸಂಶಯಗಳು ಯಾವಾಗಲೂ ಉಂಟಾಗುತ್ತಿದ್ದುವು. ಇನ್ನೂ ಆ ಹೆಣ್ಣಿನ ಮಾಂಸದ ಬಯಕೆ ತೀರಿಲ್ಲ. ಆಶ್ರಮದ ಮಾತಾಜಿ ಧರಿಸುತ್ತಿದ್ದುದು ಕಾವಿ ಬಣ್ಣದ ವಸ್ತ್ರಗಳು. ಆ ವಸ್ತ್ರಗಳಿರಬಹುದು. ಆದರೆ ಅವನ್ನೇಕೆ ಧರಿಸಬೇಕು ಎನ್ನುವುದು ಪ್ರಶ್ನೆ. ಆಕೆ ಇಂದು ಪೌಡರ್ ಹಚ್ಚಿಕೊಳ್ಳುವುದಿಲ್ಲ. ಸಿಂಧೂರದ ಬೊಟ್ಟಿಡುವುದಿಲ್ಲ. ಅದೆಲ್ಲ ಸರಿಯೆ. ಬೆಳಗ್ಗೆ

ಸ್ನಾನ ಮಾಡಿ ಎಲ್ಲರಂತೆಯೇ ಹಣೆಗೆ ವಿಭೂತಿ ಧರಿಸಿಕೊಳ್ಳುವುದು ಎನ್ನುವುದಲ್ಲ, ಹಣೆಗೆ ಭಸ್ಮವನ್ನು ಬಳಿದುಕೊಳ್ಳುವುದು. ಆದರೆ ಆಶ್ರಮದ ಮಾತಾಜಿಗೆ ವಿಭೂತಿಯನ್ನು ಬಳಿದುಕೊಳ್ಳಲು ಅರ್ಧ ಗಂಟೆಯಾದರೂ ಬೇಕು. ಆ ವಿಭೂತಿ ಪ್ರತ್ಯೇಕವಾಗಿ ಅರೆದು ಒಣಗಿಸಿದ್ದು. ದೊಡ್ಡ ನಿಲುವುಗನ್ನಡಿಗಳ ಮುಂದೆ ನಿಂತು ಆ ವಿಭೂತಿಧಾರಣೆ. ಅದಕ್ಕೆ ಯಾಕೆ ಅಷ್ಟೊಂದು ಸಮಯ ತೆಗೆದುಕೊಳ್ಳಬೇಕು ಎಂದು ಪ್ರಭಾವತಿ ತನ್ನ ಸಿಟ್ಟು ತಡೆಯಲಾರದೆ ಹಲ್ಲು ಕಡಿಯುತ್ತಾ ಸ್ವತಃ ಕೇಳಿಕೊಳ್ಳುತ್ತಿದ್ದಳು. ಹಾಗೆ ಕೇಳುವುದರಲ್ಲಿ ಆಶ್ಚರ್ಯವೂ ಇರಲಿಲ್ಲ.

ಬೆಳಗ್ಗೆ ಎದ್ದು ತಲೆಗೂದಲ ತುದಿಯನ್ನು ಗಂಟುಹಾಕಿ ಬೆನ್ನಿನ ಮೇಲೆ ಇಳಿಬಿಟ್ಟು ಒಳ್ಳೆಯ ನಯವಾದ ವಸ್ತ್ರಗಳನ್ನುಟ್ಟು ಹಣೆತುಂಬಾ ಭಸ್ಮವನ್ನು ಧರಿಸಿಕೊಂಡು ಬಂದು ನಿಲ್ಲುವ ಆಶ್ರಮದ ಮಾತಾಜಿಗೆ ಪ್ರತ್ಯೇಕವಾದ ಶೋಭೆಯಿರುತ್ತಿತ್ತು. ಅವಳು ಗೇಟಿನ ಹತ್ತಿರ ಹೋಗಿ ನಿಂತುಕೊಳ್ಳುವುದೇಕೆ? ದಾರಿಯಲ್ಲಿ ಹೋಗುವವರನ್ನು ಆಕರ್ಷಿಸುವುದಕ್ಕಾಗಿಯೇ?

ಹಾಳಾದದ್ದು. ಒಂದು ಹೆಣ್ಣಿಗೆ ಇಷ್ಟೊಂದು ತಲೆಗೂದಲು ಬೆಳೆಯೋದುಂಟಾ? ತಲೆಗೂದಲನ್ನು ಬೆಳೆಸುವುದಕ್ಕೆ ಯಾವುದೋ ಔಷಧಿಯನ್ನು ಮಾತಾಜಿ ಗುಟ್ಟಾಗಿ ಉಪಯೋಗಿಸುತ್ತಿರುವುದೆಂದು ಪ್ರಭಾವತಿ ದೇವಿ ನಂಬಿದ್ದದ್ದು. ಇಲ್ಲದಿದ್ದಲ್ಲಿ ಹೀಗೆ ತಲೆಗೂದಲು ಬೆಳೆಯುವುದಿಲ್ಲ. ಆ ತಲೆಗೂದಲನ್ನು ಬಾಚಿ ಕಟ್ಟಲು ಒಂದು ಗಂಟೆಯಾದರೂ ಬೇಕು. ಎರಡು ಭಾಗವಾಗಿಯೇ ಬಾಚಿ ಕಟ್ಟುವುದಕ್ಕೆ ಸಾಧ್ಯ. ಅದೇನೋ ಸರಿಯೇ. ಆದರೂ ತಲೆಗೂದಲನ್ನು ಬಾಚಲು ಒಬ್ಬ ಸನ್ಯಾಸಿನಿ ಅಷ್ಟೊಂದು ಹೊತ್ತು ತೆಗೆದುಕೊಳ್ಳುವುದು ಸರಿಯೆ? ಒಬ್ಬ ಸನ್ಯಾಸಿನಿಗೆ ಸಂಬಂಧಿಸಿದಂತೆ ತಲೆಗೂದಲಿನ ಬಗ್ಗೆ ಅಷ್ಟೊಂದು ಆಸಕ್ತಿಯೆ? ಅದಕ್ಕೆ ಇಷ್ಟೊಂದು ಸೇವೆ ಮಾಡಬೇಕೆ?

ಮಾತಾ ಜ್ಯೋತಿರ್ಮಯಿ ದೇವಿ ಮನಃಪೂರ್ವಕವಾಗಿ ನಿದ್ದೆ ಮಾಡುವುದಿಲ್ಲವೆಂದು ತೋರುತ್ತದೆ. ತಲೆಗೂದಲನ್ನು ಕಟ್ಟಿ ಒಂದು ಕಡೆಗಿಟ್ಟುಕೊಳ್ಳುವುದು ಮುಂತಾದ್ದರಲ್ಲೆಲ್ಲ ಶ್ರದ್ಧೆಯಿರುತ್ತದೆ. ಹಾಗೆ ಆ ಶ್ರದ್ಧೆಯಲ್ಲಿಯೇ ನಿದ್ದೆ ಮಾಡುವುದು. ಬಿಚ್ಚಿಹೋದ ಮೂರು ನಾಲ್ಕು ತಲೆಗೂದಲು ಮಲಗಿದ್ದಾಗ ಗಾಳಿಗೆ ಹಾರಾಡುವುದರಲ್ಲೂ ಒಂದು ಸೊಬಗಿಲ್ಲವೆ? ಒಂದು ಅರಳುವ ಹೂವಿನ ಹೊಸತನವೂ ಕಾಂತಿಯೂ ಆಕರ್ಷಣೆಯೂ ಬೆಳಗಿನ ಹೊತ್ತು ಆಕೆಯ ಮುಖದಲ್ಲಿರುತ್ತಿತ್ತು. ಬೆಳಗಿನ ಪ್ರಾರ್ಥನೆಯಲ್ಲಿ ಪಾಲುಗೊಳ್ಳುತ್ತಿದ್ದಾಗ ಆ ಮುಖಕ್ಕೆ ಒಂದು ಪ್ರತ್ಯೇಕ ತೇಜಸ್ಸಿರುತ್ತಿತ್ತು. ಆಕೆ ಒಬ್ಬ ಕುಲೀನ ಸ್ತ್ರೀಯಾಗಿರುತ್ತಿದ್ದರು. ಮಧ್ಯಾಹ್ನದ ಹೊತ್ತಿನಲ್ಲಿ ಜ್ಯೋತಿರ್ಮಯಿ ದೇವಿ ಪ್ರೌಢೆಯಾದ ಸ್ತ್ರೀಯಾಗಿರುತ್ತಿದ್ದರು. ಸಾಯಂಕಾಲದ ಪ್ರಾರ್ಥನೆ ಮುಗಿಯುವಷ್ಟರಲ್ಲಿ ಅತ್ಯಂತ ಆಕರ್ಷಣೆಯಿರುತ್ತಿತ್ತು. ಭಕ್ತಾದಿಗಳಲ್ಲಿ ಪುರುಷರೆಲ್ಲರ ದೃಷ್ಟಿಯೂ ಆಕೆಯ ಕಡೆಗಿರುತ್ತದೆ. ಆ ಸಮಯದಲ್ಲಿ ಪ್ರಭಾವತಿ ದೇವಿ ಗಮನಿಸುತ್ತಿದ್ದುದು

ಪುರುಷರ ಮುಖಭಾವವನ್ನೂ ಅಂಗಚೇಷ್ಟೆಗಳನ್ನೂ. ಅವರು ಮಾತಾಜಿಯನ್ನು ಯಾವ ದೃಷ್ಟಿಯಲ್ಲಿ ನೋಡುತ್ತಿದ್ದಾರೆ ಎಂದು ತಿಳಿಯಬೇಕಾಗಿತ್ತು.

ಪ್ರಭಾವತಿಯ ಅಭಿಪ್ರಾಯ ಒಬ್ಬ ಆಶ್ರಮದ ಮಾತಾಜಿ ಆ ರೀತಿಯಲ್ಲಿರ ಬಾರದು ಎಂದು. ಹಾಗಿರುವುದು ತಪ್ಪು. ಮನಃಪೂರ್ವಕವಾಗಿ ಪುರುಷರು ತನ್ನ ಕಡೆಗೆ ನೋಡುತ್ತಾ ಬಾಯಿಬಿಡಲಿ ಎಂದು ಮಾತಾಜಿ ಶ್ರಮಿಸುತ್ತಿದ್ದಾರೆ ಎನ್ನಿಸುತ್ತಿತ್ತು. ಆಶ್ರಮದಲ್ಲಿ ಏರ್ಪಡಿಸಲಾಗುತ್ತಿದ್ದ ಸಮಾರಂಭಗಳಲ್ಲೆಲ್ಲಾ ಪುರುಷರು ಧಾರಾಳವಾಗಿ ಸೇರಬೇಕು ಎಂದು ಮಾತಾಜಿ ವ್ಯಾಖ್ಯಾನಿಸುತ್ತಿದ್ದದ್ದು. ಇಂದಲ್ಲ ನಾಳೆ ಆಶ್ರಮದ ಮಾತಾಜಿ ದಾರಿತಪ್ಪಿ ಹೋಗುತ್ತಾರೆ. ಯಾವಾಗಲೂ ಮುಚ್ಚಿರುತ್ತಿದ್ದ ಆಶ್ರಮದ ಹಿಂದಿನ ಬಾಗಿಲಿನ ಕಡೆಗೆ ಪ್ರಭಾವತಿ ದೇವಿ ರಾತ್ರಿಹೊತ್ತು ದೃಷ್ಟಿಯಿರಿಸಿದ್ದಳು. ಆ ಕೆಲಸ ಪ್ರಾರಂಭವಾಗಿ ತುಂಬ ದಿವಸಗಳಾಗಿದ್ದುವು. ಆದರೂ ಅವಳಿಗೆ ನಿರಾಶೆ ಯುಂಟಾಗಲಿಲ್ಲ. ಎಂದಾದರೊಂದು ದಿನ ಆ ಬಾಗಿಲು ತೆರೆದಿರುವುದನ್ನು ತಾನು ನೋಡಿಯೇ ನೋಡುತ್ತೇನೆ ಎಂದು ಪ್ರಭಾವತಿ ನಂಬಿದ್ದಳು. ಆ ದಿವಸದಲ್ಲಿ ಮಾತಾ ಜಿಯ ನಿಜವಾದ ಸ್ವರೂಪವನ್ನು ಲೋಕಕ್ಕೆಲ್ಲಾ ತೋರಿಸಿಕೊಡಲು ಪ್ರಭಾವತಿ ದೇವಿ ತಾಳ್ಮೆಯಿಂದ ಕಾದಿದ್ದಳು. ಆ ಕಟ್ಟಡವನ್ನು ನಿರ್ಮಿಸಿದ್ದೇ ಆ ಹಿಂದಿನ ಬಾಗಿಲಿಗಾಗಿ ಯಲ್ಲವೇ ! ಆ ಕಟ್ಟಡದ ಪ್ರಧಾನ ಪ್ರವೇಶ ದ್ವಾರವೂ ಆ ಹಿಂದಿನ ಬಾಗಿಲೇ ತಾನೇ ! ಅದು ಒಂದು ದಿನ ಖಂಡಿತ ತೆರೆದಿರುತ್ತದೆ.

ಭಜನೆ, ಪ್ರಾರ್ಥನೆ ಮುಂತಾದುವುಗಳಿಗೆ ಸಂಬಂಧಿಸಿದ್ದ ಕತೆ—ಮಾತಾಜಿಯ ಬುದ್ಧಿಯೂ ಆಲೋಚನೆಯೂ ಎಷ್ಟೋ ಸಲ ಅದೊಂದರಲ್ಲೂ ಅಲ್ಲ ಮನಸ್ಸು ನಟ್ಟಿರುವುದು ಎನ್ನುವುದು ಸ್ಪಷ್ಟವಾಗುತ್ತಿತ್ತು. ಆಕೆ ಹಾಗೆಯೇ ನೋಡಿಕೊಂಡು ಕುಳಿತಿರುತ್ತಿದ್ದರು. ಅದೊಂದರಲ್ಲೂ ಅವರು ಲೀನರಾಗುತ್ತಿರಲಿಲ್ಲ. ವಿರಾಮ ವೇಳೆ ಯಲ್ಲಿ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಏನನ್ನೋ ಆಲೋಚಿಸಿಕೊಂಡಿರು ತ್ತಿದ್ದರು. ಆಕೆಯ ಮನಸ್ಸು ಎಲ್ಲೆಲ್ಲಿ ಸಂಚರಿಸುತ್ತಿರುತ್ತದೆ ಎಂದು ಯಾರಿಗೆ ಗೊತ್ತು? ನಿಜವಾಗಿಯೂ ಆ ಆಶ್ರಮದ ಸರ್ವಾಧಿಕಾರಿ ಆಕೆಯಲ್ಲದೇ ಇದ್ದಿದ್ದರೆ ಮತ್ತಾರಾದರೂ ಕೇಳುವುದಕ್ಕೆ ಇದ್ದಿದ್ದರೆ ಆ ಪ್ರಶ್ನೆ ಹೀಗಿರುತ್ತಿತ್ತು:

"ಏನು ನೆನಸಿಕೊಳ್ಳುತ್ತಿದ್ದೀರಿ?" ಎಂದು.

ಆಕೆಯನ್ನು ಯಾರೂ ಹಾಗೆ ಕೇಳುವುದಿಲ್ಲ. ಕೇಳಿಯೂ ಇಲ್ಲ.

ಹಾಗೆಯೇ ಇದ್ದಾಗ ಆಶ್ರಮದ ಬಾಗಿಲಿಗೆ ಒಂದು ದಿನ ಒಬ್ಬಳು ಭಿಕ್ಷುಕಿ ಬಂದು ಭಿಕ್ಷೆ ಬೇಡಿದಳು. ಮಾತಾಜಿ ಅಲ್ಲಿಯೇ ನಿಂತಿದ್ದರು. ಆ ಭಿಕ್ಷುಕಿ ವಯಸ್ಸಾದವ ಳೇನಲ್ಲ. ಒಂದೇ ನೋಟದಲ್ಲಿ ಆ ಭಿಕ್ಷುಕಿಯಲ್ಲಿ ಯಾವುದೋ ಒಂದು ವೈಶಿಷ್ಟ್ಯವಿದೆ ಎನ್ನಿಸುತ್ತಿತ್ತು. ಮಾತಾಜಿಯ ಕಣ್ಣುಗಳಲ್ಲಿಯೂ ಆ ವೈಶಿಷ್ಟ್ಯ ಕಾಣಿಸಿತು. ಅವಳನ್ನು ಒಳಗೆ ಬರುವಂತೆ ಮಾತಾಜಿ ಹೇಳಿದರು.

ಆ ಹೆಣ್ಣಿನ ಹೆಸರು ಸಾವಿತ್ರಿ ಎಂದು. ಮಾತಾಜಿ ಅವಳಿಗೆ ಸ್ನಾನ ಮಾಡುವಂತೆ ಹೇಳಿದರು. ಒಟ್ಟೆ ಬದಲಾಯಿಸಲು ಒಳ್ಳೆಯ ಸೀರೆಯನ್ನು ಕೊಟ್ಟರು. ಪ್ರೀತಿಯಿಂದ ಊಟಕ್ಕೂ ಹಾಕಿಸಿದರು. ಅಷ್ಟರಲ್ಲಿ ಆ ಹೆಣ್ಣು ಬದಲಾಯಿಸಿದ್ದಳು. ಆ ಭಿಕ್ಷುಕಿಯಲ್ಲಿ ಎಂತಹ ವ್ಯತ್ಯಾಸವುಂಟಾಗಿತ್ತು! ಅವಳು ಭಿಕ್ಷುಕಿಯೇ ಅಲ್ಲ. ಸುಂದರಿ. ನಿಜವಾಗಿಯೂ ಸುಂದರಿ ಎಂದು ಹೇಳಬಹುದು. ಮಾತಾಜಿ ಅವಳ ಕಥೆ ಕೇಳಿದರು.

ಸಾವಿತ್ರಿ ಹಾಗೂ ಹೀಗೂ ಒಂದು ಕಥೆ ಹೇಳಿದಳು. ಅದು ನಿಜವಾದ ಕಥೆಯಲ್ಲವೆಂದು ಯಾರಿಗೂ ತಿಳಿಯುತ್ತಿತ್ತು. ಎಷ್ಟೋ ವಿಷಯಗಳನ್ನು ಅವಳು ಮುಚ್ಚಿಟ್ಟಿದ್ದಳು. ಕೆಲವು ವಿಷಯಗಳನ್ನು ಬಿಟ್ಟು ಕೆಲವು ವಿಷಯಗಳನ್ನು ಮಾತ್ರ ವಿವರಿಸಿದ್ದಳು. ಮಾತಾಜಿ ನೇರವಾಗಿ ಹೇಳಿದರು: "ನೀನು ಹೇಳ್ತಿರೋದು ಸುಳ್ಳು. ಇದಲ್ಲ ನಿನ್ನ ಕಥೆ. ಹಾಗೆ ಒಬ್ಬ ಗಂಡ ಉಪೇಕ್ಷಿಸಿ ಹೋಗುವುದಿಲ್ಲ."

ಆಣೆಯಿಟ್ಟು ಆ ಕಥೆಯನ್ನು ನಂಬಿಸಲು ಸಾವಿತ್ರಿ ಶ್ರಮಿಸಿದಳು. ಜ್ಯೋತಿರ್ಮಯಿ ದೇವಿಗೆ ಅದನ್ನು ನಂಬಲಾಗಲಿಲ್ಲ. ಸಾವಿತ್ರಿಯ ಜೀವನರಹಸ್ಯವನ್ನು ಪೂರ್ತಿ ಅರಿತಿದ್ದವರಂತೆ ಮಾತಾಜಿ ಒಂದು ಪ್ರಶ್ನೆ ಕೇಳಿದರು:

"ನೀನು ನಿಜ ಹೇಳ್ತೀಯಾ? ನಿಜ ಹೇಳೋದು ಒಳ್ಳೆಯದು. ಗೊತ್ತಾಯ್ತಾ?"

"ನಾನು ನಿಜ ಹೇಳ್ತಿದ್ದೀನಿ."

'ಅಲ್ಲ' ಎಂದು ಮಾತಾಜಿ ತಲೆ ಅಲ್ಲಾಡಿಸಿದರು. ಅನಂತರ ಸತ್ಯಸಂಗತಿಯನ್ನು ತಿಳಿದ ಒಂದು ನಗುವಿನೊಡನೆ ಅವರು ಕೇಳಿದರು: "ನಿನ್ನ ಗಂಡ ಪಾಪ! ಸಾಧು ಮನುಷ್ಯನಾಗಿದ್ದ. ಅವನಿಗೆ ನೀನು ಅಂದರೆ ಎಲ್ಲವೂ ಆಗಿತ್ತು. ನೀನು ಗಂಡನನ್ನು ಅಲಕ್ಷಿಸಿದೆ. ಅದಲ್ಲವೇನೇ ನಿಜವಾದ ಸಂಗತಿ?"

ಸಾವಿತ್ರಿ ಕುಸಿದುಹೋದಳು. ಅವಳ ಸತ್ಯಸಂಗತಿ ಬಯಲಾಗಿಹೋಯಿತೆಂದು ಅವಳು ಹೆದರಿದಳು. ಅವಳ ತುಟಿಗಳು ಚಿಕ್ಕದಾಗಿ ನಡುಗುತ್ತಿದ್ದುವು.

ಮಾತಾಜಿ ಹೇಳಿದರು: "ಹೇಳು, ನಿಜ ಹೇಳು. ಅದು ಒಳ್ಳೇದು."

ಸಾವಿತ್ರಿಗೆ ಏನು ಹೇಳಲೂ ತೋರದಾಯಿತು. ಎಲ್ಲವನ್ನೂ ತಿಳಿದಿದ್ದವರಂತೆ ಮಾತಾಜಿ ವಿವರಿಸತೊಡಗಿದರು:

"ಆ ಮನುಷ್ಯ ನಿನ್ನನ್ನು ವಂಚಿಸಿದ. ನೀನು ಕಡೆಗೆ ಯಾರೂ ಇಲ್ಲದವಳಾದೆ. ಹಾಗೆ ನೀನು ಬೀದಿಪಾಲಾದೆ ಅಲ್ಲವಾ?"

ಸಾವಿತ್ರಿ ಮುಖ ಮುಚ್ಚಿಕೊಂಡು ಅಳುತ್ತಿದ್ದಳು. ತಪ್ಪುಗಳನ್ನು ಕುರಿತು ಜೀವನದಲ್ಲಿ ಮೊಟ್ಟಮೊದಲಾಗಿ ಒಂದು ವ್ಯಕ್ತಿ ಅವಳ ಮುಖ ನೋಡಿ ಕೇಳುತ್ತಿದ್ದದ್ದು. ಜ್ಯೋತಿರ್ಮಯಿ ದೇವಿ ಭರವಸೆ ನೀಡುತ್ತ ಹೇಳಿದರು: "ಯಾಕೆ ಅಳ್ತೀಯ? ನೀನು ಅಳಬೇಕಾಗಿಲ್ಲ. ಇದು ನಿಜ ತಾನೆ?"

ಸಾವಿತ್ರಿ ಒಪ್ಪಿಕೊಂಡಳು. "ಹೌದು ಮಾತಾಜೀ ಹೌದು. ಅವರು ನನ್ನನ್ನು

ಚಿನ್ನದ ಹಾಗೆ ನೋಡಿಕೊಳ್ಳುತ್ತಿದ್ದರು. ನನಗೆ ಬೇಸರ ಬಂದಿತ್ತು. ತಿರಸ್ಕಾರ ಹುಟ್ಟಿತ್ತು. ನಾನು ನೂಕಿದ್ದೂ ಉಂಟು. ಮುಖಕ್ಕೆ ಉಗುಳಿದ್ದೂ ಉಂಟು. ಪಾಪ, ಅವರು ಅದನ್ನೆಲ್ಲ ಸಹಿಸಿದರು. ಆ ಮೇಲೆ ನಾನು ಹುಡುಕಿಕೊಂಡು ಹೋದಾಗ ಪಾಪ! ಸತ್ತು ಹೋಗಿದ್ದರು. ಅಮ್ಮಾ! ನಾನು ಮಾಡಬಾರದ ತಪ್ಪು ಮಾಡಿದೆ."

ಕುತೂಹಲದಿಂದ ಜ್ಯೋತಿರ್ಮಯಿ ದೇವಿ ಕೇಳಿದರು: "ನಿನ್ನನ್ನು ವಂಚಿಸಿ ಕರೆದು ಕೊಂಡು ಹೋದವನೋ?"

ಸ್ವಲ್ಪ ಹೊತ್ತು ಬಿಟ್ಟು ಸಾವಿತ್ರಿ ಅದಕ್ಕೆ ಉತ್ತರಿಸಿದಳು:

"ಮೊದಮೊದಲು ಆ ಮನುಷ್ಯ ನನ್ನನ್ನು ತುಂಬ ಪ್ರೀತಿಸ್ತಿದ್ದ. ಆ ಮೇಲೆ ಅವನು ನನ್ನನ್ನು ಹೊಡೆಯೋದಕ್ಕೆ ಬಡಿಯೋದಕ್ಕೆ ತೊಡಗಿದ. ನಾನು ಅದನ್ನೆಲ್ಲ ಸಹಿಸಿದೆ. ಅಮ್ಮಾ, ನಾನು ನಿಜ ಹೇಳ್ತೀನಿ. ನಾನು ಅವನನ್ನು ಪ್ರೀತಿಸಿದೆ. ಅವನು ನನ್ನನ್ನು ಕೈಬಿಟ್ಟುಹೋದ. ಈಗ ಅವನೆಲ್ಲಿದ್ದಾನೋ ಗೊತ್ತಿಲ್ಲ."

ಅವಳು ತನ್ನ ಹಣೆಯ ಬರಹದ ಕಾರಣವನ್ನು ಕಂಡುಹಿಡಿದ ರೀತಿಯಲ್ಲಿ ಹೇಳಿ ದಳು: "ಅದು ನನಗೆ ಹಾಗಾಗಬೇಕಾದದ್ದೇ. ಆ ಸಾಧು ಮನುಷ್ಯನಿಗೆ ನಾನು ಮೋಸ ಮಾಡಿದೆ. ಅದರ ಫಲ ಅನುಭವಿಸಬೇಡವೇ? ನಾನು ಮಾಡಬಾರದ್ದನ್ನು ಮಾಡಿದೆ."

ಮಾತಾ ಜ್ಯೋತಿರ್ಮಯಿ ದೇವಿಗೆ ಅನುಕಂಪವಲ್ಲ. ಕೌತುಕವುಂಟಾದದ್ದು ಆ ಕಥೆ ಕೇಳುವಾಗ. ಅವರು ಆ ಕಥೆಯ ವಿವರಗಳನ್ನೆಲ್ಲ ಕೆದಕಿ ಕೆದಕಿ ಕೇಳಿದರು. ಸಾವಿತ್ರಿಯ ಮಾತುಗಳು ಸ್ಪಷ್ಟವಾಗಿರಲಿಲ್ಲವಾದರೂ ಅವರಿಗೆ ಸಮಾಧಾನವಾಗಿರಲಿಲ್ಲ.

"ನಿನ್ನ ಗಂಡ ಒಬ್ಬ ಹೆಂಡತಿ ಬೇಡ ಅನ್ನುವವನಾಗಿದ್ದನಾ?"

ಸಾವಿತ್ರಿ ಹೇಳಿದಳು: "ಬೇಕು ಅನ್ನುವವರಾಗಿದ್ದರು. ಅದಲ್ಲ. ನನ್ನ ಯೌವನದ ಕಾವು."

"ನೀನು ಆಗುಹೋಗುಗಳನ್ನು ಕುರಿತು ಆಲೋಚಿಸಲಿಲ್ಲವಾ?"

"ಇಲ್ಲಮ್ಮಾ ಇಲ್ಲ. ಆಗ ನನಗೆ ಅದೊಂದೂ ಗೊತ್ತಾಗಲಿಲ್ಲ. ಯೌವನದ ಕಾಲ ಅಲ್ವಾ?"

"ಎರಡನೆಯವನೋ?"

"ನಾನು ಅವನನ್ನು ಪ್ರೀತಿಸಿಬಿಟ್ಟೆ."

"ಅದ್ಯಾಕೆ ನೀನು ಪ್ರೀತಿಸಿದ್ದು?"

ಪ್ರೀತಿಸಿಬಿಟ್ಟೆ ಎಂದು ಮಾತ್ರ ಅವಳಿಗೆ ಹೇಳಲು ಸಾಧ್ಯವಾಗಿದ್ದದ್ದು. ಈ ರೀತಿ ಯಲ್ಲಿ ಮಾತಾಜಿ ಪ್ರಶ್ನಿಸಿಕೊಂಡಿದ್ದದ್ದು. ಆ ಸನ್ಯಾಸಿನಿಯ ಪ್ರಶ್ನೆಗಳು ಸಾವಿತ್ರಿಯನ್ನು ಸಂಕೋಚಪಡಿಸಲಿಲ್ಲ. ವಿಷಮಕ್ಕೊಳಗು ಮಾಡಲಿಲ್ಲ. ಆದರೆ, ಅವರಿಗೆ ತನ್ನ ಕಥೆ ಹೇಗೆ ತಿಳಿಯಿತು ಎಂದು ಅವಳು ಆಶ್ಚರ್ಯಪಟ್ಟಳು.

ಮಾತಾಜಿಗೆ ಆ ಕಥೆಯನ್ನು ಸಂಗ್ರಹವಾಗಿ ಕೇಳಿದ್ದರಿಂದ ಮಾತ್ರ ಸ್ಪಷ್ಟವಾದದ್ದು

ಸ್ವಾಭಾವಿಕ. ಅವರು ಒಬ್ಬ ಸನ್ಯಾಸಿನಿಗೆ ಯೋಗ್ಯವಲ್ಲದ ರೀತಿಯಲ್ಲಿ ಕೆದಕಿ ಕೆದಕಿ ಕೇಳಿದ್ದೂ ಅದಕ್ಕಾಗಿಯೇ. ಎಷ್ಟೋ ವರ್ಷಗಳಿಗೆ ಮೊದಲು ತಿರುವನಂತಪುರದಲ್ಲಿ ತಂಗಮ್ಮ ಎನ್ನುವ ಒಬ್ಬ ಸೆಕ್ರೆಟರಿಯೇಟ್ ಕ್ಲಾರ್ಕ್ ಹಾಗೆ ದಾರಿತಪ್ಪಿ ಹೋಗಿದ್ದಳು. ಅವಳ ನಡೆನುಡಿಗಳು ವ್ಯತ್ಯಾಸವಾಗಿದ್ದುವು ಅಷ್ಟೆ. ಅವಳು ಬೀದಿಗೆ ಎಸೆಯಲ್ಪಡಲಿಲ್ಲ. ಅವಳು ಭಿಕ್ಷೆ ಬೇಡಬೇಕಾಗಿ ಬಂದಿರಲಿಲ್ಲ. ಬೀದಿಗಿಳಿಯುವುದರ ಬದಲು ಅವಳು ಒಂದು ಆಶ್ರಮಕ್ಕೆ ಬಂದು ತಲಪಿದಳು. ಒಂದು ಆಶ್ರಮವನ್ನು ತೆರೆಯಲೂ ಅಲ್ಲಿಯ ಮಾತಾಜಿಯಾಗಲೂ ಸಾಧ್ಯವಾಯಿತು. ಎದುರಿಗೆ ನಿಂತಿರುವ ಈ ಹೆಣ್ಣಿನ ಜೀವನದ ಅನುಭವಗಳೇ ಅಲ್ಲವೇ ಮಾತಾಜಿಗೂ ಉಂಟಾದದ್ದು? ಇಬ್ಬರ ಆಂತರಿಕವಾದ ಅನುಭವಗಳಿಗೆ ಯಾವ ವ್ಯತ್ಯಾಸವಿರುವುದು?

ಸ್ವಲ್ಪ ಹೊತ್ತು ಆ ಹೋಲಿಕೆಯಲ್ಲಿ ಜ್ಯೋತಿರ್ಮಯಿ ದೇವಿ ಕುಳಿತುಬಿಟ್ಟರು. ಸಾವಿತ್ರಿಯೂ ಚಿಂತಾಮಗ್ನಳಾಗಿದ್ದರು. ಮೊದಲು ಸತ್ಯ ಹೇಳದೇ ಹೋದದ್ದು ತಪ್ಪಾಗಿ ಹೋಯಿತು ಎನ್ನುವ ಅಪರಾಧ ಪ್ರಜ್ಞೆ ಸಾವಿತ್ರಿಗಿದ್ದದ್ದು. ಸುಳ್ಳು ಹೇಳಿದಳು. ಅದನ್ನು ಕುರಿತು ಅವಳು ಪರಿತಪಿಸುತ್ತಿದ್ದಳು. ಹಾಗೆ ಅವರಿಬ್ಬರೂ ತಮ್ಮದೇ ಆದ ರೀತಿಯಲ್ಲಿ ಆಲೋಚಿಸುತ್ತ ನಿಶ್ಶಬ್ದರಾಗಿದ್ದರು. ಸಾವಿತ್ರಿ ಆ ಮೇಲೆ ಮಾತಾಡಿದುದು. ಕ್ಷಮೆ ಯಾಚಿಸುತ್ತ ಅವಳು ಹೇಳಿದಳು: "ಅಮ್ಮಾ, ನಾನು ಸುಳ್ಳು ಹೇಳಿದ್ದನ್ನ ಮರೆಯಬೇಕು. ನಾನು ಮಹಾ ಪಾಪಿ. ದೊಡ್ಡ ತಪ್ಪು ಮಾಡಿದವಳು. ನಾನು ನಿಜ ಹೇಳಿದರೆ ಅಮ್ಮ ಹೊಡೆದು ಆಚೆಗೆ ಅಟ್ಟಬಹುದು ಎಂದು ಹೆದರಿದೆ. ನಾನು ನಿಜ ಹೇಳೋದಿದ್ದರೆ ಯಾರೂ ಒಂದು ಲೋಟ ನೀರು ಕೂಡ ಕೊಡೋದಿಲ್ಲ. ಅಂಥ ಪಾಪಿ ನಾನು."

ಆ ಮಾತು ಜ್ಯೋತಿರ್ಮಯಿ ದೇವಿಯನ್ನು ನಡುಗಿಸಿತು. ಈ ನೆಲೆಯೂ ಈ ಅವಸ್ಥೆಯೂ, ಇಲ್ಲದೇ ಇದ್ದಿದ್ದರೆ ತಂಗಮ್ಮನಿಗೆ ತಾನೆ ಯಾರು ನೀರು ಕೊಡುತ್ತಿದ್ದರು? ದಯೆಗೋ ಅನುಕಂಪಕ್ಕೋ ಆ ತಂಗಮ್ಮ ಅರ್ಹಳಾಗಿದ್ದಾಳೆ? ಇಂದು ಅವಳನ್ನು ರಕ್ಷಿಸುತ್ತಿರುವುದು ಯಾವುದು? ಆ ಒಂಟಿತನ.

ಮಾತಾ ಜ್ಯೋತಿರ್ಮಯಿಗೆ ಬಾಳಿನಲ್ಲಿ ಮೊತ್ತ ಮೊದಲಾಗಿ ತನ್ನ ಜೀವನದ ಯಥಾರ್ಥತೆಯನ್ನು ಕುರಿತು ಒಂದು ಪ್ರಜ್ಞೆಯುಂಟಾಗಿತ್ತು. ತನಗೆ ಯಾರಿದ್ದಾರೆ ಎನ್ನುವ ಒಂದು ತೋರಿಕೆಯುಂಟಾಯಿತು. ಪರಿಚಯವಿರುವವರಿಗೆಲ್ಲ ಈ ಕಥೆ ಗೊತ್ತಿದೆ. ಒಬ್ಬರೇ ಒಬ್ಬರು ಅನುಕಂಪ ತೋರಿಸುವುದಿಲ್ಲ. ಬಹುಶಃ ಎದುರಿಗೆ ನಿಂತಿರುವ ಈ ಭಾಗ್ಯಹೀನೆಯಾದ ಹೆಣ್ಣು ತನ್ನ ಚರಿತ್ರೆಯನ್ನೆಲ್ಲ ಕೇಳಿದ್ದಿದ್ದರೆ ಕಾಣಬಹುದಾಗಿತ್ತು.

ಮಾತಾಜಿ ಕೇಳಿದರು: "ನೀನು ನನ್ನ ಜೊತೆಯಲ್ಲಿ ಇಲ್ಲೇ ಇರ್ತೀಯಾ?"

ಸಾವಿತ್ರಿಗೆ ಆಲೋಚನೆ ಮಾಡಬೇಕಾದದ್ದೇನೂ ಇಲ್ಲವಲ್ಲ. ಅವಳು ಹೇಳಿದಳು: "ಇರ್ತೀನಿ."

ಹೆಚ್ಚಿಗೆ ಏನೋ ಕೆಲವು ಪ್ರಶ್ನೆಗಳನ್ನು ಕೇಳುವುದಕ್ಕಾಗಿ ಅಲ್ಲದಿದ್ದರೆ ಕೆಲವು ವಿಷಯಗಳನ್ನು ಹೇಳುವುದಕ್ಕಾಗಿ ಮಾತಾಜಿ ಅವಶ್ಯಪಡುತ್ತಿದ್ದಾರೆ ಎನ್ನಿಸಿತು ಸಾವಿತ್ರಿಗೆ. ಮರ್ಯಾದೆಯಾಗಿ ಜೀವಿಸಬೇಕು ಅಂತಲೋ ಹಿಂದಿನ ಜೀವನವನ್ನು ಕೈಗೊಳ್ಳಬಾರದೆಂದೋ ಇದೊಂದು ಆಶ್ರಮವೆಂದು ತಿಳಿಯಬೇಕೆಂದೋ ಮುಂತಾಗಿ ನಿರ್ದೇಶಿಸುವಂಥಾದ್ದಿರಬಹುದೇ ! ಆದರೆ ಏನೂ ಹೇಳಲಿಲ್ಲ. ಅಂತು ಅವಳು ಹೇಳಿದಳು: "ನಾನು ಮರ್ಯಾದೆಯಿಂದ ಬಾಳ್ತೀನಿ."

ಮಾತಾಜಿ ಅದಕ್ಕೆ ಒಪ್ಪಿದರು: "ಸರಿ ಹಾಗಿದ್ದರೆ ಇರು."

ಮಾತಾಜಿ ಆ ದಿನವಿಡೀ ಚಿಂತಾಮಗ್ನೆಯೂ ಅಸ್ವಸ್ಥೆಯೂ ಆಗಿದ್ದರು. ಈ ಲೋಕದಲ್ಲಿ, ಬದುಕಿನಲ್ಲಿ ಪರಿವರ್ತನೆ ಹೊಂದಿದ ಎಷ್ಟೆಷ್ಟು ಮಂದಿ ತಂಗಮ್ಮರು, ಸಾವಿತ್ರಿಯರು ಇದ್ದಾರೆ ! ಅವರೆಲ್ಲ ಭಿಕ್ಷಾಪಾತ್ರೆ ಹಿಡಿದು ತಿರುಗುತ್ತಾರೆ. ಈ ಸ್ಥಿತಿ ಯಲ್ಲಲ್ಲದಿದ್ದಿದ್ದರೆ ರೋಗ ಹಿಡಿದು ಭಿಕ್ಷಾಪಾತ್ರೆ ಹಿಡಿದು ನಡೆಯಬೇಕಾಗಿದ್ದ ತಂಗಮ್ಮನ ಮನೆ ಇದು. ಇಲ್ಲಿ ಹಾಗೆ ಅದೃಷ್ಟಹೀನರಾದ ಹೆಣ್ಣುಗಳಿಗೆ ಅಭಯ ನೀಡಿದರೇನು ಎಂದು ಮಾತಾಜಿ ಆಲೋಚಿಸಿದರು.

ಒಬ್ಬಳು ಭಿಕ್ಷುಕಿಯನ್ನು ಒಳಗೆ ಸೇರಿಸಿಕೊಂಡು ಸಾಕುವುದನ್ನು ಪ್ರಭಾವತಿ ಅಮ್ಮೊಂದು ಇಷ್ಟಪಡಲಿಲ್ಲ. ನಿತ್ಯಾನಂದಮಯಿಗೂ ತೇಜಸ್ವರೂಪಿಣಿಗೂ ಅದನ್ನು ಕುರಿತು ಮಾತನಾಡಲು ಯಾವ ಅಭಿಪ್ರಾಯವೂ ಇಲ್ಲ. ಮಾತಾಜಿಯ ತೀರ್ಮಾನ ಅದು. ಅಷ್ಟು ಮಾತ್ರವಲ್ಲ ಒಬ್ಬ ಗತಿಯಿಲ್ಲದ ಹೆಣ್ಣು ಜೀವಿಸಿಕೊಳ್ಳಲಿ.

ನಾಲ್ಕಾರು ದಿನಗಳು ಕಳೆದ ಮೇಲೆ ಹೊರಗೆಲ್ಲಿಯೋ ಹೋಗಿ ಬಂದ ಮಾತಾಜಿಯ ಜೊತೆಯಲ್ಲಿ ಮತ್ತೊಬ್ಬಳು ಭಿಕ್ಷುಕಿಯಿದ್ದಳು. ನಿಜವಾಗಿಯೂ ಅವಳಿಗೂ ಒಂದು ಕಥೆಯಿರುತ್ತದೆ. ಸಾವಿತ್ರಿಯದಕ್ಕಿಂತ ಬೇರೆಯಾಗಿರಬಹುದು.

ಪುನಃ ಒಬ್ಬಳನ್ನು ಕರೆದುಕೊಂಡು ಬಂದಾಗ ಪ್ರಭಾವತಿ ದೇವಿ ಉಳಿದ ಸನ್ಯಾಸಿನಿಯರ ಹತ್ತಿರ ಹೇಳಿದರು: "ಹೀಗೆ ಒಬ್ಬೊಬ್ಬಳನ್ನು ಕರೆದುಕೊಂಡು ಬರುವಾಗ ಯಾರ ಹತ್ತಿರವೂ ಹೇಳುವುದೂ ಕೇಳುವುದೂ ಬೇಡವಾ?"

ಉಳಿದ ಸನ್ಯಾಸಿನಿಯರಿಗೆ ಏನು ಹೇಳಲೂ ಇಲ್ಲವಾಗಿತ್ತು. ಪ್ರಭಾವತಿ ದೇವಿ ಮಾತ್ರ ಗೊಣಗುತ್ತಿದ್ದರು. ಆದರೆ ಅವರೇನೂ ಕೇಳಲಿಲ್ಲ. ಅವರ ವಿರೋಧವನ್ನು ಪ್ರಕಟಿಸಲೂ ಇಲ್ಲ.

ಹೆಚ್ಚು ದಿನಗಳು ಕಳೆಯುವ ಮೊದಲು ಏಳು ಅನಾಥ ಸ್ತ್ರೀಯರು ಆ ಆಶ್ರಮಕ್ಕೆ ಬಂದು ಸೇರಿದರು. ಪ್ರಭಾವತಿ ದೇವಿ ಸಿಟ್ಟನ್ನು ಸಹಿಸದೆ ತೇಜಸ್ವರೂಪಿಣಿಯ ಹ ್ ರ ಹೇಳಿದರು: "ರಕ್ತ ಕಂಡ ಕಡೆಗೆ ಈಚಿಚಿ ಬಂದು ಸೇರಿಕೊಂಡ ಹಾಗೆ."

ಈ ಸ್ಥಿತಿ ಮುಂದುವರಿದರೆ ಆ ದರಿದ್ರ ಹೆಣ್ಣುಗಳೇ ತುಂಬಿ ಕೊಳ್ಳವೆ. ಆಶ್ರಮ ಆಶ್ರಮವಾಗಿರುವುದಿಲ್ಲ. ಆಶ್ರಮದ ಪರಿಶುದ್ಧತೆ ಹೋಗುತ್ತೆ. ಒಂದು ವೇಳೆ

ಕಲಿತದ್ದೇ ಹಾಡು ಎನ್ನುವ ನಿಯಮವನ್ನನುಸರಿಸಿ ಅಲ್ಲಿ ಆ ಹೆಣ್ಣುಗಳು ಹಿಂದಿನ ಜೀವನ ಪ್ರಾರಂಭಿಸಲೂಬಹುದು.

ಸಾವಿತ್ರಿ ಹೊಸ ಜೀವನದಲ್ಲಿ ಬದಲಾಯಿಸಿದಳು. ಅವಳು ಸುಂದರಿಯಾದಳು. ಅವಳಿಗೆ ಒಳ್ಳೆಯ ತೇಜಸ್ಸಿತ್ತು. ಮತ್ತಾವ ಸ್ತ್ರೀಗಿಂತಲೂ ಭಕ್ತಾದಿಗಳಲ್ಲಿ ಗಂಡಸರ ದೃಷ್ಟಿ ಅವಳ ಮೇಲೆ ಬೀಳುತ್ತಿತ್ತು. ಅವಳನ್ನು ಕುರಿತು ಮಾತನಾಡುತ್ತಲೂ ಇದ್ದರು. ಅಲ್ಲಿಯ ಅನುಕೂಲವನ್ನು ಅನುಸರಿಸಿ ಜೀವಿಸುತ್ತಿದ್ದಳು.

•

# [36]

## ವಿರಕ್ತಿ

ಆಶ್ರಮದಲ್ಲಿ ಇದ್ದಕ್ಕಿದ್ದ ಹಾಗೆ ಆ ರೀತಿಯ ಸಮಸ್ಯೆಗಳುಂಟಾದವು. ಪ್ರಭಾವತಿ ದೇವಿಗೆ ಒಳಗೊಳಗೇ ಮಾತಾಜಿಯೊಡನೆ ಬೇಸರವುಂಟಾಯಿತು. ಈಗಾಗಲೇ ಎಷ್ಟೋ ಭಿಕ್ಷುಕಿಯರನ್ನು ಕರೆದುಕೊಂಡು ಬಂದಾಯಿತು. ಇನ್ನೂ ಕರೆದುಕೊಂಡು ಬರುವುದು ಖಂಡಿತ. ಆಕೆಯ ಜೀವನದಲ್ಲುಂಟಾದ ಅನಿರೀಕ್ಷಿತ ಬದಲಾವಣೆ ಅದು. ಯಾರೊಡನೆಯೂ ಒಂದು ಮಾತು ಕೇಳದೆ ಈ ಪ್ರವೃತ್ತಿಯಲ್ಲಿ ತೊಡಗಿರುವುದು. ಉಳಿದವರಿಗೂ ಹಕ್ಕಿದೆ ಎನ್ನುವುದು ಹೋಗಲಿ, ಅಲ್ಲಿ ಇನ್ನು ಬೇರೆ ಜನರು ವಾಸಮಾಡುತ್ತಿದ್ದಾರೆ ಎನ್ನುವ ಆಲೋಚನೆಯಾದರೂ ಬೇಡವೇ? ಆ ವಿಚಾರವೂ ಇಲ್ಲ. ಆಶ್ರಮದ ಖರ್ಚೂ ಹೆಚ್ಚುತ್ತ ಬಂದಿತು. ಇಷ್ಟೊಂದು ಜನರನ್ನು ಸಾಕಿ ಸಲಹುವುದು ಹೇಗೆ? ಅದಕ್ಕೆ ವರಮಾನ ಎಲ್ಲಿದೆ? ಹಿಂದುಮುಂದನ್ನು ಕುರಿತ ಆಲೋಚನೆಯಿಲ್ಲದ ಆ ನಡವಳಿಕೆಯನ್ನು ಕುರಿತು ಪ್ರಭಾವತಿಗೆ ತೀವ್ರವಾದ ವಿರೋಧವಿತ್ತು. ಪರಸ್ಪರ ಜಗಳವಾಡಿರಲಿಲ್ಲ ಅಷ್ಟೆ. ಆದರೆ ಭಕ್ತಾದಿಗಳಲ್ಲಿ ಅದು ಮಾತಿಗೆ ವಿಷಯವಾಯಿತು. ಮಾತಾಜಿಗೆ ಯಾವ ಬೇಸರವೂ ಇರಲಿಲ್ಲ. ಅವರು ಯಾರ ಹತ್ತಿರವೂ ಏನೂ ಹೇಳಲೂ ಇಲ್ಲ. ಆದರೆ ಪ್ರಭಾವತಿ ದೇವಿ ಯಾರು ಯಾರ ಹತ್ತಿರ ಏನೇನು ಹೇಳಬೇಕೋ ಹೇಗೆ ಹೇಳಬೇಕೊ ಅದನ್ನೆಲ್ಲ ಹೇಳಿಯಾಯಿತು. ಕೆಲವರ ಹತ್ತಿರ ದೂರು ಹೇಳಿದರು. ಮತ್ತೆ ಕೆಲವರ ಹತ್ತಿರ ಹಕ್ಕಿನ ವಿಚಾರವಾಗಿ ವಾದಿಸಿದಳು. ಕೆಲವರು ಮಾತಾಜಿಯನ್ನು ಆಕ್ಷೇಪಿಸಿದರು. ಇನ್ನು ಮೇಲೆ ಯಾವಳನ್ನಾದರೂ ಕರೆದುಕೊಂಡು ಬಂದರೆ ಎಲ್ಲರನ್ನೂ ಅಲ್ಲಿಂದ ಬಡಿದು ಓಡಿಸುವುದಾಗಿ ಪ್ರಭಾವತಿ ದೇವಿ ಒಬ್ಬ ಅಸಿಸ್ಟೆಂಟ್ ಸೆಕ್ರೆಟರಿಯ ಹೆಂಡತಿಯೊಡನೆ ಹೇಳಿದಳು. ಆ ಸ್ತ್ರೀ ಎರಡು ದಿನಗಳ ನಂತರ ಮಾತಾಜಿಗೆ ತಿಳಿಸಿದಳು.

ಮಾತಾ ಜ್ಯೋತಿರ್ಮಯಿ ದೇವಿಗೆ ಆ ಮಾತು ಸ್ವಲ್ಪ ಹೆಚ್ಚಾಯಿತು ಎನ್ನಿಸಿತು. ಅವರು ಸಿಡುಕಿನಿಂದ ಹೇಳಿದರು:

"ಇಲ್ಲಿಂದಲಾ ಹೊರಕ್ಕೆ ಕಳಿಸೋದು? ನಾನು ಕರೆದು ವಾಸಮಾಡಿಕೊಳಿ, ಅಂದಿರೋ ಹೆಣ್ಣುಮಕ್ಕಳನ್ನ?"

ಭವಾನಿಯಮ್ಮ (ಅದು ಆಕೆಯ ಹೆಸರು) ಹೇಳಿದರು:

"ಹಾಗಂತ ಹೇಳಿದ್ದು."

ಮಾತಾಜಿಗೆ ವಿಪರೀತ ಸಿಟ್ಟು ಬಂದಿತು:

"ಹಾಗಿದ್ದರೆ ಭವಾನಿಯಮ್ಮ, ಅವಳ ಹತ್ರ ಇದು ನನ್ನ ಮನೆ ಅಂತ ಹೇಳಿ. ಇಲ್ಲಿ ನನಗೆ ಇಷ್ಟ ಇರೋರನ್ನ ಸಾಕ್ತೀನಿ."

ಮಾತಾಜಿಗೆ ಮತ್ತೂ ಒಂದು ವಿಷಯ ಹೇಳುವುದಿತ್ತು:

"ಆ ಹಕ್ಕು ಹಾಗಿರಲಿ. ನಾನಿಲ್ಲಿಯ ಮಾತಾಜಿ. ನನಗೆ ಆ ದೃಷ್ಟಿಯಲ್ಲೂ ಕೆಲವು ಅಧಿಕಾರಗಳಿವೆ."

ಪ್ರಭಾವತಿ ದೇವಿಗೆ ಆ ವಿಷಯ ಬೇಗ ತಿಳಿಯಿತು. ಆಗ ಅವಳು ಹೇಳಿದ್ದು ಹೀಗೆ:

"ಮನೆಯ ಹಕ್ಕು ಹಿಂದೆ ಇತ್ತು. ಈಗ ಇದು ಸಾರ್ವಜನಿಕರದು. ನಾನು ಇಲ್ಲಿಗೆ ಸುಮ್ಮನೆ ಬಂದು ಸೇರಿದವಳಲ್ಲ. ಕಷ್ಟಪಟ್ಟು ದುಡಿದು ಸಂಪಾದಿಸಿದ ಹನ್ನೆರಡು ಸಾವಿರ ರೂಪಾಯಿ ಇಲ್ಲಿಗೆ ಹಾಕಿದ್ದೀನಿ. ಹಾಗೆಲ್ಲ ಯಾರೂ ಅಧಿಕಾರ ತೋರಿಸೋದು ಬೇಡ. ತೋರಿಸಿದರೆ ನಾನೂ ಒಂದು ಕೈ ನೋಡಬೇಕಾಗುತ್ತೆ."

ಪ್ರಭಾವತಿ ದೇವಿ ಭೂದೇವಿಯಂತೆ ಕ್ಷಮಿಸಿಕೊಂಡಿದ್ದಳು. ಅದು ಆಶ್ರಮದ ಅಭ್ಯುದಯಕ್ಕಾಗಿ.

ಮಾತಾಜಿ ಕರೆದುಕೊಂಡು ಬಂದು ಸಾಕುತ್ತಿದ್ದ ಸ್ತ್ರೀಯರು ಒಟ್ಟಿಗೆ ಕುಳಿತು ಮಾತನಾಡುತ್ತಿದ್ದರು. ಹಾಗೆ ಮಾತನಾಡುತ್ತಿದ್ದಾಗ ಯಾರೋ ಒಬ್ಬಳು ಒಂದು ಒಳ್ಳೆಯ ತಮಾಷೆ ಮಾತಾಡಿದಳು. ಎಲ್ಲರೂ ಆಗ ಗಟ್ಟಿಯಾಗಿ ನಕ್ಕರು. ಅಷ್ಟೊಂದು ಗಟ್ಟಿಯಾಗಿ ಅಲ್ಲ. ನಗುವನ್ನು ತಡೆಹಿಡಿದುಕೊಂಡೇ ನಕ್ಕದ್ದು. ಆದರೂ ಹಲವಾರು ಮಂದಿ ಒಂದು ರೂಮಿನಲ್ಲಿ ನಕ್ಕದ್ದಲ್ಲವೆ? ಶಬ್ದ ಸ್ವಲ್ಪ ಹೆಚ್ಚಾಗಿ ಕೇಳಿಸಿತು. ಅಂತಹ ನಗುವನ್ನು ನಿಷೇಧಿಸಲಾಗಿದ್ದ ಭಾಗ್ಯಹೀನೆಯರು ಅವರು. ಪ್ರಭಾವತಿಯ ಅಂತರಂಗ ದಲ್ಲಿ ಕಟ್ಟಿ ಕಟ್ಟಿ ನಿಂತಿದ್ದ ರೋಷದ ಕಟ್ಟೆ ಒಡೆಯಿತು. ಸಿಟ್ಟುಮಾಡಿಕೊಂಡು, ಮುಖ ಕೆಂಪಗೆ ಮಾಡಿಕೊಂಡು ಪ್ರಭಾವತಿ ದೇವಿ ಅಲ್ಲಿಗೆ ಹೋಗಿ ರೇಗಾಡಿದಳು. ಬಯ್ದಳು. ಪಾಪ ಮಾಡಿದ ಸ್ತ್ರೀಯರು ತಬ್ಬಿಬ್ಬಾದರು. ಪುನಃ ಬೀದಿಯ ಪಾಲಾಗಬೇಕಾದಿ ತೆಂದು ಅವರು ಹೆದರಿದರು.

ಪ್ರಭಾವತಿ ದೇವಿ ಹೇಳಿದಳು: "ಹಾಗೆಲ್ಲ ಇಲ್ಲಿ ತಿಂದು ಬೆಳೆದು ಮೈಮರೆತಿರ ಬೇಡಿ. ಮಾತಾಜಿಯ ಪ್ರೀತಿಗೆ ಪಾತ್ರರಾದವರು ಅಂತ ಆಹ್ಲಾದಿಸ್ತಿದ್ದೀರಾ? ಇಲ್ಲಿ ರೋದು ಮಾತಾಜಿ ಮಾತ್ರ ಅಲ್ಲ. ಹೇಳಿದ್ದೀನಿ. ನಾನು ಬಡಿದು ಆಚೆಗಟ್ಟಿಯೇನು?"

ಯಾರೂ ಮಾತಾಡಲಿಲ್ಲ. ತಮಾಷೆ ಮಾತಾಡಿದ್ದವಳು ತುಂಬ ಹೆದರಿ ಕೊಂಡಿದ್ದಳು. ಅದು ಸಾವಿತ್ರಿ. ಅವಳ ಕಾರಣದಿಂದಾಗಿ ಎಲ್ಲರೂ ತಪ್ಪುಗಾರರಾದರು. ವಿಚಾರಣೆ ನಡೆದರೆ ತಪ್ಪು ಅವಳದು ಎಂದು ತಿಳಿಯುತ್ತದೆ. ಸಾವಿತ್ರಿ ತಪ್ಪೊಪ್ಪಿಕೊಳ್ಳು ವವಳಂತೆ ಹೇಳಿದಳು:

"ನಾವು ಇನ್ನು ಮೇಲೆ ನಗೋದಿಲ್ಲಮ್ಮ, ಕ್ಷಮಿಸಿ."

ಇದ್ದ ಸಿಟ್ಟೆಲ್ಲ ಅವಳ ಮೇಲೆ ತಿರುಗಿತು.

"ಹಾಳಾದವಳೇ ! ಈ ಆಶ್ರಮ ಹಾಳು ಮಾಡಿದವಳೇ ನೀನು. ನಿನ್ನ ಬೆಡಗು ಬಿನ್ನಾಣ. ನಗೋದು. ಅಳೋದು ಎಲ್ಲ ನನಗೆ ಗೊತ್ತಿದೆ. ಇಲ್ಲಿಂದ ಇನ್ನೊಬ್ಬನನ್ನ ಹಾರಿಸಿಕೊಂಡು ಹೋಗಬೇಕು ಅಂತಲಾ ನಿನ್ನ ಆಲೋಚನೆ?"

ಸಾವಿತ್ರಿ ನಡುಗಿಹೋದಳು. ಆ ಸ್ತ್ರೀಗೆ ಅಂತಹ ಆಲೋಚನೆಯೇ ಇರಲಿಲ್ಲ. ಒಂದು ವೇಳೆ ಅವಳ ಸ್ವಭಾವ ಹಾಗಿದ್ದರೂ ಆ ರೀತಿ ಮಾಡುವಂತಹ ಕಾಲ ಸಮೀಪಿಸಿಲ್ಲ-ವಲ್ಲ ! ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

ಮಾತಾಜಿ ಅಲ್ಲಿಗೆ ಬಂದರು. ಅವರು ಎಲ್ಲಿಂದ ಬಂದರೋ ತಿಳಿಯದು. ಅವರು ಕೇಳಿದರು:

"ಏನಾಯ್ತಿಲ್ಲಿ?"

ಪ್ರಭಾವತಿ ಸ್ವಲ್ಪ ಮುದುಗಿದಂತೆ ತೋರಿತು. ಅವಳು ಸ್ವಲ್ಪ ಹೊತ್ತು ಬಿಟ್ಟು ಹೇಳಿದಳು:

"ಇವರು ಇಲ್ಲಿ ನಕ್ಕು ನಕ್ಕು ಹಾಳಾಗ್ತಾರೆ."

"ಹಾಗಾದರೆ ಅವರು ನಗಬಾರದಾ?"

ಪ್ರಭಾವತಿ ದೇವಿ ತನ್ನನ್ನು ತಾನು ನಿಯಂತ್ರಿಸಿಕೊಳ್ಳುತ್ತಿದ್ದಳು. ಆ ಪ್ರಯತ್ನದಲ್ಲಿ ಒಂದು ವಾಕ್ಯ ಹೀಗೆ ಹೊರಬಂದಿತು.

"ನನಗ ಇದು ಹಿಡಿಸೋದಿಲ್ಲ."

ಅದಕ್ಕೆ ಉತ್ತರ ಮಾತಾಜಿಯ ನಾಲಗೆಯ ತುದಿಯಲ್ಲಿತ್ತು.

"ನಮಗೆ ಅದು ಹಿಡಿಸಲೇಬೇಕು."

"ಹಾಗಂತ ಯಾರು ತೀರ್ಮಾನ ಮಾಡಿದ್ದು?

"ನಾನು."

"ಹಾಗೆ ನಿಮಗ ನೀವೇ ತೀರ್ಮಾನಿಸಬಹುದಾ?"

ಉತ್ತರ ಹೇಳುವುದಕ್ಕಾಗಿಯೋ ಅಥವಾ ಆ ಸಂವಾದ ಅಲ್ಲಿ ಬೇಡವೆಂದೋ ಏನೋ ಮಾತಾಜಿ ಅದಕ್ಕೆ ಉತ್ತರ ಹೇಳಲಿಲ್ಲ. ಅವರು ಸಾವಿತ್ರಿಯ ಹತ್ತಿರ ಕೇಳಿದರು:

"ನೀನು ಯಾಕೆ ಅಳ್ತೀ?"

ಪ್ರಭಾವತಿ ದೇವಿಗೆ ಅದು ಸ್ವಲ್ಪವೂ ಹಿಡಿಸಲಿಲ್ಲ. ದಡದಡನೆ ಹೆಜ್ಜೆ ಹಾಕುತ್ತ ಅವಳು ಅಲ್ಲಿಂದ ಹೊರಟುಹೋದಳು.

ಹೋಗುತ್ತಿದ್ದ ಪ್ರಭಾವತಿ ದೇವಿಯನ್ನು ಮಾತಾಜಿ ಸೂಕ್ಷ್ಮವಾಗಿ ನೋಡಿದರು. ಪುನಃ ಮಾತಾಜಿ ಸಾವಿತ್ರಿಯ ಹತ್ತಿರ ಕೇಳಿದರು:

"ನೀನು ಯಾಕೆ ಅಳ್ತೀ?"

ಪ್ರಭಾವತಿ ದೇವಿ ಹೇಳಿದ್ದೊಂದನ್ನೂ ಸಾವಿತ್ರಿ ಮಾತಾಜಿಗೆ ತಿಳಿಸಲಿಲ್ಲ.

ಅವಳು ಹೀಗೆ ಹೇಳಿದಳು: "ಆ ತಪ್ಪು ಮಾಡಿದ್ದು ನಾನು."

ಸಹಾನುಭೂತಿಯಿಂದ ಮಾತಾಜಿ ಕೇಳಿದರು:

"ನೀವು ನಕ್ಕದ್ದು ಅಷ್ಟೇನಾ?"

"ಅಷ್ಟೇ."

ಮಾತಾಜಿಗೆ ಏನನ್ನೋ ಹೇಳಬೇಕು ಎನ್ನಿಸಿತು. ಆದರೆ ಅವರು ಅದನ್ನು ಹೇಳಲಿಲ್ಲ. ಆ ಮಾತು ಬಹುಶಃ ಇದಾಗಿರಬಹುದು:

"ನಗಾಡಿ. ಇಷ್ಟ ಬಂದಷ್ಟು ನಗಾಡಿ. ಸಾಕಾಗೋ ಅಷ್ಟು ನಗಾಡಿ. ಹಾಗೆ ನೀವು ಸಂತೋಷವಾಗಿರಿ."

ಆಗ ಆ ಮುಖದಲ್ಲಿ ನೆರಳಾಡಿದ ವಿಷಾದ ಛಾಯೆಯಲ್ಲೂ ಒಂದು ಚಿಂತೆ ಆವರಿಸಿದುದನ್ನು ಕಾಣಬಹುದಾಗಿತ್ತು.

"ಹಾಗೆ ನನಗೆ ನಗೋದಕ್ಕೆ ಸಾಧ್ಯವಿಲ್ಲದೆ ಇದ್ದರೂ ನೀವು ನಗೋದನ್ನು ನಾನು ನೋಡಬೇಕು."

ಒಂದು ಮತ್ಸರವುಂಟಾಗುವುದಕ್ಕಾಗಿಯೇ ಎನ್ನುವಂತೆ ಒಂದು ಘಟನೆ ನಡೆಯಿತು. ಎಲ್ಲಿಂದಲೋ ಮಾತಾಜಿ ಒಬ್ಬಳು ಭಿಕ್ಷುಕಿಯನ್ನು ಕರೆದುಕೊಂಡು ಬಂದರು.

ಪ್ರಭಾವತಿ ದೇವಿಗೆ ಆಗ ತೀರ ಸಹಿಸುವುದಕ್ಕೆ ಸಾಧ್ಯವಾಗಲಿಲ್ಲ. ಎರಡರಲ್ಲಿ ಒಂದನ್ನು ನಿರ್ಧರಿಸಿ ತಿಳಿಯಲೇಬೇಕು. ಆಶ್ರಮದ ಸರ್ವಾಧಿಕಾರಿಯಾಗಿ ಸ್ವಾಮಿ ತಿರುವಡಿಗಳಿದ್ದಾರೆ. ಅವರ ಹತ್ತಿರ ಹೇಳಿಕೊಳ್ಳುವುದು. ಅವರು ಹೇಗೆ ಬೇಕೋ ಹಾಗೆ ತೀರ್ಮಾನಿಸಲಿ.

ಪ್ರಭಾವತಿ ದೇವಿಯೊಡನೆ ಹೊಂದಿಕೊಳ್ಳದೆ ನಿತ್ಯಾನಂದಮಯಿ ಪ್ರತ್ಯೇಕವಾಗಿ ನಿಂತಳು. ಪ್ರಭಾವತಿ ದೇವಿಯ ವಾದವನ್ನು ವಿರೋಧಿಸಲೂ ಇಲ್ಲ, ಪರವಾಗಿಯೂ ಹೇಳಲಿಲ್ಲ. ಅದು ಅವಳ ನಿಲುಮೆ.

ಅವಳು ಹೇಳಿದಳು: "ಅಮ್ಮ ಹೇಳೋದೆಲ್ಲ ಸರಿ. ಆದರೆ........."

ಅವರಿಗೆ ಒಂದು ಪಕ್ಷಕ್ಕೆ ವಾಲುವುದು ಆಗದು. ತೇಜಸ್ವರೂಪಿಣಿಯೂ ಅದೇ ರೀತಿಯಲ್ಲಿ ನಿಂತಳು. ಆಶ್ರಮದ ಆಡಳಿತ ವಿಚಾರಗಳಲ್ಲೂ ಅವಳಿಗೆ ಜವಾಬ್ದಾರಿ ಬೇಡ. ಭಗವಂತನನ್ನು ಧ್ಯಾನಿಸಿಕೊಂಡಿರುವುದಷ್ಟೇ ಸಾಕು.

ಭಕ್ತರಲ್ಲಿ ಒಂದು ಒಳ್ಳೆಯ ಗುಂಪು ಪ್ರಭಾವತಿ ದೇವಿಯ ಕಡೆಗಿತ್ತು. ಅದು ಹೇಗೆ ಸಾಧ್ಯವಾಯಿತು ಎಂದು ತಿಳಿಯದು. ಒಂದು ಗುಂಪು ಮಾತಾಜಿಯ ಕಡೆಗೂ ಇತ್ತು. ಆದರೆ ಅದು ನ್ಯೂನಪಕ್ಷವಾಗಿತ್ತು. ಅನಾಥ ವನಿತಾ ಮಂದಿರ ತೆರೆಯುವುದು ಆಶ್ರಮದ ಉದ್ದೇಶಗಳಲ್ಲಿ ಒಂದಾಗಿತ್ತು. ಅದನ್ನು ಇಂದಲ್ಲ ನಾಳೆ ಆರಂಭಿಸಿಯೇ ತೀರಬೇಕು. ಆಶ್ರಮದಲ್ಲೇ ಆ ಅದೃಷ್ಟಹೀನೆಯರು ವಾಸ ಮಾಡುವುದರಲ್ಲಿ ತಪ್ಪೇನು? ಭಕ್ತಾದಿಗಳಿಗೆ ಅದು ಗೊತ್ತಾದರೆ ಅನಂತರ ಅದೇ ಮಾತಾಗುತ್ತದೆ.

ಹೆಚ್ಚು ತಡವಾಗಲಿಲ್ಲ. ಸ್ವಾಮಿ ತಿರುವಡಿಗಳು ದಯಮಾಡಿಸುತ್ತಿದ್ದಾರೆ

ಎನ್ನುವ ಸುದ್ದಿ ತಿಳಿಯಿತು. ಅಂದಿನಿಂದ ಭಕ್ತ ಜನರೊಳಗೆ ಅದೇ ಮಾತಾಗಿತ್ತು. ತಿರುವ ನಂತಪುರದಲ್ಲಿ ಅದೊಂದು ದೊಡ್ಡ ಘಟನೆಯಾಗಿತ್ತು. ದೇವಿ ಪ್ರಭಾವತಿಗೆ ಹೆಚ್ಚು ಸಂತೋಷವಿತ್ತು. ಅವಳು ಕಳುಹಿಸಿದ ದೂರಿಗೆ ಫಲ ದೊರೆಯಿತು ಎನ್ನುವುದು ಮಾತ್ರ ವಲ್ಲ ಸ್ವಾಮಿ ತಿರುವಡಿಗಳೇ ಸ್ವತಃ ದಯಮಾಡಿಸುತ್ತಿದ್ದಾರೆ. ಸ್ವಾಮಿ ತಿರುವಡಿಗಳು ದಯಮಾಡಿಸಿದಲ್ಲಿ ತಾನು ಜಯಿಸುತ್ತೇನೆಂದು ಪ್ರಭಾವತಿ ದೇವಿಯ ವಿಶ್ವಾಸ. ಸ್ವಾಮೀಜಿಯೇ ದಯಮಾಡಿಸಬೇಕು ಎಂದಾಗಿತ್ತು ಅವಳ ದೈನ್ಯ ಪ್ರಾರ್ಥನೆ. ಅದಕ್ಕೆ ಕಾರಣವಿತ್ತು. ಚಿನ್ನಸ್ವಾಮಿಗಳು ಬರುವುದಿದ್ದಲ್ಲಿ ಅವರು ಮಾತಾಜಿಯ ಪಕ್ಷಕ್ಕೆ ಸೇರಿ ತೀರ್ಮಾನ ಮಾಡುತ್ತಾರೆ ಎಂದು ಪ್ರಭಾವತಿ ದೇವಿ ನಂಬಿದ್ದಳು. ಅವರಲ್ಲಿ ಪರಸ್ಪರ ಸಾಮೀಪ್ಯವಿದೆ. ಆದರೆ ಸ್ವಾಮಿ ತಿರುವಡಿಗಳು ಅದಕ್ಕೆ ವಿರುದ್ಧ. ಅವರಿಗೆ ದೇವಿ ಪ್ರಭಾವತಿಯ ಹತ್ತಿರ ವಿಶೇಷ ವಾತ್ಸಲ್ಯವಿತ್ತು. ಅದಕ್ಕೆ ಪ್ರತಿಯಾಗಿ ಮಾತಾಜಿಗೆ ಮ್ಲಾನತೆ ಯುಂಟಾಯಿತು. ಸ್ವಾಮಿ ತಿರುವಡಿಗಳಿಗೆ ಮೊದಲಿನಿಂದಲೂ ದೇವಿ ಪ್ರಭಾವತಿಯೊಡನೆ ಇಷ್ಟವೆಂದು ಮಾತಾಜಿಗೂ ಗೊತ್ತಿತ್ತು. ಆದರೆ ಮಾತಾಜಿ ನಿರಾಶೆ ಹೊಂದಲಿಲ್ಲ. ಯಾವುದೋ ಒಂದು ಧೈರ್ಯವನ್ನು ತಂದುಕೊಂಡರು. ಯಾರೋ ಆಶ್ರಮದ ಭಕ್ತರ ಹತ್ತಿರ ಅವರ ಹೀಗೆ ಹೇಳಿದರು:

"ಸ್ವಾಮಿಗಳು ನ್ಯಾಯವಾದ ತೀರ್ಮಾನ ಮಾಡದಿದ್ದಲ್ಲಿ. ನನ್ನ ಹೆಣ್ಣುಮಕ್ಕಳನ್ನು ಹೊರಗೆ ಕಳಿಸುವುದಿದ್ದಲ್ಲಿ......... ನನಗೆ ಗೊತ್ತು ಏನು ಮಾಡಬೇಕು ಅಂತ."

ಅವರು ಸ್ವಾಮೀಜಿಯನ್ನೇ ಧಿಕ್ಕರಿಸುತ್ತಾರೆ. ಅವರೇನೋ ಆಲೋಚನೆ ಮಾಡಿಟ್ಟುಕೊಂಡಿದ್ದಾರೆ—ಸ್ವಾಮೀಜಿಯ ಆಗಮನಕ್ಕೆ ಸಂಬಂಧಿಸಿದಂತೆ ವಿಜೃಂಭಣೆಯ ಸಿದ್ಧತೆಗಳು ನಡೆದುವು. ಆಶ್ರಮವನ್ನು ಸ್ಥಾಪಿಸಿದ ನಂತರ ಮೊತ್ತಮೊದಲಾಗಿ ಸ್ವಾಮೀಜಿ ಆಗಮಿಸುತ್ತಿರುವುದು. ಸ್ವಾಮಿಯ ತಿರುವನಂತಪುರದ ಮೊಕ್ಕಾಂ ಸಮಯ ದಲ್ಲಿ ಅವಸರದ ಕಾರ್ಯಕ್ರಮಗಳಿದ್ದವು. ಭಕ್ತಜನರೆಲ್ಲರಿಗೂ ಅವರ ಮನೆಗಳಲ್ಲಿ ಸ್ವಾಮೀಜಿಗೆ ಪೂಜೆ ನಡೆಸಬೇಕು. ಐನೂರು ಮಕ್ಕಳಿಗೆ ಸ್ವಾಮಿಯ ದಿವ್ಯ ಹಸ್ತಗಳಿಂದ ಅನ್ನ ಪ್ರಾಶನ ಮಾಡಿಸಬೇಕು. ಕೆಲವು ಡಿಪಾರ್ಟ್‌ಮೆಂಟ್ ಮುಖಂಡರ ಮನೆಗಳಲ್ಲಿ ಹಾಲುಕ್ಕಿಸುವ ಕಾರ್ಯವನ್ನು ಸ್ವಾಮಿಯಿಂದ ನಡೆಸಬೇಕು. ಕೆಲವು ವ್ಯಾಪಾರೋದ್ಯಮ ಗಳನ್ನು ಪ್ರಾರಂಭಿಸಬೇಕಾದದ್ದಿತ್ತು. ಹಾಗೆ ತುಂಬ ಕಾರ್ಯಗಳಿದ್ದುವು. ಈ ಲೆಕ್ಕದಲ್ಲಿ ಸ್ವಾಮಿ ಒಂದು ವರ್ಷವಿಡೀ ಇಲ್ಲಿ ಉಳಿದುಕೊಂಡರೂ ಎಲ್ಲ ಕಾರ್ಯಕ್ರಮಗಳನ್ನೂ ಮಾಡಿ ಮುಗಿಸಲು ಸಾಧ್ಯವಿಲ್ಲ.

ಸ್ವಾಮಿ ತಿರುವನಂತಪುರಕ್ಕೆ ಆಗಮಿಸುವ ದಿನ ಸರ್ಕಾರದ ಆಫೀಸುಗಳಲ್ಲಿ ಅರ್ಧದಷ್ಟು ಜನ ಕ್ಯಾಷುಯಲ್ ಲೀವ್ ತೆಗೆದಿದ್ದರು. ಒಂದು ಕಡೆಯಲ್ಲೂ ಕೆಲಸ ಸರಿಯಾಗಿ ನಡೆಯುತ್ತಿಲ್ಲ. ಸ್ವಾಮಿ ತಿರುವಡಿಗಳು ಆಶ್ರಮಕ್ಕೆ ಪಾದವನ್ನಿರಿಸಿದಾಗ ಸ್ವೀಕರಿಸಲು ಅರ್ಘ್ಯಪಾದ್ಯಾದಿಗಳೊಡನೆ ಸನ್ಯಾಸಿಗಳು. ಸನ್ಯಾಸಿನಿಯರು ಸಾಲಾಗಿ

ನಿಂತಿದ್ದರು. ಭಕ್ತಜನರ ಗಮನವನ್ನು ಪ್ರತ್ಯೇಕವಾಗಿ ಆಕರ್ಷಿಸಿದ ಒಂದು ಘಟನೆ ನಡೆಯಿತು. ದೇವಿ ಪ್ರಭಾವತಿ ಸ್ವಾಮಿ ತಿರುವಡಿಗಳನ್ನು ನೋಡಿ ಅತ್ತಳು ಅಷ್ಟೆ. ಆಶ್ರಮದ ಮಾತಾಜಿ ಯಾವುದೋ ಒಂದು ದೃಢ ನಿರ್ಧಾರದಲ್ಲಿ ಮುಖ ಕೆಂಪಗೆ ಮಾಡಿ ಕೋಪ ತುಟಿಯನ್ನು ಬಲವಾಗಿ ಕಚ್ಚಿಕೊಂಡು ನಿಂತಿದ್ದರು. ಪ್ರಭಾವತಿ ದೇವಿಯ ಹತ್ತಿರ ಅವಳ ತಲೆಯ ಮೇಲೆ ಕೈಯಿಟ್ಟು ತಿರುವಡಿಗಳು ಪ್ರೇಮವಾಗಿ: "ವತ್ಸೆ, ಅಳಬೇಡ" ಎಂದು ಹೇಳಿದರೆಂದು ಹತ್ತಿರ ನಿಂತಿದ್ದ ರೆವಿನ್ಯು ಸೆಕ್ರೆಟರಿಯ ಹೆಂಡತಿ ಹೇಳಿದಳು. ಶ್ರೀಪಾದಂಗಳು ಮಾತಾಜಿಯನ್ನು ವೀಕ್ಷಿಸಿದ್ದು ಅರ್ಥವತ್ತಾಗಿಯಾದರೂ ಮಾತಾಜಿ ಅದನ್ನು ಗಮನಿಸಲಿಲ್ಲ. ಭಕ್ತರಲ್ಲೆಲ್ಲ ಅಂದಿನ ಸಂಭಾಷಣೆಯ ವಿಷಯವಾಗಿತ್ತು ಅದು.

ಪ್ರಭಾವತಿ ದೇವಿ ಜಯಿಸುತ್ತಾಳೆ—ಹಾಗಾಗಿರುತ್ತದೆ ಸ್ವಾಮಿ ತಿರುವಡಿಗಳ ತೀರ್ಮಾನ. ಮಾತಾಜಿಯನ್ನು ಆಶ್ರಮದ ಮಾತಾಜಿಯ ಸ್ಥಾನದಿಂದ ತೆಗೆದರೆ ಏನಾಗಬಹುದು? ಆ ಸ್ತ್ರೀಯರನ್ನು ಹೊರಗೆ ಕಳುಹಿಸುವಂತೆ ಸ್ವಾಮೀಜಿ ಹೇಳಬಹುದೇ? ಹಾಗಿದ್ದರೆ ಮಾತಾಜಿ ಅವರ ಜೊತೆಯಲ್ಲಿ ಹೋಗುವುದು ಖಂಡಿತ. ಆದರೆ ಮಾತಾಜಿ ಏನನ್ನೋ ತೀರ್ಮಾನಿಸಿದ್ದರು. ಹಲವು ಊಹಾಪೋಹಗಳು ಭಕ್ತರಲ್ಲಿ ಉಂಟಾದುವು. ಮಾತಾಜಿಯ ಅಲಕ್ಷ್ಯ ಭಕ್ತರನ್ನು ವ್ಯಾಕುಲಕ್ಕೊಳಗು ಮಾಡಿತು. ಆದರೂ ಸ್ವಾಮಿ ತಿರುವಡಿಗಳು ಎಲ್ಲಕ್ಕೂ ಒಂದು ನಿಬಂಧನೆ ಮಾಡುತ್ತಾರೆ ಎಂಬ ವಿಶ್ವಾಸವಿತ್ತು.

ಭಕ್ತಾದಿಗಳಲ್ಲಿ ಆಬಾಲವೃದ್ಧರು ಅಂದಿನ ಭಜನೆಗೆ ಸೇರಿದ್ದರು. ಭಜನೆ ಕಳೆದು ಸ್ವಾಮಿ ತಿರುವಡಿಗಳು ಭಾಷಣ ಮಾಡಲಿದ್ದರು. ಸ್ವಾಮಿಯ ಸಾನ್ನಿಧ್ಯವಲ್ಲಿರುವ ಭಜನೆಗೆ ಖಂಡಿತವಾಗಿಯೂ ವಿಶೇಷವಿತ್ತು. ಅಷ್ಟು ದೊಡ್ಡ ಜನಸಮೂಹವನ್ನು ಆಕರ್ಷಿಸಿದ್ದು ಅದು ಮಾತ್ರವಲ್ಲ. ಆಶ್ರಮದ ಕಾರ್ಯಗಳಲ್ಲಿ ಸ್ವಾಮಿ ತಿರುವಡಿಗಳು ಯಾವ ಕಡೆಗೆ ತಿರುಗುತ್ತಾರೆ ಎನ್ನುವುದರ ಬಗ್ಗೆ ಯಾವುದಾದರೂ ಸೂಚನೆ ದೊರೆಯುತ್ತದೆ ಎಂದು ಅದನ್ನು ತಿಳಿಯುವುದಕ್ಕಾಗಿ ಭಕ್ತ ಜನರು ಅತೀವ ಕುತೂಹಲಿಗಳಾಗಿದ್ದರು.

ಭಜನೆಯು ಆತ್ಮ ಚೈತನ್ಯ ಪ್ರಕಾಶಗೊಂಡಿತು. ಸೇರಿದ್ದ ಭಕ್ತಜನರೆಲ್ಲ ಆನಂದಾನುಭೂತಿಯಲ್ಲಿ ಲಯಿಸಿ ಹೋದರು. ಹಿಂದೆಂದೂ ಅನುಭವಕ್ಕೆ ಬಾರದ ವೈಶಿಷ್ಟ್ಯವುಂಟಾಗಿತ್ತು.

ಅನಂತರ ಸ್ವಾಮೀಜಿಯವರ ಪ್ರವಚನ ಪ್ರಾರಂಭವಾಯಿತು. ಭಕ್ತರು ನಿಶ್ಶಬ್ದವಾಗಿ ಕೇಳಿಸಿಕೊಂಡಿದ್ದರು. ಮುನ್ನುಡಿಯ ರೂಪದಲ್ಲಿ ಕೆಲವು ವಿಷಯಗಳನ್ನು ಹೇಳಿ ತಿರುವಡಿಗಳು ಷಡ್ವಿಕಾರಗಳನ್ನು ಕುರಿತು ವ್ಯಾಖ್ಯಾನ ಮಾಡಿದರು. ಕಾಮ, ಕ್ರೋಧ, ಲೋಭ, ಮೋಹಗಳಿಗೆ ಸಾಮಾನ್ಯ ಮನುಷ್ಯರು ಮಾತ್ರವಲ್ಲ ಋಷಿಗಳು ಕೂಡ ವಶರಾದ ಕಥೆಗಳನ್ನು ವಿವರಿಸಿದರು. ಸನ್ಯಾಸ ಸ್ವೀಕರಿಸುವುದರ ಅರ್ಥ ಅರಿಷಡ್ವರ್ಗಗಳನ್ನು ಜಯಿಸಿದ್ದು ಎಂದಲ್ಲ. ಜಯಿಸಬೇಕಾದ ಶ್ರಮವನ್ನು ಆರಂಭಿಸಿದ್ದು ಎಂದರ್ಥ. ಕಾವಿ

ಯನ್ನು ಸ್ವೀಕರಿಸುವಾಗಿನ ಶಪಥವನ್ನು ಅವರು ಜ್ಞಾಪಕ ಮಾಡಿಕೊಟ್ಟರು. ಷಡ್ವಿಕಾರ ಕ್ಕೊಳಗಾಗುವುದಿಲ್ಲ ಎನ್ನುವ ನಿರ್ಧಾರದಿಂದ ವ್ಯಕ್ತಿತ್ವ ನಷ್ಟವಾಗುವುದಿಲ್ಲವೆಂದು ಸ್ವಾಮಿಗಳು ದೃಢಪಡಿಸಿದರು. ಭಾಷಣದ ಮಧ್ಯೆ ಅವರು ಸಂದರ್ಭವಶಾತ್ ಹೇಳಿದ ಒಂದು ಮಾತು ಅರ್ಥವತ್ತಾಗಿತ್ತು.

ಆ ಮಾತು ಇದು:

"ಜನಸೇವೆ, ನಾಮಾರ್ಚನೆ, ವೇದಾಂತ ವಿಚಾರದಂತೆಯೇ ದೈವಚಿಂತೆ ಕೂಡ."

ಪ್ರಭಾವತಿ ದೇವಿಗೂ ಅವಳ ಗುಂಪಿನವರಿಗೂ ಆಲೋಚಿಸದೇ ಇದ್ದಾಗ ಸಿಕ್ಕಿದ ಸೂಚನೆ—ಸ್ವಾಮೀಜಿಯ ನಿಲುವು ಯಾವ ಕಡೆಗೆ ಎನ್ನುವುದರ ಒಂದು ಸೂಚನೆಯಲ್ಲವೆ ಅದು?

ಭಾಷಣ ಮುಗಿದಾಗ ದೇವಿ ಪ್ರಭಾವತಿ ಕುಸಿದುಹೋದಳು. ಅಂದು ರಾತ್ರಿ ಸ್ವಾಮಿ ತಿರುವಡಿಗಳ ಸನ್ನಿಧಿಯಲ್ಲಿ ಪ್ರಭಾವತಿ ದೇವಿ ಅವರ ಪಾದವನ್ನು ಗಟ್ಟಿಯಾಗಿ ಹಿಡಿದುಕೊಂಡು ಅತ್ತಳು ಎಂದು ಕೇಳಿಬಂದ ಸುದ್ದಿ. ಆಕೆಗೆ ತನ್ನ ಸಂಕಟವನ್ನು ತುಂಬ ಹೇಳಿಕೊಳ್ಳುವುದಿತ್ತು. ಎಲ್ಲವನ್ನೂ ತಿಳಿಸಿದಳು.

ಮಾತಾಜಿ ಅದೊಂದನ್ನೂ ಅಷ್ಟಾಗಿ ಗಣನೆಗೆ ತಂದುಕೊಂಡಂತೆ ಭಾವಿಸಲಿಲ್ಲ. ಆಗಲೂ ಆ ವಿಷಯದಲ್ಲಿ ಒಂದು ರೀತಿಯ ಅಲಕ್ಷ್ಯತೆಯುಂಟಾಗಿತ್ತು. ಏನು ಬೇಕಾದರೂ ತೀರ್ಮಾನಿಸಲಿ. ಅದರಿಂದ ತನಗೇನೂ ಆಗಬೇಕಾಗಿಲ್ಲ ಎನ್ನುವ ಭಾವನೆ. ಅವರಿಗೆ ಹತ್ತಿರದವಳಾದ ಒಬ್ಬ ಭಕ್ತೆಯ ಹತ್ತಿರ ಹೀಗೆ ಹೇಳಿದರು: "ತಿರುವಡಿಗಳ ಅಭಿಪ್ರಾಯ ನಮಗೆ ಅನುಕೂಲವಾಗಿದ್ದರೆ ಬದಲಾಯಿಸ್ತೀನಿ. ಅದು ಬದಲಾಗುತ್ತದೆ."

ಶ್ರೀಪಾದಂಗಳವರಿಗೆ ಪ್ರಭಾವತಿ ದೇವಿ ಒಂದು ದೌರ್ಬಲ್ಯವನ್ನುಂಟುಮಾಡಿದ್ದಳು. ಅಂದರೆ ಸನ್ಯಾಸಕ್ಕೆ ವಿರೋಧವಾದ ದೌರ್ಬಲ್ಯ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮಾತಾಜಿ ಕರೆತಂದು ಸಾಕಿಕೊಂಡು ಬರುತ್ತಿರುವ ಆ ಬಡ ಹೆಣ್ಣುಮಕ್ಕಳಿಗೆ ಅದೆಲ್ಲಾ ತಿಳಿಯಿತು. ಅವರು ಒಟ್ಟಿಗೆ ಕುಳಿತಿದ್ದಾಗ ಅದನ್ನು ಕುರಿತು ಆಲೋಚಿಸು ತ್ತಿದ್ದರು. ಸಾವಿತ್ರಿಯ ಅಭಿಪ್ರಾಯ ಯಾರಿಗೂ ತಿಳಿಯದಂತೆ ಎಲ್ಲರೂ ಒಟ್ಟಿಗೇ ಆಶ್ರಮದಿಂದ ಹೋಗಿಬಿಡುವುದು ಎಂದಾಗಿತ್ತು. ಅವಳು ಹೇಳಿದಳು:

"ಮಾತಾಜಿ ಒಳ್ಳೆಯವರು. ಪಾಪ, ಅವರಿಗೇತಕೆ ನಾವು ಕಷ್ಟ ಕೊಡಬೇಕು? ನಮ್ಮ ಹಣೇಲಿ ಬರೆದಿರೋದು ಒಬ್ಬರ ಕೈಕೆಳಗೆ ಅನ್ನ ತಿನ್ನುವುದಾಗಲೀ ಒಂದೇ ಪಾತ್ರೆ ಯಿಂದ ಬಡಿಸಿಕೊಂಡು ಊಟ ಮಾಡುವುದಾಗಲೀ ಅಲ್ಲ. 'ನಮ್ಮ ಕಷ್ಟ ನಾವು ಅನುಭವಿಸೋಣ. ಮಾತಾಜಿ ದಯೆಯುಳ್ಳವರು. ಅವರಿಗೆ ಯಾವ ಕಷ್ಟವನ್ನೂ ನಾವು ತಂದೊಡ್ಡಬಾರದು."

ಗೌರಿಕುಟ್ಟಿಯೂ ಚಿನ್ನಮ್ಮನೂ ನಿಟ್ಟುಸಿರು ಬಿಡುತ್ತಾ ಹೇಳಿದರು:

"ಹಣೆಯಲ್ಲಿ ಬರೆದದ್ದನ್ನ ತಿದ್ದೋದಕ್ಕಾಗೋದಿಲ್ಲ."

ಪಾರ್ವತಿ ಎನ್ನುವ ಸ್ತ್ರೀಯ ಅಭಿಪ್ರಾಯ ಮತ್ತೊಂದು:

"ಈ ಜಗಳ ದೂರು, ನಮಗೆ ತಿಳಿದಿದೆ ಅಂತ ಯಾಕೆ ತೋರಿಸ್ಕೋಬೇಕು? ಇಲ್ಲಿಗೆ ಕರಕೊಂಡು ಬನ್ನಿ ಅಂತ ನಾವು ಹೇಳಿರಲಿಲ್ಲ. ಏನೂ ಗೊತ್ತಿಲ್ಲದವರ ಹಾಗೆ ನಾವಿದ್ದಾಯ್ತು. ಹೊರಟುಹೋಗಿ ಅಂತ ಹೇಳಿದಾಗ ಹೊರಟುಹೋದರಾಯಿತು."

ಅದೇ ಅಭಿಪ್ರಾಯವಿದ್ದ ಮತ್ತೊಬ್ಬಳೂ ಇದ್ದಳು. ಇನ್ನೊಬ್ಬಳು ಸಾವಿತ್ರಿಯ ಅಭಿಪ್ರಾಯವನ್ನು ಅನುಮೋದಿಸಿದಳು. ಆದರೆ ಒಂದು ವಿಷಯ ಸರಿಯಲ್ಲ ಎಂದು ಅವಳ ಅಭಿಪ್ರಾಯ.

"ಯಾರಿಗೂ ತಿಳಿಯದಂತೆ ಹೋಗುವುದು ಸರಿಯಲ್ಲ. ಎಲ್ಲರ ಹತ್ತಿರವೂ ಹೇಳಿ ಹೋದರಾಯಿತು. ಅದೇ ಒಳ್ಳೆಯದು."

ಆ ಆಲೋಚನೆಯಲ್ಲಿ ಚಿನ್ನಮ್ಮನ ತಲೆಗೆ ಒಂದು ವಿಷಯ ಹೊಳೆಯಿತು.

"ಮಾತಾಜಿಗೆ ಇದು ಗೊತ್ತಾಗಿ ನಮ್ಮನ್ನ ಕಳಿಸಿಬಿಡುತ್ತಾರೆ ಅಂದಿದ್ದಾರಾ? ಒಳ್ಳೆ ಕೆಲಸ ಆಯ್ತು."

ಸಾವಿತ್ರಿಗೆ ಆ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಅವಳು ಹೇಳಿದಳು: "ಮಾತಾಜಿ ಒಪ್ಪಿ ಕಳಿಸಿಬಿಡ್ತಾರೆ ಅಂತ ಅಂದುಕೊಳ್ಳಬೇಡ."

ಮತ್ತೆ ಆ ಹಳೆಯ ಬಟ್ಟೆಗಳೂ ಭಿಕ್ಷಾಪಾತ್ರೆಗಳೂ ಆ ಹೆಣ್ಣುಗಳ ಪಾಲಿಗೆ ಬರುವುದಾಗಿದ್ದುವು. ಅವುಗಳನ್ನೆಲ್ಲ ದೂರ ಬಿಸಾಡಿ ಆಗಿತ್ತು. ಇನ್ನು ಮುಂದೆ ಬಹು ದೀರ್ಘವಾಗಿರುವ ದಾರಿಯಲ್ಲಿ ಎಲ್ಲಿಗೆ ಹೋಗುತ್ತಿರುವುದು ಎಂದು ತಿಳಿಯದೆ ಹೆಜ್ಜೆಯಿರಿಸಬೇಕು. ಎಲ್ಲರೂ ಆ ದೀರ್ಘವಾದ ಹಾದಿಯನ್ನು ಕುರಿತು ಆಲೋಚಿಸುತ್ತಿದ್ದರು.

ಒಬ್ಬಳು ಹೇಳಿದಳು: "ನಾವು ಇಲ್ಲಿಗೆ ಬರಬಾರದಾಗಿತ್ತು."

ಅದನ್ನು ಎಲ್ಲರೂ ಒಪ್ಪಿದರು. ನಡೆದು ಬಂದ ದಾರಿಯಲ್ಲೇ ಹೋಗಿದ್ದಿದ್ದರೆ ಒಳ್ಳೆಯದಿತ್ತು.

ತಾನು ಬಂದು ಸೇರಿದ ದಿನದಿಂದಲೂ ಆಶ್ರಮದಲ್ಲಿ ಈ ತೊಂದರೆಗಳೆಲ್ಲ ಉಂಟಾದುವು ಎನ್ನುವ ತೀರ್ಮಾನ ಸಾವಿತ್ರಿಯನ್ನು ತುಂಬ ವ್ಯಸನಕ್ಕೀಡುಮಾಡಿತ್ತು. ಅವಳು ತನ್ನನ್ನು ತಾನೇ ಶಪಿಸಿಕೊಂಡಳು. ಹೃದಯವಂತಿಕೆಯಿದ್ದ ಆಶ್ರಮದ ಮಾತಾಜಿಗೂ ಕಷ್ಟ ತಂದೊಡ್ಡಿದ್ದಾಯಿತು. ಈ ಕಷ್ಟದಿಂದ ಅವರನ್ನು ಹೇಗಾದರೂ ಪಾರು ಮಾಡಬೇಕು ಎನ್ನುವುದು ಸಾವಿತ್ರಿಯ ಅಭಿಪ್ರಾಯ.

ಸಾವಿತ್ರಿಯೊಡನೆ ಮತ್ತಾರಲ್ಲೂ ಇಲ್ಲದ ಆತ್ಮೀಯತೆ ಜ್ಯೋತಿರ್ಮಯಿ ದೇವಿಗಿತ್ತು; ಅವಳಿಗೆ ಅವರ ಹತ್ತಿರವೂ. ಮಾತಾಜಿ ಅವಳನ್ನು ಸಮಾಧಾನಪಡಿಸುತ್ತಿದ್ದರು. ಅವರು ಧೈರ್ಯವಾಗಿ ಹೇಳಿದರು: "ನೀವು ಇಲ್ಲಿರಕೂಡದು ಅನ್ನೋದಾದರೆ ಈ ಆಶ್ರಮವೂ ಇರೋದಿಲ್ಲ."

ಎಷ್ಟೋ ದಿನಗಳು ಕಳೆದರೂ ಸ್ವಾಮೀಜಿ ಯಾವ ತೀರ್ಮಾನವನ್ನೂ ಕೈಗೊಳ್ಳ

ಲಿಲ್ಲ. ಈ ಮಧ್ಯೆ ಪ್ರಭಾವತಿ ದೇವಿ ಭಕ್ತಜನರಲ್ಲಿ ತನ್ನ ಪಕ್ಷಕ್ಕೆ ತುಂಬ ಮಂದಿಯನ್ನು ಒಲಿಸಿಕೊಂಡಿದ್ದಳು. ಮಾತಾ ಜ್ಯೋತಿರ್ಮಯಿ ದೇವಿಯ ನಿರ್ಭಯತೆ ತುಂಬ ಮಂದಿಗೆ ಈರ್ಷ್ಯೆಯನ್ನುಂಟುಮಾಡಿತು. ಸ್ವಾಮೀಜಿಗೂ ಜ್ಯೋತಿರ್ಮಯಿಯನ್ನು ಕಂಡರಾಗು ತ್ತಿರಲಿಲ್ಲ. ಮಾತಾಜಿಯ ನಡೆನುಡಿ ಅವರಾರಿಗೂ ಇಷ್ಟವಾಗುತ್ತಿರಲಿಲ್ಲ. ಆ ಮಧ್ಯೆ ಒಂದು ಘಟನೆ ನಡೆಯಿತು. ವಿಶ್ರಾಂತಿಯ ಹೊತ್ತಿನಲ್ಲಿ ಸ್ವಾಮೀಜಿಯ ಕೋಣೆಯಿಂದ ಕಷ್ಟಪಟ್ಟು ತಡೆಹಿಡಿದು ನಗುತ್ತಿದ್ದ ಒಂದು ಕುಲುಕು ನಗು ಆಶ್ರಮದಲ್ಲಿದ್ದ ಪಾರ್ವತಿಗೆ ಕೇಳಿಸಿದಂತಾಯಿತು. ಅವಳು ಮರೆಯಲ್ಲಿ ನಿಂತು ನೋಡಿದಳು. ಸ್ವಾಮೀಜಿ ಸೋಫದಲ್ಲಿ ಮೊಳಕೈ ಊರಿ ಅಂಗೈ ಮೇಲೆ ತಲೆಯನ್ನಿಟ್ಟುಕೊಂಡು ಮಲಗಿದ್ದರು. ಆ ಕೋಣೆ ಯೊಳಗೆ ಪ್ರಭಾವತಿ ದೇವಿಯಿದ್ದಳು. ಪಾರ್ವತಿ ಆ ದೃಶ್ಯವನ್ನು ತನ್ನದೇ ಆದ ಭಾಷೆ ಯಲ್ಲಿ ಜ್ಯೋತಿರ್ಮಯಿಗೆ ವಿವರಿಸಿದ್ದು ಹೀಗೆ:

"ಅಮ್ಮ, ಕೆಟ್ಟದ್ದನ್ನು ಹೇಳಬಾರದು. ಅವರು ಬಾಗಿಲಿನ ಹತ್ರ ನಿಂತಿದ್ದರು. ತಲೆ ತಗ್ಗಿಸಿಕೊಂಡು, ಮುಂದಕ್ಕೆ ಕೈನೀಡಿ ಬೆರಳಿನಿಂದ ಹಿಡಿದುಕೊಂಡು ಮೆಲ್ಲಗೆ ನಗುತ್ತ ನಾಚಿಕೆಯಿಂದ ನಿಂತಿದ್ದರು; ಸಣ್ಣ ಹುಡುಗಿಯ ಹಾಗೆ. ತಿರುವಡಿಗಳು ಮಲಗಿಕೊಂಡು ಮೆಲ್ಲಗೆ ಏನೋ ಮಾತುಕತೆ ಆಡಿಕೊಂಡಿದ್ದರು. ಅದನ್ನು ನೋಡಿ ನನಗೆ ನಾಚಿಕೆಯಾಗಿ ಹೋಯ್ತು."

ಮಾತಾಜಿಗೆ ಅದು ಸಂಭವಿಸಬಹುದಾದ ಸುದ್ದಿಯಾಗಿರಲಿಲ್ಲ. ಪಾರ್ವತಿ ಅವನ್ನು ಹೇಳಿದ ಮೇಲೆ ಯಾವ ವ್ಯತ್ಯಾಸವನ್ನೂ ತೋರಿಸದೆ ಯಾವ ಪ್ರಶ್ನೆಯನ್ನೂ ಕೇಳದೆ ಕೇಳಿಸಿಕೊಂಡಿದ್ದರು. ಅದನ್ನು ಅವರು ನಿರೀಕ್ಷಿಸಿದ್ದರು ಎನ್ನುವಂತೆ.

ಸ್ವಾಮೀಜಿ ಭಕ್ತರ ಹತ್ತಿರವೆಲ್ಲ ಆ ಸಮಸ್ಯೆಯನ್ನು ನಾನಾ ಮುಖಗಳಿಂದ ಕೇಳಿ ತಿಳಿದುಕೊಂಡರು. ಎಲ್ಲರ ಅಭಿಪ್ರಾಯವನ್ನೂ ಸಂಗ್ರಹಿಸಿದರು. ಒಂದು ದಿನ ಎಂದಿ ನಂತೆ ನಡೆಯುತ್ತಿದ್ದ ಭಜನೆ ಕಳೆದ ಮೇಲೆ, ಪ್ರವಚನದಲ್ಲಿ ಒಂದು ಸ್ಪಷ್ಟವಾದ ಸೂಚನೆ ಯನ್ನು ನೀಡಿದರು.

ಅಂದು ಅವರು ಮಾಡಿದ ಉಪನ್ಯಾಸ ಸನ್ಯಾಸವನ್ನು ಕುರಿತಾಗಿತ್ತು. ಆ ಉಪ ನ್ಯಾಸದ ಬಹು ಮುಖ್ಯವಾದ ಭಾಗ ಇದಾಗಿತ್ತು:

"ಸನ್ಯಾಸ ಎಂದರೆ ಏನನ್ನೂ ಮಾಡದೆ ಇರುವುದು ಎಂದಲ್ಲ. ಅದು ವಿಶ್ರಾಂತಿ ಪಡೆಯುವ ಬದುಕಲ್ಲ. ಸನ್ಯಾಸಿಗೂ ಈ ಲೋಕದಲ್ಲಿ ತುಂಬ ಕೆಲಸ ಕಾರ್ಯಗಳನ್ನು ಮಾಡಿ ಮುಗಿಸಬೇಕಾದದ್ದಿರುತ್ತದೆ. ವಾಸನೆಯನ್ನೂ ಶಕ್ತಿಯನ್ನೂ ಅನುಸರಿಸಿ ಸಮಾಜ ಕ್ಕೋಸ್ಕರ ಒಂದೊಂದು ಕೆಲಸವನ್ನು ಒಬ್ಬೊಬ್ಬ ಸನ್ಯಾಸಿ ಆರಿಸಿಕೊಳ್ಳಬೇಕು. ಆಶ್ರಮ ದಲ್ಲಿ ಪ್ರಾರ್ಥನೆಯಲ್ಲಿ ನಿರತರಾಗಿ ವೇದಾಂತ ಚಿಂತೆಯಲ್ಲಿ ಕಳೆಯುವ ಸನ್ಯಾಸಿಗೆ ಅದಕ್ಕೆ ಬೇಕಾದ ಅನುಕೂಲತೆಗಳಿರಬೇಕು. ಅದೂ ಸಮಾಜಕ್ಕೋಸ್ಕರವೇ. ಒಂದು ಆಶ್ರಮ ವನ್ನು ಅನಾಥ ಮಂದಿರವನ್ನಾಗಿ ಮಾಡುವುದಕ್ಕಿರುವ ವಿರೋಧ ಪ್ರವೃತ್ತಿಯನ್ನು ಇದರ

ಆಧಾರದ ಮೇಲೆ ಅರ್ಥಮಾಡಿಕೊಳ್ಳಬೇಕು."

ದೇವಿ ಪ್ರಭಾವತಿ ಜಯಿಸಿದಳು. ಆದರೆ ಕೂಡಲೇ ಸ್ವಾಮೀಜಿ ಪ್ರಾರಂಭಿಸಿದರು: "ಅನಾಥ ಸಂರಕ್ಷಣೆಯನ್ನು ಜೀವನದ ವ್ರತವಾಗಿ ಸ್ವೀಕರಿಸಿದ ಸನ್ಯಾಸಿಗೆ ಅದಕ್ಕೆ ಬೇಕಾದ ಅನುಕೂಲತೆಗಳನ್ನು ಮಾಡಿಕೊಡಬೇಕು. ಅದು ನಿರುತ್ಸಾಹಗೊಳಿಸುವಂತಹ ವಿಷಯ ವಲ್ಲ."

ಎಲ್ಲರಿಗೂ ಶ್ರೀಪಾದಂಗಳವರ ಉದ್ದೇಶ ಅರ್ಥವಾಯಿತು. ಅನಾಥ ಮಂದಿರ ವನ್ನು ಪ್ರತ್ಯೇಕವಾಗಿ ನಡೆಸಬೇಕೆನ್ನುವುದು ಆ ಮಾತಿನ ಸಾರಾಂಶ. ಅದೇ ಸರಿಯಾದ ತೀರ್ಮಾನವೆಂದು ಎಲ್ಲರೂ ಹೇಳಿದರು. ಆಶ್ರಮ ಆಶ್ರಮವಾಗಿಯೇ ಉಳಿಯಬೇಕು. ಅನಾಥ ವನಿತಾಮಂದಿರ ಅನಾಥ ವನಿತಾಮಂದಿರವಾಗಿ ಉಳಿಯಬೇಕು.

ಆದರೆ ಮಾತಾಜಿ ಆ ನಿರ್ದೇಶನವನ್ನು ಸ್ವೀಕರಿಸುತ್ತಾರೆಯೇ?

ಆ ದೃಷ್ಟಿಯಲ್ಲಿ ಜ್ಯೋತಿರ್ಮಯಿ ದೇವಿ ಒಂಟಿಯಾದರು. ಸ್ವಾಮೀಜಿಯವರ ತೀರ್ಮಾನವನ್ನು ಎಲ್ಲರೂ ಸ್ವೀಕರಿಸಿದರು. ಪ್ರಭಾವತಿ ದೇವಿ ಜಯಿಸಿದರು. ಕಷ್ಟದಿಂದ ಅಲ್ಲಿ ಅಡಗಿ ಜೀವಿಸುತ್ತಿದ್ದ ಆ ಹೆಣ್ಣುಮಕ್ಕಳು ಮಾತ್ರ ಅವರ ಸಂರಕ್ಷಕಿ ಎನ್ನುವ ದೃಷ್ಟಿ ಯಲ್ಲಿ ಮಾತಾಜಿ ಜೊತೆಯಲ್ಲಿರುತ್ತಿದ್ದರು.

ಜ್ಯೋತಿರ್ಮಯಿ ದೇವಿಗೆ ಜೀವನದಲ್ಲಿ ಪುನಃ ಒಂಟಿಯಾದಂತೆ ತೋರಿತು. ಆಗ ಸ್ವಾಭಾವಿಕವಾಗಿ ಅವರ ಹಕ್ಕಿನ ಪ್ರಶ್ನೆ ತಲೆಯೆತ್ತಿ ನಿಂತಿತು. ಆಶ್ರಮದ ಮಾತಾಜಿ ಎನ್ನುವ ದೃಷ್ಟಿಯಲ್ಲಿ ಮಾತ್ರವಲ್ಲ ಆ ಆಶ್ರಮ ತಮಗೆ ಸೇರಿದುದು ಎನ್ನುವ ದೃಷ್ಟಿ ಯಲ್ಲೂ. ಆ ಯಜಮಾನಿಕೆಯನ್ನು ನಿಷೇಧಿಸುವ ಹಕ್ಕು ಯಾರಿಗಿದೆ?

ಜ್ಯೋತಿರ್ಮಯಿ ದೇವಿಯನ್ನು ಒಂದು ಕಡೆಗೆ ಕರೆದು ಸ್ವಾಮೀಜಿ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಅನಾಥಮಂದಿರ ಹಿಂದಿನ ಯೋಜನೆಯನ್ನು ಅನುಸರಿಸಿ ವಟ್ಟಿಯೂರ್ ಕಾವಿನಲ್ಲಿ ಆರಂಭಿಸಬೇಕು. ಆದಷ್ಟು ಬೇಗ ಆ ಕೆಲಸ ಆಗಬೇಕು. ಆಶ್ರಮ ಆಶ್ರಮವಾಗಿಯೇ ಉಳಿಯಬೇಕು. ಅವರು ಹೇಳಿದರು:

"ಜ್ಯೋತಿರ್ಮಯಿ ದೇವಿಗೆ ಅದೊಂದು ದೊಡ್ಡ ಕೆಲಸವೇನಲ್ಲ. ಇವತ್ತಿ ನಿಂದಲೇ ಪ್ರಯತ್ನಿಸಿದರಾಯ್ತು. ಭಕ್ತಜನದ ನಿಸ್ವಾರ್ಥವಾದ ಸಹಾಯ ದೊರೆಯು ತ್ತದೆ."

ಆ ಕೊನೆಯ ಮಾತನ್ನು ಹೇಳಿದಾಗ ಅವಿಶ್ವಾಸದ ಹಾಗು ತಿರಸ್ಕಾರದ ಛಾಯೆ ಒಂದು ಕ್ಷಣ ಅವರ ಮುಖದಲ್ಲಿ ಕಾಣಿಸಿಕೊಂಡು ಮರೆಯಾಯಿತು. ಅದು ಸ್ವಾಮೀ ಜಿಯ ದೃಷ್ಟಿಗೆ ಬೀಳದಿರಲಿಲ್ಲ. ಅವರು ಕೇಳಿದರು:

"ಹ್ಞ, ಏನು?"

ಅದಕ್ಕೆ ಥಟ್ಟನೆ ಉತ್ತರ ದೊರೆಯಿತು. ಮನಸ್ಸಿನಲ್ಲಿ ಕಟ್ಟಿಟ್ಟದ್ದೆಲ್ಲ ಸ್ಫೋಟ ಗೊಂಡು ಹೊರಗೆ ಬರುವ ರೀತಿಯಲ್ಲಾಗಿತ್ತು ಆ ಧ್ವನಿ. ಆ ಮಾತಿನಲ್ಲಿ ಧಿಕ್ಕಾರ

ಪೂರ್ವಕವಾದ ಸಾಮರ್ಥ್ಯವಿರಲಿಲ್ಲವೇ ಎಂದು ಒಂದು ಸಂಶಯವೂ ಇತ್ತು: "ಅನಾಥ ಮಂದಿರವನ್ನು ತೆರೆಯಬೇಕೂಂತ ಯಾರೂ ಹೇಳೋದು ಬೇಡಿ. ನಾನು ಅದನ್ನು ತೆರೆದು ನಡೆಸ್ತೀನಿ."

ಭಕ್ತಜನಗಳ ಸಹಾಯವನ್ನೂ ಕುರಿತು ಹೇಳಿದರು. ಮಠಾಧಿಪತಿಯೊಡನೆ ಮಾತನಾಡುವ ರೀತಿಯಲ್ಲಲ್ಲ ಎನ್ನುವುದು ಖಂಡಿತ. ಯಾರಿಗೂ ಹಾಗೆ ತೋರುತ್ತಿತ್ತು. ಆದರೆ ಹಾಗೆ ಮಾಡಬಾರದಾಗಿತ್ತು ಎನ್ನುವುದೇನೂ ಅವರಿಗಿರಲಿಲ್ಲ. ಸ್ವಾಮೀಜಿಗೆ ಅದು ಅರ್ಥವಾಯಿತೇನೋ. ಅವರು ಹೇಳಿದರು:

"ನಿಜ ಮಗಳೇ, ನಿಜ. ಅದು ಒಳ್ಳೆಯದು. ಆದಷ್ಟು ಬೇಗ ಆ ಸ್ಥಾಪನೆಯಾಗ ಬೇಕು."

ಮಾತಾಜಿಗೆ ಆ ಹಾರೈಕೆಯೂ ಇಷ್ಟವಾಗಲಿಲ್ಲ. ಅವರಿಗೆ ಏನೋ ಹೇಳಬೇಕೆನ್ನಿಸಿತು. ಅವರು ಕೇಳಿದರು: "ಆಶ್ರಮ ಆಶ್ರಮವಾಗಿರಬೇಕಾಗಿದ್ದಲ್ಲಿ ನನ್ನನ್ನು ಆಶ್ರಯಿಸಿರುವ ಈ ಬಡ ಮಕ್ಕಳನ್ನು ನಾನೆಲ್ಲಿಗೆ ಕಳಿಸಲಿ?"

ಆ ಪ್ರಶ್ನೆ ಸರಸರನೆ ಬಾಯಿಗೆ ಬಂದಿತ್ತು. ಅದು ದೊಡ್ಡ ಗಂಡಾಂತರವಾಯಿತು. ಅಗತ್ಯವಿಲ್ಲದೆ ಒಂದು ಉತ್ತರವನ್ನು ಹೊರಗೆ ತರುವಂತಹದಾಗಿತ್ತು. ಅಂತು ಆ ಉತ್ತರವನ್ನು ಸಹಿಸಲು ಜ್ಯೋತಿರ್ಮಯಿ ದೇವಿ ತಯಾರಾದರು.

ಸ್ವಾಮಿ ತಿರುವಡಿಗಳು ಹೇಳಿದರು: "ಹೌದು ಮಗಳೆ. ಆಶ್ರಮ ಆದರ ಎಲ್ಲ ಶುದ್ಧಿಯೊಡನೆ ಪರಿಶುದ್ಧವಾಗಿರಬೇಕು. ಒಂದು ಹೊಸ ಸ್ಥಳವನ್ನು ಕಂಡುಹಿಡಿದು, ಅನಾಥಮಂದಿರವನ್ನು ಅಲ್ಲಿಗೆ ಬದಲಾಯಿಸಬೇಕು. ಅನಾಥ ಮಂದಿ............"

ಸ್ವಾಮೀಜಿ ಅಷ್ಟನ್ನು ಹೇಳಿದಾಗ ಗುಂಡು ಸ್ಫೋಟಗೊಂಡಂತೆ ಒಂದು ಪ್ರಶ್ನೆಯನ್ನು ಸ್ವಾಮೀಜಿಗೆ ಹಾಕಿದರು: "ನಾನು ಇಲ್ಲಿಂದ ಹೋಗಬೇಕಲ್ಲವೇ?"

ಸ್ವಾಮಿ ಬಿಗುಮಾನದಿಂದ ಕೇಳಿದರು:

"ನನ್ನ ಹತ್ತಿರ ಕೇಳುವುದು ಏನು ಮಗಳೇ?"

ಒಂದು ವಿಶದೀಕರಣಕ್ಕಾಗಲೀ ವ್ಯಾಖ್ಯಾನಕ್ಕಾಗಲೀ ಜ್ಯೋತಿರ್ಮಯಿ ದೇವಿ ಹಿಂದುಳಿಯಲಿಲ್ಲ. ಅವರು ಹೇಳಿದರು: "ಅದೇ ಉದ್ದೇಶ. ಅದು ಮಾತ್ರ. ಆದರೆ ಒಂದು ವಿಷಯ ನಾನು ಹೇಳ್ತೀನಿ. ಆ ಬಡ ಹೆಣ್ಣುಮಕ್ಕಳ ಜೊತೆಯಲ್ಲಿ ನಾನು ಹೋಗ್ತೀನಿ. ಆಗ ಎಲ್ಲರ ಉದ್ದೇಶವೂ ಸಾಧನೆಯಾದ ಹಾಗಾಗುತ್ತೆ. ನಡೆಯಲಿ."

ಸ್ವಾಮೀಜಿ ಪುನಃ ಹೇಳುತ್ತಿದ್ದುದೊಂದನ್ನೂ ಕೇಳಿಸಿಕೊಳ್ಳಲು ನಿಲ್ಲದೆ ಬಾಗಿ ನಮಸ್ಕರಿಸಿ ಜ್ಯೋತಿರ್ಮಯಿ ಅಲ್ಲಿಂದ ಹೊರಟುಹೋದರು.

ಜ್ಯೋತಿರ್ಮಯಿ ದೇವಿಗೆ ಹಾಗೆಲ್ಲ ಹೇಳಿ ಹೊರಟು ಬರಬಾರದಾಗಿತ್ತು ಎನ್ನಿಸಿತು.

ಎದುರು ವಾದಿಸಿದ್ದು. ಆದರೆ ಎದುರು ವಾದಿಸಿದ್ದರ ಗುರಿಯೂ ತಪ್ಪಿಹೋಯಿತು. ಅದು ಆ ಗುಂಪಿಗೇ ಜಯವುಂಟಾಗುವ ರೀತಿಯಲ್ಲಿ ಎದುರಿಸಿದ್ದಾಗಿತ್ತು.

ಯಜಮಾನಿಕೆಯ ವಿಷಯ ಪುನಃ ತಲೆಯೆತ್ತಿತು. ಅಲ್ಲಿಂದ ಹೊರಟುಹೋಗ ಬೇಕಾದದ್ದು ಯಾರು? ತಾನೋ ಅಥವಾ ಪ್ರಭಾವತಿ ದೇವಿಯೂ? ಸ್ವಾಮಿಯೋ? ನಾನೇ ಹೋಗಿಬಿಡುತ್ತೇನೆ ಎನ್ನಬಾರದಾಗಿತ್ತು. ಅದರ ಬದಲು ಹೊರಟುಹೋಗಿ ಎನ್ನಬೇಕಾಗಿತ್ತು—ಹೇಳಿದ್ದೆಲ್ಲ ವಿಪರೀತವಾಗಿ ಹೋಯಿತು. ಜೀವನವಿಡೀ ಇದೇ ರೀತಿಯಲ್ಲಿ ಅನರ್ಥಗಳು ಸಂಭವಿಸಿರುವುದು. ಜೀವನದ ಪ್ರಧಾನ ಘಟನೆಗಳನ್ನೆಲ್ಲ ಒಂದೊಂದಾಗಿ ಎತ್ತಿಕೊಂಡು ಜ್ಯೋತಿರ್ಮಯಿ ದೇವಿ ಜ್ಞಾಪಿಸಿಕೊಂಡರು. ಕೇಶವ ಪಿಳ್ಳೆಯನ್ನು ಹೊರಗೆ ಕಳಿಸಿದ ದಿನ ಉಪಯೋಗವಿಲ್ಲದವನು ಬೇಡ ಎನ್ನಿಸಿತು. ಅಂದು ಹೊರಟುಹೋಗು ಎನ್ನದೆ ನಾಳೆಯೂ ಬಾ ಎಂದು ಹೇಳಬೇಕಾಗಿತ್ತು. ರಾಮಚಂದ್ರನ್ ನಾಯರ ಸಂಬಂಧದಲ್ಲೂ ಹಾಗೆಯೇ ಆಯಿತು. ಅವನು ಬೇಡವೆಂದು ಹೇಳಿದಾಗ ತಂಗಮ್ಮ ಹಕ್ಕು ಸ್ಥಾಪಿಸಲು ಹೋಗಲಿಲ್ಲ. ಹಾಗೆ ಬೇಡವೆಂದು ಹೇಳಲು ಸಾಧ್ಯವಿಲ್ಲ ಎಂದು ಹೇಳಲಾಗಲಿಲ್ಲ. ಅನಂತರವೂ ಕೇಶವ ಪಿಳ್ಳೆ ಸ್ವಂತ ವ್ಯಕ್ತಿಯಾಗುತ್ತಿದ್ದ. ಒಮ್ಮೆಯೂ ಹಕ್ಕನ್ನು ಬುದ್ಧಿಪೂರ್ವಕವಾಗಿ ಸ್ಥಾಪಿಸಿಕೊಳ್ಳಲು ತಿಳಿಯದೆ ಬುದ್ಧಿಶಕ್ತಿಯನ್ನು ವಿನಿಯೋಗಿಸದೆ, ಆಗುಹೋಗುಗಳನ್ನು ಆಲೋಚಿಸದೆ ಜೀವನವನ್ನು ಸಾಗಿಸುತ್ತಿದ್ದೆ. ಉದ್ಯೋಗಕ್ಕೆ ರಾಜೀನಾಮೆ ಕೊಟ್ಟದ್ದು ಸರಿಯೇ ಎಂದು ಜ್ಯೋತಿರ್ಮಯಿ ದೇವಿ ನೆನಸಿಕೊಂಡರು. ಆ ಚಿಂತೆ ಮಿಂಚಿನಂತೆ ಹೊಳೆದು, ಹೃದಯವನ್ನು ಹಿಡಿದು ಕುಲುಕಿತು. ಈ ಕಾವಿ ವಸ್ತ್ರ ಧರಿಸಿದ್ದೇಕೆ? ಯಾವ ಸಂತೃಪ್ತಿ ಈ ಜೀವನದಲ್ಲಿ ಲಭಿಸಿತು? ಹಾಗೆ ನೋಡಿದಾಗ ಯಾತಕ್ಕಾಗಿ ಎಂದು ಎಷ್ಟೆಷ್ಟು ಸಲ ಕೇಳಿಕೊಳ್ಳಬೇಕಾಗಿ ಬಂದಿತು? ಜೀವನವನ್ನು ಬಿಟ್ಟು ಸೂಕ್ಷ್ಮವಾಗಿ ಅವಲೋಕನ ಮಾಡಿದಾಗ ಒಂದು ಸಂಗತಿ ವ್ಯಕ್ತವಾಗಿತ್ತು. ಎಂದೆಂದೂ ನಡೆದದ್ದನ್ನು ಮರೆಯಬಲ್ಲ ಜೊತೆಗೂಡಿಕೊಂಡು ತಯಾರಾಗಿರುವ ಒಬ್ಬಾತ ಇದ್ದಾನೆ—ಕೇಶವ ಪಿಳ್ಳೆ. ಆತನಲ್ಲದೆ ಬೇರೆ ಯಾರಿದ್ದಾರೆ? ಎಲ್ಲ ಕಾಲದಲ್ಲೂ ಆ ಒಂದೇ ವ್ಯಕ್ತಿ ಇದ್ದದ್ದು. ಈಗಲೂ ಅಲ್ಲಿಗೆ ಹೋಗಬಹುದು. ಅಲ್ಲಿಗೆ ಹೋದಾಗ ಆತ ಎಲ್ಲವನ್ನೂ ಮರೆಯುತ್ತಾನೆ. ಯಾವ ಅವಸ್ಥೆಯಲ್ಲೂ ಕೈಹಿಡಿಯುತ್ತಾನೆ.

ಭಕ್ತಜನರಲ್ಲಿ ಯಾರ ಹತ್ತಿರವೋ ಜ್ಯೋತಿರ್ಮಯಿ ದೇವಿ ತೆರೆದು ಕೆಲವು ವಿಷಯಗಳನ್ನು ಮಾತನಾಡಿದರು. ಈ ಕಾಷಾಯ ವಸ್ತ್ರವನ್ನು ಅವರು ಹರಿದು ದೂರ ಎಸೆಯುತ್ತಾರೆ ಅಷ್ಟೆ. ಅದಕ್ಕೆ ಅಷ್ಟೊಂದು ಪವಿತ್ರತೆಯನ್ನು ಅವರು ಕಲ್ಪಿಸುವುದಿಲ್ಲ. ಎಷ್ಟೋ ಜನರಿಗೆ ಅಲ್ಲಿ ಅಭಯ ದೊರೆತಿದೆ. ಆ ಬಡ ಹೆಣ್ಣುಗಳಿಗೆ ಹಾಗೆಲ್ಲ ಸಂಭವಿಸುವುದಿದ್ದರೆ ಪುನಃ ಬೀದಿಗಿಳಿಯುವುದಕ್ಕೆ ಅವರಿಗೇನೂ ಬೇಸರವಿಲ್ಲ. ಕಾಷಾಯ ವಸ್ತ್ರವನ್ನು ಹರಿದು ಎಸೆದರೆ ಆಶ್ರಮದ ಮಾತಾಜಿ ಸ್ಥಾನ ಹೋಗುವುದೆಂದೂ ಅವರಿಗೆ ಗೊತ್ತಿತ್ತು.

ಮಾತಾಜಿ ಇತ್ತೀಚಿಗೆ ಭಜನೆಗೂ ವೇದಪಾಠಕ್ಕೂ ಹೋಗುತ್ತಿರಲಿಲ್ಲ. ಎರಡರಲ್ಲಿ ಒಂದನ್ನು ತೀರ್ಮಾನಿಸಬೇಕು ಎನ್ನುವ ಸ್ಥಿತಿಯಲ್ಲಿದ್ದರು. ಪ್ರಭಾವತಿ ದೇವಿ ಜಯಿಸಿದ್ದಳು. ದಾರಿ ಸುಗಮವಾದದ್ದರಲ್ಲಿ ಅವಳಿಗೆ ಅತ್ಯಂತ ಸಂತೋಷವಾಯಿತು. ಜ್ಯೋತಿರ್ಮಯಿ ದೇವಿ ಅದೆಲ್ಲವನ್ನೂ ನೋಡುತ್ತಿದ್ದರು.

ಜ್ಯೋತಿರ್ಮಯಿಯೂ ಸಾವಿತ್ರಿಯೂ ಇಬ್ಬರೇ ಕುಳಿತು ಮಾತನಾಡುತ್ತಿದ್ದರು. ಸಾವಿತ್ರಿ ಸ್ವಲ್ಪ ಆಶ್ಚರ್ಯದಿಂದ ಕೇಳಿದಳು: "ಅದು ಸಾಧ್ಯವಾ ಮಾತಾಜೀ?"

ಜ್ಯೋತಿರ್ಮಯಿ ದೇವಿ ತುಂಬಿದ ಭರವಸೆಯಿಂದ ಹೇಳಿದರು: "ಅದನ್ನ ನೀನು ನೋಡ್ತಿರು. ನಾನು ತೋರಿಸಿಕೊಡ್ತೀನಿ. ನಾನು ಬೇಡ ಅಂತ ಕೈಬಿಟ್ಟಿದ್ದು ಅಷ್ಟೆ. ಒಮ್ಮೆಯೂ ನನ್ನನ್ನು ಬೇಡ ಅಂತ ಕೈಬಿಟ್ಟದ್ದಿಲ್ಲ."

ಜ್ಯೋತಿರ್ಮಯಿ ದೇವಿ ಪುನಃ ಹೇಳಿದರು: "ದೇವರ ಇಚ್ಛೆಯೇ ಹಾಗಿದೆ."

ಸಾವಿತ್ರಿಗೆ ಅದನ್ನು ಪೂರ್ಣವಾಗಿ ನಂಬಲು ಸಾಧ್ಯವಾಗಲಿಲ್ಲ. ಅವಳು ಕೇಳಿದಳು:

"ಅವರಿಗೆ ಹೆಂಡತಿಯೂ ಮಗಳೂ ಇದ್ದಾರೆ. ಆದ್ದರಿಂದ ಹೇಗೆ ಸಾಧ್ಯವಮ್ಮ?"

ಜ್ಯೋತಿರ್ಮಯಿ ದೇವಿ ಹೇಳಿದರು: "ನಾನು ಹುಟ್ಟಿದ್ದೆ ಆ ಮನುಷ್ಯನಿಗಾಗಿ ಬಾಳೋದಕ್ಕೆ. ಎಷ್ಟೋ ಸಲ ನಾನು ಅದು ಬೇಡ ಅಂತ ಕೈಬಿಟ್ಟಿದ್ದೆ. ವಿಧಿ ಒಪ್ಪೋದಿಲ್ಲ. ಇನ್ನು ಮೇಲೆ ನಾನು ಅವರವಳೇ ಆಗಿ ಇರೋದಕ್ಕೆ ನಿಶ್ಚಯಿಸಿದ್ದೀನಿ."

ಆ ಸ್ಥಿತಿಯನ್ನು ಅವರು ಒಪ್ಪಿಕೊಳ್ಳುತ್ತಾರೋ ಎಂದು ಸಾವಿತ್ರಿಗೆ ವಿಶ್ವಾಸವಿಲ್ಲ. ಯಾವ ಗಂಡಸು ಹಾಗೆ ಸ್ವೀಕರಿಸಿಯಾನು? ಆದರೆ ಜ್ಯೋತಿರ್ಮಯಿ ದೇವಿಗೆ ಯಾವ ಸಂಶಯವೂ ಇರಲಿಲ್ಲ. ಮಾತಾಜಿ ಅದನ್ನು ಹೇಳಿ ಮುಗಿಸಿದರು. "ಅಲ್ಲದೆ ವಿಧಿ ನಿಶ್ಚಯಿಸಿರೋದು ಆತ ನನ್ನವನಾಗಿರಬೇಕು ಅಂತ."

ಆಶ್ರಮದಲ್ಲಿ ಈ ಸ್ಪರ್ಧೆಯ ಮನೋಭಾವ ಭಕ್ತಜನರಲ್ಲೆಲ್ಲ ಹರಡಿತು. ಸ್ವಾಮಿ ತಿರುವಡಿಗಳಿಗೂ ಫಲಪ್ರದವಾದ ತೀರ್ಮಾನವನ್ನು ಕೈಗೊಳ್ಳಲು ಸಾಧ್ಯವಾಗಿಲ್ಲವೆಂದು ಅಭಿಪ್ರಾಯ. ಅದರ ಕಾರಣಗಳೂ ಹಲವು. ಪ್ರಭಾವತಿ ದೇವಿಯೊಡನೆ ಸ್ವಾಮೀಜಿಗೆ ವಿಶೇಷವಾದ ವಾತ್ಸಲ್ಯವಿದೆ ಎನ್ನುವ ಅಭಿಪ್ರಾಯವುಳ್ಳವರೂ ಇದ್ದಾರೆ. ಆಶ್ರಮದ ಮಾತಾಜಿ ತನ್ನ ಇಷ್ಟ ಬಂದ ಹಾಗೆ ನಡೆಯುತ್ತಾರೆ. ಕಾರಣವಿಲ್ಲದೆಯೂ ಕಾರಣವಿದ್ದೂ ಅವರು ಶತ್ರುಗಳನ್ನು ಮಾಡಿಕೊಳ್ಳುತ್ತಾರೆ. ಆ ಅಭಿಪ್ರಾಯದವರೂ ಇದ್ದರು. ಅನಾಥ ವನಿತಾಮಂದಿರ ಇರಬೇಕೆಂದು ಕೆಲವರು ವಾದಿಸಿದರು. ಭಜನೆ, ಕೀರ್ತನೆಯಿಂದ ಮಾತ್ರ ಸಾಲದು. ಈ ರೀತಿಯೂ ಬೇಕು ಎಂದು. ಮತ್ತೊಂದು ವಿಭಾಗದ ಅಭಿಪ್ರಾಯ ಇದೊಂದೂ ಅಲ್ಲ. ಈ ಸನ್ಯಾಸಿನಿಯರು ಜೀವನದ ಮಧ್ಯಘಟ್ಟದಲ್ಲಿ ಸನ್ಯಾಸ ಸ್ವೀಕರಿಸಿದವರು. ಅವರಿಗೆ ಹಳೆಯ ಅನುಭವಗಳಿವೆ. ಅಸೂಯೆ, ಅಸಹನೆ, ದುರಾಶೆ—ಎಲ್ಲವೂ ಎಷ್ಟು ನಿಯಂತ್ರಿಸಿದರೂ ತಲೆ ಎತ್ತುತ್ತಿರುತ್ತವೆ. ಒಬ್ಬೊಬ್ಬರಿಗೂ ಚರಿತ್ರೆಗಳಿಲ್ಲವೆ? ಹಳೆಯ ಅನುಭವಗಳಿಲ್ಲವೆ? ನೆನಪುಗಳಿಲ್ಲವೆ?

ನಿಟ್ಟುಸಿರು ಎಷ್ಟೋ ಸಲ ಹೊರಬರಬಹುದು. ಹಲ್ಲು ಕಚ್ಚಿಕೊಳ್ಳಲೂ ಬೇಕಾಗ ಬಹುದು. ಹಾಗೆ ಭಕ್ತಜನರ ಮಧ್ಯೆ ಆಧ್ಯಾತ್ಮಿಕ ಜೀವನದಲ್ಲಿ ಅನ್ನದಲ್ಲಿ ಕಲ್ಲು ಸಿಕ್ಕಿದ ಹಾಗಾಯಿತು.

ರಾಮಚಂದ್ರನ್ ನಾಯರ ಹೆಂಡತಿ ಒಬ್ಬಳು ಭಕ್ತೆ. ಒಂದು ಭಕ್ತರ ಕುಟುಂಬ ದಿಂದ ಅವಳು ಬರುತ್ತಿದ್ದದ್ದು. ಧನ್ಯಾನಂದಾಶ್ರಮದ ಬಗ್ಗೆ ವಿಮಲಮ್ಮನಿಗೆ ಅಷ್ಟೊಂದು ಪವಿತ್ರ ಭಾವನೆಯಿಲ್ಲ. ಅಂತು ಆಧ್ಯಾತ್ಮಿಕ ವಿಕಾಸಕ್ಕೆ ಯಾವ ಸೌಕ ರ್ಯವೂ ಇಲ್ಲದ ಬದುಕನ್ನು ಅವಳಿಗೆ ಸಹಿಸಲು ಸಾಧ್ಯವಿರಲಿಲ್ಲ. ಆದ್ದರಿಂದ ಅವಳು ಧನ್ಯಾನಂದಾಶ್ರಮಕ್ಕೆ ಹೋಗಿದ್ದಳು. ಅಷ್ಟೆ. 'ಧನ್ಯಾನಂದಾಶ್ರಮದ ಕಾರ್ಯಕ್ರಮಗಳು ತೀರ ಶುಷ್ಕವಾಗಿ ವಿಮಲಮ್ಮನಿಗೆ ತೋರಿದವು. ಆಕೆಗೆ ಸಂಗೀತದಲ್ಲೂ ನೃತ್ಯದಲ್ಲೂ ಅಭಿರುಚಿ ದೊರೆತದ್ದು ಅವರ ಊರಿನಲ್ಲಿದ್ದ ಒಂದು ಆಶ್ರಮದಿಂದ.'

ವಿಮಲಮ್ಮನಿಗೆ ಒಂದು ಹೊಸ ಆಲೋಚನೆ ಹೊಳೆಯಿತು. ಏನಿದ್ದರೂ ಆಧ್ಯಾತ್ಮಿಕ ಕೇಂದ್ರ ಹಲವು ಜನರಿಂದ ಆಗಬೇಕು. ಧನ್ಯಾನಂದಾಶ್ರಮ ಮುಚ್ಚುವ ಹಾಗೆ ಕಾಣುತ್ತದೆ. ಮಲಬಾರಿನಿಂದ ಉಮಾದೇವಿಯನ್ನು ಬರಮಾಡಿ ಒಂದು ಆಶ್ರಮ ವನ್ನು ಸ್ಥಾಪಿಸಿದರೇನು? ಆಕೆ ತಿರುವನಂತಪುರಕ್ಕೆ ಬಂದ ಮೊದಲಿನಿಂದಲೂ ಉಮಾ ದೇವಿಯನ್ನು ಕುರಿತು ಸ್ತುತಿಸುತ್ತಿದ್ದಳು. ಆದರೆ ತಿರುವನಂತಪುರದವರು ಅದನ್ನು ಅಷ್ಟೊಂದು ದೊಡ್ಡ ವಿಷಯವಾಗಿ ಕೈಗೆತ್ತಿಕೊಂಡಿರಲಿಲ್ಲ. ಆ ಆಶ್ರಮ ಇರುವುದು ಸ್ತ್ರೀಗಳಿಗಾಗಿ ಮಾತ್ರ. ಅಲ್ಲಿ ಪುರುಷರೂ ಭಕ್ತರಾಗಬಹುದು. ಆದರೆ ಮಠಾಧಿಪತಿ ಸ್ತ್ರೀಯಾಗಿರಬೇಕು. ಅಲ್ಲಿಯ ಕಾರ್ಯಕ್ರಮ ಕೇವಲ ಭಜನೆ, ಗೀತಾ ಪ್ರವಚನ ಮಾತ್ರ ವಲ್ಲ, ಸಂಗೀತ, ನೃತ್ಯ ಎಲ್ಲವೂ ಇರುತ್ತದೆ.

ಕೆಲವು ಸ್ತ್ರೀಯರು ಉಮಾದೇವಿ ಆಶ್ರಮವನ್ನು ತಿರುವನಂತಪುರದಲ್ಲಿ ಸ್ಥಾಪಿ ಸಲು ತೀರ್ಮಾನವನ್ನು ಕೈಗೊಂಡರು.

## [37]

### ಜೀವನದಲ್ಲಿ ಒಂದು ರಾತ್ರಿ

ಮಾತಾ ಜ್ಯೋತಿರ್ಮಯಿ ದೇವಿ ತಮ್ಮ ಜೀವನದಲ್ಲಿನ ಬಹುಮುಖ್ಯವಾದ ಕೆಲವಾರು ದಿನಗಳನ್ನು ಕಳೆಯುತ್ತಿದ್ದರು. ಎರಡರಲ್ಲಿ ಒಂದನ್ನು ತೀರ್ಮಾನಿಸಬೇಕಾಗಿತ್ತು. ನಿಜವಾಗಿ ಅನಾಥ ಹೆಣ್ಣುಮಕ್ಕಳ ಬಗ್ಗೆ ಇದ್ದ ವಿಶೇಷ ಅನುಕಂಪ ಒಂದೆರಡು ದಿನಗಳಲ್ಲಿ ಕಡಿಮೆಯಾಯಿತು. ಅವರೊಂದಿಗೆ ಅವರ ಮಾರ್ಗವನ್ನು ತುಳಿಯಲು ತಯಾರಾಗಿರುವುದಾಗಿ ಮಾತಾಜಿ ಹೇಳಿದರು. ಅದು ನಿರ್ಮಲ ಮನಸ್ಸಿನಿಂದ ಹೇಳಿದುದೇ. ಇದೂ ಒಂದು ರೀತಿಯಲ್ಲಿ ಮುಖ್ಯವಾಗಿತ್ತು. ಆದರೆ ಅವರ ಗುರಿ ಅದಲ್ಲ. ಎಷ್ಟು ಬೇಗ ಒಂದು ಅನಾಥ ಮಂದಿರವನ್ನು ನಿರ್ಮಿಸುವ ಶ್ರಮವನ್ನು ವಹಿಸಬೇಕು ಎಂದಲ್ಲ ಅವರು ಯೋಚಿಸುತ್ತಿದ್ದದ್ದು. ಮಾತಾ ಜ್ಯೋತಿರ್ಮಯಿ ದೇವಿ ಈ ಜೀವನವನ್ನು ಅನುಭವಿಸಿ ಕೆಲವೇ ದಿನಗಳಲ್ಲಿ ತುಂಬ ಜುಗುಪ್ಸೆಗೊಂಡರು. ತಾನು ಹೀಗೆಲ್ಲ ಜೀವಿಸುವವಳಲ್ಲ ಎನ್ನಿಸಿತು. ಈ ಜೀವನವನ್ನು ಸ್ವೀಕರಿಸಿದುದೇ ತಪ್ಪಾಗಿಹೋಯಿತು. ಮತ್ತೆ ಹೇಗಿದ್ದ ಜೀವನವನ್ನು ಆರಿಸಿಕೊಳ್ಳಬೇಕಾಗಿತ್ತು? ಮತ್ತೊಂದು ಜೀವನದ ಎಲ್ಲಾ ಸೌಕರ್ಯಗಳೂ ಅವರಿಗಿದ್ದುವು.

ಯಜಮಾನಿಕೆಗೆ ಸಂಬಂಧಿಸಿದ ಪ್ರಜ್ಞೆ, ಸಶಕ್ತವಾದ ತನ್ನ ಇಷ್ಟ. ಆಗಿಹೋದ ದೊಡ್ಡ ನಷ್ಟವನ್ನು ಕುರಿತು ವಿವೇಚನೆ, ಈಗಿನ ಈ ಅವಸ್ಥೆ—ಹೀಗೆಲ್ಲವೂ ಒಟ್ಟುಗೂಡಿ ಕಳೆದ ಜೀವನದ ಅನುಭವಗಳ ಸುಳಿಯಲ್ಲಿ ಸಿಕ್ಕಿಸಿದಾಗ ಮಾತಾ ಜ್ಯೋತಿರ್ಮಯಿ ದೇವಿ ತಂಗಮ್ಮ ಆದರು. ಆದರೆ ಹಿಂದಿನ ತಂಗಮ್ಮ ಅಲ್ಲ. ಹಳೆಯ ತಂಗಮ್ಮನಿಗೆ ಬುದ್ಧಿಯಿರಲಿಲ್ಲ. ಇಚ್ಛಾಶಕ್ತಿಯಿರಲಿಲ್ಲ. ಆಗುಹೋಗುಗಳ ಬಗ್ಗೆ ಅಲಕ್ಷ್ಯಮನೋಭಾವವಿತ್ತು. ಆ ತಂಗಮ್ಮ ಕೇಶವ ಪಿಳ್ಳೆಯಿಂದ ಸುಮ್ಮನೆ ಹಾಗೆಂದು ಹೇಳಿಸುತ್ತಿದ್ದಳು. ಆತ ಅಂದು ಹಾರಿಹೋದಾಗ ಏನೂ ಅನ್ನಿಸಲಿಲ್ಲ. ರಾಮಚಂದ್ರನ್ ನಾಯರ್ ಅವಳನ್ನು ಕಡಿದು, ಜಗಿದು, ಉಗಿದಿದ್ದರೂ ಅದನ್ನು ತಂಗಮ್ಮ ಅಷ್ಟೊಂದು ಪ್ರಧಾನವಾಗಿ ಪರಿಗಣಿಸಿಲ್ಲ. ಅನಂತರ ಹಾರಿಬಿಟ್ಟ ಆ ಹಕ್ಕಿ ತಿರುಗಿ ಬಂದು ಅವಳ ಅಂಗೈಯಲ್ಲಿದ್ದುಕೊಂಡು ಚಿಲಿಪಿಲಿಗುಟ್ಟಿದರೂ ಅವಳು ಅದನ್ನು ಹಿಡಿದು ಗೂಡಿನಲ್ಲಿಟ್ಟಿಲ್ಲ. ಅದನ್ನು ಅವಳು ಗಮನಿಸಿದ್ದೇ ಇಲ್ಲ. ಅದು ಅವಳ ಸುತ್ತ ಹಾರಾಡಿಕೊಂಡಿತ್ತು. ಒಂದು ಕಾಲದಲ್ಲಿಯೂ 'ಶೇಖರ ವಿಲಾಸ' ತನ್ನ ಒಂದು ಆಸ್ತಿಯಾಗಿ ತೋರಿರಲಿಲ್ಲ. ಉದ್ಯೋಗವನ್ನು ಸುಲಭವಾಗಿ ಕೈಬಿಟ್ಟಳು, ಅದು ಚಿನ್ನಸ್ವಾಮಿಯ ಮಾತನ್ನು ಕೇಳಿ. ಅನಂತರ ಸನ್ಯಾಸಿನಿಯಾದಳು. ಈಗ ಈ ಕಾವಿ ವಸ್ತ್ರಕ್ಕೂ ಅರ್ಥವಿಲ್ಲದಂತಾಯಿತು.

ಇನ್ನು ತನಗೆ ಬೇಕಾದದ್ದೇನು? ಸಾವಿತ್ರಿಯನ್ನು ಕಂಡದ್ದರಿಂದಾಗಿರಬೇಕು. ಸಮಾನವಾದ ಅವಳ ಜೀವನದಂತೆ ನಷ್ಟವಾದದ್ದೇನೆಲ್ಲ ಎಂದು ಅವಳಿಗೆ ತಿಳಿಯಿತು. ಕಳೆದ ಬದುಕೆಲ್ಲ ತಿಳುವಳಿಕೆಯಿಲ್ಲದೆ; ತೀರ ತಿಳುವಳಿಕೆಯಿಲ್ಲದೆ! ತಾನೂ ಒಬ್ಬಳು ಸಾವಿತ್ರಿಯಾಗದೆ ಹೋದದ್ದು ತನ್ನ ಭಾಗ್ಯದಿಂದಾಗಿ ಅಷ್ಟೆ!

ತಂಗಮ್ಮನಿಗೆ ನಷ್ಟವಾದದ್ದನ್ನು ಪುನಃ ಪಡೆಯಬೇಕೆನ್ನಿಸಿರಬಹುದು. ಹಕ್ಕಿನ ಪ್ರಶ್ನೆ ಜೀವನದ ಮಹತ್ವವಾಗಿ ಬದಲಾಯಿಸಿರಬಹುದು. ಕೇಶವ ಪಿಳ್ಳೆಗೆ ಈ ದೃಷ್ಟಿಯಲ್ಲಿ ಯಾರ ಮೇಲೆ ಋಣವಿರುವುದು? ಅವಳು ಮತ್ತೊಬ್ಬನಿಗಾಗಿ ಜೀವನದಲ್ಲಿ ಏನನ್ನಾದರೂ ಮಾಡಿದ್ದುಂಟೆ? ಕೇಶವ ಪಿಳ್ಳೆ ಎನ್ನುವ ಕ್ಲಾರ್ಕು ತಾನಾಗಿ ಅವಳ ಕೈಗೆ ಬಿದ್ದ. ಅವಳು ತಾನೇ ತಾನಾಗಿ ಅವನಿಗೆ ವಶಳಾಗಿ ಹೋದದ್ದಲ್ಲ. ರಾಮಚಂದ್ರನ್ ನಾಯರರ ಹಸ್ತಗಳಿಗೆ ತಂಗಮ್ಮ ಬಿದ್ದಳು. ಒಪ್ಪಿಕೊಳ್ಳೋಣ. ಆದರ ಕೇಶವ ಪಿಳ್ಳೆಯ ಮೇಲೆ ಅವಳಿಗೆ ಹಕ್ಕಿಲ್ಲವೆ? ಅವಳಿಗೆ ಮಾತ್ರ. ಮನೆ ಕಟ್ಟಿಸಿ ಕೊಟ್ಟದ್ದರಿಂದ ಮಾತ್ರ ಆ ಕಡ ತೀರಿದ ಹಾಗಾಯಿತೆ? ಎಂದೆಂದೂ ಕೇಶವ ಪಿಳ್ಳೆ ಅವಳ ಮನುಷ್ಯ. ಇದುವರೆಗೆ ಅವಳಿಗೆ ಯಾವುದೂ ದೊರೆತಿಲ್ಲ. ಯಾವ ರೀತಿಯಲ್ಲೂ ತೂಗಾಡಬೇಕಾಗಿಲ್ಲ. ಇನ್ನುಳಿದಿರುವ ಕಾಲವಾದರೂ ಅವಳು ಜೀವಿಸಬೇಕು. ಒಳ್ಳೆಯ ಕಾಲ ಹಾಳಾಗಿ ಹೋಯಿತು. ಹೋದದ್ದು ಹೋಗಲಿ. ತಾನೇತಕ್ಕಾಗಿ ಜನಿಸಿದ್ದು ಎನ್ನುವುದನ್ನು ಕುರಿತು ಒಂದು ಸ್ಪಷ್ಟವಾದ ಅರಿವು ತಂಗಮ್ಮನಿಗೆ ಇಂದು ಮೂಡಿದಂತೆ ತೋರಿತು. ಈ ಕಾವಿಯನ್ನುಟ್ಟುಕೊಂಡು ನಡೆದಾಡುವುದಲ್ಲ. ಅದು ಆ ಪ್ರಶ್ನೆಯ ಬೆಳಕಿನಲ್ಲಿ ಕಳೆದ ದಿನಗಳನ್ನು ಕೂಲಂಕಷವಾಗಿ ಪರಿಶೋಧಿಸಿದಳು. ಆ ಬೆಳಕೇ ತನ್ನ ಮುಂದಿನ ದಾರಿಯನ್ನು ತೋರಿಸುತ್ತದೆ.

ಹೊರಲಾರದಂತಹ ತಪ್ಪುಗಳನ್ನು ಕೇಶವ ಪಿಳ್ಳೆಗೆ ಆರೋಪಿಸಿದ್ದುಂಟು. ತಂಗಮ್ಮನಿಗೆ ಅದರ ಅರಿವಿದೆ. ಆ ಹಳ್ಳಿಯವನು ಅವಳನ್ನು ಪ್ರೀತಿಸಿದ್ದ. ಯಾವ ತಪ್ಪು ಮಾಡಿದರೂ ಆ ತಪ್ಪನ್ನು ಕುರಿತು ಒಂದೇ ಒಂದು ಸಲವೂ ಎಚ್ಚರಿಕೆ ಕೊಟ್ಟಿರಲಿಲ್ಲ. ಎಂದಾದರೂ ತನ್ನನ್ನು ನೋಯಿಸಿದ್ದುಂಟೆ? ಎಂದು ತಂಗಮ್ಮ ನೆನಸಿಕೊಂಡಳು. ಒಮ್ಮೆಯೂ ನೋಯಿಸಿಲ್ಲ. ಯಾವಾಗಲೂ ಸಹತಾಪವನ್ನೇ ತೋರಿಸಿದ್ದು. ಆದರೆ ಆ ಪ್ರೀತಿಯನ್ನು ಅರ್ಥಮಾಡಿಕೊಳ್ಳಲು ತನಗೆ ಒಮ್ಮೆಯೂ ಸಾಧ್ಯವಾಗಲಿಲ್ಲವಲ್ಲಾ ಎಂದು ತಂಗಮ್ಮ ಪಶ್ಚಾತ್ತಾಪ ಪಟ್ಟಳು.

ಋಣದ ಹೆಸರಿನಲ್ಲಿ ತಾನು ಮಾಡಬಾರದ್ದನ್ನೆಲ್ಲಾ ಮಾಡಿದುದೇನು? ಋಣದ ಹೆಸರಿನಲ್ಲಿ ಕೇಶವ ಪಿಳ್ಳೆ ಸಹಾಯ ಮಾಡಿರುವುದೇನು? ತಂಗಮ್ಮ ಇಂದು ಒಂಟಿ. ಅವಳಿಗೆ ಯಾರಿದ್ದಾರೆ? ಏನಿದೆ? ಏನೂ ಇಲ್ಲ. ಈಗಲೂ ಅಲ್ಲಿಗೇ ಹೋಗಬಹುದು. ಆದರೆ ಈಗ ಅಲ್ಲಿಗೆ ಹೋಗುವುದು. ಎಂದೆಂದೂ ಅಲ್ಲಿಂದ ಅಗಲಬಾರದು.

ತನಗೆ ಅಲ್ಲಿಗೆ ಹೋಗಲು ಹಕ್ಕಿದೆ ಎಂದು ತಂಗಮ್ಮ ಸ್ವಯಂ ವಾದಿಸಿದಳು.

ಅವಳ ಸ್ತ್ರೀತ್ವಕ್ಕೆ ಬೆಲೆಯನ್ನು ಕಲ್ಪಿಸಿದ ಪುರುಷ ಕೇಶವ ಪಿಳ್ಳೈ. ಮೊದಲ ಚುಂಬನ ದೊರೆತದ್ದು ಕೇಶವ ಪಿಳ್ಳೈಯಿಂದ. ಪುರುಷನ ಲಾಲಸೆಗೆ ಅವಕಾಶ ಕೊಟ್ಟದ್ದು ಕೇಶವ ಪಿಳ್ಳೆಯ ಮುಂದೆ ನಿಂತು. ಈ ಜೀವನದ ನೃತ್ಯದಲ್ಲಿ ಕಾಲು ತಪ್ಪಿ, ತಪ್ಪು ಹೆಜ್ಜೆ ಯಿಡಲು ಮೂಲ ಕಾರಣ ಯಾರು? ತಂಗಮ್ಮ ಆ ದಿನಗಳನ್ನು ಸ್ಪಷ್ಟವಾಗಿ ಕಣ್ಣು ಮುಂದೆ ತಂದುಕೊಳ್ಳುತ್ತಿದ್ದಾಳೆ. ಚಂಚಲತೆಯ ಒಂದು ಹೆಣ್ಣಿನ ಚಾಪಲ್ಯವನ್ನು ಒಬ್ಬ ಪುರುಷ ತಡೆಹಿಡಿದು ನಿಲ್ಲಿಸಬಾರದೆ? ಒಮ್ಮೆಯಾದರೂ ಆ ತಪ್ಪುಗಳನ್ನು ಕುರಿತು ಆ ಮನುಷ್ಯ ಕೇಳಿಲ್ಲ. ಆ ತಪ್ಪುಗಳಿಂದಾಗುವ ಸೋಲನ್ನು ಊಹಿಸಲಿಲ್ಲ. ತಪ್ಪು ಮಾಡಿದವಳನ್ನು ಬಯ್ದಿದ್ದರೆ! ಬಹುಶಃ ಆಗಲೇ ತಾನು ಹಾಳಾಗುತ್ತಿರಲಿಲ್ಲ ಎಂದು ತಂಗಮ್ಮ ತನಗೆ ತಾನೇ ಹೇಳಿಕೊಂಡಳು. ಒಮ್ಮೆ ಮುಖ ಸಿಂಡರಿಸಿಕೊಂಡು ಮಾತನಾಡಿದ್ದೂ ಇಲ್ಲ. ಕಷ್ಟ! ಆ ಪ್ರಿಯತಮ ಅಂತಹ ಒಬ್ಬ ಮನುಷ್ಯನಾಗಿದ್ದಿದ್ದಲ್ಲಿ ಆಳಲು ಸಾಧ್ಯವಿಲ್ಲದ ಪ್ರಿಯತಮ! ಗಂಡನಾಗಿ ಅಲ್ಲ.

ತಂಗಮ್ಮನಿಗೆ ಎಷ್ಟೋ ತಪ್ಪುಗಳನ್ನು ಎತ್ತಿ ಆಡುವುದಿದೆ. ಎಲ್ಲ ತಪ್ಪುಗಳನ್ನೂ ಅವಳು ಒಪ್ಪಿಕೊಳ್ಳುತ್ತಾಳೆ. ಕಾಲು ಹಿಡಿದು ಕ್ಷಮಿಸಬೇಕು ಎಂದು ಯಾಚಿಸುತ್ತಾಳೆ. ಹಾಗೆ ಕಾಲು ಹಿಡಿದುಕೊಂಡಿದ್ದಾಗ ತಪ್ಪುಗಳನ್ನು ಒಂದೊಂದಾಗಿ ಕೇಳುತ್ತಾ ಆ ಮನುಷ್ಯ ಒದೆದಿದ್ದಿದ್ದರೆ ಅದೂ ಒಂದು ಆನಂದವಾಗಿರುತ್ತಿತ್ತು. ಅಲ್ಲದೆ ತಪ್ಪುಗಳನ್ನು ಪುನರಾವರ್ತಿಸಬೇಡ ಎಂದು ಆತ ವಿಧಿಸಬಹುದಾಗಿತ್ತು. ತನ್ನ ಸುತ್ತ ಒಂದು ಗೆರೆ ಎಳೆದು ತನ್ನನ್ನು ಅಲ್ಲಿ ನಿಲ್ಲಿಸಿ ಇಲ್ಲಿಂದ ಅಲುಗಾಡಬೇಡ ಎಂದು ಆಜ್ಞಾಪಿಸಿದಲ್ಲಿ ಅದನ್ನೂ ತಂಗಮ್ಮ ಅನುಸರಿಸುತ್ತಾಳೆ. ಅವಳು ಸರ್ವಸ್ವವನ್ನೂ ಕೇಶವ ಪಿಳ್ಳೆಗೆ ಸಮರ್ಪಿಸಲು ಸಿದ್ಧಳಾಗಿದ್ದಾಳೆ.

ಆದರೆ ಈ ಭಾರವಾದ ಪಾಪವನ್ನು ಹೊತ್ತುಕೊಂಡು ಅಲ್ಲಿಗೆ ಹೋಗುವುದು ಹೇಗೆ ಸಾಧ್ಯ? ಅವಳ ಹೃದಯೇಶ್ವರ ಮತ್ತೊಂದು ಮಾರ್ಗದಲ್ಲಿ ಹೊರಟುಹೋದ. ಆ ಮಾರ್ಗದಲ್ಲಿ ಬಹಳ ದೂರ ಸಾಗಿಬಿಟ್ಟಿದ್ದಾನೆ. ಆತ ಈಗ ಹೆಂಡತಿ ಇರುವ ಮನುಷ್ಯ. ಮಗಳೂ ಇದ್ದಾಳೆ. ಒಬ್ಬ ಗೃಹಸ್ಥ.. ಅಲ್ಲಿ ತನಗೆ ಹೇಗೆ ಸ್ಥಾನ ಲಭಿಸುತ್ತದೆ?

ಈ ಹೂವಿನ ಕಾಂತಿ ಮಸುಕಾಯಿತು. ಇನ್ನು ಮೇಲೆ ಇದು ಆಕರ್ಷಕ ಪುಷ್ಪ ವಾದೀತೇ? ಪ್ರೀತಿಯುಳ್ಳ ಈ ಹೃದಯವನ್ನು ಸಮರ್ಪಿಸೋಣವೆಂದರೆ—ಅದರಲ್ಲಿ ಆತನಿಗೆ ನಂಬಿಕೆಯಿದೆಯೇ? ಇನ್ನು ಮೇಲೂ ತುಂಬಿದ ಕಣ್ಣುಗಳಿಂದ ನೋಡಿದಲ್ಲಿ ಅದನ್ನು ಯಾರಾದರೂ ನಂಬುತ್ತಾರೆಯೆ? ಈಗಲೂ ಈ ಕಣ್ಣುಗಳಿಗೆ ಅಂತಹ ಶಕ್ತಿ ಇದೆಯೇ? ಈ ತುಟಿಗಳ ಮಂದಹಾಸ ಇನ್ನು ಮುಂದೆ ಚೇತೋಹಾರಿಯಾಗಿ ಇರ ಬಲ್ಲುದೆ? ಈಗ ತನ್ನಲ್ಲುಳಿದಿರುವ ಶಕ್ತಿ ಯಾವುದು? ಯಾವುದೂ ಇಲ್ಲ. ಈ ಬತ್ತಳಿಕೆ ಯಲ್ಲಿರುವ ಬಾಣಗಳೆಲ್ಲವೂ ಹಳೆಯವು. ಮೊನಚಲ್ಲ. ಒಂದು ಮಾತ್ರ ಇದೆ. ಅದು ಮನಸ್ಸು ಬಿಚ್ಚಿ ಎಲ್ಲವನ್ನೂ ಹೇಳಿಕೊಳ್ಳುವುದು. ಹೇಳಿಕೊಳ್ಳಲು ಹಕ್ಕಿದೆ ಎನ್ನುವುದು

ಮಾತ್ರ ತನಗಿರುವ ಬಲ.

ಹಾಗೆ ಮಾತಾ ಜ್ಯೋತಿರ್ಮಯಿ ದೇವಿ ಒಂದು ದಿನ ಕನ್ಯಾಕುಮಾರಿಯಲ್ಲಿ ಸರ್ಕಾರದ ಛತ್ರದಲ್ಲಿ ಚೀಫ್ ಸೆಕ್ರೆಟರಿ ಕುಳಿತಿದ್ದಾಗ ಒಳಗೆ ಬಂದಳು. ಸಂಸ್ಥಾನದ ಪುನರ್ವಿಭಜನೆಯ ಫೈಲುಗಳನ್ನು ನೋಡುವುದಕ್ಕಾಗಿ ಚೀಫ್ ಸೆಕ್ರೆಟರಿ ಹೆಂಡತಿಯ ಅನುಮತಿಯನ್ನು ಪಡೆದು ಎರಡು ದಿನಗಳ ಮಟ್ಟಿಗೆ ಕನ್ಯಾಕುಮಾರಿಗೆ ಹೋಗಿದ್ದರು. ಅಲ್ಲಿಗೇ ಬಂದದ್ದು ಮಾತಾ ಜ್ಯೋತಿರ್ಮಯಿ ದೇವಿ. ಬಹುಶಃ ಅದೇ ತಕ್ಕ ಸ್ಥಳವೆಂದು ಭಾವಿಸಿ ಹೋದದ್ದಾಗಿರಬೇಕು.

ತಂಗಮ್ಮ ಅತ್ತದ್ದನ್ನು ಕೇಶವ ಪಿಳ್ಳೆ ಒಮ್ಮೆಯೂ ಕಂಡಿರಲಿಲ್ಲ. ಅವಳು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಕೇಶವ ಪಿಳ್ಳೆ ಎದ್ದು ನಿಂತರು.

"ಯಾಕೆ? ಯಾಕೆ? ಯಾಕಳುತ್ತೀಯಾ?"

ಮಾತಾ ಜ್ಯೋತಿರ್ಮಯಿ ದೇವಿಗೆ ಮಾತನಾಡಲು ಸಾಧ್ಯವಾಗಿರಲಿಲ್ಲ. ಅದು ಅಭಿನಯವಾಗಿರಲಿಲ್ಲ. ಅಳಬೇಕೆಂದು ಸಿದ್ಧಮಾಡಿಕೊಂಡು ಅಳುವನ್ನು ಆಶ್ರಯಿಸಿ ಅಲ್ಲಿಗೆ ಹೋದುದಲ್ಲ. `ಬದುಕಿನಲ್ಲಿ ಉಂಟಾದ ಸೋಲುಗಳನ್ನೆಲ್ಲಾ ಕಣ್ಣೀರಿನ ಮೂಲಕ ಹೇಳಿಕೊಳ್ಳಬೇಕೆಂದು ಅಲ್ಲಿಗೆ ಹೋದದ್ದು. ಹಾಗೆ ಕಣ್ಣೀರಿನ ಮೂಲಕ ಆ ಕಥೆ ಹೊರಬರುತ್ತಿತ್ತು. ಅದಕ್ಕಾಗಿ ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಕೇಶವ ಪಿಳ್ಳೆ ಗಾಬರಿಗೊಂಡರು. ಅಂತಹ ಒಂದು ಸ್ಥಿತಿಯನ್ನು ಕಂಡದ್ದೇ ಇಲ್ಲ.

ತನ್ನ ಮುಂದೆ ಒಬ್ಬಳು ಸನ್ಯಾಸಿನಿ ನಿಂತಿದ್ದಾಳೆ ಎಂಬುದು ಕೇಶವ ಪಿಳ್ಳೆಗೆ ಜ್ಞಾಪಕಕ್ಕೆ ಬಂದಿತು. ಅದು ತಂಗಮ್ಮ.

"ಏನಾಯಿತು? ಹೇಳು. ವಿಷಯ ಹೇಳು."

ಅವರು ಮಾತಾ ಜ್ಯೋತಿರ್ಮಯಿಯ ಹತ್ತಿರ ಬಂದು ನಿಂತುಕೊಂಡರು. ಮುಖ ಮುಚ್ಚಿಕೊಂಡಿದ್ದ ಅವಳ ಕೈಗಳನ್ನು ತೆಗೆದರು.

ಆ ಮುಖ ಕಣ್ಣೀರಿನಿಂದ ತೊಯ್ದುಹೋಗಿತ್ತು. ಕಣ್ಣೀರನ್ನು ಸುರಿಸಿಕೊಂಡಿದ್ದ ಕಣ್ಣುಗಳು ಕೆಂಪಾಗಿದ್ದುವು. ತುಟಿಗಳು ಬಿಗಿಯಾಗಿದ್ದುವು. ಯಾವುದೋ ಒಂದು ಅಪಾರವಾದ ದುಃಖವುಂಟಾಗಿದೆ. ಅದೇನೆಂಬುದು ಕೇಶವ ಪಿಳ್ಳೆಗೆ ಅರ್ಥವಾಗುತ್ತಿಲ್ಲ. ಆಗಲೂ ಅವರು ಗಾಬರಿಯಿಂದ ಕೇಳಿದರು:

"ಏನಾಯಿತು. ವಿಷಯ ಹೇಳು. ಪರಿಹರಿಸೋಣ."

ಕೇಶವ ಪಿಳ್ಳೆ ತಮ್ಮ ಕೈಗಳಿಂದ ಅವಳ ಕೊರಳನ್ನು ಬಳಸಿ ತೋಳಿನ ಮೇಲೆ ಕೈಯಿಟ್ಟರು. ಆ ಸ್ಪರ್ಶದಲ್ಲಿ ಯಾವುದೋ ಒಂದು ಅಲೌಕಿಕ ಶಕ್ತಿಯಿತ್ತು. ಕೇಶವ ಪಿಳ್ಳೆಯ ಮನಸ್ಸು ನಿಯಂತ್ರಣಶಕ್ತಿಯನ್ನು ಕಳೆದುಕೊಂಡಿತು. ಅದೊಂದು ದೌರ್ಬಲ್ಯವೆಂದೇ ಇಟ್ಟುಕೊಳ್ಳೋಣ. ಅವರು ಪುನಃ ಕೇಳಿದರು:

"ಹೇಳು."

ಮಾತಾ ಜ್ಯೋತಿರ್ಮಯಿ ದೇವಿ ಕೇಶವ ಪಿಳ್ಳೆಯ ಕಡೆಗೆ ಮುಖವನ್ನು ತಿರುಗಿಸಿ ನೀರು ತುಂಬಿದ ಕಣ್ಣುಗಳಿಂದ ತಡವರಿಸುತ್ತ ಹೇಳಿದಳು:

"ನನಗೆ ಯಾರೂ ಇಲ್ಲ. ಯಾವುದೂ ಇಲ್ಲ."

ಮಾತಾ ಜ್ಯೋತಿರ್ಮಯಿ ದೇವಿ ಕೇಶವ ಪಿಳ್ಳೆಯಿಂದ ತಟ್ಟನೆ ಒಂದು ಉತ್ತರವನ್ನು ನಿರೀಕ್ಷಿಸುತ್ತಿದ್ದಳು. ಮರುಕ್ಷಣದಲ್ಲಿಯೇ ಒಂದು ಉತ್ತರ ಅವರ ಬಾಯಿಯಿಂದ ಹೊರಬೀಳುವುದೆಂದುಕೊಂಡಿದ್ದಳು. ಅದಿಲ್ಲದಿದ್ದರೆ ಅದರ ಮುಂದಿನ ಕ್ಷಣದಲ್ಲಿ ಯಾದರೂ ಆ ಉತ್ತರ ಸಿಗಿರಬೇಕಾಗಿತ್ತು: "ನಾನಿದ್ದೇನೆ. ನನಗಿರುವುದೆಲ್ಲಾ ನಿನಗುಂಟು."

ಆ ಉತ್ತರ ಹೊರಗೆ ಬರಲಿಲ್ಲ. ನಿಮಿಷಗಳೆಷ್ಟೋ ಕಳೆದುಹೋದುವು. ಅವರು ತಮ್ಮ ಕೈಗಳನ್ನು ಹಿಂದಕ್ಕೆ ತೆಗೆದುಕೊಂಡರು. ಬೆನ್ನ ಹಿಂದೆ ಕೈ ಕಟ್ಟಿಕೊಂಡು ನಿಧಾನವಾಗಿ ಕೇಶವ ಪಿಳ್ಳೆ ಕುರ್ಚಿಯ ಕಡೆಗೆ ನಡೆದು ಆಲೋಚಿಸುತ್ತಾ ಕುಳಿತರು.

ಮತ್ತೂ ನಿಮಿಷಗಳು ಉರುಳುತ್ತಿದ್ದುವು. ಇಬ್ಬರೂ ಏನೂ ಮಾತಾಡಲಿಲ್ಲ. ಮಾತಾ ಜ್ಯೋತಿರ್ಮಯಿ ದೇವಿ ಅಳುತ್ತಿದ್ದಳು.

ಕೇಶವ ಪಿಳ್ಳೆ ಆಲೋಚಿಸುತ್ತಾ ಕುಳಿತಿದ್ದರು. ಎಲ್ಲವೂ ಜ್ಞಾಪಕಕ್ಕೆ ಬರುತ್ತಿದ್ದುವು. ಕಾರ್ಯಕಾರಣ ಸಂಬಂಧಗಳೆಲ್ಲವೂ ಸುವ್ಯಕ್ತವಾಗಿದ್ದುವು. ನಿಜಸ್ಥಿತಿಗಳನ್ನೆಲ್ಲವನ್ನೂ ನೆನಸಿಕೊಂಡರೆ ಸಾಕು. ಅವು ಸಂಕೋಲೆಯ ಕೊಂಡಿಗಳಂತೆ ಒಂದರ ಹಿಂದೆ ಮತ್ತೊಂದರಂತೆ ನುಗ್ಗಿ ಬರುತ್ತವೆ.

ಅಧಿಕಾರವಿರುವ ಅಧಿಕಾರಿಯ. ಇಲ್ಲದಿದ್ದಲ್ಲಿ ಒಬ್ಬ ರಕ್ಷಕನ ಸಂದರ್ಭೋಚಿತವಾದ ಗಾಂಭೀರ್ಯದಿಂದ ಅವರು ಹೇಳಿದರು:

"ನಿನಗೆ ಅದು ಈಗ ಅರ್ಥವಾಯಿತಾ?"

ಮಾತಾ ಜ್ಯೋತಿರ್ಮಯಿ ದೇವಿ ಓಡಿಹೋಗಿ ಅವರ ಪಾದಗಳ ಮೇಲೆ ಬಿದ್ದು ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಕೇಶವ ಪಿಳ್ಳೆ ಕಾಲುಗಳನ್ನು ಹಿಂದಕ್ಕೆ ತೆಗೆದುಕೊಳ್ಳಲು ಯತ್ನಿಸಿದರು. ಅವಳು ಬಿಡಲಿಲ್ಲ.

"ನನ್ನನ್ನು ಒದೆಯಿರಿ. ಚಿಂತೆಯಿಲ್ಲ. ಆದರೆ ನನ್ನನ್ನು ಕ್ಷಮಿಸಿ."

ಅವರು ಅವಳನ್ನು ಹಿಡಿದು ಎತ್ತಿ ನಿಲ್ಲಿಸಿದರು. ಆ ಮೇಲೆ ಕುರ್ಚಿಯನ್ನು ಹಿಡಿದುಕೊಂಡು ನಿಂತಿದ್ದರು.

ಅನಂತರ ಸಮಾಧಾನವಾದ ಧ್ವನಿಯಲ್ಲಿ ಕೇಳಿದರು:

"ಈಗ ನಿನಗೇನಾಯಿತು? ಅದನ್ನು ಹೇಳು."

ಅದೊಂದು ದೀರ್ಘವಾದ ಕಥೆಯಲ್ಲವೆ? ಕೂಡಲೇ ಅದನ್ನು ಹೇಳಿ ಮುಗಿಸುವುದಕ್ಕಾಗುತ್ತದೆಯೇ? ಒಂದು ಪಕ್ಷ ಇಂದಿನ ಸ್ಥಿತಿಯನ್ನು ಮಾತ್ರ ಹೇಳುವುದಿದ್ದಲ್ಲಿ ಒಟ್ಟೆಯಾರ್ ಕಾವಿನಲ್ಲಿ ಅನಾಥ ಮಂದಿರಕ್ಕೆ ಸ್ಥಳವನ್ನು ಕೇಳಿ ಅರ್ಜಿಯನ್ನು ಬರೆದು

ಕೊಂಡು ಹೋದಾಗ ಕೇಶವ ಪಿಳ್ಳೈ ಹೇಳಿದ್ದೆಲ್ಲಾ ಸರಿಯಾಗಿತ್ತು ಎಂದು ಹೇಳಿದರೆ ಸಾಕು. ಆದರೆ ಜ್ಯೋತಿರ್ಮಯಿ ದೇವಿಗೆ ಬೇಕಾದದ್ದು ಅದಲ್ಲ. ಅವಳಿಗೆ ಬೇಕಾಗಿದ್ದದ್ದು 'ನನ್ನನ್ನು ಸ್ವೀಕರಿಸಬೇಕು' ಎಂದು ಹೇಳಿಕೊಳ್ಳುವುದು. ಆಗ ಆ ಅಭಿಲಾಷೆ ವ್ಯಕ್ತವಾಗ ಲಿಲ್ಲ. ಅದನ್ನು ಹೇಳಲು ನಾಲಗೆ ಬರಲಿಲ್ಲ.

ಅವಳು ಮತ್ತೂ ಹೇಳಿದಳು: "ನನಗೆ ಯಾರೂ ಇಲ್ಲ; ಏನೂ ಇಲ್ಲ."

ಸ್ವಲ್ಪ ಹೊತ್ತು ಕಳೆದಿರಬಹುದು. ಅವರು ತುಟಿಯನ್ನು ಕುಟುಕುತ್ತಾ ಮುಖ ವನ್ನು ಅರಳಿಸಿಕೊಂಡು ನಿಂತಿದ್ದರು. ತುಂಬ ಹೊತ್ತಿನಿಂದ ಕೇಶವ ಪಿಳ್ಳೈ ಕುರ್ಚಿಯ ಕೈ ಮೇಲೆತಾಳಹಾಕುತ್ತಾ ಇದ್ದರು. ಅವರು ಹೇಳಿದರು:

"ನಾನೀಗ ಏನು ಮಾಡಬೇಕು ಅಂತ ಹೇಳುತ್ತಿದ್ದೀಯಾ?"

ಅದಕ್ಕೆ ಉತ್ತರವಿರಲಿಲ್ಲ. ಕೇಶವ ಪಿಳ್ಳೈಯ ಕೆನ್ನೆಯ ಮೇಲೆ ಒಂದು ಹನಿ ಕಣ್ಣೀರು ಕಾಣಿಸಿತು. ತಲೆಯೆತ್ತಿ ನೋಡುತ್ತಾ ಅವರು ಹೇಳಿದರು:

"ಹೇಳು."

ಗದ್ಗದ ಸ್ವರದಿಂದ ಜ್ಯೋತಿರ್ಮಯಿ ದೇವಿ ಹೇಳಿದಳು:

"ನನ್ನನ್ನು ಕ್ಷಮಿಸಬೇಕು." ಅನಂತರ ಅವಳು ಅಪೇಕ್ಷಿಸಿದ್ದು "ಕ್ಷಮಿಸಿದ್ದೇನೆಂದು ಒಂದು ಸಲ ಹೇಳಬೇಕು."

ಆ ದೈನ್ಯ ಪ್ರಾರ್ಥನೆ ಕೇಶವ ಪಿಳ್ಳೈಯ ಹೃದಯಕ್ಕೆ ನಾಟಿತು. ಆ ಕಣ್ಣೀರು ತುಂಬಿದ ಮುಖದಿಂದ ಹೊರಬಂದ ಪ್ರಾರ್ಥನೆಗೆ ಯಾವುದೋ ಒಂದು ವಿಶೇಷವಾದ ಶಕ್ತಿಯಿತ್ತು. ಎಷ್ಟೋ ವರ್ಷಗಳ ಹಿಂದಿನ ಕಥೆಯನ್ನು ಕೇಶವ ಪಿಳ್ಳೈ ಸ್ಮರಿಸಿಕೊಂಡರು. ಸೆಕ್ರೆಟರಿಯೇಟಿನಲ್ಲಿ, ರೆವಿನ್ಯೂ ಸೆಕ್ಷನಿನಲ್ಲಿ ಹದಿನೈದು ರೂಪಾಯಿ ಸಂಬಳದ ಕ್ಲಾರ್ಕ್ ಆಗಿದ್ದ ಆ ಕಾಲ. ಈ ಸ್ಥಾನಕ್ಕೆ ಬುನಾದಿಯನ್ನು ಹಾಕಿಕೊಟ್ಟದ್ದು ಅವಳಲ್ಲವೇ? ಅವಳು ತಪ್ಪು ಮಾಡಿದುದು ಯಾರ ಹತ್ತಿರ? ತನಗೇನೋ ಅವಳು ಅಪರಾಧವೆಸಗಿ ದಂತೆ ಕೇಶವ ಪಿಳ್ಳೈಗೆ ತೋರಲಿಲ್ಲ. ತನಗೆ ಯಾವ ತಪ್ಪನ್ನೆಸಗಿದಳು? ಇಲ್ಲ. ಒಂದೂ ನೆನಪಾಗುವುದಿಲ್ಲ. ಅವಳು ತನಗೆ ತಾನೇ ತಪ್ಪು ಮಾಡಿಕೊಂಡಳು. ಆದರೂ ಕ್ಷಮಿಸ ಬೇಕು ಎಂದು ಕೇಳುತ್ತಿದ್ದಾಳೆ.

ಅವಳು ಪುನಃ ಕೇಳಿದಳು:

"ನನ್ನನ್ನು ಕ್ಷಮಿಸುವುದಿಲ್ಲವೆ?"

ಕೇಶವ ಪಿಳ್ಳೈಯ ತೋಳು ಅವಳ ಸೊಂಟವನ್ನು ಬಳಸಿತು. ಅವಳನ್ನು ಅಪ್ಪಿ ಕೊಂಡು ಹಸನ್ಮುಖಿಯಾಗಿ ಕೇಶವ ಪಿಳ್ಳೈ ಹೇಳಿದರು:

"ಕ್ಷಮಿಸಿದ್ದೇನೆ."

ಅದೊಂದು ಮೆರುಗಿನ ನುಡಿಯಾಗಿತ್ತು. ಆದರೂ ಅದು ಮಾತ್ರಾ ಜ್ಯೋತಿ

ರ್ಮಯಿ ದೇವಿಗೆ ವಿಶ್ವಾಸವನ್ನುಂಟುಮಾಡಿತು. ಒಂದು ಹಂತಕ್ಕೆ ಬಂದು ತಲುಪಿದ್ದಾಯಿತು.

ಮಾತಾ ಜ್ಯೋತಿರ್ಮಯಿ ದೇವಿ ಕಾವಿ ವಸ್ತ್ರದ ಸೆರಗಿನಿಂದ ಮುಖವನ್ನು ಒರೆಸಿಕೊಂಡಳು. ಕೇಶವ ಪಿಳ್ಳೆಯ ತೋಳುಗಳು ಮೂರು ನಾಲ್ಕು ಸಲ ಅವಳನ್ನು ಬಳಸಿದುವು. ಜ್ಯೋತಿರ್ಮಯಿ ದೇವಿ ಅದಕ್ಕೆ ಸ್ವಾಗತವನ್ನಿತ್ತಿದ್ದಳು.

ಸ್ವಲ್ಪ ಹೊತ್ತಿನ ಮೊದಲು ಕಣ್ಣೀರಿನಿಂದ ತುಂಬಿಕೊಂಡಿದ್ದ ಆ ಕಣ್ಣುಗಳು ಈಗ ವಿಕಾರಕ್ಕೊಳಗಾದಂತೆ ಕೇಶವ ಪಿಳ್ಳೆಗೆ ತೋರಿತು. ಅತ್ತು ಅತ್ತು ಮುಖ, ಕಣ್ಣುಗಳು ಕೆಂಪಾಗಿದ್ದದ್ದು. ಆ ಕೆಂಪು ಮುಖಕ್ಕೊಂದು ಆಕರ್ಷಣೆಯನ್ನುಂಟುಮಾಡಿತ್ತು. ಅವಳಿಗೆ ಏನೋ ಬೇಕಾಗಿದೆ. ಹಾಗೆ ಅವಳಿಗೆ ಒಂದು ಚುಂಬನ ಬೇಕೆನಿಸಿದಾಗ ಆ ಮುಖ ಹೇಗಿರುತ್ತದೆಂದು ಕೇಶವ ಪಿಳ್ಳೆಗೆ ಗೊತ್ತಿತ್ತು.

ಕೇಶವ ಪಿಳ್ಳೆ ಹೇಳಿದರು: "ಓಹೋ! ಇದಕ್ಕೇನಾ ಅತ್ತದ್ದು ಕರದದ್ದೆಲ್ಲ? ಇದಕ್ಕೆ ಇಷ್ಟೊಂದು ಕಷ್ಟಪಡಬೇಕಾಗಿತ್ತಾ?"

ಕೇಶವ ಪಿಳ್ಳೆ ತಮ್ಮ ಮುಖವನ್ನು ಒಡ್ಡಿದರು. ಮಾತಾ ಜ್ಯೋತಿರ್ಮಯಿಯ ಮುಖ ಆ ಮುಖದೊಡಗೂಡಿತು.

ಕೇಶವ ಪಿಳ್ಳೆ ಸ್ವಲ್ಪ ತಮಾಷೆಯಾಗಿ ಹೇಳಿದರು: "ಆ ಕಾವಿವಸ್ತ್ರವನ್ನು ಅಶುದ್ಧ ಮಾಡಬೇಡ."

"ಓ! ಕಾವಿ ಸೀರೆ. ಇದೆಲ್ಲಾ ಕಪಟನಾಟಕ."

ಕೇಶವ ಪಿಳ್ಳೆಗೆ ಅದೊಂದು ನಗು ತರುವ ಉತ್ತರವಾಗಿತ್ತು.

ಕೇಶವ ಪಿಳ್ಳೆಗೆ ಸಂಬಂಧಿಸಿದಂತೆ ಅದು ವರೆಗೆ ಆ ಸಮಾಗಮದಲ್ಲಿ ಪ್ರತ್ಯೇಕತೆಗಳುಂಟಾಗಿದ್ದರೂ ಅಮಿತವಾದಂತಹ ಮಹತ್ವ ಅಷ್ಟೊಂದು ಇರಲಿಲ್ಲ. ತಂಗಮ್ಮ ಸನ್ಯಾಸಿನಿಯಾದಳು. ಅದು ಒಂದು ರೀತಿಯಲ್ಲಿ ತಮಗೆ ಒಳ್ಳೆಯದಾಯಿತೆಂದು ಭಾವಿಸಿದ್ದರು. ಅವಳು ದಾರಿತಪ್ಪಿ ಹೋದಳು. ಆ ಹಾದಿಯಿಂದ ಹಿಂತಿರುಗಿ ಬರುತ್ತಾಳೆ ಎಂದಾಗಲಿ ಅದೇ ದಾರಿಯಲ್ಲಿ ಮುಂದೆ ಹೋಗಿಬಿಡುತ್ತಾಳೆ ಎಂದಾಗಲಿ ಅವರು ಆಲೋಚಿಸಿರಲಿಲ್ಲ. ಹಾಗೆಯೇ ಹಿಂತಿರುಗಿ ಬಂದದ್ದರಿಂದ ಕೇಶವ ಪಿಳ್ಳೆಗೆ ಆಶ್ಚರ್ಯವೂ ಉಂಟಾಗಿರಲಿಲ್ಲ. ಅದು ಸಂಭವಿಸುವಂಥಾದ್ದೇ. ಯಾವಯಾವುದೋ ದಾರಿಯಲ್ಲಿ ತಂಗಮ್ಮ ಹೋದದ್ದೂ ಉಂಟು. ಹಿಂದಿರುಗಿ ಬಂದದ್ದೂ ಉಂಟು.

ಆದರೆ ಆಕೆ ಅಳು ಬಂದು ಅತ್ತದ್ದೇ ಹೊರತು ಅಳಬೇಕೆಂದು ಅತ್ತದ್ದಲ್ಲ. ಅಳಬೇಕೆಂದು ಅಳುವುದು ಅವಳಿಗೆ ತಿಳಿಯದು ಎನ್ನುವ ವಿಷಯ ಕೇಶವ ಪಿಳ್ಳೆಗೆ ಗೊತ್ತಿತ್ತು. ಹಾಗೆ ಕೃತಕವಾಗಿ ಅಳುವುದು ಅವಳಿಂದ ಸಾಧ್ಯವಿಲ್ಲ. ಅಭಿನಯಿಸಬಲ್ಲವಳಾಗಿದ್ದಿದ್ದರೆ ಆ ಬದುಕು ಹೀಗೆಲ್ಲಾ ಆಗುತ್ತಿರಲಿಲ್ಲ. ಅಳಬೇಕಾದ, ನಗಬೇಕಾದ, ಮನಸ್ಸಿನಲ್ಲಿರುವುದನ್ನು ಬದಲಾಯಿಸಬೇಕಾದ, ಮರೆಸಬೇಕಾದ ಎಷ್ಟೆಷ್ಟು ಸಂದರ್ಭ

ಗಳಿದ್ದುವು! ಒಮ್ಮೆಯೂ ಅವಳು ಅತ್ತು ಕಾರ್ಯಸಾಧನೆ ಮಾಡಬೇಕೆಂದು ಅವಳು ಅತ್ತದ್ದಿಲ್ಲ. ನಗು ಬರದೆ ನಕ್ಕದ್ದಿಲ್ಲ. ಮನಸ್ಸಿನಲ್ಲಿದ್ದುದನ್ನು ಮುಚ್ಚಿಟ್ಟಿಲ್ಲ. ಕೃತಜ್ಞತೆ ಇಲ್ಲದವಳೆಂದು ಹೇಳಿಕೊಂಡಳು. ಸಿಟ್ಟು, ಸಂಕಟ, ದ್ವೇಷ—ಎಲ್ಲವನ್ನೂ ಅವರಿಂದ ಯಾವ ಪ್ರತಿಕ್ರಿಯೆಯುಂಟಾದೀತು ಎನ್ನುವುದನ್ನರಿಯದೆ ಪ್ರಕಟಿಸಿದ್ದುಂಟು. ತಂಗಮ್ಮನ ಬದುಕು ಅದು. ಆಗ ಅವಳು ಅತ್ತದ್ದು ಅಳು ಬಂದದ್ದರಿಂದ. ಅವಳು ಕಾಲು ಹಿಡಿದುಕೊಂಡದ್ದು ಅಭಿನಯದಿಂದಲ್ಲ. "ಕ್ಷಮಿಸಿ" ಎಂದು ಕೇಳಿಕೊಳ್ಳಬೇಕಾದ ಎಷ್ಟೋ ಸಮಯಗಳು ಬಂದಿದ್ದರೂ ಈಗ ಹಾಗೆ ಕೇಳಬೇಕು ಅನ್ನಿಸಿದ್ದರಿಂದ ಕೇಳಿದ್ದು. ಯಾವುದೋ ಕೇಡು ಸಂಭವಿಸಿರಬೇಕು. ಆದ್ದರಿಂದಲೇ ನನಗೆ ಯಾನೂ ಇಲ್ಲ, ಏನೂ ಇಲ್ಲ ಎಂದು ಹೇಳಿದ್ದು. ಆ ಸನ್ಯಾಸಿ ಅವಳನ್ನು ಹೊರಕ್ಕೆ ತಳ್ಳಿದ್ದಾಗಿರಬೇಕೆಂದು ಕೇಶವ ಪಿಳ್ಳೆ ಊಹಿಸಿದರು. ಅವರು ಮೊದಲೇ ಒಂದು ಸಲ ಮುನ್ಸೂಚನೆ ಕೊಟ್ಟದ್ದುಂಟಲ್ಲ. ಈಗ ಬೀದಿಯ ಪಾಲಾದಳು. ಒಂದು ವೇಳೆ ಆಶ್ರಮದಲ್ಲಿ ಈ ಕಾಷಾಯ ವಸ್ತ್ರಕ್ಕೆ ವಿರೋಧವಾಗಿ ನಡೆದುಕೊಂಡಿರಬೇಕು. ಕಾಷಾಯ ವಸ್ತ್ರದ ಬಗ್ಗೆ ಅವಳಿಗೆ ಅಷ್ಟೊಂದು ಗೌರವವಿಲ್ಲವೆಂದು ಈಗ ತಾನೇ ತಿಳಿಯಿತಲ್ಲ. ಮನಸ್ಸು ಬಿಚ್ಚಿ ಅವಳದನ್ನು ಹೇಳಿದಳಲ್ಲವೆ?

ಅನುಭವಿಸಿದ ಒಂದು ಪದಾರ್ಥ ಅದು. ಮರೆತೇಹೋಗಿತ್ತು. ಈಗ ಅನಿರೀಕ್ಷಿತವಾಗಿ ತನ್ನ ಕೈಸೇರಿದೆ. ಆ ಮಾಧುರ್ಯ ಮಾಸಿರಲಿಲ್ಲ. ಎಲ್ಲಿಯೋ ಮರೆಯಾಗಿತ್ತು. ಅದು ಪುನಃ ಕಾಣಿಸಿಕೊಂಡಿತು. ಅದೇ ಶೋಭೆಯಿಂದ ಕಾಣಿಸುತ್ತಿದೆ. ಕೇಶವ ಪಿಳ್ಳೆ ಮಾತಾ ಜ್ಯೋತಿರ್ಮಯಿ ದೇವಿಯನ್ನು ಗಾಢವಾಗಿ ಅಪ್ಪಿಕೊಂಡರು. ಅವಳ ತೋಳುಗಳೂ ಅವರನ್ನು ಬಳಸಿದುವು. ಕೇಶವ ಪಿಳ್ಳೆ ಮಂದಸ್ಮಿತರಾಗಿ ಅವಳ ಕಿವಿಯಲ್ಲಿ ಹೇಳಿದರು:

"ಈಗಲೂ ಒದೆದು ಆಚೆಗೆ ನೂಕಬೇಕು ಅಂತಲಾ? ಅದು ಸಾಧ್ಯವಿಲ್ಲ."

ಅದಕ್ಕೆ ಮಾತಾ ಜ್ಯೋತಿರ್ಮಯಿ ದೇವಿ ಉತ್ತರಿಸಲಿಲ್ಲ. ಅವಳು ಅವರ ಶರೀರದ ಮೇಲೆ ಹುಚ್ಚು ಹಿಡಿದವಳಂತೆ ಚುಂಬನದ ಮಳೆಗರೆಯುತ್ತಿದ್ದಳು.

ಮಾತೆ ಜ್ಯೋತಿರ್ಮಯಿಗೆ ಸಂಬಂಧಿಸಿದಂತೆ, ಆ ಕ್ಷಮಾಯಾಚನೆ, ಕಣ್ಣೀರು, ಅಳು, ಎಲ್ಲವೂ ಅವಳಲ್ಲಿದ್ದುವು ಎಂದು ಹೇಳುವುದಕ್ಕಾದೀತೆ? ಅಲ್ಲ ಎಂದು ಹೇಳುವಂತಿಲ್ಲ. ಬದುಕಿನ ಬೇರೊಂದು ಪ್ರವಾಹದಲ್ಲಿ ಸಾಗಿಹೋಗುವ ಸ್ಥಿತಿಗೆ, ಅದೊಂದು ಮಾರ್ಗವಾಗಿತ್ತು ಎಂದು ಹೇಳಲು ಸಾಧ್ಯವೆ? ಆ ಕವಲುದಾರಿಯಲ್ಲಿ ಒಂದು ಪ್ರಯತ್ನ ಅಗತ್ಯವಿತ್ತು. ಆ ಪ್ರಯತ್ನಕ್ಕಾಗಿ ಎಂದು ಅದನ್ನು ವ್ಯಾಖ್ಯಾನಿಸಬಾರದೇಕೆ? ಅಳದೆ, ಕ್ಷಮೆ ಯಾಚಿಸದೆ, ಅಲ್ಲಿಗೆ ಬಂದಿದ್ದಿದ್ದರೆ? ಇದಕ್ಕೆ ಮೊದಲು ಮಾತಾ ಜ್ಯೋತಿರ್ಮಯಿ ದೇವಿಯಾಗಿ ಹೋದದ್ದಲ್ಲವೆ? ಗಣ್ಯವ್ಯಕ್ತಿಯೆಂದು ಹೇಳಬೇಕಾದದ್ದನ್ನೆಲ್ಲ ಕೇಳಿಸಿಕೊಂಡದ್ದು ಎಂದಾಗುತ್ತದೆ. ಮಾಡಿದ ತಪ್ಪುಗಳನ್ನೆಲ್ಲ ಎಣಿಸಿ ಎಣಿಸಿ ಕ್ಷಮೆ ಯಾಚಿಸುತ್ತಿದ್ದಾಗ ಬಹುಶಃ ಅನುಕಂಪದಿಂದ ಎಲ್ಲವನ್ನೂ ಕೇಳಿಸಿಕೊಂಡದ್ದು. "ನಿನ್ನನ್ನು ಎಲ್ಲದ

ರಲ್ಲಿಯೂ ಕ್ಷಮಿಸಿದ್ದೇನೆ" ಎಂದು ಹೇಳಿದ್ದಾಯಿತು ಎಂದಿಟ್ಟುಕೊಳ್ಳೋಣ. ಅನಂತರ ಎಲ್ಲ ಕಾಲವಲ್ಲಿಯೂ ಅವಶ್ಯವಿರುವಾಗಲೆಲ್ಲ ಸಹಾಯವನ್ನು ಮಾಡಬಹುದು. ಆದರೆ ಮಾತಾ ಜ್ಯೋತಿರ್ಮಯಿ ದೇವಿಯ ಗುರಿ ಅದಾಗಿತ್ತೇ? ಅವಳಿಗೆ ಬೇಕಾಗಿದ್ದದ್ದು ಕೈಬಿಟ್ಟುಹೋದದ್ದು ಮತ್ತೆ ದೊರೆಯಬೇಕು ಎನ್ನುವುದು. ಅದು ಚುಂಬನದಿಂದ ಪ್ರಾರಂಭವಾದದ್ದು. ಚುಂಬನದಿಂದಲೇ ಅದು ಪುನಃ ಲಭಿಸುವುದು. ನೇರವಾಗಿ ಹೋಗಿ ಚುಂಬಿಸುವುದಕ್ಕೆ ಸಾಧ್ಯವೆ? ಆ ದೃಷ್ಟಿಯಲ್ಲಿ, ಅಭಿನಯವಲ್ಲದಿದ್ದರೂ ಕಲ್ಪಿಸಿಕೊಂಡು ಹೋದ ಒಂದು ಮಾರ್ಗವಲ್ಲವೆ?

ಇದೇ ಅಲ್ಲವೆ ಅವಳಿಗೆ ಬೇಕಾದದ್ದು. ನಿಜವಾಗಿಯೂ ಅವಳ ಚುಂಬನವನ್ನು ಕೇಶವ ಪಿಳ್ಳೆ ತಿರಸ್ಕರಿಸುವುದಿಲ್ಲವೆಂದು ಅವಳಿಗೆ ಖಚಿತವಾಗಿರಬಹುದು. ಒಂದು ಚುಂಬನದಿಂದ ಅನೇಕ ಚುಂಬನಗಳು ಜನ್ಮತಾಳುತ್ತವೆ ಎಂದು ಅರಿತಿರಬೇಕು. ಮೊದಲ ನೆಯ ಕುಟುಕಿಗೇ ಕೇಶವ ಪಿಳ್ಳೆ ಬಿದ್ದಾಗಿತ್ತು.

ಮುಖದಲ್ಲಿದ್ದ ಮ್ಲಾನತೆಯೂ ವಿಷಾದ ಛಾಯೆಯೂ ಮರೆಯಾದುವು. ಸಂತೃಪ್ತ ಳಾದ ಮಾತಾ ಜ್ಯೋತಿರ್ಮಯಿ ದೇವಿ ಆಶ್ರಮದ ಸಂಗತಿಗಳೆಲ್ಲವನ್ನೂ ಕೇಶವ ಪಿಳ್ಳೆಯ ಹತ್ತಿರ ವಿವರಿಸಿದಳು. ಈ ರೀತಿಯಲ್ಲಲ್ಲದಿದ್ದರೂ ಮತ್ತೊಂದು ರೀತಿ ಯಲ್ಲಾದರೂ ಸಂಗತಿಗಳು ತೊಂದರೆಗೊಳಗುಮಾಡುತ್ತವೆ ಎಂದು ಕೇಶವ ಪಿಳ್ಳೆಗೆ ಗೊತ್ತಿತ್ತು. ಆದ್ದರಿಂದ ಆ ಕಥೆಗಳನ್ನು ಕೇಳಲು ಅಷ್ಟೊಂದು ಉತ್ಸಾಹ ಅವರಿಗಿರಲಿಲ್ಲ. ಅವರು ಹೇಳಿದರು:

"ನೀನು ಯಾವಾಗಲೂ ಸುಖವಾಗಿ ಜೀವಿಸಿರೋದಕ್ಕೆ ಅನುಕೂಲ ಮಾಡಿ ಕೊಡ್ತೀನಿ. ಸಾಲದಾ?"

ಒಂದು ಗಿಳಿಯ ನುಡಿಯಂತೆ ಅದಕ್ಕೆ ಮಾತಾ ಜ್ಯೋತಿರ್ಮಯಿ ದೇವಿ ಉತ್ತರಿಸಿ ದಳು: "ನನಗೆ ಅಂಥಾದ್ದೇನೂ ಬೇಡ. ನಾನು ಜೀವಿಸಬಲ್ಲೆ."

ಆ ಮಾತಿನ ನೆರಳೇನೆಂಬುದು ಕೇಶವ ಪಿಳ್ಳೆಗೆ ಹೊಳೆಯಲಿಲ್ಲ.

"ಹಾಗಾದರೆ ನಿನ್ನ ಆ ಗತಿಯಿಲ್ಲದ ಹೆಂಗಸರನ್ನೂ ನಾನು ಸಾಕಬೇಕಾ?"

ಮಾತಾ ಜ್ಯೋತಿರ್ಮಯಿ ದೇವಿ ಹೇಳಿದಳು:

"ಎಷ್ಟೇ ಕಷ್ಟ ಆದರೂ ಅವರನ್ನು ಕಳಿಸೋದಿಲ್ಲ."

ಅವಳಿಗೆ ಬೇಸರವಾಗದ ರೀತಿಯಲ್ಲಿ ಕೇಶವ ಪಿಳ್ಳೆ ಕೇಳಿದರು:

"ಇದು ದೊಡ್ಡ ಕಷ್ಟ ಅಲ್ಲವಾ? ನಾನು ಅವರನ್ನು ಸಾಕಬೇಕಾ?" ಎಂದು ಮತ್ತೆ ಕೇಳಿದರು: "ಹೋಗಲಿ. ಆ ಆಶ್ರಮ ಹಿಂದಿರುಗಿ ಸಿಕ್ಕಬೇಕಾ?"

ಅದೊಂದು ಅನಾಥ ವನಿತಾ ಮಂದಿರವಾಗಿದ್ದರೆ ಸಾಕೆಂದು ಮಾತಾ ಜ್ಯೋತಿ ರ್ಮಯಿ ದೇವಿಯ ಆಗ್ರಹ. ಅದಕ್ಕೆ ಬೇಕಾದ ಮಾರ್ಗಗಳನ್ನು ಕಂಡುಹಿಡಿಯೋಣವೆಂದು

ಕೇಶವ ಪಿಳ್ಳೆ ಹೇಳಿದರು. ಅನಂತರ ಅವರು ಕೇಳಿದರು: "ಆಯ್ತಾ? ನಿನ್ನ ಕಷ್ಟವೆಲ್ಲ ಪರಿಹಾರವಾಯ್ತು ತಾನೆ?"

ಒಬ್ಬ ಇನಿಯಳ ಮಂದಹಾಸದಿಂದ ಮಾತಾ ಜ್ಯೋತಿರ್ಮಯಿ ದೇವಿ ಮುಗಿಯ ಲಿಲ್ಲ ಎನ್ನುವ ಧಾಟಿಯಲ್ಲಿ ತಲೆ ಅಲ್ಲಾಡಿಸಿದಳು:

"ನನಗೆ ನಿಮ್ಮ ಹತ್ರ ಬೇಕಾದಷ್ಟು ವಿಷಯ ಹೇಳೋದಿದೆ."

ಅವರು ಒಂದು ಸಣ್ಣ ಮಗುವಿನ ಹತ್ತಿರವೋ ಎನ್ನುವಂತೆ ಕೇಳಿದರು:

"ಬೇಕಾದಷ್ಟಿದೆಯಾ? ಎಷ್ಟು ಹಗಲು ರಾತ್ರಿಗಳು ಬೇಕು?"

"ಒಂದು ಜೀವನವಿಡೀ" ಎಂದು ಹೇಳಬೇಕೆಂದು ಜ್ಯೋತಿರ್ಮಯಿ ದೇವಿಯ ನಾಲಗೆಯ ತುದಿಯ ವರೆಗೆ ಬಂದಿತು. ಆದರೆ ಅದು ಹೊರಗೆ ಬರಲಿಲ್ಲ. ಹಾಗೆ ಕಡ್ಡಿ ತುಂಡು ಮಾಡಿದ ಹಾಗೆ ಹೇಳುವ ಸಮಯವಾಗಲಿಲ್ಲವೆಂದು ಸುಮ್ಮನಾಗಿರಬಹುದು. ಕಿಲಕಿಲನೆ ಒಮ್ಮೆ ನಕ್ಕಳು. ಥಟ್ಟನೆ ಏನನ್ನೋ ನೆನಸಿಕೊಂಡಂತೆ. ಮುಖ ಗಂಭೀರವಾಗಿ ಚಿಂತೆಗೊಳಗಾಯಿತು. ಎಲ್ಲವನ್ನೂ ಹೇಳಲು ಸಮಯವಾಗಲಿಲ್ಲ. ಹಾಗೆ ಒಂದೇ ಸಲ ಎಲ್ಲವನ್ನೂ ಹೇಳಿ ಮುಗಿಸುವುದಕ್ಕೆ ಆಗುವುದಿಲ್ಲ.

ಕೇಶವ ಪಿಳ್ಳೆಯ ಮುಖವನ್ನು ನೇವರಿಸುತ್ತ ಅವಳು ಕೇಳಿದಳು: "ಇಷ್ಟು ಅನ್ಯೋನ್ಯವಾಗಿ ನಾವು ಯಾವಾಗಲಾದರೂ ಸ್ವಲ್ಪ ಹೊತ್ತು ಕಾಲ ಕಳೆದದ್ದುಂಟಾ?"

ಅದು ನಿಜವಾದ ಸಂಗತಿಯಾಗಿತ್ತು. ಸುದೀರ್ಘವಾದ ಆ ಸಂಬಂಧದಲ್ಲಿ ಈ ರೀತಿ ಯಲ್ಲಿ ಅನ್ಯೋನ್ಯವಾಗಿರಲಿಲ್ಲ. ಅವರು ಹೇಳಿದರು:

"ಅದು ಹೇಗೆ ಸಾಧ್ಯ? ನೀನು ಒಬ್ಬ ರಾಕ್ಷಸಿ ಹಾಗಾಗಿರಲಿಲ್ಲವಾ? ಅಬ್ಬ! ನಾನೋ—ಒಬ್ಬ ಸಾಧು ಸ್ವಭಾವದವನು! ಹೆದರಿಕೊಂಡಿದ್ದ ಹುಡುಗ. ನೀನು ಹಾಗಿರಲಿಲ್ಲವಾ?"

ಅನಂತರ ಸ್ವಲ್ಪ ಕಟುವಾಗಿ ಕೇಳಿದರು:

"ನೀನು ಇಷ್ಟು ಅನ್ಯೋನ್ಯವಾಗಿ ಮತ್ತೆಲ್ಲಿಯಾದರೂ. ಮತ್ತೆ ಯಾರ ಜೊತೆ ಯಲ್ಲಾದರೂ ಕಾಲ ಕಳೆದದ್ದುಂಟಾ?"

ಕೇಶವ ಪಿಳ್ಳೆ ಆ ಪ್ರಶ್ನೆಯ ಉತ್ತರಕ್ಕಾಗಿ ಕಾಯುತ್ತಾ ಮಾತಾ ಜ್ಯೋತಿರ್ಮಯಿ ದೇವಿಯ ಕಡೆಗೆ ನೆಟ್ಟ ದೃಷ್ಟಿಯಿಂದ ನೋಡಿದರು. ವಿಚಲಿತಳಾಗುವುದರ ಬದಲು ಅವಳ ಮುಖ ಪ್ರಫುಲ್ಲಿತವಾಗಿತ್ತು.

'ಇಲ್ಲ' ಎನ್ನುವ ಅರ್ಥದಲ್ಲಿ ಮಾತಾ ಜ್ಯೋತಿರ್ಮಯಿ ದೇವಿ ತಲೆ ಅಲ್ಲಾಡಿಸಿ ದಳು. ಕೇಶವ ಪಿಳ್ಳೆ ಮತ್ತೆ ಕೇಳಿದರು: "ಆ ರಾಮಚಂದ್ರನ್ ನಾಯರ ಹತ್ತಿರವೂ?"

ಆಗಲೂ ನಿಷೇಧಾರ್ಥದಲ್ಲಿ ಮಾತಾ ಜ್ಯೋತಿರ್ಮಯಿ ದೇವಿ ತಲೆ ಅಲ್ಲಾಡಿಸಿ ದಳು.

"ಆ ಚಿನ್ನಸ್ವಾಮಿ ಎನ್ನುವ ಯುವಕನ ಸಹವಾಸದಲ್ಲಿಯೂ?"

ಅದಕ್ಕೂ ಅವಳು ನಿಷೇಧಾರ್ಥದಲ್ಲಿ ತಲೆ ಅಲ್ಲಾಡಿಸಿದಳು.

ಕೇಶವ ಪಿಳ್ಳೆ ಸ್ಪಷ್ಟವಾಗಿ ಹೇಳಿದರು: "ನೀನು ಸುಳ್ಳು ಹೇಳ್ತಿದ್ದೀಯೆ."

ಮಾತಾ ಜ್ಯೋತಿರ್ಮಯಿ ದೇವಿ ಸತ್ಯವನ್ನೇ ಹೇಳುತ್ತಿದ್ದೇನೆ ಎನ್ನುವ ರೀತಿಯಲ್ಲಿ ಹೇಳಿದಳು:

"ಅಲ್ಲ, ಅದು ಸತ್ಯ."

"ಆ ಮೇಲೆ ನೀನು ನಿನ್ನ ತಂದೆತಾಯಿಗಳನ್ನು ಉಪೇಕ್ಷಿಸಿ ರಾಮಚಂದ್ರನ್ ನಾಯರ ಜೊತೆಯಲ್ಲಿದ್ದದ್ದೋ?"

ಕೇಶವ ಪಿಳ್ಳೆ ಅದನ್ನು ತಿಳಿಯಬೇಕೆನ್ನುವ ಆಗ್ರಹದಿಂದ, ಆಸಕ್ತಿಯಿಂದ ಕೇಳುತ್ತಿದ್ದರು. ಈ ಆಸಕ್ತಿಯೂ ಆಗ್ರಹವೂ ಎಷ್ಟೋ ವರ್ಷಗಳಿಂದ ಮನಸ್ಸಿನಲ್ಲಿ ಅಜ್ಞಾತವಾಗಿ ಅಡಗಿದ್ದಿರಬೇಕು. ಏಣಿಯ ಮೆಟ್ಟಲುಗಳನ್ನೇರುವ ತೀವ್ರವಾದ ಚಿಂತನೆಗಳ ಮಧ್ಯೆ ಮನುಷ್ಯನೆನ್ನುವ ನೆಲೆಯಲ್ಲಿ ಈ ಆಲೋಚನೆಗಳು ತಲೆ ಎತ್ತಲು ಸಾಧ್ಯವಾಗಿರಲಿಲ್ಲ. ಈಗ ಆ ಆಲೋಚನೆ ತಲೆಯೆತ್ತಿದೆ. ಒಬ್ಬ ಸಾಮಾನ್ಯ ಯುವಕನ ಪತ್ನಿ, ಇಲ್ಲದಿದ್ದರೆ ಪ್ರೀತಿಪಾತ್ರಳು ಪರಾಧೀನಿಯಾದರೆ ಅದು ಹೇಗೆ ಸಂಭವಿಸಿತು. ಯಾವ ರೀತಿಯಲ್ಲಿ ಸಂಭವಿಸಿತು ಎಂದೆಲ್ಲ ಇರುವ ವಿವರಗಳನ್ನು ತಿಳಿಯಲು ಆಸಕ್ತನಾಗಿರುವುದು ಸ್ವಾಭಾವಿಕವಲ್ಲವೇ? ಆ ರೀತಿಯಲ್ಲಿ ಅನ್ವೇಷಣೆ ನಡೆಸಲು ಕೇಶವ ಪಿಳ್ಳೆಗೆ ಇದುವರೆಗೆ ಸಾಧ್ಯವಾಗಿರಲಿಲ್ಲ. ಆ ಸಂದರ್ಭ ಒದಗಿಬಂದಿರುವುದು ಈಗ.

ಮಾತಾ ಜ್ಯೋತಿರ್ಮಯಿ ದೇವಿ ಒಂದು ಮರುಪ್ರಶ್ನೆಯನ್ನು ಕೇಳಿದ್ದರಲ್ಲಿ ಸೋಲಿನ ಛಾಯೆ ಆ ಪ್ರಶ್ನೆಯಲ್ಲಿತ್ತು.

"ಅದೆಲ್ಲಾ ನನ್ನ ಹತ್ತಿರ ಕೇಳುವುದು ಈಗಲಾ?"

"ಆಗ ನಾನು ಕೇಳಿದ್ದಿದ್ದರೆ ನೀನು ನನ್ನ ಕೆನ್ನೆಗೆ ಹೊಡೀತಿದ್ದೆ."

ಒಂದು ಕುಲುಕು ನಗುವಿನೊಂದಿಗೆ ಅವರ ಕೆನ್ನೆಯನ್ನು ಚಿಗುಟುತ್ತಾ ಅವಳು ಹೇಳಿದಳು: "ಅದಕ್ಕೂ ಜೋರಾಗಿ ನನ್ನ ಕನ್ನೆಯ ಮೇಲೆ ಹೊಡೆಯಬೇಕಾಗಿತ್ತು."

"ಸರಿ ಸರಿ. ಅದು ಸರಿ."

ಜ್ಯೋತಿರ್ಮಯಿ ದೇವಿ ಕೇಳಿದಳು: "ಹಾಗಲ್ಲವಾ? ನನ್ನನ್ನು ಹೊಡದು ಕೆಳಗೆ ಬೀಳಿಸಬಹುದಾಗಿತ್ತು. ನನ್ನನ್ನು ಚೆನ್ನಾಗಿ ಒದೆಯಬೇಕಾಗಿತ್ತು. ಹಾಗೆ ಮಾಡಿದ್ದರೆ ನಾನು ಒಳ್ಳೆಯವಳಾಗುತ್ತಿದ್ದೆ."

ಒಂದು ದೊಡ್ಡ ಬೀಗದ ಕೈ ಸಿಕ್ಕಿದಂತೆ ಕೇಶವ ಪಿಳ್ಳೆಗೆ ತೋರಿತು. ಅವಳು ಹೇಳಿದುದು ಸುಳ್ಳಲ್ಲ. ನಿಜವಾಗಿಯೂ ಒಂದು ಒಳ್ಳೆಯ ಬೆಳಕು ಆ ಮಾತಿನಲ್ಲಿತ್ತು. ದಾರಿ ತಪ್ಪಿದ ಅವಳನ್ನು ಶಕ್ತಿಸಾಮರ್ಥ್ಯದಿಂದ ಬುದ್ಧಿವಂತಿಕೆಯಿಂದ ನಿಯಂತ್ರಿಸಲು ಯಾರೂ ಇರಲಿಲ್ಲ. ನಾನೂ ಅದಕ್ಕಾಗಿ ಶ್ರಮಿಸಲಿಲ್ಲ. ಅವಳು ಹೇಳಿದಳು:

"ಯಾರೂ ನನ್ನನ್ನು ದಂಡಿಸಲಿಲ್ಲ. ನಾನೊಂದು ದಾರಿಯಲ್ಲಿ ಹೋದೆ. ನಾನು ಹೋದ ದಾರಿಯಲ್ಲಿ ಎಲ್ಲರೂ ನನ್ನನ್ನು ದಂಡಿಸಿದರು."

ಆ 'ಎಲ್ಲರೂ' ಎಂಬುದು ಯಾರನ್ನು ಎಂಬುದು ಕೇಶವ ಪಿಳ್ಳೆಗೆ ಅರ್ಥವಾಯಿತು. ನಂತರ ಮಾತಾ ಜ್ಯೋತಿರ್ಮಯಿ ದೇವಿ ಹೇಳಿದಳು:

"ನನ್ನ ಮೇಲೆ ಎಳ್ಳಷ್ಟೂ ಪ್ರೀತಿ ಇರಲಿಲ್ಲ. ನಾನು ಹಾಗೆ ದಾರಿ ತಪ್ಪಿ ಹೋದಾಗ 'ಹೋದರೇನಂತೆ' ಅಂತ ಅಂದುಕೊಂಡಿರಿ. ದಾರಿ ತಪ್ಪಿ ಹೋದದ್ದನ್ನು ನೋಡ್ತಾ ನಿಂತಿದ್ದಿರಿ. 'ನಿಲ್ಲೇ ಅಲ್ಲಿ' ಎಂದು ಹೇಳಿದ್ದಿಲ್ಲ. ನನ್ನನ್ನು ಹಿಡಿದು ನಿಲ್ಲಿಸಲೂ ಇಲ್ಲ. ನಾನು ಆ ಹಾದಿಯಲ್ಲಿ ಹೋದೆ. ನಾನು ಹಾಳಾದೆ."

ಮಾತಾ ಜ್ಯೋತಿರ್ಮಯಿ ದೇವಿಗೆ ದುಃಖವನ್ನು ತಡೆಹಿಡಿಯಲಾಗಲಿಲ್ಲ. ಗಟ್ಟಿಯಾಗಿ ಅಳು ಬಂದಿತು. ಆ ಸತ್ಯದ ಅರಿವಾದಂತೆ ಕೇಶವ ಪಿಳ್ಳೆ ಆಲೋಚಿಸುತ್ತಾ ಇದ್ದರು. ಅವರು ಅತ್ತಿತ್ತ ಅಲುಗಾಡದೆ ಕುಳಿತಿದ್ದರು. ಬಿಕ್ಕಿಬಿಕ್ಕಿ ಅಳುವುದರ ಮಧ್ಯೆ ಜ್ಯೋತಿರ್ಮಯಿ ದೇವಿ ಹೇಳಿದಳು:

"ದಂಡಿಸೋ ಜನರಿಲ್ಲದೆ ಹೋದವಳು ನಾನು. ಹಾಳಾದೆ."

ಕೇಶವ ಪಿಳ್ಳೆಗೆ ಒಂದು ಅಪರಾಧ ಪ್ರಜ್ಞೆಯುಂಟಾಯಿತು, ತನ್ನ ಎಲ್ಲಾ ಸಂಪತ್ತಿಗೂ ಬುನಾದಿ ಇವಳಲ್ಲವೇ? ಹೌದು, ನಿಜವಾಗಿಯೂ ಇವಳೇ. ಇವಳ ಬಗ್ಗೆ ಎಂದೆಂದಿಗೂ ಕೃತಜ್ಞತೆಯಿಂದಿರಬೇಕು. ಇವಳಿಗೆ ಸಾಧ್ಯವಿದ್ದದ್ದನ್ನೆಲ್ಲಾ ತನಗಾಗಿ ಮಾಡಿಕೊಟ್ಟಿದ್ದಳು. ಏನು ಫಲಿಸಿಯೂ ಇತ್ತು. ತಂಗಮ್ಮ ಕೇಶವ ಪಿಳ್ಳೆಯ ಅಧೀನಳಾಗಿದ್ದಳು. ಅದನ್ನೂ ಇಲ್ಲವೆನ್ನುವಂತಿಲ್ಲ. ಹಾಗೆ ಪಳಗಿದಂತಹ ಒಬ್ಬಳಿಗೋಸ್ಕರ ದಾರಿ ತಪ್ಪಿದಾಗ ತಾನು ಮಾಡಿದ್ದೇನು? ಒಂದು ಬೆರಳು ಕೂಡಾ ಅಲುಗಾಡಿಸಲಿಲ್ಲ. 'ನೀನು ಇದೇನು ಮಾಡುತ್ತಿದ್ದೀಯೆ' ಎಂದು ಒಮ್ಮೆಯೂ ಕೇಳಿಲ್ಲ. ಕಾರ್ಯ ಸಾಧಿಸಿದ್ದಾಯಿತು. ಈ ಹೆಣ್ಣು ಹಾದಿ ತಪ್ಪಿ ಹೋಗುತ್ತಿದ್ದುದನ್ನು ಹಾದಿಯ ಪಕ್ಕದಲ್ಲಿ ನಿಂತು ತಾನು ನೋಡುತ್ತಿದ್ದದ್ದು. ಅದು ಸರಿಯೋ? ಧರ್ಮವೇ? ಈ ಪ್ರಶ್ನೆಗಳನ್ನು ಅಂತರಾತ್ಮ ಕೇಳುತ್ತಿತ್ತು. ಆ ಪ್ರಶ್ನೆಗಳಿಗೆಲ್ಲಾ ಉತ್ತರಗಳನ್ನು ಕಂಡುಹಿಡಿಯಲು ಕೇಶವ ಪಿಳ್ಳೆ ಪ್ರಯತ್ನಿಸುತ್ತಿದ್ದರು. ಅವರು ಶಿಕ್ಷಿಸುವುದು ಹೋಗಲಿ, ಕಟ್ಟಪ್ಪಣೆ ಮಾಡುವುದು ಬೇಡ. 'ನೀನು ದಾರಿ ತಪ್ಪಿ ಹೋಗುತ್ತಿದ್ದೀಯೋ' ಎಂದು ಏಕೆ ಹೇಳಲಿಲ್ಲ ಎಂದು ಅವರು ತಮಗೆ ತಾವೇ ಕೇಳಿಕೊಂಡರು.

ಮಾತಾ ಜ್ಯೋತಿರ್ಮಯಿ ದೇವಿ ಬಿಕ್ಕಿ ಬಿಕ್ಕಿ ಅಳುತ್ತಾ ಪುನಃ ಹೇಳಿದಳು:

"ನನ್ನನ್ನು ಒಂದು ಹೆಣ್ಣೆಂದು ಕರೆದದ್ದು ನೀವು."

ಅದು ಮತ್ತೊಂದು ಸತ್ಯವಾಗಿತ್ತು. ತನಗರಿವಿಲ್ಲದಂತೆಯೇ ಒಂದು ವಾಕ್ಯ ಅವರ ಬಾಯಿಯಿಂದ ಹೊರ ಬಂದಿತ್ತು:

"ನಿನ್ನ ಹತ್ತಿರ ನಾನು ತಪ್ಪು ಮಾಡಿದ್ದೇನೆ."

ಪುನಃ ಮತ್ತೊಂದು ಮಾರ್ಗದಲ್ಲಿ ಅವರು ಆಲೋಚಿಸತೊಡಗಿದರು. ತಾನವಳಿಗೆ ಮಾಡಿದ್ದು ದೊಡ್ಡ ತಪ್ಪಲ್ಲವೇ? ಮದುವೆ ಮಾಡಿಕೊಂಡಿದ್ದ ವಿಷಯವನ್ನು ಅವಳಿಂದ ಮುಚ್ಚಿಟ್ಟೆ. ಆದರೂ ಕಾರ್ಯಸಾಧನೆಗಾಗಿ ಅವಳನ್ನು ಪ್ರೀತಿಸುತ್ತಿದ್ದೇನೆಂದು ನಟಿಸಿದೆ. ಆ ವಂಚನೆ ತೀರಾ ಕ್ರೂರವಾದದ್ದು. ಕೇಶವ ಪಿಳ್ಳೆ ಆ ವಂಚನೆಯ ಪ್ರಮಾಣವನ್ನು ಆಲೋಚಿಸುತ್ತಿದ್ದರು. ಆದರೆ ಅವಳಿಗದು ತಿಳಿದಿರಲಿಲ್ಲ. ಮದುವೆಯಾಗಿದೆ ಎನ್ನುವ ವಿಷಯ ಅವಳಿಗೆ ತಿಳಿದಿದ್ದಿದ್ದರೆ—ತನ್ನ ಜೀವನ ಏನೆಲ್ಲಾ ಆಗುತ್ತಿತ್ತು ಎಂದು ಎಷ್ಟೋ ವರ್ಷಗಳ ಅನಂತರ ಕೇಶವ ಪಿಳ್ಳೆ ಆಲೋಚಿಸುತ್ತಿದ್ದಾರೆ. ಅದೃಷ್ಟ ತನಗೆ ಅನುಕೂಲ ವಾಗಿತ್ತು. ಏಣಿಯ ಮೆಟ್ಟಲುಗಳಲ್ಲಿ ಮೊದಲನೆಯ ಮೆಟ್ಟಲನ್ನು ಏರಿ ಆದ ಮೇಲೆ ಅನಂತರ ಅವಳ ಸಹಾಯ ಬೇಕಿಲ್ಲ ಎನ್ನಿಸಿದಾಗ ಅವಳ ವಿಷಯವನ್ನು ಹಾಗೆಯೇ ಮರೆತದ್ದು. ಅನಂತರ ಅದನ್ನು ಈ ವರೆಗೆ ನೆನಸಿಕೊಂಡಿರಲಿಲ್ಲ. ಆ ವಿಷಯವನ್ನು ಈಗ ಅವಳ ಹತ್ತಿರ ತೆರೆದು ಹೇಳಿ ಕ್ಷಮೆ ಕೇಳಿದರೇನು ಎಂದು ಕೇಶವ ಪಿಳ್ಳೆಗೆ ತೋರಿತು. ಅದಕ್ಕಾಗಿ ಒಂದು ಹೊಯ್ದಾಟ ನಡೆದಿತ್ತು. ಅದನ್ನು ಹೇಳಬೇಕು. ಅಲುಗಾಡದೆ ಅಂಗಾತ ಮಲಗಿದ್ದ ಅವರ ಕನ್ನೆಗಳನ್ನು ತನ್ನ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡು ಅವರ ಮುಖದ ಕಡೆಗೆ ನೋಡುತ್ತಾ ಅವಳು ಕೇಳಿದಳು:

"ನಾನೊಂದು ಪ್ರಶ್ನೆ ಕೇಳ್ತೀನಿ, ಸತ್ಯ ಹೇಳ್ಬೇಕು."

ಕೇಶವ ಪಿಳ್ಳೆ ಮೌನವಾಗಿದ್ದರು. ಆದರೆ ಅವರ ಮುಖದಲ್ಲಿದ್ದ ಭಾವನೆ ಸತ್ಯ ವನ್ನೇ ಹೇಳುತ್ತೇನೆ ಎನ್ನುವಂತಿತ್ತು.

"ನನ್ನ ಮೇಲೆ ನಿಮಗೆ ಇಷ್ಟವಿರಲಿಲ್ಲ ಅಲ್ಲವಾ? ಸತ್ಯ ಹೇಳಿ."

ಕೇಶವ ಪಿಳ್ಳೆ ಕೇಳಿದರು:

"ಯಾಕೆ ನೀನು ಹಾಗೆ ಕೇಳಿದ್ದು?"

ತನ್ನ ಪ್ರಶ್ನೆಯನ್ನು ತಾನು ವೃಥವಾಗಿ ನಂಬುತ್ತಿದ್ದಂತೆ ಜ್ಯೋತಿರ್ಮಯಿ ಹೇಳಿದಳು:

"ಇಲ್ಲಾ. ನನ್ನ ಮೇಲೆ ನಿಮಗೆ ಇಷ್ಟವಿರಲಿಲ್ಲ. ಆ ದಿನಗಳಲ್ಲಿ ನನಗೆ ಹಾಗನ್ನಿಸಿತು. ಜ್ಞಾಪಿಸಿಕೊಂಡು ನೋಡಿ. ನನಗೆ ಬಿಸಿಯಾದ ಮುತ್ತನ್ನು ಕೊಟ್ಟದ್ದುಂಟೆ? ಇವತ್ತು ನನ್ನನ್ನು ಅಪ್ಪಿಕೊಂಡಂತೆ ಒಂದು ಸಲವಾದರೂ ನನ್ನನ್ನು ಬಿಗಿಯಾಗಿ ಅಪ್ಪಿಕೊಂಡ ದ್ದುಂಟೇ? ನನ್ನ ಮೇಲೆ ಇಷ್ಟವಿರಲಿಲ್ಲ. ಸುಮ್ಮನೆ ಹಾಗೆ ಹೇಳಬೇಡಿ."

ಕೇಶವ ಪಿಳ್ಳೆ ಕೇಳಿದರು:

"ಇವತ್ತು ನನ್ನನ್ನು ಕಂಡರೆ ಇಷ್ಟವಿದ್ದ ಹಾಗೆ ಕಾಣಿಸಿತಾ?"

ನಾಚಿಕೆಯಿಂದ ಕೂಡಿ ಪ್ರಸನ್ನವದನೆಯಾಗಿ ಜ್ಯೋತಿರ್ಮಯಿ ದೇವಿ ಅದನ್ನು ಒಪ್ಪಿಕೊಂಡಳು. "ಹೌದು" ಎಂದು ಸ್ಪಷ್ಟವಾಗಿ ಅವಳು ಹೇಳಲಿಲ್ಲ. ಬೇರೆ ಒಂದು ಇಷ್ಟವಾಗದ ಪ್ರಶ್ನೆಯನ್ನು ಕೇಳಿದಳು:

"ಒಂದು ಸಲವಾದರೂ ನನ್ನನ್ನು ಮದುವೆ ಮಾಡಿಕೊಳ್ಳುತ್ತೇನೆ ಅಂತ ನೀವು ಅಂದದ್ದುಂಟೆ?"

ಕೇಶವ ಪಿಳ್ಳೆಗೆ ಯಾವ ಉತ್ತರವನ್ನೂ ಹೇಳಲಾಗದ ಪ್ರಶ್ನೆಯಾಗಿತ್ತು ಅದು. ಅವಕ್ಕೆ ಬದಲಾಗಿ ಮತ್ತೊಂದು ಪ್ರಶ್ನೆ ಕೇಳುವುದಕ್ಕಾಗಿ ಅವರು ಪ್ರಯತ್ನಿಸಿದರು.

"ಹಾಗೆ ನಾನು ಹೇಳಿರಲಿಲ್ಲವಾ?"

"ಇಲ್ಲ, ಇಲ್ಲ. ಒಮ್ಮೆಯೂ ಹೇಳಿಲ್ಲ.

"ನೀನೇ ಅದನ್ನು ಹೇಳಬಹುದಾಗಿತ್ತು."

ಜ್ಯೋತಿರ್ಮಯಿ ದೇವಿಗೆ ಅಂತಹ ಪ್ರಶ್ನೆಗಳಿಗೆ ಕೂಡಲೇ ಉತ್ತರ ಹೇಳಬಹುದಾಗಿತ್ತು. ಅದಕ್ಕೆ ಕಷ್ಟಪಡಬೇಕಾಗಿರಲಿಲ್ಲ.

"ನಾನು ಒಳ್ಳೆಯದಾವುದು, ಕೆಟ್ಟದ್ದಾವುದು ಎಂಬುದನ್ನು ತಿಳಿಯದ ಹೆಣ್ಣಾಗಿದ್ದೆ. ನನ್ನನ್ನು ಅಡ್ಡಿಪಡಿಸುವವರೂ ಇಲ್ಲವಾಗಿದ್ದರು. ನೀವು ನನ್ನನ್ನು ಸ್ಪರ್ಶಿಸಿ ಹುಚ್ಚು ಹಿಡಿಸಿದಿರಿ. ಆ ಹುಚ್ಚಿನಿಂದಾಗಿ ಗಂಭೀರವಾದ ವಿಷಯಗಳನ್ನು ಕುರಿತು ಆಲೋಚಿಸಲಿಲ್ಲ. ನಾನು ಆ ಪ್ರಶ್ನೆ ಕೇಳಲಿಲ್ಲ."

ಆ ಮಾತನ್ನು ಅಲ್ಲಗಳೆಯುವಂತಿರಲಿಲ್ಲ. ಆದರೆ ಅದರಲ್ಲೇನೋ ಕೊರತೆಯಿದ್ದಂತೆ ಕೇಶವ ಪಿಳ್ಳೆಗೆ ತೋರಿತು. ಜ್ಯೋತಿರ್ಮಯಿ ದೇವಿ ತನ್ನ ಕತೆಯನ್ನು ಹೇಳತೊಡಗಿದಳು:

"ನಾನು ತಪ್ಪು ಮಾಡಿದವಳು. ಅನುಭವಿಸುವುದಕ್ಕಾಗದ ತಪ್ಪು ನಾನು ಮಾಡಿದ್ದು. ನನ್ನ ಅವಿವೇಕದಿಂದಾಗಿ ನಿಮ್ಮ ಮೇಲೆ ನನಗೆ ಸಿಟ್ಟು ಬಂತು. ಅದಕ್ಕೆ ಕಾರಣ ನೀವು ನನಗೆ ಹುಚ್ಚು ಹಿಡಿಸಿದ್ದು. ನಾನು ಮತ್ತೊಬ್ಬನ ಜೊತೆಯಲ್ಲಿ ಹೋಗಬೇಕಾಗಿತ್ತು."

ಸ್ವಲ್ಪ ಬೇಸರದಿಂದಲೇ ಕೇಶವ ಪಿಳ್ಳೆ ಕೇಳಿದರು:

"ಅವನು ನಿನ್ನನ್ನು ತೃಪ್ತಿಪಡಿಸಿದನೆ?"

ಆ ಪ್ರಶ್ನೆಯಲ್ಲೂ ಧ್ವನಿಯಲ್ಲೂ ಇದ್ದ ತನ್ನ ಸಿಟ್ಟು, ಬೇಸರಗಳು ಜ್ಯೋತಿರ್ಮಯಿಗೆ ಅರ್ಥವಾಗಲಿಲ್ಲವೆಂದು ತೋರಿತು. ರಾಮಚಂದ್ರನ್ ನಾಯರ ಜೊತೆಯಲ್ಲಿದ್ದ ಸಂಬಂಧವನ್ನು ಕುರಿತು ಜೀವನದಲ್ಲಿ ಮೊದಲಾಗಿ ಕೇಶವ ಪಿಳ್ಳೆಗೆ ಸಿಟ್ಟು ಬರುವುದು. ಗೋವಿಂದನ್ ನಾಯರಿಂದ, ನಂತರ ಶೇಖರ ಪಿಳ್ಳೆಯಿಂದ, ಭಾಗೀರಥಿ ಅಮ್ಮನಿಂದ ಆ ಸಂಬಂಧವನ್ನು ಕುರಿತು ನೆನಸಿಕೊಂಡಾಗ ಕೇಶವ ಪಿಳ್ಳೆಗೆ ಸಿಟ್ಟು ದ್ವೇಷಗಳಾವುವೂ ಉಂಟಾಗಿರಲಿಲ್ಲ. ಪ್ರಯೋಜನವಿರುವ ಒಂದು ಸುದ್ದಿಯಾಗಿ ಮಾತ್ರ ಅದನ್ನು ಕೇಳಿಸಿಕೊಂಡದ್ದು. ಗೋವಿಂದನ್ ನಾಯರ್ ತನ್ನ ಹತ್ತಿರ ಜಗಳವಾಡಿಕೊಂಡು ಹೋಗುವ ವರೆಗೂ. ಇಂದು ಈ ಸಿಟ್ಟಿಗೆ ಕಾರಣವೇನು? ನಿಜವಾಗಿಯೂ ಕೇಶವ ಪಿಳ್ಳೆ ಆ ಸಂಬಂಧವನ್ನು ಇಷ್ಟಪಡುವುದಿಲ್ಲ. ಆದರೆ ಆ ಮನೋಭಾವವನ್ನು

ತಿಳಿಯದೆ ಜ್ಯೋತಿರ್ಮಯಿ ದೇವಿ ಉತ್ತರಿಸಿದಳು:

"ಎಲ್ಲಾ ಸರಿಯಾಗಿತ್ತು. ಆ ಮನುಷ್ಯನಿಗೆ ನಾನೊಂದು ಸಾಧನವಾಗಿದ್ದೆ. ನನ್ನನ್ನು ಆತ ಪ್ರೀತಿಸಲಿಲ್ಲ. ನೀವು ಹುಚ್ಚು ಹಿಡಿಸಿದ್ದೇ ನನ್ನ ಜೀವನವನ್ನು ಹಾಳು ಮಾಡಿದ್ದು. ಯಾರೂ ನನ್ನನ್ನು ಮನಸಾರೆ ಪ್ರೀತಿಸಲಿಲ್ಲ."

ಕೇಶವ ಪಿಳ್ಳೆಯು ಸಿಟ್ಟು ಸಾಂತ್ವನಗೊಂಡಿರಲಿಲ್ಲ. ಅವರು ಕೇಳಿದರು: "ಅವನು ಮದುವೆ ಮಾಡಿಕೊಳ್ಳುತ್ತೇನೆ ಅಂತ ಹೇಳಲಿಲ್ಲವೇ?"

ಜ್ಯೋತಿರ್ಮಯಿ ಕೂಡಲೇ ಉತ್ತರ ಕೊಟ್ಟಳು:

"ಇಲ್ಲ. ಈ ತನಕ ಯಾರೂ ಹಾಗೆ ಹೇಳಲಿಲ್ಲ."

"ನೀನು ಅವನ ಹತ್ತಿರ ಕೇಳಲೂ ಇಲ್ಲ."

ಜ್ಯೋತಿರ್ಮಯಿ ದೇವಿ ಅದನ್ನು ಕುರಿತು ಒಂದು ದೀರ್ಘವಾದ ಕಥೆ ಹೇಳುವುದಿತ್ತು. ಆ ಹೊತ್ತಿಗೆ ಬದುಕಿನ ಪಾಠವನ್ನು ಕಲಿತಾಗಿತ್ತು. ಅವಳು ಮದುವೆಯನ್ನು ಕುರಿತು ಕೇಳತೊಡಗಿದಳು. ರಾಮಚಂದ್ರನ್ ನಾಯರ್‌ಗೆ ಇಷ್ಟವಿಲ್ಲದ ಪ್ರಶ್ನೆಗಳಾಗಿದ್ದುವು ಅವು. ಉತ್ತರ ಹೇಳದೆಯೇ ಅವನು ದೂರ ಸರಿದು ನಿಂತ. ಆ ಕಥೆಯನ್ನು ಜ್ಯೋತಿರ್ಮಯಿ ದೇವಿ ಅಂತ್ಯಗೊಳಿಸಿದ್ದು ಹೀಗೆ:

"ನಾನು ಒತ್ತಾಯ ಮಾಡಿ ಹೀಗೆ ಕೇಳಿದಾಗ ಆ ಸಂಬಂಧ ಕೊನೆಗೊಂಡಿತು. ಅವನು ಸಂಗೀತ. ನರ್ತನ ಗೊತ್ತಿದ್ದ ಒಬ್ಬಳನ್ನು ಮದುವೆ ಮಾಡಿಕೊಂಡ."

ನಿಜವಾಗಿಯೂ ಕೇಶವ ಪಿಳ್ಳೆಗೆ ಕೇಳುವುದು ಸಾಕು ಎನ್ನಿಸಿತು. ಎಷ್ಟೋ ವಿಷಯಗಳನ್ನು ಕೇಳಿ ತಿಳಿದದ್ದಾಯಿತು. ಅವರ ಮನಸ್ಸು ಕಲಕಿಹೋಗಿತ್ತು. ಜೀವನದ ಮೂಲಭೂತವಾದ ಮನೋಭಾವನೆಗಳನ್ನು ಹಿಡಿದು ಕುಲುಕಿದಂತೆ ತೋರಿತು. ಒಟ್ಟಿನಲ್ಲಿ ಒಂದು ರೀತಿಯ ಆಲಸ್ಯವುಂಟಾಯಿತು.

ಎಷ್ಟೋ ಹೊತ್ತು ಮೌನವಾಗಿ ಕಳೆಯಿತು. ಜ್ಯೋತಿರ್ಮಯಿ ದೇವಿಗೆ ಒಂದು ಆಸೆಯಿತ್ತು. "ಈ ತೋಳಿನ ಮೇಲೆ ಹಾಯಾಗಿ ಮಲಗಿ ನಾನು ಒಂದು ರಾತ್ರಿ ನಿದ್ದೆ ಮಾಡಲಾ?"

ಅವಳನ್ನು ಬರಸೆಳೆದು ಅಪ್ಪಿಕೊಂಡು, ಚುಂಬಿಸುತ್ತಾ ಕೇಶವ ಪಿಳ್ಳೆ ಹೇಳಿದರು:

"ನಿದ್ದೆ ಮಾಡೋದಕ್ಕೆ ಬಿಡೋದಿಲ್ಲ."

# [38]

## ಪುನರ್ಜನ್ಮ

ಈ ರೀತಿಯಲ್ಲಿ ಪರಸ್ಪರ ಪ್ರೀತಿಯೂ ವಿಶ್ವಾಸವೂ ಇದ್ದ ಜೀವನವನ್ನು ಪಾರ್ಕ್ ವ್ಯೂನಲ್ಲಿ ಇದಕ್ಕೆ ಮೊದಲು ಕಂಡದ್ದಿಲ್ಲ. ಅಲ್ಲಿಯ ಜೀವನಕ್ಕೆ ಕ್ಲೇಶವಿಲ್ಲ; ಮ್ಲಾನತೆಯಿಲ್ಲ. ಅಂತೂ ಒಂದು ತೃಪ್ತಿಯಿದೆ. ಅಲ್ಲಿ ನಗು, ವಿನೋದ ಮಾತ್ರ. ಕೇವಲ ಸಾಧಾರಣವಾದ ನಗುವಲ್ಲ. ಅನ್ಯೋನ್ಯ ಪ್ರೀತಿಯ ಆಸಕ್ತಿಯ ನಗು. ಅಲ್ಲಿ ನಿಜವಾಗಿಯೂ ಗಂಡ ಹೆಂಡತಿಯರ ಮಧುಚಂದ್ರದ ಕಾಲವಾಗಿತ್ತು ಅದು.

ಇಷ್ಟು ವಯಸ್ಸಾದರೂ ಆ ದಂಪತಿಗಳ ಆಸಕ್ತಿ ಕಡಿಮೆಯಾಗಿರಲಿಲ್ಲ. ಒಂದೇ ಪ್ರತ್ಯೇಕತೆ ಮಾತ್ರ ಇತ್ತು. ಯುವಕರ ಮಧುಚಂದ್ರದ ಕಾಲದ ಮಹತ್ವವಿಲ್ಲದೆ ಇಲ್ಲ. ಇಂದೋ ನಾಳೆಯೋ ಒಂದು ಯಥಾರ್ಥವಾದ ಸಂಗತಿಯನ್ನು ನೇರವಾಗಿ ಮಾಡುತ್ತ ಪರಸ್ಪರ ಅಗಲಬೇಕಾದ ಒಂದು ಸ್ಥಿತಿ ಆ ಆಸಕ್ತಿಯಲ್ಲಿರಲಿಲ್ಲ. ಮದುವೆಯಾಗಿ ತುಂಬ ದಿನಗಳ ನಂತರ ಮಗಳು ಹುಟ್ಟಿದ ಮೇಲೆ ಮಧುಚಂದ್ರವೇ? ಹೌದು; ಮಧುಚಂದ್ರ! ಕೇವಲ ಕಾಮದ ಮಧುಚಂದ್ರವಲ್ಲ. ಒಬ್ಬನಿಗೆ ಒಬ್ಬಳು ದೊರಕಿದಳು. ಅವಳಿಗೆ ಒಂದು ಗಂಡು ದೊರಕಿದ—ಅಂತಹ ಮಧುಚಂದ್ರವಲ್ಲ.

ಇನ್ನೂ ಒಂದು ವಿಷಯ ಹೇಳುವುದಿದೆ. ಏಕೆ ಆ ವಿಷಯ ಹೇಳಿ ಕಾತ್ಯಾಯಿನಿಗೆ ಕಳವಳವನ್ನುಂಟುಮಾಡುವುದು? ಅವರಿಗೆಲ್ಲವೂ ಇಲ್ಲವೇ? ಹಣ, ಪ್ರತಾಪ ಹಾಗೆ ಪೂರ್ಣ ಸಂತೃಪ್ತಿಗೆ ಬೇಕಾದುದೆಲ್ಲ. ಮದುವೆ ಕಳೆದು ವರ್ಷಗಳು ಕಳೆದಾಗ ಮಕ್ಕಳು ಜನಿಸಿ ಭಾರವೂ ಉಂಟಾಗಿ ಜೀವಿತದ ಪ್ರಶ್ನೆ ಸಂಕೀರ್ಣವಾಗುವಾಗ ಗಂಡ ಹೆಂಡತಿಯನ್ನು, ಹೆಂಡತಿ ಗಂಡನನ್ನು ದೋಷವೆಣಿಸ[illegible]ಕ್ಕೆ ಹೊರಡುತ್ತಾರೆ. ಮಧುಚಂದ್ರವನ್ನು ತೃಪ್ತಿಯಾಗಿ ಆಘೋಷಿಸಿದ್ದವರು—ಪರಸ್ಪರ ವಾಗ್ದಾನ ಮಾಡಿದವರು. ಆದರೆ ಅವರು ಒಬ್ಬರಿಗೊಬ್ಬರು ಜಗಳವಾಡಿ, ಬಡಿದಾಡಲು ತೊಡಗುತ್ತಾರೆ. ಇಲ್ಲಿ ಅದಕ್ಕೆ ಅವಕಾಶವಿಲ್ಲ. ಕಾತ್ಯಾಯಿನಿಯಮ್ಮನಿಗೆ ಒಂದು ಮಾತ್ರ ಇದ್ದರೆ ಸಾಕು—ಅವಳನ್ನು ಪ್ರೀತಿಸಬೇಕು. ಅದನ್ನು ಅವರು ಬಯಸಿದ್ದರು. ಅದು ಸಿಕ್ಕಿತು. ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನನ್ನು ಕಂಡದ್ದೂ ಆಯಿತು. ಆ ಮನೆಯಲ್ಲಿ ಆನಂದಕ್ಕೆ ಮಾತ್ರ ಅವಕಾಶವಿರುವುದು.

ಆದರೆ ಇದ್ದಕ್ಕಿದ್ದಂತೆ ಆ ಮನೆಯ ಪ್ರಸನ್ನತೆಗೆ ಒಂದು ಮಂಕು ಕವಿಯಿತು. ಅದು ಅನಿರೀಕ್ಷಿತವಾಗಿ ಥಟ್ಟನೆ ಸಂಭವಿಸಿತು. ಅದನ್ನು ಯಾರೂ ನೆನಸಿದ್ದುದಲ್ಲ. ಗಂಭೀರವಾದ ವೈವಿಧ್ಯ ಸ್ವಭಾವದಿಂದ ಕೂಡಿದ ಎಷ್ಟೆಷ್ಟು ಪರೀಕ್ಷೆಗಳನ್ನು ಎದುರಿ

ಸಿದ್ಧದ್ದು ಆ ದಾಂಪತ್ಯ ಬಂಧನ. ಯಾವ ಇಕ್ಕಟ್ಟೂ ಅದಕ್ಕೆ ಹೊಸದಲ್ಲ. ಥಟ್ಟನೆ ಆ ಕಪ್ಪು ನೆರಳು ಆವರಿಸಿದ್ದು. ಬಹುಶಃ ಕೇಶವ ಪಿಳ್ಳೆಯ ಹೃದಯದಲ್ಲಿ ಅಜ್ಞಾತವಾದ ಯಾವುದೋ ಒಂದು ಮೂಲೆಯಲ್ಲಿ ಇಷ್ಟು ಕಾಲವೂ ಯಾರಿಗೂ ತಿಳಿಯದಂತೆ ಮೊಳೆತು ಹಬ್ಬಲು ಅನುಕೂಲವಾದ ಒಂದು ಕಾಲಾವಸ್ಥೆಯನ್ನು ಕಾಯುತ್ತ ಕುಳಿತಿರಬೇಕು. ಜೀವನದಲ್ಲಿ ಮೊದಲನೆಯದಾಗಿ ಕಾತ್ಯಾಯಿನಿಯಮ್ಮ ಒಂದು ಚುಂಬನವನ್ನು ಬಯಸಿದಾಗ. ಅದಕ್ಕಾಗಿ ತುಟಿಯೊಡ್ಡಿದ್ದಾಗ ಕೇಶವ ಪಿಳ್ಳೆ ಕಂಡದ್ದು ಮತ್ತೊಬ್ಬಳ ಮುಖವನ್ನು. ಆ ಮುಖವನ್ನು ಮರೆಯಲು, ಕಾತ್ಯಾಯಿನಿಯಮ್ಮನ ಮುಖವನ್ನು ಮಾತ್ರ ಕಾಣಲು ಅವರು ಕಣ್ಣುಮುಚ್ಚಿಕೊಂಡು ನೋಡಿದರು. ಅದು ಹೇಗೆ ಸಂಭವಿಸಿತು? ತಂಗಮ್ಮನನ್ನು ಮರೆತಾಗಿರಲಿಲ್ಲವೆ? ಬಹುಶಃ ಕೇಶವ ಪಿಳ್ಳೆ ತನ್ನ ಹೆಂಡತಿಯನ್ನು ಕಂಡಾಗ ಅಡಗಿ ಮರೆಯಲ್ಲಿದ್ದ ಈ ಅಭಿಲಾಷೆ ಮೊಳೆತು ಹಬ್ಬುವ ಕಾಲ ನಷ್ಟವಾಯಿತು. ಅನಂತರ ಆತ ಚುಂಬಿಸಿದ್ದು ಹೆಂಡತಿಯನ್ನು. ಈಗ ಆ ಅಭಿಲಾಷೆ ಮತ್ತೆ ಮೊಳೆಯುವುದಕ್ಕೆ ತೊಡಗಿರಬೇಕು.

ಕೇಶವ ಪಿಳ್ಳೆ ಕನ್ಯಾಕುಮಾರಿಯಿಂದ ಮನೆಗೆ ಬಂದದ್ದು ಬದಲಾಯಿಸಿದ ಮನುಷ್ಯನಾಗಿ, ಹಸನ್ಮುಖಿಯಾಗಿ. ಸ್ನಾನ ಮಾಡಿ, ತಲೆ ಬಾಚಿಕೊಳ್ಳುತ್ತ ಕಾತ್ಯಾಯಿನಿಯಮ್ಮ ಗೇಟಿನ ಹತ್ತಿರ ಬಂದು ನಿಂತುಕೊಂಡಳು. ಕಾರಿನಿಂದ ಇಳಿದ ಕೇಶವ ಪಿಳ್ಳೆ ಒಂದು ನಗು ತಂದುಕೊಂಡರು. ಹೌದು! ಆ ನಗು ಎಳೆದು ತಂದುಕೊಂಡ ನಗು. ಎಲ್ಲವನ್ನೂ ಮುಚ್ಚಿಡುವ ಒಂದು ಪ್ರಯತ್ನದ ನಗು. ಆದರೆ ಆ ಪ್ರಯತ್ನದಲ್ಲಿ ದುರ್ಬಲತೆಯಿತ್ತು. ಅದೊಂದು ಎಳೆದು ತಂದ ನಗುವಾಗಿತ್ತು. ಏಕೆಂದು ತಿಳಿಯದು—ಕಾತ್ಯಾಯಿನಿಯಮ್ಮ ಬಾಡಿಹೋದಳು. ಆ ನಗು ಹಾಗೆಯೇ ಮರೆಯಾಯಿತು. ಅವರಿಗೆ ಒಂದು ರೀತಿಯ ಮಂಕು ಆವರಿಸಿತು. ಅಂತಹ ಒಂದು ಮುಖಭಾವನೆಯನ್ನು ಒಮ್ಮೆಯೂ ಕಾತ್ಯಾಯಿನಿಯಮ್ಮ ಕಂಡಿರಲಾರಳು.

"ಬರೋದು ಒಂದು ದಿನ ತಡವಾಯಿತು" ಎಂದು ಹೇಳಲು ಅವರು ಪ್ರಯತ್ನಿಸಿದ್ದರು. ಆದರೆ ಆ ವಾಕ್ಯ ಒಳಗೇ ಉಳಿಯಿತು. ಕೇಶವ ಪಿಳ್ಳೆ ತಮಗೆ ತುಂಬ ಆಯಾಸವಾಗಿದ್ದಂತೆ ನಟಿಸಿದರು. ನಿಜವಾಗಿಯೂ ಅವರಿಗೆ ಸ್ವಲ್ಪ ಆಯಾಸವುಂಟಾಗಿತ್ತು.

"ನಾನು ಅಂದುಕೊಂಡಿದ್ದಕ್ಕಿಂತ ಹೆಚ್ಚಿಗೆ ಒಂದು ದಿನ ಉಳಿಯಬೇಕಾಯ್ತು—" ಎಂದು ಅವರು ಹೇಳಿದರು. ಅದು ನಡೆದದ್ದನ್ನು ಮುಚ್ಚಿಡುವ ಪ್ರಯತ್ನವಾಗಿತ್ತು. ಮಂಕು ಕವಿದ ಕಾತ್ಯಾಯಿನಿಯಮ್ಮ ಗಂಡನನ್ನು ಹಿಂಬಾಲಿಸಿದಳು. ಒಳಗೆ ಹೋಗಿ ಅವರು ಉಡುಪು ಬದಲಾಯಿಸಿದರು. ಕಾತ್ಯಾಯಿನಿಯಮ್ಮ ಅಲ್ಲಿಯೇ ನಿಂತಿದ್ದಳು.

"ನನಗೆ ಕಾಫಿ ಏನೂ ಇಲ್ಲವಾ?"—ಆ ಪ್ರಶ್ನೆಯಲ್ಲಿ ಒಂದು ತಪ್ಪು ಹೊರಿಸಬೇಕೆಂದಾಗಲೀ, ಆಜ್ಞೆ ಮಾಡಬೇಕೆಂದಾಗಲೀ ಇಲ್ಲವೇ ಎಂದು ಕಾತ್ಯಾಯಿನಿಯಮ್ಮನಿಗೆ ಅನ್ನಿಸಿತು. ಅವಳ ಮನಸ್ಸಿಗೆ ಒಂದು ರೀತಿಯಾಯಿತು. ಅದು ಸರಿಯಲ್ಲವೆ?

ಉಡುಪು ಬದಲಾಯಿಸುವಷ್ಟರಲ್ಲಿ ಗಂಡನಿಗೆ ಕಾಫಿ ತರಬೇಕು. ಅದು ಇಲ್ಲಿಯ ವರೆಗೆ ನಡೆದು ಬಂದ ಪದ್ಧತಿ. ಜೀವನದಲ್ಲಿ ಮಾಡಿದ ಮೊದಲನೆಯ ತಪ್ಪು ಅದು. ಹೇಗೆ ಆ ತಪ್ಪು ಸಂಭವಿಸಿತು ಎಂದು ಅವಳಿಗೆ ತಿಳಿಯದು. ಅದಕ್ಕಾಗಿ ತನ್ನನ್ನು ತಾನು ಬಯ್ದುಕೊಂಡಳು. ಅದೊಂದು ತಪ್ಪಾಗಿ ಹೋಯಿತು. ಕೇಶವ ಪಿಳ್ಳೆ ಆಗ ಒಂದು ಮಂದಹಾಸವನ್ನು ತಂದುಕೊಂಡು ಪ್ರೀತಿಯ ಅಭಿನಯದಿಂದ ಹೇಳಿದರು: "ಹೋಗಿ ಒಂದು ಕಪ್ಪು ಕಾಫಿ ತಾ."

ಆ ನಗುವೂ ಆ ಮಾತೂ ಕೇವಲ ಅಭಿನಯವಾಗಿತ್ತು. ಒಮ್ಮೆಯೂ ಮನಸ್ಸಿನಲ್ಲೊಂದು, ಹೊರಗೊಂದು ಇಟ್ಟುಕೊಂಡು ಅಭಿನಯಿಸಿದ್ದನ್ನು ಕಾತ್ಯಾಯಿನಿಯಮ್ಮ ಕಂಡದ್ದಿಲ್ಲ.

ಕಾತ್ಯಾಯಿನಿಯಮ್ಮ ಬೊಂಬೆಯ ಹಾಗೆ ಕಾಫಿ ತರಲು ಒಳಗೆ ಹೋದಳು. ತನ್ನ ಮುಖಭಾವನೆ ತನ್ನನ್ನು ವಂಚಿಸಿತೋ ಎಂದು ಕೇಶವ ಪಿಳ್ಳೆಗೆ ಸಂಶಯವುಂಟಾಯಿತು. ಆ ಆಯಾಸದ ನಟನೆಯಲ್ಲಿ ಸ್ವಲ್ಪ ಮಟ್ಟಿನ ಅಜ್ಞೆಯೂ ಅನಂತರ ಪ್ರೀತಿಯ ಹೆಸರಿನಲ್ಲಿ ಅಲ್ಲದಿದ್ದರೆ ಸಾಮಾನ್ಯವಾದ ಅಭಿನಯವೆಲ್ಲವನ್ನೂ ಹೊರಗೆ ಕಾಣಿಸಿದಂತಾಯಿತೋ ಎನ್ನುವಂತಿತ್ತು ಅವರ ಅಭಿನಯ. ಮೂರು ದಿನಕ್ಕೆ ಮೊದಲು ಹೇಗೆ ಇದ್ದರೋ ಹಾಗೆ ಉತ್ಸಾಹದಿಂದ ನಗುತ್ತ ಪ್ರಸನ್ನನಾಗಿದ್ದಿದ್ದಲ್ಲಿ! ಅದೇತಕ್ಕೆ ಸಾಧ್ಯವಾಗಲಿಲ್ಲ? ಈಗ ಕಾತ್ಯಾಯಿನಿಯನ್ನು ಕಂಡದ್ದರಿಂದ ಹಾಗಾಗಬೇಕು. ಅವಳ ಉತ್ಸಾಹವೂ ತಗ್ಗಿತು. ಅಪ್ರಸನ್ನಳಾದಳು. ಕಚಗುಳಿಯಿಟ್ಟು, ಚುಂಬಿಸಿ, ಬಾಚಿ ತಬ್ಬಿಕೊಂಡು ಅವಳನ್ನೊಮ್ಮೆ ನಗಿಸಬೇಕು.

ಕಾತ್ಯಾಯಿನಿಯಮ್ಮ ಕಾಫಿಯನ್ನು ತೆಗೆದುಕೊಂಡು ಬಂದಳು. ಕಾಫಿ ಕುಡಿಯುತ್ತಿದ್ದಾಗ ಕೇಶವ ಪಿಳ್ಳೆ ಗಂಭೀರವಾದ ಒಂದು ವಿಷಯವನ್ನು ಹೇಳಿದರು:

"ರಾಜ್ಯ ಪುನರ್ವಿಭಜನೆಯಾಗುವಾಗ ನಮ್ಮ ವಿಷಯದಲ್ಲಿ ಸ್ವಲ್ಪ ತೊಂದರೆಯಾಗುವ ಹಾಗೆ ಕಾಣಿಸುತ್ತೆ. ಈಗ ಆ ಫೈಲ್ ನೋಡಿದಾಗಲೇ ಅದು ಅರ್ಥವಾದದ್ದು."

ಅದನ್ನೊಂದು ದೊಡ್ಡ ವಿಷಯವಾಗಿ ಪರಿಗಣಿಸದೆ ವಾಸನಾಬಲದಿಂದ ಕೇಳುವಂತೆ ಕಾತ್ಯಾಯಿನಿಯಮ್ಮ ಕೇಳಿದಳು:

"ಹ್ಞ. ಏನು?"

ಕೇಶವ ಪಿಳ್ಳೆ ಒಂದು ವಿಷಯ ಹೇಳತೊಡಗಿದರು:

"ಮಲಬಾರೂ ಸೇರಿದಂತೆ ತಿರುವಾಂಕೂರು, ಕೊಚ್ಚಿ ಎಲ್ಲ ಒಟ್ಟುಗೂಡಿ ಕೇರಳ ರಾಜ್ಯವಾಗಬೇಕಾಗಿದೆ. ಮಲಬಾರಿನ ತುಂಬ ಜನ ಉದ್ಯೋಗಸ್ಥರು ಮದರಾಸು ರಾಜ್ಯದಲ್ಲಿ ಕೆಲಸದಲ್ಲಿದ್ದಾರೆ. ಅವರೀ ಕಡೆಗೆ ಬರ್ತಾರೆ. ಅವರಲ್ಲಿಬ್ಬರು—ಅದರಲ್ಲೂ ಒಬ್ಬಾತ ನನಗಿಂತ ಹೆಚ್ಚಿನ ಸಂಬಳ ತೆಗೆದುಕೊಳ್ತಿದಾನೆ—ಆದರೆ ಅವನು ಸೆಕ್ರಟರಿಯ ಸ್ಥಾನದಲ್ಲಿದ್ದಾನೆ. ಸರ್ವೀಸಿನ ವಿಷಯದಲ್ಲಿ ಅವರಿಗೆ ನನ್ನಷ್ಟಿಲ್ಲ. ಅವರು ಈ ಕಡೆ

ಬರುವುದಕ್ಕೆ ತೀರ್ಮಾನಿಸಿದವರು—ಅವರು ಬಂದರೆ ಬಹುಶಃ ಅವರಲ್ಲೊಬ್ಬ ಚೀಫ್ ಸೆಕ್ರೆಟರಿಯಾಗಬಹುದು. ಹಾಗೆ ಕೇಳುವುದಕ್ಕೆ ಅವರಿಗೆ ಹಕ್ಕಿದೆ. ಫೈಲುಗಳನ್ನೆಲ್ಲ ಸರಿಯಾಗಿ ನೋಡಿದಾಗಲೇ ನನಗಿದು ತಿಳಿದದ್ದು."

ಕಾತ್ಯಾಯಿನಿಯಮ್ಮನಿಗೆ ಅದೊಂದು ಹೊಸ ವಿಷಯವಾಗಿರಲಿಲ್ಲ. ಅವಳು ಹೇಳಿದಳು: "ಅದನ್ನ ಆಗಲೇ ಹೇಳಿದ್ದಿರಲ್ಲ?"

ಯಾವುದೋ ಒಂದು ಹೊಸ ವಿಷಯವನ್ನು ಹೇಳುವಂತೆ ಕೇಶವ ಪಿಳ್ಳೆ ಹೇಳುತ್ತಿದ್ದರು. ಕಾತ್ಯಾಯಿನಿಯಮ್ಮನ ಉತ್ತರ ಅವರ ಉದ್ದೇಶವನ್ನು ಸ್ಥಗಿತಗೊಳಿಸಿತು. ಆ ಸುದ್ದಿಯನ್ನು ಅವರು ಎತ್ತಿದಾಗಲೇ ಅದು ಅಷ್ಟೊಂದು ಮುಖ್ಯವಾದದ್ದಲ್ಲ ಎಂದು ಕಾತ್ಯಾಯಿನಿಯಮ್ಮನ ಧ್ವನಿ ಸೂಚಿಸಿತು. ಆದರೆ ಅದನ್ನು ಹಾಗೇ ಬಿಡಲು ಸಾಧ್ಯವೆ?

"ಫೈಲು ನೋಡಿದಾಗ ತೊಂದರೆ ಇದೆ ಅಂತ ಗೊತ್ತಾದದ್ದು. ಚೀಫ್ ಸೆಕ್ರೆಟರಿಯಾಗಿದ್ದು ಕೆಳಗಿನ ಸ್ಥಾನಕ್ಕಿಳಿಯಬೇಕು. ಅದು ನನಗೆ ತುಂಬ ಬೇಸರ ತಂದಿದೆ. ಮನಸ್ಸೂ ಶರೀರವೂ ಕ್ಷೀಣಿಸಿಹೋಗಿದೆ."

ಥಟ್ಟನೆ ಕಾತ್ಯಾಯಿನಿಯಮ್ಮನ ಉತ್ತರ ಬಂದಿತು:

"ಇಷ್ಟು ದಿನ ಹೇಳಿದ ಹಾಗೆ ಆ ರೀತಿ ಆಗೋದಿದ್ದರೆ ಇರೋ ಮನುಷ್ಯ ಪೆನ್ಶನ್ ತೆಗೆದುಕೊಂಡು ಹೋಗಬಹುದಲ್ಲವೇ? ಹಾಗೆ ಮಾಡಿದರಾಯಿತು. ಅದಕ್ಕೆ ಇಷ್ಟೊಂದು ಬೇಸರ ಮಾಡಿಕೊಳ್ಳೋದು ಯಾಕೆ? ಇಷ್ಟು ದಿನ ಮನಸ್ಸಿಗೆ ಆ ಬೇಸರ ಇರಲಿಲ್ಲವಲ್ಲ?"

ಕೇಶವ ಪಿಳ್ಳೆಗೆ ಮುಂದೆ ಹೇಳಲು ಏನೂ ತೋರಲಿಲ್ಲ. ಮನಸ್ಸಿನ ವಿಷಮತೆಗೆ ಕೊಟ್ಟ ಆ ಕಾರಣ ತೀರ ಸರಿಯಾದ ಕಾರಣವಲ್ಲವೆಂದು ಸ್ಪಷ್ಟವಾಯಿತು.

"ಆದರೂ ಬೇಸರ ಆಗೋದಿಲ್ಲವಾ?"

ಕಾತ್ಯಾಯಿನಿಯಮ್ಮ ಏನೂ ಮಾತಾಡಲಿಲ್ಲ. ಆ ನಿಶ್ಶಬ್ದತೆಯ ಅರ್ಥ, ಗಂಡ ತಪ್ಪು ಮಾಡಿ ಬಂದಿರುವುದರಲ್ಲಿ ಅವರಿಗೆ ನಂಬಿಕೆ ಬಂದಿಲ್ಲ ಎಂದು. ಸ್ವಲ್ಪ ಹೊತ್ತು ಬಿಟ್ಟು ಆಕೆ ಹೇಳಿದಳು:

"ಇಷ್ಟು ದಿನ ಇದರ ವಿಷಯ ಬಂದಾಗ ಇಷ್ಟು ಬೇಸರ ಇರಲಿಲ. ಈಗ ಅದು ತೊಂದರೆ ಅಂತ ಭಾವಿಸೋದು ಯಾಕೆ?"

ಕೇಶವ ಪಿಳ್ಳೆಗೆ ಹೇಳಲು ಏನೂ ಇರಲಿಲ್ಲ. ಸ್ವಲ್ಪ ಸಮಯದ ನಂತರ ಆತ ಒಂದು ಉತ್ತರವನ್ನು ಕಂಡುಹಿಡಿದರು· "ಆದರೂ ಒಂದು ತೊಂದರೆ."

ಕಾತ್ಯಾಯಿನಿಯಮ್ಮ ಸ್ಪಷ್ಟವಾಗಿ ಹೇಳಿದಳು:

"ನಾನು ಮೊದಲಿನಿಂದಲೂ ಹೇಳ್ತಿದ್ದೀನಲ್ಲ. ಕಾರಣ ಅದಲ್ಲ. ಬೇರೆ ಇನ್ನೇನೋ ಇರಬೇಕು.

ಸ್ವಲ್ಪ ಹೊತ್ತು ಬಿಟ್ಟು ಸೋತುಹೋದಂತೆ ಹೇಳಿದಳು:

"ಅಲ್ಲದೆ ಇದ್ರೂ ಅದನ್ನೆಲ್ಲ ನನ್ನ ಹತ್ರ ಯಾಕೆ ಹೇಳೋದು? ನನಗೆ ಏನಾದರೂ ಗೊತ್ತಾಗುತ್ತಾ?"

ಆ ಸೋಲಿನ ಮಾತನ್ನು ಕೇಶವ ಪಿಳ್ಳೆ ಅಷ್ಟೊಂದು ಇಷ್ಟಪಡಲಿಲ್ಲ. ಯಾವುದೋ ಒಂದು ಮ್ಲಾನತೆ ಆ ಕುಟುಂಬವನ್ನು ಆವರಿಸಿತು. ಹೆಂಡತಿ ಹತ್ತಿರದಲ್ಲಿ ಮೇಜು ಒರಗಿಕೊಂಡು ನಿಂತಿದ್ದಳು. ಗಂಡ ಚಿಂತಾಮಗ್ನರಾಗಿದ್ದರು. ಹಾಗೆ ಇಬ್ಬರೂ ಮಾತನಾಡದೆ ಎಷ್ಟೋ ಹೊತ್ತು ಕಳೆಯುವಂತಹ ಸ್ಥಿತಿ ಹಿಂದೆ ಆ ಬಂಗಲೆಯಲ್ಲಿ ಉಂಟಾಗಿರಲಿಲ್ಲ. ಇಬ್ಬರ ಮನಸ್ಸಿಗೂ ಮಂಕು ಕವಿದಿತ್ತು.

ಕೇಶವ ಪಿಳ್ಳೆಗೆ ಸಂಬಂಧಿಸಿದಂತೆ ತಪ್ಪಿತಸ್ಥ ಭಾವನೆ ಆ ಮ್ಲಾನತೆಗೆ ಕಾರಣವಾಗಿರಬಹುದೆ? ಅಥವಾ ಈ ಮೂರು ನಾಲ್ಕು ದಿನಗಳಲ್ಲಿ ನಡೆದ ಘಟನೆಗಳು ಕಾತ್ಯಾಯಿನಿಯಮ್ಮನಿಗೇನಾದರೂ ಗೊತ್ತಾಗಿರಬಹುದೇ ಎನ್ನುವ ಭಯ ಕಾರಣವಾಗಿರಬಹುದೇ? ಕಾತ್ಯಾಯಿನಿಯಮ್ಮನಿಗೆ ಆ ವಿಷಯ ತಿಳಿಯಲು ಎಡೆಯಿಲ್ಲ. ಯಾರಾದರೂ ಹೇಳಿಬಿಟ್ಟಿದ್ದಾರೋ ಎಂದು ಅವರು ಹೆದರಿದರು. ಇದಾವುದೂ ಅಲ್ಲದೆ ಮತ್ತೊಂದು ವಿಷಯವೂ ಇತ್ತು. ಪ್ರತ್ಯೇಕವಾದ ಅನುಭವ ಅವರಿಗೆ ಹಿಂದಿನ ದಿವಸಗಳಲ್ಲಿ ಉಂಟಾವದ್ದು. ಅಂತಹ ಒಂದು ಪ್ರಪಂಚವಿದೆಯೇ? ಒಂದು ಅನುಭೂತಿಯಿದೆಯೇ? ಅಂತರಂಗದಲ್ಲಿ ಎಂದೆಂದೂ ಶಾಶ್ವತವಾಗಿ ಉಳಿಯುವ ಒಂದು ಕಂಪನ ಉಂಟಾಗಿತ್ತು. ರಕ್ತಪ್ರವಾಹದ ಸ್ವಭಾವವೇ ಅದಾಯಿತು. ಆ ರೀತಿಯಲ್ಲಿ ಕಂಪಿಸುವುದೇ ಕೇಶವ ಪಿಳ್ಳೆಯ ಜೀವನದ ಒಂದು ಸ್ವಭಾವವಾಗಿಹೋಯಿತು. ಈ ಅನುಭವ ಎಲ್ಲಿ ಅಡಗಿತ್ತು? ಒಂದು ಹೊಸ ಸ್ವರ್ಗದ ಬಾಗಿಲು ತೆರೆದಿಟ್ಟದ್ದಂತೆ ತೋರಿತು. ಹೀಗೆಯೇ ಜೀವನದಲ್ಲಿ ಕೆಲವನ್ನೆಲ್ಲ ಅನುಭವಿಸಬೇಕಾದದ್ದಿದೆ. ಆ ವಿಶಿಷ್ಟವಾದ ಅನುಭೂತಿಗಿದ್ದ ಒಂದೇ ಒಂದು ವಿಘ್ನ—ಹೆಂಡತಿ. ಇಲ್ಲಿ ಮುಂದೆ ನಿಂತಿರುವವಳು—ಆ ವಿಘ್ನದ ಆಕಾರವನ್ನು ತಳೆದು ಮುಂದೆ ನಿಂತದ್ದರ ಬೇಸರವೋ ಆ ಮ್ಲಾನತೆ?

ಹಿಂದೆಂದೂ ಏನೂ ಮಾತನಾಡದೆ ಬಹಳ ಹೊತ್ತಿನ ವರೆಗೆ ಚಿಂತಾಮಗ್ನನಾಗಿ ಕೇಶವ ಪಿಳ್ಳೆ ಇದ್ದದ್ದಿಲ್ಲ. ಫೈಲು ನೋಡುವಾಗಲಾಗಲೀ ಏನಾದರೂ ಬರೆಯುತ್ತಿದ್ದಾಗಲಾಗಲೀ ಕಾತ್ಯಾಯಿನಿಯಮ್ಮ ಹತ್ತಿರ ಇರಬೇಕು. ಆಗಾಗ ಎದ್ದು ಅವಳಿಗೆ ಒಂದು ಚುಂಬನವನ್ನು ನೀಡುತ್ತಿದ್ದರು. ಇಲ್ಲದೆ ಇದ್ದರೆ ಬೆರಳಿನಿಂದ ಆ ಕೆನ್ನೆಯ ಮೇಲೆ ಒಂದು ಏಟು ಕೊಡುತ್ತಿದ್ದರು. ಅದೂ ಇಲ್ಲದಿದ್ದರೆ—ಎತ್ತಿಕೊಂಡು ನಡೆಯುತ್ತಾ ಕಿಲಿಕಿಲಿ ನಗಿಸುತ್ತಿದ್ದದ್ದೋ ಮಾಡುತ್ತಿದ್ದರು. ಇದೊಂದೂ ಇಲ್ಲದಿದ್ದರೆ ಏನಾದರೂ ಮಾತಾಡಿಕೊಂಡಿರುತ್ತಿದ್ದರು. ಇದಾವುದೂ ಇಲ್ಲದೆ ಮೌನವಾಗಿ ಕಾಲ ಕಳೆಯಲು ಅವಕಾಶವುಂಟಾಗಿರಲಿಲ್ಲ.

ಗಟ್ಟಿಯಾಗಿ ಅಳುತ್ತ ಕಾತ್ಯಾಯಿನಿಯಮ್ಮ ಒಳಗೆ ಹೋದಳು. ಹಾಗೆ ಅಳುವುದಕ್ಕೆ ಕಾರಣವಿದೆಯೆ? ಗಂಡ ಸ್ವಲ್ಪ ಹೊತ್ತು ಏನೋ ಆಲೋಚಿಸಿಕೊಂಡಿದ್ದರು. ಅಷ್ಟೆ

ಅಲ್ಲವೆ? ಅದಕ್ಕೆ ಹಾಗೆ ಅಳಬೇಕೇ? ಏನಾಯಿತು? ಏನೋ ಸುಳುಹು ಹೆಂಡತಿಗೆ ದೊರಕಿದೆ ಎಂದು ಕೇಶವ ಪಿಳ್ಳೆಯ ಭಯ. ಅದೊಂದು ಸಂಶಯದಿಂದಾಗಿರಬಹುದೇ ಎಂದು ಅವರ ಭಯ. ಅವರು ಹೆಂಡತಿಯ ಹಿಂದೆಯೇ ಹೋಗಿ ಅವಳನ್ನು ಅಪ್ಪಿಕೊಂಡು ಕೇಳಿದರು:

"ಇದೇಥ ಹುಚ್ಚು?"

ಕಾತ್ಯಾಯಿನಿಯಮ್ಮನಿಗೆ ಏನು ಹೇಳುವುದಕ್ಕೂ ಆಗಲಿಲ್ಲ.

ಅವರು ಅನಂತರ ಹೇಳಿದರು: "ಹಿಂದೆಂದೂ ಇಲ್ಲದ, ನಾನು ಒಮ್ಮೆಯೂ ಕಾಣದಂಥಾದ್ದು ಇದು. ಇದೇನಿದು? ಮನೆ ಬಿಟ್ಟು ನಾನೆಲ್ಲಿಯಾದರೂ ಹೋಗಿ ಬರೋದು ತಡವಾದರೆ ನೀನು ಅಳುತ್ತಿರಲಿಲ್ಲವಲ್ಲ? ಈಗ ಅಳೋದಕ್ಕೆ ನಿನಗೇನಾಯ್ತು?"

ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ಕೈ ಹಿಡಿದು ತೆಗೆದು ಕಣ್ಣೀರನ್ನು ಒರೆಸಿದರು. ಒಂದು ಮುತ್ತು ಕೊಟ್ಟರು. ಅವರ ಮುಖಕ್ಕೂ ತುಟಿಗಳಿಗೂ ಕಣ್ಣೀರು ಅಂಟಿಕೊಂಡಿತ್ತು. ಅವರು ತಮಗೆ ತಿಳಿಯದಂತೆಯೇ ಮುಖ ಒರೆಸಿಕೊಂಡರು. ಅದು ಒಂದು ತಪ್ಪಾಯಿತೇನೋ ಎನ್ನಿಸಿತು. ಅವರು ಒಂದು ಕಪಟ ನಗುವನ್ನು ತಂದುಕೊಂಡು ಹೇಳಿದರು:

"ಬರೀ ಉಪ್ಪುಪ್ಪು."

ಹೆಂಡತಿಯನ್ನು ಕರೆದುಕೊಂಡು ಬಂದು ಕೂರಿಸಿಕೊಂಡು ಆಕೆಯ ಹತ್ತಿರ ಕುಳಿತರು. ಬೆನ್ನಿನ ಮೇಲೆ ಕೈಯಾಡಿಸುತ್ತ ಕೇಳಿದರು:

"ನಾನು ಕೇಳೋದು, ಇದೇನಿದು ನಿನ್ನ ಹುಚ್ಚು? ನೀನು ಅತ್ತದ್ದು ಯಾಕೆ?"

ಕಾತ್ಯಾಯಿನಿಯಮ್ಮನಿಗೂ ಅದು ತಿಳಿಯದು. ಅವಳು ಹೇಳಿದಳು:

"ಅಳು ಬಂತು."

"ಅದೇತಕ್ಕೆ ಅಂತ ನಾನು ಕೇಳಿದ್ದು."

ಕಾತ್ಯಾಯಿನಿಯಮ್ಮ ಹೇಳಿದಳು: "ನನಗೆ ಒಂದು ಥರ ಭಯ."

"ಭಯವಾ? ಯಾಕೆ?"

"ಹ್ಞು."

ಅವಳನ್ನು ಬಾಚಿ ತಬ್ಬಿಕೊಂಡರು. ಬಲವಾಗಿ ಅಲ್ಲ. ಗಾಢವಾದ ಆಲಿಂಗನವೆಂಬ ಅನುಭವವಾಗಲಿಲ್ಲ ಕಾತ್ಯಾಯಿನಿಗೆ.

ಅಂದು ರಾತ್ರಿ ಪಾರ್ಕ್ ವ್ಯೂನ ಮಲಗುವ ಕೋಣೆಯಲ್ಲಿ, ಆ ಕುಟುಂಬದಲ್ಲಿ ಆವರಿಸಿಕೊಂಡಿದ್ದ ಅಪ್ರಸನ್ನತೆಯನ್ನು ಹೋಗಲಾಡಿಸುವ ಒಂದು ಪ್ರಯತ್ನ ನಡೆದಿತ್ತು. ಒಳಗಿನ ಅಕಾರಣವಾದ ಭೀತಿಯನ್ನು ಹೋಗಲಾಡಿಸಿಕೊಳ್ಳಲು ಕಾತ್ಯಾಯಿನಿಯಮ್ಮ ಶ್ರಮಿಸುತ್ತಿದ್ದಳು. ಆದರೆ ಅದು ಹೋಗುವುದಿಲ್ಲ. ಕಾತ್ಯಾಯಿನಿಯಮ್ಮನಿಗೆ ಕನ್ಯಾಕುಮಾರಿಯ ಘಟನೆ ತಿಳಿದಿಲ್ಲವೆನ್ನುವುದು ಖಚಿತವಾಯಿತು. ತಿಳಿದಿದ್ದರೆ

ಇಷ್ಟರಲ್ಲಿ ಅದು ಹೊರಗೆ ಬರುತ್ತಿತ್ತು. ಮತ್ತೆ ಯಾಕೆ ಆ ಸ್ತ್ರೀ ಬೇಸರಗೊಂಡಿದ್ದಾಳೆ ಎನ್ನುವುದು ಕೇಶವ ಪಿಳ್ಳೆಯ ಪ್ರಶ್ನೆ. ಆ ಪ್ರಶ್ನೆಗೆ ಅವಳಿಂದ ಉತ್ತರ ಬರುತ್ತಿತ್ತು. ಅದು: "ಏನೋ ಒಂದು ಬದಲಾವಣೆಯಾಗಿದೆ ಖಂಡಿತ."

ಯಾವ ಬದಲಾವಣೆ ಕೇಶವ ಪಿಳ್ಳೆಯಲ್ಲಿ ಉಂಟಾಗಿರುವುದು ಎಂದು ಕೇಶವ ಪಿಳ್ಳೆಗೂ ತಿಳಿಯದು. ಕೇಶವ ಪಿಳ್ಳೆ ಹಿಂದಿನ ಗಂಡನಂತಾಗಲು ಶ್ರಮಿಸುತ್ತಿದ್ದರು. ಆದರೆ ಅದು ಸಾಧ್ಯವಿಲ್ಲ ಎಂದು ಅನ್ನಿಸಿತ್ತು. ಹಾಗೆ ಆಗಲು ಹೇಗೆ ಸಾಧ್ಯ? ಕಾತ್ಯಾಯಿನಿಯಮ್ಮನನ್ನು ನಗಿಸುವ, ಮತ್ತು ಉತ್ಸಾಹವತಿಯನ್ನಾಗಿ ಮಾಡುವ ಎಲ್ಲ ಪ್ರಯತ್ನಗಳೂ ಪರಾಜಯ ಹೊಂದಿದ್ದುವು.

ಒಂದು ಕಾರಣವನ್ನು ಕಂಡುಹಿಡಿಯಲೇಬೇಕು. ರಾಜ್ಯ ಪುನರ್ವಿಭಜನೆಯ ನಂತರ ತಮ್ಮ ಸ್ಥಾನಕ್ಕೆ ಉಂಟಾಗುವ ಧಕ್ಕೆಯನ್ನೂ ಅದರ ಕಾರಣವನ್ನೂ ವಿವರಿಸಿ ತಿಳಿಸಲು ಕೇಶವ ಪಿಳ್ಳೆ ತೀರ್ಮಾನಿಸಿದರು. ಅದು ಒಂದೇ ಒಂದು ಕಾಣುತ್ತಿದ್ದದ್ದು. ಸ್ವಲ್ಪ ಸತ್ಯವೂ ಅದರಲ್ಲಿತ್ತು. ಒಂದು ವೇಳೆ ಆ ಜನರು ಚೀಫ್ ಸೆಕ್ರೆಟರಿಯ ಸ್ಥಾನಕ್ಕೆ ಮಲಬಾರಿನವರ ಎಲ್ಲ ಶಿಫಾರಸ್ಸುಗಳನ್ನೂ ತರಬಹುದು. ಮಲಬಾರ್ ಉದ್ಯೋಗಸ್ಥರು ಮದರಾಸ್‌ನಿಂದ ಬರುವವರು. ಇಂಗ್ಲೀಷಿನವರ ಜೊತೆಯಲ್ಲಿ ಕೆಲಸ ಮಾಡಿದ ಹೆಮ್ಮೆಯೂ ಇದೆ. ಅವರು ತನ್ನನ್ನು ಸೋಲಿಸದೆ ಇರುವುದಿಲ್ಲ. ಇದುವರೆಗೆ ಪ್ರಶ್ನೆಯಾಗದ ಒಂದು ಕಥೆಯನ್ನು ಕಟ್ಟಿ ಹೆಣೆದು ವಿವರಿಸಿ ಹೇಳಿ ನಂಬಿಸಿದರು. ಅವರು ಹೇಳಿದರು: "ಸ್ವಾತಂತ್ರ್ಯ ಸಿಕ್ಕಿದಾಗ ಉಂಟಾಗಲಿಲ್ಲವಾ? ಅದಕ್ಕಿಂತ ದೊಡ್ಡ ತೊಂದರೆ ಇದು. ಈ ಮಲಬಾರಿನವರೆಲ್ಲ ಒಟ್ಟಾಗ್ತಾರೆ. ಅಲ್ಲಿಯ ಕಾಂಗ್ರೆಸ್ ಮುಖಂಡರು, ಕಮ್ಯುನಿಸ್ಟರು, ಪಿ. ಎಸ್. ಪಿ.ಯವರು —ಎಲ್ಲರೂ ಅವರ ಪ್ರದೇಶದ ಉದ್ಯೋಗಸ್ಥ ಬರುವಾಗ ಒಟ್ಟಾಗ್ತಾರೆ. ತಿರುವಾಂಕೂರು ಕೊಚ್ಚಿಯ ಜನರ ಹಾಗಲ್ಲ."

ಕಾತ್ಯಾಯಿನಿಯಮ್ಮ ಹೇಳಿದಳು: "ಹಿಂದೆ ಬರೋದು ಬರಲಿ ಅಂತಿದ್ದಿರಲ್ಲ? ಆಗ ಈ ಭಯ ಇರಲಿಲ್ಲವಲ್ಲ?"

ಈಗಿನ ವಿಷಯ ಅದಕ್ಕಿಂತ ಗಹನವಾದದ್ದು: "ಅವರು ದೊಡ್ಡ ಮದರಾಸ್ ರಾಜ್ಯದಿಂದ ಬರುತ್ತಿದ್ದೇವೆ ಅನ್ನೋ ಭಾವನೆಯುಳ್ಳವರು. ನಾವು ಅಂದರೆ ಅವರಿಗೆ ತಾತ್ಸಾರ."

ಕಾತ್ಯಾಯಿನಿಯಮ್ಮ ಖಡಾಖಂಡಿತವಾಗಿ ಹೇಳಿದಳು: "ಏನು ಹೇಳಿದರೂ ಕಾರಣ ಅದಲ್ಲ. ಬೇರೆ ಏನೋ ಇರಬೇಕು. ಹಾಗೆ ಈಗಿರುವ ಉದ್ಯೋಗದಿಂದ ಕೆಳಗಿಳಿಸಬೇಕಾಗಿದ್ದರೆ ಇಳಿಸಲಿ. ನಾವು ಇರೋದರಿಂದ ಜೀವಿಸೋಣ."

ಕೇಶವ ಪಿಳ್ಳೆ ಹೇಳಿದರು: "ಆದರೆ ಮಗಳ ಮದುವೆ ವಿಚಾರ ಇದೆ. ಉದ್ಯೋಗದಲ್ಲಿದ್ದಾಗ ಒಬ್ಬ ಒಳ್ಳೇ ವರ ಸಿಕ್ತಾನೆ. ಕೆಳಗಿಳಿದರೆ ಅದು ಸಾಧ್ಯವಿಲ್ಲದೆ ಹೋಗಬಹುದು."

ಕಾತ್ಯಾಯಿನಿಯಮ್ಮನಿಗೆ ಒಂದು ನಂಬಿಕೆಯಿತ್ತು:

"ಹಣೇಲಿ ಬರೆದ ಹಾಗೆ ನಡೆಯುತ್ತೆ. ಅದಲ್ಲದೆ ಬೇರ ಇನ್ನೇನು?"

ಎಂದಿನಂತೆ ಕೇಶವ ಪಿಳ್ಳೆ ಫೈಲು ನೋಡುವಾಗ ಹತ್ತಿರ ಕುಳಿತುಕೊಳ್ಳುತ್ತಿದ್ದಳು. ಆದರೆ ಮೌನವಾಗಿ. ಅಲ್ಲಿ ಪರಸ್ಪರ ಮುನಿಸಿಕೊಳ್ಳುವುದು. ಸಿಟ್ಟು. ತಮಾಷೆ— ಯಾವುದೂ ಇಲ್ಲ. ಅಂತು ಯಾವುದೋ ಒಂದು ಕೈಬಿಟ್ಟು ಹೋಗಿತ್ತು. ಈ ಸ್ಥಿತಿ ಮುಂದುವರಿಯದಿದ್ದರೆ ಸಾಕು ಎಂದು ಕೇಶವ ಪಿಳ್ಳೆಗೆ ತೋರಿತು. ಕೆಲವು ದಿನಗಳು ಕಳೆದರೆ ಆ ಸ್ಥಿತಿಯಿಂದ ಕಾತ್ಯಾಯಿನಿಯಮ್ಮ ಬದಲಾಯಿಸುತ್ತಾಳೆ. ಆಗ ಸಮಾಧಾನ ವುಂಟಾಗುತ್ತದೆ. ನಗು. ತಮಾಷೆ. ಉತ್ಸಾಹಗಳಿರಲಿಲ್ಲ ಅಷ್ಟೆ. ನಾಲ್ಕೈದು ದಿನಗಳು ಹಾಗೆಯೇ ಕಳೆದುವು. ಪಾರ್ಕ್ ವ್ಯೂನ ತೋಟದಲ್ಲಿ ಕೇಶವ ಪಿಳ್ಳೆ ತಿರುಗಾಡುತ್ತಿದ್ದರು. ಅವರ ಹಿಂದುಗಡೆಯಲ್ಲಿ ಕಾತ್ಯಾಯಿನಿಯಮ್ಮನೂ ಇದ್ದಳು. ಅವಳು ನೆರಳಿನಂತೆ ನಡೆದುಬರುತ್ತಿದ್ದಳು. ಆ ದೃಶ್ಯ ದುಃಖಕವಾಗಿತ್ತು.

ಕಾತ್ಯಾಯಿನಿಯಮ್ಮ ಹೃದಯ ವೇದನೆಯಿಂದ ಹೇಳಿದಳು:

"ಇಷ್ಟು ದಿನ ನಾವು ಈ ತೋಟದಲ್ಲಿ ತಿರುಗಾಡಿದ್ದು ಹೀಗಲ್ಲ."

ಕೇಶವ ಪಿಳ್ಳೆಯ ಹೃದಯಕ್ಕೂ ಸ್ವಲ್ಪ ವೇದನೆಯಾಯಿತು. ಆಗ ಎಷ್ಟು ಮಾತನಾಡಿದರೂ ಮುಗಿಯುತ್ತಿರಲಿಲ್ಲ. ಅವರೂ ಅವರು ಆಗ ಉಂಟಾಗಿದ್ದ ಬೇಸರ ವನ್ನು ಹೋಗಲಾಡಿಸುವುದಕ್ಕಾಗಿ ಹೇಳಿದರು: "ನಮಗೆ ವಯಸ್ಸಾಯಿತಲ್ಲವಾ? ಇನ್ನು ಮೇಲೆ ಸ್ವಲ್ಪ ಹತೋಟಿಯಲ್ಲಿ ಇರಬೇಕು. ನಾವಿನ್ನೂ ಸಣ್ಣ ಮಕ್ಕಳಾ?"

ಕೂಡಲೇ ಕಣ್ಣೀರಿನಿಂದ ಕೂಡಿದ ಒಂದು ಉತ್ತರ ಹೊರ ಬಂದಿತು: "ನನಗೆ ಚಿಕ್ಕ ವಯಸ್ಸಿನಲ್ಲಿ ಇದೊಂದೂ ಇರಲಿಲ್ಲ."

ಒಂದು ಹುಸಿನಗೆಯೊಂದಿಗೆ ಕೇಶವ ಪಿಳ್ಳೆ ಹೇಳಿದರು:

"ಅದಕ್ಕೆ. ಅದನ್ನು ಎಷ್ಟೋ ಅನುಭವಿಸಿ ಆಗಲಿಲ್ಲವಾ? ಸಾಕಾಗದೇ ಹೋಗಿರ ಬೇಕು?"

ಅವರು ಪತ್ನಿಯ ತೋಳನ್ನು ಹಿಡಿದು ಒಮ್ಮೆ ಕುಲುಕಿದರು. ಅನಂತರ ಹೇಳಿ ದರು: "ಇಲ್ಲಿ ಕೇಳು ಕಾತ್ಯಾಯಿನಿ. ಕೇರಳ ಎನ್ನುವ ಒಂದು ರಾಜ್ಯ ಸ್ವರೂಪಗೊಳ್ಳುವುದ ರಲ್ಲಿದೆ. ದೊಡ್ಡ ಕೆಲಸ. ತಿರುವಾಂಕೂರು ಕೊಚ್ಚಿಯೂ ಆಗಿದ್ದಿದ್ದರೆ ಚಿಂತೆಯಿರಲಿಲ್ಲ. ನನ್ನ ಮನಸ್ಸಿನ ಸಮಾಧಾನ ಕೆಟ್ಟಿರೋ ಹೊತ್ತು. ತಲೆಯಲ್ಲಿ ಫೈಲುಗಳೇ ತುಂಬಿ ಕೊಂಡಿವೆ. ನೀನು ಅದನ್ನು ಅರ್ಥ ಮಾಡಿಕೊಳ್ಳದೆ ಏನೇನೋ ಆಲೋಚನೆ ಮಾಡ ಬೇಡ."

ಅನಂತರ ತುಂಬ ಸತ್ಯಸಂಧರಂತೆ. ನಿರ್ಮಲ ಮನಸ್ಸಿನವರಂತೆ ಅಭಿನಯಿಸುತ್ತ ಕೇಶವ ಪಿಳ್ಳೆ ಅದೇ ಸ್ವರದಲ್ಲಿ ಹೇಳಿದರು: "ಕನ್ಯಾಕುಮಾರಿಯಲ್ಲಿ ನಿಜವಾಗಿ ಅವರ ನಿಜವಾದ ಸಂಗತಿಯನ್ನು ನಾನು ಅರ್ಥ ಮಾಡಿಕೊಂಡದ್ದು. ಅನಂತರ ಮನಸ್ಸಿಗೆ

ಸಮಾಧಾನವೇ ಇಲ್ಲ. ಈಗಲೂ ಒಂದು ಫೈಲು ಕುರಿತು ಆಲೋಚಿಸಿಕೊಂಡೇ ಇದ್ದೇನೆ. ಈ ಮಲಬಾರಿನವರು ದೊಡ್ಡ ಮನುಷ್ಯರಂತೆ ತಿರುಗಾಡುವಾಗ ತುಂಬ ತೊಂದರೆ ಯಾಗುತ್ತದೆ. ಅವರು ಹೇಳುವುದು ಕೂಡ ಅರ್ಥವಾಗೋದಿಲ್ಲ. ಹಾಳಾದ್ದು! ಯಾವ ಸಂಪತ್ತೂ ಇಲ್ಲದ ಪ್ರದೇಶ. ಸ್ಕೂಲುಗಳು ಕೂಡ ಅಷ್ಟೋಂದಿಲ್ಲ. ಅದು ಹೋಗಲಿ. ಈ ಮದರಾಸಿನಿಂದ ಬರುವ ಉದ್ಯೋಗಸ್ಥರು ನಮ್ಮ ತಿರುವಾಂಕೂರು ಉದ್ಯೋಗಸ್ಥರ ತಲೆ ಮೇಲೆ ಕುಳಿತುಕೊಳ್ತಾರೆ ಅಂತ ತೋರ್ತದೆ. ಅದು ಕಷ್ಟ ಅಲ್ಲವೇ? ಈಗಲೂ ಮುಂದಿನ ಶನಿವಾರದಿಂದ ನಾಲ್ಕೈದು ದಿವಸಗಳ ಮಟ್ಟಿಗೆ ಆ ಕಾರ್ಯಕ್ಕೆ ಸಂಬಂಧಿಸಿದ ಫೈಲುಗಳೊಂದಿಗೆ ಹೋಗಬೇಕು."

ಕಾತ್ಯಾಯಿನಿಯಮ್ಮ ಕೇಳಿದಳು: "ಎಲ್ಲಿಗೆ?"

ಕೇಶವ ಪಿಳ್ಳೆಯ ಉತ್ತರದಲ್ಲಿ ಸ್ಪಷ್ಟತೆಯಿರಲಿಲ್ಲ ಎನ್ನುವುದು ತಿಳಿದುಬರುತ್ತಿತ್ತು.

"ಅದು—ಆ ಮೇಲೆ ತೀರ್ಮಾನ ಆಗುತ್ತೆ. ಪೀರಮೇಡೋ ತೇಕಡಿಯಲ್ಲೋ ಇರಬಹುದು."

"ಇಲ್ಲಿ ತಿರುವನಂತಪುರದಲ್ಲಿ ಕೆಲಸ ಮಾಡಿದರೆ ಸಾಲದಾ? ಇಲ್ಲಿಂದಲೇ ಆರ್ಡರ್ ಕಳಿಸೋದಕ್ಕಾಗೋದಿಲ್ಲವಾ?"

ಕೇಶವ ಪಿಳ್ಳೆಗೆ ಸ್ವಲ್ಪ ಸಿಟ್ಟು ಬಂದಿತು.

"ಹೌದಾ? ಸರ್ಕಾರದ ಕೆಲಸವಲ್ಲವಾ?"

ಕಾತ್ಯಾಯಿನಿಯಮ್ಮ ಸುಮ್ಮನಾದಳು. ಕೇಶವ ಪಿಳ್ಳೆ ಕೇಳಿದರು: "ನೀನು ಯಾಕೆ ಹೀಗಾಗ್ತಿದ್ದೀಯಾ?"

"ಹೇಗೆ?"

"ನೀನು ಒಮ್ಮೆಯೂ ಸರ್ಕಾರದ ಕೆಲಸದ ವಿಷಯದಲ್ಲಿ ಅಡ್ಡಿ ಬರ್ತಿರಲಿಲ್ಲವಲ್ಲ?"

ಕಣ್ಣಿನಲ್ಲಿ ನೀರು ತಂದುಕೊಂಡು ಕಾತ್ಯಾಯಿನಿಯಮ್ಮ ಹೇಳಿದಳು: "ನಾನು ಯಾತಕ್ಕೂ ಅಡ್ಡಿ ಬರೋದಿಲ್ಲ. ನಾನು ಯಾವುದಕ್ಕೂ ಅಡ್ಡಿ ಬಂದಿರಲಿಲ್ಲವಲ್ಲ! ನಾನು ಹೋಗ್ತೀನಿ."

ಅಳುತ್ತಾ ಕಾತ್ಯಾಯಿನಿಯಮ್ಮ ಹೋದಳು.

* * * *

ಮೂರು ಸಮುದ್ರಗಳು ಒಂದು ಕಡೆ ಸೇರುವ ಲೋಕದಲ್ಲಿ ಅಪೂರ್ವ ಸ್ಥಳವಲ್ಲಿ ಆ ಪ್ರೇಮಿಗಳ ಸಮಾಗಮವಾಗಿದ್ದರೂ ಸಹ್ಯಾದ್ರಿಯ ಒಂದು ತೋಟವನ್ನು ಸಂಕೇತ ಸ್ಥಳವಾಗಿ ಆಯ್ದುಕೊಂಡದ್ದು. 'ನಾಲ್ಕೈದು ದಿನ ಬರುವುದಿಲ್ಲ' ಎಂದು ಕಾತ್ಯಾಯಿನಿ ಯಮ್ಮನ ಹತ್ತಿರ ಅವಳ ಮುಖದ ಕಡೆಗೆ ನೋಡದೆ, ನೋಡುವ ಧೈರ್ಯವಿಲ್ಲದೆ ಹೇಳಿ ಕೇಶವ ಪಿಳ್ಳೆ ಕಾರಿನಲ್ಲಿ ಹೋಗಿ ಕುಳಿತುಕೊಂಡರು. ಗೇಟಿನಲ್ಲಿ ಅಶ್ರುಪೂರ್ಣವಾದ

ಮುಖದಿಂದ ಕಾರು ಹೋಗುವುದನ್ನು ಕಾತ್ಯಾಯಿನಿ ನೋಡುತ್ತ ನಿಂತಳು. ಎಲ್ಲಿಗೋ ತನ್ನನ್ನು ಕೈಬಿಟ್ಟು ಹೋಗುತ್ತಿರುವಂತೆ ತೋರಿತು. ಆ ಕಾರು ವೇಗದಿಂದ ಹೋಗುತ್ತಿತ್ತು. ಕೇಶವ ಪಿಳ್ಳೆ ಹೆಂಡತಿ ಗೇಟಿನ ಹತ್ತಿರ ನಿಂತಿದ್ದುದನ್ನು ನೋಡಿದ್ದರು. ಹಿಂದಿರುಗಿ ನೋಡಲು ಎಷ್ಟೋ ಸಲ ಅನ್ನಿಸಿತು. ಆದರೆ ಆ ಮುಖವನ್ನು ಹಿಂದಕ್ಕೆ ತಿರುಗಿಸಲಿಲ್ಲ. ಒಮ್ಮೆಯೂ ದೂರದ ಪಯಣ ಹೋಗುವಾಗ ಹಾಗೆ ಉಂಟಾಗಿರಲಿಲ್ಲ. ತಿರುವಿನಲ್ಲಿ ಕಾರು ಮರೆಯಾಯಿತು. ಕಾತ್ಯಾಯಿನಿಯಮ್ಮ ಸೆರಗಿನಿಂದ ಮುಖ ಮುಚ್ಚಿಕೊಂಡು ಒಳಕ್ಕೆ ಹೋದಳು. ಒಂದು ಶಾಶ್ವತವಾದ ಅಗಲಿಕೆಯೋ ಎನ್ನುವಂತೆ ಜೀವನದಲ್ಲಿ ಮೊಟ್ಟಮೊದಲಾಗಿ ಕಾತ್ಯಾಯಿನಿಯಮ್ಮನಿಗೆ ತೋರಿತು.

ಕೇಶವ ಪಿಳ್ಳೆಯ ಮನಸ್ಸಿಗೆ ಹರ್ಷವಿರಲಿಲ್ಲ. ಆದರೆ ಮನಸ್ಸನ್ನು ಆ ದೂರದ ಹಸುರೆಲೆ ತೋಟದ ಕಡೆ ಎಳೆದುಕೊಂಡು ಹೋಗುತ್ತಿತ್ತು. ಕಾರು ಅದರ ಸರ್ವಶಕ್ತಿಯಿಂದ ಓಡುತ್ತಿತ್ತು. ಅಲ್ಲಿಗೆ ತಲುಪಲು ತಡವಾಯಿತು.

ಲೂಕೋಸನ ಟೀ ತೋಟದ ಮಧ್ಯೆ. ಬಂಡೆಗಳ ಮಧ್ಯೆ ಸುತ್ತಿ ಬಳಸಿ ದಾರಿ. ಬಹುದೂರದ ವನಾಂತರದಲ್ಲಿ ಅದೃಶ್ಯವಾಯಿತು.

ಆ ಕಾಡಿನಲ್ಲಿ ಒಂದು ಬಂಡೆಯ ಮೇಲೆ ಅಂದು ಸಾಯಂಕಾಲ ಕೇಶವ ಪಿಳ್ಳೆಯೂ ತಂಗಮ್ಮನೂ ಸೇರಿದ್ದರು. ಸರಸಸಲ್ಲಾಪಕ್ಕಾಗಿ. ತಂಗಮ್ಮ ಕಾಷಾಯ ವಸ್ತ್ರವನ್ನು ಉಪೇಕ್ಷಿಸಿ ಆಗಿತ್ತು. ಅವಳ ಸಮೃದ್ಧವಾದ ತಲೆಗೂದಲಿಗಿಂತಲೂ ಮಲ್ಲಿಗೆ ಮಾಲೆ ಶೋಭೆಯನ್ನುಂಟುಮಾಡಿದ್ದವು. ಅವಳು ಆಕರ್ಷಕವಾಗಿ ತಿಲಕವನ್ನಿಟ್ಟಿದ್ದಳು. ಬಂಡೆಯ ಮೇಲೆ ಮಲಗಿದ್ದಳು. ಕಾಮಿನಿಯಾಗಿಯೇ ಅಲಂಕರಿಸಿಕೊಂಡು ಬಂದಿದ್ದಳು. ಆ ಕಡೆಯಲ್ಲಿ ಕೆಂಪು ಹೂವಿನಿಂದ ತುಂಬಿ ಬೆಂಕಿಯ ಜ್ವಾಲೆಯಂತಿದ್ದ ಮರದ ಕೊಂಬೆಯ ಮೇಲೆ ಎರಡು ಪಕ್ಷಿಗಳು ಏನೋ ಚಿಲಿಪಿಲಿಗುಟ್ಟುತ್ತಿದ್ದುವು. ತುಟಿ ಉರುಟಾದುವು. ಕತ್ತು. ತಲೆ ಆಡಿಸುತ್ತಿದ್ದುವು ಎಂತಹ ಆಕರ್ಷಣೆ ಅದು ! ಹತ್ತಿರ ಹತ್ತಿರ ಕುಳಿತು ತಂಗಮ್ಮ ಅವನ್ನು ಕೇಶವ ಪಿಳ್ಳೆಗೆ ತೋರಿಸಿದಳು. ಅವಳಿಗೆ ನಾಚಿಕೆಯುಂಟಾಯಿತು. ತಲೆ ತಗ್ಗಿಸಿ. ತುಟಿ ಅರಳಿಸಿ ನಕ್ಕಳು. ಆಗ ಇಬ್ಬರ ತುಟಿಗಳೂ ಒಂದುಗೂಡಿದುವು.

"ಅಯ್ಯೋ ! ಅಯ್ಯೋ ! ಯಾರಾದರೂ ನೋಡಿಯಾರು !" ಅವಳು ಹೇಳುತ್ತಿದ್ದಳು.

ಕೇಶವ ಪಿಳ್ಳೆ ಕೆಲವು ಫೈಲುಗಳನ್ನು ಕಟ್ಟಿಕೊಂಡು ಬಂದಿದ್ದರು. ಆದರೆ ಅವುಗಳಲ್ಲಿ ಒಂದನ್ನೂ ಬಿಚ್ಚಿ ನೋಡಲಿಲ್ಲ. ತೋಟದ ಬಂಗಲೆಯಲ್ಲಿ ಒಂದು ಆರಾಮಕುರ್ಚಿಯಲ್ಲಿ ಅವರು ಕುಳಿತಿದ್ದರು. ಆ ಕುರ್ಚಿಯ ಕೈಮೇಲೆ ಒಂದು ಕಡೆಯಲ್ಲಿ ತಂಗಮ್ಮನೂ ಕುಳಿತಿದ್ದಳು. ಅವರ ಕೈ ಅವಳನ್ನು ಬಳಸಿತ್ತು. ಆಗ ಅವರಿಬ್ಬರೂ ತುಂಬ ಗಹನವಾದ ವಿಷಯಗಳನ್ನು ಮಾತನಾಡುತ್ತಿದ್ದರು. ಆಶ್ರಮದ ವಿಚಾರಗಳನ್ನು ಅವಳು ಹೇಳುತ್ತಿದ್ದಳು. ಅವರು ಕೇಳಿದರು:

"ಹಾಗಾದರೆ ನೀನೀಗ ಆಶ್ರಮದ ಮಾತಾಜಿ ಅಲ್ಲ?"

ಅವಳು ಕೆಳತುಟಿಯನ್ನು ಇಳಿಬಿಟ್ಟು 'ಅಲ್ಲ' ಎಂದು ಹೇಳಿದಳು.

"ನಾನು ಅದು ಬೇಡ ಅಂತ ತೀರ್ಮಾನಿಸಿದೆ. ಪ್ರಭಾವತಿಗೆ ಅದರ ಆಗ್ರಹ ಹಿಡಿದಿತ್ತು. ಆಗಲಿ ಅಂದುಕೊಂಡೆ. ಆದರೆ ಅನಾಥ ಮಂದಿರ ಉಂಟಾಗುವ ವರೆಗೆ ನನ್ನ ಹೆಣ್ಣುಮಕ್ಕಳನ್ನು ಅಲ್ಲಿ ಇರಿಸಿಕೊಳ್ಳಬೇಕು."

ಕೇಶವ ಪಿಳ್ಳೆ ತಂಗಮ್ಮನ ಸ್ಥಿತಿಯನ್ನು ಕೇಳಿ ನಕ್ಕುಬಿಟ್ಟರು. ತಿಳಿವಳಿಕೆಯಿಲ್ಲದ ಹೆಣ್ಣಿನಂತೆ ಅವಳು ಹೇಳಿದಳು:

"ಅದು ಹೇಗೆ ನಾನು ಆಶ್ರಮದ ಮಾತಾಜಿಯಾಗಿರೋದಕ್ಕೆ ಸಾಧ್ಯ? ಒಳ್ಳೆ ಕೆಲಸ! ಆಗಾಗ ಹೀಗೆ ಬರಬೇಡವಾ? ಇನ್ನೂ ಮದರಾಸಿಗೆ ಹೋಗಬೇಕು. ಬೀಚಿಗೆ ಹೋಗಬೇಕು. ಮತ್ತೆ ಹೇಗೆ ಆಶ್ರಮ ಮಾತಾಜಿಯಾಗಿರೋದಕ್ಕೆ ಸಾಧ್ಯ? ಭಜನೆ ನಡೆಯುವಾಗ ಯಾವಾಗಲೂ ಕನ್ಯಾಕುಮಾರಿಯೇ ನೆನಪಾಗುತ್ತೆ."

ತಂಗಮ್ಮ ಹಾಗೆ ಒಂದೊಂದನ್ನೂ ಹೇಳಿಕೊಂಡಿದ್ದಳು. ಆ ಪರಿಸ್ಥಿತಿ ಕೇಶವ ಪಿಳ್ಳೆಯನ್ನು ಚಿಂತಾಮಗ್ನರನ್ನಾಗಿ ಮಾಡಿತು. ಇಷ್ಟು ವರ್ಷವಾಗಿ. ಈ ರೀತಿ ಕೆಲವು ತೊಂದರೆಗಳೆಲ್ಲ ಆಗಿಯಾಯಿತು. ಆದರೂ ಅವಳಿಗೆ ಕಾರ್ಯ ಗೌರವ ಬರಲಿಲ್ಲ. ಇನ್ನು ಏನಾಗಬೇಕು?

ತಂಗಮ್ಮ ಒಂದು ದೊಡ್ಡ ಸುದ್ದಿಯನ್ನು ತಿಳಿಸಿದಳು:

"ಈಗ ಆಶ್ರಮದಲ್ಲಿ ಏನೇನು ನಡೀತಿದೆ ಗೊತ್ತಾ? ಒಳ್ಳೆ ಸ್ವಾರಸ್ಯ! ಪ್ರಭಾವತಿ ಪ್ರಾರ್ಥನಾ ಮಂದಿರದ ಮಧ್ಯೆ ಸ್ವಾಮಿಯ ಫೋಟೋ ಇಟ್ಟಿದ್ದಾಳೆ. ಅದರ ಹತ್ತಿರ ಪ್ರಭಾವತಿಯ ಫೋಟೋ. ಸುತ್ತ ಕೃಷ್ಣನ. ಲಕ್ಷ್ಮಿಯ ಫೋಟೋಗಳು. ತನ್ನನ್ನೇ ತಾನು ಪೂಜಿಸುವುದು. ತನ್ನ ಫೋಟೋದ ಮುಂದೆ ದೀಪ ಉರಿಯೋದನ್ನು ನೋಡಬೇಕು. ಎಂತ ಭಕ್ತಿ ಅಂತ ನಗು ಬರುತ್ತೆ."

ಮತ್ತಷ್ಟು ಆಶ್ರಮದ ವಿಷಯಗಳನ್ನು ತಿಳಿದುಕೊಳ್ಳಲು ಕೇಶವ ಪಿಳ್ಳೆಗೆ ಕೌತುಕ ವುಂಟಾಯಿತು. ಅವರು ಕೇಳಿದರು:

"ಈ ಪ್ರಭಾವತಿ ದೇವಿಗೂ ಸ್ವಾಮಿಗೂ ಹೇಗೆ?"

ತಂಗಮ್ಮ ಹೇಳಿದಳು:

"ಸ್ವಾಮಿಯ ಮುಂದುಗಡೆ ಹೋದರೆ ಸಾಕು. ಅದಕ್ಕೆ ಪ್ರಭಾವತಿಗೆ ಒಳ್ಳೆ ಸಾಮರ್ಥ್ಯ ಇದೆ. ಎಂಥ ಸಾಮರ್ಥ್ಯ ಅಂತ ಗೊತ್ತಾ? ನನಗೆ ಹಾಗೆ ಬೆಡಗುಬಿನ್ನಾಣ ಬರೋದಿಲ್ಲ."

ಕೇಶವ ಪಿಳ್ಳೆ ಅರ್ಥವತ್ತಾಗಿ ಹೇಳಿದರು:

"ಆಗೋದಿಲ್ಲ; ಆಗೋದಿಲ್ಲ. ಅದಲ್ಲವಲ್ಲ ನಮ್ಮ ಸ್ವಭಾವ!"

ಅದು ಅವಳಿಗೆ ಸಿಟ್ಟು ತಂದಿತು.

ಹಾಗೆಯೇ ಅಲ್ಲಿ ಎರಡು ದಿನಗಳು ಕಳೆದುವು. ಒಂದೊಂದು ದಿನವೂ ಹೊಸದಾದ ಎಷ್ಟೋ ಅನುಭವಗಳನ್ನು ಕೇಶವ ಪಿಳ್ಳೆಗೆ ಉಂಟುಮಾಡಿಕೊಟ್ಟಳು. ಇನ್ನಷ್ಟು ಹೊಸ ಅನುಭವಗಳಿಗೋಸ್ಕರ ಮದ್ರಾಸಿನಲ್ಲಿ ಕಳೆಯಬೇಕಾದ ತಾರೀಖುಗಳನ್ನೂ ಅವಳು ತೀರ್ಮಾನಿಸಿದಳು. ಕಡಲ ತೀರ, ತೋಟಗಳು, ಎಲ್ಲವೂ ಆಯಿತು. ಇನ್ನು ಒಂದು ದೊಡ್ಡ ಪಟ್ಟಣದಲ್ಲಿ ಕಳೆಯಬೇಕು. ಅಣೆಕಟ್ಟು ಒಡೆದು ಹೋದ ಒಂದು ಪ್ರವಾಹ ಕೇಶವ ಪಿಳ್ಳೆಯನ್ನು ಸೆಳೆದುಕೊಂಡು ಹೋಗುತ್ತಿತ್ತು. ಆದರೆ ತಮ್ಮನ್ನು ತಾವು ಅರಿಯದೆ ಅವರು ಹಾಗೆ ಹೋಗುತ್ತಿಲ್ಲ. ಮಧ್ಯೆ ಮಧ್ಯೆ ಆ ಗತಿಯನ್ನು ಕುರಿತು ಭಯಪಡುವು ದುಂಟು. ಅವರ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದ ಅವಳ ಹತ್ತಿರ ಒಂದು ದಿನ ನೇರವಾಗಿ ಕೇಳಿದರು:

"ನಿನ್ನ ಉದ್ದೇಶ ಏನು?"

ಆ ಪ್ರಶ್ನೆಯನ್ನು ಆಲೋಚಿಸಿ, ತೀರ್ಮಾನಿಸಿ ಕೇಳಿದುದಲ್ಲ. ಕ್ಲೇಶ ಯಾವುದೂ ಇಲ್ಲದೆ ಹಾಗೆ ಮಲಗಿದ್ದ ಅವಳ ಮುಖವನ್ನು ನೋಡಿದಾಗ ತನಗೆ ತಾನೇ ಒಂದ ಒಂದು ಪ್ರಶ್ನೆ ಅದು. ಕೇಳಿ ಆದ ಮೇಲೆ ಆ ಪ್ರಶ್ನೆ ಕೇಳಬಾರದಾಗಿತ್ತು ಎನ್ನಿಸಿತು. ಕೂಡಲೇ ಕೇಳ ಬೇಕಾಗಿದ್ದ ಪ್ರಶ್ನೆ ಅದು ಎಂದುಕೊಂಡರು. ಕೇಶವ ಪಿಳ್ಳೆ ಉತ್ತರವನ್ನು ನಿರೀಕ್ಷಿಸು ತ್ತಿದ್ದರು. ಒಂದು ಮರುಪ್ರಶ್ನೆಯಾಗಿತ್ತು ಅವರ ಉತ್ತರ. ಅವರ ಪ್ರಶ್ನೆಯನ್ನು ಅವಳು ಕೇಳಿಸಿಕೊಳ್ಳಲಿಲ್ಲ ಎಂದು ತೋರುತ್ತದೆ.

"ಹ್ಞ, ಏನು?"

ತಮ್ಮ ಉದ್ದೇಶವನ್ನು ಪುನಃ ತಿಳಿಸಲು ಅವರು ಹಿಂದುಳಿಯಲಿಲ್ಲ. ಆ ಪ್ರಶ್ನೆ ಯಿಂದ ಅವರು ಪ್ರೀತಿ ಕಡೆಗೆ ತಿರುಗಿದರು. ಆ ಹೊಸ ಲೋಕದ ಅನುಭವಗಳಲ್ಲಿ ಕೇಶವ ಪಿಳ್ಳೆಗೆ ವಿರಕ್ತಿಯುಂಟಾಗಿಲ್ಲ. ಅವರು ಹೇಳಿದರು:

"ಸುಮ್ಮನೆ ಕೇಳಿದೆ ಅಷ್ಟೆ."

"ಏನು ಕೇಳಿದ್ದು?"

"ಏನೂ ಇಲ್ಲ. ಏನೂ ಇಲ್ಲ."

ಹಾಗೆ ಆ ಸಂಬಂಧವನ್ನು ಸ್ಪಷ್ಟಗೊಳಿಸಿಕೊಳ್ಳುವ ಹಂತದಿಂದ ಒಂದು ಬೇರೆ ದಾರಿಗೆ ತಿರುಗಿದ್ದಾಯಿತು. ಅನಂತರ ಒಮ್ಮೆ ತೋಟದ ರೋಡಿನಲ್ಲಿ ಇಬ್ಬನಿ ಉದುರು ತ್ತಿದ್ದ ಒಂದು ಸಾಯಂಕಾಲ ಅವರು ನಡೆಯುತ್ತಿದ್ದರು. ಕೇಶವ ಪಿಳ್ಳೆ ಕೇಳಿದರು:

"ಇದನ್ನು ಯಾರಾದರೂ ತಿಳಿದರೋ?"

"ತಿಳಿದರೆ......... ನಾನು ಆಶ್ರಮ ಮಾತಾಜಿ ಆದರೆ ಅಲ್ಲವಾ?"

ಅವರು ಕೇಳಿದರು: "ಅದು ಮಾತ್ರವಾ? ನನ್ನ ವಿಷಯನೂ ಆಲೋಚಿಸು. ನಾನೊಬ್ಬ ಗೃಹಸ್ಥ; ತಂದೆ."

ತಂಗಮ್ಮ ತಣ್ಣಗಾದಳು. ಆ ಸತ್ಯವನ್ನು ಅವಳು ಆಲೋಚಿಸಿರಲಿಲ್ಲ. ಹಾಗೆ

ಆ ವಾಚಾಳಿ ಮೌನವಾಗುವುದಿಲ್ಲ. ಆ ಶೈತ್ಯದಲ್ಲಿ ನಾಲಗೆ ಹುದುಗಿತು. ಅವರು ಪುನಃ ಕೇಳಿದರು: "ನೀನು ಅದನ್ನು ಜ್ಞಾಪಿಸಿಕೊಂಡದ್ದೇ ಇಲ್ಲವಾ?"

ತಂಗಮ್ಮನ ಉತ್ಸಾಹವೆಲ್ಲ ಅಡಗಿತು. ಒಂದು ಯಥಾರ್ಥತೆಯನ್ನು ಆ ಸ್ತ್ರೀ ಎದುರಿಸುತ್ತಿದ್ದಳು. ಕೇಶವ ಪಿಳ್ಳೆ ಆ ವಿಷಯವನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ:

"ನನ್ನ ಹೆಂಡತಿಗೆ ಇದು ಗೊತ್ತಾದರೆ......... ನನ್ನ ಪಾಡು ಏನಾಗಿರುತ್ತೆ ಅಂತ ಆಲೋಚಿಸು. ಅದು ನಿನಗೆ ಅರ್ಥವಾಗುವುದಿಲ್ಲ"—ಆ ಪ್ರಶ್ನೆಯ ಪೂರ್ಣವಾದ ರೂಪವನ್ನು ತಂಗಮ್ಮನಿಗೆ ತಿಳಿಸಬೇಕೆಂದು ಕೇಶವ ಪಿಳ್ಳೆ ನಿಶ್ಚೈಸಿದರು.

"ನೀನು ಒಬ್ಬಳು ಹೆಂಡತಿಯಾಗಿದ್ದಿದ್ದರೆ ನಿನಗೆ ಅದು ಅರ್ಥವಾಗುತ್ತಿತ್ತು. ಮತ್ತೊಬ್ಬಳ ಜೊತೆಯಲ್ಲಿ ಉತ್ಸಾಹದಿಂದ ಇರುವುದನ್ನು ಕಂಡಾಗ."

ತಂಗಮ್ಮ ನಿರುತ್ಸಾಹಕ್ಕೊಳಗಾದಳು; ಮಂಕಾದಳು. ಅವಳು ದೈನ್ಯದಿಂದ ಕೇಳಿದಳು: "ನನ್ನ ಮೇಲೆ ನಿಮಗೆ ಪ್ರೀತಿಯಿಲ್ಲವಾ?"

ಕೇಶವ ಪಿಳ್ಳೆಯನ್ನು ಕಷ್ಟಕ್ಕೀಡು ಮಾಡಿದ್ದ ಪ್ರಶ್ನೆ ಅದು. ಆ ಪ್ರಶ್ನೆಯನ್ನು ಅವರು ನಿರೀಕ್ಷಿಸಿರಲಿಲ್ಲ. ತಂಗಮ್ಮ ಅದಕ್ಕೆ ನೇರವಾದ ಉತ್ತರವನ್ನು ನಿರೀಕ್ಷಿಸಿರಲಿಲ್ಲವೆಂದು ತೋರುತ್ತದೆ.

"ಅಂದರೆ?"—ಅವಳು ಹೇಳಿದಳು: "ನಾನು ಮೊದಲು ಪ್ರೀತಿಸಿದ್ದು. ನೀವೂ ಮೊದಲು ಪ್ರೀತಿಸಿದ್ದು."

"ಅದು ನಿಜ ತಂಗಮ್ಮ. ಆದರೆ ಆ ಪ್ರೀತಿಗೆ ನೀನು ಯಾವ ಬೆಲೆಯನ್ನೂ ಕೊಡದೆ ಎಷ್ಟೋ ಕಾಲ ಕಳೆದಾಯ್ತು. ಈಗಿನ ಅವಸ್ಥೆ........"

ಕೇಶವ ಪಿಳ್ಳೆ ಪೂರ್ತಿಗೊಳಿಸದೆ ನಿಲ್ಲಿಸಿದರು. ತಂಗಮ್ಮ ಕೇಳಿದಳು: "ಈಗಿನ ಸ್ಥಿತಿ?"

"ವ್ಯತ್ಯಾಸವಾದದ್ದು. ನೀನೊಂದು ಪ್ರತ್ಯೇಕ ಜೀವನಮಾರ್ಗವನ್ನು ಸ್ವೀಕರಿಸಿದೆ. ನೀನು ಸನ್ಯಾಸಿನಿಯಾದೆ. ನಾನು ಒಬ್ಬಳನ್ನು ಮದುವೆ ಮಾಡಿಕೊಂಡೆ. ಅವಳು ನನ್ನನ್ನು ಪ್ರೀತಿಸಿದಳು. ನಾನೀಗ ಅವಳ ಪಾಲಿನವನು. ಅವಳ ಮನುಷ್ಯ ಮಾತ್ರ. ಹಾಗಿರುವಾಗ ಈ ದೃಷ್ಟಿಯಲ್ಲಿ ವಿಷಯಗಳನ್ನು ಕುರಿತು ಆಲೋಚಿಸಬೇಕು."

ತಂಗಮ್ಮ ದೈನ್ಯವಾಗಿ ಕೇಳಿದಳು:

"ಹಾಗಾದರೆ ನನ್ನ ಮೇಲೆ ಪ್ರೀತಿಯಿಲ್ಲವಾ?"

ಅನುಕಂಪದಿಂದಲೇ ಕೇಶವ ಪಿಳ್ಳೆ ಉತ್ತರಿಸಿದರು: "ಉಂಟು. ನಿನ್ನ ಮೇಲೆ ಪ್ರೀತಿಯಿದೆ. ನಿನ್ನನ್ನು ನಾನು ಮರೆಯೋದಿಲ್ಲ. ಕಡೆಗಣಿಸುವುದೂ ಇಲ್ಲ. ನಮ್ಮಿಬ್ಬರ ಸಂಬಂಧ ತುಂಬ ತೊಂದರೆ ಉಂಟುಮಾಡುವಂಥಾದ್ದು ಎನ್ನುವುದು ನೆನಪಿದ್ದರೆ ಸಾಕು."

ಅಂದು ರಾತ್ರಿ ಆ ಬಂಗಲೆಯಲ್ಲಿ ಸಂಭಾಷಣೆ ಪ್ರಾರಂಭವಾಯಿತು. ಆದರೆ ಆ ಸಂಭಾಷಣೆ ಒಂದು ರೀತಿಯಲ್ಲಿ ತುಂಬ ಭಾವಪೂರ್ಣವಾಗಿತ್ತು. ತಂಗಮ್ಮನ

ಅಂತರಂಗದಲ್ಲಿ ಆ ಹಕ್ಕಿನ ಪ್ರಶ್ನೆ ತಲೆ ಎತ್ತಿ ನಿಲ್ಲುವಂತೆ ಮಾಡಿತ್ತು. ಅದಕ್ಕಾಗಿ ವಾದಿಸ ಬೇಕಾದ ಒಂದು ವಾಸನೆಯೂ ಇತ್ತು.

ಅವಳು ಕೇಳಿದಳು: "ನನ್ನನ್ನು ಪ್ರೇಮಿಸಿದ್ದಿರಿ. ನಾನೂ ಪ್ರೇಮಿಸಿದ್ದೆ. ಅಲ್ವಾ?"

ಕೇಶವ ಪಿಳ್ಳೆ ಒಂದು ಸಣ್ಣ ನಗುವಿನೊಂದಿಗೆ ಹೇಳಿದರು: "ನೀನು ಈ ಪ್ರಶ್ನೆ ಯನ್ನೆ ಯಾವಾಗಲೂ ಕೇಳ್ತಾ ಇರ್ತೀಯೆ."

ತಂಗಮ್ಮ ಹೇಳಿದಳು: "ಹೌದು. ಅದನ್ನು ಮಾತ್ರ ನಾನು ಕೇಳೋದು."

"ನನ್ನ ಉತ್ತರ ಇದು. ನೀನು ಎಲ್ಲವನ್ನೂ ಕಳೆದು ಕೈತೊಳೆದುಕೊಂಡವಳು."

ಅದನ್ನು ಹೇಳುವಾಗ ವಿವಾಹ ಎನ್ನುವ ವಾಸ್ತವ ಸಂಗತಿ ಅವರ ಮನಸ್ಸಿನಲ್ಲಿತ್ತು.

ತಂಗಮ್ಮ ಹಿಂದೆ ಎಂದೂ ಇಲ್ಲದೇ ಇದ್ದಂತಹ ಗಾಂಭೀರ್ಯದಿಂದ ಹೇಳಿದಳು: "ನಾನು ಕೆಲವು ವಿಷಯಗಳನ್ನ ತೆರೆದು ಹೇಳೋದಕ್ಕೆ ಹೊರಟಿದ್ದೀನಿ. ಯಾವುದನ್ನೂ ತಪ್ಪು ತಿಳಿದುಕೊಳ್ಳಬೇಡಿ."

"ಇಲ್ಲ" ಎಂದು ಕೇಶವ ಪಿಳ್ಳೆ ಹೇಳಿದರು.

ಅವಳು ಯಾವಾಗ ಬೇಕಾದರೂ ತೆರೆದು ಹೇಳಬಹುದು. "ಹಾಗಿದ್ದರೆ ನಾನೊಂದನ್ನ ಕೇಳ್ತೀನಿ. ಅಂದು ಯಾವಾಗಲಾದರೂ ನಾನು ಆಲೋಚನೆ ಮಾಡಿದ್ದಿದ್ದರೆ, ನಿಮ್ಮ ಹೆಂಡತಿ ಪಾರ್ಕ್ ವ್ಯೂನಲ್ಲಿ ವಾಸ ಮಾಡ್ತಿದ್ದರಾ?"

ಅದು ಒಂದು ದೊಡ್ಡ ವಿಷ ತುಂಬಿದ ಪ್ರಶ್ನೆಯಾಗಿತ್ತು. ಅವರು ಅದಕ್ಕೊಂದು ಭಾಷ್ಯವನ್ನು ನೀಡಿದರು: "ನನ್ನ ಹೆಂಡತಿಯ ಮೇಲೆ ನಿನಗೆ ದ್ವೇಷ. ನೀನು ಪಾರ್ಕ್ ವ್ಯೂನಲ್ಲಿ ವಾಸ ಮಾಡಬೇಕಾಗಿತ್ತು ಅಂತ ಆಲೋಚನೆ ಮಾಡಿದ್ದ ಹಾಗೆ ನೀನು ಕೇಳ್ತಿದ್ದೀಯೆ. ಹೋಗಲಿ. ಒಪ್ಪಿದೆ. ನಾನು ಉತ್ತರ ಹೇಳ್ತೀನಿ: ಇಲ್ಲ. ಆ ಮೇಲೆ?"

ತಂಗಮ್ಮನಿಗೆ ಮತ್ತೆ ಕೇಳಲು ಏನೂ ಇಲ್ಲದಂತಾಯಿತು. ಕೇಶವ ಪಿಳ್ಳೆ ಹೇಳಿದರು:

"ನನ್ನ ಹೆಂಡತಿ ಪಾರ್ಕ್ ವ್ಯೂನಲ್ಲಿ ವಾಸ ಮಾಡೋದನ್ನ ಇಷ್ಟಪಡೋದಿಲ್ಲ. ಅಲ್ಲಿ ವಾಸ ಮಾಡುವುದಕ್ಕೆ ಆಸೆಪಟ್ಟವಳೂ ಅಲ್ಲ."

ಉಸಿರು ಕಟ್ಟಿದ ವಿಷಮತೆಯಿಂದ ತಂಗಮ್ಮ ಹೇಳಿದಳು:

"ಹಾಗೇನೇ ನನ್ನನ್ನು ಹಾಳು ಮಾಡಿದ್ದು."

ಸಮಚಿತ್ತತೆಯಿಂದ ಕೇಶವ ಪಿಳ್ಳೆ ಹೇಳಿದರು:

"ಅಲ್ಲ ತಂಗಮ್ಮ, ಅಲ್ಲ. ನಾನಲ್ಲ."

ಆ ಹಳೆಯ ವಾದದ ಮುಖವನ್ನೇ ತಂಗಮ್ಮ ಆಗಲೂ ಮುಂದಿಟ್ಟಿದ್ದು. ಅವಳನ್ನು ಬಯ್ಯಲಿಲ್ಲ. ನೇರವಾದ ದಾರಿಯಲ್ಲಿ ನಡೆಸಲಿಲ್ಲ.. ಅಡ್ಡಿಪಡಿಸಲಿಲ್ಲ......... ಹಾಗೆ ಮುಂದುವರಿಯಿತು ಆ ದೂರು.

"ಹೇಗಾದರೂ ಹಾಳಾಗಲಿ ಇವಳು ಅಂದುಕೊಂಡಿರಿ."

ಆ ಮಾತುಕತೆ ಮುಗಿಯುವುದಿಲ್ಲ ಎನ್ನಿಸಿತು ಕೇಶವ ಪಿಳ್ಳೆಗೆ. ಸ್ಪಷ್ಟವಾದ ಒಂದು ಅಭಿಪ್ರಾಯ ಆ ಬಂಧುವನ್ನು ಕುರಿತು ತಂಗಮ್ಮನಿಗೆ ಅತ್ಯಾವಶ್ಯಕವಾಗಿತ್ತು. ಅದಕ್ಕೋಸ್ಕರ ಅವರು ಕೇಳಿದರು: "ಅದೆಲ್ಲ ಸರಿ. ನಿನ್ನ ಉದ್ದೇಶ ಏನು?"

"ನೀವು ನನ್ನವರು."

ಸ್ವಲ್ಪ ಹೊತ್ತು ಕಳೆದು ಸ್ವಲ್ಪ ಧೈರ್ಯವನ್ನು ತಂದುಕೊಂಡು ಕೇಶವ ಪಿಳ್ಳೆ ಹೇಳಿದರು:

"ಅಲ್ಲ, ನಾನು ಕಾತ್ಯಾಯಿನಿಯ ಮನುಷ್ಯ." ಎಂದು ಅವರು ಹೇಳಿದರು: "ನಿನಗೆ ಅದನ್ನು ನಿಷೇಧಿಸುವುದಕ್ಕೆ ಸಾಧ್ಯವೆ?""

ನಿರಾಶ್ರಯತ್ವದಿಂದ ತಂಗಮ್ಮ ಕೇಳಿದಳು:

"ಮತ್ತೆ ನಾನು.........?"

ಕೇಶವ ಪಿಳ್ಳೆ ಸಹಾನುಭೂತಿಯ ಧ್ವನಿಯಲ್ಲಿ ಹೇಳಿದರು: "ಹೇಳ್ತೀನಿ ಹೇಳ್ತೀನಿ. ನೀನು ನನ್ನ ಹತ್ರ ಬಂದದ್ದು—ನಿನಗೆ ಯಾರೂ ಇಲ್ಲ, ಏನೂ ಇಲ್ಲ ಅಂತ. ಹಾಗೆ ನೀನು ಅದಕ್ಕಾಗಿ ಬೇಸರಪಡಬೇಡ. ನಿನಗೆ ನಾನಿದ್ದೇನೆ. ನನಗೆ ನಿನ್ನ ಮೇಲಿನ ಋಣ ದಿಂದಾಗಿ ನಿನಗೆ ಏನೂ ಇಲ್ಲದೆ ಹೋಗೋದಿಲ್ಲ."

ತಂಗಮ್ಮನಿಗೆ ಅದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕೆನ್ನಿಸಿತು. ಕೇಶವ ಪಿಳ್ಳೆ ಹೇಳಿದರು:

"ನಾನು ಅದನ್ನು ತೀರ್ಮಾನಿಸಿದ್ದೇನೆ. ಊಟಿ ಪರ್ವತದ ಕಾಡಿನಲ್ಲಿ ಟೀ ತೋಟ ದಲ್ಲಿ ನಿನಗೆ—ಹೆಚ್ಚು ಕಡಿಮೆ ಮುನ್ನೂರು ಎಕರೆ ಇದೆ—ಅದು ನಿನ್ನದು. ಆದರೆ ಒಂದು ವಿಷಯ ನೆನಪಿನಲ್ಲಿಟ್ಟುಕೊಳ್ಳಬೇಕು. ಅದನ್ನು ನಿನಗೆ ತೋರಿದ ಹಾಗೆ ಬರೆದು ಕೊಡೋದಾಗಲೀ, ಮಾರೋದಾಗಲೀ ಮಾಡೋದಕ್ಕೆ ಸಾಧ್ಯವಿಲ್ಲ. ಅದರ ಆದಾಯದಿಂದ ನೀನೂ ನಿನ್ನ ಬಡ ಹುಡುಗಿಯರೂ ಸುಭಿಕ್ಷವಾಗಿ ಜೀವಿಸ ಬಹುದು."

ತಂಗಮ್ಮ ವಿಷಯವನ್ನು ಸರಿಯಾಗಿ ಗ್ರಹಿಸಿ ಕೇಳಿದಳು.

"ಹಾಗಾದರೆ ನಾನು ಬೇಗ ಒಂದು ಮಗು ಪಡೆಯಬೇಕು."

"ಹಾಗೇ ಅಂತ ಇಟ್ಟುಕೋ. ಆದರೆ ಆ ಸ್ಥಿತಿಯಲ್ಲಿಲ್ಲ. ಯಾವಾಗ ನಿನಗೆ ತೊಂದರೆಯುಂಟಾಗುತ್ತೋ ಆಗ ಸಹಾಯಕ್ಕೆ ನಾನಿರ್ತೇನೆ."

"ಆಗ........." ಎಂದು ಕೇಳಿ ತಂಗಮ್ಮ ನಿಲ್ಲಿಸಿದಳು. ಕೇಶವ ಪಿಳ್ಳೆ ಅವಳ ಮನಸ್ಸಿನಲ್ಲಿದ್ದುದನ್ನು ಅರ್ಥಮಾಡಿಕೊಂಡಂತೆ ಹೇಳಿದರು:

"ಹೌದು. ಅದು ಸಂಬಂಧ. ಕನ್ಯಾಕುಮಾರಿಯಲ್ಲಿ ನೀನು ನನ್ನನ್ನು ಬಯಸಿ ಬಂದೆ."

ನಗುತ್ತಾ ಅವರು ಹೇಳಿದರು:

"ಇನ್ನು ಮೇಲೂ ನೀನು ಹಿಂದಿನ ಹಾಗೆ ಒದೆದು ಹೊರಗೆ ತಳ್ತೀಯೆ. ನಾನು ನನ್ನ ಹೆಂಡತಿಯನ್ನು ನೆನಸಿಕೊಳ್ಳುವಾಗ ನಿನ್ನ ಮುಂದುಗಡೆ ನಾನು ಪ್ರಯೋಜನ ಇಲ್ಲದವನಾಗ್ತೇನೆ. ನೀನು ನನ್ನನ್ನು ಬಯ್ತೀಯೆ."

ನಿಜವಾದ ಸಂಶಯದಿಂದ ತಂಗಮ್ಮ ಕೇಳಿದಳು: "ಹಾಗಾದರೆ ಕನ್ಯಾಕುಮಾರಿಯಲ್ಲೂ ಇಲ್ಲೂ ........."

ಕೇಶವ ಪಿಳ್ಳೆ ಹೇಳಿದರು: "ಅದೊಂದು ದೌರ್ಬಲ್ಯ."

"ನನಗೆ ನೀವು ಪುನಃ ಹುಚ್ಚು ಹಿಡಿಸಿದಿರಿ."

"ನೀನು ನನಗೂ ಹಿಡಿಸಿದೆ. ಅದು ಹೋಗಲಿ. ಪ್ರಾಯವೂ ಪಕ್ವತೆಯೂ ಬಂದ ಮೇಲೆ ಜೀವನದಲ್ಲಿ ಕೆಲವೇ ದಿನಗಳ ಆಯುಷ್ಯ ಇರೋದು."

ಅತ್ಯುತ್ಕಟವಾದ ಮನೋವಿಕಾರದಿಂದ ತಂಗಮ್ಮ ಹೇಳಿದಳು: "ಅಯ್ಯೋ ದೇವರೇ ! ನಿಮ್ಮನ್ನು ನನ್ನೊಂದಿಗೆ ಕಟ್ಟಿಹಾಕಿಕೊಳ್ಳುವುದಕ್ಕೆ ಒಂದು ಸೂತ್ರ ಇದ್ದಿದ್ದರೆ !"

ಕೇಶವ ಪಿಳ್ಳೆ ಕೇಳಿದರು: "ಸೂತ್ರವಾ?"

ವೇದನೆಯಿಂದ ತಂಗಮ್ಮ ಹೇಳಿದಳು:

"ಹೌದು; ಹಗ್ಗ. ನನಗೂ ಒಂದು ಮಗು ಇದ್ದಿದ್ದರೆ............!"

## [39]

# ಭರವಸೆಯಿಲ್ಲದ ನಂಬಿಕೆಗಳು

ಈಟ್ಟಿಕಾಡು ಮಲೆಯ ಒಂದು ತಪ್ಪಲು ಪ್ರದೇಶವನ್ನು ರಾಷ್ಟ್ರದ ಸ್ವಾತಂತ್ರ್ಯ ಸಮರದಲ್ಲಿ ಯಾತನೆ ಅನುಭವಿಸಿದವರ ಹೆಸರಿನಲ್ಲಿ ಹಂಚಲಾಯಿತು. ರಾಮನ್ ಇಳಯದನ ಹೆಸರಿನಲ್ಲೂ ಐದು ಎಕರೆ ಹಂಚಲಾಯಿತು. ಆದರೆ ಭೂಮಿ ದೊರೆಯ ಲಿಲ್ಲ. ನಾಲ್ಕು ನೂರು ರೂಪಾಯಿ ಸಿಕ್ಕಿದ್ದು, ನಾರಾಯಣನ್ ನಾಯರ ಮೂಲಕ. ಹಾಗೆಯೇ ಬೇರೆ ಕೆಲವರಿಗೂ ಸಿಕ್ಕಿತು.

ಈಟ್ಟಿಕಾಡಿನ ಮರವನ್ನಿಡೀ ಕತ್ತರಿಸುವ ವರೆಗೆ ಹೈಡ್ರೋ ಇಲೆಕ್ಟ್ರಿಕ್ ಪ್ರಾಜೆಕ್ಟ್‌ನ ಒಂದು ಕೆಲಸವೂ ನಡೆಯಲಿಲ್ಲ. ರಾಜ್ಯಕ್ಕೆ ದೊಡ್ಡ ವರಮಾನ ಸಿಕ್ಕುತ್ತಿದ್ದರೂ. ಆ ಪರ್ವತವಿಡೀ ಅತ್ಯುತ್ತಮ ಟೀ ತೋಟವಾಯಿತು. ಅದರ ಮಾಲೀಕರು ಕಾಂಗ್ರೆಸ್ ಪ್ರೆಸಿಡೆಂಟ್ ಲೂಕೋಸ್. ಮಂತ್ರಿ ಮ್ಯಾಥ್ಯು. ಅನಂತರ ಒಬ್ಬನೋ ಇಬ್ಬರೋ ಹಣ ವಂತರು.

ಶಂಕರ ಪಿಳ್ಳೆಗೆ ಏನೂ ಸಿಕ್ಕಲಿಲ್ಲ. ಹಾಗೆ ಏನೂ ಸಿಕ್ಕದ ಕೆಲವರಿದ್ದಾರೆ. ಅವರೆಲ್ಲ ಜೈಲಿಗೆ ಹೋದವರೂ ಏಟು ತಿಂದವರೂ ಆಗಿದ್ದರು. ವಿವರ ತಿಳಿದಾಗ. ಸ್ವಾತಂತ್ರ್ಯ ಹೋರಾಟದಲ್ಲಿ ಯಾವ ಶ್ರಮವನ್ನೂ ವಹಿಸದವರೆಷ್ಟೋ ಜನರ ಹೆಸರಿನಲ್ಲಿ ಭೂಮಿ ದೊರೆಯುತ್ತಿತ್ತು.

ಶಂಕರ ಪಿಳ್ಳೆಗೆ ಇದನ್ನು ಸಹಿಸಲು ಸಾಧ್ಯವಾಗಲಿಲ್ಲ. ಅವನೊಬ್ಬ ಹುಚ್ಚ ನಂತಾದ. ಏನು ಮಾಡಬೇಕೆಂದು ತಿಳಿಯದು. ಯಾವಾಗಲೂ ಸರ್ಕಾರಕ್ಕೆ ಅರ್ಜಿ ಬರೆದುಕೊಳ್ಳುತ್ತಿದ್ದ. ಅದೊಂದು ನಂಬಿಕೆ ಅವನಿಗಿತ್ತು. ಇಂದು ತನ್ನ ಕಷ್ಟಗಳನ್ನೆಲ್ಲ ವಿವರಿಸಿದ ಅರ್ಜಿಯಾಗಿದ್ದರೆ ನಾಳೆ ಆ ಕಳ್ಳತನವನ್ನು ವಿವರಿಸಿ ಬಯ್ದುದ್ದಾಗಿರುತ್ತದೆ. ನಾಡಿದ್ದು ಅನುಭವಿಸಿದ ಕಷ್ಟದ ವಿವರಗಳಾಗಿರುತ್ತದೆ. ಯಾವುದಕ್ಕೂ ಯಾವ ಉತ್ತರವೂ ಇಲ್ಲದ ಸ್ಥಿತಿಯನ್ನು ಹೆಚ್ಚು ದಿನ ಶಂಕರ ಪಿಳ್ಳೆಗೆ ಸಹಿಸಲು ಸಾಧ್ಯವಾಗಿರಲಿಲ್ಲ. ಒಂದು ರೀತಿಯ ಆಕ್ರೋಶವುಂಟಾಗುತ್ತಿತ್ತು. ಕಂಡಕಂಡವರ ಹತ್ತಿರವೆಲ್ಲ ಆ ಅಧರ್ಮ ವನ್ನು ಕುರಿತು ಹೇಳುತ್ತಿದ್ದ. ಯಾರಿಗೆ ತಾನೆ ಏನು ಹೇಳಲು ಸಾಧ್ಯವಿತ್ತು? ಕೆಲವರು ಹೇಳಿದರು—ತಿರುವನಂತಪುರಕ್ಕೆ ಹೋಗಿ ಎಲ್ಲವನ್ನೂ ಹೇಳಿಕೊಳ್ಳಬೇಕು ಎಂದು. ಮತ್ತೆ ಕೆಲವರು ಸೆಕ್ರೆಟರಿಯೇಟ್‌ನಲ್ಲಿ ನಿರಾಹಾರ ಸತ್ಯಾಗ್ರಹ ಮಾಡುವಂತೆ ಸಲಹೆ ಮಾಡಿದರು. ಅಂತು ಆ ಸ್ವಾತಂತ್ರ್ಯ ವೀರ ಏನಾದರೊಂದನ್ನು ಮಾಡಿಯೇ ತೀರಬೇಕು. ಇಲ್ಲದಿದ್ದಲ್ಲಿ ಆ ಬಡಪಾಯಿ ಕಷ್ಟಕ್ಕೊಳಗಾಗುತ್ತಾನೆ.

ತುಂಬ ಕಷ್ಟಪಟ್ಟು ಮೂರು ನಾಲ್ಕು ರೂಪಾಯಿ ಜೊತೆ ಮಾಡಿಕೊಂಡು ತಿರುವನಂತಪುರಕ್ಕೆ ಹೋಗಬೇಕೆಂದು ತೀರ್ಮಾನಿಸಿದ. ಈ ಅಕ್ರಮಕ್ಕೆ ಏನಾದರೂ ಪರಿಹಾರವನ್ನು ಕಂಡುಹಿಡಿಯದೆ ಹಿಂದಿರುಗಿ ಬರುವುದಿಲ್ಲವೆಂದು ಸಕಲರ ಹತ್ತಿರವೂ ಹೇಳುತ್ತಿದ್ದ. ರಾಮನ್ ಇಳಯಿದು ಮಾತ್ರ ಅದರ ಕಷ್ಟ ಸುಖ ಕುರಿತು ಪ್ರಶ್ನಿಸಿದ:

"ಶಂಕರ ಪಿಳ್ಳೆ, ಹೇಗೆ ಪರಿಹಾರ ಕಂಡುಹಿಡಿಯೋದು?"

ಶಂಕರ ಪಿಳ್ಳೆಗೆ ಸಿಟ್ಟು ಬಂದಿತು: "ನೀನು ಭಿಕ್ಷೆ ಬೇಡಿ ಕಾಸು ಕೂಡಿಸ್ತಿದ್ದೀಯೆ. ಅದಕ್ಕೆ ನೀನು ಹಾಗೆ ಹೇಳೋದು !"

ರಾಮನ್ ಇಳಯಿದನಿಗೆ ಸಿಟ್ಟು ಬರಲಿಲ್ಲ.

"ಹಾಗಾದರೆ ನೀನು ಹೋಗಿ ನೋಡು. ಗೆದ್ದರೆ ನನಗೂ ಸಂತೋಷ."

ಮುಖ ಕೊಕ್ಕರಿಸಿಕೊಂಡು ಶಂಕರ ಪಿಳ್ಳೆ ಕ್ಷಮಾಪಣೆ ಮಾಡಿದ: "ತುಂಬ ಸಂತೋಷ."

ಆ ರೀತಿಯಲ್ಲಿ ಶಂಕರ ಪಿಳ್ಳೆ ತಿರುವನಂತಪುರಕ್ಕೆ ಹೋಗುವುದಕ್ಕಾಗಿ ಕೊಟ್ಟಾಯದಿಂದ ಹೊರಟ. ಉಟ್ಟಿದ್ದ ಬಟ್ಟೆಯಲ್ಲದೆ ಎರಡು ಮುಂಡು, ಎರಡು ಷರಟು, ಒಂದು ಹೊದಿಕೆ, ಎರಡು ಟವಲ್ ಇದ್ದ ಒಂದು ಗಂಟು. ಜೊತೆಗೆ ಒಂದು ಔಷಧಿ ಶೀಷೆ—ಇಷ್ಟೂ ಇದ್ದುವು. ಒಂದು ದೊಡ್ಡ ಶಾಪವನ್ನು ಹೋಗಲಾಡಿಸುವ ಮಹಾ ಸಂಗ್ರಾಮಕ್ಕೆ ಆತ ಒಂಟಿಯಾಗಿ ಹೊರಟಿದ್ದ. ಒಬ್ಬನೇ ಒಬ್ಬ ಬೀಳ್ಕೊಡುವುದಕ್ಕಿರಲಿಲ್ಲ. ತನ್ನ ಉದ್ದೇಶವನ್ನು ವಿಶದೀಕರಿಸಿ ಒಂದು ಭಾಷಣವನ್ನೂ ಮಾಡಲಿಲ್ಲ. ಆ ಯೋಧನಿಗೆ ಅವನಂತೆಯೇ ಇದ್ದ ಮತ್ತೊಬ್ಬ ಯೋಧ ಮಥಾಯ್ ಹೂಮಾಲೆ ಹಾಕಿದ. ಮಥಾಯ್ ಒಂಟಿಗಾಲಿನವನು. ಎಲ್ಲರ ಹತ್ತಿರ ಹೇಳಿದರೂ ಹೊರಟಾಗ ಬೀಳ್ಕೊಡುವುದಕ್ಕೆ ಯಾರೂ ಬರಲಿಲ್ಲ. ಮಥಾಯ್‌ಗೆ ನಡೆಯುವುದಕ್ಕಾಗುತ್ತಿರಲಿಲ್ಲ. ಅವನ ಮನೆಯಲ್ಲಿದ್ದ ಎಲುಬು ಚರ್ಮ ಮಾತ್ರವಾಗಿದ್ದ ಅವನ ನಾಯಿ ಸ್ವಲ್ಪ ದೂರ ಬಂದು ಒಂದು ಫರ್ಲಾಂಗ್ ಕಲ್ಲಿಗೆ ಕಾಲು ಎತ್ತಿ ಮೂತ್ರ ಹೊಯ್ದು ಹತ್ತಿರವಲ್ಲಿದ್ದ ಮನೆಯ ಕಡೆಗೆ ಓಡಿ ಹೋಯಿತು. ಹಾಗೆ ಆ ಯೋಧ ತನ್ನ ದೃಢ ನಿರ್ಧಾರವನ್ನುವ ಆಯುಧವನ್ನು ಎತ್ತಿ ಹಿಡಿದುಕೊಂಡು ಧರ್ಮಸಂಗ್ರಾಮಕ್ಕೆ ಹೊರಟ.

ಕೊಟ್ಟಾಯದಿಂದ ಕೊಲ್ಲಕ್ಕೆ ಹೋಗುವ ಬೋಟಿನಲ್ಲಿ ಶಂಕರ ಪಿಳ್ಳೆ ಹೊರಟ. ಕರುಮಾಡಿಯಿಂದ ಮತ್ತೊಬ್ಬ ಆ ಬೋಟಿಗೆ ಹತ್ತಿದ. ಐವತ್ತೈದರ ಮೇಲೆ ವಯಸ್ಸಾಗಿದ್ದ ಒಬ್ಬಾತ. ಆತನ ಕೈಯಲ್ಲೂ ಒಂದು ಸಣ್ಣ ಗಂಟಿತ್ತು. ಅವನು ಶಂಕರ ಪಿಳ್ಳೆಯ ಹತ್ತಿರ ಬಂದು ಕುಳಿತ. ಅವರು ಪರಸ್ಪರ ಮಾತನಾಡಲು ಹೆಚ್ಚು ಸಮಯ ಬೇಕಾಗಿ ಬರಲಿಲ್ಲ. ಶಂಕರ ಪಿಳ್ಳೆಯೇ ಸಂಭಾಷಣೆಗೆ ಪ್ರಾರಂಭಿಸಿದ್ದು:

"ಎಲ್ಲಿಗೆ?"

"ತಿರುವನಂತಪುರಕ್ಕೆ. ನೀವೋ?"

"ನಾನೂ ತಿರುವನಂತಪುರಕ್ಕೆ."

"ಹಾಗಾದರೆ ನಾವಿಬ್ಬರೂ ಒಂದೇ ಕಡೆಗೆ. ಜೊತೆಗೆ ಒಬ್ಬರು ಸಿಕ್ಕಿದ ಹಾಗಾಯಿತು."

ಶಂಕರ ಪಿಳ್ಳೆಗೆ ಅದರಲ್ಲಿ ಒಂದು ಸಂತೋಷವಿತ್ತು. ಕೃಷ್ಣನ್—ಅದು ಆ ಐವತ್ತೈದು ವರ್ಷದವನ ಹೆಸರು—ಸೊಂಟದಿಂದ ವೀಳ್ಯದೆಲೆ ಚೀಲ ತೆಗೆದ.

"ವೀಳ್ಯ ಹಾಕ್ತೀರಾ?"

ಶಂಕರ ಪಿಳ್ಳೆ ಹೇಳಿದ: "ಇಲ್ಲ, ನಾನು ವೀಳ್ಯ ಹಾಕೋದಿಲ್ಲ. ನಶ್ಯ, ಬೀಡಿ ಯಾವುದನ್ನೂ ಉಪಯೋಗಿಸೋದಿಲ್ಲ."

"ಒಂದು ರೀತಿಯಲ್ಲಿ ಅದು ಒಳ್ಳೆಯದು" ವೀಳ್ಯದೆಲೆ ಹಾಕಿಕೊಂಡಿದ್ದ ಕೃಷ್ಣನ್ ಕೇಳಿದ:

"ತಿರುವನಂತಪುರದಲ್ಲಿ ಏನು ಕೆಲಸ? ಬೇಕಾದವರು ಯಾರಾದರೂ ತಿರುವನಂತಪುರದಲ್ಲಿದ್ದಾರಾ?"

ತನ್ನ ಪ್ರಯಾಣದ ಉದ್ದೇಶವನ್ನು ತಿಳಿಸಲು ಶಂಕರ ಪಿಳ್ಳೆ ಕಾತರದಿಂದಿದ್ದ. ಆಗ ಇಂತಹ ಒಂದು ಪ್ರಶ್ನೆ ಬಂದಿತು.. ಆತ ಹೇಳಿದ: "ಓ! ಯಾರೂ ಇಲ್ಲ. ಒಬ್ಬ ಮನುಷ್ಯನೂ ಇಲ್ಲ. ನನಗೆ ಪರಿಚಯವಿರುವವರಲ್ಲಿ ಸೆಂಟ್ರಲ್ ಜೈಲಿನಲ್ಲಿ ಯಾರಾದರೂ ಒಬ್ಬಿಬ್ಬರು ವಾರ್ಡರ್‌ಗಳಿರಬಹುದು. ಅವರಲ್ಲದೆ ಬೇರೆ ಯಾರೂ ಇಲ್ಲ. ನಾನೊಂದು ಧರ್ಮಯುದ್ಧಕ್ಕೆ ಹೋಗ್ತಿದ್ದೀನಿ."

ಕೃಷ್ಣನ್‌ಗೆ ಕುತೂಹಲ ಹೆಚ್ಚಿತು. ಯುದ್ಧಕ್ಕೆ ಹೋಗುತ್ತಿದ್ದೇನೆ ಎನ್ನುವುದನ್ನು ಕೇಳಿ. ಅದರ ಉದ್ದೇಶ ಏನು ಎಂದು ಕೃಷ್ಣನ್ ಕೇಳಬೇಕಾಗಿ ಬರಲಿಲ್ಲ. ಶಂಕರ ಪಿಳ್ಳೆ ಎಲ್ಲವನ್ನೂ ಒಂದೇ ಸಮನೆ ಹೇಳತೊಡಗಿದ. ಎಷ್ಟು ಜನರ ಹತ್ತಿರ ಎಷ್ಟೆಷ್ಟು ಸಲ ಅವನು ಅದನ್ನು ಹೇಳಿರಬಹುದು? ಇಷ್ಟು ವಿಷಯವನ್ನೆಲ್ಲ ಕೇಳಿದಾಗ ಕೃಷ್ಣನೂ ತನ್ನ ಪ್ರಯಾಣದ ಉದ್ದೇಶವನ್ನು ಹೇಳದಿರಲು ಸಾಧ್ಯವಾಗದೆ ಹೋಯಿತು, ತಾನು ಏತಕ್ಕೆ ತಿರುವನಂತಪುರಕ್ಕೆ ಹೋಗುವುದೆಂದು ಶಂಕರ ಪಿಳ್ಳೆ ಕೇಳಿಲ್ಲದಿದ್ದರೂ.

"ನನ್ನ ಮಗನೂ ಒಬ್ಬ ಕಾಂಗ್ರೆಸ್ಸಿನವನಾಗಿದ್ದ. ಅಂದರೆ ನಮ್ಮೂರಿನ ಕಾಂಗ್ರೆಸ್ಸಿನವರ ವಾಲಂಟೀಯರ ಮುಂದಾಳು. ಅವನು ಒಂದು ಸಿಳ್ಳು ಹಾಕಿದರೆ ಅವರು ಬರಬೇಕು. ಆಲಪ್ಪುಳಕ್ಕಿಂತ ಸ್ವಲ್ಪ ತೆಂಕಲಾಗಿರೋ ಮನೆ. ಪರೂರು ಅಂತ ಹೆಸರು. ಅವನಿಗೆ ತೆಂಗಿನ ನಾರಿನ ಆಫೀಸಿನಲ್ಲಿ ಕೆಲಸ. ಹಾಗೇ ಇದ್ದಾಗ ಇಪ್ಪತ್ತೆರಡನೆ ವಯಸ್ಸಿನಲ್ಲಿ ಕಾಯರ್ ಆಫೀಸಿನವರನ್ನೆಲ್ಲ ಕರೆದುಕೊಂಡು ಆಯುಧಗಳನ್ನು ಹಿಡಿದುಕೊಂಡು ಒಂದು ದೊಡ್ಡ ಮೆರವಣಿಗೆ ಹೋಗುವುದೆಂದು ತೀರ್ಮಾನಿಸಿದರು. ಪೋಲೀಸಿನವರು ಬಂದರೆ ಇರಿದು ಕೊಲ್ಲಬೇಕೆಂದು ಹೇಳಿದರು. ಕಾಂಗ್ರೆಸಿನವರು ಅದು ರಹಸ್ಯವಾಗಿ ನಡೆಯಬೇಕು ಅಂತ ಹೇಳಿದರು. ಪತ್ರಿಕೆಗಳಲ್ಲಿ ನೀವು ಓದಿರಬಹುದು. ಆ ಸ್ಥಳಗಳ ಹೆಸರು ಪುನ್ನಂಬ್ರ, ವೈಲಾರ್ ಅಂತ.

ಶಂಕರ ಪಿಳ್ಳೆಗೆ ಅರ್ಥವಾಯಿತು. ಅದನ್ನು ಕುರಿತು ಶಂಕರ ಪಿಳ್ಳೆಗೆ ಹೇಳದಿರಲು ಸಾಧ್ಯವಿಲ್ಲದಾಯಿತು: "ಮಹಾತ್ಮಾಜೀಯವರು ಹಿಂಸಾತ್ಮಕ ಚಳುವಳಿಗಳು ಬೇಡವೆಂದು ತೀರ್ಮಾನಿಸಿದ ಹೋರಾಟವಲ್ಲವೆ? ಅದು ತಪ್ಪಾಗಿಹೋಯಿತು."

ಕೃಷ್ಣನಿಗೆ ಅಭಿಪ್ರಾಯ ವ್ಯತ್ಯಾಸವಿಲ್ಲ. ಆತ ಹೇಳಿದ: "ತಪ್ಪು. ತಪ್ಪು. ಆದರೆ ಕಾಂಗ್ರೆಸಿನವರು ಮಾತಾಡಲಿಲ್ಲ. ಆ ಹೊತ್ತಿನಲ್ಲಿ ನನ್ನ ಮಗ ಪುನ್ನಂಬ್ರ ಗೋಲಿಬಾರಿನಲ್ಲಿ ಸತ್ತ."

ಇನ್ನು ಮುಂದೆ ಆತ ಏತಕ್ಕೆ ತಿರುವನಂತಪುರಕ್ಕೆ ಹೋಗುತ್ತಿರುವುದು ಎನ್ನುವ ಕಥೆ ಹೇಳುತ್ತಿರುವುದು—"ನನ್ನ ಮಕ್ಕಳು ಇಬ್ಬರು. ಒಬ್ಬ ಅವನು. ಮತ್ತೊಬ್ಬಳು ಮಗಳು. ಹೆಂಡತಿ ತುಂಬ ಹಿಂದೆ ತೀರಿಕೊಂಡಳು. 1918ನೆ ಇಸವಿಯಲ್ಲಿ ಒಂದು ಕಾಲರಾ ಬಂದಿತ್ತಲ್ಲ, ಆಗ. ಆ ಹೊತ್ತಿನಲ್ಲಿ ಹುಡುಗ ಸ್ವಲ್ಪ ಹಣ—ಒಂದು ಐದು ನೂರು ರೂಪಾಯಿಯನ್ನು ಖಜಾನೆ ಆಫೀಸಿನ ಪಾಸ್ ಬುಕ್ಕಿನಲ್ಲಿಟ್ಟಿದ್ದ. ಅವನು ಕಾಂಗ್ರೆಸ್ ಆಗಿದ್ದಾಗ ಆ ಹಣ ಕಂಡುಹಿಡಿದರು. ಹಾಗೆ ಎಷ್ಟೋ ಕಾಂಗ್ರೆಸ್ಸಿನವರ ಮನೆಯಿಂದ ಪಾತ್ರೆ ಪದಾರ್ಥ, ಭೂಮಿ ಕಾಣಿ—ಎಲ್ಲವನ್ನೂ ವಶಪಡಿಸಿಕೊಂಡರು. ಆ ಮೇಲೆ ವಶಪಡಿಸಿಕೊಂಡದ್ದನ್ನೆಲ್ಲ ಹಿಂದಕ್ಕೆ ಕೊಡಬೇಕು ಅಂತ ಸರ್ಕಾರ ಆರ್ಡರ್ ಮಾಡಿತು. ಅಷ್ಟರಲ್ಲಿ ನಮ್ಮ ಮಗ ತೀರಿಕೊಂಡ. ನಾನು ಒಂದು ಅರ್ಜಿ ಬರೆದುಕೊಂಡೆ. ಹಕ್ಕುದಾರರು ನಾವು—ಆ ಹಣ ನಮಗೆ ಕೊಡಿಸಿಕೊಡಬೇಕು ಅಂತ ಈ ಐದನೇಯ ವರ್ಷದಲ್ಲಿ ಒಂದು ಸರ್ಟಿಫಿಕೇಟ್ ಬೇಕು ಅಂತ ಬಂತು. ಅದರ ಹೆಸರು ಸಕ್ಸೆಷನ್ ಸರ್ಟಿಫಿಕೇಟ್ ಅಂತ. ಅದನ್ನು ಕೋರ್ಟಿನಿಂದ ತೆಗೆದುಕೊಂಡೆವು. ಅದು ಸಿಕ್ಕಿದ ನಂತರವೂ ಒಂದು ವರ್ಷ ಕಳೆಯಿತು. ಆ ಮೇಲೂ ಅರ್ಜಿ ಬರೆದುಕೊಂಡೆ. ಈಗ ಮೂರು ವರ್ಷದಿಂದ ನಡೆದಾಡ್ತಿದ್ದೇನೆ. ನಾನು ಬರೆದ ಅರ್ಜಿಯೂ ಆ ದಿನ ಕಳಿಸಿದ ಸರ್ಟಿಫಿಕೇಟೂ ಕಾಣೋದಿಲ್ಲ. ಅವು ಯಾವ ಆಫೀಸಿನಲ್ಲೂ ಇಲ್ಲ. ಆಗ ಒಬ್ಬ ಮನುಷ್ಯ ಹೇಳಿದ: ಇನ್ನೊಂದು ಅರ್ಜಿ ಕೊಡಿ—ಕೋರ್ಟಿನಿಂದ ಆ ಸರ್ಟಿಫಿಕೇಟಿನ ಒಂದು ಕಾಪಿ ತೆಗೆದು ಕಳಿಸಿಕೊಡಿ ಅಂತ. ಅದನ್ನೂ ತೆಗೆದುಕೊಟ್ಟೆ. ಆಗ ಹೇಳುತ್ತಾರೆ—ಅವೆಲ್ಲ ಯಾತಕ್ಕೆ? ಆಡಿಟ್‌ಗೆ ಹೋಗಿ ಬರಬೇಕು ಅಂತ. ಆಗ ಕೆಲವರು ಹೇಳ್ತಾರೆ—ಅದು ತಪ್ಪಾಗಿ ಹೋಯ್ತು ಅಂತ. ಯಾಕೆ ಅಂದರೆ ಈ ಆಡಿಟ್‌ಗೆ ಹೋದರೆ ಅಲ್ಲಿ ಆಫೀಸಿನಲ್ಲಿರುವವರು ಹಣಾನ ಈ ಜನ್ಮದಲ್ಲಿ ಕೊಡೋದಿಲ್ಲ ಅಂತ. ಆಗ ಬೇರೆ ಕೆಲವರು ಹೇಳ್ತಾರೆ ಈ ಆಡಿಟ್ ಅಂತ ಹೇಳೋದು ಗುಡಿಸಿಲಿನ ಜನರಿಗೆ ಕೊಡಬೇಕಾದದ್ದನ್ನು ತಿರುಗಿ ಕೊಡದೇ ಇರೋದಕ್ಕೆ ಮಾಡಿಕೊಂಡಿರುವ ಮಾರ್ಗ."

ಕೃಷ್ಣನ್ ಹೇಳಿದ: "ಹೆಣ್ಣು ಮಗಳು ಪ್ರಾಯ ದಾಟಿ ನಿಂತಿದ್ದಾಳೆ. ಮೂರು ನಾಲ್ಕು ಕಡೆಯಿಂದ ಬಂದರು. ಮದುವೆ ಮಾಡಿ ಕೊಡೋದಕ್ಕೆ ಕೈಯಲ್ಲಿ ಏನೂ ಬೇಡವೇ? ಬರೋನಿಗೆ ಹಣವೂ ಬೇಕು, ಹೊನ್ನೂ ಬೇಕು. ನನ್ನ ಹೆಂಡತಿಯೂ ಇಲ್ಲ.

ಪ್ರಾಯಕ್ಕೆ ಬಂದ ಮಗಳು. ನನಗೆ ಅವಳನ್ನು ನೋಡಿಕೊಳ್ಳೋದಕ್ಕೆ ಆಗುತ್ತಾ? ನೋಡಿಕೊಂಡರೆ ತಾನೇ ಏನು ಫಲ? ಹೆಣ್ಣು ಹಾಗೇ ಉಳಿಯೋದು ತಪ್ಪು. ಯಾವಾಗ ಅವಳಿಗೆ ಮನಸ್ಸು ಚಂಚಲ ಆಗ್ತದೆ ಅಂತ ಯಾರಿಗೆ ಗೊತ್ತು? ನನ್ನ ಕರುಳಿಗೆ ಬೆಂಕಿ ಸುರಿದ ಹಾಗೆ ಆಗ್ತದೆ. ಆ ಕಾಸು ಸಿಕ್ಕಿದರೆ ಈಗ ಒಂದು ಸಂಬಂಧ ಬಂದಿದೆ. ಮದುವೆ ನಡೆಸಬಹುದು. ಅದಕ್ಕೆ ನಾನು ಈಗ ಹೋಗ್ತಿರೋದು. ಅವಳನ್ನು ಅವಳ ಚಿಕ್ಕಮ್ಮನ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು ಬಂದದ್ದು. ಕಾರ್ಯ ಸಾಧಿಸಿಯೇ ನಾನಂ ಹಿಂದಿರುಗಿ ಬರುವುದು."

ಶಂಕರ ಪಿಳ್ಳೆಗೆ ಹಾಗೆ ಕಾರ್ಯ ಸಾಧಿಸಿಯೇ ಹಿಂತಿರುಗಿ ಬರುವುದು ಎನ್ನುವ ದೃಢ ನಿಶ್ಚಯದ ಮೊದಲನೆಯ ಘಟ್ಟದಲ್ಲಿಯೇ ಜೊತೆಗೊಬ್ಬ ಸಿಕ್ಕಿದ. ಹೀಗೆ ತಿರುವನಂತ ಪುರಕ್ಕೆ ನಾನಾ ಕಡೆಯಿಂದ ಒಂದೊಂದು ದೃಢ ನಿರ್ಧಾರದಿಂದ ಜನರು ಹೋಗುವುದೋ ಏನೋ ಯಾರಿಗೆ ಗೊತ್ತು. ಕೃಷ್ಣನ್ ಕೇಳಿದ:

"ಏನಾದರೂ ಕೆಲಸಕ್ಕೆ ಯಾವುದಾದರೂ ಕೋರ್ಟಿಗೋ ಆಫೀಸಿಗೋ ಹೋಗಿದ್ದೀರಾ?"

ಶಂಕರ ಪಿಳ್ಳೆಗೆ ಅಂತಹ ಒಂದು ಅನುಭವ ಉಂಟಾಗಲಿಲ್ಲ. ಮಹತ್ತಾದ ಒಂದು ಸಮರದ ಸಾಮಾನ್ಯ ಯೋಧನಾಗಿ ಮಾತ್ರ ಜೀವಿಸಿದ್ದ ಒಬ್ಬ ಮನುಷ್ಯ ಆತ. ಕೃಷ್ಣನ್ ಹೇಳಿದರು: "ಹಾಗಿದ್ದರೆ ಅಲ್ಲಿಗೆ ಒಮ್ಮೆ ಹೋಗಿ ನೋಡಬೇಕು. ನಾವು ಒಂದು ವಿಷಯ ತಿಳಿಯುವುದಕ್ಕೆ ಅಲ್ಲಿಗೆ ಹೋಗುವುದು. ನಮ್ಮ ಹತ್ರ ಕಾಸಿದೆಯಾ? ಸಿಪಾಯಿಗೂ ಕುಡಿಯೋದಕ್ಕೆ ಕೊಡಬೇಕು. ಹಾಗಿದ್ದರೆ ಹೋಗಬಹುದು. ಆ ಉದ್ಯೋಗಸ್ಥರು ಹೆಣ್ಣು ಗಂಡು ಒಟ್ಟಿಗೆ ಮೇಜಿನ ಮುಂದೆ ಕುರ್ಚಿಯಲ್ಲಿ ಕುಳಿತಿರ್‍ತಾರೆ. ಮೇಲೆ ಫ್ಯಾನ್ ತಿರುಗುವುದಕ್ಕೆ ಹೊರಟರೆ ಅದು ನಿಲ್ಲುವುದಿಲ್ಲ. ನಿಲ್ಲಿಸೋದೂ ಇಲ್ಲ. ಮೇಜಿನ ಮೇಲಿನ ಕಾಗದ ಹಾರಾಡ್ತಿರ್‍ತವೆ. ನಾವು ಹೇಗೆ ಅಲ್ಲಿಗೆ ಬಂದದ್ದು ಅಂತ ಆಲೋಚಿಸ್ತಾರೆ. ಅವರ ನೋಟವನ್ನೂ ಭಾವನೆಯನ್ನೂ ನೋಡಬೇಕು. ಕೆಲವರು ತಮಾಷೆ ಮಾಡ್ತಾರೆ. ಕೆಲವರು ರೇಗಿ ಹೆದರಿಸ್ತಾರೆ. ಮತ್ತೆ ಕೆಲವರಿಗೆ ಅಹಂಕಾರ. ನನಗೆ ಅದಲ್ಲ ಸಂಗತಿ. ಅವರೆಲ್ಲ ನಮ್ಮ ದೇಶದವರು—ನಮ್ಮ ಮಕ್ಕಳೋ ತಮ್ಮಂದಿರೋ ಸಂಬಂಧಿಗಳೋ. ಆದರೆ ಉದ್ಯೋಗ ಸಿಕ್ಕಿದರೆ ಹಾಗೇನೂ ಅಲ್ಲ. ಕೇಳ್ತೀರಾ ಒಂದು ಕಥೆ!" ಎಂದು ಹೇಳಿ ಕೃಷ್ಣನ್ ಒಂದು ಕಥೆ ವಿವರಿಸಿದ. ಪರೂರಿನಲ್ಲಿ ಅವನ ಮನೆಯ ಹತ್ತಿರದ ಒಬ್ಬನನ್ನು ಕುರಿತಾಗಿತ್ತು ಆ ಕಥೆ. "ಅವನು ಯಾವುದೋ ಒಂದು ಆಫೀಸಿನ ಕ್ಲಾರ್ಕ್. ನಾನು ಎತ್ತಿಕೊಂಡು ಆಡಿಸಿದ ಹುಡುಗ. ನನ್ನನ್ನು ಕಂಡರೆ ತುಂಬ ಪ್ರೀತಿಯಿಂದಿದ್ದ. ನಾನು ಹೋದಾಗ ಅವನ ಜೊತೆಯವರು ನನ್ನನ್ನು ತಮಾಷೆ ಮಾಡಿ ಕಳಿಸಿದರು. ಇನ್ನೂ ಆ ಕಥೆ ಇದೆ. ಬೇರೆ ಒಬ್ಬನಿಗೆ ಎರಡು ರೂಪಾಯಿ ಲಂಚ ಕೊಡಬೇಕಾಗಿ ಬಂತು. ಮತ್ತೊಂದು ಸಲ ಆಚೆ ಹೋಗು ಅಂದ ಮತ್ತೊಬ್ಬ. ನಾವು ಅಂದ್ರೆ ಏನೂ

ಗೊತ್ತಿಲ್ಲದವರು. ಪರಿಚಯುವಿದ್ದು ಹೋಗ್ತೇವಾ? ಯಾವದಾದರೂ ಸಹಾಯ ದೊರೆಯುತ್ತಲ್ಲ ಅಂತ ಹೋಗ್ತೀವಿ. ಹೀಗೆ ಅಲ್ಲಿಗೆ ಹೋದಾಗ ಇಂಥಾದ್ದೆ ಅನುಭವ ಆಗೋದು."

ತುಂಬ ಅನುಭವಿಸಿದ ಮನುಷ್ಯನಂತೆ ಕೃಷ್ಣನ್ ಹೇಳಿದ: "ಒಂದು ದೃಷ್ಟಿಯಲ್ಲಿ ಅವರನ್ನು ದೂರೋ ಹಾಗಿಲ್ಲ. ಯಾಕೆ ಅಂದರೆ, ನಮ್ಮ ಜೊತೆಯಲ್ಲಿ ಒಬ್ಬ ಗೋವಿಂದ ಇದ್ದ. ಅವನ ಜೊತೆಯಲ್ಲಿ ಹಗ್ಗದ ವ್ಯಾಪಾರ ಮಾಡಿದವರು—ನನ್ನ ಮಗಳನ್ನು ಅವನಿಗೆ ಕೊಡಬೇಕೂ ಅಂತಿತ್ತು. ಅವನಿಗೆ ಯೋಗವೂ ಒಳ್ಳೆಯ ಕಾಲವೂ ಬಂತು. ಈಗ ಮೂರು ಆಫೀಸುಗಳಿವೆ. ಒಂದು ಸಲಕ್ಕೆ ಐವತ್ತು ಸಾವಿರ ತೆಂಗಿನ ಕಾಯಿ ಸಿಕ್ಕುತ್ತೆ. ಜೊತೆಗೆ ಪಳ್ಳದ ಗದ್ದೆಯೂ ಇದೆ. ಕಾರಿನಲ್ಲಿ ಓಡಾಡ್ತಾನೆ. ಅವನನ್ನು ಕಾಣಬೇಕಿದ್ದರೆ ಸಮಯ ಕಾದು ಕುಳಿತಿರಬೇಕು. ಕಂಡರೂ ಅವನು ಮಾತಾಡಿಸೋದಿಲ್ಲ. ಕೆಲಸದ ಗಡಿಬಿಡಿ ಅಂತ ಇಟ್ಟುಕೊಳ್ಳಿ. ಒಬ್ಬ ಗುಡಿಸಿಲಿನವನು ಹಾಗಾದ ಮೇಲೆ ಅಧಿಕಾರ ಇರುವ ಸರ್ಕಾರದ ಕೆಲಸ ಸಿಕ್ಕಿದರೆ ಹೇಗಿರಬೇಕು. ಅಷ್ಟೇ ಅವರ ಕೆಲಸ ಇರೋದು. ನಮ್ಮ ಹುಡುಗರೂ ಹಾಗೇ ಆಗ್ತಾರೆ."

ಕೃಷ್ಣನಿಗೆ ಒಂದೇ ಸಂಕಟ ಇದ್ದದ್ದು. ಇದು ಇಷ್ಟು ತಡವಾದದ್ದು ಪ್ರೀ ಆಡಿಟ್ ಆಗಿ ಸಿಕ್ಕದೇ ಹೋದದ್ದು ಎಲ್ಲವೂ ಆಲಪ್ಪುಳದ ಒಬ್ಬ ಕ್ಲಾರ್ಕ್‌ನಿಂದಾಗಿ ಎಂದು ಆತ ಹೇಳುತ್ತಿದ್ದದ್ದು. ಅವನು ಪರಿಚಯವಿದ್ದವನು. ಕದವೆ ಹಾಸಿಗೆ ಬೇಕು ಅಂದ. ಕೃಷ್ಣನಿಗೆ ಅದನ್ನು ಕೊಡಲು ಸಾಧ್ಯವಾಗಲಿಲ್ಲ.

ಕೃಷ್ಣನ್ ಹೇಳಿದ: "ಈಗಲೂ ನಾನು ಕಳಿಸಿಕೊಟ್ಟೆ ಅಂತ ಇಟ್ಟುಕೊಳ್ಳಿ. ಅದೆಲ್ಲಿ ಈಗ ನೆನಪಾಗುತ್ತೆ? ಅದಕ್ಕೂ ಕಾರಣವಿದೆ. ಅಲ್ಲಿ ಆಫೀಸುಗಳಲ್ಲಿ ಅವರು ಹಾಗೆ ಕುಳಿತಿರುತ್ತಾರೆ. ಕೆಲವರು ಹತ್ತಿರ ಕುಳಿತಿರುವ ಸ್ತ್ರೀಯರ ಜೊತೆಯಲ್ಲಿ ಹರಟೆ ಹೊಡೀತಿರ್ತಾರೆ. ಕೆಲವು ಹೆಂಗಸರು ಯಾವುದೋ ಲೋಕದಲ್ಲಿರ್ತಾರೆ. ಇನ್ನು ಕೆಲವರು ಮೇಜಿನ ಸುತ್ತ ಕುಳಿತು ಮಾತಾಡಿಕೊಂಡಿರ್ತಾರೆ. ಕೆಲವರು ಕಾಫಿ ಕುಡಿಯೋದಕ್ಕೆ ಹೋಗ್ತಾರೆ. ಹಾಗೇ ಐದು ಗಂಟೆಯಾಗುತ್ತದೆ. ಅಲ್ಲಿ ಒಟ್ಟಿನಲ್ಲಿ ವಿನೋದವಾಗಿರ್ತಾರೆ. ನಮ್ಮ ಅರ್ಜಿ ಅಲ್ಲೆಲ್ಲೋ ಬಿದ್ದಿರುತ್ತೆ. ಅರ್ಜಿಗಳು ತುಂಬ ಆದಾಗ ಒಟ್ಟಿಗೆ ಕಟ್ಟಿ ಎಲ್ಲೋ ಹಾಕ್ತಾರೆ."

ತನ್ನ ಅರ್ಜಿಗಳನ್ನು ಆ ರೀತಿಯಲ್ಲಿ ಕಟ್ಟಿ ಎಲ್ಲಿಯೋ ಹಾಕಿರಬಹುದೆಂದು ಶಂಕರ ಪಿಳ್ಳೆ ಆಲೋಚಿಸಿದ. ಕೃಷ್ಣನ್ ವಿವರಿಸಿದ ರೀತಿಯಲ್ಲಿ ಕೆಲಸಗಳು ನಡೆಯುವುದಿದ್ದಲ್ಲಿ ಆ ಪರಿಸ್ಥಿತಿಯಿಂದ ಹೇಗೆ ಪಾರಾಗೋದು?

ಶಂಕರ ಪಿಳ್ಳೆ ಆಲೋಚಿಸತೊಡಗಿದ್ದ. ಹಳೆಯ ಅನುಭವವಿದ್ದ ಕೃಷ್ಣನ್ ಹೇಳಿದ: "ಹೇಳಬಹುದಲ್ಲ. ಈ ಸರ್ಕಾರಿ ಉದ್ಯೋಗಸ್ಥರಿದ್ದಾರಲ್ಲ! ಅವರು ಹೇಳುವುದರಲ್ಲಿಯೂ ಕೆಲವು ಕಾರಣಗಳಿವೆ. ಈ ಕ್ಲಾರ್ಕುಗಳಿಗೆ ಯೂನಿಯನ್ ಇದೆ. ಅವರು

ಹೇಳುವುದರಲ್ಲೂ ಸತ್ಯವಿದೆ. ಏನು ಅಂದರೆ ಅವರು ಸುಖವಾಗಿರಬೇಕು. ಅವರ ಹೆಂಡತಿಯರಿಗೆ ಸೀರೆ ಬೇಕು. ಅಂತಸ್ತಿನಲ್ಲಿರಬೇಕು. ಮಕ್ಕಳಿಗೆ ಒಳ್ಳೆಯದಾಗಬೇಕು. ಒಟ್ಟಿನಲ್ಲಿ ಅನುಕೂಲವಾಗಿರಬೇಕು. ಅವರಿಗೆ ಸಂಬಳ ಸಾಲದು ಅಂತ ಹೇಳುವುದು. ಅವರಿಗೆ ಕಾಫಿ ಕುಡಿಯ ಬಾರದೇ, ಸಿಗರೇಟ್ ಸೇದಬಾರದೇ, ಸಿನೇಮಾ ನೋಡಬಾರದೇ? ಅವರು ಬಾಡಿಗೆ ಕೊಡಬೇಡವೆ? ಅದಕ್ಕೆ ಸಾಕಾಗುತ್ತಾ?"

ಶಂಕರ ಪಿಳ್ಳೆಗೆ ಆ ವಾದವನ್ನು ಕೇಳಿಸಿಕೊಳ್ಳುವುದಕ್ಕೆ ಇಷ್ಟವಾಗಲಿಲ್ಲ. "ಬೇಕು. ಬೇಕು. ಊಟಕ್ಕೆ ತುಪ್ಪ ಬೇಳೆಯೂ ಬೇಕು. ಆ ಮೇಲೆ ಕಾರಿನಲ್ಲಿ ತಿರುಗಾಡಬೇಕು. ಜರಿ ಸೀರೆ ಚಿನ್ನದಲ್ಲಿ ಮುಚ್ಚಿ ಹೆಂಡತಿಯನ್ನು ಸಾಕಬೇಕು. ಮಕ್ಕಳನ್ನು ದೊಡ್ಡ ಉದ್ಯೋಗಸ್ಥರನ್ನಾಗಿ ಮಾಡಬೇಕು. ಅದಕ್ಕೆ ಊರಿನವರು ತೆರಿಗೆ ಕೊಡಬೇಕು. ಆಮೇಲೆ ಊರಿನವರ ಮುಖದ ಮೇಲೆ ಹೊಡೆಯಬೇಕು."

—ರೋಷದಿಂದಲೇ ಶಂಕರ ಪಿಳ್ಳೆ ಹೇಳಿದ್ದು. ಕೃಷ್ಣನ್ ಕೂಡ ಗಾಬರಿಯಾದ. ಅವನು ಹೇಳಿದ: "ಸರ್ಕಾರಿ ಉದ್ಯೋಗ ಇರೋರಲ್ಲವಾ? ಅವರಿಗೆ ಸ್ವಲ್ಪ ಮಾನ ಮರ್ಯಾದೆ ಬೇಡವಾ?"

ಶಂಕರ ಪಿಳ್ಳೆಗೆ ಸಿಟ್ಟು ಹೋಗಿರಲಿಲ್ಲ. "ಬೇಕುಬೇಕು. ಅವರೂ ಅವರ ಮಕ್ಕಳೂ ಮಕ್ಕಳ ಮಕ್ಕಳೂ ಎಲ್ಲರೂ ಈಗ ಇರುವುದಕ್ಕಿಂತಲೂ ಹೆಚ್ಚು ಹೆಚ್ಚು ಪ್ರತಾಪದಿಂದ ಸಂತತಿ ಪ್ರವೇಶದಿಂದ ಆಚಂದ್ರತಾರಾರ್ಕವಾಗಿ ಜೀವಿಸಬೇಕು. ರಾಜರಾಜರ ಕಾಲದ ಅಧಿಕಾರಿಗಳ ಹಾಗೆ, ರಾಜರ ಮಗನೋ ಸಂಬಂಧಿಯೋ, ಯುವರಾಜನೋ, ಉದ್ಯೋಗ ಸ್ಥನ ಮಗನೋ, ಮೊಮ್ಮಗನೋ ಉದ್ಯೋಗಸ್ಥನಾಗಿ ಅವರನ್ನು ಸಾಕುವುದೂ ಉಂಟು. ಇನ್ನು ಮೇಲೆ ಉದ್ಯೋಗಸ್ಥನ ಮಗನಿಗೆ ಫೀಸು ಕೊಡುವುದು ಬೇಡ. ಬ್ರಾಹ್ಮಣರು ಹೇಳಿಕೊಳ್ಳೋ ಹಾಗೆ ಉದ್ಯೋಗಸ್ಥರೂ ಅವರದೇ ಒಂದು ಜಾತಿ ಮಾಡಿಕೊಳ್ಳಲಿ. ಆಗೋದಿಲ್ಲವೇ?"

ಶಂಕರ ಪಿಳ್ಳೆಯ ಆವೇಶವನ್ನು ಕಂಡು ಕೃಷ್ಣನ್ ಕೇಳಿದ: "ನೀವು ಒಬ್ಬರು ಕಮ್ಯೂನಿಸ್ಟಾ?"

ಶಂಕರ ಪಿಳ್ಳೆಗೆ ಅದನ್ನು ಸಹಿಸಲು ಸಾಧ್ಯವಾದೀತೇ? ಅವನೂ ಪತ್ರಿಕೆಗಳನ್ನು ಓದುತ್ತಿದ್ದ.

"ನಾನು ಕಮ್ಯೂನಿಸ್ಟ್ ಅಂತಲಾ? ಸರ್ಕಾರದ ಉದ್ಯೋಗಸ್ಥರು—ಯೂನಿಯನ್ ಮಾಡಿಕೊಂಡು ನಡೆಯುವವರಿದ್ದಾರಲ್ಲವಾ ಅವರು ಕಮ್ಯೂನಿಸ್ಟಿನವರು. ಅವರ ಓಟು ಗಿಟ್ಟಿಸುವುದಕ್ಕಾಗಿ ಅವರು ಕೇಳುವುದನ್ನೆಲ್ಲ ಕೊಡಬೇಕು ಎಂದು ಕಮ್ಯೂನಿಸ್ಟರು ಹೇಳುತ್ತ ನಡೆಯುವುದು. ಅವರು ಕಷ್ಟ ಪಡುವ ಕಾರ್ಮಿಕರೂ, ಕೃಷಿಕರು, ಉದ್ಯೋಗಸ್ಥರು ಎಂದು ಹೇಳಿಯಲ್ಲವೇ ಆಣೆಯಿಡುವುದು?"

ಅದು ಸರಿಯೆಂದು ಕೃಷ್ಣನ್ ಹೇಳಿದ. ಶಂಕರ ಪಿಳ್ಳೆಯ ಆವೇಶ ತೀರಿಲ್ಲ.

ಅವನು ಹೇಳಿದ: "ಈ ಊರಿನವರು ಹೇಗೆ ಜೀವಿಸೋದು? ಅದೇ ರೀತಿ ಈ ಉದ್ಯೋಗಸ್ಥನೂ ಜೀವಿಸಿದರೆ ಸಾಲದಾ?"

ಕೃಷ್ಣನ್ ಹೇಳಿದ: "ಅದು ಬೇಕಾದದ್ದು."

ಶಂಕರ ಪಿಳ್ಳೆ ಹೇಳಿದ: "ನಾನೊಂದು ಲೆಕ್ಕ ಹೇಳ್ತೀನಿ, ಕೇಳಿ. ಒಂದು ಹತ್ತು ಎಕರೆ ಭೂಮಿ ಇರೋನು ನಮ್ಮ ಊರಿನ ಒಬ್ಬ ಜಮೀನ್ದಾರ ಅಲ್ಲವಾ?" ಕೃಷ್ಣನ್ ಅದನ್ನು ಒಪ್ಪಿದ. "ಅವನು ಕೃಷಿ ಮಾಡಿದರೆ, ಕೃಷಿ ಖರ್ಚು ಕಳೆದು ಯಾವ ಆದಾಯ ಸಿಕ್ಕುತ್ತೆ?"

ಕೃಷ್ಣನ್ ಲೆಕ್ಕ ಹಾಕಿದ. ಪರೂರಿಗೆ ಪೂರ್ವದ ಗದ್ದೆಗಳಲ್ಲಾದರೆ ಎಲ್ಲ ಕಳೆದು ಮುನ್ನೂರು ಕೊಳಗ ಭತ್ತ ಸಿಕ್ಕುತ್ತೆ. ಅದಕ್ಕೆ ಕೊಳಗಕ್ಕೆ ಎರಡು ರೂಪಾಯಿನಂತೆ ಆರು ನೂರು ರೂಪಾಯಿ ಸಿಕ್ಕುತ್ತೆ. ಅಥವಾ ನಾನೂರು ಕೊಳಗ ಭತ್ತ ಆದರೆ ಅದಕ್ಕೆ ಎಂಟು ನೂರು ಸಿಕ್ಕುತ್ತೆ.

ಶಂಕರ ಪಿಳ್ಳೆ ಕೇಳಿದ: "ಹತ್ತು ಎಕರೆ ಭೂಮಿ ಸ್ವಂತವಾಗಿರೋರು ನಿಮ್ಮೂರಿನಲ್ಲಿ ಎಷ್ಟು ಜನರಿದ್ದಾರೆ?"

"ಒಂದು ನಾಲ್ಕೈದು ಜನರಿರಬಹುದು."

ಶಂಕರ ಪಿಳ್ಳೆ ಕೇಳಿದ: "ಅಷ್ಟೇನಾ?" ಆಗ ಕೃಷ್ಣನ್ ಹೇಳಿದ: "ತೀರ ಗತಿಯಿಲ್ಲದವರೇ ಹೆಚ್ಚು."

ಶಂಕರ ಪಿಳ್ಳೆಗೆ ವಾದಿಸಲು ಉತ್ಸಾಹವುಂಟಾಯಿತು.

"ಹಾಗಾದರೆ ಅದು ಊರಿನ ಸ್ಥಿತಿ ಅನ್ನಿ. ನಮ್ಮ ಊರೂ ಹಾಗೇನೇ. ಇನ್ನೊಂದು ಪ್ರಶ್ನೆ ಕೇಳ್ತೀನಿ. ಒಬ್ಬ ಜವಾನನಿಗೆ ತಿಂಗಳಿಗೆ ಸಂಬಳ ಎಷ್ಟು?"

ಕೃಷ್ಣನ್‌ನ ಅಭಿಪ್ರಾಯ ಎಂಬತ್ತು ಇರಬಹುದು ಎಂದು. ಶಂಕರ ಪಿಳ್ಳೆ ಹೇಳಿದ: "ಒಬ್ಬ ಜವಾನನ ಸಂಬಳದಷ್ಟು ಆದಾಯ ನಮ್ಮ ಊರಿನ ಸಾಧಾರಣ ಮನುಷ್ಯನಿಗಿಲ್ಲ. ಮತ್ತೆ ಇವರು ಲಂಚ ತೆಗೆದುಕೊಳ್ಳೋದರಲ್ಲೂ ಸಂಬಳ ಸಾಲದು ಅಂತ ಹೇಳೋದರಲ್ಲೂ ಯಾವ ಅರ್ಥ?"

ಕೃಷ್ಣನ್ ಹೇಳಿದ: "ಅವರು ಯೂನಿಯನ್‌ಗೆ ಸೇರಿದ್ದಾರೆ."

ಶಂಕರ ಪಿಳ್ಳೆ ಹೇಳಿದ: "ಹಣವಂತರು ಜೀವಿಸುವ ಹಾಗೆಯೇ ಅವರೂ ಜೀವಿಸಬೇಕು. ಆ ಮಟ್ಟದಲ್ಲಿಲ್ಲದೆ ಅವರು ಕೆಳಕ್ಕೆ ನೋಡೋದಿಲ್ಲ. ಒಂದು ಕೆಲಸ ಸಿಕ್ಕಿದರೆ ನಮ್ಮ ಮಗನಾಗಿರಲಿ, ಮೊಮ್ಮಗನಾಗಿರಲಿ, ಬದಲಾಯಿಸಿ ಹೋಗ್ತಾರೆ. ಅನಂತರ ನಮ್ಮ ಊರಿನವರು—ಅದು ಇದೆಲ್ಲ ಇರೋದಿಲ್ಲ. ಈಗಲೂ ಜನರು ಏನು ಹೇಳೋದು? ನಮ್ಮ ಹುಡುಗನಿಗೆ ಒಂದು ಸರ್ಕಾರದ ಕೆಲಸ ಸಿಕ್ಕಿದರೆ ಸಾಕು ಅಂತ. ಖರ್ಚು ಕಳೆಯೋದಕ್ಕೆ ಕೆಲಸ." ಎಲ್ಲವನ್ನೂ ಕೇಳಿಸಿಕೊಂಡು ಆದ ಮೇಲೆ ಕೃಷ್ಣನ್ ಹೇಳಿದ: "ಇದನ್ನೆಲ್ಲ ಹೇಳಿಕೊಂಡು ಆಫೀಸಿಗೆ ಹೋದರೆ ಕೆಲಸ ನಡೆಯೋದಿಲ್ಲ."

ಶಂಕರ ಪಿಳ್ಳೆ ಬಿಡಲಿಲ್ಲ. "ಬೇಡ, ನನಗೆ ತಿಳಿದುಕೊಳ್ಳಬೇಕು."

ಕೃಷ್ಣನ್ ದೊಡ್ಡ ನೌಕರರ ವಿಷಯ ಹೇಳಿದ:

"ಈಗ ಇರುವ ದೊಡ್ಡ ನೌಕರರು ಸಣ್ಣ ಹುಡುಗರು. ಮೀಸೆ ಬೆಳೆಯದವರು. ಆ ಹುಡುಗರಿಗೂ ಈ ಜನರ ಆಲೋಚನೆಯಿಲ್ಲ. ಸಂತೋಷದಿಂದ ಕಾಲ ಕಳೀತಾರೆ. ಅವರನ್ನ ಹೋಗಿ ನೋಡೋದಕ್ಕೆ ಸಾಧ್ಯವಿಲ್ಲ. ಕಂಡರೆ......... ದೇವರೇ, ಇಂಗ್ಲೀಷಿನಲ್ಲಿ ಮಾತಾಡ್ತಾರೆ. ಅವರು ನಮ್ಮ ದೇಶದವರ ಹಾಗಲ್ಲ ನಡೆದುಕೊಳ್ಳೋದು. ಇಂಗ್ಲೀಷಿನವರ ಹಾಗೆ. ಸಣ್ಣದಾಗಿ ಹೇಳ್ತೀನಿ. ಇಂಗ್ಲೀಷಿನವರು ಹೋಗಿ ಸ್ವರಾಜ್ಯ ಸಿಕ್ಕಿದ ಮೇಲೆ ಒಳ್ಳೇದಾಗುತ್ತೆ ಅಂದುಕೊಂಡಿದ್ದೆವು. ಈಗ ಹಿಂದಿನದಕ್ಕಿಂತ ಕಷ್ಟ!"

ಶಂಕರ ಪಿಳ್ಳೆ ಹೇಳಿದ: "ನಾನೂ, ನನ್ನ ಹಾಗಿರುವ ಸಾವಿರಾರು ಜನರೂ ಕಷ್ಟಪಟ್ಟದ್ದು ಇದೊಂದಕ್ಕೂ ಅಲ್ಲ."

ಕೃಷ್ಣನೂ ತಾನು ಭಾಗವಹಿಸಿದುದನ್ನು ಕುರಿತು ಹೇಳುತ್ತಿದ್ದ: "ಸದಾಶಿವ ಗೋಲಿಬಾರಿನಲ್ಲಿ ಸತ್ತ."

ಒಬ್ಬ ಕಾಂಗ್ರೆಸ್ಸಿನವನಾಗಿದ್ದ ಶಂಕರ ಪಿಳ್ಳೆಗೆ ಆ ಅವಸ್ಥೆಯಲ್ಲೂ ಒಪ್ಪಿಕೊಳ್ಳಲು ಸಾಧ್ಯವಿರಲಿಲ್ಲ. ಇಬ್ಬರೂ ಆ ಹಕ್ಕಿನ ವಿಚಾರ ಜ್ಞಾಪಕ ಮಾಡಿಕೊಂಡದ್ದಿದ್ದರೂ ಯಾರಾದರೂ ಅದನ್ನು ಕೇಳಿದರೆ ತಮಾಷೆಯಾಗಿ ನಕ್ಕಂತಾಗುತ್ತಿತ್ತು.

ಶಂಕರ ಪಿಳ್ಳೆ ಹೇಳಿದ: "ವಯಲಾರದಲ್ಲೂ ಪುನ್ನಂಬ್ರದಲ್ಲೂ ಬಡಜನಗಳನ್ನ ವಂಚಿಸುತ್ತಿರಲಿಲ್ಲವಾ? ಅವರನ್ನು ಕಮ್ಯೂನಿಸ್ಟಿನವರು ಗೋಲಿಬಾರ್ ಮಾಡೋದಿಲ್ಲ ಅಂತ ಹೇಳಿ ಮೋಸ ಮಾಡಿದ್ದಲ್ಲವಾ? ಅವರು ಸುಮ್ಮಸುಮ್ಮನೆ ಸತ್ತರು. ಸ್ವಾತಂತ್ರ್ಯ ಸಿಕ್ಕಿದ್ದು ಅದರಿಂದಲಾ?"

ಕೃಷ್ಣನೂ ಬಿಡಲಿಲ್ಲ. ಅದು ಅವನ ಮಗನ ಬಲಿದಾನವನ್ನು ಕುರಿತು ಅಪಮಾನ ಮಾಡುತ್ತಿದ್ದುದಲ್ಲವೇ?

"ಆ ಮೇಲೆ ಟೋಪಿ ಹಾಕಿಕೊಂಡು, ಬಾವುಟ ಹಿಡಿದು ಘೋಷಿಸಿಕೊಂಡು ತಿರುಗಾಡೋದೇ? ನಿಮಗಾರಿಗೂ ತಿಳಿಯದ ಒಂದು ವಿಷಯ ಇದೆ—ಪುನ್ನಂಬ್ರದಲ್ಲೂ ವಯಲಾರದಲ್ಲೂ ಸತ್ತವರು ನಿಜವಾದ ಕಮ್ಯೂನಿಸ್ಟರಾಗಿದ್ದರು. ಮೊದಲು ಅವರೂ ಕಾಂಗ್ರೆಸ್ಸಿನವರಾಗಿದ್ದರು. ಅಲ್ಲದೆ ತಿಳುವಳಿಕೆಯಿಲ್ಲದ ಆಡು, ದನಗಳಾಗಿರಲಿಲ್ಲ. ಸಾಯುವುದಿದ್ದರೆ ಸಾಯುವುದು ಎಂದು ಸತ್ತವರು. ಆಗಿನ ಕಾಂಗ್ರೆಸ್ಸಿನವರು ಅವರನ್ನು ಮೋಸ ಮಾಡಿದರು. ಅವರಿಗೂ ಗೊತ್ತಿತ್ತು. ವಯಲಾರಿನಲ್ಲೂ ಪುನ್ನಂಬ್ರದಲ್ಲೂ ಗಲಭೆ ನಡೆದದ್ದು. ಅವರು ಮರುಮಾತಾಡದೆ ಒಪ್ಪಿಕೊಂಡರು. ಕೆಲವು ಕಾಂಗ್ರೆಸ್ ಮುಂದಾಳುಗಳು ಅನುಕೂಲಿಗಳೂ ಆಗಿದ್ದರು. ಆದರೂ ಗೋಲಿಬಾರ್ ನಡೆದಾಗ ಸರ್ಕಾರದ ನಿಲುವು ಸರಿ ಎಂದು ಕಾಂಗ್ರೆಸ್ಸಿನವರು ಹೇಳಿದರು. ಅದು ಸ್ವಲ್ಪ ಕಟುವಾಯಿತು."

ಸ್ವಲ್ಪ ಹೊತ್ತಿನ ವರೆಗೆ ಇಬ್ಬರೂ ಏನೂ ಮಾತಾಡಲಿಲ್ಲ. ಅವರಿಬ್ಬರೂ

ಅವರವರ ಚಿಂತೆಯಲ್ಲಿ ಮುಳುಗಿದ್ದರು. ಬೋಟಿನಲ್ಲಿ ಉಳಿದ ಯಾತ್ರಿಕರು ನಿದ್ದೆ ಮಾಡುತ್ತಿದ್ದರು. ಅವರಿಬ್ಬರಿಗೂ ನಿದ್ದೆ ಬಂದಿರಲಿಲ್ಲ. ಶಂಕರ ಪಿಳ್ಳೆ ಪುನ್ನಂಬ್ರ ವೈಲಾರಿನಲ್ಲಿ ಸತ್ತ ನೂರಾರು ಜನರನ್ನು ಕುರಿತು ಆಲೋಚಿಸುತ್ತಿದ್ದ. ಆಗ ದಿವಾನರ ಸೈನಿಕರು ಗುಂಡು ಹಾರಿಸಿದರು ಎನ್ನುವುದು ಮಾತ್ರವಲ್ಲ, ಅನಂತರ ನಡೆದ ಅಕ್ರಮಂಗಳನ್ನೂ ಕೇಳಿದ್ದ. ಪ್ರಾಣಭಯದಲ್ಲಿ ಓಡಿ ಒಂದು ಮನೆಯ ಗೋಡೆಯ ಹಿಂದೆ ಅವಿತು ಕೊಂಡಿದ್ದ. ಇಪ್ಪತ್ತು ಜನರಿಗಿಂತ ಹೆಚ್ಚು ಜನರನ್ನು ಇಲಿಗಳನ್ನು ಕೊಲ್ಲುವಂತೆ ಗುಂಡಿಕ್ಕಿ ಕೊಂದರು. ಒಂದು ಕೊಳದಲ್ಲಿ ಮುಳುಗಿ, ಪಾಚಿಯ ಮರೆಯಲ್ಲಿ ಮೂಗನ್ನು ಮಾತ್ರ ಹೊರಗೆ ಕಾಣಿಸಿ ತಲೆಯುಳಿಸಿಕೊಳ್ಳಬೇಕೆಂದಿದ್ದವರನ್ನು ಸೂಕ್ಷ್ಮವಾಗಿ ಕಂಡು ಹಿಡಿದು ಗುಂಡಿಕ್ಕಿ ಕೊಲ್ಲಬೇಕೇ? ಈಗಲೂ ಆ ಶವಗಳನ್ನು ಹೂಳಿದ ಗೋರಿಗಳು ಗುಡ್ಡಗಳ ಹಾಗಿವೆ. ಇವರೆಲ್ಲ ಸತ್ತದ್ದೇಕೆ? ಸುಮ್ಮನೆ ಕೆಲವು ಜನ ಹೇಳಿ ವಂಚಿಸಿ ಸಾಯಿಸಿದ್ದೇ? ಆ ರೀತಿಯಲ್ಲಿ ಶಂಕರ ಪಿಳ್ಳೆಗೆ ನಂಬಲೂ ಸಾಧ್ಯವಿಲ್ಲ. ಅವರಿಗೂ ದೇಶಾಭಿಮಾನವಿದೆ ತಾನೇ? ಅವರ ಬದುಕು ರಾಜ್ಯದ ಸ್ವಾತಂತ್ರ್ಯಕ್ಕಾಗಿ ಅಲ್ಲವೇ ಅರ್ಪಿಸಲಾದದ್ದು? ಕೇವಲ ಕಮ್ಯೂನಿಸ್ಟರು ಹೇಳಿದ್ದಕ್ಕೆ ತಿಳುವಳಿಕೆಯಿಲ್ಲದವರಂತೆ, ದೇಶಪ್ರೇಮವಿಲ್ಲದೆ ಕೋವಿಯ ಮುಂದೆ ಗುಂಡು ಸಿಡಿಯುವುದಿಲ್ಲ ಎಂದು ನಿಂತವರೇ? ಅವರನ್ನು ಹಾಗೆ ಅವಗಣಿಸುವುದಕ್ಕೆ ಶಂಕರ ಪಿಳ್ಳೆಗೆ ಸಾಧ್ಯವಿಲ್ಲ. ವಯಲಾರಿನಲ್ಲೂ ಪುನ್ನಂಬ್ರದಲ್ಲೂ ನಡೆದ ಆ ಹೋರಾಟದ ಚಿತ್ರ ಶಂಕರ ಪಿಳ್ಳೆಯ ಅಂತರ್ ನಯನಗಳ ಮುಂದೆ ಆತನ ಸ್ವಂತ ಭಾವನೆಯನ್ನು ಚಿತ್ರಿಸಿತು. ಆ ಮನುಷ್ಯರ ಕಣ್ಣುಗಳು ದೇಶಾಭಿಮಾನದಿಂದ ಜ್ವಲಿಸುತ್ತಿದ್ದುವು. ಅಯ್ಯೋ! ಅವರನ್ನು ಮರೆಯುವುದು ಎಂತಹ ಮಹಾ ಪಾಪ!

ಶಂಕರ ಪಿಳ್ಳೆ ಹತ್ತಿರದಲ್ಲಿ ಚಿಂತಾಮಗ್ನನಾಗಿದ್ದ ಕೃಷ್ಣನ್‌ನನ್ನು ದೃಷ್ಟಿಯಿಟ್ಟು ನೋಡಿದ. ಆ ಮನುಷ್ಯನೂ ಸ್ವಾತಂತ್ರ್ಯ ಸಂಪಾದನೆಗೆ ತನ್ನದೇ ಆದ ಸಂಭಾವನೆಯನ್ನು ನೀಡಿದ್ದ. ಅವನ ಹತ್ತಿರ ಇದ್ದ ಅಪಾರ ಬೆಲೆಯುಳ್ಳದ್ದನ್ನು ತೆತ್ತಿದ್ದ—ಅವನ ಏಕಮಾತ್ರ ಪುತ್ರನನ್ನು. ಅವನೂ ತಿಳುವಳಿಕೆಯುಳ್ಳವನಾಗಿದ್ದವನು ಎನ್ನುವ ವಿಷಯದಲ್ಲಿ ಸಂಶಯವಿಲ್ಲ. ಜೀವನದಲ್ಲಿ ಆಕರ್ಷಣೆಯೂ ಯೋಜನೆಗಳೂ ಉಳ್ಳವನಾಗಿದ್ದ. ಅದರಲ್ಲಿ ಯಾವ ಸಂಶಯವೂ ಇಲ್ಲ. ಚಿಕ್ಕವನಾಗಿದ್ದಾಗ ಐದು ನೂರು ರೂಪಾಯಿಯ ವರೆಗೆ ಅವನು ಸಂಪಾದಿಸಿದ. ಅವನು ಕನಸುಗಳನ್ನು ಕಟ್ಟಿಕೊಂಡಿದ್ದ. ಸ್ವಾತಂತ್ರ್ಯ ಲಭಿಸಿದ ಮೇಲೆ ಸಂಪದ್ಭರಿತವಾದ ಈ ನಾಡಿನಲ್ಲಿ ಜೀವಿಸಬೇಕೆನ್ನುವ ಆಶೆಯುಳ್ಳವನಾಗಿದ್ದ. ಅವನು ಜೀವಿಸಿದ್ದಿದ್ದರೆ ಹತ್ತಿರ ಕುಳಿತಿದ್ದ ಈ ಮನುಷ್ಯ ಹಾಗೆ ಅಲೆಯಬೇಕಾದದ್ದಿತ್ತೇ? ಸದಾಶಿವ ಬದುಕಿದ್ದಿದ್ದರೆ ಇಷ್ಟು ಹೊತ್ತಿಗೆ ಮಂಗಳ ಮದುವೆ ನಡೆಯುತ್ತಿತ್ತು. ಅವನು ಇಂದು ನೆಮ್ಮದಿಯಿಂದ ಸಣ್ಣ ಮಕ್ಕಳನ್ನು ತೊಡೆಯ ಮೇಲಿಟ್ಟುಕೊಂಡು ಲಾಲಿಸ ಬಹುದಾಗಿತ್ತು. ಕಾಯಂಕುಳ ದಡದಿಂದ ಬೀಸುವ ಗಾಳಿಯ ಹೊಡೆತವನ್ನು ಸಹಿಸುತ್ತ

ಹೀಗೆ ಪ್ರಯಾಣ ಮಾಡಬೇಕಾಗಿ ಬರುತ್ತಿರಲಿಲ್ಲ. ಅವನು ಸ್ವಾತಂತ್ರ್ಯಕ್ಕೋಸ್ಕರ ಎಂತಹ ಬೆಲೆ ತೆತ್ತದ್ದು !

ಶಂಕರ ಪಿಳ್ಳೆ ಹೀಗೆ ಚಿಂತಿಸುತ್ತಿರುವಾಗ ಕೃಷ್ಣನ್ ಆಲೋಚಿಸಿದ್ದೂ ಹೆಚ್ಚುಕಡಿಮೆ ಅದೇ ರೀತಿಯಲ್ಲಿ. ಶಂಕರ ಪಿಳ್ಳೆಗೆ ತಿಳಿಯದಂತೆ ಕೃಷ್ಣನ್ ಆ ವೀರ ಯೋಧನನ್ನು ಸೂಕ್ಷ್ಮವಾಗಿ ನೋಡಿದ. ಅದೊಂದು ವಯಸ್ಸಿನ ರೂಪವಾಗಿತ್ತು. ಗಾಂಧಿಟೋಪಿ ಧರಿಸಿ ತ್ರಿವರ್ಣ ಪತಾಕೆಯನ್ನು ಹಿಡಿದು, ಆವೇಶದಿಂದ, ಜ್ವಲಿಸುವ ಕಣ್ಣುಗಳಿಂದ ಎಂದೆಂದೂ ಅನುಯಾಯಿಯಾಗಿ ಮುನ್ನಡೆಸುತ್ತಿದ್ದ ಆ ಚಿತ್ರವನ್ನು ಕೃಷ್ಣನ್ ಕಂಡ. ಪಾಪ ! ಆ ಮನುಷ್ಯನಿಗೆ ಇಂದು ಯಾರೂ ಇಲ್ಲ. ಸ್ವಾತಂತ್ರ್ಯ ದೊರೆಯಿತು. ಸ್ವಾತಂತ್ರ ವೆಂದರೇನೆಂದು ಅವನಿಗೆ ತಿಳಿಯದು. ಈಗಲೂ ಒಬ್ಬ ಧರ್ಮವೀರನಾಗಿ ಹೊರಟಿದ್ದಾನೆ. ಯಾವುದಕ್ಕಾಗಿ ಹೋರಾಡಲು? ಅಕ್ರಮದೊಂದಿಗೆ! ದುರ್ನೀತಿಯೊಂದಿಗೆ! ಈ ಮನುಷ್ಯನಿಗೆ ಅವರ ಜೊತೆಯಲ್ಲಿ ಯುದ್ಧ ಮಾಡಲು ಸಾಧ್ಯವೆ? ಬಹುಶಃ ಇದೇ ರೀತಿ ಶಂಕರ ಪಿಳ್ಳೆಯಂತಹವರು ಎಷ್ಟೋ ಮಂದಿ ನಾನಾ ರೀತಿಯಲ್ಲಿ ತಿರುವನಂತಪುರಕ್ಕೆ ಹೋಗುತ್ತಿರಬೇಕು. ಹೇಗಿದ್ದರೂ ಎಲ್ಲಿದ್ದರೂ ಅವರು ಒಟ್ಟಿಗೆ ಸೇರಲು ಸಾಧ್ಯವೇ? ಈ ಪಾಪಕ್ಕೆ ಯಾವಾಗಲಾದರೂ ಅವನ ನ್ಯಾಯವಾದ ಐದು ಎಕರೆ ಸಿಗಬಹುದೇ? ತಲೆಯಲ್ಲಿ ಮರೆಯಾಗದ ಕೆಲವು ಉದ್ದೇಶಗಳು ಮನೆ ಮಾಡಿಕೊಂಡಿವೆ. ಒಂದೇ ಒಂದು ಆಫೀಸಿಗೂ ಈ ರೀತಿಯಲ್ಲಿ ಹೋಗಿ ಅವನಂ·ಒಂದು ಕೆಲಸ ಮಾಡಿಸಿಕೊಂಡು ಬರಲು ಹೋಗುವುದಿಲ್ಲವೆನ್ನುವುದು ಖಂಡಿತ. ಈ ಮನುಷ್ಯನಿಗೆ ಗತಿಯಿರುವುದೇನು? ಕೃಷ್ಣನ್ ಆಲೋಚಿಸುತ್ತಿದ್ದದ್ದು ಅದು. ಈ ದೇಹ ವೀರಾವೇಶದಿಂದ ಓಡಾಡುತ್ತ 'ಅಕ್ರಮವನ್ನು ಅಂತ್ಯಗೊಳಿಸಬೇಕು' ಎಂದು ಹುಚ್ಚನ ಹಾಗೆ ಘೋಷಿಸಬಹುದು. 'ಇದೋ ಹುಚ್ಚ ಬಂದ' ಎಂದು ಮಕ್ಕಳು ಚಪ್ಪಾಳೆ ತಟ್ಟಿ ನಗಬಹುದು. ರಸ್ತೆಯಲ್ಲಿ ಹೋಗುವವರು ನೋಡಿ ನಿಲ್ಲಬಹುದು. ಆ ಘೋಷಣೆ ಅವರ ಕಿವಿಯೊಳಗೆ ನುಗ್ಗಿ ಅವರಿಗೆ, ಒಂದು ಬದುಕನ್ನೆಲ್ಲ ಧರ್ಮಕ್ಕಾಗಿ, ನೀತಿಗಾಗಿ ಹಾಳು ಮಾಡಿದ ಮನುಷ್ಯ ಎನ್ನಿಸಬಹುದು. ಸದಾಶಿವ ಜೀವವನ್ನು ಅರ್ಪಿಸಿದ. ಈ ಮನುಷ್ಯ ಜೀವದಿಂದ ಉಳಿದ ಎನ್ನಬಹುದು.

ಕೃಷ್ಣನ್ ಅನುಕಂಪವನ್ನು ತೋರಿಸಿದ. ಆ ಮನುಷ್ಯನನ್ನು ಈ ಸಣ್ಣ ಹುಚ್ಚಿನಿಂದ ರಕ್ಷಿಸಿದರೆ ಒಳ್ಳೆಯದೆಂದು ಕೃಷ್ಣನಿಗೆ ತೋರಿತು. ಈ ಅನೀತಿಯ ಕಾಲ ಬದಲಾಯಿಸು ತ್ತದೆ. ನೀತಿನ್ಯಾಯಗಳು ಹೆಚ್ಚುತ್ತವೆ. ಅದರ ತಂಪಾದ ಆಶ್ರಯದಲ್ಲಿ ಸಮಾನ ಹಕ್ಕು ಗಳು, ಸದವಕಾಶಗಳು ದೊರೆತು ಸಮಾಧಾನದಿಂದ ಜೀವಿಸಬಹುದಾದ ಒಂದು ಅವಸ್ಥೆ ಬರುತ್ತದೆ ಎನ್ನುವ ಆಶ್ವಾಸನೆ ಸದಾ ಉಳಿಯುವಂತಿದ್ದಿದ್ದರೆ ಸಾಕಾಗಿತ್ತು.

ಕೃಷ್ಣನ್ ಆ ಮೌನವನ್ನು ಮುರಿದ. ಅವನು ಶಂಕರ ಪಿಳ್ಳೆಯನ್ನು ಹಿಡಿದು ಅಲುಗಿಸಿ ಕೇಳಿದ: "ಅಂತು ಒಂದು ಕೆಲಸ ಇದೆ". ಶಂಕರ ಪಿಳ್ಳೆ ಅದೇನೆಂದು ಕೇಳಿದ.

"ಅದನ್ನು ಹೇಳೋದಕ್ಕೆ ಎಷ್ಟೋ ಹೊತ್ತು ಬೇಕು. ಎಷ್ಟೋ ವಿಷಯ ಇದೆ. ಈ ನಮ್ಮ ಊರಿನಲ್ಲಿ ಹಗ್ಗದ ಕಾರ್ಖಾನೆಯ ಆಫೀಸಿನವರಿಗೆ ಕೆಲಸವಿಲ್ಲ, ಸಂಬಳವಿಲ್ಲ. ಇರುವವರಿಗೆ ಬೋನಸ್ಸಿಲ್ಲ. ಕುಟ್ಟನಾಡಿನಲ್ಲಿ ಕೂಲಿಗಳಿಗೆ ಹಳೆ ಕೂಲಿ. ಜೊತೆಗೆ ಈ ಅನೀತಿ, ಈ ಅಕ್ರಮ. ಯಾವ ಕೆಲಸವೂ ಹಣ ಇರೋನಿಗೆ ನಡೆಯುತ್ತೆ. ಯಾವ ಆಫೀಸಿಗೆ ಹೋದರೂ ಅವರ ಕೆಲಸ ನಡೆಯುತ್ತೆ. ಎಲ್ಲ ಅವರು ಹೇಳಿದ ಹಾಗೆ."

ಶಂಕರ ಪಿಳ್ಳೆ ಅವರ ಊರಿನಲ್ಲೂ ಅದೇ ರೀತಿ ಎಂದು ಹೇಳಿದ. ತೋಟದಲ್ಲಿ ಕೆಲಸದವರು ಮುಷ್ಕರ ಹೂಡಿದರು. ಅದಕ್ಕೆ ಕೂಲಿ ಕಡಿಮೆ ಮಾಡಿದರು. ಹೊದೆಯೋದಕ್ಕೆ ಕಂಬಳಿ ಕೊಡೋದನ್ನು ನಿಲ್ಲಿಸಿದರು. ಯಾವಾಗಲೂ ಇದೇ ದೂರು. ಕೃಷ್ಣನ್ ಹೇಳಿದ:

"ಈ ಮಧ್ಯೆ ಆಲಪ್ಪುಳದಲ್ಲಿ ಒಂದು ಮೀಟಿಂಗ್ ಇತ್ತು. ಈ ರಾಜ್ಯದ ಎಲ್ಲ ಪಟ್ಟಣಗಳಲ್ಲೂ ತೋಟದ ಕೆಲಸಗಾರರ ಯೂನಿಯನ್ ಇದೆ. ಅವರದೊಂದು ಮೀಟಿಂಗ್ ಇತ್ತು. ಅವರ ಒಬ್ಬ ಮುಂದಾಳು ಹೇಳ್ತಿದ್ದ. ಆತ ಇನ್ನೂ ಯಾವ ಯಾವುದೋ ಯೂನಿಯನ್ನಿನ ಮುಂದಾಳು. ದೊಡ್ಡ ಸಾಹುಕಾರ. ಆಗ ಈ ತೋಟಗಳಿಗೆ ವಾರದಲ್ಲಿ ಇಷ್ಟು ಸೋಪು ಕೊಡಬೇಕು, ಮತ್ತೆ ಯಾವುದೋ ಲೆಕ್ಕದಲ್ಲಿ ಸ್ವಲ್ಪ ಹಣ ಕೊಡಬೇಕು ಎಂತ ತೀರ್ಮಾನವಾಗಿತ್ತು. ಬಹಳ ಹಿಂದೆ ಒಂದು ಕೆಲಸದ ಮುಷ್ಕರದ ನಂತರ ಉಂಟಾಗಿದ್ದ ತೀರ್ಮಾನ ಅದು. ಆ ಮೇಲೆ ಅದು ನಡೆಯಲಿಲ್ಲ. ಸೋಪನ್ನೂ ಕೊಡಲಿಲ್ಲ, ಹಣವನ್ನೂ ಕೊಡಲಿಲ್ಲ. ಅದಕ್ಕೆ ಕೆಲಸದವರು ಹೊರಗಿಳಿದಿದ್ದಾರೆ. ಅದರ ಮೀಟಿಂಗ್‌ನಲ್ಲಿ ಆ ಮುಂದಾಳು ಭಾಷಣ ಮಾಡಿದ."

ಭಾಷಣ ಮಾಡಿದ್ದು ಏನು ಎಂದು ವಿವರಿಸಿ ಹೇಳುವುದಕ್ಕೆ ಸಂಕೋಚವಿದ್ದಂತೆ ಕೃಷ್ಣನ್ ನಿಲ್ಲಿಸಿದ.

ಶಂಕರ ಪಿಳ್ಳೆ ಕೇಳಿದ: "ಭಾಷಣದ ವಿಷಯ ಏನು?"

"ಭಾಷಣದಲ್ಲಿ ಅಂಥ ಮುಖ್ಯವಾದದ್ದೇನೂ ಅಲ್ಲ. ಆದರೂ ಉಂಟು. ಈ ಬಡಪಾಯಿಗೆ ಗತಿಗೆಟ್ಟ ಸ್ಥಿತಿ ಬಂದದ್ದು. ಯೂನಿಯನ್ ಮುಂತಾದ್ದನ್ನೆಲ್ಲ ಅವರದಲ್ಲವೇ?"

ಆ ವಿಷಯದಲ್ಲಿ ಶಂಕರ ಪಿಳ್ಳೆಗೆ ಸಂಶಯವಿಲ್ಲ. ಕೃಷ್ಣನ್ ಹೇಳಿದ:

"ಅವರ ಸರ್ಕಾರ ಬಂದರೆ ಈ ಲಂಚ ನಿಲ್ಲುತ್ತೆ. ಲಂಚ ತೆಗೆದುಕೊಳ್ಳುವವನನ್ನು ಶಿಕ್ಷಿಸುತ್ತಾರೆ. ಯಾವುದೋ ರಾಜ್ಯದಲ್ಲಿ ಗೋಲಿಬಾರು ಮಾಡುತ್ತಾರೆ. ತೋಟಿಗೆ ಸೋಪು ಕೊಡುತ್ತಾರೆ, ಬೋನಸ್ಸು ಕೊಡುತ್ತಾರೆ ಎಂದೆಲ್ಲ ಆತ ಭಾಷಣ ಮಾಡಿದ. ಅದರಲ್ಲಿ ಅಷ್ಟೊಂದು ಮುಖ್ಯವಾದದ್ದೇನೂ ಇಲ್ಲ."

ಶಂಕರ ಪಿಳ್ಳೆಗೆ ಸುಳುಹು ಸಿಕ್ಕಿತು: "ಆ ಮುಂದಾಳು ಕಮ್ಯೂನಿಸ್ಟ್ ಪಾರ್ಟಿಯವ

ನಲ್ಲವೆ? ಅವರಿಲ್ಲಿ ರಾಜ್ಯ ಆಳೋದಕ್ಕೆ ಆಗೋದಿಲ್ಲ. ಅವರು ಆಳಿದರೆ ಈ ರಾಜ್ಯ ನಾಶ ಆಗುತ್ತೆ."

ಕೃಷ್ಣ ಆ ಮಾತನ್ನು ವಿರೋಧಿಸುವುದಕ್ಕೆ ಹೋಗಲಿಲ್ಲ. ಆತ ಹೇಳಿದ: "ಆದರೆ ಅವರು ಹೇಳಿದ್ದು, ಈ ಅಕ್ರಮ, ಅನೀತಿ ಕೊನೆಗೊಳ್ಳುತ್ತೆ ಅಂತ. ಅಂತೂ ಬಡಜನರಿಗಾಗಿ ಜೀವಿಸಿ ದುಡೀತೇವೆ ಅಂತ ಅವರು ಹೇಳ್ತಿರೋದು."

ಶಂಕರ ಪಿಳ್ಳೆಯ ಮನಸ್ಸಿಗೆ ಅಸ್ವಾಸ್ಥ್ಯವುಂಟಾಯಿತು. ಕಮ್ಯೂನಿಸ್ಟರು ಆಳಬೇಕು ಎನ್ನುವುದನ್ನು ಊಹಿಸಲೂ ಸಾಧ್ಯವಿಲ್ಲ. ಅವನು ಹೇಳಿದ: "ಅದು ನಡೆಯುವುದಿಲ್ಲ."

ಕೃಷ್ಣನ್ ಹೇಳುವುದು ಆ ಪ್ರದೇಶವಿಡೀ ಅದರಲ್ಲಿ ಸೇರಿಕೊಂಡಿದೆ ಎಂದು. ಅನಂತರ ಆತ ಪ್ರಾರಂಭಿಸಿದ: "ನಾನು ನನ್ನ ವಿಷಯವನ್ನೇ ಹೇಳ್ತೀನಿ. ನಾನು ನನ್ನ ಕಾಸು ಸಿಕ್ಕೋದನ್ನು ನೋಡ್ತೀನಿ. ಇದರಲ್ಲಿ ನನಗೆ ನಂಬಿಕೆ ಇದೆ. ಅವರು ಆಳಿದರೆ ನನ್ನ ಕಾಸು ಖಂಡಿತ ಸಿಕ್ಕುತ್ತೆ. ಆಗ ನಿಮಗೂ ಖಂಡಿತವಾಗಿ ಭೂಮಿ ಸಿಕ್ಕುತ್ತೆ."

ಶಂಕರ ಪಿಳ್ಳೆ ಹೇಳಿದ: "ನಿಮಗೆ ಸಿಕ್ಕೋದು ನಿಮ್ಮ ಮಗ ಗುಂಡಿನೇಟು ಬಿದ್ದು ಸತ್ತದ್ದರಿಂದ."

ಕೃಷ್ಣನ್ ಕಡ್ಡಾಯವಾಗಿ ಹೇಳಿದ: "ಹಾಗಿದ್ದರೆ ಈ ಐದು ಎಕರೆಯೂ ಸಿಕ್ಕುತ್ತೆ. ನಾನು ಹೇಳ್ತೀನಿ." ಶಂಕರ ಪಿಳ್ಳೆ ಅವಿಶ್ವಾಸದಿಂದ ಕೇಳಿದ: "ಅವರು ಯಾವಾಗ ಅಧಿಕಾರಕ್ಕೆ ಬರೋದು?"

"ಇನ್ನು ಬರೋ ಚುನಾವಣೇಲಿ. ಆಗ ನೋಡಿ !"

ಶಂಕರ ಪಿಳ್ಳೆ ಏನೂ ಮಾತಾಡಲಿಲ್ಲ. ಐದು ಎಕರೆ ಎನ್ನುವ ಆಶಾಕಿರಣ ಅವನ ತಲೆಯೊಳಕ್ಕೆ ಹೊಕ್ಕಿತು ಎಂದು ತೋರುತ್ತದೆ. ಅದು ಆ ಮನುಷ್ಯನನ್ನು ಭಯಪಡಿಸಿತು.

ಶಂಕರ ಪಿಳ್ಳೆ ಹೇಳಿದ: "ನಾನು ನನ್ನ ಜೀವನದಲ್ಲಿ ಕಮ್ಯೂನಿಸ್ಟಾಗೋದಿಲ್ಲ." ಕೃಷ್ಣನ್ ಹೇಳಿದ: "ನಾನೂ ಕಮ್ಯೂನಿಸ್ಟಲ್ಲ. ಆಗುವುದೂ ಇಲ್ಲ."

ಒಂದು ಕ್ಷಣ ಕಳೆದು ಕೃಷ್ಣನ್ ಹೇಳಿದ:

"ನೋಡಿ, ಅವರಿದನ್ನೆಲ್ಲ ಹೇಳ್ತಾರೆ. ಬಡಜನರ ಕೆಲಸ ಅಂತ ಭಾವಿಸ್ತಾರೆ. ಅವರನ್ನು ಒಂದು ಸಲ ಕಾಣೋದೊಳ್ಳೆಯದು. ಅದರಲ್ಲಿ ಒಂದು ವಿಚಾರ ಇದೆ. ಆದರೂ ಕಮ್ಯೂನಿಸ್ಟ್ ಆಗೋದಕ್ಕೆ ಸಾಧ್ಯವಿಲ್ಲ."

ತುಂಬ ಹೊತ್ತು ಇಬ್ಬರೂ ಮೌನವಾಗಿದ್ದರು. ಕೃಷ್ಣನಿಗೆ ಸ್ವಲ್ಪ ನಿದ್ದೆ ಬರುತ್ತಿತ್ತು. ಗಂಟು ಬಿಚ್ಚಿ ಒಂದು ಜಮಖಾನವನ್ನು ತೆಗೆದು ಹೊದೆದುಕೊಂಡು ಮಲಗಿದ. ಬೆಂಚಿನ ಮೇಲೆ ಶಂಕರ ಪಿಳ್ಳೆಯೂ ಮುದುರಿಕೊಂಡ.

ಬೆಳಗಾದಾಗ ಬೋಟು ಅಪ್ಪಮುಡಿ ಕಾಯಲಿಗೆ ಬಂದಿತು. ಕೊಲ್ಲದಿಂದ ಹತ್ತು ಗಂಟೆಯ ರೈಲು ಸಿಕ್ಕುತ್ತದೆ ಎಂದು ಕೃಷ್ಣನ್ ಹೇಳಿದ. ಆ ರೈಲುಬಂಡಿ ಒಂದು ಗಂಟೆಗೆ

ತಿರುವನಂತಪುರಕ್ಕೆ ಸೇರುತ್ತದೆ. ಕೃಷ್ಣನ್ ಕೇಳಿದ: "ತಿರುವನಂತಪುರದಲ್ಲಿ ಇಳಿದು ಕೊಳ್ಳೋದು?"

ಶಂಕರ ಪಿಳ್ಳೆಗೆ ಹಾಗೆ ಇಳಿದುಕೊಳ್ಳುವುದಕ್ಕೆ ಒಂದು ಸ್ಥಳವಿಲ್ಲ. ಅದನ್ನು ಕುರಿತು ಅವನು ಆಲೋಚಿಸಿದ್ದೂ ಇಲ್ಲ. ಅವನು ಕೃಷ್ಣನ ಹತ್ತಿರ ಕೇಳಿದ: "ನೀವೋ?"

"ನಾನು ಸುಮಾರು ದಿನ ಆಯ್ತಲ್ಲ ತಿರುವನಂತಪುರ ಆಲಪ್ಪುಳಕ್ಕೆ ಓಡಾಡೋದಕ್ಕೆ ಹೊರಟು. ತಿರುವನಂತಪುರದಲ್ಲಿ ಒಂದು ಜಾಗ ಕಂಡುಹಿಡಿದಿದ್ದೀನಿ."

ಅದು ಎಲ್ಲಿ ಎಂದು ತಿಳಿಯುವುದಕ್ಕಾಗಿ ಶಂಕರ ಪಿಳ್ಳೆ ಕೇಳಿದ.

ಕೃಷ್ಣನ್ ಹೇಳಿದ: "ತಿರುವನಂತಪುರದಲ್ಲಿ ಸಂಪನ್‌ಕೋಡು ಅಂತ ಒಂದು ಸ್ಥಳ ಇದೆ. ಅಲ್ಲಿ ಒಂದು ಒಳ್ಳೆ ಹೋಟೆಲಿದೆ. 'ಶಿವಮಯಂ ಲಕ್ಷ್ಮೀ ಹೋಟೆಲ್' ಅಂತ ಹೆಸರು. ಒಬ್ಬ ಸಣ್ಣ ಪ್ರಾಯದ ಹುಡುಗಿ ನಡೆಸೋದು. ಅವಳ ತಾಯಿ ನಡೆಸಿಕೊಂಡಿದ್ದಳು. ನಾನು ಮೊದಲು ಹೋದಾಗ ಆ ತಾಯಿ ಇದ್ದಳು. ತುಂಬ ಕಡಿಮೆ ಖರ್ಚು. ಒಳ್ಳೆ ಊಟ. ಬೆಳಗ್ಗೆ ಎರಡಾಣೆಗೆ ಗಂಜಿ ಕೊಡ್ತಾಳೆ. ನಾಲ್ಕಾಣೆ ಕೊಟ್ಟರೆ ಊಟ. ಎರಡಾಣೆಗೆ ಒಂದು ಮರಗೆಣಸು ಗಂಜಿಯೂ ಸಿಕ್ಕುತ್ತೆ. ಅಲ್ಲಿಯೇ ಮಲಗಬಹುದು."

ಅಷ್ಟಾದರೂ ದಿನಕ್ಕೆ ಎಂಟಾಣೆ ಬೇಕು ಎಂದು ಶಂಕರ ಪಿಳ್ಳೆ ಯೋಚಿಸುತ್ತಿದ್ದ. ಕಷ್ಟದಿಂದ ಮೂರು ದಿನ ಇರಬಹುದು. ಆ ಮೇಲೋ? ಆ ವಿಷಯದಲ್ಲಿ ಶಂಕರ ಪಿಳ್ಳೆಗೆ ಭಯವಿರಲಿಲ್ಲ. ಒಂದು ಯುದ್ಧಕ್ಕಲ್ಲವೇ ಹೋಗುತ್ತಿರುವುದು? ಕೃಷ್ಣನ್ ಹೇಳಿದ:

"ಆ ಮುದುಕಿ ಒಳ್ಳೆಯವಳಾಗಿದ್ದಳು ಈಗಿನ ಚೀಫ್ ಸೆಕ್ರೆಟರಿ ಇಲ್ಲವಾ ಮೊದಲು ಅಲ್ಲಿ ವಾಸ ಮಾಡಿಕೊಂಡಿದ್ದರು, ಹಿಂದೆ ಕೆಲಸ ಇಲ್ಲದೇ ಇದ್ದಾಗ. ಆದರೆ ಆ ಮನುಷ್ಯ ಒಳ್ಳೆ ಸ್ಥಾನಕ್ಕೆ ಏರಿದ್ದರೂ ಆತನನ್ನು ಕಾಣೋದಕ್ಕೆ ಆ ಮುದುಕಿ ಹೋಗಿಲ್ಲ. ಅಂಥ ಅಭಿಮಾನಿ ಆಕೆ."

ಶಂಕರ ಪಿಳ್ಳೆ ಕೇಳಿದ: "ಸೆಕ್ರೆಟರಿ ಹೋಗಿ ಆ ಮುದುಕೀನ ಕಂಡಿದ್ದರಾ?"

"ಒಳ್ಳೆ ಕೆಲಸ! ಅದೆಲ್ಲ ಅವರಿಗೆ ನೆನಪಿರುತ್ತಾ?"

# [40]

## ಪಿಶಾಚಿ

ಒಂದು ಕಾಗದ, ಲೇಸು ಹಾಕಿದ ಕೈಚೌಕ—ಹೀಗೆ ಯಾವುದಾದರೊಂದು, ಕೇಶವ ಪಿಳ್ಳೆಯ ಮನಸ್ಸಮಾಧಾನವಿಲ್ಲದಂತೆ ಮಾಡುವಂತಹದಿರುತ್ತಿತ್ತು. ಕೆಲವು ದಿನಗಳು ಆಫೀಸಿಗೆ ಬಂದು ವಿಸಿಟಿಂಗ್ ಕಾರ್ಡ್ ಕಳುಹಿಸುತ್ತಿದ್ದದ್ದು. ಒಂದೆರಡು ದಿನಗಳು ಸಂದರ್ಶಿಸಲು ಅವಕಾಶ ಕೊಟ್ಟಿದ್ದರು. ಬಂದರೆ ಹೋಗುವುದೇ ಮರೆತು ಹೋಗುತ್ತಿತ್ತು. ಆಕೆಗೆ ಕೆಲವು ವಾಗ್ದಾನಗಳು ಬೇಕಾಗಿದ್ದುವು. ಅನಂತರ ಸಂದರ್ಶನಕ್ಕೆ ಅವಕಾಶ ಕೊಟ್ಟಿರಲಿಲ್ಲ. ಮನಸ್ಸಿಗೆ ಬೇಸರವುಂಟಾಗಿತ್ತು. ಉಗ್ರವಾದ ತೀರ್ಮಾನ ಅದು. ಒಂದೇ ಒಂದು ಆಶ್ವಾಸನೆ. ತಂಗಮ್ಮ ಪಾರ್ಕ್ ವ್ಯೂಗೆ ಬರುವುದಿಲ್ಲ. ಒಂದಲ್ಲ ಒಂದು ದಿನ ಅವಳು ಅಲ್ಲಿಗೂ ಬಂದುಬಿಡಬಹುದೆನ್ನುವ ಭಯ. ಅವಳೊಬ್ಬಳು ಸಾಹಸಮಯಿ. ಅದನ್ನೂ ಮಾಡಿಬಿಡುತ್ತಿದ್ದಳು. ಹಾಗೆ ಬರುವುದು ಒಂದು ಪಕ್ಷ ಮದಾಲಸೆಯಾಗಿ ಅಥವಾ ಪರಮ ಸಾತ್ವಿಕೆಯಂತೆ. ಅಲ್ಲದಿದ್ದರೆ ಸಕಲ ಅಧಿಕಾರ ದಿಂದ. ಯಾವ ದಿನ ಬೇಕಾದರೂ ಅದು ಸಂಭವಿಸಬಹುದೆನ್ನುವ ಭಯ ಕೇಶವ ಪಿಳ್ಳೆಗೆ. ತಾನು ಮನೆಯಲ್ಲಿದ್ದಾಗ ಬಂದರೆ ಒಂದು ಸಮಾಧಾನ. ಇಲ್ಲದಿದ್ದಾಗ ಬಂದರೋ...... ಅದನ್ನು ಊಹಿಸಲೂ ಸಾಧ್ಯವಿಲ್ಲ. ಏನೆಲ್ಲ ಸಂಭವಿಸಬಹುದು? ಆ ಸ್ತ್ರೀಯರೆಲ್ಲರೂ ಜಗಳವಾಡಬಹುದು ! ಹಕ್ಕಿರುವುದು ಯಾರಿಗೆ ಎಂದು ಜಗಳ ನಡೆಯಬಹುದು. ಒಂದು ವೇಳೆ ಬಲಪರೀಕ್ಷೆಯೂ ನಡೆಯಬಹುದಲ್ಲವೆ? ಇಲ್ಲ. ಆ ವಿಷಯದಲ್ಲಿ ಹೆಂಡತಿಯ ಮೇಲೆ ವಿಶ್ವಾಸವಿದೆ. ಕಾತ್ಯಾಯಿನಿಯಮ್ಮ ಅಂತಹ ಒಂದು ದೃಶ್ಯವನ್ನು ಸೃಷ್ಟಿಸುವುದಿಲ್ಲ. ಆದರೆ ಆಕೆ ಅನುಭವಿಸುವುದು ಏನಾಗಿರಬಹುದು? ಹಿಂದಿನ ಕಥೆ ಗಳನ್ನೆಲ್ಲ ಅವರು ಹೆಂಡತಿಯ ಹತ್ತಿರ ಹೇಳಿದ್ದರು. ಹೆಂಡತಿ ಕ್ಷಮಿಸಿಯೂ ಇದ್ದಳು. ಅದು ಸರಿಯೆ. ಆದರೆ ಎಲ್ಲವೂ ಆದ ಮೇಲೆ ಆ ಮನುಷ್ಯ—ಪುನಃ ಅದೇ ದಾರಿಯಲ್ಲಿ ಹೋದರು. ಅದು ಹೆಂಡತಿ ತಿಳಿಯಬಾರದು ಎಂದು. ಕನ್ಯಾಕುಮಾರಿಯಲ್ಲೂ ಪಿರಮಿಡ್‌ನಲ್ಲೂ ಕಳೆದ ದಿನಗಳು, ಒಂದು ದುರ್ಬಲ ನಿಮಿಷದಲ್ಲಿ ಮದರಾಸಿನಲ್ಲಿ ನೀಡಿದ ವಾಗ್ದಾನ—ಎಲ್ಲವೂ ತಿಳಿದುಹೋಗುತ್ತವೆ. ಅನಂತರ—ಕಾತ್ಯಾಯಿನಿಯ ಹೊಟ್ಟೆಯಲ್ಲಿ ಕೆಂಡ ಸುರಿದ ಹಾಗಾಗುತ್ತದೆ. ಸಮಾಧಾನ ಮಾಡುವುದಕ್ಕೆ ಯಾವ ಮಾರ್ಗವೂ ಇರುವುದಿಲ್ಲ. ಒಂದು ಜೀವಿತ ಕಾಲವಿಡೀ ಶಾಶ್ವತವಾಗಿ ನಿಲ್ಲುವ ಹೃದಯದ ವೇದನೆಯಾಗುತ್ತದೆ ಅದು. ವಾರ್ಧಕ್ಯ ಕಾಲವಿಡೀ ಸಮಾಧಾನವಿಲ್ಲದಾಗು ತ್ತದೆ. ನಿಜವಾಗಿಯೂ ಕಾತ್ಯಾಯಿನಿಯಮ್ಮನಿಗೆ ಅದನ್ನು ಸಹಿಸಲು ಸಾಧ್ಯವಾಗುವುದಿಲ್ಲ.

ಹಾಗೆ ಮನೆಯಿಂದ ಆಫೀಸಿಗೆ ಬಂದರೆ ಒಂದು ದಿನದಲ್ಲಿ ಹದಿನೈದು ಸಲವಾದರೂ ಅವರು ಟೆಲಿಫೋನ್ ತೆಗೆದುಕೊಂಡು ಹೆಂಡತಿಯನ್ನು ಕರೆಯುತ್ತಿದ್ದರು. ಅವಳು ಅಲ್ಲಿಗೆ ಹೋಗಿರುತ್ತಾಳೋ ಎನ್ನುವ ಭಯ. ಫೋನಿನಲ್ಲಿ ಹೆಂಡತಿಯನ್ನು ಕರೆದಾಗಲೆಲ್ಲ ಒಂದೇ ಒಂದು ವಿಷಯ ಕೇಳುತ್ತಿದ್ದುದು. ಆ ವಿಷಯ ಇದು:

"ವಿಶೇಷ ಏನೂ ಇಲ್ಲವಲ್ಲ?"

ಅದು ಕೇಶವ ಪಿಳ್ಳೆಯ ಒಂದು ಸ್ವಭಾವವಾಗಿ ಹೋಗಿತ್ತು.

ಮತ್ತೊಂದು ಭೀತಿಯೂ ಕೇಶವ ಪಿಳ್ಳೆಗೆ ಉಂಟಾಯಿತು. ತನಗೆ ಆ ಸ್ತ್ರೀಯೊಡನಿರುವ ಆಸಕ್ತಿ ಕೈಬಿಟ್ಟು ಹೋಗಿಲ್ಲವೇ ಎಂದು ಅವರು ಸಂಶಯಿಸುತ್ತಿದ್ದರು. ಅವರು ಆಗುಹೋಗುಗಳನ್ನು ಕುರಿತು ಆಲೋಚಿಸಿ ಒಂದು ಮಾರ್ಗವನ್ನು ಕೈಗೊಳ್ಳಬಲ್ಲ ವ್ಯಕ್ತಿ. ತನಗೆ ಆಸಕ್ತಿ ಉಂಟಾದದ್ದಲ್ಲವೆಂದು ನಿಶ್ಚಯವಿತ್ತು. ದಿಕ್ಕು ಬದಲಿಸಿ ಅವಳನ್ನು ನೇರವಾಗಿ ನಿಲ್ಲಿಸಲು ಶ್ರಮಿಸುತ್ತಲೂ ಇದ್ದರು. ಎಲ್ಲಕ್ಕಿಂತಲೂ ಹೆಚ್ಚಾಗಿ ಬೇಡವೆಂದು ಕೈಬಿಡುವ ಶಕ್ತಿಯೂ ಇತ್ತು. ಆದರೆ ಹಾಗೆ ಬೇಡವೆಂದು ಹೇಳಬೇಕಾಗಿದ್ದಲ್ಲಿ ಕಷ್ಟಪಡಬೇಕಾಗಿತ್ತು. ಫೈಲ್ ನೋಡಿಕೊಂಡಿದ್ದಾಗ, ಕಾತ್ಯಾಯಿನಿ ಹತ್ತಿರ ಬಂದಿದ್ದಾಗ, ಎಚ್ಚರವಾಗಿದ್ದಾಗ......... ಅಷ್ಟೇಕೆ ಗಂಭೀರವಾದ ವಿಷಯಗಳ ಚರ್ಚೆ ನಡೆಸುತ್ತಿದ್ದಾಗಲೂ ಅವರಿಗರಿಯದಂತೆ ಅವರ ಮನಸ್ಸು ಕನ್ಯಾಕುಮಾರಿಗೂ ಪಿರಮಿಡ್ಡಿನ ಕಡೆಗೂ ಹೋಗಿಬಿಡುತ್ತಿತ್ತು. ಹಗಲುಗನಸು ಕಾಣುತ್ತ ಕುಳಿತುಬಿಡುತ್ತಿದ್ದರು. ಅಲ್ಲಿಂದ ಮನಸ್ಸು ಹಿಂದೆ ಬರುವುದಕ್ಕೆ ಬಹು ಕಡಿದಾದ ಪರ್ವತವನ್ನು ಹತ್ತಿದಷ್ಟು ಶ್ರಮವಾಗುತ್ತಿತ್ತು. ಎಲ್ಲಿಯೋ ಹಿಡಿದು ನಿಲ್ಲಿಸಿದ ಹಾಗೆ ತೋರುತ್ತಿತ್ತು. ತನ್ನ ಏಕಾಗ್ರತೆ ನಷ್ಟ ಹೊಂದಿದಂತೆ ಕೇಶವ ಪಿಳ್ಳೆಗೆ ತೋರಿತು. ಸರಿಯಾಗಿ ಯಾವ ಕೆಲಸವನ್ನೂ ಮಾಡಿ ಮುಗಿಸಲು ಸಾಧ್ಯವಿಲ್ಲ. ಹಿಂದೆ ಚೀಫ್ ಸೆಕ್ರೆಟರಿ ಕೃಷ್ಣನ್ ನಾಯರ್ ಬುದ್ಧಿಗೆ ಮಂಕು ಕವಿದಾಗ, ಅನಂತರ ಸ್ಟೇಟ್ ಕಾಂಗ್ರೆಸ್ ಚಳುವಳಿ ಪ್ರಾರಂಭವಾದ ಇಕ್ಕಟ್ಟಿನ ಸಂದರ್ಭದಲ್ಲಿ, ನಾಲ್ಕೈದು ವಾಕ್ಯಗಳಲ್ಲಿ ಸಲಹೆ ಕೊಡುವುದಕ್ಕೆ ಸಾಧ್ಯವಾಗಿತ್ತು. ಅದರ ನಂತರವೂ ಬಾಳಿನ ಭಾಗ್ಯಕ್ಕೆ ಅಸ್ತಿಭಾರವೆನ್ನಿಸಿದ ರಿಪೋರ್ಟ್ ಬರೆದು ದಿವಾನರಿಗೆ ಸಮರ್ಪಿಸುವುದಕ್ಕೆ ಸಾಧ್ಯವಾಯಿತು. ಇದೆಲ್ಲ ಯಾವುದೋ ಗುರಿಯಿಟ್ಟುಕೊಂಡು ಆಲೋಚಿಸಿ ರೂಪುಕೊಟ್ಟದ್ದಲ್ಲ. ಇಂದು ಹಾಗೆ ಬುದ್ಧಿಗೆ ತೀಕ್ಷ್ಣತೆಯಿಲ್ಲ. ಔದ್ಯೋಗಿಕ ಕಾರ್ಯಗಳಲ್ಲಿ ಯಾವುದನ್ನೂ ಸರಿಯಾಗಿ ಮಾಡಿ ಮುಗಿಸಿದ್ದೇನೆ ಎನ್ನುವ ಸಂತೃಪ್ತಿಯಿಲ್ಲ. ತಾನು ಮಾಡುತ್ತಿರುವುದರಲ್ಲಿ ಎಲ್ಲಿಯೋ ಯಾವುದೋ ದೋಷವಿದೆಯೆಂದು ಭಾಸವಾಗುತ್ತಿತ್ತು. ಯಾವಾಗಲೂ ಅವರಿಗೆ ಒಂದು ರೀತಿಯ ಆಲಸ್ಯವುಂಟಾಗಿರುತ್ತಿತ್ತು.

ಕನ್ಯಾಕುಮಾರಿಯಲ್ಲಿ ಅವಳು ಬಿಕ್ಕಿಬಿಕ್ಕಿ ಅಳುತ್ತ ಕಾಲು ಹಿಡಿದುಕೊಂಡಳು. ಅವಳ ಕಣ್ಣೀರನ್ನೇ ಕಾಣದ ಅವರ ಮನಸ್ಸನ್ನು ಬದಲಾಯಿಸಲು ಆ ಒಂದು ಹನಿ

ಕಣ್ಣೀರು ಸಾಕಾಗಿತ್ತು. ಆಕೆಯನ್ನು ಒಮ್ಮೆ ಸ್ಪರ್ಶಿಸಿದ್ದ ನಂತರ ಅವರು ಆ ತಪ್ಪು ಮಾಡಿದರು. ಸ್ಪರ್ಶಕ್ಕೆ ಅಂತಹ ಆಕರ್ಷಕಶಕ್ತಿಯಿತ್ತು. ಅನಂತರ ಅವರ ವಿವೇಕ ಮರೆಯಾಗಿತ್ತು. ಪಿರಮಿಡ್‌ನಲ್ಲಿ ಆ ಮಾಂತ್ರಿಕ ಶಕ್ತಿಯಿಂದಾಗಿ ಬೆಳಗಿನ ಹೊತ್ತಿನಲ್ಲಿ ಒಂದು ಪ್ರಕಾಶ ತಲೆಯೊಳಗೆ ಪ್ರಕಾಶಿಸಿತು. ಅದು ರಕ್ಷಿಸುತ್ತಿದೆ ಎಂದು ಅವರಿಗೆ ಅನ್ನಿಸಿತ್ತು.

ಬರುತ್ತಿದ್ದ ಕೈಚೌಕಗಳನ್ನೂ ಕಾಗದಗಳನ್ನೂ ಹೊತ್ತಿಸುತ್ತಿದ್ದರು. ಅನಂತರವೇ ಅವರು ಮನೆಗೆ ಹೋಗುತ್ತಿದ್ದದ್ದು. ಆದರೆ ಈ ಉತ್ಸಾಹ ಒಂದು ಹೊಸ ಮಾರ್ಗವನ್ನು ಪಡೆಯುತ್ತದೆ ಎನ್ನುವುದು ಅವರಿಗೆ ಖಚಿತವಾಗಿತ್ತು. ಅದೇನಾಗಿರುತ್ತದೆ ಎನ್ನುವುದು ತಿಳಿಯಬೇಕಾಗಿದ್ದದ್ದು. ಎಷ್ಟು ಆಲೋಚಿಸಿದರೂ ತಂಗಮ್ಮ ಪುನಃ ಹೇಗೆ ತಮ್ಮನ್ನು ಆಕ್ರಮಿಸುತ್ತಾಳೆ ಎನ್ನುವುದು ತಿಳಿಯದಾಗಿತ್ತು. ಭಯಪಡಿಸಿಯೋ, ದಾರಿಯಲ್ಲೋ ಪಾರ್ಕಿನಲ್ಲೋ ಘಂತ್ತೆಲ್ಲಿಯಾದರೂ ಪ್ರತ್ಯಕ್ಷವಾಗಿ ಬಂದು ಹಿಡಿದು ಬಿಡುತ್ತಾಳೋ ಏನೋ! ಮಾನ ರಕ್ಷಣೆಗಾಗಿ ತನ್ನವನಾಗಿಯೇ ಆಗುತ್ತಾನೆ ಎಂದು. ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂದು ಹೆದರಿಸಬಹುದೇ? ಇನ್ನು ಮೇಲೂ ಅವಳ ಕಣ್ಣೀರಿನ ಬಲೆ ಹೋಗುವುದಿಲ್ಲ. ಯಾವ ರೀತಿಯಲ್ಲಾದರೂ ಅದು ಸಂಭವಿಸಬಹುದು ಎಂದು ಅವರು ನಿರೀಕ್ಷಿಸುತ್ತಿದ್ದರು.

ಪಾರ್ಕ್ ಫ್ಯಾನಲ್ಲೂ ಕಳೆದು ಹೋದ ಪ್ರಸನ್ನತೆ ಪುನಃ ದೊರೆಯಲಿಲ್ಲ. ಮತ್ತೆಂದೂ ಅದು ದೊರೆಯಲಾರದೆ? ಎಂದೆಂದಿಗೂ ಅದು ಮಾಯವಾದಂತೆ ತೋರಿತು. ಅದನ್ನು ಪುನಃ ಪಡೆಯುವುದಕ್ಕಾಗಿ ಅವರು ಶ್ರಮಿಸುತ್ತಿದ್ದರು. ಆ ತೇಜಸ್ಸನ್ನೂ ಪ್ರಸನ್ನತೆಯನ್ನೂ ಪುನಃ ಪಡೆಯಲು ಕೇಶವ ಪಿಳ್ಳೆ ಅತಿಯಾಗಿ ಆಗ್ರಹಿಸುತ್ತಿದ್ದರು. ಪುನಃ ಅದು ಹೇಗೆ ದೊರೆತೀತು? ಒಂದು ದಾರಿಯೂ ಕಾಣಿಸುತ್ತಿಲ್ಲ. ಆ ದೀಪವನ್ನು ಊದಿ ಆರಿಸಿದ ನಿಮಿಷ ಅವರನ್ನು ಶಪಿಸಿದಂತೆ ಅವರಿಗೆ ಅಲ್ಲಿಗೆ ಹೋದಾಗ ಅನ್ನಿಸುತ್ತಿತ್ತು. ಜೀವನದ ಬಹು ದೊಡ್ಡ ಅಪರಾಧವಾಗಿತ್ತು ಅದು. ಅತ್ಯುತ್ಕಟವಾದ ಪಶ್ಚಾತ್ತಾಪವೂ ಕೇಶವ ಪಿಳ್ಳೆಗಿತ್ತು. ಅಂತು ಕಾತ್ಯಾಯಿನಿಯಮ್ಮನಿಗೆ ಅದು ಸ್ವಲ್ಪವೂ ತಿಳಿದಿರಲಿಲ್ಲ. ತಿಳಿದರೆ ಏನೆಲ್ಲ ನಡೆಯಬಹುದು? ಎಂದಿನ ಜೀವನದ ಎಲ್ಲ ಪದ್ಧತಿಗಳೂ ಇವೆ. ಗೇಟಿಗೆ ಬಂದು ಗಂಡನನ್ನು ಸ್ವಾಗತಿಸುವುದುಂಟು. ಅವರು ಫೈಲ್ ನೋಡುವಾಗ ಹತ್ತಿರ ಕುಳಿತುಕೊಳ್ಳುವುದುಂಟು. ಆದರೆ ಕುಳಿತು ಕುಳಿತು ಆಕೆಗೆ ತೂಕಡಿಕೆ ಬರುತ್ತಿತ್ತು. ಉದ್ಯಾನದಲ್ಲಿ ನಡೆಯುವಾಗ ಅವರ ಹಿಂದುಗಡೆಯಲ್ಲೇ ಇರುತ್ತಿದ್ದಳು. ಆದರೆ ಗಂಡನ ಮನಸ್ಸು ಎಲ್ಲಿಯೋ ಅಲೆಯುತ್ತಿದ್ದಂತೆ ತೋರಿತು. ಆತನ ಸಮಸ್ಯೆ ಯಾವಾಗಲೂ ಭಾರವಾಗಿರುತ್ತಿತ್ತು. ರಾತ್ರಿಯಲ್ಲಿ ಗಂಡನ ಎದೆಯ ಮೇಲೆ ಕೈಯಿಟ್ಟು ಮಲಗಿರುತ್ತಿದ್ದಳು. ಗಂಡ ಏನನ್ನೂ ಮಾತಾಡದೆ ನಿದ್ದೆ ಬಂದವರಂತೆ ಮಲಗಿರುತ್ತಿದ್ದರು—ಆದರೆ ನಿದ್ದೆ ಬಂದಿರುತ್ತಿರಲಿಲ್ಲ. ,ಹಿಂದೆ ಗಟ್ಟಿಯಾಗಿ ನಗುತ್ತಿದ್ದದ್ದೂ ಆ ಉತ್ಸಾಹವೂ ಇಂದ್ರಜಾಲವೋ ಎನ್ನುವಂತಿದ್ದ ಆ ಅನುಭವಗಳೆಲ್ಲವೂ ನೆನಪಾಗು

ತ್ತಿದ್ದುವು. ಆ ಮ್ಲಾನತೆ ಸರಿಯಲ್ಲ ಎಂದು ಕಾತ್ಯಾಯಿನಿಯಮ್ಮನಿಗೆ ಗೊತ್ತು. ಆಫೀಸಿನಿಂದ ಕೆಲಸ ಮಾಡಿ ಬಳಲಿ ಬರುವ ಗಂಡನನ್ನು ಹಾಗೆ ಬಾಡಿದ ಮುಖದಿಂದಲ್ಲ ಸ್ವೀಕರಿಸುವುದು. ಅವರಿಗೆ ಉತ್ಸಾಹವೂ ಉನ್ಮೇಷವೂ ದೊರೆಯಬೇಕಾಗಿದ್ದದ್ದು. ಇಷ್ಟವಾದ ಆಹಾರವನ್ನು ಕೊಡುವುದರಿಂದ ಅದು ದೊರೆಯುವುದಿಲ್ಲ. ಅದು ಉಪಚಾರವಲ್ಲ. ಅದೆಲ್ಲವೂ ಕಾತ್ಯಾಯಿನಿಯಮ್ಮನಿಗೆ ಗೊತ್ತಿತ್ತು. ತಾನು ಕರ್ತವ್ಯ ನಿರ್ವಹಣೆಯಲ್ಲಿ ಸೋತುಹೋಗುತ್ತಿದ್ದೇನೆ ಎಂದೂ ಆಕೆಗೆ ಗೊತ್ತಿತ್ತು. ಅದು ಆಕೆಗೆ ಸಂಬಂಧಿಸಿದಂತೆ ಬದಲಾಯಿಸಿದ ಹಾಗೆ ತೋರುತ್ತಿತ್ತು. ಹಸಿ ಮಣ್ಣನ್ನು ಉಂಡೆಕಟ್ಟಿ ಕೊಡ ಮಾಡಿ ನೀರು ತರುವ ಪತಿವ್ರತೆಯ ಶಕ್ತಿ ನಷ್ಟವಾಗಿ ಹೋಯಿತು. ಆದರೆ ಆ ನೀರಿನಲ್ಲಿ ಕೂಡ ಮತ್ತೊಂದು ಪುರುಷ ರೂಪನ್ನು ಅವಳು ಕಂಡಿಲ್ಲ. ಹೇಗೆ ಈ ಶಕ್ತಿ ನಷ್ಟಗೊಂಡದ್ದು? ಆಕೆಯ ಅಂತರಂಗ ವೇದನೆಗೊಳಗಾಗಿತ್ತು. ಅಲ್ಲಿ ಗಂಡ ಹೆಂಡತಿ ಮಾತನಾಡುವುದು ಕಡಿಮೆಯಾಗಿತ್ತು. ಯಾವುದಾದರೂ ಅಗತ್ಯದ ವಿಷಯದಲ್ಲಿ ಮಾತ್ರ ಅಲ್ಪ ಸ್ವಲ್ಪ ಮಾತನಾಡುತ್ತಿದ್ದರು.

ಒಂದು ದಿನ ಕಾತ್ಯಾಯಿನಿಯಮ್ಮ ಕೇಳಿದಳು: "ಯಾಕೆ ಗಂಟೆಗೆ ನಲವತ್ತು ಸಲ ಆಫೀಸಿನಿಂದ ವಿಶೇಷ ಏನೂ ಇಲ್ಲ ತಾನೇ ಅಂತ ಕೇಳೋದು? ಯಾವುದೋ ಭಯ ಇದೆ ಅಂತ ಕಾಣುತ್ತೆ."

ಕೇಶವ ಪಿಳ್ಳೆಗೆ ಥಟ್ಟನೆ ಉತ್ತರ ಹೇಳಲಾಗಲಿಲ್ಲ. ಬುದ್ಧಿಮಾಂದ್ಯವುಂಟಾಗಿದ್ದರೂ ಒಂದು ನಿಮಿಷದಲ್ಲಿ ಆ ಬುದ್ಧಿ ಹರಿತವಾಯಿತು. ಒಂದು ಸಲ ನೆಟ್ಟಗೆ ಕುಳಿತು ಅವರು ಹೇಳಿದರು:

"ಮಂಕಾಗಿರೋ ನಿನ್ನನ್ನು ನೋಡಿ ಇಲ್ಲಿಂದ ಹೋಗುವುದು. ಅದಕ್ಕೆ ಆಗಾಗ ಕರೆದು ಕೇಳುವುದು."

ಸದ್ಯ ಗೆದ್ದೆ. ಸರಿಯಾದ ಉತ್ತರ ಕೊಟ್ಟೆ. ಹೇಗೆ ಅಂತಹ ಒಂದು ಉತ್ತರ ದೊರೆಯಿತು ಎಂದು ಕೇಶವ ಪಿಳ್ಳೆ ಆಶ್ಚರ್ಯಪಡುತ್ತಿದ್ದರು. ತಮ್ಮನ್ನು ತಾವೇ ಅಭಿನಂದಿಸಿಕೊಂಡರು. ಆ ಉತ್ತರ ಅರ್ಥವಾಯಿತು ಎಂದು ಮಾತ್ರ ತಿಳಿದರೆ ಸಾಕು. ತಿಳಿಯದಿರುವುದಕ್ಕೆ ಸಾಧ್ಯವಿಲ್ಲ. ಆದರೆ ಕಾತ್ಯಾಯಿನಿಯಮ್ಮ ಏನೂ ಮಾತಾಡಲಿಲ್ಲ. ಅವರು ಹೇಳಿದ ಉತ್ತರ ಅವಳಿಗೆ ಅರ್ಥವಾಯಿತೋ ಇಲ್ಲವೋ ತಿಳಿಯದು. ಕೇಶವ ಪಿಳ್ಳೆ ಕೇಳಿದರು:

"ನೀನು ಯಾವಾಗಲೂ ಯಾಕೆ ಇನ್ನೇನು ಅತ್ತುಬಿಡ್ತೀನಿ. ಈಗ ಅತ್ತುಬಿಡ್ತೀನಿ ಅನ್ನೋ ಹಾಗೆ ಇರೋದು? ಅದು ಯಾಕೆ?"

ಕಾತ್ಯಾಯಿನಿಯಮ್ಮ ಗಂಡನನ್ನು ಒಂದು ಪ್ರಶ್ನೆ ಕೇಳಬೇಕಾಗಿತ್ತು.

"ಯಾಕೆ ಒಂದು ಉತ್ಸಾಹವೂ ಇಲ್ಲದೆ ಯಾವಾಗಲೂ ಏನೋ ಆಲೋಚಿಸಿಕೊಂಡು, ವಿಷಮಗೊಂಡು, ನಾನು ಬೇಡ ಅನ್ನಿಸಿದ ಹಾಗೆ ಇರ್ತೀರಿ? ನಾನು ಹತ್ರ

ಬಂದು ಕುಳಿತಿದ್ದರೂ ಇಲ್ಲೊಬ್ಬಳು ಕೂತಿದ್ದಾಳೆ ಅನ್ನೋದೂ ಕಾಣೋದಿಲ್ಲ. ನನಗೆ ಇದನ್ನು ನೋಡಿದಾಗಲೆಲ್ಲ ಅಳು ಬರೋ ಹಾಗಾಗುತ್ತೆ. ಹಿಂದೆ ಊರಿನಲ್ಲಿ ನನಗೆ ಇದನ್ನೆಲ್ಲ ಕಾಣೋದಕ್ಕಾಗ್ತಿರಲಿಲ್ಲ. ಈಗ ನನಗೆ ಗೊತ್ತಾಗುತ್ತೆ: ನನ್ನನ್ನು ಉತ್ಸಾಹ ವಾಗಿರೋದಕ್ಕೆ ಹೇಳಿಕೊಟ್ಟು ಇದ್ದಕ್ಕಿದ್ದ ಹಾಗೆ ನಾನು ಬೇಡ ಅಂತ ಹೇಳಿದ ಹಾಗೆ ನಡೆದುಕೊಳ್ತೀರಿ. ನಾನು ಅಂದುಕೊಂಡಿದ್ದೆ—ನಿಮ್ಮನ್ನು ನಾನು ಸಂತೋಷದಿಂದ ಇರಿಸಿದ್ದೀನಿ, ನಾನೂ ಸಂತೋಷವಾಗಿದ್ದೀನಿ ಅಂತ. ನಾನು ಸಂತೋಷವಾಗಿರೋದು ಬೇಡ ಅಂತ ಮಾಡಿದಿರಿ."

ಕೇಶವ ಪಿಳ್ಳೆಗೆ ಅವನ್ನು ಪೂರ್ಣವಾಗಿ ನಿರಾಕರಿಸುವುದಕ್ಕಾಗಲಿಲ್ಲ. ಅವರು ಹೇಳಿದರು: "ಈಗ ನನ್ನ ಉದ್ಯೋಗದಲ್ಲಿರುವ ತೊಂದರೆ ನಿನಗೆ ಗೊತ್ತಾ?"

"ಏನು ತೊಂದರೆ?"

"ಮಲಬಾರನ್ನು ಸೇರಿಸಿ ಕೇರಳ ಮಾಡಿದ ಮೇಲೆ ಮನಸ್ಸಿಗೆ ಒಂದು ಸ್ವಲ್ಪವೂ ಸಮಾಧಾನ ಇಲ್ಲ. ಈ ಮದರಾಸಿನಿಂದ ಬಂದ ಉದ್ಯೋಗಸ್ಥರು ಒಂದು ತೊಂದರೆ ಮಾಡಿದರು. ಕೆಲಸದಲ್ಲಿ ಸಾಮರ್ಥ್ಯ, ತಿಳಿವಳಿಕೆ ಎಲ್ಲ ತಮಗೆ ಹೆಚ್ಚು ಅಂತ ಅವರ ಭಾವನೆ. ಇಲ್ಲಿರೋ ಉದ್ಯೋಗಸ್ಥರೆಲ್ಲ ಲಂಚಕೋರರು, ಮಡೆಯರು, ಮುಠ್ಠಾಳರು ಅಂತ ಅವರ ಭಾವನೆ. ಇಲ್ಲಿರೋರಿಗೆ ಮದರಾಸಿನಿಂದ ಬಂದ ನೌಕರರು ಒಂದು ಹೆಸರು ಕೊಟ್ಟಿದ್ದಾರೆ—ಹೇಳಲಾ? ಗುಮಾಸ್ತರು."

ಆ ಮಾತಿನಲ್ಲಿ ಅಂತಹ ದೊಡ್ಡ ವಿಷಯವೇನೂ ಕಾತ್ಯಾಯಿನಿಗಿರಲಿಲ್ಲ. ಇರುವು ದಕ್ಕೆ ಕಾರಣವೂ ಇಲ್ಲವಲ್ಲ. "ಇದೆಲ್ಲ ಇಷ್ಟು ದಿನ ಹೇಳಿದ್ದೇ ತಾನೇ?"

ತಾನು ಹೇಳುವುದರಲ್ಲಿ ಕಾತ್ಯಾಯಿನಿಯಮ್ಮನಿಗೆ ನಂಬಿಕೆ ಹೆಚ್ಚಬೇಕು ಎಂದು ಕೇಶವ ಪಿಳ್ಳೆಯ ಉದ್ದೇಶವಾಗಿತ್ತು. ಹಾಗಾದರೆ ಮಾತ್ರ ತನ್ನ ಮ್ಲಾನತೆಗಿರುವ ಕಾರಣ ಸರಿಯಾಗುತ್ತದೆ. ಅವರು ಹೇಳಿದರು:

"ಆ ದಿನ ನಾನು ಸುಮ್ಮನೆ ಊಹಿಸಿ ಹೇಳಿದ್ದು ಅಷ್ಟೆ. ಈಗ ಅದು ನಿತ್ಯ ತಿಳಿದು ಬರ್‍ತಿದೆ. ಅದರ ಇಡೀ ಕಷ್ಟ ಅನುಭವಿಸುವವನು ನಾನು. ನಿನಗೆ ನನ್ನ ಕಷ್ಟದ ಪ್ರಮಾಣ ಎಷ್ಟು ಅಂತ ತಿಳಿದುಕೊಳ್ಳೋದಕ್ಕೆ ಸಾಧ್ಯವಿಲ್ಲ."

ಕೇಶವ ಪಿಳ್ಳೆ ಹೆಂಡತಿಯನ್ನು ಸಮಾಧಾನಪಡಿಸುವುದಕ್ಕಾಗಿ ಒಂದು ಕಥೆ ಕಟ್ಟಿ ಹೇಳಿದ್ದಲ್ಲ. ಮದರಾಸ್ ಸರ್ವೀಸಿನಿಂದ ಉದ್ಯೋಗಸ್ಥರು ಬಂದಾಗ ಸರ್ಕಾರಕ್ಕೆ ಸಂಬಂಧಿಸಿದ ಪ್ರಶ್ನೆಗಳು ಸಂಕೀರ್ಣಗೊಂಡುವು. ಔದ್ಯೋಗಿಕ ಜೀವನದಲ್ಲಿ ವಿಷಮತೆ ಗಳು ಕಾತ್ಯಾಯಿನಿಯಮ್ಮನಿಗೆ ಅರ್ಥವಾಗುವುದಿಲ್ಲದಿದ್ದರೂ ಗಂಡನ ತೊಂದರೆಗಳು ಅರ್ಥವಾಗುತ್ತಿದ್ದುವು. ಸ್ವಲ್ಪ ಮಟ್ಟಿನ ಸಮಾಧಾನವನ್ನು ಪಡೆಯುವುದಕ್ಕಾಗಿ ಕಾತ್ಯಾ ಯಿನಿಯಮ್ಮನಿಗೆ ಹಾಗನ್ನಿಸಿತು. ಅವಳು ಶ್ರದ್ಧೆ ವಹಿಸಿದಂತೆ ತೋರಿತು. ಕೇಶವ ಪಿಳ್ಳೆ ಹೇಳಿದರು: "ಅವರ ವಿಚಾರ—ದೊಡ್ಡ ಮದರಾಸಿನಿಂದ ಬಂದವರು ಬಹಳ ದೊಡ್ಡ

ಬ್ರಿಟಿಷಿನವರ ಹತ್ರ. ಐ. ಸಿ. ಎಸ್. ಅಧಿಕಾರಿಗಳ ಹತ್ರ ಕೆಲಸ ಕಲಿತದ್ದು—ಮುಂತಾದ್ದೆಲ್ಲ ಇದೆ. ಅವರ ಹೆಮ್ಮೆ ಕಂಡರೆ ನಮ್ಮ ರಾಜ್ಯದವರಿಗೆ ತಾತ್ಸಾರ. ಯಾವಾಗಲೂ ಮದ್ರಾಸಿನಿಂದ ಬಂದವರನ್ನು ಕೆಳಗೆ ಹಾಕಬೇಕು ಅನ್ನೋದು ಇಲ್ಲಿಯ ಅಸಭ್ಯರ ದೃಷ್ಟಿ. ಅದು ಇಡೀ ಕಾಣಿಸೋದು ಫೈಲಿನಲ್ಲಿ. ಈ ಮಧ್ಯೆ ಮತ್ತೊಂದು ತೊಂದರೆ. ಮದ್ರಾಸಿನಿಂದ ಬಂದವರ ಸಂಬಳ ಹೆಚ್ಚು. ಸರ್ವೀಸು ಕಡಿಮೆ. ಅವರಿಗೆ ದೊಡ್ಡ ಗ್ರೇಡ್ ಬೇಕು. ಇಲ್ಲಿ ಸರ್ವೀಸ್ ಆದವರು ಗೊಣಗ್ತಾರೆ. ಈ ಮದರಾಸಿನಿಂದ ಬಂದವನು ತಲೆ ಮೇಲೆ ಕುಳಿತುಕೊಳ್ಳುತ್ತಾನೆ. ಅವನನ್ನು ಮೇಲೆ ಕೂರಿಸ್ತಾರೆ ಅನ್ನುವ ಹೆದರಿಕೆ. ಇಡೀ ಸೆಕ್ರೆಟರಿಯೇಟ್ ತೊಂದರೆಯಲ್ಲಿದೆ. ಈ ಪರಸ್ಪರ ವಿಶ್ವಾಸವಿಲ್ಲದೇ ಇರೋದೂ ಕೆಳಗಿಳಿಸುವ ಶ್ರಮವೂ ಸೇರಿಕೊಂಡು ಸೋತ ಹಾಗೇನೇ."

ಸ್ವಲ್ಪ ಹೊತ್ತು ಬಿಟ್ಟು ಕೇಶವ ಪಿಳ್ಳೆ ಹೇಳಿದರು: "ನಮಗೂ ಈ ತೊಂದರೆ ಉಂಟಾಗೋದರಲ್ಲಿದೆ."

ಕಾತ್ಯಾಯಿನಿಯಮ್ಮ ಕೇಳಿದಳು:

"ಯಾವನೋ ಒಬ್ಬ ಸಂಬಳ ಹೆಚ್ಚಿಗೆ ಇರೋನು ಬರ್ತಾನೆ ಅನ್ನೋ ವಿಷಯ ತಾನೆ?"

ಕೇಶವ ಪಿಳ್ಳೆ ಹೇಳಿದರು:

"ಹೌದು, ಅದೇ. ಅವನಿಗೆ ನನಗಿಂತ ಸರ್ವೀಸು ಕಡಿಮೆ. ಹೆಚ್ಚಿಗೆ ಸಂಬಳ. ಅವನು ಸೆಕ್ರೆಟರಿಯಾಗಿ ಬಂದಿದ್ದಾನೆ. ಅದೊಂದು ಪ್ರಶ್ನೆ ಇದೆ. ಮತ್ತೊಂದು ವಿಷಯ. ಅವನು ಕೇಂದ್ರದಲ್ಲಿ ದೊಡ್ಡ ಕೈ ಇರೋನು. ನಮಗೆ ಡೆಲ್ಲಿಯಲ್ಲಿ ಯಾರಿದ್ದಾರೆ? ನಮಗೆ ನಾವು ಮಾತ್ರ. ಅಲ್ಲದೆ ಯಾರಿದ್ದಾರೆ? ಕೇಂದ್ರದಲ್ಲಿ ಕೆಲವು ಮಂತ್ರಿಗಳು ಅವನ ಸ್ವಂತ ಮನುಷ್ಯರು. ಪಾರ್ಲಿಮೆಂಟಿನಲ್ಲಿ ಸ್ವಂತ ಜನರಿದ್ದಾರೆ. ಕಮ್ಯೂನಿಸ್ಟರು. ಕಾಂಗ್ರೆಸ್ ಮೆಂಬರುಗಳು ಅವನನ್ನು ಎತ್ತಿ ಹಿಡೀತಾರೆ."

ಅರ್ಥವನ್ನು ಸ್ವಗತವಾಗಿ ಕೇಶವ ಪಿಳ್ಳೆ ಹೇಳಿಕೊಂಡರು: "ಈ ಮೇನೋನ್‌ಗಳು ನಂಬಿಯಾರರು, ನಂಬಿಡಿಯರು, ಚಾಕ್ಯಾರರು, ಪೊದುವಾಳರು—ಎಲ್ಲರೂ ಮಲಬಾರಿನವನ ವಿಷಯ ಬಂದಾಗ ಒಟ್ಟಾಗ್ತಾರೆ. ನನಗೆ ಐ. ಎ. ಎಸ್. ಡಿಗ್ರಿ ಕೊಡೋದನ್ನ ಕೇಂದ್ರದಲ್ಲಿರುವ ಮಲಬಾರಿನ ಮನುಷ್ಯ ತಳ್ಳಿಹಾಕಿದ. ಆಗ ತೊಂದರೆ ಮಾಡಿದ್ದು ಕಾಂಗ್ರೆಸ್, ಕಮ್ಯುನಿಸ್ಟ್, ಪಿ. ಎಸ್. ಪಿ. ಯಾವುದೂ ಅಲ್ಲ. ಆ ಹೊಂದಾಣಿಕೆ ಈ ತಿರುವಾಂಕೂರಿನವರಿಗಿಲ್ಲ. ಇಲ್ಲಿ ಒಬ್ಬನಿಗೊಬ್ಬ ಕೊಕ್ಕೆ ಇಡೋದೇ ಸಂಪ್ರದಾಯ."

ಕಾತ್ಯಾಯಿನಿ ನಿರ್ದೇಶಿಸುವದಕ್ಕಿದ್ದದ್ದು ಎಷ್ಟೋ ವರ್ಷಗಳಿಂದ ನೆಲೆ ನಿಂತಿದ್ದ ತೀರ್ಮಾನವೇ.

"ಅಷ್ಟು ಕಷ್ಟವಾದರೆ ಹಿಂದಿರುಗಿ ಹೋಗೋದು. ಮನಸ್ಸನ್ನ ಇಷ್ಟೊಂದು ವಿಷಮಗೊಳಿಸಿಕೊಳ್ಳೋದ್ಯಾಕೆ?"

ಕೇಶವ ಪಿಳ್ಳೆ ಹಾಗೆ ಆ ವಿಷಯವನ್ನು ಕೈ ಬಿಡಲು ಸಿದ್ಧರಾಗಿಲ್ಲ. "ಹಾಗೆ ಎಲ್ಲ ವನ್ನೂ ಬಿಟ್ಟುಕೊಡೋದಕ್ಕಾಗುತ್ತಾ? ನಾನು ಜೀವನದಲ್ಲಿ ಒಂದು ನಾಟಕ ಪ್ರಾರಂಭಿಸಿದೆ. ಆ ನಾಟಕ ಪೂರ್ತಿಯಾಗಿ ಆಡಿ ಮುಗಿಸಬೇಕು. ಆ ಸೆಕ್ರೆಟರಿಯ ಅಹಂಭಾವ ಮೂರು ನಾಲ್ಕು ಸಲ ತಲೆಗೆ ಒಂದೊಂದು ಏಟು ಕೊಟ್ಟಿತ್ತು. ಅವನು ನನ್ನನ್ನು ನೋಡುವುದಕ್ಕೆ ಬಂದದ್ದೇ ಒಂದು ಅಹಂಕಾರದಿಂದ. ನನ್ನನ್ನು ಕಂಡು ಅವನಿಗೆ ಸಹಿಸಲಿಲ್ಲ. ಹ್ಞು. ನಾನೂ ನೋಡ್ತೀನಿ."

ಕಾತ್ಯಾಯಿನಿಗೆ ಆಗಲೂ ಹೇಳಲಿದ್ದದ್ದು ಈ ಕೆಲಸ ಕೈಬಿಟ್ಟರಾಯ್ತು ಎಂದು.

ಕೇಶವ ಪಿಳ್ಳೆಗೆ ಮತ್ತೊಂದು ವಿಷಯವನ್ನು ಹೆಂಡತಿಗೆ ತಿಳಿಸುವುದಿತ್ತು. ಆ ವಿಷಯ ಕಾತ್ಯಾಯಿನಿಯಮ್ಮನಿಗೆ ಸ್ವಲ್ಪ ಇಷ್ಟವಾಗಿರುತ್ತದೆ ಎಂದು ತೋರಿತು.

"ಮೊದಲು ಆಶ್ರಮದ ಹಣ ಸಂಗ್ರಹಕ್ಕೆ ಇಲ್ಲಿ ಕೆಲವರು ಹೆಂಗಸರು ಬಂದಿದ್ದದ್ದು, ಅವರ ನಡೆನುಡಿ ನಿನಗೆ ಹಿಡಿಸದೆ ಹೋಗಿದ್ದದ್ದು—ಅದೆಲ್ಲ ನೆನಪಿದೆಯಾ?"

"ನೆನಪಿದೆ"—ಕಾತ್ಯಾಯಿನಿಯಮ್ಮ ಹೇಳಿದಳು.

ಕೇಶವ ಪಿಳ್ಳೆ ಒಂದು ಹುಸಿನಗೆ ನಗುತ್ತ ಹೇಳಿದರು: "ಈಗ ಮದ್ರಾಸ್ ಸರ್ವೀಸಿನಿಂದ ಬಂದವರ ಹೆಂಡತಿಯರನ್ನು ನೋಡಿದರೆ ನೀನು ಏನಂತೀಯೋ?"

"ಹ್ಞಾ! ಏನು?"

"ಅವರ ಕಾಡಿಗೆ, ತಲೆಗಂಟು ಹಾಕಿಕೊಳ್ಳುವುದು ಎಲ್ಲವೂ ಫ್ಯಾಷನ್. ಮದ ರಾಸು ಸಿನಿಮಾ ನಟಿಗಳ ನಾಡಲ್ಲವಾ? ಅವರು ಬರೋದು ಅಲ್ಲಿಂದ. ಈ ತಿರುವನಂತಪುರದ ಹೆಂಗಸರನ್ನು ಅವರು ಕೆಳಗಿಳಿಸಿದರು. ಈ ತಿರುವನಂತಪುರದವರು ಬಡಗು ದಿಕ್ಕಿನವರನ್ನು ಕುರಿತು ಏನಂತಾರೆ ಗೊತ್ತಾ?"

'ಏನು?' ಎನ್ನುವ ರೀತಿಯಲ್ಲಿ ಕಾತ್ಯಾಯಿನಿಯಮ್ಮ ನೋಡಿದಳು. ನಿಜವಾಗಿಯೂ ಕಾತ್ಯಾಯಿನಿಯಮ್ಮನ ಹೃದಯ ಹಗುರವುಂಟಾಗಿರಲಿಲ್ಲ. ಆ ದಾರಿಗೆ ಇನ್ನೂ ಬಹಳ ದೂರ ಸಾಗಬೇಕು. ಕೇಶವ ಪಿಳ್ಳೆ ಹೇಳಿದರು: "ನಿತಂಬಾಲಂಕಾರ ಪ್ರದರ್ಶನ."

"ಅಂದರೆ?"

"ಹೆಣ್ಣುಗಳು ಹಿಂಭಾಗ ಅಲಂಕರಿಸಿಕೊಂಡು ತೋರಿಸುವುದು. ಅದಕ್ಕೆ ಆ ಹೆಸರು."

ಕಾತ್ಯಾಯಿನಿಯಮ್ಮ ಹೇಳಿದಳು:

"ಅದು ಅವರು ಮುಂಡು ಉಟ್ಟುಕೊಳ್ಳೋ ರೀತಿ. ಚೆನ್ನಾಗಿರುತ್ತೆ. ಅದಲ್ಲದೆ ಅದು ಸಂಪ್ರದಾಯವೂ ಹೌದು. ಈ ತಿರುವನಂತಪುರದ ಹೆಂಗಸರ ಹಾಗೆ ಮೈತೋರಿಸಿಕೊಂಡು ನಡೆಯೋದಲ್ಲ."

ಇಷ್ಟಾದರೂ ಕಾತ್ಯಾಯಿನಿಯಮ್ಮ ಉತ್ಸಾಹಗೊಂಡಂತೆ ತೋರಲಿಲ್ಲ. ಅನೇಕ

ವಿಧಗಳಲ್ಲಿ ಆತ ಶ್ರಮಿಸಲಿಲ್ಲವೆ? ಹೆಣ್ಣುಗಳ ವೇಷದ ವರೆಗೂ ಮಾತಾಡಿ ಪ್ರಯತ್ನಿಸಿ ನೋಡಿದರು. ಇನ್ನೂ ಒಂದು ವಿಷಯವನ್ನು ಕೇಶವ ಪಿಳ್ಳೆಗೆ ಹೇಳುವುದಿತ್ತು.

"ಈಗ ಪುನಃ ಚುನಾವಣೆ ಬರುತ್ತೆ. ನನ್ನ ನಂಬಿಕೆ ಇನ್ನು ಮೇಲೆ ಅಧಿಕಾರಕ್ಕೆ ಬರುವವರು ಕಮ್ಯುನಿಸ್ಟರು ಅಂತ. ಕಾಂಗ್ರೆಸ್ಸಿನವರು ಏನಿಲ್ಲದಿದ್ದರೂ ಮಾನ್ಯರು. ಇವರಿಗೆ ಅದ್ಯಾವುದೂ ಇಲ್ಲ."

ಆ ವಿಷಾದದಲ್ಲಿ ಮುಳುಗಿಹೋಗಿದ್ದ ಕಾತ್ಯಾಯಿನಿಯಮ್ಮ ಸ್ವಲ್ಪ ಮಂಕಾದಳು ಎಂದು ಮಾತ್ರವಲ್ಲ ಒಂದು ಪರಿಹಾರವನ್ನು ಅವಳು ಕಾಣುತ್ತಿದ್ದಂತೆ ತೋರಿತು. ಅವಳು ಒಂದು ತೆರನಾದ ಆವೇಶದಿಂದ ಹೇಳಿದಳು:

"ಕಂಠ ಚೆನ್ನಾಗಿದ್ದಾಗಲೇ ಹಾಡು ನಿಲ್ಲಿಸಿದರಾಯ್ತು. ನಾವು ಹೋಗೋಣ. ಈ ಉದ್ಯೋಗ ನೋಡಿಕೊಂಡದ್ದು ಸಾಕು. ಎಷ್ಟೋ ದು ಉತ್ಸಾಹ ಇತ್ತು ಇಲ್ಲಿ? ನಾವು ಎಷ್ಟೊಂದು ಅನ್ಯೋನ್ಯವಾಗಿದ್ದೆವು? ನಾವು ಇನ್ನೂ ಎಷ್ಟೋ ದಿನ ಜೀವಿಸಬೇಕಾದದ್ದಿದೆ. ಮತ್ತೆ ಇರಿಯಿಸಿಕೊಂಡು. ತೂಗುಹಾಕಿಸಿಕೊಂಡು ಸಾಯೋದು? ನನಗೆ ಇಲ್ಲಿ ವಾಸ ಮಾಡೋದಕ್ಕೆ ಇಷ್ಟವಿಲ್ಲ. ಇಲ್ಲಿ ವಾಸ ಮಾಡಿದರೆ ಇನ್ನು ಮೇಲೂ ತೊಂದರೆ ಬರುತ್ತೆ. ಬೇಡಿ. ಈ ಉದ್ಯೋಗ ಕೈಬಿಟ್ಟು ಊರಿಗೆ ಹೋಗೋಣ."

ಕೇಶವ ಪಿಳ್ಳೆ ಅವಳ ಆವೇಶವನ್ನು ನೋಡಿದರು. ಅದಕ್ಕೆ ಭಯದ ಛಾಯೆ ಆವರಿಸಿತ್ತು. ಅವರು ಕೇಳಿದರು:

"ಹಾಗಲ್ಲ ಹೋಗೋದಕ್ಕೆ ಕಾಲ ಬಂದಿಲ್ಲ. ಗೊತ್ತಾಯ್ತಾ? ಈ ಸ್ಥಾನ ದಲ್ಲಿದ್ದಾಗಲೇ ಮಗಳ ಮದುವೆ ಕೂಡ ಮಾಡಬೇಕು. ಈ ಸಂದರ್ಭದಲ್ಲೇ ಒಬ್ಬ ಒಳ್ಳೇ ವರ ಸಿಕ್ತಾನೆ. ಅದೂ ಆಗಿಬಿಟ್ಟರೆ ಆ ಮೇಲೆ ಚಿಂತೆಯಿಲ್ಲ. ಹಾಳು! ಆ ನಾರಾಯಣನ್ ನಾಯರಿಂದ ಯಾವ ಕೆಲಸವೂ ಆಗೋದಿಲ್ಲ. ಇನ್ನು ಬೇರೆ ಯಾರ ಹತ್ರವಾದರೂ ಹೇಳಬೇಕು."

ಕಾತ್ಯಾಯಿನಿಯಮ್ಮ ಕೇಳಿದಳು: "ಮಲಬಾರಿನ ಒಬ್ಬ ನೌಕರನ ವಿಷಯ ಮೊನ್ನೆ ಹೇಳಿದ್ದಿರಲ್ಲ. ಅದನ್ನ ಆ ಮೇಲೆ ಆಲೋಚಿಸಲಿಲ್ಲವಾ?"

"ಸಂಬಂಧ ಒಳ್ಳೇದಾಗಿ ಕಾಣೋದಿಲ್ಲ. ಹುಡುಗ ಬುದ್ಧಿವಂತ. ಐ. ಎ. ಎಸ್. ಮಾಡಿಸಬಹುದು. ಆದರೆ........."

"ಆದರೆ ಏನು?"

"ಅವನು ಸ್ವಲ್ಪ ಮೋಸಗಾರ ಅಂತ ಹೇಳ್ತಾರೆ."

ಏನಂತೆ ಎಂದು ಕಾತ್ಯಾಯಿನಿಯಮ್ಮ ಕೇಳಿದಳು.

"ಅವನ ಸ್ವಭಾವ ಅಷ್ಟೊಂದು ಒಳ್ಳೆಯದಲ್ಲವಂತೆ. ಇಲಿ ಹಿಡಿಯೋ ಬೆಕ್ಕು ಮಡಕೇನೂ ಒಡೆಯುತ್ತೆ. ಅದು ನಿನಗಿಷ್ಟವಾ?"

ಅದಕ್ಕೆ ಕೂಡಲೇ ಉತ್ತರ ಬಂದಿತು:

"ದೇವರೇ, ಅಂಥ ಸಂಬಂಧ ಬೇಡ. ಇಲಿ ಹಿಡಿಯೋದೂ ಬೇಡ, ಮಡಕೆ ಒಡೆಯೋದೂ ಬೇಡ. ನನ್ನ ಅನುಭವ ನನ್ನ ಮಗೂಗೆ ಬರದೇ ಇರಲಿ."

ಕೇಶವ ಪಿಳ್ಳೆ ನಕ್ಕರು. ಮತ್ತೊಂದು ವಿಷಯ ಹೇಳಿದರು: "ಈಗ ಕೆಲಸ ಕೈಬಿಟ್ಟು ಹೋಗೋದು ಸೋತು ಕೆಳಗಿಳಿದ ಹಾಗೆ. ಆ ರೀತಿಯಲ್ಲಿ ಸೋತು ಆಯುಧ ಕೈಬಿಟ್ಟು ಹೋಗೋದಕ್ಕೆ ಸಾಧ್ಯವೆ?"

ಅದಕ್ಕೆ ಕಾತ್ಯಾಯಿನಿಯಮ್ಮನ ಉತ್ತರವಿತ್ತು: "ಅದೊಂದು ಸೋಲೇನು? ಅದೇನೂ ಅಲ್ಲ. ಅವಳಿಗೆ ಒಬ್ಬ ಒಳ್ಳೆ ಗಂಡನೂ ಸಿಕ್ತಾನೆ."

ಕೇಶವ ಪಿಳ್ಳೆ ಕೇಳಿದರು:

"ಅದಿರಲಿ, ಇಲ್ಲಿ ಕೇಳು. ನೇರವಾಗಿ ಹೇಳಬೇಕು. ನೀನು ಯಾಕೆ ಬೇಸರವಲ್ಲಿದ್ದೀಯಾ? ನನಗೆ ತಿಳಿದ ಹಾಗೆ ಯಾವ ಕಾರಣವೂ ಇಲ್ಲ. ನಿನ್ನನ್ನು ನಾನು ಬಯ್ಯೋದಿಲ್ಲ. ನಿನ್ನ ಮೇಲೆ ಸಿಟ್ಟು ಮಾಡಿಕೊಂಡಿಲ್ಲ. ನಿನ್ನ ಮೇಲೆ ತಪ್ಪು ಹೊರಿಸೋದೂ ಇಲ್ಲ. ಮತ್ತೆ ಯಾಕೆ ಹೀಗಿದ್ದೀಯಾ?"

ಕಾತ್ಯಾಯಿನಿಯಮ್ಮ ತೆರೆದ ಮನಸ್ಸಿನಿಂದ ಹೇಳಿದಳು:

"ಹಾಗಿದ್ದರೆ ಸಾಕಾಗಿತ್ತು. ಅದೆಲ್ಲ ಮಾಡಿದ್ದರೂ ನನ್ನ ಮನಸ್ಸಿಗೆ ಈ ಭಾರ ಇರ್ತಿರಲಿಲ್ಲ. ನನ್ನ ಮೇಲೆ ಸಿಟ್ಟು ಮಾಡಿಕೊಳ್ಳೋದರಲ್ಲೂ ನನಗೇನೂ ಬೇಸರ ಇಲ್ಲ. ಎರಡು ಏಟು ಹೊಡೆದಿದ್ದರೂ ಬೇಸರವಿಲ್ಲ."

"ಮತ್ತೆ ಏನಾಗಬೇಕು ಅಂತ ನೀನು ಹೇಳೋದು?"

ಒಂದು ಸಣ್ಣ ನಗುವಿನೊಂದಿಗೆ ಕೇಶವ ಪಿಳ್ಳೆ ಹೆಂಡತಿಯನ್ನು ಏನು ಮಾಡಬೇಕೆಂದು ಕೇಳಿದರು. ಕಾತ್ಯಾಯಿನಿಯಮ್ಮ ಕೇಳಿದಳು:

"ಇಲ್ಲಿ ಏನೋ ಒಂದು ಕುತಂತ್ರ ನಡೆದಿದೆ. ಯಾರೋ ಮಾಯ ಮಂತ್ರ ಮಾಡಿದ್ದಾರೆ. ಆ ಪಿಶಾಚಿ ಬಾಧಿಸ್ತಾ ಇದೆ. ನಮಗೆ ಇಲ್ಲೆಲ್ಲ ಶತ್ರುಗಳಿದ್ದಾರೆ. ಯಾರೋ ಏನೋ ಮಾಡಿದ್ದಾರೆ ಖಂಡಿತ. ಹೀಗೆಲ್ಲ ಇರೋದು ಎಲ್ಲರಿಗೂ ಅಸೂಯೆ. ಮಗಳಿಗೆ ಮದುವೆಯೂ ಆಗಲಿಲ್ಲ. ತಂದೆಗೆ ಅದರ ಆಲೋಚನೆಯೇ ಇಲ್ಲ."

ಕೇಶವ ಪಿಳ್ಳೆಗೆ ನಗು ಬಂದಿತು. ಆದರೆ ಆ ನಗುವನ್ನು ತಡೆದುಕೊಂಡರು.

ಕಾತ್ಯಾಯಿನಿಯಮ್ಮ ಹೇಳಿದಳು:

"ಎಷ್ಟು ಬೇಗ ಇದು ಬಂತು ಅಂತ ನಾನು ಆಲೋಚಿಸೋದು. ಸರಿಯಾಗಿ ಫಲಿಸೋ ಹಾಗೆ ಯಾರೋ ಮಾಡಿಟ್ಟಿದ್ದಾರೆ. ಮಹಾ ಪಾಪಿಗಳು. ನಾನು ಯಾರಿಗೂ ಯಾವ ತಪ್ಪನ್ನೂ ಮನಸಾರ ಮಾಡಿಲ್ಲ. ನನಗೆ ಯಾಕೆ ಇದು ಹೀಗೆ ಮಾಡಿತು? ಆ ದಿನ ಕನ್ಯಾಕುಮಾರಿಗೆ ಹೋಗಿ ಬಂದ ಮೇಲೆ ಪ್ರಾರಂಭ ಆಯ್ತು."

ಕೇಶವ ಪಿಳ್ಳೆ ಕೇಳಿದರು: "ಏನು ಪ್ರಾರಂಭ ಆಯ್ತು ಅಂತ ನೀನು ಹೇಳೋದು?"

"ಪ್ರೀತಿ ಇಲ್ಲದೆ ಹಾಗಾದದ್ದು. ಇಷ್ಟ ಇಲ್ಲದೇ ಹೋದದ್ದು."

"ನಿನ್ನ ಹತ್ರವಾ?"

"ಹೌದು."

"ನನಗಾ?"

"ಹೌದು."

"ಅದು ನಿನಗೆ ಹೇಗೆ ಗೊತ್ತಾಯಿತು?"

"ಅಂಗೈ ಹುಣ್ಣಿಗೆ ಕನ್ನಡಿ ಬೇಕಾ? ನಾನು ಹೇಳಲಾ?"

ಕೇಶವ ಪಿಳ್ಳೆ ಅನುಮತಿ ನೀಡಿದರು.

ಕಾತ್ಯಾಯಿನಿಯಮ್ಮ ಹೇಳತೊಡಗಿದಳು:

"ಇಲ್ಲಿ ಹೀಗೆಲ್ಲ ಇತ್ತಾ? ಯಾವುದನ್ನೂ ಮಾತಾಡದೆ. ಯಾವ ಪ್ರೀತಿಯ ಮಾತುಕಥೆಯೂ ಇಲ್ಲದೆ—ಆ ಕಡೆಯೊಬ್ಬರು ಈ ಕಡೆಯೊಬ್ಬರು ಇದ್ದೆವಾ? ನನ್ನನ್ನು ಗಂಟೆಗೆ ನಲವತ್ತು ಸಲ ಕಾತ್ಯಾಯಿನೀ ಅಂತ ಕರೀತಿರಲಿಲ್ಲವಾ? ಯಾವ ಕೆಲಸವನ್ನೂ ಪೂರ್ತಿ ನಾನು ಮಾಡ್ತಿರಲಿಲ್ಲ. ಅದರ ಮಧ್ಯೆ ಹತ್ತು ಸಲ ಕರೀತಿದ್ರಿ. ಬಂದರೆ ಸುಮ್ಮನೆ ಕರೆದೆ ಅಂತ ಹೇಳ್ತಿದ್ದಿರಿ. ನೀನು ಹತ್ರ ಇದ್ದರೇ ಕೆಲಸ ಮಾಡೋಕ್ಕೆ ಸಾಧ್ಯ ಅಂತ ಅಲ್ಲವಾ ನೀವು ಹೇಳ್ತಿದ್ದದ್ದು? ಈಗ ಹಾಗೆ ನನ್ನನ್ನು ಕರೀತಿದ್ದೀರಾ?"

ಕಾತ್ಯಾಯಿನಿಯಮ್ಮ ಹೇಳುವುದು ನಿಜ. ಅವಳು ಸ್ನಾನ ಮಾಡುತ್ತಿದ್ದಾಗಲೂ ಕರೆಯುತ್ತಿದ್ದರು. ಕೆಲಸ ಮಾಡುತ್ತಿದ್ದಾಗ, ಅವಳು ಹತ್ತಿರ ಕುಳಿತಿದ್ದರೂ ತನ್ನನ್ನು ತಾನೇ ಮರೆತು ಗಟ್ಟಿಯಾಗಿ ಕರೆದದ್ದುಂಟು: 'ಕಾತ್ಯಾಯಿನೀ'.

ಆಗ ಅವಳು ಹೇಳುತ್ತಿದ್ದಳು:

"ನಿಮಗೆ ಇದೇನು ಹುಚ್ಚಾ?"

"ಆ! ನಾನು ನೋಡಲಿಲ್ಲ."

ಹಾಗೆ ಆ ಮನೆ ಕಾತ್ಯಾಯಿನಿ ಎನ್ನುವ ಧ್ವನಿಯಿಂದ ತುಂಬಿತ್ತು. ಯಾವಾಗಲೂ ಅವಳು ಹತ್ತಿರ ಇರಬೇಕು. ಜೊತೆಯಲ್ಲೇ ಕಾಲ ಕಳೆಯಬೇಕು. ಎಲ್ಲವನ್ನೂ ಒಂದೊಂದಾಗಿ ಕಾತ್ಯಾಯಿನಿ ಕೇಳಿದಳು. ಅನಂತರ ಇಂದಿನ ಸ್ಥಿತಿಯನ್ನು ಸೂಚಿಸಿದಳು.

"ಈಗಲೋ?"

ಅವರು ಒಂದು ಉತ್ತರವನ್ನು ಮಾತ್ರ ಹೇಳಬಲ್ಲವರಾಗಿದ್ದರು:

"ಮನಸ್ಸಿಗೆ ಸಮಾಧಾನ ಇರಬೇಡವಾ?"

"ಮನಸ್ಸಿಗೆ ಸಮಾಧಾನ ಇಲ್ಲದೇ ಇದ್ದಾಗಲಲ್ಲವಾ ನಾನು ಬೇಕಾಗಿದ್ದದ್ದು? ಮನಸ್ಸಿಗೆ ಬೇಸರವಾದಾಗ ಯಾವಾಗಲೂ ನಾನು ಹಾಗಿರ್‍ತಿದ್ದೆನಾ?"

ಕೇಶವ ಪಿಳ್ಳೆ ಕೇಳಿದರು:

"ಅದಲ್ಲ. ನನ್ನ ಕಷ್ಟ ನಿನಗೆ ಅರ್ಥ ಆಗೋದಿಲ್ಲ. ನನ್ನ ಮುಖ ಬಾಡಿದ್ದಾಗ ನಿನ್ನ ಮುಖವೂ ಬಾಡುತ್ತೆ."

ಕಾತ್ಯಾಯಿನಿಯಮ್ಮ ಅದನ್ನು ಒಪ್ಪಲಿಲ್ಲ. ಅವಳು ಅವಳ ವಿಚಾರವನ್ನು ಹೇಳ ತೊಡಗಿದಳು:

"ಬೆಳಗಿನ ಹೊತ್ತು ನಿದ್ದೆ ಮಾಡಿರ್ತಿದ್ದ ನನ್ನನ್ನು ಹೇಗೆ ಎಬ್ಬಿಸಿದ್ದಿರಿ? ಹಾಗೆ ಕಣ್ಣು ತೆರೆದು ದಿವಸ ಪ್ರಾರಂಭ ಆದರೆ ನನಗೆ ಉತ್ಸಾಹ, ಧೈರ್ಯ. ಯಾವ ತೊಂದ ರೆಯೂ ಇಲ್ಲ. ನನ್ನ ಹತ್ತಿರ ಇಷ್ಟವಾಗಿದ್ದರೆ ಸಾಕು. ಅದಲ್ಲದೆ ಬೇರೆ ಏನೂ ಬೇಡಿ."

ಕಾತ್ಯಾಯಿನಿಯಮ್ಮ ವಿವರಿಸಿದ ಆ ವಿಷಯ ತುಂಬ ದಿನ ಇರುವುದಿಲ್ಲವೆಂದು ಕೊಂಡರು. ಅದು ಪುನಃಪೂರ್ವಕವಾಗಿ ಬೇಡವೆಂದು ಕೈಬಿಟ್ಟದ್ದೂ ಅಲ್ಲ. ಮನಸಾರೆ ಅದನ್ನೊಂದು ಕಾರ್ಯಕ್ರಮವನ್ನಾಗಿ ಪ್ರಾರಂಭ ಮಾಡಿದ್ದೂ ಅಲ್ಲ. ಕೇಶವ ಪಿಳ್ಳೆ ಏಳುವಾಗ ಕಾತ್ಯಾಯಿನಿಯಮ್ಮ ಅಂಗಾತವೋ ಓರೆಯಾಗಿಯೋ ಮಲಗಿರುತ್ತಿದ್ದಳು. ಹುಡುಗಾಟಿಕೆಯಿಂದ ಅವಳನ್ನು ಎಬ್ಬಿಸುತ್ತಿದ್ದರು. ಅದೊಂದು ಸ್ವಾರಸ್ಯವಾಗಿತ್ತು. ಹಾಗೆ ಅದು ಪ್ರಾರಂಭವಾಗಿತ್ತು. ಕನ್ಯಾಕುಮಾರಿಯಿಂದ ಹಿಂದಿರುಗಿ ಬಂದ ದಿನ ಬೆಳಗ್ಗೆ ಎದ್ದಾಗ ಕಾತ್ಯಾಯಿನಿ ಇಲ್ಲ. ಒಂದು ಕಡೆ ಒಬ್ಬಳೇ ಕುಳಿತು ಆಲೋಚಿಸುತ್ತಿದ್ದಳು. ಅನಂತರ ಆ ನಡವಳಿಕೆ ಮುಂದುವರಿಯಲೇ ಇಲ್ಲ.

ಕೇಶವ ಪಿಳ್ಳೆ "ಇನ್ನು ಮೇಲೂ ಅದನ್ನ ಮಾಡಬಹುದು" ಎಂದರು.

ಕೂಡಲೇ ಉತ್ತರ ಬಂದಿತು:

"ಹಾಗೆಲ್ಲ ಬೇಕೂಂತ ಪ್ರಾರಂಭ ಮಾಡೋದೂ ಅಲ್ಲ. ಅದರಿಂದ ಆ ಸ್ವಾರಸ್ಯ ಉಂಟಾಗೋದೂ ಇಲ್ಲ. ಆ ಕಾಲ ಆಗಿ ಹೋಯ್ತು."

ಕಾತ್ಯಾಯಿನಿಯಮ್ಮ ಹೇಳಿದುದು ಸತ್ಯವಲ್ಲವೇ ಎಂದು ಕೇಶವ ಪಿಳ್ಳೆ ಸಂಶಯ ಪಟ್ಟರು. ಆದರೆ ಅದನ್ನು ಅವರು ಆಲೋಚಿಸಿರಲಿಲ್ಲ.

ಕಾತ್ಯಾಯಿನಿಯಮ್ಮ ಹೇಳಿದಳು: "ನನ್ನ ಮೇಲೆ ಇಷ್ಟ ಇದ್ರೆ ಸಾಕು. ಮತ್ತೇನೂ ಬೇಡ. ಈಗ ಬೇಡವಾಗಿ ಹೋದೆ: ಯಾರೋ ದ್ರೋಹಿಗಳು ಮಾಯ ಮಾಟ ಮಾಡಿಸಿ ದ್ದಾರೆ. ಅದು ಖಂಡಿತ."

ಕೇಶವ ಪಿಳ್ಳೆಗೆ ಏನೂ ಹೇಳುವುದಿರಲಿಲ್ಲ. ಕಾತ್ಯಾಯಿನಿ ಪುನಃ ಆ ಆನಂದವಿದ್ದ ಮನೆಯಲ್ಲಿ ನಡೆದ ಸಂಗತಿಗಳನ್ನು ಕುರಿತು ಹೇಳಿಕೊಂಡಿದ್ದಳು. ಅವಳು ಜೊತೆಯಲ್ಲಿ ಕುಳಿತು ಊಟ ಮಾಡಬೇಕೆಂದು ಒತ್ತಾಯ ಮಾಡುತ್ತಿರಲಿಲ್ಲವೆ? ಈಗ ಏನಾಗಿದೆ?

ಮಾರನೆಯ ದಿನ ಬೆಳಗ್ಗೆ ಎದ್ದು ನೋಡುವಾಗ ಕಾತ್ಯಾಯಿನಿಯಮ್ಮ ಎಚ್ಚರವಾಗಿ ಮಲಗಿದ್ದಳು. ಅಂತು ಒಂದು ನಾಟಕ ಅಭಿನಯಿಸಿದರು. ಆದರೆ ಅದು ಅಷ್ಟು ಪರಿಣಾಮ ಮಾಡಿದಂತೆ ತೋರಲಿಲ್ಲ. ಅವಳ ಮುಖದಲ್ಲಿ ಒಂದು ಕೃತಕ ನಗು ಮೂಡಿತ್ತು ಅಷ್ಟೆ.

ಆ ಮಧ್ಯೆ ಒಂದು ದಿನ ಮಂತ್ರಿ ಮ್ಯಾಥ್ಯು ಮತ್ತು ಕಾಂಗ್ರೆಸ್ ಪ್ರೆಸಿಡೆಂಟ್ ಲೂಕೋಸ್ ಪಾರ್ಕ್ ವ್ಯೂಗೆ ಬಂದರು. ಅದೊಂದು ರಹಸ್ಯ ಸಂದರ್ಶನವಾಗಿತ್ತು.

ಮಲಬಾರ್ ಸಂಯೋಜನೆ ರಾಜಕೀಯವಾಗಿ ಒಂದು ಆಪತ್ತುಂಟುಮಾಡುವುದಾಗಿ ಲೂಕೋಸನ ಅಭಿಪ್ರಾಯ. ಮುಂದಿನ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಸಂಖ್ಯೆ ಕಡಿಮೆ ಯಾಗುತ್ತದೆ. ಮಲಬಾರ್ ಒಂದು ಕಮ್ಯುನಿಸ್ಟ್ ಪ್ರದೇಶವಾಗಿ ಬರುವ ಸೂಚನೆ ಯಿತ್ತು. ಆಗ ಕೇಶವ ಪಿಳ್ಳೆಗೆ ಔದ್ಯೋಗಿಕ ಮಂಡಲದಲ್ಲಿ ಮಲಬಾರ್ ಸಂಯೋಜನೆ ಉಂಟುಮಾಡಿದ ತೊಂದರೆಗಳನ್ನು ಹೇಳಬೇಕಾದದ್ದಿತ್ತು. ಲೂಕೋಸನ ಅಭಿಪ್ರಾಯ ಇದೊಂದು ದೊಡ್ಡ ತೊಂದರೆ ಎಂದು. ಮ್ಯಾಥ್ಯು ಒಂದು ಮಂದಹಾಸದೊಡನೆ ಒಂದು ಅಭಿಪ್ರಾಯವನ್ನು ತಿಳಿಸಿದರು: "ಈ ಚುನಾವಣೆಯಲ್ಲಿ ಹೇಗಾದರೂ ಮಾಡಿ ನಮಗೆ ಸಹಾಯ ಮಾಡಬೇಕು."

ಬೆಂಕಿಯನ್ನು ಮುಟ್ಟಿದ ಹಾಗೆ ಒಮ್ಮೆ ಕೇಶವ ಪಿಳ್ಳೆ ಕೈಕೈ ಹಿಸುಕಿಕೊಂಡರು.

"ಶ್ಯ! ಮಾತಾಡಬೇಡಿ. ಅದೆಲ್ಲ ಹಿಂದಿನ ಕಾಲದಲ್ಲಿ. ಬೆಂಬಲಕ್ಕೆ ಜನರಿದ್ದಾಗ. ಆಗ ಪಟ್ಟು ಜಯಿಸಿತು. ಈಗ ಅದಕ್ಕೆ ಹೇಳಿಸಿಕೊಂಡ ಕಾಲವಲ್ಲ. ನೀವು ಬಂದು ನನ್ನನ್ನು ಕಂಡಿದ್ದೀರಿ ಅಂತ ತಿಳಿದರೆ ಸಾಕು. ಅಡ್ವೈಸರ್ ಕಾರಣ ಕೇಳ್ತಾರೆ. ಕಮ್ಯುನಿಸ್ಟ ರಿಗೆ ಶಕ್ತಿಯಿರುವ ಕಾಲ."

ಲೂಕೋಸ್ ಬಂದ ಕಾರ್ಯವನ್ನು ತೀವ್ರವಾಗಿ ಹೇಳಿದರು:

"ಚುನಾವಣೆ ನಡೆಸೋದು ಗೊತ್ತಿರೋ ಮತ್ತೊಬ್ಬ ಮನುಷ್ಯ ಇಲ್ಲ. ಈಗ ಸರಿಯಾಗಿ ಹಿಡಿದುಕೊಳ್ಳದೇ ಇದ್ರೆ ಹೆಚ್ಚು ಸೀಟನ್ನು ಕಮ್ಯುನಿಸ್ಟರು ಕಸಿದುಕೊಳ್ತಾರೆ. ಸರಿಯಾಗಿ ಪ್ರಚಾರ ನಡೆಸಿ ಬೇಕಾದ ಕಡೆ ಬೇಕಾದ ಹಾಗೆ ಮಾಡದೇ ಇದ್ದರೆ ಕಾಂಗ್ರೆಸ್ ಬಿದ್ದುಹೋದ ಹಾಗೆಯೇ."

ಅದು ಸರಿ ಎಂದು ಕೇಶವ ಪಿಳ್ಳೆಯೂ ಅಭಿಪ್ರಾಯಪಟ್ಟರು. ಅದರ ನಂತರವೂ ಅವರಿಗೆ ಹೇಳುವುದಿತ್ತು. ಸಾಮಾನ್ಯವಾಗಿ ಕಂಡುಬರುತ್ತಿದ್ದದ್ದು ಕಮ್ಯುನಿಸ್ಟರಿಗೆ ಹೆಚ್ಚು ಬೆಂಬಲ ಇದೆ ಅಂತ. ಮ್ಯಾಥ್ಯುಗೆ ಆ ಅಭಿಪ್ರಾಯವಿಲ್ಲ. ಲೂಕೋಸ್ ಹೇಳಿ ದರು: "ನಾವು ಬಂದದ್ದು—ಒಂದು ಸಲ ಮನಸ್ಸು ಬಿಚ್ಚಿ ಹೇಳೋದಕ್ಕೆ. ನಾವೆಲ್ಲ ಸೇರಿ ಆಲೋಚಿಸಿದೆವು. ಒಂದು ತೀರ್ಮಾನಕ್ಕೂ ಬಂದಿದ್ದೇವೆ. ಈ ಆಡಳಿತದ ಪರಿಚಯವೂ ಸಾಮರ್ಥ್ಯವೂ ಸ್ವಲ್ಪ ಪ್ರಯೋಜನಕ್ಕೆ ಬರಬೇಕು ಎನ್ನುವುದು ನಮ್ಮ ತೀರ್ಮಾನ."

ಮ್ಯಾಥ್ಯು ಮತ್ತು ಲೂಕೋಸ್ ಪರಸ್ಪರ ಮುಖ ನೋಡಿಕೊಂಡು ನಕ್ಕರು.

ಕೇಶವ ಪಿಳ್ಳೆಗೆ ಅರ್ಥವಾಗಲಿಲ್ಲ. ಅವರು ಕೇಳಿದರು:

"ಏನು ವಿಷಯ ಸ್ಪಷ್ಟವಾಗಿ ಹೇಳಿ."

ಒಂದು ವಿಷಯ ಅಡಗಿಸಿಟ್ಟುಕೊಂಡು ಮ್ಯಾಥ್ಯು ಹೇಳಿದ್ದು: "ಕೇರಳ ಕಾಂಗ್ರೆಸ್ಸಿನ ಜವಾಬ್ದಾರಿ ವಹಿಸಿಕೊಳ್ಳಬೇಕು."

ಕೇಶವ ಪಿಳ್ಳೆ ಗಟ್ಟಿಯಾಗಿ ನಕ್ಕರು.

"ಆಗ ನಾನೊಬ್ಬ ರಾಜಕೀಯ ವ್ಯಕ್ತಿ ಅಂತ ಘೋಷಿಸಿಕೊಂಡು ತಿರುಗಲಿ ಅಂತಲಾ?"

ಲೂಕೋಸ್ ಅವನ್ನು ತಿದ್ದಿದ:

"ನಾವು ಹೇಳೋದು ಹಾಗಲ್ಲ. ಹಾಗೆ ಭಾವಿಸಬೇಡಿ. ಈ ಉದ್ಯೋಗದಿಂದ ಸಿಕ್ಕುವ ಪೆನ್ಶನ್ ತೆಗೆದುಕೊಂಡು ಸ್ಥಾನದಿಂದ ಇಳಿಯಬೇಕು."

ಕೇಶವ ಪಿಳ್ಳೆ ಸ್ತಂಭೀಭೂತರಾದರು.

"ಅನಂತರ ಚುನಾವಣೆಗೆ ನಿಲ್ಲಬೇಕು."

"ನಾನು?"

ಮ್ಯಾಥ್ಯು ಹೇಳಿದರು: "ಹೌದು. ಅದರಲ್ಲಿ ಏನು ಇಷ್ಟು ಆಶ್ಚರ್ಯ ಪಡೋದಿರೋದು?"

ಲೂಕೋಸ್ ಅದನ್ನು ಅಂತ್ಯಗೊಳಿಸಿದ:

"ಚುನಾವಣೆಯಲ್ಲಿ ಜಯಿಸಿ ಕೇರಳದ ಮುಖ್ಯ ಮಂತ್ರಿಯಾಗಬೇಕು."

ಕೇಶವ ಪಿಳ್ಳೆ ಗಟ್ಟಿಯಾಗಿ ನಕ್ಕರು. ಮ್ಯಾಥ್ಯು ಕೇಳಿದರು:

"ಯಾಕೆ ನಗ್ತೀರಿ? ಅದರಲ್ಲಿ ಇಷ್ಟು ನಗೋದೇನಿದೆ?"

ಕೇಶವ ಪಿಳ್ಳೆ ಹೇಳಿದರು:

"ಏನೂ ಇಲ್ಲ, ಏನೂ ಇಲ್ಲ."

ಮ್ಯಾಥ್ಯು ಹೇಳಿದರು:

"ಕಾಂಗ್ರೆಸ್ ಆಡಳಿತದಲ್ಲಿ ಬಂದ ತೊಂದರೆಯೆಲ್ಲ ಮಂತ್ರಿಗಳಿಗೆ ಆಡಳಿತದ ಪರಿಚಯವಿರಲಿಲ್ಲ ಅಂತ. ಒಂದೊಂದು ವಿಭಾಗವೂ. ಅಂಗಡಿ ಔಷಧಿ ಯಾವುದು, ಹೆಸರು ಔಷಧಿ ಯಾವುದು ಅನ್ನೋದು ತಿಳಿಯದಾಗಿತ್ತು. ಆ ವ್ಯವಸ್ಥೆಯನ್ನು ಬದಲಾಯಿಸಬೇಕು ಅಂತ ಇದೆ."

ಇದು, ಕೇಶವ ಪಿಳ್ಳೆ ಇದುವರೆಗೆ ಆಲೋಚಿಸಿದ್ದ ವಿಷಯವಲ್ಲ. ನಿಜವಾಗಿಯೂ ಆ ನಿರ್ದೇಶನ ಅವರನ್ನು ಹಿಡಿದು ಅಲುಗಿಸಿತು. ಒಂದು ನಿಮಿಷ, ರಾಜ್ಯದ ಮುಖ್ಯ ಮಂತ್ರಿಯಾಗಿರುವ ಸ್ಥಿತಿಯನ್ನು ಅವರು ಕಲ್ಪಿಸಿಕೊಂಡರು. ಯಾರೋ ಅಂತರಂಗವನ್ನು ಹೊಕ್ಕು ಕೇಳುತ್ತಿದ್ದರು: "ಯಾಕೆ ಸಾಧ್ಯವಿಲ್ಲ?"

ಅವರಿಗೆ ಆ ಅನುಗ್ರಹವೂ ಇತ್ತು. ಎಷ್ಟೋ ವರ್ಷಗಳ ಹಿಂದೆ ಹರಿಹರಯ್ಯರ್ ಎನ್ನುವ ಬ್ರಾಹ್ಮಣನೂ ಗೋವಿಂದನ್ ನಾಯರೂ ಚೀಫ್ ಸೆಕ್ರೆಟರಿಯ ಅಸಿಸ್ಟೆಂಟ್ ಆಗಿ ಉದ್ಯೋಗ ದೊರೆತಾಗ ಈ ಕುರ್ಚಿಯಲ್ಲಿ ಕುಳಿತು ಇನ್ನು ಮೇಲಿನ ಏರುವಿಕೆಯನ್ನು ಕುರಿತು ಹೇಳಿದ್ದರು; ಹಾರೈಸಿದ್ದರು. ಆ ವೃದ್ಧ ಬ್ರಾಹ್ಮಣನ ಒಳ್ಳೆಯ ನಾಲಗೆಯಿಂದ ಬಂದಿದ್ದ ಅನುಗ್ರಹ ಅರ್ಥವತ್ತಾಗಿರುವುದಕ್ಕೆ ಹೊರಟಿತ್ತು. ಕೇಶವ ಪಿಳ್ಳೆ ತನಗರಿವಿಲ್ಲದಂತೆ ಹೇಳಿದರು:

"ಆಳಿದರೆ ಈ ಮಂತ್ರಿಗಳಿಗಿಂತ ಚೆನ್ನಾಗಿ ಆಳಬಲ್ಲೆ ಅನ್ನಿಸುತ್ತೆ."

ಗಾಳಕ್ಕೆ ಸಿಕ್ಕಿಸಿಕೊಂಡ ಹಾಗೆ ಲೂಕೋಸ್‌ಗೆ ತೋರಿತು. ಆತ ಹೇಳಿದ: "ನಿಜವಾಗಿಯೂ, ನಿಜವಾಗಿಯೂ. ಅದರಲ್ಲೇನು ಸಂಶಯ?"

ಮ್ಯಾಥ್ಯುವಿಗೂ ಹೇಳುವುದಿತ್ತು: "ರಾಜ್ಯಕ್ಕೆ ಮಾಡಬೇಕಾದ ದೊಡ್ಡ ಸೇವೆ. ಇಲ್ಲದೇ ಇದ್ದರೆ ಈ ಕಮ್ಯುನಿಸ್ಟರು ಬಂದು ರಾಜ್ಯ ಹಾಳು ಮಾಡ್ತಾರೆ."

ಲೂಕೋಸನ ಪ್ರಾಯೋಗಿಕ ಬುದ್ಧಿ ಹರಿತವಾಯಿತು.

"ಇನ್ನು ಮೇಲೆ ಈ ಉದ್ಯೋಗವನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗೋದಕ್ಕೆ ಸಾಧ್ಯವಿಲ್ಲ. ಈಗಲೇ ಆಡಳಿತ, ಹೊಲಿಗೆ ಬಿಚ್ಚಿ ಹೋದ ಪುಸ್ತಕದ ಹಾಗಾಗಿದೆ ಅಂತಾರೆ. ಇನ್ನು ಮೇಲೆ ಇದು ನಾಚಿಕೆಗೇಡು. ಈಗ ಒಂದು ಮಾದರಿ ನಡೀತಿದೆ. ಪೆನ್ಷನ್ ಸಿಕ್ಕುತ್ತೆ, ರಾಜೀನಾಮೆ ಕೊಡಬೇಕು."

ಸ್ವಲ್ಪ ಹೊತ್ತಿನ ವರೆಗೆ ಅರ್ಥಗರ್ಭಿತವಾದ ಒಂದು ಮೌನ ಅಲ್ಲಿ ಹರಡಿತು. ಅನಂತರ ಆ ಮೌನವನ್ನು ಮುರಿದದ್ದು ಲೂಕೋಸ್.

"ಇಷ್ಟೊಂದು ಆಲೋಚನೆ ಮಾಡೋ ಅಂಥಾದ್ದು ಏನಿದೆ?"

ಕೇಶವ ಪಿಳ್ಳೆ ಕೇಳಿದರು: "ಹಿಡಿದ ಕೈಯಲ್ಲೇ ಅದನ್ನು ಮಾಡಿಸಬೇಕು ಅಂತಲಾ ಮಿಸ್ಟರ್ ಲೂಕೋಸ್ ಬಂದಿರೋದು?"

ಅವಸರ ಮಾಡಿದ್ದು ಹೆಚ್ಚಾಯ್ತು ಅನ್ನಿಸಿತು ಇಬ್ಬರಿಗೂ. ಲೂಕೋಸ್ ಸ್ವಲ್ಪ ತಗ್ಗಿದ: "ಹಾಗಲ್ಲ. ತಮಗೆ ಹೇಳ್ತಿದ್ದೆವು ಅಷ್ಟೆ."

ಅನಂತರ ಅವರು ತೋಟದ ವಿಷಯ ಮುಂತಾದ ಕೆಲವು ಸ್ವಂತ ವಿಷಯಗಳನ್ನು ಹೇಳಿದರು. ಮಾತಾ ಜ್ಯೋತಿರ್ಮಯಿ ದೇವಿಗೆ ಕೇಶವ ಪಿಳ್ಳೆಯ ಭಾಗವನ್ನೂ ಆದಾಯವನ್ನೂ ಕೊಡುವುದಕ್ಕೆ ಏರ್ಪಾಟು ಮಾಡಿದ್ದಾಯಿತು. "ಹೆಚ್ಚು ತಡ ಮಾಡದೆ ಅದನ್ನು ತೀರ್ಮಾನಿಸಿ" ಎಂದು ಮ್ಯಾಥ್ಯುವೂ ಲೂಕೋಸೂ ಹೋದರು.

ಕಾತ್ಯಾಯಿನಿಯಮ್ಮ ಮಲಗಿದ್ದಳು. ಕೇಶವ ಪಿಳ್ಳೆ ಓಡಿ ಹೋಗಿ ಅವಳನ್ನು ತಟ್ಟಿ ಎಬ್ಬಿಸಿದರು. ಅವಳನ್ನು ಎತ್ತಿ ನಿಲ್ಲಿಸಿ ಅವಳ ಜೊತೆಯಲ್ಲಿ ಆ ರೂಮಿನಲ್ಲಿ ಕುಣಿದಾಡಿದರು. ಕಾತ್ಯಾಯಿನಿಯಮ್ಮ ನಿದ್ದೆಗಣ್ಣಿನಲ್ಲಿಯೂ ಪ್ರಸನ್ನವದನಳಾಗಿ ನಕ್ಕಳು. ಕೇಶವ ಪಿಳ್ಳೆ ಉತ್ಸಾಹದಿಂದಿದ್ದರು.

ಅವಳು ಕೇಳಿದಳು:

"ಇದೇಂಥಾದ್ದು ಇದು?"

"ನಾನು ಮುಖ್ಯ ಮಂತ್ರಿಯಾದರೇನು?"

"ಓ! ಇನ್ನು ಅದು ಬೇರೆ ಬಾಕಿ."

ಮಂಚದ ಮೇಲಕ್ಕೆ ಎಳೆದು ಕೂರಿಸಿಕೊಂಡು ಕೇಶವ ಪಿಳ್ಳೆ ವಿಷಯಗಳನ್ನು ವಿವರಿಸಿದರು.

ಕಾತ್ಯಾಯಿನಿಯಮ್ಮನ ಉತ್ತರ ಇದಾಗಿತ್ತು:

"ಮುಂದೆ ಕಮ್ಯೂನಿಸ್ಟರು ಆಳ್ತಾರೆ ಅಂತ ಹೇಳಿ........."

ಕೇಶವ ಪಿಳ್ಳೆ ಹೇಳಿದರು: "ಅದೂ ಒಂದು ವಿಷಯ. ಆದರೆ ನೌಕರಿಗೆ ರಾಜೀನಾಮೆ ಕೊಟ್ಟು ಕಮ್ಯೂನಿಸ್ಟರ ಜೊತೆ ಸೇರಿ ಚುನಾವಣೆಗೆ ನಿಲ್ಲಲೇ?"

ಕಾತ್ಯಾಯಿನಿಯಮ್ಮನಿಗೆ ಅದಾವುದೂ ಬೇಡವಾಗಿತ್ತು. ತಿರುವನಂತಪುರದಿಂದ ಒಂದು ಸಲ ಹೋದರೆ ಸಾಕಾಗಿತ್ತು. ಅದಕ್ಕೆ ಮೊದಲು ವಿಜಯಮ್ಮನ ಮದುವೆ ಮಾಡಬೇಕು.

# ಆಶ್ರಮದಲ್ಲಿ ಅಮ್ಮ

ಕನ್ಯಾಕುಮಾರಿಯಲ್ಲೂ ಓೀರುಮೇಡಿನಲ್ಲೂ ನಡೆದ ಘಟನೆಗಳ ನಂತರ ಜ್ಯೋತಿರ್ಮಯಿಯಲ್ಲಿ ದೊಡ್ಡ ವ್ಯತ್ಯಾಸಗಳುಂಟಾದುವು. ಅವಳು ಸನ್ಯಾಸಿನಿಯ ಜೀವನವನ್ನು ಉಪೇಕ್ಷಿಸಿದ ಹಾಗೆಯೇ. ಪ್ರಾರ್ಥನೆಯಲ್ಲೂ ಭಾಗವಹಿಸುತ್ತಿರಲಿಲ್ಲ. ಪ್ರಭಾವತಿಯ ಆಡಳಿತದ ಕೈಕೆಳಗೆ ಆಶ್ರಮದಲ್ಲಿ ಕೂಡಿಹಾಕಿಕೊಂಡಿದ್ದ ಅನಾಥ ಸ್ತ್ರೀಯರನ್ನು ಒಬ್ಬೊಬ್ಬಳನ್ನಾಗಿ ಹೊರಕ್ಕೆ ಕಳುಹಿಸಲಾಯಿತು. ಅದಕ್ಕೆ ಅವರಾರೂ ಅಡ್ಡ ಬರಲಿಲ್ಲ. ಸಾವಿತ್ರಿ ಮಾತ್ರ ಇದ್ದಳು. ಅನಾಥ ವನಿತಾ ಮಂದಿರದ ನೆನಪು ಕೂಡ ಜ್ಯೋತಿರ್ಮಯಿಗೆ ಉಳಿದಿದ್ದಂತೆ ತೋರಲಿಲ್ಲ. ಅವಳು ಅದರ ವಿಚಾರವಾಗಿ ಮಾತೂ ಆಡುತ್ತಿರಲಿಲ್ಲ. ಆಶ್ರಮದ ಉಳಿದ ಸನ್ಯಾಸಿನಿಯರೊಡನೆಯೂ ಯಾವ ಸಂಬಂಧವೂ ಇಲ್ಲದ ಸ್ಥಿತಿಯಲ್ಲಿ ಜ್ಯೋತಿರ್ಮಯಿ ಇದ್ದದ್ದು.

ಈ ಮಧ್ಯೆ ಓೀರುಮೇಡು ಘಟನೆ ಕಳೆದ ನಂತರ ಜ್ಯೋತಿರ್ಮಯಿ ಗರ್ಭ ಧರಿಸಿದ ಲಕ್ಷಣಗಳು ಕಾಣಿಸತೊಡಗಿದುವು. ವಾಂತಿಯಾಗುವುದು, ತಲೆಸುತ್ತುವುದು. ಅವಳಿಗೆ ಅರ್ಥವಾಗಲಿಲ್ಲ. ಆದರೆ ಅದು ಸಾವಿತ್ರಿಯ ಗಮನಕ್ಕೆ ಬಂದಿತು. ಅಮ್ಮ ಏಕೋ ಸೊರಗುತ್ತಿದ್ದಾಳೆ ಎಂದು ಸಾವಿತ್ರಿಗೆ ಸಂಶಯವಾಯಿತು. ಅವಳು, ಒಬ್ಬ ತಾಯಿ ಮಗಳೊಡನೆ ಕೇಳುವಂತೆ ಕೇಳಿದಳು:

"ಇದೇನಿದು? ಆಗಾಗ ಉಗಿಯುತ್ತಿದ್ದೀರಲ್ಲ?"

ಅದೊಂದು ತೊಂದರೆ ಉಂಟುಮಾಡಬಹುದಾಗಿತ್ತು. ತಪ್ಪು ಮಾಡಿದ ಮಗಳಂತೆ ಜ್ಯೋತಿರ್ಮಯಿ ಉತ್ತರ ಹೇಳಿದಳು:

"ಏನೂ ಇಲ್ಲ."

ಮತ್ತೂ ಅದು ಕಾಣಿಸಿದಾಗ ಹೇಳಿದಳು:

"ಇದು ಏನೂ ಇಲ್ಲದೇ ಇಲ್ಲ. ವಿಷಯ ಹೇಳಿ."

ತಪ್ಪು ಮಾಡಿದಳಾದರೂ ಅದನ್ನು ತೋರಿಸಿಕೊಳ್ಳದೆ ಜ್ಯೋತಿರ್ಮಯಿ ಹೇಳಿದಳು:

"ಏನೂ ಇಲ್ಲ ಅಂತೀನಿ?"

ಆದರೆ ಕೊನೆಯಲ್ಲಿ ಕನ್ಯಾಕುಮಾರಿಯ, ಓೀರುಮೇಡಿನ ಕಥೆಗಳನ್ನು ಜ್ಯೋತಿರ್ಮಯಿ ವಿವರಿಸಿದಳು.

ಸಾವಿತ್ರಿಗೆ ಹೆದರಿಕೆಯಾಯಿತು. ಅವಳು ಗಾಬರಿಯಿಂದ ಕೇಳಿದಳು: "ಈಗೇನು ಮಾಡ್ತೀರಮ್ಮ?"

ನಿನ್ನೆ ಹೇಗೋ ಹಾಗೆಯೇ ಅಂದೂ ಸಾವಿತ್ರಿ ಆಲೋಚಿಸುವಷ್ಟು ಆಳವಾಗಿ ಅದನ್ನೊಂದು ದೊಡ್ಡ ವಿಷಯವನ್ನಾಗಿ ಜ್ಯೋತಿರ್ಮಯಿ ಭಾವಿಸಿದಂತೆ ತೋರಲಿಲ್ಲ.

"ಹ್ಲ್ಲ! ಏನು?" ಅದು ಜ್ಯೋತಿರ್ಮಯಿ ಕೊಟ್ಟ ಉತ್ತರ.

"ಇದೊಂದು ಆಶ್ರಮ. ಅಮ್ಮನಿಗೆ ಇಲ್ಲಿ ದೊಡ್ಡ ಸ್ಥಾನ ಇತ್ತು. ಅದನ್ನೆಲ್ಲ ನೆನಸಿ ಕೊಂಡು ನೋಡಿ."

ಪ್ರಾಪಂಚಿಕ ಜ್ಞಾನವಿರುವ ಒಬ್ಬಾಕೆಯ ಗುಣದೋಷ ವಿಮರ್ಶೆಯಾಗಿತ್ತು ಅದು. ಆದರೆ ಯಾವ ರೀತಿಯಲ್ಲಿಯೂ ಅದರ ಪರಿಣಾಮವನ್ನು ತಿಳಿಸಲು ಸಾವಿತ್ರಿಗೆ ಸಾಧ್ಯವಾಗಲಿಲ್ಲ. ಒಂದು ಸಲ ಜ್ಯೋತಿರ್ಮಯಿ ದೇವಿ "ಹೆಣ್ಣಾಗಿರುವಾಗ ಬಸರಿಯೂ ಆಗ್ತಾಳೆ ಹೆರ್ತಾಳೆ" ಎನ್ನುವ ವರೆಗೂ ಹೋದಳು.

ಸಾವಿತ್ರಿಯ ಗಂಟಲು ಕಟ್ಟಿತು. ಆದರೆ ಜ್ಯೋತಿರ್ಮಯಿಗೆ ಒಂದು ವಿಷಯ ತಿಳಿದುಕೊಳ್ಳಬೇಕಾಗಿತ್ತು:

"ನಲವತ್ತಾರನೇ ವಯಸ್ಸಿನಲ್ಲಿ ಗರ್ಭಿಣಿಯಾಗೋದುಂಟಾ ಸಾವಿತ್ರಿ?"

ಅವಳಿಗೆ ಅದು ತಿಳಿಯದು. ಅವಳು ಹೇಳಿದಳು: "ಆಗಬಹುದು. ದೇವರ ಇಚ್ಛೆ ಇದ್ದರೆ ಆಗಬಹುದು. ಪಾಲಿಗೆ ಬಂದದ್ದನ್ನು ಅನುಭವಿಸಲೇಬೇಕು."

ಅದರ ನಂತರ ಜ್ಯೋತಿರ್ಮಯಿ ಯಾವಾಗಲೂ ಆ ಪ್ರಶ್ನೆ ಕೇಳುತ್ತಿದ್ದಳು: "ನಲ ವತ್ತಾರನೆಯ ವಯಸ್ಸಿನಲ್ಲಿ ಗರ್ಭಿಣಿಯಾಗೋದುಂಟಾ?"

ಅದು ಮಾತ್ರ ಆ ಸನ್ಯಾಸಿನಿಗಿದ್ದ ಸಂಶಯ.

ಒಂದು ದಿನ ತಾಳ್ಮೆ ತಪ್ಪಿದವಳಂತೆ ಸಾವಿತ್ರಿ ಕೇಳಿದಳು: "ನಲವತ್ತಾರನೆ ವಯಸ್ಸಿ ನಲ್ಲಿ ಗರ್ಭಿಣಿ ಆಗೋದಿಲ್ಲ ಅಂತ ಆ ಹೊತ್ತಿನಲ್ಲಿ ಅಂದುಕೊಂಡಿದ್ದಿರಾ?"

ಅದೊಂದು ದೋಷಾರೋಪಣೆಯೂ ಆಗಿತ್ತು. ಆ ಅಪರಾಧಿಯನ್ನು ತಿಳಿಯದೆ ಜ್ಯೋತಿರ್ಮಯಿ ದೇವಿ ಹೇಳಿದಳು: "ನಾನು ಹಾಗೇನೂ ಅಂದುಕೊಂಡಿರಲಿಲ್ಲ. ನಾನೇನು ಅಂದುಕೊಂಡಿರಲಿಲ್ಲ ಸಾವಿತ್ರಿ."

ಸಾವಿತ್ರಿ ಏನೋ ಗೊಣಗಿದಳು. ಅದೇನು ಎಂದು ಜ್ಯೋತಿರ್ಮಯಿ ಕೇಳಿದಳು. ಸಾವಿತ್ರಿ "ಏನೂ ಇಲ್ಲ" ಎಂದು ಹೇಳಿದಳು. ಸಾವಿತ್ರಿಗೆ ನಿಜವಾಗಿಯೂ ಉಸಿರು ಕಟ್ಟಿದ ಹಾಗಾಗಿತ್ತು.

ಆ ಇಬ್ಬರು ಸ್ತ್ರೀಯರ ಭಾವನೆಗಳಿಗೂ ದೊಡ್ಡ ಅಂತರವಿತ್ತು. ಅದು ಇಬ್ಬರಿಗೂ ಅರ್ಥವಾಗಲಿಲ್ಲ. ನಲವತ್ತಾರನೆಯ ವಯಸ್ಸಿನಲ್ಲಿ ಒಬ್ಬಳು ಗರ್ಭಿಣಿಯಾಗುತ್ತಾ ಳೆಯೇ ಎಂದು ಜ್ಯೋತಿರ್ಮಯಿ ಕೇಳಿದ್ದು ಏತಕ್ಕೆ ಎಂದು ಸರಿಯಾಗಿ ತಿಳಿದಿಲ್ಲ. ಜ್ಯೋತಿರ್ಮಯಿ ಒಬ್ಬಳು ಸ್ತ್ರೀ. ಆ ಸ್ತ್ರೀ ತಾಯಿಯಾಗಬೇಕು. ತಾಯಿಯಾಗುವುದ

ಕ್ಕಾಗಿಯೇ ಸ್ತನಗಳು ಹಾತೊರೆಯುತ್ತವೆ; ಹೃದಯ ತುಡಿಯುತ್ತದೆ. ಅದೊಂದು ರೀತಿಯ ಉನ್ಮೇಶ. ಸ್ತ್ರೀಯನ್ನು ಸೃಷ್ಟಿಸುವುದೇ ತಾಯಿಯಾಗುವುದಕ್ಕಾಗಿ. ಹೆರಿಗೆಯ ನೋವನ್ನನುಭವಿಸುವುದೂ ಒಂದು ರೀತಿಯ ಸಂತೋಷ. ಒಬ್ಬಳು ತಾಯಿಯಾಗಲು ಸಾಧ್ಯವಿಲ್ಲ ಎಂದು ಭಾವಿಸಿದ್ದಾಗ, ಆ ವಾಂತಿ, ಆಗಾಗ ಉಗಿಯುವುದೂ ಗರ್ಭ ಧಾರಣೆಯ ಲಕ್ಷಣಗಳೆಂದು ಹೇಳಿದಾಗ ಜ್ಯೋತಿರ್ಮಯಿ ನಲವತ್ತಾರನೆಯ ವಯಸ್ಸಿನಲ್ಲಿ ಅದು ಸಾಧ್ಯವೇ ಎಂದು ಕೇಳಿದ್ದು. ಆ ಸನ್ಯಾಸಿನಿ ಅದನ್ನು ಖಚಿತವಾಗಿ ತಿಳಿದುಕೊಳ್ಳಬೇಕಾಗಿತ್ತು. ಆ ಖಚಿತತೆ ಅವಳಿಗೆ ಸಂಬಂಧಿಸಿದಂತೆ ಜನ್ಮ ಸಾಫಲ್ಯದ ವಿಷಯವಾಗಿತ್ತು.

ಅದಕ್ಕೆ ವಿರುದ್ಧವಾದ ಅಭಿಪ್ರಾಯ ಸಾವಿತ್ರಿಯದು. ಇನ್ನುಮೇಲೆ ಅಪಾಯ ಸಂಭವಿಸುವುದಿಲ್ಲವೆಂದು ಭಾವಿಸಿ ಬಹು ಬೆಲೆಯುಳ್ಳ ಹಣ್ಣನ್ನು ಆ ಸನ್ಯಾಸಿನಿ ಸವಿದಳು. ಈಗ ಅದೊಂದು ವಾಸ್ತವ ಸ್ಥಿತಿಯಲ್ಲ ಎಂದು ಸ್ಥಿರಪಡಿಸಿಕೊಳ್ಳುವುದಕ್ಕಾಗಿ ಕೇಳುತ್ತಿರುವುದು—ನಲವತ್ತಾರನೆಯ ವಯಸ್ಸಿನಲ್ಲಿ ಒಬ್ಬಳು ಗರ್ಭಿಣಿಯಾಗುತ್ತಾಳೆಯೇ ಎಂದು. 'ಇಲ್ಲ' ಎನ್ನುವ ಉತ್ತರವನ್ನು ಪಡೆಯುವುದಕ್ಕಾಗಿ ಹಾಗೆ ಕೇಳುತ್ತಿರುವುದು ಎಂದು ಸಾವಿತ್ರಿಯ ಅಭಿಪ್ರಾಯ. ಜನ್ಮ ಸಾಫಲ್ಯಕ್ಕಾಗಿ ಜ್ಯೋತಿ ಆಶಿಸುತ್ತಿದ್ದಾಳೆ ಎನ್ನುವುದು ತಿಳಿಯದೆ.

ಹಾಗೆಯೇ ಕೆಲವು ದಿನಗಳು ಕಳೆದುವು. . ಆ ಸ್ಥಿತಿಯಿಂದ ಸಂರಕ್ಷಿಸಿಕೊಳ್ಳಲು ಸಾವಿತ್ರಿಗೆ ತಿಳಿದಿದ್ದದ್ದು ಒಂದೇ ಒಂದು ಮಾರ್ಗ—ಕೇಶವ ಪಿಳ್ಳೆಗೆ ಈ ಸಂಗತಿಯನ್ನು ತಿಳಿಸುವುದು. ಆ ದೃಷ್ಟಿಯಲ್ಲಿ ಆ ಕಾಗದಗಳನ್ನು ಅವಳು ಕೇಶವ ಪಿಳ್ಳೆಗೆ ಬರೆದದ್ದು.

ಜ್ಯೋತಿರ್ಮಯಿ ಪ್ರತಿದಿನವೂ ಕಾಗದ ಬರೆಯುತ್ತಿದ್ದಳು. ಆದರೆ ಆ ಮನುಷ್ಯ ಆ ಕಾಗದಗಳಿಗೆ ಉತ್ತರ ಕೊಡುತ್ತಿರಲಿಲ್ಲ. ಅದು ಪುರುಷರ ಸ್ವಭಾವವೆಂದು ಸಾವಿತ್ರಿಗೆ ಗೊತ್ತಿತ್ತು. ಅವರು ತಿಳಿದ ಹಾಗೆ ಕೂಡ ನಟಿಸುವುದಿಲ್ಲ. ಆ ರೀತಿಯಲ್ಲಿ ಸಂಭವಿಸಿದಾಗ ಮಾತ್ರ ಆಶ್ಚರ್ಯಕ್ಕೆ ಅವಕಾಶವುಂಟಾಗುವುದಲ್ಲವೇ? ಆದರೆ ಜ್ಯೋತಿರ್ಮಯಿಗೆ ಯಾವ ಸಂಕಟವೂ ಇಲ್ಲ. ಅಷ್ಟು ಮಾತ್ರವಲ್ಲ ಪ್ರಾಣನಾಥ ನೀಡಿದ ಪರಮಾನಂದವನ್ನು ನೆನಸಿಕೊಂಡು ಹಾಡುತ್ತಿದ್ದಳು. ಆ ಹಾಡು ಕೇಳುವುದಕ್ಕೆ ಇಂಪಿತ್ತಾದರೂ, ಚೆನ್ನಾಗಿತ್ತಾದರೂ ಪ್ರಾಣನಾಥ ಅನುಗ್ರಹಿಸಿದ ಪರಮಾನಂದವೆಂದು ಆ ಸಂದರ್ಭದಲ್ಲಿ ತೋರೀತೆ? ಆ ಪುರುಷನನ್ನು ನಂಬಲೇಬೇಕಲ್ಲವೆ?

ಸಾವಿತ್ರಿ ಕೇಳಿದಳು: "ಆಶ್ರಮದ ಮಾತಾಜಿ ಗರ್ಭಿಣಿ ಆಗಿದ್ದಾರೆ ಅಂತ ತಿಳಿದರೆ—ಅದು ಆಶ್ರಮಕ್ಕೆ, ಅಮ್ಮನಿಗೆ, ಊರಿಗೆ—ಎಲ್ಲಕ್ಕೂ ಕೆಟ್ಟ ಹೆಸರು ಬರೋದಿಲ್ಲವಾ?"

"ಓ! ನಿನ್ನ ಆಶ್ರಮ. ಅದು ಹಾಳುಬಿದ್ರೆ ತಾನೆ ಯಾರಿಗೇನು?"

ಸಾವಿತ್ರಿ ಮೂಕಳಾದಳು. ಜ್ಯೋತಿರ್ಮಯಿ ಹೇಳಿದಳು:

"ನಾನು ಎಲ್ಲರಿಗೂ ಗೊತ್ತು ಸಾವಿತ್ರಿ. ನನ್ನ ಚರಿತ್ರೆಯೂ ಗೊತ್ತು. ನಾನು ತಪ್ಪು ಮಾಡಿದವಳು. ನಾನು ಒಳ್ಳೆಯವಳು ಅಂತ ನಾನು ಅಭಿಮಾನ ಪಡೋದಿಲ್ಲ."

ಆದರೆ ಸಾವಿತ್ರಿಗೆ ಆಗ ಒಂದು ಪ್ರಶ್ನೆ ಕೇಳಬೇಕೆನ್ನಿಸಿತು.

"ಮತ್ತ್ಯಾಕೆ ಈ ವೇಷ ಹಾಕಿಕೊಂಡಿರಿ?"

ಸಾವಿತ್ರಿ ಸಂಪೂರ್ಣವಾಗಿ ಜ್ಯೋತಿರ್ಮಯಿಯ ಆಶ್ರಯದಲ್ಲಿ ಜೀವಿಸುತ್ತಿದ್ದವಳು. ಹಾಗಿರುವಾಗ ಅವಳ ಪ್ರಶ್ನೆ ಸ್ವಲ್ಪ ಧಿಕ್ಕಾರದಿಂದ ಕೂಡಿತ್ತು. ಆದರೆ ಜ್ಯೋತಿರ್ಮಯಿ ದೇವಿಯ ದೃಷ್ಟಿಗೆ ಆ ಧ್ವನಿಯಲ್ಲಿ ಅಡಗಿದ್ದ ಧಿಕ್ಕಾರ ಕಾಣಿಸಲಿಲ್ಲ. ಜ್ಯೋತಿರ್ಮಯಿ ಆ ಪ್ರಶ್ನೆಗೆ ಉತ್ತರ ಹೇಳಿದಳು:

"ಒಂದು ಸಲ ದಾರಿ ಬದಲಿಸಬೇಕು ಅಂತ ಅಂದುಕೊಂಡೆ. ಬದಲಿಸಿದೆ."

ಜ್ಯೋತಿರ್ಮಯಿ ಮತ್ತೆ ಹೇಳಿದಳು:

"ನನ್ನ ಹೊಟ್ಟೇಲಿರೋದು ನಿಜವೇ ಆಗಿದ್ದರೆ ಅದು ಆ ಮನುಷ್ಯನ ಸಂತಾನ. ಆ ಸಮಾಧಾನ ನನಗಿದೆ."

"ಹಾಗಿದ್ದರೆ ಆ ಮನುಷ್ಯನಿಗೂ ಇದೇ ರೀತಿ ಅನ್ನಿಸಲಿಲ್ಲವಲ್ಲ?"

ಆ ದೃಷ್ಟಿಯಲ್ಲಿ ಜ್ಯೋತಿರ್ಮಯಿ ದೇವಿ ಮೋಸ ಹೋದಂತೆ ತೋರಿತು.

"ಅದು ನನ್ನ ಹಣೆಬರಹ ಸಾವಿತ್ರಿ, ಇಲ್ಲದೇ ಇದ್ರೆ ನನ್ನ ಅಹಂಕಾರದ ಫಲ ಅನ್ನು. ಅದನ್ನು ನಾನು ಅನುಭವಿಸಬೇಕು. ನನ್ನ ಚಿಕ್ಕ ವಯಸ್ಸಿನಲ್ಲಿ ಒಂದು ನಡೆನುಡಿ–ಸಂಪ್ರದಾಯಗಳನ್ನು ಪಾಲಿಸಲಿಲ್ಲ."

ಒಂದು ನಿಟ್ಟುಸಿರಿನೊಡನೆ ಜ್ಯೋತಿರ್ಮಯಿ ಹೇಳಿ ಮುಗಿಸಿದಳು: "ಒಂದು ಆಯುಷ್ಯವಿಡೀ ಕಳೆಯುತ್ತ ಬಂತು. ಒಂದು ಕಡೆಯಲ್ಲೂ ಸರಿಯಾಗಿ ನಿಲ್ಲಲಿಲ್ಲ."

ಆ ಇಬ್ಬರು ಸ್ತ್ರೀಯರೂ ಸ್ವಲ್ಪ ಹೊತ್ತು ಏನೂ ಮಾತನಾಡಲಿಲ್ಲ. ಜ್ಯೋತಿರ್ಮಯಿ ತನ್ನ ಹಿಂದಿನ ಬಾಳಿನ ಕಡೆಗೆ ನೋಡುತ್ತಿದ್ದುದಾಗಿರಬೇಕು. ಸಾವಿತ್ರಿಗೂ ಆ ಸ್ವಲ್ಪ ಸಮಯದಲ್ಲಿ ಆ ಹಿಂದಿನ ಜೀವನವನ್ನು ಕುರಿತು ಆಲೋಚಿಸುತ್ತಿದ್ದುದಾಗಿರಬೇಕು. ಸಾವಿತ್ರಿ ಅದರ ಫಲವೇ ಇದು ಎನ್ನುವಂತೆ ಹೇಳಿದಳು.

"ನಾನೊಂದು ಹೇಳಲಾ ಅಮ್ಮ. ನನಗೆ ಅದು ಒಳ್ಳೆಯದು ಅಂತ ತೋರುತ್ತೆ. ಅಮ್ಮ ಇದು ವರೆಗೆ ಕಾಗದ ಬರೀತಿದ್ದಿರಲ್ಲ—ಈಗ ಹೋಗಿ ಒಂದು ಸಲ ಕಂಡರೇನು? ಹೋಗಿ ಹೀಗೆಲ್ಲ ಆಗಿದೆ ಏನು ಮಾಡೋದು ಅಂತ ಕೇಳಿ ನೋಡಿ. ಇದಕ್ಕೆ ಅವರು ಒಂದು ದಾರಿ ಕಂಡುಹಿಡಿಯಲಿ."

ಅದಕ್ಕೆ ಉತ್ತರ ಹೇಳುವುದಕ್ಕೆ ಜ್ಯೋತಿರ್ಮಯಿಗೆ ಆಲೋಚಿಸಬೇಕಾಗಿ ಬರಲಿಲ್ಲ. ಅವಳು ಕೇಳಿದಳು:

"ಯಾವ ದಾರಿ?"

ಹೇಗೋ ಗಂಟಲು ಕಟ್ಟಿದ ಹಾಗೆ ಸಾವಿತ್ರಿ ಹೇಳಿದಳು: "ಅಲ್ಲ......... ಹೀಗೆ

.........ಇದಕ್ಕೆ ಕಾರಣಕಾರನಾದ ಮನುಷ್ಯನ ಹತ್ರ ಕೇಳಬಾರದಾ?"

ಒಂದು ಕ್ಷಣ ಕಳೆದು ಸಾವಿತ್ರಿ ಹೇಳಿದಳು: "ಏನಿಲ್ಲದೇ ಇದ್ರೂ ಈ ದೋಷ ಇಲ್ಲದ ಹಾಗಾಗುತ್ತಲ್ಲ !"

ವಿಷಾದ ಬೆರೆತ ನಗುವಿನೊಂದಿಗೆ ಜ್ಯೋತಿರ್ಮಯಿ ಅದಕ್ಕೆ ಉತ್ತರ ಹೇಳಿದಳು: "ಆ ಘಟ್ಟ ಮುಗಿಯಿತು ಸಾವಿತ್ರಿ. ಅದನ್ನ ನಾನು ನಿನ್ನ ಹತ್ರ ಹೇಳಲಿಲ್ಲವಾ? ಇನ್ನು ಮೇಲೆ ಕಾಣಬಾರದು ಅಂತ, ನಮಗೂ ನಮಗೆ ಯಾವ ಸಂಬಂಧವೂ ಇಲ್ಲ ಅಂತ ಅವರು ಖಡಾಖಂಡಿತವಾಗಿ ಹೇಳಿದರು."

"ಹೀಗೆ ಅಪಾಯ ಬರೋದಕ್ಕೆ ಮೊದಲಲ್ಲವಾ ಅದು? ಈಗ ಇದು ಸಂಭವಿಸಿತು. ಅದಕ್ಕೆ ಮೊದಲು ನಿವೃತ್ತಿ ಉಂಟುಮಾಡಬಾರದಾ? ವಂಚಿಸಿಬಿಟ್ಟು ಎಲ್ಲ ಮುಗಿಯಿತು ಅಂತ ಸುಮ್ಮನೆ ಹೇಳಿಬಿಟ್ಟರೆ ಸಾಕಾ?"

ಜ್ಯೋತಿರ್ಮಯಿ ದೇವಿ ಕೇಳಿದಳು:

"ಅವರು ಏನು ಮಾಡಬೇಕು ಅಂತ ನೀನು ಹೇಳೋದು?"

ಸಾವಿತ್ರಿಗೆ ಆ ವಿಷಯವನ್ನು ಕುರಿತು ಆಲೋಚಿಸುವುದೇನೂ ಇರಲಿಲ್ಲ. ತಕ್ಷಣ ಹೇಳಿದಳು:

"ಅವರು ಸ್ವೀಕರಿಸಬೇಕು. ಅದು ಬೇಕಾದದ್ದು. ಅಲ್ಲದೆ ಮತ್ತೇನು?"

ಜ್ಯೋತಿರ್ಮಯಿ 'ಇಲ್ಲ' ಎಂದು ತಲೆ ಅಲ್ಲಾಡಿಸಿದಳು. "ನಾನು ಒಮ್ಮೆಯೂ ಇನ್ನು ಮೇಲೆ ಅವರ ಮನಸ್ಸಿಗೆ ಸಮಾಧಾನ ಇಲ್ಲದ ಹಾಗೆ ಮಾಡೋದಿಲ್ಲ."

ಮನಸಾರೆ ಸಾವಿತ್ರಿ ಕೇಳಿದಳು: "ಆ ಮೇಲೆ?"

"ಆ ಮೇಲೆ ಏನು?"

"ಇದು ನಿಜವಾಗಿದ್ದರೆ ನಾನು ಹೆರ್ತೀನಿ. ನನ್ನ ಜನ್ಮ ಸಾರ್ಥಕ ಆಯ್ತು. ನಾನು ಆ ಮಗೂನ ಚಿನ್ನದ ಹಾಗೆ ಸಾಕ್ತೀನಿ ಅಷ್ಟೆ. ಈ ಮನೆ ನನ್ನದು. ನಾನು ಇಲ್ಲೇ ಜೀವಿಸ್ತೀನಿ."

ಸಾವಿತ್ರಿಗೆ ಜ್ಯೋತಿರ್ಮಯಿಯ ಸ್ಥಿತಿ ಅರ್ಥವಾಯಿತು; ಆದರೆ ಆ ಮನಸ್ಸು ಅರ್ಥವಾಗಲಿಲ್ಲ.

* * * *

"ಪ್ರಾಣನಾಥನು ನನಗೆ ನೀಡಿದ
ಪರಮ ಸುಖಸಂತೋಷವ—ಸಖೀ
ಹೇಳಲು ಸುಲಭವೇ?............"

ಜ್ಯೋತಿರ್ಮಯಿ ಹಾಡುತ್ತಿದ್ದಳು. ಅದನ್ನು ಬಾಯಿ ಬಿಟ್ಟು ಗಟ್ಟಿಯಾಗಿ ಹಾಡುತ್ತಿರಲಿಲ್ಲ. ಆದರೆ ಆಶ್ರಮದ ಮಾತಾಜಿಯಾದ ಪ್ರಭಾವತೀದೇವಿಯೂ ಉಳಿದವರೂ

ಆ ಹಾಡನ್ನು ಕೇಳಿಸಿಕೊಂಡರು. ಸಾವಿತ್ರಿ ಆ ಗಾನದಲ್ಲಿ ಲೀನವಾಗಿದ್ದಳು. ಅವಳು ಪ್ರತಿಮೆಯಂತೆ ಕುಳಿತಿದ್ದಳು. ಅದೇ ಧ್ಯಾನದಲ್ಲಿ ಬೆರೆತುಹೋಗಿ ಜ್ಯೋತಿರ್ಮಯಿ ಹಾಡುತ್ತಿದ್ದಳು. ಆ ಹಾಡಿನ ಅನುಭೂತಿಯನ್ನು ಅವಳು ಅನುಭವಿಸಿದ್ದಲ್ಲವೇ?

ಆ ಹಾಡಿನ ಕೆಲವು ಚರಣಗಳನ್ನು ಹಾಡಿದಾಗ ಸಾವಿತ್ರಿ ಕೇಳಿದಳು: "ಅಮ್ಮ, ಆ ಹಾಡಿನ ಅರ್ಥವೇನು?"

ಜ್ಯೋತಿರ್ಮಯಿ ಅರ್ಥವತ್ತಾಗಿ ನಕ್ಕಳು.

ಅವಳು ಕೇಳಿದಳು: "ಯಾಕೆ? ಕೇಳಿದರೆ ಯಾವುದೋ ಅರ್ಥವಿದೆ ಅನ್ನಿಸುತ್ತಾ?"

ಒಂದು ನಗುವಿನೊಂದಿಗೆ ಸಾವಿತ್ರಿ ಅದಕ್ಕೆ ಉತ್ತರ ಹೇಳಿದಳು: "ಅದಕ್ಕೇನೋ ಅರ್ಥವಿದೆ ಅನ್ನಿಸುತ್ತೆ. ಪೂರ್ತಿ ಅರ್ಥವಾಗೋದಿಲ್ಲ."

ಜ್ಯೋತಿರ್ಮಯಿ ದೇವಿಗೆ ಅದರ ಅರ್ಥ ವಿವರಿಸಿ ಕೊಡುವ ಸಮಯವೂ ತಾಳ್ಮೆಯೂ ಇಲ್ಲ. ಆ ಗಾನದ ವಿಕಾರ ಸಾಂದ್ರತೆಯಲ್ಲಿ ಅವಳು ಒಂದಾಗಿ ಹೋಗಿದ್ದಳು. ಆ ವಾಕ್ಯಗಳಿಗೆ ಅರ್ಥ ಹೇಳಲು ಆಗ ಅವಳಿಗೆ ಮನಸ್ಸಿರಲಿಲ್ಲ. ಅವಳು ಹೇಳಿದಳು:

"ನೀನು ಸುಮ್ಮನೆ ಕೇಳಿಸಿಕೋ. ಅರ್ಥವಾಗದಿದ್ದರೆ ಇರಲಿ. ಅದರ ಅರ್ಥ ನಾನು ಯಾವಾಗಲಾದರೂ ಹೇಳ್ತೀನಿ."

ಜ್ಯೋತಿರ್ಮಯಿ ಪುನಃ ಹಾಡತೊಡಗಿದಳು. ಸಾವಿತ್ರಿ ಅರ್ಧ ಕಣ್ಣುಮುಚ್ಚಿ ಕೊಂಡು ಆ ಹಾಡಿನಲ್ಲಿ ಒಂದಾದಳು.

ನಿತ್ಯಾನಂದಮಯಿಯೂ ತೇಜಸ್ಸ್ವರೂಪಿಣಿಯೂ ಕಿಟಕಿಯ ಹತ್ತಿರ ಮರೆಯಾಗಿ ನಿಂತು ಆ ದೃಶ್ಯವನ್ನು ನೋಡಿದರು. ಒಳಗಡೆ ಅವರಿಬ್ಬರೂ ಆ ಹಾಡಿನಲ್ಲಿ ಮುಳುಗಿದ್ದು ದನ್ನು ನೋಡಿದರು. ಅವರು ಕಿವಿ ಮುಚ್ಚಿಕೊಂಡು ಪರಸ್ಪರ ನೋಡಿಕೊಂಡರು. ಆಶ್ರಮ ಮಾತಾಜಿಯಾದ ಪ್ರಭಾವತಿಗೆ ವಿಷಯ ತಿಳಿಸುವುದಕ್ಕಾಗಿ ಕೂಡಲೆ ಅಲ್ಲಿಂದ ಹೋದರು. ಹಾಡು ಮುಗಿಯಿತು. ಆಗಲೂ ಸಾವಿತ್ರಿ ಅದೇ ಸ್ಥಿತಿಯಲ್ಲಿದ್ದಳು. ಜ್ಯೋತಿರ್ಮಯಿ ದೇವಿ ಅವಳನ್ನು ಧ್ಯಾನದಿಂದ ತಟ್ಟಿ ಎಬ್ಬಿಸಿದಳು. ಅವಳು ಕೇಳಿದಳು: "ನೀನು ಇದನ್ನೆಲ್ಲ ಅರ್ಥಮಾಡಿಕೊಂಡೆಯಾ?"

"ಇಲ್ಲಮ್ಮಾ! ನನಗೆ ಪೂರ್ತಿ ಅರ್ಥವಾಗಲಿಲ್ಲ." ಒಂದು ಕ್ಷಣ ಬಿಟ್ಟು ತನಗೆ ತಿಳಿಯದಂತೆಯೇ ಕೇಳಿದಳು:

"ಅಮ್ಮನಿಗೋ?"

"ನಾನು ನಿನ್ನ ಹತ್ರ ಹೇಳಲಿಲ್ಲವಾ? ಒಂದು ಸಲ, ಎರಡು ಸಲ."

ಸಾವಿತ್ರಿ ಕೇಳಿದಳು: "ಅದೇನಾ ಇದು?"

ಅದೇ ಇದು ಎಂದು ಜ್ಯೋತಿ ತಲೆ ಅಲ್ಲಾಡಿಸಿದಳು.

ಪಾಪವನ್ನು ಕೇಳಿಸಿಕೊಳ್ಳಲಾರದೆ ಓಡಿ ಮರೆಯಾಗಿದ್ದ ನಿತ್ಯಾನಂದಮಯಿಯೂ ತೇಜಸ್ಸ್ವರೂಪಿಣಿಯೂ ಬೇರೆ ಒಂದು ಕಡೆಗೆ ಹೋಗಿ ಆಲೋಚಿಸುತ್ತಿದ್ದರು:

"ಸ್ತೋತ್ರಗಳನ್ನು ಹೇಳಬೇಕಾಗಿದ್ದ ಸ್ಥಳ ಇದು. ಇಲ್ಲಿ ಹೇಳೋದೇನು?"

ತೇಜಸ್ವರೂಪಿಣಿ ಹೇಳಿದಳು:

"ನನಗೆ ಅದನ್ನ ಕೇಳಿಸಿಕೊಳ್ಳೋದಕ್ಕೆ ಆಗ್ತಿರಲಿಲ್ಲ. ನನ್ನ ಕಿವಿ ಒಡೆದುಹೋದ ಹಾಗಾಗಿತ್ತು."

ನಿತ್ಯಾನಂದಮಯಿ ಹೇಳಿದಳು:

"ಅದನ್ನ ಕೇಳಿಸಿಕೊಂಡು ನಿಲ್ಲೋದು ಪಾಪ."

"ಪಾಪ ಮಾತ್ರವಾ?"

"ಮನಸ್ಸೂ ಹಾಳಾಗಿ ಹೋಗುತ್ತೆ. ಅಂಥಾದ್ದೆಲ್ಲ ಇರೋ ಕಡೆಯಿಂದ ಬೇರೆ ಹೋಗಿಬಿಡಬೇಕು."

ತೇಜಸ್ವರೂಪಿಣಿ ಒಂದು ವಿಷಯವನ್ನು ಮನಸಾರೆ ಒಪ್ಪಿಕೊಂಡಳು.

"ನೇರವಾಗಿ ಹೇಳ್ತೀನಿ. ನಾನು ಅದನ್ನ ಕೇಳಿಸಿಕೊಂಡಾಗ ನನ್ನ ಶರೀರವಿಡೀ ಕಂಪಿಸಿದ ಹಾಗಾಯ್ತು. ನನಗೆ ಕೇಳಿಸಿಕೊಳ್ಳೋದಕ್ಕಾಗಲಿಲ್ಲ. ಅದಕ್ಕೇ ನಾನು ಕಿವಿ ಮುಚ್ಚಿಕೊಂಡದ್ದು."

ನಿತ್ಯಾನಂದಮಯಿ ಆ ಪ್ರಸ್ತಾವನೆಯನ್ನು ಮುಗಿಸಿದಳು.

"ಆದರೂ ಈಗಲೂ ಅದು ಕಿವಿಯೊಳಗೆ ನುಗ್ಗಿದ ಹಾಗೆ ತೋರುತ್ತೆ."

ತೇಜಸ್ವರೂಪಿಣಿ ಕೇಳಿದಳು:

"ನಾವಿದನ್ನು ಮಾತಾಜಿ ಹತ್ರ ಹೇಳಿದರೇನು? ಇವತ್ತು ಹಾಡಿದ್ದು—ಇನ್ನು ಅವಳು ಗಂಡಸರನ್ನ ರೂಮಿನೊಳಕ್ಕೆ ಕರೆದುಕೊಂಡೂ ಬರಬಹುದು."

ನಿತ್ಯಾನಂದಮಯಿ ಅದಕ್ಕೆ ಉತ್ತರ ಹೇಳಲಿಲ್ಲ. ಆದರೆ ಅವಳಿಗೆ ಒಂದು ಅಭಿಪ್ರಾಯವಿತ್ತು. "ಅವಳು ಒಬ್ಬಳು ಸನ್ಯಾಸಿನಿ ಆಗಿಲ್ಲ. ಹಾಗೆ ಸನ್ಯಾಸ ಕೈಬಿಟ್ಟು ಕೆಲವು ದಿನಗಳಾದುವು."

ಅವಳು ಅಷ್ಟು ಹೇಳಿ ನಿಲ್ಲಿಸಿದಳು.

"ಇನ್ನು ಮೇಲೂ ಇಲ್ಲಿ ಏನಾದರೂ ನಡೀಬಹುದು."

ಆ ಕಡೆ ಜ್ಯೋತಿರ್ಮಯಿ ಸಾವಿತ್ರಿಗೆ ಹಾಡಿನ ಅರ್ಥ ವಿವರಿಸುತ್ತಿದ್ದಳು. ಸಾವಿತ್ರಿ ಶ್ರದ್ಧೆಯಿಂದ ಅದನ್ನು ಕೇಳಿಸಿಕೊಂಡಿದ್ದಳು. ಆ ಮೇಲೆ ಅವಳು ಹೇಳಿದಳು:

"ಆದರೂ ಅಮ್ಮ, ಇದು ಸ್ವಲ್ಪ ಹೆಚ್ಚಾಯ್ತು."

ಆ ಹಾಡಿಗೆ ಒಂದು ಕಥೆಯಿತ್ತು. ಜ್ಯೋತಿರ್ಮಯಿ ಆ ಕಥೆ ವಿವರಿಸಿದಳು:

"ಹಿಂದೆ ಒಬ್ಬ ಮಹಾರಾಜ, ಹೆಂಡತಿ ಹತ್ರ ಜಗಳಾಡಿಕೊಂಡ. ಒಬ್ಬರಿಗೊಬ್ಬರು ಭೇಟಿಯಾಗದೆ ದೂರ ದೂರ ಇದ್ದರು. ಆ ಹೆಂಡತಿಯ ಸಹೋದರ ಒಬ್ಬ ಕವಿಯಾಗಿದ್ದ. ಅವನು ಬರೆದು ಸಹೋದರಿಗೆ ಕೊಟ್ಟ ಹಾಡು ಇದು ಅಂತ ಹೇಳ್ತಾರೆ."

ಸಾವಿತ್ರಿಗೆ ಅದನ್ನು ನಂಬಲಾಗಲಿಲ್ಲ. ಅವಳು ದಿಗ್ಭ್ರಾಂತಳಾದಳು.

"ಸಹೋದರ ಸಹೋದರಿಗೆ ಹಾಡು ಬರೆದುಕೊಟ್ಟಿದ್ದಾ?"

"ಹೌದು. ಹಾಗೆಯೇ. ಆ ಮೇಲೆ......... ಅವಳು ಚೆನ್ನಾಗಿ ವೀಣೆ ನುಡಿಸುತ್ತಿದ್ದಳು. ಹಾಡುಗಾರ್ತಿಯೂ ಆಗಿದ್ದಳು. ಒಂದು ದಿನ ಸಂಜೆ ವೀಣೆ ನುಡಿಸ್ತಾ ಹಾಡನ್ನ ಶಂಖ ಮುಖದಲ್ಲಿದ್ದ ಮಾಳಿಗೆಯಿಂದ ಆ ರಾಜನ ಹೆಂಡತಿ ಹಾಡಿದಳು. ರಾಜ ಗಾಳಿಸೇವನೆಗೆ ಬಂದಿದ್ದ. ಆ ಹಾಡನ್ನು ಕೇಳಿ ರಾಜ, ಜಗಳವನ್ನೆಲ್ಲ ಮರೆತು ಅಲ್ಲಿಗೆ ಹೋದ—ಅಂತ ಕಥೆ ಹೇಳ್ತಾರೆ."

ಅದು ನಡೆಯುವಂತಹ ಕಥೆಯೇ ಎನ್ನುವ ವಿಷಯದಲ್ಲಿ ಸಾವಿತ್ರಿಗೆ ಸಂದೇಹವಿರಲಿಲ್ಲ. ಆ ಹಾಡು ಒಂದು ವಶೀಕರಣದ ಮಂತ್ರವೆನ್ನುವುದೇನೋ ನಿಜ. ಗಂಡಾಗಿ ಹುಟ್ಟಿದವನಾಗಿದ್ದರೆ ಆ ಹಾಡು ಕೇಳಿದರೆ ಎಲ್ಲವನ್ನೂ ಮರೆತು ಅಲ್ಲಿಗೆ ಹೋಗ್ತಾನೆ ಎನ್ನುವ ವಿಷಯದಲ್ಲಿ ಸಂಶಯವಿಲ್ಲ. ಅವಳು ಹೇಳಿದಳು:

"ಆದರೆ, ಅಮ್ಮ ಈ ಹಾಡು ಹೇಳೋದನ್ನ ಯಜಮಾನರು ಕೇಳಿದ್ದಿದ್ದರೆ!"

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು.

ಒಂದು ವೇಳೆ ಜ್ಯೋತಿರ್ಮಯಿಯೂ ಅದನ್ನೇ ಆಲೋಚಿಸುತ್ತಿದ್ದುದಾಗಿರಬೇಕು. ಆದರೆ ಸಾವಿತ್ರಿ ಅದರಿಂದ ಮತ್ತೊಂದು ಆಲೋಚನೆಯ ಕಡೆಗೆ ತಿರುಗಿದ್ದಳು. ಅವಳು ಹೇಳಿದಳು:

"ಈಗಲಾದರೂ ಯಜಮಾನರು ಬರೋದಿದ್ದರೆ ಅಮ್ಮ........."

ಸಾವಿತ್ರಿ ಒಂದು ಕ್ಷಣ ಬಿಟ್ಟು ಹೇಳಬೇಕಾದದ್ದನ್ನೆಲ್ಲ ಹೇಳಿ ಮುಗಿಸಿದಳು: "ಅಮ್ಮ, ನೀವೆಷ್ಟು ಕಾಗದ ಬರೆದದ್ದು? ಒಂದಕ್ಕಾದರೂ ಉತ್ತರವಿಲ್ಲ."

ಉತ್ತರಕ್ಕಾಗಿ ತಾನು ಕಾಗದ ಬರೆಯುತ್ತಿರಲಿಲ್ಲ ಎಂದು ಜ್ಯೋತಿರ್ಮಯಿ ಹೇಳಿದಳು.

ಅವರಿಗೆ ಆ ದೊಡ್ಡ ಸುದ್ದಿ ತಿಳಿದರೆ ಸಾಕು. ಸಾವಿತ್ರಿ ನೂರನೆಯ ಸಲ ಅವಳ ಆ ಪ್ರಶ್ನೆಯನ್ನು ಆಗಲೂ ಆವರ್ತಿಸಿದಳು.

"ಎಂದೆಂದೂ ಅಮ್ಮ ಇದನ್ನೇ ಹೇಳ್ತಾರೆ. ನನಗೆ ಇದನ್ನು ಕೇಳಿದಾಗ ಒಂದೂ ಅರ್ಥವಾಗೋದಿಲ್ಲ. ಅವರಿಗೆ ತಿಳಿದು ಏನು ಮಾಡೋದಕ್ಕೆ?"

ಜ್ಯೋತಿರ್ಮಯಿ ಅವಳ ಎಂದಿನ ಉತ್ತರವನ್ನೇ ಹೇಳಿದಳು:

"ಅವರಿಗೆ ಅದು ತಿಳಿದಿದ್ದರೆ ಸಾಕು."

"ಅದೂ ಹೋಗಲಿ. ಅದನ್ನ ಕಾಗದದಲ್ಲಿ ನೇರವಾಗಿ ಹೇಳಿದ್ದೀರಾ? ಅದೂ ಇಲ್ಲ."

ಒಂದು ನಗುವಿನೊಂದಿಗೆ ಜ್ಯೋತಿರ್ಮಯಿ ದೇವಿ ಕೇಳಿದಳು:

"ಇದು ಇದೆ ಅಂತ ಹೇಗೆ ಗೊತ್ತಾಗಬೇಕು?"

ಸ್ವಲ್ಪ ತಾಳ್ಮೆ ತಪ್ಪಿದವಳಂತೆ ಅದಕ್ಕೆ ಸಾವಿತ್ರಿ ಉತ್ತರ ಹೇಳಿದ್ದು: "ಅಮ್ಮನಿಗೆ ಇನ್ನೂ ಸಂಶಯವಾ? ಇದು ನನಗೆ ಗೊತ್ತಿರೋದು. ಎಲ್ಲ ಲಕ್ಷಣಗಳೂ ಕಾಣಿಸ್ತಿವೆ."

ಜ್ಯೋತಿರ್ಮಯಿ ಪುನಃ ಅವಳ ಸಂಶಯದ ಕಾರಣವನ್ನು ವಿವರಿಸಿದಳು: "ನಲವತ್ತಾರನೆ ವಯಸ್ಸಿನಲ್ಲಿ ಹೀಗಾಗುತ್ತಾ?"

"ಅದು ನನಗೆ ಗೊತ್ತಿಲ್ಲ. ಇದು ಅದೇನೇ !"

ಸಾವಿತ್ರಿ ಮತ್ತೆ ಕೇಳಿದಳು: "ಅಮ್ಮ ಹೋಗಿ ಅವರನ್ನ ಕಂಡು ವಿಷಯ ತಿಳಿಸಿದರೇನು?"

ಒಂದು ಕ್ಷಣ ಬಿಟ್ಟು ಅವಳು ಪುನಃ ತನ್ನ ಸಲಹೆಯನ್ನು ತಿಳಿಸಿದಳು:

"ಮೊದಲು ಅದಕ್ಕೆ ಪರಿಹಾರ ಮಾರ್ಗ ದೊರೆಯಲಿ. ಅಮ್ಮನಿಗೆ ಇದೊಂದು ಹುಡುಗಾಟದ ಹಾಗೆ ಕಾಣಿಸುತ್ತೆ."

ಸಾವಿತ್ರಿ ಇನ್ನೂ ಹೇಳಿ ಮುಗಿಸಿರಲಿಲ್ಲ.

"ಒಂದು ಇಹಗತಿಯೂ ಪರಗತಿಯೂ ಇಲ್ಲದಾಗ ನಾನು ಕೂಡ ಬೆಂಕಿ ಕೆಂಡ ನುಂಗುತ್ತಿದ್ದೆ."

ಜ್ಯೋತಿರ್ಮಯಿಗೆ ಯಾವ ಬೇಸರವೂ ಇರಲಿಲ್ಲ. ಸಾವಿತ್ರಿ ಹೇಳುವಂತೆ ಅಷ್ಟೊಂದು ಬೆಂಕಿ ಕೆಂಡ ನುಂಗುವಂತಹದೇನಿದೆ ಎಂದು ಅವಳ ಭಾವನೆ. ಒಂದು ಸಣ್ಣ ಮಂದಹಾಸ ಅವಳ ಮುಖದಲ್ಲಿ ಉಂಟಾಗಿತ್ತು. ಆ ಗುಣದೋಷಗಳನ್ನು ಅವಳು ಆಲೋಚಿಸಿರಲಿಲ್ಲ ಅಷ್ಟೆ. ಒಂದು ಅಸಾಧಾರಣ ಸ್ಥಿತಿಯಾಗಿತ್ತು ಅದು.

ಹೆಚ್ಚು ದಿನಗಳು ಕಳೆಯುವ ಮೊದಲೇ ಆಶ್ರಮದಲ್ಲಿದ್ದವರಿಗೆಲ್ಲ ಆ ವಿಷಯ ತಿಳಿದುಹೋಯಿತು.

ನಿತ್ಯಾನಂದಮಯಿಯೂ ತೇಜಸ್ವರೂಪಿಣಿಯೂ ಮರೆಯಲ್ಲಿ ನಿಂತು ಕೇಳಿಯೋ ಅಥವಾ ಜ್ಯೋತಿರ್ಮಯಿಯಲ್ಲಿ ಉಂಟಾದ ಬದಲಾವಣೆಗಳನ್ನು ಕಂಡೋ ಏನೋ ಅವರು ಬಲವಾಗಿ ಸಂಶಯಪಟ್ಟರು. ಅದು ಅವರಿಗೆ ಸಂಬಂಧಪಟ್ಟಂತೆ ವಜ್ರಾಘಾತವಾಗಿತ್ತು. ಅದರ ಅರ್ಥ ಏನು? ಆ ಆಶ್ರಮದ ಕಥೆ ಮುಗಿದ ಹಾಗೆಯೇ. ಅಲ್ಲಿಗೆ ಆ ಮೇಲೆ ಯಾರಾದರೂ ಬಂದಾರಾ? ಒಬ್ಬಳು ಹಾಳಾದರೆ ಆಯ್ತು. . ಆ ಮೇಲೆ ಅದನ್ನೊಂದು ವ್ಯಭಿಚಾರಿಗೃಹ ಎಂದು ಜನರು ಮುದ್ರೆ ಒತ್ತುತ್ತಾರೆ. ಯಾವ ತಪ್ಪನ್ನೂ ಮಾಡದ ನಿತ್ಯಾನಂದಮಯಿಯ ಮೇಲೆಯೂ ತೇಜಸ್ವರೂಪಿಣಿಯ ಮೇಲೆಯೂ ಜನರು ಸಂಶಯಪಡುತ್ತಾರೆ. ಅವರೆಲ್ಲ ಎಲ್ಲಿಗೆ ಹೋಗಬೇಕು? ಮನುಷ್ಯರ ಮುಖ ನೋಡುವುದು ಹೇಗೆ? ಪ್ರಭಾವತಿ ದೇವಿಯೂ ಅವಳ ಹತ್ತಿರ ಇದ್ದದ್ದನ್ನೆಲ್ಲ ಅಲ್ಲಿ ಹಾಕಿದ್ದಾಳೆ. ಜೀವನದಲ್ಲಿ ಸೋಲುಂಟಾದವರು ಸುರಕ್ಷಿತವಾಗಿರುವ ಸ್ಥಳವನ್ನಾಗಿ ಅಭಯಧಾಮವನ್ನಾಗಿ ಅದನ್ನು ಕಟ್ಟಿಕೊಂಡು ಬಂದರು. ಈಗ ಒಬ್ಬಳು ಮೂದೇವಿಯ ಕಾರಣದಿಂದ ಎಲ್ಲವೂ ಹಾಳಾಯಿತು. ಆ ಸನ್ಯಾಸಿನಿಯರಿಗೆ ಸಂಬಂಧಿಸಿದಂತೆ ಅದೊಂದು ಬದುಕಿನ ಪ್ರಶ್ನೆಯಾಗಿತ್ತು.

ಮತ್ತೂ ಒಂದು ಕಷ್ಟ ಕೂಡಿಕೊಂಡಿತು. ವಿಮಲಮ್ಮ ಮಲಬಾರಿನಿಂದ ಉಮಾ ದೇವಿಯನ್ನು ಕರೆದುಕೊಂಡು ಬಂದಳು. ಉಮಾದೇವಿ ಸದನ ಎನ್ನುವ ಹೆಸರಿನಲ್ಲಿ ಒಂದು ಆಶ್ರಮವನ್ನೂ ತೆರೆಯಲಾಯಿತು. ಉಮಾದೇವಿ ಆಂಧ್ರ ದೇಶದವಳು. ಯುವತಿ; ಸುಂದರಿ. ಹೊಂಬಣ್ಣದವಳು. ಪಾದದ ವರೆಗೆ ತಲೆಕೂದಲಿತ್ತು. ಕಪ್ಪಾದ ಕಣ್ಣುಗಳು. ಆ ನಗುವಿಗೆ ದಿವ್ಯವಾದ ವಶೀಕರಣಶಕ್ತಿಯಿತ್ತು. ತಿರುವನಂತಪುರವಿಡೀ ಈಗ ಉಮಾದೇವಿ ಸದನಕ್ಕೆ ಹೋಗುತ್ತಿದೆ. ಎಲ್ಲರಿಗೂ ಪರಸ್ಪರ ದೋಷಾರೋಪಣೆ ಮಾಡುವುದಿತ್ತು. ಪ್ರಭಾವತೀದೇವಿಯೇ ಈ ಅವಸ್ಥೆಯುಂಟಾಗುವುದಕ್ಕೆ ಕಾರಣ ಎಂದು ತೇಜಸ್ವರೂಪಿಣಿಯ ಅಭಿಪ್ರಾಯ. ಜ್ಯೋತಿರ್ಮಯಿ ದೇವಿ ಆ ದರಿದ್ರ ಹೆಣ್ಣು ಗಳನ್ನು ಕರೆದು ಒಳಗೆ ಸೇರಿಸಿಕೊಂಡಿದ್ದರೂ ಅವರು ಕೆಲವು ದಿನಗಳು ಕಳೆದ ಮೇಲೆ ಬಂದ ಹಾಗೆಯೇ ಹಿಂದಿರುಗುತ್ತಿದ್ದರು. ಪ್ರಭಾವತಿ ದೇವಿ ಆಶ್ರಮದ ಮಾತಾಜಿ ಆಗ ಬೇಕಾಗಿತ್ತು. ಅವಳು ಹಣ ತಂದಿದ್ದವಳು. ದೊಡ್ಡ ನೌಕರಳೂ ಆಗಿದ್ದಳು. ಜ್ಯೋತಿ ರ್ಮಯಿಯನ್ನು ಹಾಗೆ ಅವಳು ಹೊರಗಿನ ಕೆಲಸಕ್ಕೆ ನೇಮಿಸಿದ್ದು. ಅವಳು ಹಳೆಯ ದಾರಿಗೆ ತಿರುಗಿದಳು. ಈ ರೀತಿಯಲ್ಲಿ ತೇಜಸ್ವರೂಪಿಣಿ ವಾದಿಸುವುದು. ನಿತ್ಯಾನಂದ ಮಯಿಯ ಈಗಿನ ಅಭಿಪ್ರಾಯ ಅದಲ್ಲ. ಜ್ಯೋತಿರ್ಮಯಿ ದೇವಿ ಆಶ್ರಮದ ಮಾತಾಜಿ ಯಾಗಿದ್ದರೂ ಇದೆಲ್ಲ ನಡೆಯುತ್ತಿತ್ತು ಎಂದು. ಅವಳ ಸ್ವಭಾವವೇ ಅದು. ಅಂತು ಅವರಿಗೆ ಭವಿಷ್ಯವನ್ನು ಕುರಿತು ದೊಡ್ಡ ಆಶಂಕೆಯುಂಟಾಗಿತ್ತು. ಇದು ಹೊರಗೆ ಗೊತ್ತಾದರೆ ಹೇಗೆ ಜೀವಿಸುವುದು?

ಮೂವರು ಸನ್ಯಾಸಿನಿಯರೂ ಕುಳಿತು ಆಲೋಚಿಸಿದರು. ಎಲ್ಲರಿಗೂ ವಿಷಯದ ಗಂಭೀರತೆ ಚೆನ್ನಾಗಿ ಅರ್ಥವಾಯಿತು. ಇಷ್ಟೊಂದು ಸುರಕ್ಷಿತವಾದ ಅಭಯ ಕೇಂದ್ರ— ಹೀಗೆಲ್ಲ ಆಗುವುದೆಂದು ಯಾರೂ ಯೋಚಿಸಿರಲಿಲ್ಲ. ಯಾರೂ ಪರಸ್ಪರ ದೋಷಾ ರೋಪಣೆ ಮಾಡಿದ್ದಲ್ಲ. ಅಂತು ಎಲ್ಲರೂ ಒಂದು ವಿಷಯ ಹೇಳಿದರು: "ಒಂದು ದಾರಿಯಲ್ಲಿ ನಡೆಯುವಾಗ ಜೊತೆಯಲ್ಲಿರುವವರು ಯಾರು ಎಂದು ಆಲೋಚಿಸಿ ನೋಡಬೇಕು. ಹಾಗೆ ನೋಡಿದ ಪಕ್ಷದಲ್ಲಿ, ಈ ಸ್ತ್ರೀಯ ಜೊತೆಯಲ್ಲಿ ಜೀವನವನ್ನು ಸಾಗಿಸಬೇಕಾಗಿರಲಿಲ್ಲ."

ಪ್ರಭಾವತಿ ದೇವಿ ಹೇಳಿದಳು: "ಏನು ಮಾಡೋದು? ಎಲ್ಲ ನಮ್ಮ ಹಣೆ ಬರಹ! ಹಳೆಯದೆಲ್ಲ ಕೈಬಿಟ್ಟು ಹೋಗಿದೆ ಅಂತ ನಾನು ಭಾವಿಸಿದ್ದೆ! ಈ ಹೊತ್ತಿನಲ್ಲಿ ಆ ಸರ್ಪ ತಲೆ ಎತ್ತುತ್ತೆ ಅಂತ ಅಂದುಕೊಂಡಿರಲಿಲ್ಲ."

ಅದನ್ನು ಎಲ್ಲರೂ ಒಪ್ಪಿದರು. ತೇಜಸ್ವರೂಪಿಣಿ ಕೇಳಿದಳು: "ಈಗ ಯಾವ ದಾರಿ ಇರೋದು? ಈಗ ಹೀಗೆ ಹಿಂದಿನ ದಡ್ಡತನನೇ ಆಲೋಚಿಸಿಕೊಂಡು ಕುಳಿತಿರೋದು ಸರಿಯಲ್ಲ. ಈಗಲೇ ಇಲ್ಲಿಗೆ ಜನರು ಬರ್ತಿಲ್ಲ."

ನಿತ್ಯಾನಂದಮಯಿ ಹೇಳಿದಳು: "ಅಮ್ಮ ನೇರವಾಗಿ ಕೇಳಿ ನೋಡಿ."

ಪ್ರಭಾವತಿ ದೇವಿ ಒಪ್ಪಿದಳು: "ಕೇಳ್ತೀನಿ. ಕೇಳದೇ ಇರೋದಕ್ಕಾಗುತ್ತಾ? ಅಷ್ಟು ಮಾತ್ರವಲ್ಲ ಆಶ್ರಮದಿಂದ ಹೊರಟುಹೋಗು ಅಂತಲೂ ಹೇಳೋಣ. ಆಶ್ರಮಕ್ಕೆ ಹೊಂದಿಕೆಯಾಗದ ಜೀವನವನ್ನು ಸಾಗಿಸಿದ್ದಕ್ಕೆ ತಕ್ಕ ಶಿಕ್ಷೆ ವಿಧಿಸೋಣ."

ತೇಜಸ್ವರೂಪಿಣಿ ಹೇಳಿದಳು: "ಹೊರಟುಹೋಗು ಅಂದರೆ ಹೊಗ್ತಾಳಾ? ಇದು ಅವಳ ಮನೆಯಲ್ಲವಾ? ಅವಳು ಆಶ್ರಮಕ್ಕೆ ಕೊಟ್ಟಿಳು ಅಂತ ಹೇಳಿ ಅವಳನ್ನ ಇಲ್ಲಿಂದ ಹೊರಟುಹೋಗು ಅಂತ ಹೇಳೋದಕ್ಕಾಗುತ್ತಾ?"

"ಹಾಗೆ ಹೇಳಬಹುದು. ಆದರೆ ಹೋಗುವುದಿಲ್ಲ. ಹಾಗಾದಾಗ ಕೇಸು. ಜಗಳ. ಎಲೆ ಮುಳ್ಳಿನ ಮೇಲೆ ಬಿದ್ದರೂ ಮುಳ್ಳು ಎಲೆಯ ಮೇಲೆ ಬಿದ್ದರೂ ಎಲೆಗೇ ಕಷ್ಟ!"

"ಕೇಸು ಮಾಡಿದರೂ ಕೇಸು ಮಾಡದೇ ಇದ್ದರೂ ಆಶ್ರಮದ ಒಳ್ಳೆ ಹೆಸರು ಹೋಯ್ತು."

ತೇಜಸ್ವರೂಪಿಣಿಗೆ ಒಂದು ಸಲಹೆ ಮಾಡುವುದಿತ್ತು.

"ನಾವೆಲ್ಲ ಕಾಲು ಹಿಡಿದುಕೊಂಡು ಕೇಳೋಣ ಇಲ್ಲಿಂದ ಹೋಗು ಅಂತ. ನಮ್ಮನ್ನ ನಾಶ ಮಾಡಬೇಡ ಅಂತ ಕೇಳಿಕೊಳ್ಳೋಣ."

ಪ್ರಭಾವತಿ ದೇವಿ ಹೇಳಿದಳು: "ಅಂಥಾ ಒಳ್ಳೆ ಮನಸ್ಸಿನವಳಲ್ಲ. ನೀವು ಏನು ಹೇಳಿದರೂ ಅವಳು ಇಲ್ಲಿಂದ ಹೋಗೋದಿಲ್ಲ!"

ಒಂದು ಕ್ಷಣ ಬಿಟ್ಟು ಪ್ರಭಾವತಿ ದೇವಿ ಹೇಳಿದಳು: "ಆ ಬೇಡೋ ಹೆಣ್ಣುಗಳನ್ನು ಕರೆದುಕೊಂಡು ಬಂದಾಗಲೇ ನನಗೆ ಅನ್ನಿಸಿತು. ಯಾವುದೋ ದೊಡ್ಡ ಅಪತ್ತು ಬರೋದಿದೆ ಅಂತ. ಆಗಲೇ ಈ ಆಶ್ರಮದ ಶುದ್ಧಿ ಹಾಳಾಯ್ತು."

ಅಂದಿನಿಂದ ಆಶ್ರಮದ ಸ್ವಚ್ಛತೆ ಹೋಯಿತು ಎಂದು ಎಲ್ಲರೂ ಒಪ್ಪಿದರು. ತುಂಬ ಹೊತ್ತು ಸನ್ಯಾಸಿನಿಯರು ಕುಳಿತು ಆಲೋಚಿಸಿದರು. ಅವರು ಆಲೋಚನೆಯಿಂದ ಯಾವ ತೀರ್ಮಾನಕ್ಕೂ ಬರುತ್ತಿರಲಿಲ್ಲ. ಆದರೆ ಎಲ್ಲರ ಮನಸ್ಸಿನಲ್ಲಿಯೂ ಏನೋ ಇದೆ ಎಂದು ತೋರುತ್ತಿತ್ತು. ಅದನ್ನು ಹೊರಗೆ ತೋರಿಸಿಕೊಳ್ಳಲು ಎಲ್ಲರಿಗೂ ಭಯ. ಆ ಮಾರ್ಗ ಫಲಿಸೀತೇ ಎನ್ನುವ ಸಂಶಯವಿತ್ತು. ಆದರೂ ಅದೊಂದು ಮಾತ್ರ ಆ ಮೂವರ ತಲೆಗೂ ಹೊಳೆದದ್ದು. ಅದನ್ನು ಆ ಕಾರ್ಯದಲ್ಲಿ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆ ಅವಸ್ಥೆಯಲ್ಲಿ ಯಾವ ಸ್ತ್ರೀಯ ಬುದ್ಧಿಯಲ್ಲೂ ಮೊದಲು ಹೊಳೆಯುತ್ತಿದ್ದದ್ದು ಆ ಪರಿಹಾರ.

ಒಂದು ಮನೆಯಲ್ಲಿ ಒಂದು ಹೆಣ್ಣು ವಿವಾಹಕ್ಕೆ ಮೊದಲು ಗರ್ಭಿಣಿಯಾದಳು ಎಂದಿಟ್ಟುಕೊಳ್ಳೋಣ. ಅದು ರಹಸ್ಯ. ಮೊದಲು ಆಲೋಚಿಸುವುದೇನು? ಕಡಿದ ಸರ್ಪವನ್ನು ಹಿಡಿದು ವಿಷ ಹೀರಿಸುವುದು ಮೊದಲನೆಯ ಆಲೋಚನೆ. ಆ ಹುಡುಗಿಯ ಮತ್ತು ಉಳಿದವರ ಮಾನದ ಪ್ರಶ್ನೆ. ಆ ವಿಷಯವನ್ನು ಯಾರಿಗೂ ತಿಳಿಯದಂತೆ ಅದನ್ನು ಇಲ್ಲದಂತೆ ಮಾಡಿ ರಕ್ಷಿಸುವುದಾಗಿರುತ್ತದೆ—ಎರಡನೆಯ ಆಲೋಚನೆ.

ಪ್ರಭಾವತಿ ದೇವಿ ಮೆಲ್ಲಗೆ ಹೇಳಿದಳು:

"ಅದು ಕಷ್ಟ; ತಪ್ಪು, ಪಾಪ. ಆದರೂ ಏನು ಮಾಡೋದು?"

ಎಂದು ಹೇಳಿ ಆ ಸಲಹೆ ಮಾಡಿದಳು. ಅದಕ್ಕೆ ನಿತ್ಯಾನಂದಮಯಿ ಸಂದೇಹವನ್ನು ಪ್ರಕಟಿಸಿದ್ದಳು. ಅವರೆಲ್ಲ ಅದನ್ನು ಸಲಹೆ ಮಾಡಿದರು, ಅದು ತಪ್ಪೆಂದು ಭಾವಿಸಿಬಿಟ್ಟರು ಡೆಂದಳು.

"ಅಯ್ಯೋ, ಅದನ್ನು ಅವಳು ಒಪ್ಪಿಯಾಳೆ?"

ತೇಜಸ್ವರೂಪಿಣಿಗೆ ಹೇಳುವುದಿತ್ತು: "ಆಶ್ರಮದಲ್ಲಾ? ಅದು ಹೇಗೆ ಸಾಧ್ಯ?"

ಪ್ರಭಾವತಿ ದೇವಿ ಹೇಳಿದಳು: "ಇಲ್ಲದೇ ಇದ್ದರೆ ನಾವು ಇಲ್ಲಿಂದ ಗಂಟುಮೂಟೆ ಕಟ್ಟಬೇಕು."

ನಿತ್ಯಾನಂದಮಯಿಗೆ ಮತ್ತೊಂದು ಸಂಶಯ.

"ಇದನ್ನು ಸೂಚಿಸಿದರೆ ನಾವು ಹೀಗೆ ಹೇಳಿದ್ದು ಅಂತ ಅವಳು ಊರಿಗೆಲ್ಲ ಹೇಳಿಕೊಂಡು ಬಂದರೋ?"

ಪ್ರಭಾವತಿ ದೇವಿ ಸ್ವಲ್ಪ ಆಲೋಚಿಸಿದಳು.

"ಹೇಳಿಕೊಂಡು ತಿರುಗೋದಿದ್ದರೆ ತಿರುಗಲಿ. ಏನಾದರೊಂದು ಮಾಡಿಯೇ ತೀರಬೇಕು. ನಾನು ಹೇಳಿಬಿಡ್ತೀನಿ."

## [42]

### ಉಮಾದೇವಿ ಸದನ

ಉಮಾದೇವಿ ಸದನ ಧನ್ಯಾನಂದಾಶ್ರಮದ ಹಾಗಿರಲಿಲ್ಲ. ಅಲ್ಲಿ ಆಶ್ರಮದ ಮಾತಾಜಿಯೇ ಆರಾಧನಾಮೂರ್ತಿ. ಕೃಷ್ಣ, ರಾಧೆ—ಈ ರೀತಿಯ ದೇವತೆಗಳಿಗೆ ಸಮಾನ ಪ್ರಾಧಾನ್ಯವಿದ್ದಿತಾದರೂ ಮತ್ತೊಂದು ದೇವತೆ ಅಲ್ಲಿಲ್ಲ. ಉಮಾದೇವಿ ಸ್ವಂತ ಚಿತ್ರವನ್ನೇ ತಮ್ಮ ಮುಂದಿಟ್ಟುಕೊಂಡು ಪೂಜಿಸುತ್ತಿದ್ದರು. ಉಮಾದೇವಿ ಸದನ ತಿರುವನಂತಪುರದ ಗಣ್ಯವ್ಯಕ್ತಿಗಳು ವಾಸಿಸುವ ಭಾಗದಲ್ಲಿ ಒಂದು ದೊಡ್ಡ ಕಾಂಪೌಂಡಿನೊಳಗಿತ್ತು. ಬಹಳ ಬೇಗ ಅಲ್ಲಿ ಟೆರೇಸಿನ ಎರಡು ಅಂತಸ್ತಿನ ಒಂದು ದೊಡ್ಡ ಕಟ್ಟಡ ಎದ್ದು ನಿಂತಿತು. ಉಪಶಾಲೆಗಳನ್ನೂ ಕಟ್ಟಿಸಿದ್ದಾಯಿತು. ಧನ್ಯಾನಂದಾಶ್ರಮಕ್ಕೆ ದೊರಕಿದ್ದಕ್ಕಿಂತ ಎಷ್ಟೋ ಮಿಗಿಲಾಗಿ ಸಾರ್ವಜನಿಕರ ಬೆಂಬಲ ಈ ಸದನಕ್ಕೆ ದೊರೆಯಿತು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಅದಕ್ಕೆ ಕಾರಣವೂ ಇತ್ತು. ಧನ್ಯಾನಂದಾಶ್ರಮ ಒಂದು ರೀತಿಯಲ್ಲಿ ನೀರಸ ಆಧ್ಯಾತ್ಮ ಚಿಂತನೆಗೆ ಮತ್ತು ತತ್ವಶಾಸ್ತ್ರಕ್ಕೆ ಮೀಸಲಾಗಿತ್ತು. ಆದರೆ ಸದನದ ಕಥೆ ಅದಲ್ಲ. ಅಲ್ಲಿಯ ವಾತಾವರಣವೇ ಬೇರೆ. ಧನ್ಯಾನಂದಾಶ್ರಮ, ಸಾಮ್ರಾಣಿ, ಅಷ್ಟಗಂಧ, ಘೃತ ಮುಂತಾದುವುಗಳ ಪರಿಮಳದಿಂದ ಕೂಡಿರುತ್ತಿತ್ತು. ಆದರೆ ಸದನದಲ್ಲಿ ಹರಡಿರುತ್ತಿದ್ದದ್ದು ಮಲ್ಲಿಗೆ ಹೂವಿನ, ಪನ್ನೀರಿನ, ಅತ್ತರಿನ ಪರಿಮಳ. ಅಲ್ಲಿಗೆ ಕಿವಿಗೆ ಇಂಪಾದ ಗೀತಗೋವಿಂದದ ಪದ್ಯಗಳು ವೀಣಾರವದೊಂದಿಗೆ ಕೇಳಿಬರುತ್ತಿದ್ದುವು. ಕೊಳಲಿನ ಇಂಚರ ದೇಹವನ್ನು ಪುಳಕಗೊಳಿಸುತ್ತಿತ್ತು. ಅಲ್ಲಿಯ ಮರಗಿಡಗಳನ್ನು ಸ್ಪರ್ಶಿಸಿ ಎಲ್ಲೆಡೆಗೂ ವ್ಯಾಪಿಸುತ್ತಿತ್ತು. ಗೆಜ್ಜೆಗಳ ನಾದ, ಕಂಕಣ ಧ್ವನಿ, ತಾಳಗಳ ಶಬ್ದ—ಯಾರನ್ನಾದರೂ ಪುಳಕಗೊಳಿಸುತ್ತಿದ್ದುವು. ಅಲ್ಲಿ ಎಂತಹ ಮುದುಕನೂ ಯುವಕನಾಗುತ್ತಿದ್ದ. ಎಂತಹ ಮುದುಕನೂ ಕೃಷ್ಣನನ್ನು ಹಂಬಲಿಸಿ ಕರೆಯುತ್ತಿದ್ದ. ಅಲ್ಲಿ ಅದೊಂದು ರೀತಿಯ ಮಾಯಾಮಯ ವಾತಾವರಣ ವುಂಟಾಗಿತ್ತು.

ಅಲ್ಲಿಯ ಆತ್ಮಚಿಂತನೆ ರಜೋಗುಣ ಪ್ರಧಾನವಾಗಿತ್ತು. ಅದರ ಕೇಂದ್ರಬಿಂದು ಉಮಾದೇವಿ. ಉಮಾದೇವಿ ಎಂದು ಹೇಳಿದರೆ ಸ್ತ್ರೀಸೌಂದರ್ಯದ ಪರಿಪೂರ್ಣ ಮಾತೃಕೆ. ಹೊಂಬಣ್ಣದ ದೇಹವುಳ್ಳ ಆ ಉಮಾದೇವಿಗೆ ಅವರ ಸೌಂದರ್ಯವನ್ನು ಕುರಿತು ಪೂರ್ಣ ಸಮಾಧಾನವಿತ್ತು. ಅದರಲ್ಲಿ ತಪ್ಪೇನು? ಅವರು ತಮ್ಮ ನೀಳವಾದ ಗುಂಗುರು ತಲೆಕೂದಲನ್ನು ಜಡೆಗಟ್ಟಿಸಿಕೊಳ್ಳದೆ ಚೆನ್ನಾಗಿ ಬಾಚಿ ಅಲಂಕರಿಸಿಕೊಳ್ಳುತ್ತಿದ್ದರು. ಸಂದರ್ಭಕ್ಕನುಸಾರವಾಗಿ ಹೊಸ ಹೊಸ ರೀತಿಯಲ್ಲಿ ತಲೆಗೂದಲ ಸೇವೆ

ನಡೆಸಿರುತ್ತಿದ್ದರು. ಉಮಾದೇವಿ ಕಾವಿ ಸೀರೆಯನ್ನುಟ್ಟುಕೊಳ್ಳುತ್ತಿರಲಿಲ್ಲ. ಅವರ ಮೈಬಣ್ಣಕ್ಕೆ ಹೊಂದಿಕೆಯಾಗುವ ಒಳ್ಳೊಳ್ಳೆಯ ಸೀರೆಯನ್ನುಟ್ಟುಕೊಳ್ಳುತ್ತಿದ್ದರು. ಅವರ ಕೆಂಪು ತುಟಿಗಳೂ ಅವುಗಳಿಗೆ ಹೊಂದಿಕೆಯಾಗುವ ಅಂದವಾದ ಹಲ್ಲುಗಳೂ ಮನಮೋಹಕವಾದ ಮಂದಹಾಸವನ್ನು ಬೀರಲು ಸೃಷ್ಟಿಕರ್ತ ಕೊಟ್ಟ ಕೊಡುಗೆಗಳು. ಅದೇ ರೀತಿಯಲ್ಲಿ ಅವರು ಮಂದಹಾಸವನ್ನು ಬೀರುತ್ತಿದ್ದರು. ಭಕ್ತ ಜನಗಳು ಅದರಿಂದ ಆಕರ್ಷಿತರಾಗಿ ಹೋದರು. ಅವರಿಗೆ ಆಕರ್ಷಕವಾದ ನೇತ್ರಗಳಿದ್ದುವು. ತುಂಬ ಕಪ್ಪಾದ ಹುಬ್ಬುಗಳಿದ್ದುವು. ಆ ಕಣ್ಣುಗಳಲ್ಲಿ ಚಟುಲತೆಯಿತ್ತು. ಯಾರನ್ನೂ ಆ ದೃಷ್ಟಿ ಗಾಳ ವನ್ನು ಎಸೆದು ಹಿಡಿದು ನಿಲ್ಲಿಸುತ್ತಿತ್ತು ಎಂದು ಹೇಳುವುದರಲ್ಲಿ ಅರ್ಥವಿಲ್ಲ. ಏಕೆಂದರೆ ಹಾಗೆ ನೋಡುವುದು ದೇವಿಗೆ ತಿಳಿಯದು. ದೇವಿಯ ಕರಚರಣಗಳೂ ದೇಹವೂ ಎಲ್ಲವೂ ಆಯ್ದು ಸೃಷ್ಟಿಸಿದ್ದು. ಅದೊಂದು ಒಳ್ಳೆಯ ನರ್ತಕಿಯ ಶರೀರ. ಒಂದೊಂದು ಹೆಜ್ಜೆಯನ್ನಿರಿಸುವುದು, ಒಂದೊಂದು ಅಂಗವಿನ್ಯಾಸ—ನಡೆಯುವುದು, ಕುಳಿತುಕೊಳ್ಳು ವುದು, ಮಾತನಾಡುವುದು, ನಗುವುದು ಎಲ್ಲದರಲ್ಲಿಯೂ ಆಕರ್ಷಣೆಯಿರುತ್ತಿತ್ತು. ಒಂದು ಹೃದಯಂಗಮವಾದ ತಾಳ ಎಲ್ಲದರಲ್ಲಿಯೂ ಇತ್ತು. ದೇವಿಯ ಕಂಠವೂ ಮಧುರ. ಅವರು ಹಾಡುವ ಪದ್ಧತಿಯಿತ್ತು. ಸೌಂದರ್ಯವೆನ್ನುವುದು ಪಾಪವೇ? ಅದನ್ನು ಎಚ್ಚರಿಕೆಯಿಂದ ಕಾಪಾಡಿಕೊಳ್ಳುವುದು ತಪ್ಪೇ? ಸೌಂದರ್ಯವಿದೆಯೆನ್ನುವ ಪ್ರಜ್ಞೆಯಲ್ಲಿ ತಪ್ಪೇನು? ಅದೂ ಒಂದು ಸಿದ್ಧಿಯಲ್ಲವೇ? ಬಹುಶಃ ಅದೇ ಇರಬೇಕು ಆ ಸದನದಲ್ಲಿ ಆತ್ಮಚೈತನ್ಯ ರಜೋಗುಣ ಪ್ರಧಾನವಾಗುವುದಕ್ಕೆ ಕಾರಣ. ರಜೋಗುಣ ಪ್ರಧಾನವಾದಾಗ ಆತ್ಮಪೂಜೆಗೆ ಪ್ರಾಧಾನ್ಯವುಂಟಾಯಿತು ಎಂದೂ ಆಗಬಹುದು.

ತಿರುವನಂತಪುರದ ಗಣ್ಯ ಜನರೆಲ್ಲರನ್ನೂ ಆ ಸದನ ಆಕರ್ಷಿಸಿತು. ನೀರಸವಾದ ಧನ್ಯಾನಂದಾಶ್ರಮ ಈಗ ನಿರ್ಜನವಾಯಿತು. ಒಬ್ಬನೇ ಒಬ್ಬ ಆ ಕಡೆಗೆ ಕಾಲಿರಿಸುತ್ತಿರ ಲಿಲ್ಲ. ಅಲ್ಲಿ ಭಜನೆಗೆ ಇದ್ದದ್ದು ಆ ಮೂವರು ಸನ್ಯಾಸಿನಿಯರು ಮಾತ್ರ. ಯೌವನದ ಲವಲವಿಕೆಯೂ ಊರ್ಜಿತತೆಯೂ ಜಯಿಸಿದ್ದುವು ಅಷ್ಟೆ.

ಈ ಮಂದಿರದಲ್ಲಿ ತಿರುವನಂತಪುರದಲ್ಲಿ ಹಾಡುವುದು ಗೊತ್ತಿದ್ದ ಯುವಕರು, ಯುವತಿಯರು—ಎಲ್ಲರೂ ಸೇರುತ್ತಿದ್ದರು. ನಾಟ್ಯ ಗೊತ್ತಿದ್ದವರೂ ಬರುತ್ತಿದ್ದರು. ಗಾನಮಂಟಪ, ನೃತ್ಯಮಂಟಪಗಳಿದ್ದುವು. ಆಗ ತಮ್ಮ ಮಕ್ಕಳ ಹಾಡನ್ನು ಕೇಳಲೂ ನೃತ್ಯವನ್ನು ನೋಡಲೂ ತಂದೆತಾಯಿಗಳು ಹೋಗದಿರುತ್ತಾರೆಯೇ? ಒಮ್ಮೆ ಅಲ್ಲಿಗೆ ಹೋದವರು ಮತ್ತೆ ಹೋಗುತ್ತಲೇ ಇರುತ್ತಾರೆ. ದೇವಿಯ ಮುಂದೆ ಹಾಡಬೇಕಾಗಿತ್ತು. ನರ್ತನ ಮಾಡಬೇಕಿತ್ತು. ಕೆಲವು ಸಲ ದೇವಿಯೂ ಗಂಟೆಗಟ್ಟಲೆ ಸಮಾಧಿಯಲ್ಲಿ ಕುಳಿತಿರುತ್ತಿದ್ದರು. ಮತ್ತೆ ಕೆಲವು ಸಲ ನರ್ತಿಸುತ್ತಿದ್ದರು. ಆ ಹೊತ್ತಿನ ಚೈತನ್ಯವೇ ಬೇರೆ ಎಂದು ಎಲ್ಲರೂ ಹೇಳುತ್ತಿದ್ದದ್ದು.

ವಿಜಯಮ್ಮ ಸದನವನ್ನು ತೆರೆದ ದಿನದಿಂದಲೂ ಅಲ್ಲಿಗೆ ಹೋಗಿಬರುತ್ತಿದ್ದಳು.

ಅವಳೂ ಆಗಾಗ ಅಲ್ಲಿ ಹಾಡುತ್ತಿದ್ದಳು. ಸದನಕ್ಕೆ ತಾಯಿಯನ್ನೂ ಕರೆದುಕೊಂಡು ಹೋಗಬೇಕೆಂದು ಎಷ್ಟೋ ಸಲ ಪ್ರಯತ್ನಿಸಿದ್ದಳು. ಕಾತ್ಯಾಯಿನಿಯಮ್ಮನಿಂದ ಬಂದದ್ದು ಒಂದೇ ಉತ್ತರ:

"ನನಗೆ ಸದನವೂ ಬೇಡ, ಆಶ್ರಮವೂ ಬೇಡ."

ತಾಯಿಗೆ ಆಶ್ರಮದ ಬಗ್ಗೆಯೂ ಅಂತಹ ಸ್ಥಾಪನೆಗಳ ಬಗ್ಗೆಯೂ ಇದ್ದ 'ಅಲರ್ಜಿ'ಯ ಕಾರಣ ವಿಜಯಮ್ಮನಿಗೆ ಹೇಗೆ ತಿಳಿಯಬೇಕು? ತಿಳಿದರೂ ತಿಳಿಯ ಬಹುದು. ಭಾಗೀರಥಿಯಮ್ಮ ಅಲ್ಲಿ ಎಷ್ಟೋ ದಿನಗಳು ವಾಸ ಮಾಡಿ ನೋಡಿರ ಲಿಲ್ಲವೆ? ವಿಜಯಮ್ಮನ ಹಾಡುಗಾರಿಕೆಯಿರುತ್ತದೆ ಎಂದು ತಿಳಿದಿದ್ದರೂ ಕಾತ್ಯಾಯಿನಿ ಯಮ್ಮ ಹೋಗಿರಲಿಲ್ಲ. ಸದಾ ಅಲ್ಲಿಗೆ ಹೋಗುವುದಕ್ಕೆ ಮಗಳಿಗೆ ಅನುಮತಿ ನೀಡಿರಲೂ ಇಲ್ಲ. ಯಾವ ಆಶ್ರಮವೇ ಆಗಿರಲಿ, ಸದನವೇ ಆಗಿರಲಿ, ಅದು ದಾರಿತಪ್ಪಿ ದವರದು ಎನ್ನುವುದು ಕಾತ್ಯಾಯಿನಿಯ ಅಭಿಪ್ರಾಯ. ಅವಳು ಹೇಳುತ್ತಿದ್ದುದುಂಟು:

"ದಾರಿತಪ್ಪಿದವರು ಈ ಆಶ್ರಮದಲ್ಲೂ ಸದನದಲ್ಲೂ ಇರೋದು. ಅಲ್ಲಿಗೆ ಹೋಗುವವರೂ ದಾರಿ ತಪ್ತಾರೆ. ದಾರಿ ತಪ್ಪಿ ಹಾಳಾದ ಮೇಲೆ ಕಾವಿ ವಸ್ತ್ರ ಉಟ್ಕೊ ಕೊಳ್ತಾರೆ. ಅದು ಆಶ್ರಮ."

ಕಾತ್ಯಾಯಿನಿಯಮ್ಮನನ್ನು ದೂರಿ ಪ್ರಯೋಜನವಿಲ್ಲ. ಅವಳ ಜೀವನದಲ್ಲೇ ಅನ್ನದಲ್ಲಿ ಕಲ್ಲು ಸಿಕ್ಕಿದ್ದದ್ದು ಆಶ್ರಮಕ್ಕೆ ಸಂಬಂದಪಟ್ಟ ವಿಚಾರದಲ್ಲೇ ಅಲ್ಲವೆ? ಸನ್ಯಾಸಿನಿ ಎಷ್ಟು ಪರಿಶುದ್ಧಳಾಗಿದ್ದರೂ, ಒಳ್ಳೆಯವಳಾಗಿದ್ದರೂ ಕಾತ್ಯಾಯಿನಿಯಮ್ಮ ನಿಗೆ ಒಳ್ಳೆಯ ಅಭಿಪ್ರಾಯವಿಲ್ಲ.

ಎಷ್ಟೆಷ್ಟೋ ವಿಶೇಷ ರೀತಿಯಲ್ಲಿ ವಿಜಯಮ್ಮ ತಲೆಗೂದಲನ್ನು ಬಾಚಿ ಗಂಟು ಹಾಕಿಕೊಳ್ಳುತ್ತಿದ್ದಳು. ಅದನ್ನು ಕಂಡಾಗಲೆಲ್ಲ ಕಾತ್ಯಾಯಿನಿಯಮ್ಮನಿಗೆ ಸಿಟ್ಟು ಬರು ತ್ತಿತ್ತು. ಅವಳು ಕೇಳುತ್ತಿದ್ದಳು:

"ಇದೇನೇ ಇದು? ತಲೆಗೂದಲನ್ನು ಹೀಗೆ ಮೇಲಕ್ಕೆ ಎತ್ತಿ ಹಾಗೆ ಗಂಟುಹಾಕಿ ಕೊಳ್ತೀ?"

ವಿಜಯಮ್ಮ ನಗುತ್ತಿದ್ದಳು ಅಷ್ಟೆ. ನಿಜವಾಗಿಯೂ ಕೇಶಾಲಂಕಾರದ ಹೊಸ ಫ್ಯಾಷನ್‌ಗಳೆಲ್ಲವೂ ಉಮಾದೇವಿ ಸದನದಲ್ಲಿ; ದೇವಿಯಿಂದ ಪ್ರಾರಂಭವಾಗುತ್ತಿದ್ದದ್ದು. ಅವರಿಗೆ ತುಂಬ ತಲೆಗೂದಲಿತ್ತು. ನಿನ್ನೆ ತಲೆಗಂಟು ಹಾಕಿದ ರೀತಿಯಲ್ಲಿ ಈ ದಿನ ಇರುವುದಿಲ್ಲ. ಅದನ್ನು ಅಲ್ಲಿಗೆ ಬರುತ್ತಿದ್ದ ಭಕ್ತೆಯರೂ ಅನುಕರಿಸುತ್ತಿದ್ದರು. ಕಾತ್ಯಾ ಯಿನಿಯಮ್ಮನಿಗೆ ಈ ವಿಷಯ ತಿಳಿದಿದ್ದರೆ ಎಷ್ಟೊಂದು ದೂಷಿಸುತ್ತಿದ್ದರೋ ಏನೋ !

ಬಟ್ಟೆಗಳನ್ನು ಆಯ್ಕೆ ಮಾಡುವುದರಲ್ಲಿ, ವೇಷ ಸಂಪ್ರದಾಯದಲ್ಲಿ—ಎಲ್ಲದ ರಲ್ಲಿಯೂ ವಿಜಯಮ್ಮನಲ್ಲಿ ಬೇಗ ಬೇಗ ಬದಲಾಯಿಸಿದ ಅಭಿರುಚಿಯುಂಟಾಯಿತು. ಯೌವನವಲ್ಲವೇ? ತಿರುವನಂತಪುರ ನಗರದಲ್ಲಲ್ಲವೇ ಜೀವಿಸುತ್ತಿರುವುದು? ಅದ

ರಿಂದಾಗಿರಬೇಕು ಎಂದು ಕಾತ್ಯಾಯಿನಿಯಮ್ಮ ಭಾವಿಸಿದ್ದದ್ದು. ಆದರೆ ಅದು ಕೂಡ ಅವಳಿಗೆ ಇಷ್ಟವಾಗಿರಲಿಲ್ಲ. ಅವಳು ಎಷ್ಟೋ ಸಲ ಕೇಳುತ್ತಿದ್ದಳು:

"ಇದೇನೇ ಇದು?. ಹೆಣ್ಣುಮಕ್ಕಳು ಯಾಕೆ ಈ ರೀತಿ ಬ್ಲೌಸ್ ಹೊಲಿಸಿ ತೊಟ್ಟು ಕೊಳ್ಳೋದು? ಸೀರೆ ಉಟ್ಟುಕೊಳ್ಳೋದು? ಇದರ ಬದಲು ಏನೂ ಉಟ್ಟುಕೊಳ್ಳದೇ ಹಾಗೇ ಓಡಾಡೇ."

ವಿಜಯಮ್ಮನಿಗೆ ಆ ಅಭಿರುಚಿಯುಂಟಾದದ್ದು ಸದನದಿಂದ. ಎಷ್ಟೋ ಸಲ ಈ ವಿಷಯಗಳೆಲ್ಲ ಒಂದು ಪ್ರಶ್ನೆಯಾಗಿ ಕೇಶವ ಪಿಳ್ಳೆಯ ಮುಂದೆ ಹೋಗುವುದುಂಟು. ಕೇಶವ ಪಿಳ್ಳೆ ಹೆಂಡತಿ ಹೇಳುವುದನ್ನೆಲ್ಲ ಕೇಳಿಸಿಕೊಂಡು ಆ ಮೇಲೆ ಹೇಳುತ್ತಿದ್ದರು:

"ಕಾಲ ಬದಲಾಯಿಸ್ತಾ ಇಲ್ವಾ ಕಾತ್ಯಾಯಿನೀ? ಯುವಕರ ನಡೆನುಡಿ, ವೇಷಭೂಷಣ ಗಳಲ್ಲೆಲ್ಲ ಬದಲಾವಣೆಯಾಗ್ತಿದೆ. ಅದಕ್ಕೆ ನೀನು ಹೀಗೆ ಗಲಾಟೆ ಮಾಡಿದರೆ ಹೇಗೆ?"

"ಅದಕ್ಕೆ ಹೀಗೆಲ್ಲಾ ಇರಬೇಕಾ?"

ಕೇಶವ ಪಿಳ್ಳೆ ನೇರವಾಗಿ ಒಂದು ಪ್ರಶ್ನೆ ಕೇಳಿದರು:

"ನೀನು ಚಿಕ್ಕವಳಾಗಿದ್ದಾಗ. ಅಲ್ಲಬೇ ಇದ್ರೆ ಈಗ ಇರೋ ಹಾಗೆ ಮಗಳೂ ಇದ್ರೆ ಒಬ್ಬ ಹುಡುಗ ಅವಳ ಕಡೆಗೆ ನೋಡ್ತಾನಾ? ಹೆಣ್ಣುಮಕ್ಕಳು ಹೀಗೆಲ್ಲ ನಡೆದಾಡಿದರ ಹುಡುಗರಿಗೆ ಕುತೂಹಲವುಂಟಾಗ್ತದೆ."

ಕಾತ್ಯಾಯಿನಿಯಮ್ಮ ಯಾವ ಉತ್ತರವನ್ನೂ ಹೇಳದೆ ಹೊರಟುಹೋದಳು. ನಾಲ್ಕೈದು ಹೆಜ್ಜೆಯಿಟ್ಟು ಕಾತ್ಯಾಯಿನಿಯಮ್ಮ ಹಿಂದಿರುಗಿ ನೋಡುತ್ತ ಹೇಳಿದಳು:

"ಇಷ್ಟಾದರೂ ಒಬ್ಬನಿಗೂ ಕುತೂಹಲ ಉಂಟಾಗಲಿಲ್ಲವಲ್ಲ?"

ಅದು ವಿಜಯಮ್ಮನ ಮದುವೆಯನ್ನು ಉದ್ದೇಶಿಸಿ ಕಾತ್ಯಾಯಿನಿಯಮ್ಮ ಹೇಳಿ ದುದು.

ಕೇಶವ ಪಿಳ್ಳೆ ಆ ವಿಷಯವನ್ನು ಕುರಿತು ಆಲಸಿಯಾಗಿದ್ದರು ಎಂದು ಹೇಳುವಂತಿಲ್ಲ. ಆದರೆ ಇರಬೇಕಾದ ಆತುರ ಅವರಲ್ಲಿರಲಿಲ್ಲ ಎನ್ನುವುದು ನಿಜ. ಹೆಂಡತಿ ಆ ಪ್ರಶ್ನೆ ಯನ್ನು ತನ್ನ ಮುಂದೆ ತಂದಾಗ ಆ ವಿಷಯವೇ ತಲೆಯಲ್ಲಿ ತುಂಬಿಕೊಂಡಿರುತ್ತಿತ್ತು. ಆದರೆ ಬೇರೆ ಕೆಲಸಗಳ ಒತ್ತಡದಲ್ಲಿ ಅದು ಮರೆತುಹೋಗುತ್ತಿತ್ತು. ಕಾತ್ಯಾಯಿನಿಯಮ್ಮ ಯಾವಾಗಲೂ ಆ ವಿಷಯವಾಗಿ ಹೇಳುತ್ತಲೇ ಇದ್ದಳು. ಅಂತು ಅದು ಹಾಗೆಯೇ ಮುಂದುವರಿಯುತ್ತಿತ್ತು.

ಇನ್ನು ಮೇಲೆ ಆ ವಿಷಯವನ್ನು ಗಂಭೀರವಾಗಿ ಕೈಗೆತ್ತಿಕೊಳ್ಳಲೇಬೇಕಾಗಿತ್ತು. ಇನ್ನೂ ಸ್ವಲ್ಪ ಮೊದಲೇ ಆಲೋಚನೆ ಮಾಡಬೇಕಾಗಿತ್ತು. ಕೇಶವ ಪಿಳ್ಳೆ ಹೆಂಡತಿಯನ್ನು ಕರೆದರು. ಕಾತ್ಯಾಯಿನಿಯಮ್ಮ ಬಂದಳು.

ಅವರು ಕೇಳಿದರು:

"ಅವನು ಹೇಗಿರಬೇಕು?"

ಆ ವಿಚಾರವನ್ನು ಎಷ್ಟೋ ಸಲ ಮಾತಾಡಿ ಮುಗಿಸಿದ್ದಾಗಿತ್ತು. ಮಗಳ ಗಂಡ ಹೇಗಿರಬೇಕು ಎನ್ನುವ ವಿಚಾರದಲ್ಲಿ ಅವರದು ಒಂದು ಕಲ್ಪನೆಯಿತ್ತು. ಆ ಕಲ್ಪನೆಯನ್ನು ವ್ಯಕ್ತಪಡಿಸಿಯೂ ಆಗಿತ್ತು. ಅವನ ಆಕೃತಿ, ಪ್ರಕೃತಿ ಮುಂತಾದುವುಗಳನ್ನು ಕುರಿತ ವಿವರಣೆಗಳನ್ನೆಲ್ಲ ಕಾತ್ಯಾಯಿನಿಯಮ್ಮ ಕಲ್ಪಿಸಿಕೊಂಡಿದ್ದಳು. ಅವಳು ಹೇಳಿದಳು:

"ಅವನು ಒಳ್ಳೆಯವನಾಗಿರಬೇಕು. ಎಷ್ಟೇ ಕಷ್ಟ ಬಂದರೂ ಪ್ರೀತಿಸೋನಾಗ ಬೇಕು. ಕಪಟ, ಕಳ್ಳತನ ಇರಬಾರದು. ಅತಿ ಸಾಮರ್ಥ್ಯವೂ ಬೇಡ. ಹೊರಲಾರದ ಭಾರ ಹೊತ್ತುಕೊಂಡು ನರಳೋನೂ ಬೇಡ. ಉದ್ಯೋಗ ಇರೋನಾಗಬಾರದು, ಆದರಲ್ಲೂ ತಿರುವನಂತಪುರದಲ್ಲಿ. ಅವಳಿಗೆ ಜೀವನ ಸಾಗಿಸೋದಕ್ಕೆ ದೇವರು ಕೊಟ್ಟದ್ದು ಸಾಕಾದಷ್ಟಿದೆ. ಇದರ ಜೊತೆಗೆ ಒಳ್ಳೇ ನಡತೆಯವನಾಗಿರಬೇಕು."

ಸ್ವಲ್ಪ ಹೊತ್ತು ಬಿಟ್ಟು ಪುನಃ ಕಾತ್ಯಾಯಿನಿಯಮ್ಮ ಹೇಳಿದಳು:

"ಆದರೆ ಇವಳು ತಿರುವನಂತಪುರದ ಅಪ್ಪಟ ನಾಗರಿಕಳ ಹಾಗೆ ಕಂಕುಳು ಕಾಣೋ ರವಕೆ ತೊಟ್ಟುಕೊಂಡು, ಮೊಲೆ ಚೂಪಾಗಿ ಕಾಣೋ ಹಾಗೆ ಅದೆಂಥಾದ್ದೋ ಒಂದು ಕಟ್ಟಿಕೊಂಡಿದ್ದ ವೇಷ, ನೆನ್ನೆ ದಿನ ಹಾಕಿದ್ದದ್ದು. ನಾನು ಹೀಗೆಲ್ಲ ಹೇಳೋದು ಅವಳಿಗೆ ಹಿಡಿಸುತ್ತೋ ಹಿಡಿಸೋದಿಲ್ಲವೋ ಯಾರಿಗೆ ಗೊತ್ತು?"

ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ಆ ಸಂಕಲ್ಪದ ಯುವಕ ಹೇಗಿರಬೇಕು ಎನ್ನುವುದನ್ನು ಊಹಿಸಬಹುದು. ಎಷ್ಟೋ ದಿನಗಳಿಂದ ಕೇಳುತ್ತಿರುವುದು ಮಾತ್ರವಲ್ಲ, ಒಬ್ಬಳು ಹೆಂಡತಿ ಎನ್ನುವ ದೃಷ್ಟಿಯಲ್ಲಿ, ಒಬ್ಬಳು ಸ್ತ್ರೀ ಎನ್ನುವ ದೃಷ್ಟಿಯಲ್ಲಿ ಅವಳ ಕಹಿಯಾದ ಅನುಭವಗಳ ದೃಷ್ಟಿಯಲ್ಲಿ—ಕೇಶವ ಪಿಳ್ಳೆಗೆ ಆ ಅರಿವಿದೆ. ಕುಟ್ಟನಾಡಿನಲ್ಲಿ ಹುಟ್ಟಿ ಬೆಳೆದ ಆ ಶುದ್ಧ ಚಾರಿತ್ರ್ಯವುಳ್ಳ ಹೆಣ್ಣಿಗೆ ಅವಳದೇ ಆದ, ಪರಂಪರೆಯಿಂದ ಲಭಿಸಿದ ಬದುಕಿನ ತತ್ವಶಾಸ್ತ್ರವಿದೆ. ಜೀವನ ಮೌಲ್ಯಗಳಿವೆ. ಸದಾಚಾರ ನಿಯಮಗಳೂ ನೀತಿಸಂಹಿತೆಯೂ ಇವೆ. ಸರಿ ತಪ್ಪುಗಳನ್ನು ಸರಿಯಾಗಿ ತಿಳಿಯಬಲ್ಲ ನೈಸರ್ಗಿಕ ವಾಸನೆ ಯಿದೆ. ಗೃಹಿಣಿಯಾದ ನಂತರ ಅವಳಿಗುಂಟಾದ ಅನುಭವಗಳು, ತನಗೆ ಅವಳ ನಿಲುಮೆ ಯಿಂದಲೇ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿದೆ. ಕಾತ್ಯಾಯಿನಿಯಮ್ಮ ಯಾವಾಗಲೂ ಸರಿಯಾದ ಮಾರ್ಗದಲ್ಲೇ ಸಂಚರಿಸಿದವಳಲ್ಲವೇ?

ಒಂದು ನಿಮಿಷದಲ್ಲಿ ಕೇಶವ ಪಿಳ್ಳೆ ಕಾತ್ಯಾಯಿನಿಯ ಜೀವನದ ಮೌಲ್ಯವನ್ನು ಕುರಿತು ಆಲೋಚಿಸಿದರು. ಆ ಹೆಣ್ಣಿನ ಜೀವನ ಸಂತೋಷವುಳ್ಳದ್ದಾಗಿತ್ತೆ? ಹೋಗಲಿ. ಆ ಜೀವನ ಸಂತುಷ್ಟವಾಗಿಯಾದರೂ ಇತ್ತೆ? ಮೌಲಿಕವಾಗಿ ಒಂದಂಶವೂ ಇರಲಿಲ್ಲ ಎಂದೇ ಹೇಳಬೇಕು. ಅವಳಿಗೆ ಆಸ್ತಿಪಾಸ್ತಿ ಇದೆ, ಹಣವಿದೆ. ಪ್ರತಾಪವಿದೆ. ಕಾತ್ಯಾಯಿನಿಯಮ್ಮನ ಜೊತೆಗಾತಿಯರಿರಲಿ, ಯಾವ ಸ್ತ್ರೀಯೂ ಅವಳನ್ನು ಕಂಡು ಅಸೂಯೆಪಟ್ಟದ್ದಿಲ್ಲ. ರಾಜ್ಯದ ಬಹು ದೊಡ್ಡ ಉದ್ಯೋಗಸ್ಥನ ಹೆಂಡತಿ. ಆದರೆ ಜೀವನ ನೆಮ್ಮದಿಯಿಂದಿದೆಯೇ? ನಿಟ್ಟುಸಿರು, ಸಂಕಟ, ವ್ಯಾಕುಲಗಳಿಂದ ಹೊರ

ಗಾದದ್ದೇ? ಹೌದು ಎಂದು ಹೇಳಲು ಕೇಶವ ಪಿಳ್ಳೆಗೆ ಸಾಧ್ಯವಿಲ್ಲ. ಆ ರೀತಿಯಲ್ಲಿರಲಿಲ್ಲ. ಅವೆಲ್ಲಕ್ಕೂ ಕಾರಣ ತಾನಲ್ಲವೇ ಎಂದು ಕೇಶವ ಪಿಳ್ಳೆ ಆಲೋಚಿಸಿದರು.

ಸರಿ. ನಾನು ಕೇವಲ ಕುಟ್ಟನಾಡಿನ ವ್ಯವಸಾಯಗಾರನಾಗಿದ್ದಲ್ಲಿ ಕಾತ್ಯಾಯಿನಿ ಕೀಲುಗೊಂಬೆಯ ಹಾಗೆ ಉತ್ಸಾಹಿಯೂ ಸಂತುಷ್ಟಿಗೊಂಡವಳೂ ಆಗಿರಬಹುದಾಗಿತ್ತು. ಒಂದು ವೇಳೆ ದೈನಂದಿನ ಜೀವನದಲ್ಲಿ ಎಷ್ಟೋ ಕಷ್ಟಗಳು ಉಂಟಾಗುತ್ತಲೂ ಇದ್ದುವು. ಅಂತು ಸುಖವಾದ ಜೀವನವಾಗಿರುತ್ತಿತ್ತು. ಕಾತ್ಯಾಯಿನಿ ಅಂತಹ ಒಬ್ಬ ಕುಟ್ಟನಾಡಿನ ವ್ಯವಸಾಯಗಾರನ ಪತ್ನಿಯ ಪದವಿಯ ಬಗ್ಗೆ ಸ್ವಪ್ನ ಕಾಣುತ್ತಿರಬಹುದೇ ಎನ್ನುವ ರೀತಿಯಲ್ಲಿ ಕೇಶವ ಪಿಳ್ಳೆ ಚಿಂತಿಸಿದರು. ಒಬ್ಬ ಸರ್ಕಾರದ ಅಧಿಕಾರಿ ಬೇಡದ್ದನ್ನು ಆಲೋಚಿಸುತ್ತ ಕುಳಿತಿರುವುದಕ್ಕೆ ಎಳೆದು ತಂದಿತ್ತು. ಇಲ್ಲ. ಬೇರೊಬ್ಬನ ಹೆಂಡತಿ ಯಾಗಿರಬೇಕಾಗಿತ್ತು ಎಂದು ಅವಳು ಆಲೋಚಿಸುವುದಿಲ್ಲ. ಕಲ್ಪಿಸಿಕೊಳ್ಳುವುದಿಲ್ಲ. ಅವಳ ಕೊರಳಿಗೆ ತಾಳಿ ಕಟ್ಟಿದ ಮನುಷ್ಯ ಚೀಫ್ ಸೆಕ್ರೆಟರಿ ವರೆಗೆ ಮೇಲೆ ಹೋಗಬೇಕಾಗಿರ ಲಿಲ್ಲ ಎಂದು ಆಲೋಚಿಸಬಹುದು. ಆ ಗಂಡ ತಿರುವನಂತಪುರದಲ್ಲಿ ವಾಸಮಾಡಬಾರ ದಾಗಿತ್ತು. ಅವನೊಬ್ಬ ಕೇವಲ ಕುಟ್ಟನಾಡಿನವನಾಗಿದ್ದರೆ ಸಾಕಾಗಿತ್ತು. ಹಾಗಲ್ಲ ಆಗದೆ ಇರುವುದರಿಂದ ಎಷ್ಟೋ ಕಷ್ಟವನ್ನು ಅನುಭವಿಸಬೇಕಾಗಿ ಬಂದಿತು. ಆ ರೀತಿಯಲ್ಲಿ ಆ ಜೀವನ ದುಃಖದಿಂದ ಕೂಡಿತ್ತು. ಕೆಟ್ಟುಹೋದ ತಿಳಿಸಿದುದು ಎಂದು ಕಾತ್ಯಾಯಿನಿ ಯಮ್ಮನೇ ಹೇಳಿದ ಒಂದು ಮಾತನ್ನು ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು.

"ಭಾಗ್ಯವತಿ. ಆದರೆ ಮನಸ್ಸಮಾಧಾನ ಇರುವುದಿಲ್ಲ."

ಆ ಮಾತು ಸತ್ಯವಲ್ಲವೇ? ಈ ಜೀವನದಲ್ಲಿ ದೊರೆತ ಅನುಕೂಲತೆಗಳೆಲ್ಲವೂ ಕಾತ್ಯಾಯಿನಿಯಮ್ಮನ ಭಾಗ್ಯದಿಂದ. ಆದರೆ ಅವಳಿಗೆ ಮನೋಸಮೃದ್ಧಿ ಉಂಟಾಗಿಲ್ಲ. ಉಂಟಾಗಿದೆಯೋ ಎಂದು ಅವರು ಆಲೋಚಿಸಿದರು. ಜೀವನದಲ್ಲಿ ಯಾವಾಗಲೂ ಒಂದು ಕಪ್ಪು ನೆರಳು ವ್ಯಾಪಿಸಿಕೊಂಡೇ ಇತ್ತು.

ಕಾತ್ಯಾಯಿನಿಯಮ್ಮನ ಪಾಲಿನಲ್ಲಿ ಸ್ವಲ್ಪವೂ ತಪ್ಪಿಲ್ಲವೇ ಎಂದು ಕೇಶವ ಪಿಳ್ಳೆ ಆಲೋಚಿಸಿದರು. ಉಂಟು. ತನ್ನನ್ನು ಸಂಪೂರ್ಣವಾಗಿ ನಂಬಿಲ್ಲ; ಅರ್ಥಮಾಡಿ ಕೊಂಡಿಲ್ಲ. ಹೆಂಡತಿಯನ್ನು ಪ್ರೀತಿಸಿದ್ದೆ ಎಂದು ಮಾತ್ರ ಕೇಶವ ಪಿಳ್ಳೆಗೆ ತಮ್ಮ ಬಗ್ಗೆ ಇದ್ದ ಅಭಿಪ್ರಾಯ. ಹೇಗೆಲ್ಲ ತಿರುಗಾಡಿದರೂ ಎಲ್ಲೆಲ್ಲ ಹೋದರೂ ಹಿಂದಿರುಗಿ ಹೆಂಡತಿಯ ಹತ್ತಿರಕ್ಕೇ ಬರುತ್ತಿದ್ದದ್ದು. ಪೀರುಮೇಡಿನಲ್ಲಿ ತಂಗಮ್ಮನನ್ನು ನಿಷ್ಕರುಣೆಯಿಂದ ದೂರ ತಳ್ಳಿದ್ದು ಏತಕ್ಕಾಗಿ ಮತ್ತಾವುದರಿಂದ? ಹೆಂಡತಿಯ ಮೇಲಿದ್ದ ಅಪಾರ ಪ್ರೇಮದ ಕುರುಹಲ್ಲವೇ ಅದು? ಅದು ಅವಳಿಗೆ ಅರ್ಥವಾಗಲು ಸಾಧ್ಯವಿಲ್ಲ. ಹೋಗಬಾರದು ಎಂದೇ ಇರಲಿ. ಮತ್ತೆಲ್ಲಿಗೂ ಹೋಗಿ ಬರಬಾರದು ಎನ್ನುವುದೇ ಇರಲಿ. ಹೋಗುವುದು, ಬರುವುದೆಲ್ಲ ವನ್ನೂ ಒಬ್ಬ ಹೆಂಡತಿ ಪ್ರೀತಿಯಿಲ್ಲದಿರುವ ಲಕ್ಷಣ ಎಂದೇ ತಿಳಿದು ಮಾತನಾಡುತ್ತಾಳೆ. ಮತ್ತೊಬ್ಬಳು ಸ್ತ್ರೀಯ ಹತ್ತಿರ ಮಾತನಾಡುವುದು ಕೂಡ ಹೆಂಡತಿಗೆ ಭಯ ತರುತ್ತದೆ.

ಕೇಶವ ಪಿಳ್ಳೆಯ ಚಿಂತೆ ಮತ್ತಾವುದರ ಕಡೆಗೋ ಹೋಯಿತು. ಹೆಂಡತಿಯ ಜೀವನವೇನೋ ಮನಸ್ಸಮಾಧಾನವಿಲ್ಲದ್ದಾಯಿತು. ತಂದೆತಾಯಿಗಳದೋ? ಅವರಿಗೂ ಮಗನ ಕಾರಣದಿಂದಾಗಿ ದುರ್ಮರಣ ಸಂಭವಿಸಿತು. ಅವರೂ ಸಂಕಟಪಟ್ಟರು. ಇದೆಲ್ಲ ನಾನು ಮಾಡಿದ ತಪ್ಪಿನಿಂದಾಗಿಯೇ?

ಮೂಲಭೂತವಾಗಿ ತಮ್ಮದೇನು ದೋಷವಿದೆ ಎಂದು ಕೇಶವ ಪಿಳ್ಳೆ ಚಿಂತಿಸುತ್ತ ಕುಳಿತರು. ಹೆಂಡತಿಗೂ, ತಂದೆಗೂ, ತಾಯಿಗೂ ಮನಸ್ಸಮಾಧಾನ ಉಂಟಾಗದಂತಹ ದನ್ನು ತಾನೇನು ಮಾಡಿದೆ? ಯಾವುದು ಆ ತಪ್ಪು? ತಮ್ಮ ಸ್ವಭಾವದಲ್ಲಾದ ವೈಪರೀತ್ಯವೇನು? ಕಳೆದ ಜೀವನವನ್ನೆಲ್ಲ ಸಂಪೂರ್ಣವಾಗಿ ಅವರು ಜ್ಞಾಪಿಸಿಕೊಂಡರು. ಪ್ರಧಾನವಾದ ಘಟ್ಟಗಳನ್ನು ಕುರಿತು ವಿಮರ್ಶಿಸಿದರು. ಗಣನೀಯವಾಗಿ ಕೆಟ್ಟದ್ದೆಂದು ಹೇಳಲಾದ ಯಾವ ನಡತೆ ತನ್ನ ಸ್ವಭಾವದಲ್ಲಿರುವುದು? ಯಾವ ನಿಷ್ಪಕ್ಷಪಾತ ನ್ಯಾಯಾಧೀಶನ ಮುಂದೂ ತೆರೆದು ಹೇಳವಂಥಾದ್ದು. ಈ ರೀತಿಯಲ್ಲೆಲ್ಲ ಆಗಿ ತೀರ ಬೇಕೆಂದು ಭಾವಿಸಿ ಜೀವನ ನಡೆಸಿದ್ದಲ್ಲ. ಅಸಾಮಾನ್ಯವಾದ ಬುದ್ಧಿವಿಶೇಷವನ್ನೂ ಅವರು ಸ್ಥಾಪಿಸುವುದಕ್ಕೆ ಹೋಗುವುದಿಲ್ಲ. ಪಯಣದಲ್ಲಿ ಆಡಳಿತ ಎನ್ನುವ ಒಂದು ದೊಡ್ಡ ಯಂತ್ರವಿಶೇಷದ ಭ್ರಮಣೆಯಲ್ಲಿ ನುಚ್ಚುನುರಿಯಾಗದೆ, ವಂಚನೆಗೊಳಗಾಗದೆ, ನೋಡಿದ್ದಾಯಿತು. ಅದೆಲ್ಲಕ್ಕೂ ಸಾಮಾನ್ಯ ಬುದ್ಧಿಯಲ್ಲದೆ ಬೇರೆ ಏನಿದೆ, ಹಕ್ಕು ಸ್ಥಾಪಿಸಲು? ಮತ್ತಾವುದೂ ಅವರಿಗೆ ಎದ್ದು ಕಾಣುವುದಿಲ್ಲ. 'ಭಯಂಕರ ಮನುಷ್ಯ' ಎಂದು ಉಳಿದವರು ಕರೆಯುವ ಯಾವ ಭಯಂಕರತೆ ತನ್ನಲ್ಲಿದೆ?

ಕೇಶವ ಪಿಳ್ಳೆ ಪುನಃ ಹೆಂಡತಿಯನ್ನು ಕರೆದರು. ಆಕೆ ಹತ್ತಿರ ಬಂದಳು. ವಿಜಯಮ್ಮನ ಮದುವೆಯ ವಿಚಾರವನ್ನು ಕುರಿತು ಹೆಂಡತಿಯ ಹತ್ತಿರ ಇನ್ನೂ ಕೆಲವು ವಿಷಯ ಮಾತನಾಡುವುದಿತ್ತು. ಹತ್ತಿರ ಇದ್ದ ಕುರ್ಚಿಯಲ್ಲಿ ಕುಳಿತುಕೊಳ್ಳುವಂತೆ ಹೇಳಿದರು. ಗಂಡ ಹೇಳುವುದನ್ನು ಕೇಳುವುದಕ್ಕಾಗಿ ಆಕೆ ಕುಳಿತಳು.

ಕೇಶವ ಪಿಳ್ಳೆ ಪ್ರಾರಂಭಿಸಿದರು:

"ಮಗಳಿಗೆ ವರನಾಗಿ ಬರುವವನು ಹೇಗಿರಬೇಕೆಂದು ನಿನಗೆ ಒಂದು ಕಲ್ಪನೆಯಿದೆ ಅಲ್ವಾ?"

"ಹ್ಞೂ" ಎಂದು ಬಳಿಕ ಆಕೆ ಹೇಳಿದಳು:

"ನಾನು ಅದನ್ನ ಯಾವುದೋ ಕಾಲದಿಂದ ಹೇಳ್ತಿದ್ದೀನಿ."

ಕೇಶವ ಪಿಳ್ಳೆ ಕೇಳಿದರು:

"ಆದರೆ ಅದು ಅವಳಿಗೂ ಇಷ್ಟವಾಗಬೇಡವಾ?"

ಆ ವಿಷಯದಲ್ಲೂ ಕಾತ್ಯಾಯಿನಿಗೆ ವಿವಾದವಿಲ್ಲ. ನಂತರ ಅವಳು ಹೇಳಿದಳು:

"ಇಲ್ಲದೆ ಇದ್ರೆ ತಂದೆಯೂ ತಾಯಿಯೂ ಕೂಡಿ ನಿಶ್ಚೈಸಿ ನಡೆಸಿದ ಮದುವೆ

ಯಿಂದ ನನಗೆ ಆದ ಅನುಭವದ ಹಾಗೆ ಆಗ್ತದೆ. ನನ್ನನ್ನು ನೋಡದೆ ಮದುವೆ ಮಾಡಿ ಕೊಂಡದ್ದರಿಂದ........."

ಕೇಶವ ಪಿಳ್ಳೆ ಮಧ್ಯೆ ಬಾಯಿ ಹಾಕಿ ಹೇಳಿದರು:

"ಗಂಭೀರವಾಗಿ ಕುಳಿತುಕೊಂಡಿರುವಾಗಲೂ ನನ್ನ ತಲೆಗೆ ದೊಣ್ಣೆ ತಗೊಂಡು ಹೊಡೀತೀಯಲ್ಲ?"

ಕಾತ್ಯಾಯಿನಿಯಮ್ಮನೂ ಗಂಭೀರವಾಗಿಯೇ ಹೇಳಿದಳು: "ನಾನು ಹಾಗೆ ತಪ್ಪು ಹೊರಿಸಿ ಹೇಳ್ತಿರಲಿಲ್ಲ. ನಾನು ಇರೋ ಸಂಗತಿ ಹೇಳ್ತಾ ಇದ್ದೆ. ಅಲ್ಲದೆ ನಡೆಯಬೇಕಾದ ದ್ದನ್ನೂ ಕುರಿತು."

ಕೇಶವ ಪಿಳ್ಳೆ ಕೇಳಿದರು:

"ನೀನೂ ನನ್ನನ್ನ ನೋಡಿರಲಿಲ್ಲವಲ್ಲ?"

"ನೋಡಿಲ್ಲದೇ ಇದ್ರೂ ನನಗಿಷ್ಟವಾಗಿತ್ತು. ನಾನು ಹಾಗೆಲ್ಲ ಯಾವುದನ್ನೂ ಆಲೋಚಿಸಿರಲಿಲ್ಲ. ಹೇಗಿರಬೇಕು ಅಂತಲೂ ನಾನು ಊಹಿಸಿಕೊಂಡಿರಲಿಲ್ಲ. ಈಗ ಮಗಳು ಹಾಗೇನು? ಅಪ್ಪಟ ಪೇಟೆಯವಳು. ಆದ್ದರಿಂದ ಅವಳ ಇಷ್ಟ ಕೇಳಬೇಕು ಅಂತ ನಾನು ಹೇಳಿದ್ದು. ಅದಕ್ಕೆ ನಾನು ಇದನ್ನೆಲ್ಲ ಹೇಳಿದ್ದು."

ಮಗಳ ಮದುವೆಯನ್ನು ಕುರಿತು ಹೆಂಡತಿಯ ಅಭಿಪ್ರಾಯ ಬದಲಾಯಿಸಿ ದ್ದುದನ್ನು ಕೇಶವ ಪಿಳ್ಳೆ ಅರ್ಥಮಾಡಿಕೊಂಡು ಕೇಳಿದರು:

"ಬಹುಶಃ ಅವಳಿಗೆ ಸುಸಂಸ್ಕೃತವಾದ ಐ. ಎ. ಎಸ್. ಪಾಸು ಮಾಡಿದವನೋ ಎಂಜಿನಿಯರೋ ಅಥವಾ ಡಾಕ್ಟರೋ ಗಂಡನಾಗಬೇಕು ಅಂತ ಆಲೋಚಿಸಿರಬಹುದು. ಉದ್ಯೋಗಕಾರ—ಎಲ್ಲವೂ ಇರುವವನು."

"ಇರಬಹುದು" ಎಂದು, ಮತ್ತೆ ಹೇಳಿದಳು:

"ಹಾಗೆ ಆಗಿರೋದಕ್ಕೆ ಅವಕಾಶ ಇದೆ. ಅವಳ ನಡೆನುಡಿ ಹಾಗೇ ಕಾಣ್ತದೆ. ನಾನು ಮೊದಲು ಹೇಳ್ತಿದ್ದ ಹಾಗೆ ವ್ಯವಸಾಯಗಾರನ್ನ ಅವಳು ಇಷ್ಟಪಡೋದಿಲ್ಲ. ಇನ್ನುಳಿ ದಿರೋದು ಒಂದೇ ಒಂದು ಸಂಗತಿ. ಅವನು ಪ್ರೀತಿಸೋನಾಗಬೇಕು. ಒಳ್ಳೆಯವನಾಗಿರ ಬೇಕು."

ಒಂದು ಕ್ಷಣ ಬಿಟ್ಟು ಕಾತ್ಯಾಯಿನಿ ಮತ್ತೆ ಹೇಳಿದಳು:

"ಆದರೆ ಈ ವಿದ್ಯೆಯೂ, ಉದ್ಯೋಗವೂ, ಪ್ರತಾಪವೂ, ನಾಗರಿಕತೆಯೂ ಇರು ವವನು ಹಾಗಿರೋದಿಲ್ಲ. ಅವನು ಪ್ರೀತಿಸೋದಿಲ್ಲ. ನನ್ನ ಹೆದರಿಕೆ ಅದು."

ಕೇಶವ ಪಿಳ್ಳೆ ಸ್ವಲ್ಪ ತಮಾಷೆಯಾಗಿ ಕೇಳಿದರು:

"ಆದರೆ ಅಪ್ಪಟ ಪೇಟೆಯವಳಾದ ಅವಳೂ ಒಬ್ಬಳು ಒಳ್ಳೆ ಹೆಂಡತಿಯಾಗಿರೋ ದಿಲ್ಲವಲ್ಲ?"

ಆ ಸಂದೇಹವೂ ಕಾತ್ಯಾಯಿನಿಯಮ್ಮನಿಗಿತ್ತು. ಅವಳು ಒಂದು ಕ್ಷಣ ಬಿಟ್ಟು ಮತ್ತೆ ಹೇಳಿದಳು:

"ಅದೂ ನಿಜ. ಅವಳು ನನ್ನ ಹೊಟ್ಟೇಲಿ ಹುಟ್ಟಿದ ಮಗಳೇ ಆದರೂ ಬೆಳೆದದ್ದು ಹಾಗೆ. ನನ್ನನ್ನು ನೋಡಿ ಕಲಿತುಕೊಳ್ಳೋಳಾಗಿದ್ದಿದ್ರೆ ಅವಳು ಈ ವೇಷದಲ್ಲಿ ತಿರುಗಾಡ್ತಿರಲಿಲ್ಲ." ಮತ್ತೆ ಹೇಳಿದಳು:

"ಇಲ್ಲ, ಇಲ್ಲ. ಅವಳು ಹಾಗೇನೂ ಆಗೋದಿಲ್ಲ. ಅವಳು ಒಳ್ಳೆಯವಳಾಗಿದ್ದಾಳೆ."

ಕೇಶವ ಪಿಳ್ಳೆ ಕೇಳಿದರು:

"ಹೇಗಿರೋನಾಗಬೇಕು ಅಂತ ನೀನು ಒಂದು ಸಲ ಅವಳನ್ನ ಕೇಳ್ತೀಯಾ?"

ಕಾತ್ಯಾಯಿನಿಯಮ್ಮ ಹೇಳಿದಳು:

"ಹಾಗಾ ಕೇಳೋದು? ಆಲೋಚನೆ ಬರಲಿ. ಆಗ ಅವಳ ಹತ್ರ ನಿನಗಿಷ್ಟವಾ ಅಂತ ಕೇಳಿದರಾಯ್ತು. ಅಲ್ಲದೆ ನಿನಗೆ ಹೇಗಿರೋನು ಇಷ್ಟ ಅಂತ ಕೇಳಿದ್ರೆ ಅವಳು ಹೇಳ್ತಾಳಾ?"

ತಮ್ಮ ದಡ್ಡತನವನ್ನು ಕಂಡು ತಾವೇ ನಕ್ಕರು ಕೇಶವ ಪಿಳ್ಳೆ.

ಮಗಳಿಗೆ ಒಬ್ಬ ವರನನ್ನು ಹುಡುಕಲು ಕೆಲವರ ಹತ್ತಿರ ಏರ್ಪಾಟು ಮಾಡಿದರು.

* * * *

ಕಾತ್ಯಾಯಿನಿಯಮ್ಮ ಒಂದು ದಿನ ಉಮಾದೇವಿ ಸದನಕ್ಕೆ ಹೋದಳು. ಪಿಜಯಮ್ಮ ಹಿಡಿದು ಎಳೆದು ಹೊತ್ತುಕೊಂಡು ಹೋಗಿದ್ದಳು ಎಂದು ಹೇಳುವುದು ಸರಿಯಾದದ್ದು. ಮಗಳು ಯಾವಾಗಲೂ ಹೇಳುತ್ತಿದ್ದುದರಿಂದ, ಅದು ಹೇಗೆಲ್ಲ ಇದೆ ಎನ್ನುವುದನ್ನು ನೋಡುವ ಕುತೂಹಲ ಕಾತ್ಯಾಯಿನಿಯಮ್ಮನಿಗೂ ಉಂಟಾಗಿತ್ತು.

ಅಂದು ಸಂಜೆ ಕಾತ್ಯಾಯಿನಿಯಮ್ಮ ಹಿಂದಿರುಗಿ ಬಂದದ್ದು ಸಹಿಸುವುದಕ್ಕಾಗದ್ದನ್ನು ಕಂಡ ರೀತಿಯಲ್ಲಿ. ಅವಳಿಗೆ ತಡೆಯಲಾಗದಷ್ಟು ಸಿಟ್ಟು ಬಂದಿತ್ತು. ಹೀಗೆ ಬೇಡದ್ದೆಲ್ಲಾ ಅಲ್ಲಿ ನಡೆಯುತ್ತಿದೆಯಲ್ಲಾ ಎಂದು ಅವಳು ಆಶ್ಚರ್ಯಪಡುತ್ತಿದ್ದಳು.

ಕೇಶವ ಪಿಳ್ಳೆ ಕೇಳಿದರು:

"ಏನು? ಹೇಗಿದೆ ಸದನ?"

ಕಾತ್ಯಾಯಿನಿಯಮ್ಮನಿಗೆ ಸಿಟ್ಟು ಏರಿದಂತೆ ತೋರಿತು.

"ಸದನ! ಸದನ! ಒಳ್ಳೆ ಆಶ್ರಮ ಅದು. ನಾಚಿಕೆಗೇಡು. ನಾಚಿಕೆಗೇಡು. ಅಲ್ಲಿ ಗಂಡನಿಗೆ ಆಗದ ಹೆಂಡತಿಯರು, ಗಂಡು ಹುಡುಕಿಕೊಂಡು ತಿರುಗೋ ಹೆಂಗಸರು, ಬಾಯಿಬಾಯಿ ಬಿಡೋ ಗಂಡಸರು—ಎಲ್ಲ ಸೇರಿಕೊಂಡು ರಾಧಾಕೃಷ್ಣರ ಹೆಸರು ಹೇಳಿಕೊಂಡು ಅಲ್ಲಿ ಕೂಡಿಕೊಂಡು ಅವರ ವ್ಯವಹಾರ, ನೀತಿಕೆಟ್ಟವರು. ಅಲ್ಲಿಗೆ ಹೋದ

ಕೂಡಲೇ ಮಲ್ಲಿಗೆ ಹೂವಿನ ಪರಿಮಳ. ಆ ಮೇಲೆ ಹಾಡೋದು 'ರಾಧೆಯ ಸೀರೆಯ ಸೆಳೆದನು ಶ್ರೀಕೃಷ್ಣ' ಅಂತ ಶುರುಮಾಡಿ ಶಯನಾಗಾರದ ಶೃಂಗಾರಗಳನ್ನೆಲ್ಲ ಹಾಡೋದು. ಅದು ಯಾಕೆ ಅಂತೀರಾ? ಕಾಮ ಅಡಗಿಸಿಕೊಂಡಿರೋ ಹೆಂಗಸರೆಲ್ಲ ಅಲ್ಲಿಗೆ ಹೋಗೋದು."

ಕಾತ್ಯಾಯಿನಿ ಇಷ್ಟೊಂದು ರೇಗಾಡಿದ್ದನ್ನೂ ಇಷ್ಟೊಂದು ರೂಕ್ಷವಾಗಿ ವಿಷಮ ಗೊಂಡದ್ದನ್ನೂ ಕೇಶವ ಪಿಳ್ಳೆ ಕಂಡದ್ದು ಇದೇ ಮೊದಲು. ಅದು ಧನ್ಯಾನಂದಾಶ್ರಮ ಕ್ಕಿಂತ ಬೇರೆ ರೀತಿಯ ಆಶ್ರಮ ತೆರೆದ ಸ್ತ್ರೀಯರನ್ನು ವಿಮರ್ಶಿಸುತ್ತಿದ್ದದ್ದು. ಕೇಶವ ಪಿಳ್ಳೆಗೆ ನಗು ಬಂದಿತು. ಅವರು ಹೇಳಿದರು:

"ಮೆಲ್ಲಗೆ ಹೇಳೆ. ಮಗಳಿಗೆ ಕೇಳಿಸೀತು."

ಕಾತ್ಯಾಯಿನಿಯಮ್ಮ ಹೇಳಿದಳು:

"ಓ! ಅವಳು ಅದನ್ನೆಲ್ಲ ಕೇಳಿದ್ದಾಳೆ. ಬೇಗ ಅವಳಿಗೆ ಒಳ್ಳೆ ಆರೋಗ್ಯವಂತನಿಗೆ ಮದುವೆ ಮಾಡಿಕೊಡಿ."

ಉಸಿರುಕಟ್ಟಿ ಕಾತ್ಯಾಯಿನಿಯಮ್ಮ ಹೇಳಿದಳು:

"ನನಗೆ ಅನ್ನಿಸುತ್ತೆ; ಅಲ್ಲಿಗೆ ಹೋಗ್ತೋ ಹೆಂಗಸರಿಗೆಲ್ಲ ಏನೋ ಕೆಟ್ಟದ್ದಾಗುತ್ತೆ ಅಂತ. ಮದುವೆ ಆಗದೆ ಇರೋರಿಗೂ. ಕೈಲಾಗದ ಗಂಡಂದಿರೋರಿಗೆ ಮಕ್ಕಳಾದರೆ ತಂದೆ ಉಂಟಲ್ಲ !"

ಕೇಶವ ಪಿಳ್ಳೆ ಹೇಳಿದರು:

"ನೀನು ನೆಗೆದಾಡದೆ ಸರಿಯಾಗಿ ಹೇಳು."

"ಆ ಸ್ಥಳ ಅದಕ್ಕೇ ಇರೋದು. ಇಲ್ಲಿ ಕೇಳಿ. ನಾವು ಹೋದಾಗ ಏಣಿ ಮೆಟ್ಟಿಲಿನ ಮೇಲೆ ದೇವಿ ನಿಂತಿದ್ದಳು. ಅವಳೂ ಕಂಕುಳು ಕಾಣೋ ರವಿಕೆ ತೊಟ್ಟಿದ್ದಳು. ತೆಳ್ಳನೆ ಸೀರೆ ಉಟ್ಟಿದ್ದಳು. ಅವಳು ಹೇಗೆ ನಿಂತಿದ್ದಳು ಅಂತೀರಿ? ಒಂದು ಕಾಲು ಸ್ವಲ್ಪ ಎತ್ತಿ ಕೊಂಡು, ಗಂಡಸರನ್ನ ವಶಪಡಿಸಿಕೊಳ್ಳೋ ಸೂಳೆ ಹಾಗೆ ನಗ್ತಾ, ತುಟೀನ ಗಾಳ ಮಾಡಿ ಗಂಡಸರನ್ನು ಸೆಳಕೊಳ್ಳೋ ಹಾಗೆ ಕಣ್ಣು ಮಿಟುಕಿಸ್ತ ನಿಂತಿದ್ದಳು. ಅವಳ ಕಿವಿ ಆಭರಣ ನೋಡಬೇಕು ! ಹೆಂಗಸರೆಲ್ಲ ಅದೇ ತರ ನಿಲ್ಲೋದು. ಅವಳ ಮುಂದೆ ಹಾಡು, ನರ್ತನ ಎಲ್ಲ. ಅವಳು ಸಮಾಧೀಲಿದ್ದಾಳೆ ಅಂತ ಹೇಳೋದು. ನಿಜವಾಗಿಯೂ ಅವಳು ಆ ಹಾಡು ಕೇಳಿ ಸಂತೋಷಪಡ್ತಾ ಇರ್ತಾಳೆ. ಅವಳು ದೇವಿ !"

ವಿಜಯಮ್ಮ ಬಟ್ಟೆ ಬದಲಾಯಿಸಿ ಅಲ್ಲಿಗೆ ಬಂದಳು. ತಂದೆಯ ಹತ್ತಿರ ಅವಳಿಗೂ ಒಂದು ಕಥೆ ಹೇಳುವುದಿತ್ತು.

"ನನ್ನ ಗ್ರಹಚಾರಕ್ಕೆ ಅಮ್ಮನ್ನ ಸದನಕ್ಕೆ ಕರೆದುಕೊಂಡು ಹೋದೆ. ಅಮ್ಮ ಹೀಗೆ ಮುಖ ಸಿಂಡರಿಸಿಕೊಂಡದ್ದನ್ನು ನಾನು ಕಂಡಿರಲಿಲ್ಲ. ಪೂಜೆ ಪ್ರಾರಂಭವಾಯ್ತು. ಆಗ ಅಮ್ಮ ಹೊರಟಳು. ಅದರಲ್ಲೂ ಇವತ್ತಿನ ಪೂಜೆ ತುಂಬ ವಿಶೇಷ."

ಕಾತ್ಯಾಯಿನಿಯಮ್ಮ ತನ್ನ ಸಿಟ್ಟನ್ನು ತಡೆದುಕೊಂಡು ಹೇಳಿದಳು:

"ಅದೊಂದು ಪೂಜೆ! ತನ್ನನ್ನೇ ತಾನು ಪೂಜಿಸಿಕೊಳ್ಳೋದು. ಅದೂ ಒಂದು ಪೂಜೆ!"

ವಿಜಯಮ್ಮನಿಗೆ ಗಟ್ಟಿಯಾಗಿ ನಗು ಬಂದಿತು. ಆ ಮೇಲೆ ಅವಳು ಕೇಳಿದಳು: "ಯಾಕಪ್ಪಾಜೀ ಅಮ್ಮನಿಗೆ ಮಲ್ಲಿಗೆ ಹೂವಿನ ಮೇಲೆ ಇಷ್ಟೊಂದು ಸಿಟ್ಟು?"

ಅದರ ಕಾರಣ ಕೇಶವ ಪಿಳ್ಳೆಗೆ ಗೊತ್ತಿತ್ತು.

ಕಾತ್ಯಾಯಿನಿ ರೇಗಿ ಹೇಳಿದಳು:

"ಆಶ್ರಮದಲ್ಲಿ ಮಲ್ಲಿಗೆ ಹೂವಿಗೇನು ಕೆಲಸವೇ?"

ವಿಜಯಮ್ಮ ಶಮನವಾಗದ ತಾಯಿಯ ಸಿಟ್ಟನ್ನು ಕಂಡು ನಕ್ಕಳು.

ಅನಂತರ ಗಂಡನ ಹತ್ತಿರ ಎಷ್ಟೋ ವಿಷಯಗಳನ್ನು ಹೆಂಡತಿ ಮಾತನಾಡಿದಳು. ಉಮಾದೇವಿಯ ಚರಿತ್ರೆಯೇನಿರಬಹುದು ಎಂದು ಅವಳು ಆಶ್ಚರ್ಯಪಟ್ಟಳು. ಇಲ್ಲಿ ಭಕ್ತಜನರಲ್ಲಿ ಗಂಡಸರು ಯಾರೋ ಅವಳಿಗೆ ಕಾಮುಕರಿದ್ದಾರೆ ಎಂದು ಕಾತ್ಯಾಯಿನಿಯಮ್ಮನ ಸಂಶಯ.

"ಈ ಹೆಂಗಸರೂ ಹೋಗ್ತಾರೆ. ಅದು ಹೋಗಲಿ. ಮಕ್ಕಳನ್ನು ಕೂಡ ಹಾಳು ಮಾಡ್ತಾರಲ್ಲ?"

ಅದಾಗಿತ್ತು ಕಾತ್ಯಾಯಿನಿಯಮ್ಮನ ಸಂಕಟ.

ರಾತ್ರಿ ಎಷ್ಟೋ ಹೊತ್ತಾಗಿತ್ತು. ಕೇಶವ ಪಿಳ್ಳೆ ಫೈಲು ನೋಡಿಕೊಂಡು ಕುಳಿತಿದ್ದರು. ಕಾತ್ಯಾಯಿನಿಯಮ್ಮ ಮಲಗಿರಬಹುದು ಎಂದು ಕೇಶವ ಪಿಳ್ಳೆ ಭಾವಿಸಿದ್ದದ್ದು. ಇದ್ದಕ್ಕಿದ್ದ ಹಾಗೆ ಕಾತ್ಯಾಯಿನಿಯಮ್ಮ ಅಲ್ಲಿಗೆ ಬಂದಳು.

"ನೀನು ಮಲಗಲಿಲ್ಲವಾ?"

"ಇಲ್ಲ ಮಲಗಲಿಲ್ಲ. ಒಂದು ವಿಷಯ ಹೇಳೋದಿತ್ತು, ಹಾಗೆ. ಒಂದೊಂದು ಆಲೋಚಿಸಿಕೊಂಡು ಮಲಗಿದಾಗಲೂ ನನಗೆ ಹಾಗನ್ನಿಸುತ್ತೆ. ಯಾವ ಸಮಾಧಾನವೂ ಹೊಳೆಯೋದಿಲ್ಲ."

ಕೇಶವ ಪಿಳ್ಳೆ ಪೆನ್ನನ್ನು ಕೆಳಗಿರಿಸಿ ಆ ವಿಷಯ ಕೇಳುತ್ತಿದ್ದರು. ತಗ್ಗಿದ ಧ್ವನಿಯಲ್ಲಿ ಕಾತ್ಯಾಯಿನಿಯಮ್ಮ ಹೇಳಿದಳು:

"ಅಲ್ಲಿ ನಮ್ಮ ಮಗಳನ್ನ ಇಷ್ಟಪಡೋನೂ ಒಬ್ಬ ಇರಬೇಕು ಅನ್ನಿಸುತ್ತೆ."

ಕೇಶವ ಪಿಳ್ಳೆಗೆ ನಡುಕವುಂಟಾದಂತಾಗಿ ಕುತೂಹಲ ಹೆಚ್ಚಿತು. ಕಾತ್ಯಾಯಿನಿಯಮ್ಮ ಕಥೆ ಹೇಳುವುದಕ್ಕೆ ತೊಡಗಿದಳು:

"ಒಳ್ಳೆ ಯುವಕ. ನೋಡೋದಕ್ಕೆ ಚೆನ್ನಾಗಿದ್ದಾನೆ. ಹಾಗೆ ಅಲ್ಲೆಲ್ಲಾ ಸುತ್ತಾಡ್ತಾ ನಮ್ಮ ಹತ್ತಿರವೇ ನಿಂತಿದ್ದ. ಇವಳೂ ಅವನೂ ಮಾತಾಡಿದರು. ಇವರು ನಮ್ಮ ತಾಯಿ ಅಂತ ಅವನ ಹತ್ರ ಹೇಳಿದಳು. ಕವಿತೆ, ಹಾಡು ಬೇರೆ ಬರೆದು ಹಾಡ್ತಾನಂತೆ.

ಅವಳು ಹಾಡೋ ಕವಿತೆಯೆಲ್ಲವೂ ಅವನು ಬರೆದು ಕೊಟ್ಟಿದ್ದು ಅಂತ ಅವಳು ಹೇಳಿದ್ದು. ಒಳ್ಳೆ ಮರ್ಯಾದಸ್ಥನ ಹಾಗೆ ಕಾಣಿಸಿದ. ಆಗ ನನಗೇನೂ ಅನ್ನಿಸಲಿಲ್ಲ. ಇಲ್ಲಿಗೆ ಬಂದು ಬಿದ್ದುಕೊಂಡು ಆಲೋಚನೆ ಮಾಡಿದ ಮೇಲೆ ನನಗೆ ಸಂಶಯ."

ಕೇಶವ ಪಿಳ್ಳೆಗೆ ನಗು ಬಂದಿತು. "ಇಷ್ಟೇ ತಾನೇ? ನೀನು ನನ್ನ ಹೆದರಿಸಿಬಿಟ್ಟೆ ಯಲ್ಲ. ಅವಳು ಕಾಲೇಜಿನಲ್ಲಿ ಓದೋ ಹೆಣ್ಣಲ್ಲವಾ? ಪರಿಚಯ ಇರೋರು ಇರ್‍ತಾರೆ. ಅವನು ಹತ್ತಿರ ಸುಳಿದಾಡಿಯೂ ಇರಬಹುದು. ಸದನ ನೋಡಿದ ನಿನ್ನ ಕಣ್ಣಿಗೆ ಹಾಗೆ ಸಂಬಂಧವೇ ಇಲ್ಲದ ಏನೇನೋ ತೋರುತ್ತೆ."

ಕಾತ್ಯಾಯಿನಿ ನಿಷೇಧಾರ್ಥದಲ್ಲಿ ಹೇಳಿದಳು:

"ಅಲ್ಲ. ನಾನು ಹಾಗೆಲ್ಲ ಸುಮ್ಮಸುಮ್ಮನೆ ಸಂಶಯ ಪಡೋಳಲ್ಲ. ಇವಳು ಅವನು ಮುಂದೆ ನಿಂತು ಮಾತಾಡ್ತಿದ್ದಾಗಲೆಲ್ಲ ಯಾವುದೋ ಒಂದು ಅರ್ಥ ಕಣ್ಣಿನಲ್ಲೂ ಭಾವನೆಯಲ್ಲೂ ಕಾಣಿಸ್ತಿತ್ತು. ಈಗಲೂ ಅವರು ನನ್ನ ಕಣ್ಣ ಮುಂದೆ ನಿಂತ ಹಾಗಿದೆ."

ಒಂದು ಕ್ಷಣ ಬಿಟ್ಟು ಆ ಜೋಡಿಯನ್ನು ತನ್ನ ಕಣ್ಣೆದುರಿಗೆ ಈಗ ನೋಡಿದಂತೆ ಕಾತ್ಯಾಯಿನಿಯಮ್ಮ ಹೇಳಿದಳು:

"ನೀವು ಏನೇ ಹೇಳಿ. ಅವರು ಒಬ್ಬರಿಗೊಬ್ಬರು ತೀರ ಹತ್ತಿರದವರಾಗಿದ್ದಾರೆ. ಖಂಡಿತ."

ಕೇಶವ ಪಿಳ್ಳೆ ಸಲಹೆ ಮಾಡಿದರು:

"ಹಾಗಿದ್ದರೆ ಅದನ್ನ ಅವಳ ಹತ್ರ ಕೇಳಿನೋಡು."

"ಇದೇನು ನೀವು ಹೇಳೋದು? ನಿಮ್ಮನ್ನ ಕೇಳಿದರೆ ಅವಳ ಹತ್ರ ಕೇಳಿ ನೋಡ ಬೇಕಂತೆ! ಅದು ಸಾಧ್ಯ ಇಲ್ಲ. ಎಲ್ಲಿಯಾದರೂ ಒಂದು ಸಂಬಂಧ ಗೊತ್ತು ಮಾಡಿ ಬೇಗ ಮದುವೆ ಮಾಡಬೇಕು. ಮೊದಲು ಆ ಕೆಲಸ."

ಸ್ವಗತವಾಗಿ ಕಾತ್ಯಾಯಿನಿಯಮ್ಮ ಹೇಳಿಕೊಂಡಳು:

"ಆ ಹಾಳು ಸದನಕ್ಕೆ ಹೋದದ್ದರ ಫಲ. ಅಲ್ಲಿ ರಾತ್ರೀಲಿ ಒಳಗೆ, ಹೊರಗೆ, ಮೂಲೇಲಿ—ಏನೇನು ನಡೆಯುತ್ತೋ. ಮಲ್ಲಿಗೆ ಬಳ್ಳಿ ಹಬ್ಬಿಸಿರೋದು, ಜಾಜಿ ಹಾಬ್ಬಿಸಿರೋದು, ಎಲ್ಲ ಉಂಟು. ಅಲ್ಲಿ ಅವರೆಲ್ಲ ಏನೆಲ್ಲ ......... ದೇವರೇ ನನಗೆ ಗೊತ್ತಾಗೋದಿಲ್ಲ."

ಕೇಶವ ಪಿಳ್ಳೆಗೆ ಆ ಮಾತಿನಲ್ಲಿ ನಂಬಿಕೆ ಬರಲಿಲ್ಲ. ಕಾತ್ಯಾಯಿನಿಯಮ್ಮನಿಗೆ ಹಾಗನ್ನಿಸುತ್ತದೆ ಅಷ್ಟೆ. ಅಂತು ಆದಷ್ಟು ಬೇಗ ಮದುವೆ ಏರ್ಪಾಟು ಮಾಡಬೇಕು ಎನ್ನುವುದು ಕಾತ್ಯಾಯಿನಿಯಮ್ಮನ ಅಭಿಪ್ರಾಯ. ಅದರಲ್ಲಿ ಸಂಶಯವಿಲ್ಲ.

ಕೇಶವ ಪಿಳ್ಳೆ ಕೇಳಿದರು:

"ಅವನನ್ನು ನೋಡಿದರೆ ನಿನಗೆ ಏನನ್ನಿಸುತ್ತೆ?"

ಕೂಡಲೆ ಉತ್ತರ ಹೇಳಿದಳು:

"ಒಳ್ಳೆ ಮರ್ಯಾದೆ ಹುಡುಗ. ನೋಡೋದಕ್ಕೆ ಚೆನ್ನಾಗಿದ್ದಾನೆ. ಉಳಿದ ಸಂಗತಿ ನನಗೆ ಹೇಗೆ ಗೊತ್ತಾಗಬೇಕು?"

* * * *

ಕೆಲವು ದಿನಗಳು ಕಳೆದುವು. ಪಾರ್ಕ್ ವ್ಯೂಗೆ ಒಬ್ಬಾತ ವಧುವನ್ನು ನೋಡಲು ಬರಲಿದ್ದನೆ. ಒಡಗು ಬಾಲಕ್ಕುಡಿಯಲ್ಲಿರುವ ಒಬ್ಬ ವರ. ಎಂಜಿನಿಯರ್. ಮದರಾಸ್ ಸ್ಟೇಟ್ ಸರ್ವೀಸಿನಲ್ಲಿರುವವನು. ಆ ಸಂಜೆ ಆ ವಿಷಯವನ್ನು ಕಾತ್ಯಾಯಿನಿ ಮಗಳ ಹತ್ತಿರ ಹೇಳಿದಳು. ಅದನ್ನು ಕೇಳಿದಾಗ ವಿಜಯಮ್ಮನ ಮುಖ ಚಿಕ್ಕದಾಯಿತು.

ಕಾತ್ಯಾಯಿನಿ ಕೇಳಿದಳು:

"ಯಾಕೆ ನೀನು ಹಾಗೆ ಮುಖ ಚಿಕ್ಕದು ಮಾಡಿಕೊಂಡೆ?"

"ಯಾಕೂ ಇಲ್ಲ" ಎಂದು ಹೇಳಿದಳು ಅಷ್ಟೆ. ಕಾತ್ಯಾಯಿನಿಗೆ ಮದುವೆಯ ವಿಷಯ ವನ್ನು ಮೊತ್ತಮೊದಲಾಗಿ ಮಗಳ ಹತ್ತಿರ ಹೇಳಿದಾಗ ಗಾಬರಿಯಾದದ್ದಿರಬಹುದು ಎನ್ನಿಸಿತು.

ಮಾರನೆಯ ದಿನ ಕೇಶವ ಪಿಳ್ಳೆ ಕ್ಯಾಷುಯಲ್ ಲೀವ್ ತೆಗೆದುಕೊಂಡಿದ್ದರು. ಬೆಳಗ್ಗೆಯೇ ಹುಡುಗನೂ ಅವನ ಕಡೆಯವರೂ ಬಂದರು. ಆದರೆ ವಿಜಯಮ್ಮ ತೀರ ನಿರುತ್ಸಾಹಿಯಾಗಿದ್ದಳು. ಎಂಜಿನೀಯರ್‌ಗೆ ವಿಜಯಮ್ಮನ ಹತ್ತಿರ ಸ್ವಲ್ಪ ಮಾತಾಡ ಬೇಕಾಗಿತ್ತು. ಆ ವಿಷಯವನ್ನು ದಳ್ಳಾಳಿಯಾದ ನಾರಾಯಣನ್ ನಾಯರೇ ಕೇಶವ ಪಿಳ್ಳೆಯ ಹತ್ತಿರ ಹೇಳಿದರು. ಅದರಲ್ಲಿ ಕೇಶವ ಪಿಳ್ಳೆಯ ಆಕ್ಷೇಪವೇನೂ ಇರಲಿಲ್ಲ. ಆದರೂ ಕಾತ್ಯಾಯಿನಿಯಮ್ಮ ಹೇಳಿದ್ದು ಹೀಗೆ:

"ಅಯ್ಯೋ ದೇವರೇ! ಎಂಥ ಕರ್ಮ ಇದು! ಹುಡುಗ ಹೆಣ್ಣಿನ ಹತ್ರ ಮದುವೆಗೆ ಮುಂಚೆ ಮಾತಾಡಬೇಕಂತೆ! ಹೀಗೂ ಉಂಟಾ? ಹಿಂದೆ ಇದೆಲ್ಲಾ ಇತ್ತಾ?"

ಹೂ ತೋಟದಲ್ಲಿ ಅವರಿಬ್ಬರೂ ನಿಂತು ಮಾತಾಡುತ್ತಿದ್ದರು. ಕಾತ್ಯಾಯಿನಿ ಯಮ್ಮ ಮಾಳಿಗೆಯ ಒಂದು ಕಿಟಕಿಯ ಮೂಲಕ ಅವರನ್ನು ನೋಡುತ್ತಿದ್ದಳು. ಒಂದು ವೇಳೆ ಮದುವೆಗೆ ಮುಂಚೆಯೇ ಅವರು ಪವಿತ್ರವಾದ ತುಟಿಗಳನ್ನು ಒಂದು ಗೂಡಿಸಿಬಿಡುತ್ತಾರೋ ಎಂದು ತಿಳಿಯುವುದಕ್ಕಾಗಿ. ಇಲ್ಲ. ನಗು, ತಮಾಷೆ ಯಾವುದೂ ಇಲ್ಲದೆ ಗೌರವವಾಗಿ ಅವರು ಮಾತಾಡುತ್ತಿದ್ದಾರೆ. ಅವಳ ಮುಖದಲ್ಲಿ ನಾಚಿಕೆ ಯಾಗಲಿ, ಮಂದಹಾಸವಾಗಲಿ ಯಾವುದೂ ಇಲ್ಲ.

ಪರಸ್ಪರ ನಮಸ್ಕಾರ ಎಂದು ಹೇಳಿ ಅವರು ಅಲ್ಲಿಂದ ಬಂದದ್ದು. ಸ್ವಲ್ಪ ಹೊತ್ತು ನಾರಾಯಣನ್ ನಾಯರ್ ಮತ್ತು ಎಂಜಿನಿಯರ್ ಇಬ್ಬರೂ ಮಾತಾಡಿಕೊಂಡರು. ಆ ಮೇಲೆ ನಾರಾಯಣನ್ ನಾಯರ್ ಕೇಶವ ಪಿಳ್ಳೆಯ ಹತ್ತಿರಕ್ಕೆ ಬಂದ. ಆ ಮನುಷ್ಯ ಮ್ಲಾನನಾಗಿದ್ದ. ಕಾತ್ಯಾಯಿನಿಯಮ್ಮ ಹತ್ತಿರ ಇದ್ದಳು.

ನಾರಾಯಣನ್ ನಾಯರ್ ಸೋಲುಂಟಾದಂತೆ ಹೇಳಿದ:

"ಕೆಲಸ ಕೆಡ್ತಲ್ಲ."

"ಏನಾಯ್ತು ನಾರಾಯಣನ್ ನಾಯರೇ?"

"ಈ ಮದುವೆ ನಡೆಯೋದಿಲ್ಲ. ಮಗಳು ನೇರವಾಗಿ ಹೇಳಿದಳಂತೆ, ಈ ಮದುವೆ ನನಗಿಷ್ಟವಿಲ್ಲ ಅಂತ. ಹುಡುಗಿ ಮದುವೆ ನಿಶ್ಚಯಿಸಿದ್ದಾಗಿದೆಯಂತೆ. ಅವನನ್ನಲ್ಲದೆ ಬೇರೆ ಯಾರನ್ನೂ ಹುಡುಗಿ ಮದುವೆ ಮಾಡಿಕೊಳ್ಳೋದಿಲ್ಲವಂತೆ."

ಕೇಶವ ಪಿಳ್ಳೆ ಸ್ತಂಭೀಭೂತರಾದರು. ಅವರ ಸಪ್ತನಾಡಿಗಳೂ ನಿಂತುಹೋದಂತಾಯಿತು.

ಕಾತ್ಯಾಯಿನಿಯಮ್ಮ ಕೇಳಿದಳು:

"ಅದು ಯಾರು ನಾರಾಯಣನ್ ನಾಯರೇ?"

"ಆ ಕಮ್ಯುನಿಸ್ಟರವನು. ಹಾಡು, ಕವಿತೆ—ಕಮ್ಯುನಿಸ್ಟರಿಗೆ ಬರೆದು ಕೊಡೋನು. ವಿಶ್ವನಾಥ! ಅವರಿಬ್ಬರೂ ಒಟ್ಟಿಗೆ ಓದಿದವರಂತೆ. ಅವನನ್ನು ಪ್ರೀತಿಸಿರೋದಂತೆ."

ಕೇಶವ ಪಿಳ್ಳೆಯ ಶಬ್ದ ಹೊರಗೆ ಬರುತ್ತಿರಲಿಲ್ಲ.

"ಕಮ್ಯುನಿಸ್ಟರವನಾ?"

ಅದೊಂದು ಬೇಡದ ರೀತಿಯಲ್ಲಿ ಆ ಶಬ್ದ ಹೊರಗೆ ಬಂದದ್ದು.

"ಹೌದು."

ಕೇಶವ ಪಿಳ್ಳೆ ಮೇಜಿನ ಮೇಲೆ ತಲೆಯಿಟ್ಟುಕೊಂಡರು. ನಾರಾಯಣನ್ ನಾಯರ್ ಆಕ್ಷೇಪಿಸುತ್ತಿದ್ದ.

"ಇದನ್ನು ಮೊದಲೇ ತಿಳಿಸಿದ್ದರೆ ಒಳ್ಳೆಯದಿತ್ತು."

ಕಾತ್ಯಾಯಿನಿಯಮ್ಮ ಕೇಳಿದಳು:

"ಅದು ನಮಗೆ ಹೇಗೆ ತಿಳಿಯಬೇಕು? ಈ ತನಕ ಎಳ್ಳಷ್ಟೂ ಸಂಶಯ ಇರಲಿಲ್ಲ."

"ಅಂತು ತುಂಬ ನಾಚಿಕೆಗೇಡಿನ ವಿಷಯ ಅನ್ನುವುದರಲ್ಲಿ ಸಂಶಯವಿಲ್ಲ."

'ಕ್ಷಮಿಸಬೇಕು' ಎನ್ನುವ ಉಪಚಾರ ಮಾತುಗಳನ್ನಾಡಿ ಎಂಜಿನೀಯರ್ ಹೊರಟರು. ತಪ್ಪು ಮಾಡಿದ ಕೇಶವ ಪಿಳ್ಳೆ ಥಟ್ಟನೆ ಎದ್ದು ಎಂಜಿನೀಯರನ್ನು ಕುಳ್ಳಿರಿಸಿ ಸಾವಿರ ಕ್ಷಮಾ ಯಾಚನೆ ಮಾಡಿದರು. ನಿಜವಾಗಿ ಅವರೇನೂ ತಪ್ಪು ಮಾಡಿದವರಾಗಿರಲಿಲ್ಲ. ಎಂಜಿನೀಯರ್‌ಗೂ ಒಂದು ಮ್ಲಾನತೆಯಿತ್ತು. ಅವರೂ ಮೊತ್ತಮೊದಲಾಗಿ ವಿವಾಹ ವಿಷಯದಲ್ಲಿ ಬಂದದ್ದು. ಅವರ ಅನುಭವ ಹೀಗಾಯ್ತು.

ಎಂಜಿನೀಯರ್ ಹೇಳಿದರು:

"ಒಂದು ದೃಷ್ಟಿಯಲ್ಲಿ ಒಳ್ಳೆಯದಾಯ್ತು. ವಿಜಯಮ್ಮ ಮನಸ್ಸಿನಲ್ಲಿ ಆ ಪ್ರೇಮ ಸಂಬಂಧ ಇಟ್ಟುಕೊಂಡು ನಿಮ್ಮ ಒತ್ತಾಯಕ್ಕೆ ಕಟ್ಟುಬಿದ್ದು ಒಪ್ಪಿಕೊಂಡುಬಿಟ್ಟಿದ್ದರೋ? ಬದುಕು ಎಷ್ಟು ಕಷ್ಟವಾಗ್ತಿತ್ತು?"

ಕೇಶವ ಪಿಳ್ಳೆ ಅದು ಸರಿ ಎಂದು ಒಪ್ಪಿಕೊಂಡರು.

ಪರಾಜಯ ಇಬ್ಬರಿಗೂ ಇಲ್ಲದೆ, ಆದರೆ ಬೇಸರದಿಂದ ಪೆಚ್ಚು ಮುಖ ಹಾಕಿಕೊಂಡು ಅತಿಥಿಗಳು ಬೀಳ್ಕೊಂಡರು.

ಕಾತ್ಯಾಯಿನಿಯಮ್ಮ ಹೇಳಿದಳು:

"ನನಗೆ ಅನ್ನಿಸಿದ್ದು ಸರಿಯಲ್ಲವಾ? ನಾನು ಹಾಗೆಲ್ಲ ಸುಮ್ಮಸುಮ್ಮನೆ ಹೇಳೋದಿಲ್ಲ."

* * * *

ಆ ಮನಃಸ್ಥಿತಿಯಿಂದ ಸುಧಾರಿಸಿಕೊಳ್ಳಲು ಕೇಶವ ಪಿಳ್ಳೆ ತುಂಬ ಕಷ್ಟಪಡಬೇಕಾಯಿತು. ಅದರ ಎಲ್ಲ ಮುಖಗಳನ್ನೂ ಕುರಿತು ಅವರು ಆಲೋಚಿಸಿದರು. ಜಾತಕ ನೋಡಿ ಮದುವೆ ಮಾಡಿಕೊಡುವುದಲ್ಲದೆ ಬೇರೆ ಮಾರ್ಗ ಯಾವುದು? ಇರುವುದನ್ನು ಇಟ್ಟುಕೊಂಡು ಒಳ್ಳೆ ಲಾಭ ಮಾಡಿಕೊಂಡರಾಯ್ತು—ಎನ್ನುವ ತೀರ್ಮಾನಕ್ಕೆ ಅವರು ಬಂದರು. ಕಾತ್ಯಾಯಿನಿಯಮ್ಮನಿಗೆ ಅಷ್ಟೊಂದು ವ್ಯಥೆಯುಂಟಾಗಲಿಲ್ಲ. ಉಮಾದೇವಿ ಸದನದಲ್ಲಿ ಆದ ಸ್ನೇಹಬಂಧವಲ್ಲ ಎನ್ನುವ ಸಮಾಧಾನವಿತ್ತು. ವಿಶ್ವನಾಥ ಪ್ರೀತಿಸುತ್ತಾನೆ, ಒಳ್ಳೆಯವನು—ಎಂದು ವಿಜಯಮ್ಮ ಹೇಳುವುದುಂಟು. ಕಾತ್ಯಾಯಿನಿಯಮ್ಮನಿಗೆ ಅದು ಸಾಕು.

ಆದರೂ ಕೇಶವ ಪಿಳ್ಳೆ ಹೇಳಿದರು:

"ಅವನೊಬ್ಬ ಕಮ್ಯೂನಿಸ್ಟ್."

ಕಾತ್ಯಾಯಿನಿಯಮ್ಮ ಕೇಳಿದಳು:

"ಆದರಲ್ಲೇನು ತೊಂದರೆ?"

ಕೇಶವ ಪಿಳ್ಳೆ ಹೇಳುವುದು ಕಾತ್ಯಾಯಿನಿಯಮ್ಮನಿಗೆ ಅರ್ಥವಾಗುವುದಿಲ್ಲ. ಕೇಶವ ಪಿಳ್ಳೆಗೆ ಮಗಳ ಹತ್ತಿರ ಒಂದು ವಿಷಯ ಕೇಳುವುದಿತ್ತು.

"ಈ ಕವಿತೆ ಬರೆದುಕೊಂಡು ಹೇಗೆ ಜೀವನ ಸಾಗಿಸೋದಕ್ಕೆ ಸಾಧ್ಯ?"

ಬದುಕು ಅಷ್ಟೊಂದು ಕಠಿಣವೆಂದು ತಿಳಿಯದ ಆ ಹೆಣ್ಣಿಗೆ ಅದು ಮುಖ್ಯವಾಗಿರಲಿಲ್ಲ. ಅವಳು ಅದನ್ನು ಕುರಿತು ಆಲೋಚಿಸಿಯೂ ಇರಲಿಲ್ಲ. ಅವಳು ಆ ಪ್ರಶ್ನೆಗೆ ಉತ್ತರ ನೀಡಿದಳು:

"ನಾವು ಜೀವಿಸ್ತೀವಿ ಅಪ್ಪಾಜಿ."

ಕೇಶವ ಪಿಳ್ಳೆಗೆ ಒಂದೇ ಒಂದು ಸಮಾಧಾನ: ತಾನು ಸಂಪಾದಿಸಿದುದೆಲ್ಲವೂ ಮಗಳಿಗೆ. ಅವಳಿಗೆ ಮಾತ್ರ!

ಮದುವೆಯನ್ನು ತಿರುವನಂತಪುರದಲ್ಲೇ ನಡೆಸುವುದೆಂದು ತೀರ್ಮಾನಿಸಿದರು. ಆದರ ಜೊತೆಗೆ ಕೇಶವ ಪಿಳ್ಳೆಯ ತಲೆಯಲ್ಲಿ ಒಂದು ಉಪಾಯವೂ ಹೊಳೆಯಿತು.

ಮುಂದೆ ಬರಲಿರುವುದು ಕಮ್ಯುನಿಸ್ಟ್ ಸರಕಾರ. ವಿಶ್ವನಾಥ ಕಮ್ಯುನಿಸ್ಟ್. ಮದುವೆ ನಡೆದರೆ ಕಮ್ಯುನಿಸ್ಟರೆಲ್ಲ ಮದುವೆಗೆ ಬರುತ್ತಾರೆ. ಅವರ ಸ್ನೇಹವನ್ನೂ ಸಂಪಾದಿಸ ಬಹುದು. ಕಮ್ಯುನಿಸ್ಟರು ಬಂಧುತ್ವವುಳ್ಳವರು ಎಂದು ಹೇಳುತ್ತಾರೆ.

ಆದರೆ ಕಾತ್ಯಾಯಿನಿಯಮ್ಮನ ಅಭಿಪ್ರಾಯ ಮದುವೆಯನ್ನು ಊರಿನಲ್ಲಿ ನಡೆಸ ಬೇಕು ಎನ್ನುವುದಾಗಿತ್ತು.

# [43]

## ಸಾಧು ಮನುಷ್ಯನ ಸರ್ಕಾರ

ಚೀಫ್ ಸೆಕ್ರೆಟರಿ ರಾಜೀನಾಮೆ ಕೊಡಲಿಲ್ಲ; ಉದ್ಯೋಗದಲ್ಲೇ ಮುಂದುವರಿದರು. ಕಮ್ಯುನಿಸ್ಟ್ ಪಾರ್ಟಿ ಅಧಿಕಾರದಲ್ಲಿ ಬರುವ ವಿಷಯವನ್ನು ಒಪ್ಪಿಕೊಂಡೂ ಇದ್ದರು. ಆದರೂ ಕೇಶವ ಪಿಳ್ಳೆಗೆ ಅದು ಹಿತಕರವಾದ ಒಂದು ಕಾರ್ಯವಾಗಿರಲಿಲ್ಲ. ಆದರೆ ಸಂಭವಿಸಿದ್ದು ಅದು.

ಗೋಪಿ ಆ ಕಾಲದಲ್ಲಿ ಸ್ಟೇಟ್ ಕಮಿಟಿ ಸೆಕ್ರೆಟರಿ. ಚುನಾವಣೆಗೆ ಮೊದಲೂ ನಂತರವೂ ಹಲವು ಭಾಷಣಗಳಲ್ಲೂ ಪತ್ರಿಕಾ ಸಮ್ಮೇಳನಗಳಲ್ಲೂ ತುಂಬಾ ಸಂಗತಿಗಳನ್ನು ಗೋಪಿ ಹೇಳಿಟ್ಟಿದ್ದ. ಕಮ್ಯುನಿಸ್ಟ್ ಪಾರ್ಟಿ ಅಧಿಕಾರಕ್ಕೆ ಬಂದರೆ ಮಾಡುವ ಕಾರ್ಯಗಳೇನು ಎನ್ನುವುದನ್ನು ಲೆಕ್ಕ ಹಾಕಿ ಗೋಪಿ ಹೇಳಿದ್ದ. ಒಂದು ವೇಳೆ ಅದೇ ವಿಷಯ ಕೇಶವ ಪಿಳ್ಳೆಯನ್ನು ಅಸ್ವಸ್ಥತೆಗೀಡು ಮಾಡಿತೋ ಎಂದು ತಿಳಿಯದು. ಅವರ ಅಭಿಪ್ರಾಯ ಇವರ ಕಾಲದಲ್ಲಿ ಕೆಲಸಗಳೊಂದೂ ಸರಿಯಾಗಿ ನಡೆಯಲಾರದು ಎಂದಾಗಿತ್ತು. ಆಡಳಿತವೆಲ್ಲ ಕಲಸಿಕೊಳ್ಳುತ್ತದೆ. ಗೋಪಿಯ ವಿಷಯದಲ್ಲಿ ಸ್ವಲ್ಪ ಅಸಮಾಧಾನ ಕೇಶವ ಪಿಳ್ಳೆಗಿತ್ತು. ಅಂದು ಆಲ್ವೆಯಲ್ಲಿ ಬೀಳ್ಕೊಟ್ಟ ಮೇಲೆ ಗೋಪಿಯನ್ನು ಅವರು ಕಂಡಿಲ್ಲ. ಗೋಪಿ ಒಬ್ಬ ದುಡುಕು ಸ್ವಭಾವದವನು. ಕಮ್ಯುನಿಸ್ಟರನ್ನು ಕುರಿತು ಕೇಶವ ಪಿಳ್ಳೆಗೆ ಬೇರೊಂದು ಅಭಿಪ್ರಾಯವೂ ಇದೆ. ಆಡಳಿತ, ಪಾರ್ಟಿ ಸಂಘಟನೆಯ ಆಜ್ಞೆ ಅನುಸರಿಸಿಯೇ ನಡೆಯುತ್ತದೆ. ಹಾಗೆ ಗೋಪಿಯ ಆಡಳಿತ ಇನ್ನು ಮುಂದೆ ನಡೆಯಲಿದೆ. ಆಡಳಿತ ವರ್ಗದಲ್ಲೂ ಅವರು ಕೈಹಾಕಬಹುದು.

ಅಂತು ಗೋಪಿ ಯಾರು ಎಂದು ಕೇಶವ ಪಿಳ್ಳೆಗೆ ಗೊತ್ತು. ಮ್ಯಾಥ್ಯು, ಲೂಕೋಸ್ ನಾರಾಯಣನ್ ನಾಯರ್, ಗೋಪಿ—ಹೀಗೆ ನಾಲ್ಕು ಜನರನ್ನು ಒಮ್ಮೆ ಕೇಶವ ಪಿಳ್ಳೆ ಬಲೆ ಬೀಸಿ ಹಿಡಿದದ್ದಲ್ಲವೇ? ಆ ಬಲೆ ಹರಿದು ಗೋಪಿ ಹೋದ ಎನ್ನುವುದೇನೋ ನಿಜ. ಆದರೂ ಜ್ಞಾಪಕದಲ್ಲಿ ಉಳಿದಿದ್ದ ಮನುಷ್ಯ. ಆದರೆ ಆ ಬಳಿಕ ಗೋಪಿಯನ್ನು ಕೇಶವ ಪಿಳ್ಳೆ ಕಂಡದ್ದಿಲ್ಲ. ಗೋಪಿಯೂ ಕೇಶವ ಪಿಳ್ಳೆಯನ್ನು ಕಾಣುವುದಕ್ಕೆ ಬಂದದ್ದಿಲ್ಲ. ಒಂದು ಹೊಸ ಸಂವಿಧಾನದಲ್ಲಿ ಇನ್ನು ಹೊಂದಿಕೊಳ್ಳಬೇಕಾಗಿತ್ತು. ಅದು ಹೇಗೆ ಇರಬೇಕೆಂದು ತಿಳಿಯದಾಗಿತ್ತು. ಮಂತ್ರಿಗಳ ಹೆಸರುಗಳು ಹೊರಬಂದುವು. ಎಲ್ಲಾ ಹೆಸರುಗಳೂ ಕೇಳಿದ್ದ ಹೆಸರುಗಳೇ. ಒಬ್ಬರಿಬ್ಬರನ್ನು ನೇರವಾಗಿ, ಅಪೂರ್ವವಾಗಿ ಕಂಡದ್ದುಂಟು. ಉಳಿದವರು ಎಂಥವರು ಎನ್ನುವುದು ಕೂಡ ಸರಿಯಾಗಿ ತಿಳಿಯದು. ಹೇಗೆ

ವರ್ತಿಸಬೇಕೆಂದು ನಿಶ್ಚೈಸುವುದೂ ಸಾಧ್ಯವಿಲ್ಲ. ಸರಿಯಾದ ಒಬ್ಬ ಉದ್ಯೋಗಸ್ಥನಾಗಿರುವುದು ಒಳ್ಳೆಯದು ಎಂದು ಕೇಶವ ಪಿಳ್ಳೆಯನ್ನು ಅವರ ಬುದ್ಧಿ ಉಪದೇಶಿಸಿತು. ಆದರೆ ಆ ರೀತಿಯ ಉದ್ಯೋಗಕ್ಕೆ ತೊಡಗುವುದಕ್ಕೆ ಅವರ ವ್ಯಕ್ತಿತ್ವ ಒಪ್ಪುವುದಿಲ್ಲ. ಹೂ ಮಾರಿದಂತೆ ಹುಲ್ಲು ಮಾರುವುದು ಕಷ್ಟ. ಬರೀ ಉದ್ಯೋಗಸ್ಥನಾಗಿಯಲ್ಲ ಅವರಿಷ್ಟು ಕಾಲ ಇದ್ದದ್ದು. ಕೇಶವ ಪಿಳ್ಳೆ ದಿವಾನರ ಆಡಳಿತ ಕಾಲವಲ್ಲೂ ಕಾಂಗ್ರೆಸ್ಸಿನ ಆಡಳಿತೆಯ ಕಾಲವಲ್ಲೂ ಬರೀ ನೌಕರನಾಗಿಯಲ್ಲ ಇದ್ದದ್ದು. ಹಾಗೆ ಒಬ್ಬ ಅನುಸರಣೆಯ ಸ್ವಭಾವದ ಮನುಷ್ಯನಾಗಿ ಕಳೆಯುವುದಕ್ಕೆ ಅವರ ಮನಸ್ಸು ಒಪ್ಪುವುದಿಲ್ಲ.

ಕಾತ್ಯಾಯಿನಿಯಮ್ಮ ಅವಳ ಹಳೆಯ ಉಪದೇಶವನ್ನು ಮುಂದಿಡುವುದುಂಟು:

"ನೌಕರಿ ಬೇಡ ಅಂತ ಕೈಬಿಟ್ಟು ನಾವಿಲ್ಲಿಂದ ಹೋಗೋಣ. ಯಾಕೆ ಈ ಮೇಲು ಕೀಳಿಲ್ಲದವರ ಮುಂದೆ ವೇಷ ಕಟ್ಟೋದು?"

ಕೇಶವ ಪಿಳ್ಳೆ ಈಗ ಎದುರಿಸುತ್ತಿರಲಿಲ್ಲ. ಅದನ್ನು ಕುರಿತು ಅವರು ಆಳವಾಗಿ ಆಲೋಚಿಸುತ್ತಿದ್ದರು. ಒಮ್ಮೆ ಅವರು ಹೇಳಿದರು: "ನಾನೂ ಅದನ್ನು ಆಲೋಚಿಸುತ್ತಿದ್ದೇನೆ."

"ಅಷ್ಟೊಂದು ಆಲೋಚನೆ ಮಾಡೋದಕ್ಕೇನಿದೆ?"

"ಆಲೋಚಿಸುವುದಕ್ಕೇನೂ ಇಲ್ಲ. ಆದರೆ ಕಾತ್ಯಾಯಿನೀ, ಅದಕ್ಕೆ ಮನಸ್ಸೊಪ್ಪೋದಿಲ್ಲ. ಅದೇ ಸರ್ಕಾರದ ಉದ್ಯೋಗಸ್ಥನ ಅವಸ್ಥೆ. ಒಮ್ಮೆ ಉದ್ಯೋಗಸ್ಥನಾದರೆ ಐವತ್ತೈದಾಗುವುದಕ್ಕೆ ಒಂದು ದಿನ ಮೊದಲು ಬಿಟ್ಟುಹೋಗುವುದಕ್ಕೂ ಮನಸ್ಸು ಬರೋದಿಲ್ಲ."

ಕಾತ್ಯಾಯಿನಿಯಮ್ಮನಿಗೆ ಅದು ತಿಳಿಯುವುದಿಲ್ಲ. ತಿಳಿಯುವುದಕ್ಕೆ ಸಾಧ್ಯವೂ ಇಲ್ಲ. ಅವಳು ಕೇಳಿದಳು: "ಇನ್ನು ಈ ಮೇಲು ಕೀಳು ಅನ್ನೋ ತಿಳಿವಳಿಕೆ ಇಲ್ಲದ ಜನ ಕೆಳಕ್ಕೆ ಹಾಕಿ ತುಳಿದು ಹೊರಕ್ಕೆ ಹಾಕಬೇಕಾ? ಅದಾಗಬೇಕಾ ಹೋಗೋದಕ್ಕೆ? ಕಂಠ ಚೆನ್ನಾಗಿದ್ದಾಗಲೆ ಹಾಡು ನಿಲ್ಲಿಸಬಾರದಾ? ಇದೇಥಾ ಆಸೆಯಪ್ಪ! ಆಸೆ ತೀರಲಿಲ್ಲವಾ?"

ನಿರ್ಧಾರಕ್ಕೆ ಬರಲಾಗದ ಒಂದು ಹೂಂಕಾರ ಅವರ ಉತ್ತರವಾಗಿತ್ತು. ಕಾತ್ಯಾಯಿನಿಯಮ್ಮ ಹೇಳಿದಳು:

"ಅವರು ಹೊರ ಹಾಕಿಯಾರು. ಆ ನಾಚಿಕೆಗೇಡು ಆಗಬೇಕಾ? ಅವರಿಗೆ ಆ ಮದ್ರಾಸಿನಿಂದ ಬಂದ ಮೆನನ್ನನ್ನ ಹಿಡಿದಿಡಬಿಡಬೇಕೂಂತಲ್ವಾ ಹೇಳಿದ್ದು? ಅವನು ಒಬ್ಬ ಕಮ್ಯುನಿಸ್ಟು ಅಂತಲ್ವಾ ಹೇಳಿದ್ದು?"

ಚೀಫ್ ಸೆಕ್ರೆಟರಿ ಸ್ಥಾನಕ್ಕೆ ಕಣ್ಣಿಟ್ಟಿರುವ ಆರ್. ಟಿ. ಮೆನನ್ನನ ಹತ್ತಿರದ ಬಂಧುಗಳು ಎರಡು ಜನ ಕಮ್ಯುನಿಸ್ಟ್ ಎಂ. ಎಲ್. ಎ.ಗಳಿದ್ದಾರೆ. ಆತನ ಮೇಲೆ ಒಳ್ಳೆ ಅಭಿಪ್ರಾಯವೂ ಅವನ ಸ್ವಾಧೀನವೂ ಇರುವ ಇಬ್ಬರು ಮಂತ್ರಿಗಳಿದ್ದಾರೆ. ಮಲಬಾರ್ ಪ್ರದೇಶದ ಎಲ್ಲಾ ಎಂ. ಎಲ್. ಎ.ಗಳು ಕಾಂಗ್ರೆಸ್, ಪಿ. ಎಸ್. ಪಿ.—ಎಲ್ಲರೂ

ಅವನಿಗಾಗಿ ವಾದಿಸುವವರು. ಇದು ಸದ್ಯದ ಸ್ಥಿತಿ ಎಂದು ಕೇಶವ ಪಿಳ್ಳೆ ಹೇಳಿದರು. ಆತ ಹೇಳತೊಡಗಿದರು:

"ಈ ಕಮ್ಯುನಿಸ್ಟರು ಮೊದಲು ಮದ್ರಾಸಿಗೆ ಹೋದರೆ ರಹಸ್ಯವಾಗಿ ಇಳಿದುಕೊಳ್ಳುತ್ತಿದ್ದುದೆಲ್ಲಾ ಅವನ ಮನೆಯಲ್ಲಾಗಿತ್ತು. ಆತ ಒಬ್ಬ ಕಮ್ಯುನಿಸ್ಟು ಅನ್ನೋದರಲ್ಲಿ ಸಂಶಯವಿಲ್ಲ."

ಕಾತ್ಯಾಯಿನಿಯಮ್ಮ ಕೇಳಿದಳು: "ಆಗ ಖಂಡಿತವಾಗಿಯೂ ಅವರು ಅವನನ್ನು ಹಿಡಿದಿಟ್ಟ ಹಾಗೇನೆ. ಇನ್ನು ಮೇಲೆ ಅವರ ದೃಷ್ಟಿ ನಿಮ್ಮ ತಪ್ಪು ಕಂಡುಹಿಡಿಯೋದಕ್ಕಾಗಿರಬಹುದು. ಯಾಕೆ ಅದಕ್ಕೆಲ್ಲ ಎಡೆ ಕೊಡೋದು?"

ಹಾಗೆ ಆಯುಧವನ್ನು ಕೆಳಗಿಟ್ಟು ಸುಮ್ಮನಿರುವುದಕ್ಕೂ ಪಿಳ್ಳೆಗೆ ಮನಸ್ಸು ಬರುವುದಿಲ್ಲ. ಆತ ಹೇಳಿದರು: "ಹಾಗೆ ಹೆದರಿಕೊಂಡು ಹೋಗೋದಕ್ಕೆ ಸಾಧ್ಯವಾ? ಈ ದೇಶದಲ್ಲಿ ಹುಟ್ಟಿ ಬೆಳೆದೋನಲ್ಲವಾ ನಾನು? ಅದು ಮಾತ್ರವೇ ಅಲ್ಲ, ಹಾಗೆ ಹಾಕಿಸಿಕೊಂಡು ಹೋಗಬಾರದು ಅಂತ ಒತ್ತಾಯ ಮಾಡುವವರೂ ಇದ್ದಾರೆ."

ಕಾತ್ಯಾಯಿನಿಯಮ್ಮ ಕೇಳಿದಳು: "ಯಾರು? ಮ್ಯಾಥ್ಯು, ಲೂಕೋಸ್ ಮುಂತಾದವರೇನೋ!"

"ಅಲ್ಲ; ಅವರು ಮಾತ್ರವಲ್ಲ. ನೌಕರರೇ ತುಂಬ ಜನರಿದ್ದಾರೆ. ಒಗ್ಗಟ್ಟಾಗಿ ನಿಲ್ಲೋದಕ್ಕೆ ನಾವು ತುಂಬಾ ಜನರಿದ್ದೇವೆ. ಈ ತಲೆಯೂ ಬಾಲವೂ ಇಲ್ಲದ ರಗಳೆ ಮಾಡೋ ಜನ ಆಳೋದಕ್ಕೆ ಬಂದಿದ್ದಾರೆ. ಇವರಿಗೆ ಹಾಗೆ ದೇಶದ ಜನರನ್ನು ಗುಂಡಿ ತೋಡಿ ಹೂಳೋದಕ್ಕೆ ಬಿಟ್ಟುಕೊಟ್ಟು ಹೋಗೋದಕೆ ಸಾಧ್ಯವಾ? ಅದು ಸರಿಯಾ? ಈ ರಾಜ್ಯದಲ್ಲಿ ಕಮ್ಯುನಿಸ್ಟರು ಮಾತ್ರನಾ ಇರೋದು?

ಕಾತ್ಯಾಯಿನಿಯಮ್ಮನ ಉದ್ದೇಶ ಹೇಗಾದರೂ ಗಂಡನನ್ನ ಉದ್ಯೋಗದಿಂದ ವಿಮುಖನನ್ನಾಗಿ ಮಾಡಬೇಕು ಎಂದಾಗಿತ್ತು. ಅದು ಮಾತ್ರವೇ ಉಳಿದಿದ್ದದ್ದು. ಅವಳು ಕೇಳಿದಳು:

"ನೀವೆಲ್ಲರೂ ಈ ದೇಶ ಕಾಪಾಡೋದಕ್ಕೆ ಹೋಗೋರಾ?"

ಕೇಶವ ಪಿಳ್ಳೆ ಹೇಳಿದರು:

"ಕಾಪಾಡಬೇಕು. ಇಲ್ಲದೇ ಹೋದರೆ ಆದೀತಾ? ಯಾವ ತಿಳಿವಳಿಕೆಯೂ, ಮಾನವೂ ಮರ್ಯಾದೆಯೂ ಇಲ್ಲದವರು ಆಳೋದಕ್ಕೆ ಬಂದುಬಿಟ್ಟರು. ರಾಜ್ಯ ಅಪಾಯದಲ್ಲಿದೆ. ಕಾಪಾಡಬೇಕು. ಅದು ಅಗತ್ಯ."

ಅನಂತರ ಒಮ್ಮೆಯೂ ಕೆಳಗಿಳಿಯಬಾರದೆಂದು ಹೇಳಿದ ಕೆಲವು ಮನುಷ್ಯರ ಹೆಸರನ್ನು ಕೇಶವ ಪಿಳ್ಳೆ ಹೇಳಿದರು. ಅವರಲ್ಲಿ ಉದ್ಯೋಗಸ್ಥರಿದ್ದಾರೆ, ರಾಜಕೀಯ ವ್ಯಕ್ತಿಗಳಿದ್ದಾರೆ, ಯಾವುದರಲ್ಲೂ ಸೇರದ ಯೋಗ್ಯರಿದ್ದಾರೆ. ಅವರು ಹೇಳಿದರು:

"ಆ ಮೆನನ್ ಎಲ್ಲವನ್ನೂ ಮಲಬಾರಿಗೆ ಕೊಂಡುಹೋಗೋದಕ್ಕೆ ನೋಡ್ತಾನೆ.

ಅದು ಅವನ ದೃಷ್ಟಿ. ಮಂತ್ರಿಗಳೂ ಅದನ್ನ ಒಪ್ತಾರೆ. ಹಾಗೆ ಬಿಟ್ಟುಕೊಡಬಾರದು."

ಹೀಗೆಲ್ಲ ಇದ್ದರೂ ಹೊಸ ಮಂತ್ರಿ ಸಭೆ ಪ್ರಮಾಣವಚನ ಮಾಡುವ ದಿನ ಬಂತು. ಆ ದಿನ ಬೆಳಿಗ್ಗೆ ಕೇಶವ ಪಿಳ್ಳೆಗೆ ಎಂದೂ ಇಲ್ಲದ ಒಂದು ಮನೋಚಾಂಚಲ್ಯವುಂಟಾಗಿತ್ತು. ಸ್ಪಷ್ಟವಾದ ಒಂದು ಕೆಟ್ಟ ಕಾಲ ಉದಯವಾಗಿದೆ ಎನ್ನಿಸಿತು. ಯಾವುದೋ ಆಪತ್ತುಗಳು ಬರಲಿವೆ. ಅವೆಲ್ಲ ಏನು ಎಂದು ತಿಳಿದರೆ ಸ್ವಲ್ಪ ಸಮಾಧಾನ. ಉದ್ಯೋಗ ಹೋಗುವು ದಿದ್ದರೆ ಹೋಗಲಿ ಎಂತಲೇ ಇಟ್ಟುಕೊಳ್ಳೋಣ. ಅದಕ್ಕೆ ಬೇಕಾದ ಮನಃಸ್ಥೈರ್ಯ ಕೇಶವ ಪಿಳ್ಳೆಗೆ ಉಂಟಾಗಿತ್ತು. ಅದು ಹೋಗಲಿ. ರಾಜ್ಯ ಚೂರುಚೂರಾಗುವು ದಿದ್ದರೂ ಅದು ಅವರಿಗೆ ಒಂದು ದೊಡ್ಡ ವಿಷಯವಾಗಿ ತೋರಲಿಲ್ಲ. ರಾಜ್ಯ ನಾಶ ಹೊಂದುವುದಿದ್ದರೆ—ನಾಶವಾಗಲಿ. ಎಲ್ಲವನ್ನೂ ಮಲಬಾರಿಗೆ ಕೊಂಡುಹೋಗುವ ತಿರುವನಂತಪುರದವರ ಭಯವೂ ಅವರನ್ನು ವ್ಯಾಕುಲಪಡಿಸಿಲ್ಲ: ವ್ಯಾಕುಲಪಡಿಸುವು ದಿಲ್ಲ. ತಿರುವನಂತಪುರ ಶೂನ್ಯವಾದರೂ ಅವರಿಗೆ ಯಾವ ಬೇಸರವೂ ಇಲ್ಲ. ತಿರುವನಂತಪುರದ ಮೇಲೆ ಅಂತಹ ಒಂದು ಪ್ರೀತಿಯೂ ಇಲ್ಲ. ಕಮ್ಯುನಿಸ್ಟರೂ ಸೇರಿಕೊಂಡು ಸಹಕರಿಸುವುದಿದ್ದಲ್ಲಿ—ಒಂದು ಕಾಲದಲ್ಲಿ ಕಾಂಗ್ರೆಸ್‌ನವರ ವಿರೋಧ ವಿರಲಿಲ್ಲವೇ—ಕಡೆಗೆ ಅವರೂ ಸಹಕರಿಸಲಿಲ್ಲವೇ? ಹಾಗೆ ಕಮ್ಯುನಿಸ್ಟರೂ ಸಹಕರಿಸುವು ದಿಲ್ಲವೇ? ಮತ್ತೆ ಏಕೆ ಈ ಮನಸ್ಸಿನ ಚಾಂಚಲ್ಯ? ಇನ್ನು ಮೇಲೆ ಹತ್ತು ಕಾಸು ಸಂಪಾದಿಸುವ ಸಾಧ್ಯತೆ ಕಡಿಮೆಯಾಗುತ್ತದೆ ಎಂದೇ? ಉಳಿದವ್ದರಲ್ಲಿ ಜೀವಿಸುವುದು ಎನ್ನುವ ತೀರ್ಮಾನಕ್ಕೆ ಬಂದದ್ದೂ ಆಗಿದೆ. ಅವು ಯಾವುವೂ ಕೇಶವ ಪಿಳ್ಳೆಯನ್ನು ಬಾಧಿಸುವ ಪ್ರಶ್ನೆಗಳಲ್ಲ. ಅವರಿಗೆ ಸಾಕಾಗಿದೆ. ಹೆಚ್ಚಾಗಿ ದೊರೆಯುವುದಿದ್ದರೆ ಬೇಡ ಎಂದು ಹೇಳುವುದಿಲ್ಲ. ಯಾವುದನ್ನೂ ಇನ್ನು ಮೇಲೆ ನಿರೀಕ್ಷಿಸುವುದು ಬೇಡ ಎಂದು ದೇಶ ಸ್ವತಂತ್ರವಾದಾಗ ತೋರಿರಲಿಲ್ಲವೇ? ಅದರ ನಂತರ ಸಂಪಾದನೆ, ಮೊದಲಿದ್ದದ್ದ ಕ್ಕಿಂತ ಎರಡರಷ್ಟಾಗಿತ್ತು. ಇನ್ನು ಮೇಲೂ ಅಂತಹ ಆಶೆಯಿದ್ದರೆ ಅದಕ್ಕಾಗಿ ನಿರಾಶೆ ಪಡಬೇಕಾದ ವಿಷಯವಿಲ್ಲ. ಕಮ್ಯುನಿಸ್ಟರೂ ಈ ನಾಡಿನಲ್ಲೇ ಜನಿಸಿದವರು. ಈ ನಾಡಿನ ಎದೆ ಹಾಲು ಕುಡಿದು ಬೆಳೆದವರು. ಕಾಂಗ್ರೆಸ್ಸಿನವರಂತೆಯೇ ಒಳ್ಳೆಯದೂ ಕೆಟ್ಟದ್ದೂ, ಆವ ಎಲ್ಲ ಪಾರಂಪರ್ಯಗಳ, ಮೇಲುಕೀಳುಗಳನ್ನು ಉಳ್ಳವರು. ಮುಂದಿನ ಹಕ್ಕು ದಾರರು ಕಮ್ಯುನಿಸ್ಟರು. ಅಣ್ಣತಮ್ಮ ಎಂದಿಟ್ಟುಕೊಳ್ಳೋಣ. ಹತ್ತು ಕಾಸು ಅವರ ಆಡಳಿತ ಕಾಲದಲ್ಲಿ ಸಂಪಾದಿಸಬಹುದು. ಅವರಿಗೂ ಹಣ ಕಹಿಯಾಗುತ್ತದೆಯೇ? ಅವರ ಮಾರ್ಗವನ್ನು ಅಭ್ಯಸಿಸಲು ಕಾಲ ಬೇಕು ಎಂದಷ್ಟೇ ಅಲ್ಲವೇ? ಅದೂ ಕೇಶವ ಪಿಳ್ಳೆಗೆ ಸಂಬಂಧಿಸಿದಂತೆ ಒಂದು ಪ್ರಶ್ನೆಯಾಗಿರಲಿಲ್ಲ. ಮತ್ತೇತಕ್ಕೆ ಈ ಬೇಸರ? ಇದಕ್ಕೇನು ಕಾರಣ? ತಿಳಿಯುತ್ತಿಲ್ಲ. ಕೆಲವು ಗಂಟೆಗಳು ಕಳೆದಾಗ ಅದೊಂದು ಗಡಿಬಿಡಿಯಾಗಿ ಕಾಣಿಸಿತು. ಅನಂತರ ಭೀತಿಯಾಗಿ ಪರಿಣಮಿಸಿತು. ಯಾವುದೋ ಒಂದು ದೊಡ್ಡ ಆಪತ್ತು ಸಮೀಪಿಸಿದೆ ಅದು ಯಾವುದು ಎಂದು ತಿಳಿಯದು.

ಅಂದಿನ ಟಪಾಲು ಮೇಜಿನ ಮೇಲಿತ್ತು. ಎಂದಿಗಿಂತ ವಿಶೇಷವಾಗಿ ಕಾಗದಗಳನ್ನು ತಿರುಗಿಸಿ ನೋಡಿದರು. ಯಾವುದೋ ಒಂದು ಕಾಗದವನ್ನು ನಿರೀಕ್ಷಿಸುತ್ತಿದ್ದಂತೆ ತೋರಿತು. ಅವರ ಬೆರಳುಗಳು ನಡುಗುತ್ತಿದ್ದುವು.

ಒಂದು ರಾಶಿ ಕಾಗದಗಳಲ್ಲಿ ಅದನ್ನು ಹುಡುಕಿ ತೆಗೆದರು. ಆ ಒಂದು ಕಾಗದ ಅವರ ಕಣ್ಣಿಗೆ ಬಿದ್ದಿತು. ಅಲ್ಲಿ ಹುಡುಕಿ ಕೈಗೆತ್ತಿಕೊಂಡರು. ವಿಳಾಸ ಓದಿದರು. ಆ ಹಸ್ತಾಕ್ಷರ ಪರಿಚಿತವಾಗಿತ್ತು. ತಿರುವನಂತಪುರದ ಮುದ್ರೆ ಅದರ ಮೇಲೆ ಇದ್ದದ್ದು. ಹೃದಯ ಕ್ಷೋಭೆಯಿಂದ ಆ ಕಾಗದವನ್ನು ಒಡೆದುದ್ದು. ಕಾಗದ ಬಹಳ ಚಿಕ್ಕದಾಗಿತ್ತು. ಸ್ಪಷ್ಟವಾದ, ಸುಪರಿಚಿತವಾದ ಕೈಬರಹ.

ಆ ಕಾಗದ ಹೀಗಿತ್ತು:

ಧನ್ಯಾನಂದಾಶ್ರಮಂ,
ತಾ. 4–4–1957

ನನ್ನ ಹೃದಯೇಶ್ವರಾ !

ನಾನು ನಿಮ್ಮ ಆತ್ಮವನ್ನು ನನ್ನದನ್ನಾಗಿ ಮಾಡಿಕೊಂಡೆ. ನಾನು ಎಂದೆಂದೂ ನಿಮ್ಮವಳಾದೆ. ಇನ್ನು ಮೇಲೆ ನನ್ನನ್ನು ಹಾಗೆ ಕುತ್ತಿಗೆ ಹಿಡಿದು ತಳ್ಳುವುದಕ್ಕಾಗುವುದಿಲ್ಲ. ನೀವು ನನ್ನವರು. ಸಾವಿರ ಚುಂಬನಗಳು.

ಇತಿ ತಮ್ಮ ದಾಸಿ.
ತಂಗಂ.

ಕೇಶವ ಪಿಳ್ಳೆಗೆ ಒಂದೂ ಅರ್ಥವಾಗಲಿಲ್ಲ. ಆತ್ಮವನ್ನು ತನ್ನದನ್ನಾಗಿ ಮಾಡಿಕೊಂಡೆ. ಸೆರೆಹಿಡಿದೆ ಎಂತಲೆ? ಅವರ ಆತ್ಮ ಸ್ವತಂತ್ರ—ಹಕ್ಕಿಯ ಹಾಗೆ. ಅದನ್ನು ಒಂದು ಕಡೆಯಲ್ಲೂ ಬಂಧಿಸಲಾಗಿಲ್ಲ. ಕೇಶವ ಪಿಳ್ಳೆಗೆ ಅರ್ಥವಾಗುವುದಿಲ್ಲ. ಕಾತ್ಯಾಯಿನಿಗೂ ಆ ಆತ್ಮವನ್ನು ಸೆರೆಹಿಡಿಯಲಾಗಲಿಲ್ಲ. ಅವಳು ಎಂದೆಂದೂ ಕೇಶವ ಪಿಳ್ಳೆಯವಳಂತೆ ! ಒಂದು ಪಕ್ಷ ಅದು ಸರಿಯಾಗಿರಬಹುದು. ಯಾವ ಹೊತ್ತಿನಲ್ಲಿ ಕೈಬೀಸಿದರೂ ಅವಳು ಬರುತ್ತಾಳೆ. ಹೇಳಿದರೆ ಸಾಕು, ಏನನ್ನೂ ಮಾಡುತ್ತಾಳೆ. ಹತ್ತಿಯ ಚೂರಿನ ಹಾಗೆ ಹಾರಾಡುವ ಅವಳು ಹಾಗೇನೆ. ಇನ್ನು ಮೇಲೆ ಹಾಗೆಲ್ಲ ತಳ್ಳುವುದಕ್ಕೂ ಉಪೇಕ್ಷಿಸುವುದಕ್ಕೂ ಸಾಧ್ಯವಿಲ್ಲವಂತೆ—ಅವಳನ್ನು ಕೇಶವ ಪಿಳ್ಳೆ ಕೈಬಿಟ್ಟದ್ದಾಯಿತು. ಆ ವಿಷಯವನ್ನು ಸ್ಪಷ್ಟವಾಗಿ ಅವಳಿಗೆ ಹೇಳಿದ್ದೂ ಆಯಿತು. ಅವಳ ಜೀವನೋಪಾಯಕ್ಕೆ ವ್ಯವಸ್ಥೆ ಮಾಡಿದ್ದಾಯಿತು. ಆದರೂ ಅವಳು ಹಾರಿ ಹೋಗುವುದಿಲ್ಲವೆಂತಲೇ? 'ಉಪೇಕ್ಷಿಸುವುದಾಗಿ ಆಲೋಚಿಸಬೇಡಿ……' ಅದರ ಅರ್ಥವೇನು? ಒಮ್ಮೆ ಖಡಾಖಂಡಿತವಾಗಿ ಹೇಳಿದ್ದಲ್ಲವೇ? ಹೌದು. ಸ್ಪಷ್ಟಪಡಿಸಿದ್ದಾಗಿತ್ತು. ಯಾವುದಾದರೂ ಒಂದು ರಂಧ್ರ ಅದರಲ್ಲಿದೆಯೇ? ನಿಜವಾಗಿಯೂ

ಕೇಶವ ಪಿಳ್ಳೆಗೆ ಜ್ಞಾಪಕವಾಗುವುದಿಲ್ಲ. ಏನೇ ಆದರೂ ಅವಳ ಜೊತೆಯಲ್ಲಿ ಇನ್ನು ಯಾವ ಸಂಬಂಧವೂ ಬೇಡ ಎಂದು ಅವರು ತೀರ್ಮಾನಿಸಿದ್ದಾಗಿತ್ತು......... ಮತ್ತೂ ಇದೆ "ನೀವು ನನ್ನವರು" ಅವಳವನೆ? ಹೇಗೆ? ಹಾಗೆ ಒಬ್ಬಳು ಬಂದು ಹಕ್ಕು ಸ್ಥಾಪಿಸುವುದೆ? ತುಂಬ ಮುಖ್ಯವಾದ ಮಾತು ಅದು—"ನೀವು ನನ್ನವರು." ಅವಳು ಆಲೋಚಿಸಿ ತೀರ್ಮಾನ ಹೇಳಿದ್ದಾಳೆ. ಆ ಮಾತಿನ ಅಡಿಯಲ್ಲಿ ಗೆರೆಯೆಳೆದಿದ್ದಾಳೆ. ಅವಳ ಹಕ್ಕು ಏನಿರಬಹುದು?

ಈ ಹೊಸ ನಡತೆ ಕೇಶವ ಪಿಳ್ಳೆಗೆ ಅರ್ಥವಾಗಲಿಲ್ಲ. ಇದಕ್ಕೆ ಬಲವಾದ ಆಧಾರ ಯಾವುದು? ಇನ್ನು ಮೇಲೂ ಅವಳು ತನ್ನ ಜೀವನದಲ್ಲಿ ಪ್ರವೇಶಿಸಿ ತನ್ನನ್ನು ನಾಶ ಪಡಿಸಲು ತೀರ್ಮಾನಿಸಿದ್ದಾಳೆಯೇ? ಅವಳಿಗೆ ಈಗ ಹಲವು ಮಾರ್ಗಗಳು ಗೊತ್ತಿವೆ. ಎಲ್ಲವನ್ನೂ ಕಲಿತಿದ್ದಾಳೆ. ಮೊದಮೊದಲು ಈ ರೀತಿಯ ವಿದ್ಯೆಯೂ ಕೆಲಸವೂ ತಿಳಿಯದವಳಾಗಿದ್ದಳು. ಈಗ ಹಾಗಲ್ಲ. ಕನ್ಯಾಕುಮಾರಿಯಲ್ಲಿ ಅವಳು ವಶಪಡಿಸಿ ಕೊಂಡ—ಹೌದು, ವಶಪಡಿಸಿಕೊಂಡದ್ದೇ. ಆ ವಿದ್ಯೆಯನ್ನು ಕೇಶವ ಪಿಳ್ಳೆ ಜ್ಞಾಪಿಸಿ ಕೊಂಡರು. ಹೌದು. ಅದನ್ನು ಆಲೋಚಿಸಿ ಮಾಡಿದ ಒಂದು ಕಾರ್ಯಕ್ರಮಂದಂತಿತ್ತು. ಆ ಪ್ರವಾಹದಲ್ಲಿ ಸಿಕ್ಕಿಸಿಕೊಂಡು ತನ್ನನ್ನು ಬಹು ದೂರ ಎಳೆದುಕೊಂಡು ಹೋಯಿತು. ತನ್ನ ತಾನು ಮರೆತದ್ದು; ಪ್ರಜ್ಞೆ ಮರೆತದ್ದು. ಈಗಲೂ ಮತ್ತೊಂದು ತಂತ್ರವನ್ನು ಅವಳು ಪ್ರಯೋಗಿಸಬಹುದು. ಅದನ್ನು ಅವಳು ತೀರ್ಮಾನಿಸಿರಬಹುದು. ಅದೇನಿರಬಹುದು ಎಂದು ಕೇಶವ ಪಿಳ್ಳೆ ಆಲೋಚಿಸುತ್ತಿದ್ದದ್ದು. ಏನಾದರೆ ತಾನೆ ಏನಂತೆ—ಅದು ಯಾವುದನ್ನೂ ಗಣನೆಗೆ ತಂದುಕೊಳ್ಳದೆ ಗಟ್ಟಿಯಾಗಿ ನಿಲ್ಲಬೇಕು. ಆದರೆ ಹಾಗೆ ನಿಲ್ಲಲು ಸಾಧ್ಯವೇ ಎಂದು ಅವರು ಭಯಪಟ್ಟರು. ಅನಿಷ್ಟ! ಇದೊಂದು ಎಂದೂ ಮುಗಿಯದ ಬಾಧೆಯಾಗಿ ಉಳಿಯಿತು. ಆಗಾಗ ಇದು ಕಂಡುಬರುತ್ತದೆ. ಯಾವ ರೂಪಿನಲ್ಲಿ ಈ ಋಣವನ್ನು ಬಗೆಹರಿಸುವುದು? ಇದು ಹೀಗೆ ಉದ್ಬುದ್ಧವಾಗಿ ಬರುತ್ತದೆ ಎಂದು ಅಂದು ತಿಳಿದಿದ್ದಿದ್ದರೆ......ಆ ಉಪಕಾರ ಬೇಡವೆನ್ನಬಹುದಾಗಿತ್ತು. ಮನಸ್ಸಿಗೆ ಸಮಾಧಾನ ದೊರೆಯುತ್ತಿತ್ತು. ಈ ಹೊಸ ಸಂದರ್ಭಗಳ ಸ್ವರೂಪವೂ ಭಾವನೆಗಳೂ ಕೇಶವ ಪಿಳ್ಳೆಯನ್ನು ಭಯಪಡಿಸಿದುವು. ಇದರಿಂದ ರಕ್ಷಿಸಿಕೊಳ್ಳಬೇಕಾದ ಒಂದೇ ಒಂದು ಮಾರ್ಗ ಇದೆ. ಅದು ಕಲ್ಲು ಬಂಡೆಯ ಹಾಗೆ ಗಟ್ಟಿಯಾಗಿ ನಿಲ್ಲುವುದು. ಅದು ತೀರ್ಮಾನಿಸಬೇಕಾದ ಒಂದು ವಿಚಾರ. ಮತ್ತೂ ಒಮ್ಮೆ ಕೇಶವ ಪಿಳ್ಳೆ ಆ ಕಾಗದವನ್ನು ಓದಿದರು. ಒಂದು ಹೊಸ ಭಾವನೆ ಅದರಲ್ಲಿದ್ದಂತೆ ತೋರಿತು. ಅಕ್ಷರಗಳೆಲ್ಲ ಎಂದಿಗಿಂತ ಸ್ಪಷ್ಟವಾಗಿದ್ದುವು. ಸಂಬೋಧನೆಯಲ್ಲಿ ಕಲಬೆರಕೆಯಿಲ್ಲ. 'ಹೃದಯೇಶ್ವರಾ!', 'ತಮ್ಮ ದಾಸಿ' ಎಂದಿದೆ. ಕೇಶವ ಪಿಳ್ಳೆಯ ತುಟಿಗಳು ಒಂದು ಸಣ್ಣ ನಗುವಿಗಾಗಿಯೋ ಎನ್ನುವಂತೆ ವಕ್ರಗೊಂಡುವು. 'ಹೃದಯೇಶ್ವರ'—ಅವಳಿಗೆ ಪ್ರೇಮ ಪತ್ರ ಬರೆಯುವುದು ಗೊತ್ತಿದೆ. ಒಮ್ಮೆಯೂ

ಅವಳು ಅವರಿಗೆ ಪ್ರೇಮಪತ್ರ ಬರೆದಿರಲಿಲ್ಲ. ಅಂತಹ ಸಂಬಂಧವಾಗಿರಲಿಲ್ಲ ಅದು. ಯಾವ ಘಟ್ಟದಲ್ಲಾದರೂ ಉದ್ದೇಶ ರಹಿತವಾದ ಸ್ನೇಹವಾಗಿತ್ತೇ ಅದು? ಅವಳಿಗೆ ಪ್ರೇಮಪತ್ರ ಬರೆಯುವುದು ಗೊತ್ತಿದೆ ಎನ್ನುವುದು ಖಚಿತ. ಒಂದು ವೇಳೆ ಅವಳು ರಾಮಚಂದ್ರನ್ ನಾಯರಿಗೆ ಪ್ರೇಮಪತ್ರ ಬರೆದಿರಬಹುದು. ಆ ನಡತೆಯಿರಬಹುದು. ಅವಳ ಹೃದಯದಲ್ಲಿ ಯಾವ ಕಾಲದಲ್ಲಿ ಅಧೀಶ್ವರನಿದ್ದದ್ದು? ನಿಜವಾಗಿಯೂ ತಾನು ಅವಳ ಹೃದಯೇಶ್ವರನಾಗಿದ್ದೆ ಎಂದು ಕೇಶವ ಪಿಳ್ಳೆ ಅಂದುಕೊಂಡಿಲ್ಲ. ಹಾಗೆ ಅವಳ ಹೃದಯವನ್ನು ತನ್ನದನ್ನಾಗಿ ಮಾಡಲು ಎಂದಾದರೂ ಸಾಧ್ಯವಿತ್ತು ಎಂದಾಗಲೀ ಕೇಶವ ಪಿಳ್ಳೆಗೆ ತೋರುವುದಿಲ್ಲ. ಅವಳಿಗೆ ಬೇಕಾಗಿದ್ದದ್ದು ಪ್ರೀತಿಯಲ್ಲ—ಒಬ್ಬ ಗಂಡ ನಲ್ಲ. ಮತ್ತೇನೆಂದು ತನಗೆ ಗೊತ್ತು. ಆ ಪರೀಕ್ಷೆಯಲ್ಲಿ ತಾನು ಸೋತವನು—ತಿರಸ್ಕೃತನಾದವನು. ಆ ದೃಷ್ಟಿಯಲ್ಲಿ ತಾನು ಹೇಗೆ ಅವಳಿಗೆ ಹೃದಯೇಶ್ವರನಾಗುವುದು? ಅದು ಕಾಪಟ್ಯ. ಅವಳು ಪ್ರೇಮನಾಟಕವಾಡುತ್ತಿದ್ದಾಳೆ.

'ತಮ್ಮ ದಾಸಿ ತಂಗಂ' ಅಂತೆ. ಹಾಗೆ ಆ ಕಪಟಕ್ಕೆ ಮಕುಟ ಇಟ್ಟಿದ್ದಾಳೆ. ಒಮ್ಮೆಯೂ ಅವಳನ್ನು 'ತಂಗಂ' ಎಂದು ಕರೆದದ್ದು ಕೇಶವ ಪಿಳ್ಳೆಗೆ ಜ್ಞಾಪಕವಿಲ್ಲ. ಅಂತಹ ಒಂದು ಪ್ರೀತಿಯ ಹೆಸರನ್ನು ತಾನಾಗಿಯೇ—ತನ್ನನ್ನು ಹಾಗೆ ಕರೆಯಲಿ ಎಂದು ಬರೆದಿರುವಂತೆ ತೋರುತ್ತದೆ.

'ತಂಗಂ' ಅಂತೆ. ಬೆರಕೆಯಿಲ್ಲದ ಚಿನ್ನ! ಅಬ್ಬ! ಎಂತಹ ವಂಚನೆ ಇದು! ಒಟ್ಟಿನಲ್ಲಿ ತುಂಬು ಉತ್ಸಾಹದಿಂದ ಅವಳು ಈ ಕಾಗದ ಬರೆದಿದ್ದಾಳೆ. ಆ ಒಗಟಿನ ಕಥೆಯನ್ನು ಆಲೋಚಿಸುತ್ತ ಕುಳಿತು ಎಷ್ಟು ಹೊತ್ತಾಯಿತು ಎಂದು ಕೇಶವ ಪಿಳ್ಳೆಗೆ ತಿಳಿಯದಾಗಿತ್ತು. ಆಲೋಚಿಸಿ ಆಲೋಚಿಸಿ ತಲೆ ಬಿಸಿಯಾದರೂ ಅದನ್ನು ಕುರಿತು ಯಾವ ಬೆಳಕೂ ತಿಳಿಯುವುದಿಲ್ಲ. ಒಂದು ಹೊಸ ಆಕ್ರಮಣ ಮಾಡಲಿರುವುದು ಎಂದು ಮಾತ್ರ ತಿಳಿಯುತ್ತದೆ.

ಉಳಿದ ಆಫೀಸಿನ ಕಾಗದಗಳೆಲ್ಲ ಮೇಜಿನ ಮೇಲೆ ರಾಶಿಯಾಗಿ ಬಿದ್ದಿದ್ದವು. ಯಾವುದರ ಕಡೆಗೂ ಅವರ ಗಮನ ಹೋಗಲಿಲ್ಲ. ಅಂದು ಗಮನ ಹೋಗುವುದಿಲ್ಲ. ಇದಕ್ಕೆ ಮೊದಲು ಒಂದು ಸಲ ಇಂತಹ ಅವಸ್ಥೆಯುಂಟಾಗಿತ್ತು. ಅದು ಚೀಫ್ ಸೆಕ್ರೆಟರಿಯಾಗಿ ಛಾರ್ಜು ವಹಿಸಿಕೊಂಡ ದಿನ. ಕೇಶವ ಪಿಳ್ಳೆ ಆ ದಿನವನ್ನು ಸ್ಪಷ್ಟವಾಗಿ ನೆನಸಿಕೊಂಡರು. ಅಂದೂ ಮೊದಲು ಮೇಜಿನ ಮೇಲೆ ಬಂದದ್ದು ಅವಳು ಬರೆದ ಒಂದು ಕಾಗದ. ಕೆಲಸಕ್ಕೆ ರಾಜೀನಾಮೆ ಕೊಟ್ಟು ಬರೆದ ಕಾಗದ. ಅದನ್ನು ಓದಿದ ಮೇಲೆ ಮತ್ತೆ ಯಾವ ಕೆಲಸವನ್ನೂ ಮಾಡಲಾಗಲಿಲ್ಲ. ಎಲ್ಲವನ್ನೂ ಮಾರನೆಯ ದಿನಕ್ಕೆ ಮುಂದೂಡಿದ್ದು. ಅದೇ ರೀತಿ ಈ ದಿನವೂ ಆಗುತ್ತಿದೆ. ಎರಡನೆಯ ಕಾಗದ ಇದು. ಇದು ಸಿಟ್ಟು ತರುವ ಪ್ರೇಮಪತ್ರ. ಆಲಂಕಾರಿಕ ಭಾಷೆಯಲ್ಲಿ ಅವಳು ಬರೆದಿದ್ದಾಳೆ. ಏನೂ ಅರ್ಥವಾಗುತ್ತಿಲ್ಲ

ಪ್ರಮಾಣ ವಚನಕ್ಕೆ ಹೋಗಬೇಕಾದ ಸಮಯವಾಯಿತು ಎಂದು ಜವಾನ ಬಂದು ತಿಳಿಸಿದ. ಆ ಕೆಲಸವನ್ನು ಕೂಡ ಕೇಶವ ಪಿಳ್ಳೆ ಮರೆತಿದ್ದಂತೆ ತೋರಿತು. ಆ ಕಾರ್ಯಕ್ರಮಗಳಲ್ಲಿ ಅಷ್ಟೊಂದು ಉತ್ಸಾಹ ಕೇಶವ ಪಿಳ್ಳೆಗಿರಲಿಲ್ಲ. ಸೆಕ್ರೆಟರಿಯೇಟ್‌ನಲ್ಲಿ ಉದ್ಯೋಗಸ್ಥರೂ ಸೇರಿದಂತೆ ಮಂತ್ರಿಸಭೆಗೆ ಮುಖ್ಯ ಮಂತ್ರಿ ಒಂದು ಸಣ್ಣ ಭಾಷಣ ಮಾಡಿದರು. ಅವರು ಉದ್ಯೋಗಸ್ಥರ ಸಹಕಾರವನ್ನು ಕೇಳಿಕೊಳ್ಳುತ್ತಿದ್ದರು. ಒಟ್ಟಿಗೆ ಸಹಕರಿಸಿ ನಡೆಸಿಕೊಂಡು ಹೋಗಬೇಕಾದ ಕಾರ್ಯವೆಂದು ಅವರು ಹೇಳಿದರು. ಉದ್ಯೋಗಸ್ಥರ ಪರವಾಗಿ ಚೀಫ್ ಸೆಕ್ರೆಟರಿ ಉತ್ತರ ಹೇಳಬೇಕಾಗಿದ್ದದ್ದು. ಅದು ಕೇವಲ ಔಪಚಾರಿಕವಾದ, ಜೀವವಿಲ್ಲದ ಒಂದು ಪ್ರತಿಯುತ್ತರವಾಗಿತ್ತು. ಅಂತಹ ಒಂದು ಸಂದರ್ಭದಲ್ಲಿ ಆ ರೀತಿಯಲ್ಲಲ್ಲ ಒಬ್ಬ ಚೀಫ್ ಸೆಕ್ರೆಟರಿ ಮಾತನಾಡ ಬೇಕಾಗಿದ್ದದ್ದು ಎಂದು ತೋರಿತು. ಆ ಮಂತ್ರಿಸಭೆ ಬಂದದ್ದು ಚೀಫ್ ಸೆಕ್ರೆಟರಿಗೆ ಇಷ್ಟವಾಗಲಿಲ್ಲ ಎನ್ನುವ ವರೆಗೂ ವ್ಯಾಖ್ಯಾನಿಸಲ್ಪಟ್ಟಿತು. ಸೆಕ್ರೆಟರಿಯೇಟ್‌ನಲ್ಲಿ ಅಂದಿನ ಮಾತು ಮಂತ್ರಿಸಭೆಯೂ ಚೀಫ್ ಸೆಕ್ರೆಟರಿಯೂ ಪರಸ್ಪರ ಒಟ್ಟಿಗೆ ಹೋಗು ತ್ತಿರುವ ರೀತಿಯಲ್ಲಾಗಿತ್ತು. ಇದಕ್ಕೆ ಮೊದಲಿನ, ಅಂತಹ ಸಂದರ್ಭಗಳಲ್ಲಿ ಚೀಫ್ ಸೆಕ್ರೆಟರಿ ಆ ರೀತಿಯಲ್ಲಲ್ಲ ನಡೆದುಕೊಂಡದ್ದು. ಆ ಸಂದರ್ಭಗಳನ್ನು ಹಲವರು ಉದಾಹರಿಸಿದರು. ಮಂತ್ರಿಗಳಿಗೂ ಚೀಫ್ ಸೆಕ್ರೆಟರಿಯ ನೀರಸವಾದ ಮಾತು ಅರ್ಥವಾಯಿತು.

ಮೂರು ಸಣ್ಣ ವಾಕ್ಯಗಳ ಒಂದು ಸಣ್ಣ ಭಾಷಣ. ಅಷ್ಟೇ ಕೇಶವ ಪಿಳ್ಳೆಗೆ ಹೊಳೆದದ್ದು. ಅದಕ್ಕೆ ಕಾರಣ ಮಂತ್ರಿಗಳೋ, ಬ್ಯಾಲೆಟ್ ಪೆಟ್ಟಿಗೆಯಲ್ಲಿ ಚರಿತ್ರೆಯನ್ನು ಸೃಷ್ಟಿಸಿಕೊಂಡು ಕಮ್ಯುನಿಸ್ಟ್ ಪಾರ್ಟಿ ಅಧಿಕಾರಕ್ಕೆ ಬಂದದ್ದರೊಡನಿದ್ದ ವಿರೋಧವೋ ಅಲ್ಲ. ಮಂತ್ರಿಗಳಲ್ಲಿ ಇಬ್ಬರು ಮೂವರು ಕೇಶವ ಪಿಳ್ಳೆಗೆ ಮೊದಲು ಪರಿಚಯವಿದ್ದವರು. ಕೆಲವು ಕಾನ್ಫರೆನ್ಸುಗಳಲ್ಲಿ ಅವರೊಡನೆ ವ್ಯವಹರಿಸಿದ್ದುಂಟು. ಉಳಿದವರ ಪರಿಚಯವಿರಲಿಲ್ಲ. ಆದರೂ ಅವರನ್ನು ಕಾಣುವಾಗ ಮೊದಲ ನೋಟಕ್ಕೆ ಒಂದು ಅಸಹನೆ ಉಂಟಾಗುತ್ತಲ್ಲ—ಅದೊಂದೂ ಉಂಟಾಗಿಲ್ಲ. ಅವರು ಮೊದಲು ಆಳಿದ ಮಂತ್ರಿಗಳೇ. ತಂಗಮ್ಮನ ಕಾಗದ ಉಂಟುಮಾಡಿದ ಮಾನಸಿಕ ಅವಸ್ಥೆಯೇ ಕಾರಣ. ಆ ಕಾಗದ ಒಂದು ಪ್ರಧಾನವಾದ ದಿನದಲ್ಲಿ ತೊಂದರೆಯನ್ನುಂಟು ಮಾಡಿತು. ಇದು ಇನ್ನುಳಿದಿರುವ ಜೀವನವನ್ನೂ ಬಾಧಿಸಬಹುದು. ಕೇಶವ ಪಿಳ್ಳೆ ಮತ್ತೂ ತೇಜೋಹೀನರಾದರು. ಯಾವ ರೀತಿಯಲ್ಲಾದರೂ ಅವರಿಗುಂಟಾದ ತಪ್ಪು ಕಲ್ಪನೆಯನ್ನು ಹೋಗಲಾಡಿಸಬೇಕೆಂದು ಕೇಶವ ಪಿಳ್ಳೆ ಆಲೋಚಿಸುತ್ತಿದ್ದದ್ದು. ನಿಜವಾಗಿಯೂ ಎಲ್ಲರೂ ತಪ್ಪು ತಿಳಿದುಕೊಂಡಿದ್ದಾರೆ. ಯಾವುದಕ್ಕೂ ಅಡ್ಡಿ ಮಾಡದೆ ಇರಬೇಕು ಎನ್ನುವ ಭಾವನೆಯನ್ನು ತಾಳಿಕೊಳ್ಳೋಣ. ವಿರೋಧಾಭಿಪ್ರಾಯವನ್ನು ಕೂಡ ಹೇಳದಿರುವುದೇ ಸರಿ. ಅವರು ಏನು ಹೇಳುತ್ತಾರೆ ಅದೇ ಸರಿಯೆಂದು ಹೇಳೋಣ.

ಹಾಗೆ ಸ್ವಾಭಿಪ್ರಾಯವನ್ನೂ ವ್ಯಕ್ತಿತ್ವವನ್ನೂ ಕೆಲವು ದಿವಸಗಳ ವರೆಗೆ ಅಡಗಿಸಿಕೊಳ್ಳೋಣ. ಅಂತಹ ನಡವಳಿಕೆಯನ್ನು ಕೈಗೊಳ್ಳಬೇಕು. ಅದಲ್ಲದೆ ಮತ್ತಾವುದೂ ಕೇಶವ ಪಿಳ್ಳೆಯ ಬುದ್ಧಿಗೆ ಹೊಳೆಯಲಿಲ್ಲ.

ಗಂಡ ತೀರ ಮಂಕಾಗಿದ್ದದ್ದು ಕಾತ್ಯಾಯಿನಿಯಮ್ಮನ ಗಮನಕ್ಕೂ ಬೀಳದಿರಲಿಲ್ಲ. ಉದ್ಯೋಗವೇ ಬೇಡ ಎಂದು ಹೇಳುವ ಆ ಸ್ತ್ರೀಗೆ ಆ ಮಂಕು ಒಂದು ಕಾರಣವಿಲ್ಲದ ಸಂಗತಿಯಾಗಿ ತೋರಿತು.

ತಿರುವನಂತಪುರವಿಡೀ ಅದೇ ಮಾತಿನ ವಿಚಾರವಾಗಿತ್ತು. ಹಲವು ಊಹಾಪೋಹಗಳು ಹರಡಿದುವು. ಭವಿಷ್ಯತ್ತನ್ನು ಕುರಿತು ಚರ್ಚೆಗಳು ನಡೆದುವು. ಅದರಲ್ಲಿ ಸಂತೋಷಪಟ್ಟವರುಂಟು. ಆದರೆ ದುಃಖಿಸಿದವರು ಯಾರೂ ಇರಲಾರರು. ಸ್ವಂತ ವಿಷಯಕ್ಕೇ ತೊಂದರೆಯುಂಟಾಗುತ್ತದೆ ಎಂದು ಆಲೋಚಿಸಿ ಮನಃಕ್ಲೇಶಕ್ಕೊಳಗಾದವರೂ ಇಲ್ಲ. ಆದರೆ ಅಭಿಪ್ರಾಯ ವ್ಯತ್ಯಾಸವಿದ್ದ ಒಂದು ಆಲೋಚನಾ ವಿಷಯ ತಿರುವನಂತಪುರದಲ್ಲೆಲ್ಲ ಹರಡಿತು. ಮದರಾಸಿನಿಂದ ಬಂದ ಆರ್. ಟಿ. ಮೆನನ್ ಕಮ್ಯುನಿಸ್ಟರಿಗೆ ಬೇಕಾಗಿದ್ದ ಮನುಷ್ಯ. ಅವರು ಚೀಫ್ ಸೆಕ್ರೆಟರಿಯಾಗುವುದು ತಿರುವಾಂಕೂರು ಕೊಚ್ಚಿಯವರಿಗೆ ದೊಡ್ಡ ತೊಂದರೆ. ಮಲಬಾರಿನ ಕೆಲಸ ಮಾತ್ರ ಅವರ ದೃಷ್ಟಿಯಲ್ಲಿದ್ದದ್ದು. ಆಗ ಅದರಲ್ಲಿಯೇ ಒಂದು ವಿಭಾಗದವರು ವಾದಿಸುವುದು ಕೇಶವ ಪಿಳ್ಳೆಯಿಂದ ತಿರುವನಂತಪುರಕ್ಕೆ ಯಾವ ಉಪಯೋಗವೂ ಇಲ್ಲ ಎಂದು. ಅವನು ಬಡಗು ದಿಕ್ಕಿನವನು. ತಿರುವನಂತಪುರದ ಶತ್ರು. ಆದರೆ ಅವರೂ ಒಪ್ಪುತ್ತಾರೆ. ಆರ್. ಟಿ. ಮೆನನ್‌ಗಿಂತ ಈ ಮನುಷ್ಯ ಆಗಬಹುದೆಂದು. ಕೊಚ್ಚಿಯವರೂ ಈ ಸಂದರ್ಭದಲ್ಲಿ ಅವರಿಗೆ ಸಂಬಂಧಪಟ್ಟ ವಿಷಯವನ್ನು ಆಲೋಚಿಸುತ್ತಿದ್ದರು. ಕಂಣ್ಣೂರಿ ಶಂಕರ ಮೆನನ್ನರನ್ನು ಯಾಕೆ ಚೀಫ್ ಸೆಕ್ರೆಟರಿ ಮಾಡಬಾರದು? ಅವರೂ ಆರ್. ಟಿ. ಮೆನನ್‌ಗಿಂತ ಹೆಚ್ಚು ಇಷ್ಟಪಡುವುದು ಕೇಶವ ಪಿಳ್ಳೆಯನ್ನು. ಮಂತ್ರಿಸಭೆಯಾದರೋ ಮಲಬಾರಿನ ಕಡೆಗೇ ಬಾಗುತ್ತದೆ. ತಿರುವಾಂಕೂರು ಕೊಚ್ಚಿ ವಿಭಾಗದ ಮಂತ್ರಿಗಳು ದೊಡ್ಡ ಆದರ್ಶವಾದಿಗಳು. ಅವರು ಕೇರಳವನ್ನು ಒಂದಾಗಿ ಕಾಣಬೇಕೆಂದು ಭಾಷಣ ಮಾಡುವವರು. ಅಂದರೆ ಮಲಬಾರು ಪ್ರದೇಶದಿಂದ ಬಂದವರಿಗೆ ಅವರ ನಾಡಿನ ವಿಷಯವನ್ನು ಕಾಣುವ ಪ್ರಾಯೋಗಿಕ ಬುದ್ಧಿಯಿದೆ.

ಈ ಮಧ್ಯೆ ಸ್ಟೇಟ್ ಕಮಿಟಿ ಸೆಕ್ರೆಟರಿ ಕಮ್ಯುನಿಸ್ಟ್ ಗೋಪಿಯ ಭಾಷಣ ಒಂದು ಪತ್ರಿಕೆಯಲ್ಲಿ ಬಂದಿತು. ಅದು ಬಹಳ ಅರ್ಥವತ್ತಾದದ್ದಾಗಿ ಪ್ರಸ್ತಾಪಿಸಲ್ಪಟ್ಟಿತು. ಅದು ಉದ್ಯೋಗಸ್ಥರಿಗೆ ಪಾರ್ಟಿಯ ಕಡೆಯಿಂದ ಕೊಟ್ಟಿದ್ದ ಒಂದು ಮುನ್ಸೂಚನೆಯಾಗಿತ್ತು. ಅಕ್ರಮವನ್ನು ಕುರಿತು ಪದ್ಧತಿಯ ಪರಾಮರ್ಶೆಯ ನಂತರ ಹೊಸ ಸರ್ಕಾರದ ಪುರೋಗಮನಪರವಾದ ಕಾರ್ಯಕ್ರಮಗಳೊಡನೆ ಹೊಂದಿಕೊಂಡು ಹೋಗದವರು—ಅವರೆಷ್ಟೋ ಉನ್ನತರಾದರೂ ಹಿಂದಿರುಗಿ ಹೋಗುವುದು ಒಳ್ಳೆಯದೆಂದು

ಗೋಪಿ ಪ್ರಸ್ತಾಪಿಸಿದ್ದ. ಕೆಲವರಿಗೆ ಈ ಸರ್ಕಾರದ ಬಗ್ಗೆ ದ್ವೇಷ ಕಂಡುಬರುತ್ತದೆ. ಈ ಸರ್ಕಾರ ಅಧಿಕಾರಕ್ಕೆ ಬಂದಾಗಲೇ ಒಂದು ನೀರಸವಾದ ನಡವಳಿಕೆಯ ರೀತಿ ಕೆಲವರಿಗುಂಟಾದದ್ದು ಎಲ್ಲರ ದೃಷ್ಟಿಗೂ ಬಿದ್ದಿತು. ಕಮ್ಯುನಿಸ್ಟ್ ಪಾರ್ಟಿ—ಅದನ್ನು ಗಮನಿಸದೆ, ಅರ್ಥಮಾಡಿಕೊಳ್ಳದೆ ಇಲ್ಲ. ಅಂತಹ ಉದ್ಯೋಗಸ್ಥರು ಬದಲಾಯಿಸುವ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದಕ್ಕಾಗಿಯೂ ಮರ್ಯಾದೆಯ ಬಿಸಿ ತಾಗುವುದಕ್ಕಾಗಿಯೂ ಸ್ವಲ್ಪ ಸಮಯ ಕೊಡುತ್ತೇವೆ. ಅವರು ಸರಿಯಾಗುತ್ತಾರೋ ಹೇಗೆ ನೋಡೋಣ—ಹೀಗಿತ್ತು ಆ ಭಾಷಣದ ಧಾಟಿ. ಇದು ಕೇಶವ ಪಿಳ್ಳೆಯನ್ನಲ್ಲದೆ ಯಾರನ್ನು ಕುರಿತದ್ದಾಗಿತ್ತು? ಗೋಪಿ ಕೇಶವ ಪಿಳ್ಳೆಯನ್ನು ಚೆನ್ನಾಗಿ ಬಲ್ಲವನು ಎಂದು ತಿಳಿದಿದ್ದವರಿದ್ದರು. ಹಾಗೆ ಕೇಶವ ಪಿಳ್ಳೆ ಕಮ್ಯುನಿಸ್ಟ್ ಪಾರ್ಟಿಯ ದೃಷ್ಟಿಗೆ ಬಿದ್ದರು ಎಂದು ಜನರು ಮಾತನಾಡಿಕೊಳ್ಳುತ್ತಿದ್ದರು. ಅಂತು ಈ ವಾತಾವರಣದಲ್ಲಿ ಕೇಶವ ಪಿಳ್ಳೆಯ ಸುತ್ತ ತಿರುವಾಂಕೂರು, ಕೊಚ್ಚಿ ಭಾಗದಿಂದ ಬಂದಿದ್ದ ಕೆಲವು ನೌಕರರು ಸೇರಿದರು. ಜೀವನದಲ್ಲಿ ಅಂತಹ ಒಂದು ಅನುಭವ ಉಂಟಾದದ್ದು ಮೊತ್ತಮೊದಲಾಗಿ. ನಾಲ್ಕು ಜನರು ಸಹಾಯಕರಾಗಿ ಹಿಂದುಗಡೆ ಇರಬೇಕು. ಕೇಶವ ಪಿಳ್ಳೆಗೆ ಅವರಲ್ಲಿ ವಿಶ್ವಾಸವಿರಲಿಲ್ಲ.

ತಂಗಮ್ಮನಿಂದ ಪ್ರತಿ ದಿನ ಕಾಗದಗಳಿರುತ್ತಿದ್ದುವು. ವಿಷಯ ಇದೇ. ಶಬ್ದಗಳು ಬೇರೆ ಬೇರೆ ಇರುತ್ತಿದ್ದುವು—ಅವಳು ಆತನನ್ನು ಬಂಧಿಸಿದ್ದಂತೆ!

ಒಂದೆರಡು ದಿನಗಳು ವೇಸ್ಟ್ ಪೇಪರ್ ಬಾಕ್ಸ್‌ಗೆ ಹರಿದುಹಾಕಿದ್ದು. ಆಮೇಲೆ ಅನಂತರ ಅವುಗಳನ್ನು ತೆಗೆದುಕೊಂಡದ್ದು. ಆ ಒಗಟಿನ ಕತೆಯ ರಹಸ್ಯ ಬಯಲಾಗುತ್ತದೆ ಎಂದಾಗಿತ್ತು. ಅಂದೂ ವಿಶೇಷವೇನೂ ಇಲ್ಲ. ಅವಳಿಗೆ ಹುಚ್ಚು ಹಿಡಿಯಿತೆ? ಇದೆಂತಹ ಕೆಲಸ? ಈಗ ಕಾಗದಗಳಿಂದ ಮನಸ್ಸು ಚಾಂಚಲ್ಯಕ್ಕೊಳಗಾಗುವುದಿಲ್ಲ. ಒಂದು ಸಲ ಕಣ್ಣಾಡಿಸಿ ಹರಿದು ಉಂಡೆಮಾಡಿ ಎಸೆಯುತ್ತಿದ್ದದ್ದು. ಆ ಸುಪ್ರಧಾನವಾದ ದಿನದಲ್ಲಿ ಮುಂದಿನ ಜೀವನವನ್ನು ತೊಂದರೆಗೊಳಗುಮಾಡಲು ಅವಳು ಆ ಕಾಗದ ಬರೆದಳು. ನಿಜವಾಗಿಯೂ ಆ ಕಾಗದ ಇಲ್ಲದೇ, ಇದ್ದಿದ್ದರೆ ಪ್ರಮಾಣವಚನ ಸ್ವೀಕಾರದ ದಿನ ಯೋಗ್ಯ ರೀತಿಯಲ್ಲಿ ನಡೆದುಕೊಳ್ಳಬಹುದಾಗಿತ್ತು. ಯಾರಿಗೂ ಯಾವ ತಪ್ಪು ತಿಳುವಳಿಕೆಯೂ ಉಂಟಾಗುತ್ತಿರಲಿಲ್ಲ. ತಾನು ವಿತರ್ಕ್ಯೋಸ್ಕರ ಅಷ್ಟೊಂದು ಅಸ್ವಸ್ಥನಾದದ್ದು ಎಂದು ಕೇಶವ ಪಿಳ್ಳೆ ಚಿಂತಿಸುವುದುಂಟು. ಜೀವನವನ್ನು ಹಾಳುಮಾಡಿಕೊಳ್ಳುವುದಕ್ಕಾಗಿ.

ಸೆಕ್ರೆಟರಿಯೇಟ್‌ನಲ್ಲಿ ಕೆಲವು ಸ್ಥಾನ ಬದಲಾವಣೆಗಳುಂಟಾಗಲಿವೆ ಎನ್ನುವ ಸುದ್ದಿ ಊರಿನಲ್ಲಿ ಹರಡಿತು. ಮಂತ್ರಿಸಭೆಯೊಳಗೂ ಪಾರ್ಟಿಯ ಮೇಲುಮಟ್ಟದಲ್ಲೂ ಇದ್ದ ಆಲೋಚನೆ. ಡಿಪಾರ್ಟ್‌ಮೆಂಟ್ ಮೇಧಾವಿಗಳನ್ನು ಬದಲಾಯಿಸುತ್ತಾರೆ ಎಂದು. ಹೊಸ ಸರ್ಕಾರದ ಜೊತೆಯಲ್ಲಿ ಪ್ರೀತಿ ಇರುವವರನ್ನು ಮಾತ್ರ ಆ ಸ್ಥಾನಗಳಲ್ಲಿ

ನಿರಿಸುವುದಕ್ಕೆ ಹೊರಟಿದ್ದರು. ಲೇಬರ್ ಕಾಂಟ್ರಾಕ್ಟ್ ಸೊಸೈಟಿಗಳ ಮೂಲಕವೇ ರಾಜ್ಯದ ವಿಸ್ತರಣಾ ಯೋಜನೆಗಳು ನಡೆಯಬೇಕು. ಕಮ್ಯುನಿಸ್ಟರು ದೇಶವಿಡೀ ಆ ವಿಧವಾದ ಸಹಕರಣ ಸಂಘಗಳನ್ನು ರಿಜಿಸ್ಟರ್ ಮಾಡಿದ್ದಾಯಿತು. ಪಾನ ನಿರೋಧವಿಲ್ಲದ ಸ್ಥಳಗಳಲ್ಲೆಲ್ಲಾ ಏಲಂ ಕರೆಯದೆ ಈಡಿಗರ ಕಾರ್ಮಿಕ ಸಹಕಾರೀ ಸಂಘಗಳಿಗೆ ಕೊಡಲಿದ್ದಾರೆ. ಇದೆಲ್ಲ ಕಮ್ಯುನಿಸ್ಟರಿಗೆ ಹಣ ಸಂಪಾದಿಸುವುದಕ್ಕಾಗಿರುವ ವಿದ್ಯೆಗಳೆಂದು ಪ್ರಸ್ತಾಪಿಸಲ್ಪಟ್ಟಿತು. ಭೂಮಸೂದೆ, ವಿದ್ಯಾಭ್ಯಾಸ ಬಿಲ್ಲುಗಳನ್ನು ಆಚರಣೆಗೆ ತರುವುದಕ್ಕೆ ಹೊರಟಿದ್ದಾರೆ. ಇವುಗಳಿಗೋಸ್ಕರ ಈ ಒವಲಾವಣೆಗಳು. ಕಾಂಗ್ರೆಸಿನ ಮುಂದಾಳುಗಳೂ, ತಿರುವನಂತಪುರದ ಉದ್ಯೋಗಸ್ಥರೂ, ಕೇಶವ ಪಿಳ್ಳೆಯನ್ನು ಬಂದು ಕಂಡು ಕೊಂಡಿದ್ದರು. ಸೆಕ್ರೆಟರಿಯೇಟ್‌ನಲ್ಲಿ ಈಗ ಅವರೆಲ್ಲರಿಗೂ ಆಶ್ರಯಿಸುವುದಕ್ಕಾಗಿ ಒಬ್ಬನೇ ಇದ್ದದ್ದು. ಅದು ಕೇಶವ ಪಿಳ್ಳೆ. ಸಾಧ್ಯವಿದ್ದಷ್ಟು ಮಟ್ಟಿಗೆ ಈ ಸರ್ಕಾರದ ಈ ಧೋರಣೆಗಳನ್ನು ಪರಾಜಯಗೊಳಿಸಿಯೇ ತೀರಬೇಕು. ಈ ಧೋರಣೆಗಳೊಂದಿಗೆ ಕೇಶವ ಪಿಳ್ಳೆಗೆ ಹೊಂದಿಕೊಳ್ಳಲು ಸಾಧ್ಯವಿಲ್ಲ.

ಸೆಕ್ರೆಟರಿಯೇಟ್‌ನಲ್ಲಿ ಸೆಕ್ರೆಟರಿಯನ್ನು ಬದಲಾಯಿಸುವ ವಿಷಯ ಕ್ಯಾಬಿನೆಟ್‌ನಲ್ಲಿ ಆಲೋಚನೆಗೆ ಬಂದಿತು. ಆರ್. ಟಿ. ಮೆನನ್ನನನ್ನು ಒಬ್ಬ ಅನುಭವ ಸಂಪನ್ನನೆಂದು ವಿಸ್ತರಣಾ ಕಾರ್ಯಕ್ರಮಗಳ ಇಡೀ ಜವಾಬ್ದಾರಿಯ ಸೆಕ್ರೆಟರಿಯಾಗಿ ನೇಮಿಸಬೇಕೆಂದು ಮಂತ್ರಿಸಭೆಯ ಅಭಿಪ್ರಾಯ. ಚೀಫ್ ಸೆಕ್ರೆಟರಿಗೂ ಆತನ ಮೇಲೆ ಅಧಿಕಾರವಿಲ್ಲವೆಂದು ಹೇಳಲಾಯಿತು. ಹಾಗೆ ವಿಕಸನ ವಿಭಾಗವನ್ನು ಪುನರ್‌ರೂಪೀಕರಿಸುವ ಒಂದು ಪದ್ಧತಿ ರಚಿಸಿತು. ಕೇಶವ ಪಿಳ್ಳೆಗೆ ಅದನ್ನು ಮೌನವಾಗಿ ಒಪ್ಪಿಕೊಳ್ಳಲು ಸಾಧ್ಯವಿರಲಿಲ್ಲ.

ಅದು ಕೇಶವ ಪಿಳ್ಳೆಯ ಔದ್ಯೋಗಿಕ ಜೀವನದಲ್ಲಿ ಅಧಿಕಾರಿಗಳೊಂದಿಗಿದ್ದ ಮೊದಲನೆಯ ಸ್ಪರ್ಧೆಯಾಗಿತ್ತು. ಮಂತ್ರಿಸಭೆಯ ಆ ಅಭಿಪ್ರಾಯದೊಂದಿಗೆ ಕ್ಯಾಬಿನೆಟ್ ಸಭೆಗಿರುವ ವಿರೋಧವೆಂದು ಯಾವ ಮುಚ್ಚುಮರೆಯೂ ಇಲ್ಲದೆ ಕೇಶವ ಪಿಳ್ಳೆ ವ್ಯಕ್ತಪಡಿಸಿದರು. ಆರ್. ಟಿ. ಮೆನನ್ನರ ಬಗ್ಗೆ ಪಿಳ್ಳೆಗಿದ್ದ ಅಭಿಪ್ರಾಯವನ್ನು ತೆರೆದು ಹೇಳಿದರು. ಆರ್. ಟಿ. ಮೆನನ್, ಅವರ ಅಭಿಪ್ರಾಯದಲ್ಲಿ ಅರ್ಹನಲ್ಲ. ಚೀಫ್ ಸೆಕ್ರೆಟರಿ ತಲೆಯ ಮೇಲೆ ವಿಸ್ತರಣಾ ಕಾರ್ಯಕ್ರಮಗಳು ನಡೆಯುವುದರಿಂದ ಉಂಟಾಗುವ ತೊಂದರೆಗಳನ್ನು ಅನುಭವದಿಂದ ಹೇಳುತ್ತಿರುವಂತೆ ಹೊರಗೆಡಹಿದರು. ಅರ್ಹರಾದ ಉದ್ಯೋಗಸ್ಥರನ್ನು ಅಪ್ರಧಾನವಾದ ವಿಭಾಗಗಳಿಗೆ ನೇಮಿಸಿ, ಅರ್ಹರಲ್ಲದವರನ್ನು ಪ್ರಧಾನ ಸ್ಥಾನಗಳಿಗೆ ನೇಮಿಸುವುದನ್ನು ಅವರು ವಿರೋಧಿಸಿದರು. ಉದ್ಯೋಗಸ್ಥರನ್ನು ಕುರಿತು ಅಭಿಪ್ರಾಯವನ್ನು ತಿಳಿಸಲು ಅವಕಾಶ ಅವರಿಗಲ್ಲವೇ ಇರುವುದು? ಮಂತ್ರಿಗಳಿಗೆ ಆಡಳಿತದ ಪರಿಚಯವೇ ಇಲ್ಲವಲ್ಲ! ಮಂತ್ರಿಸಭೆಯ ಪದ್ಧತಿಯನ್ನಿಡೀ ಆ ರೀತಿಯಲ್ಲಿ ಕೇಶವ ಪಿಳ್ಳೆ ವಿರೋಧಿಸಿದರು. ಏಕೆಂದರೆ ಅದು ಆಡಳಿತದ ವಿಚಾರವಾಗಿತ್ತು. ಆದರೆ ಮಂತ್ರಿಸಭೆ ತನ್ನ ಯೋಜನೆಯನ್ನು ಅಂಗೀಕರಿಸಿತು. ಕೇಶವ ಪಿಳ್ಳೆಯ

ಅಭಿಪ್ರಾಯವನ್ನು ಮಿನಿಟ್ಸ್‌ನಲ್ಲಿ ಉಲ್ಲೇಖಿಸಲಾಯಿತು ಅಷ್ಟೆ.

"ಇಲ್ಲಿ ನೋಡು ಕಾತ್ಯಾಯಿನಿ, ನೀನು ಯಾವಾಗಲೂ ಹೇಳೋದಿಲ್ಲವಾ? ಈ ಉದ್ಯೋಗ ಕೈಬಿಟ್ಟು ಹೋಗೋಣ ಅಂತ. ಅದಕ್ಕೆ ಹೆಜ್ಜೆಯಿರಿಸಿ ಬಂದಿದ್ದೀನಿ" ಎಂದು ಹೇಳುತ್ತಾ ಕೇಶವ ಪಿಳ್ಳೆ ಅಂದು ಮನೆಯೊಳಕ್ಕೆ ಬಂದದ್ದು.

ಬೇಗನೇ ಹೊಸ ಸಂವಿಧಾನ ಆಚರಣೆಗೆ ಬಂದಿತು.

ಕಾಂಗ್ರೆಸ್ಸಿನೊಡನೆ ಹೊಂದಾಣಿಕೆಯಿರುವ ಪತ್ರಿಕೆಗಳು ಅತಿ ತೀಕ್ಷ್ಣವಾಗಿ ಈ ನಡವಳಿಕೆಯನ್ನು ನಿರೂಪಿಸಿದುವು. ಕಮ್ಯುನಿಸ್ಟ್ ಪತ್ರಿಕೆಗಳು ಅಭ್ಯುದಯದ ದೊಡ್ಡ ಕಾರ್ಯಕ್ರಮವೆಂದು ವ್ಯಾಖ್ಯಾನಿಸಿದುವು.

ಅನಂತರ ಚೀಫ್ ಸೆಕ್ರೆಟರಿಯ ವಿರೋಧಾಭಿಪ್ರಾಯವನ್ನು ಉಲ್ಲೇಖಿಸದೆ ಒಂದೇ ಒಂದು ಕ್ಯಾಬಿನೆಟ್ ಸಭೆಯೂ ನಡೆದಿರಲಿಲ್ಲ. ಕೇಶವ ಪಿಳ್ಳೆಗೆ ಆ ವಿಷಯದಲ್ಲಿ ಶಕ್ತಿಯಿತ್ತು; ಧೈರ್ಯವಿತ್ತು. ಬರುವುದು ಬರಲಿ ಎನ್ನುವುದಾಗಿತ್ತು. ಈಡಿಗರ ಕಾರ್ಮಿಕ ಸಂಘಕ್ಕೆ ಶೇಂದಿ ಹರಾಜುಗಳನ್ನು ಬಿಟ್ಟುಕೊಡುವುದು ರಾಜ್ಯದ ಆರ್ಥಿಕ ನೆಲೆಗಟ್ಟನ್ನು ಬಾಧಿಸುತ್ತದೆ ಎಂದು ಅವರು ಮುನ್ಸೂಚನೆ ಕೊಟ್ಟರು. ತುಂಬ ಮುಖ್ಯವಾಗಿ ಉಲ್ಲೇಖಿಸಿದ್ದು ಕಾರ್ಮಿಕ ಸಹಕಾರಿ ಸಂಘಕ್ಕೆ ಸಾರ್ವಜನಿಕ ಮರಾಮತ್ ಕೆಲಸಗಳನ್ನು ಕಡಿಮೆ ಬೆಲೆಗೆ ಕೊಡಲಿರುವ ನಿರ್ದೇಶವನ್ನು ಕುರಿತು. ಒಂದೇ ಒಂದು ಮಂತ್ರಿಸಭೆಯಲ್ಲೂ ಅದನ್ನು ಕಾರ್ಯಾಚರಣೆಗೆ ತರಲು ಮಂತ್ರಿಗಳಿಗೆ ಸಾಧ್ಯವಾಗಿರಲಿಲ್ಲ. ಅವರು ಒಟ್ಟಿಗೆ ನಿಂತಿದ್ದರು. ಎಂದೆಂದೂ ಯಾವುದಾದರೊಂದು ಅಡಚಣೆಗಳಿರುತ್ತಿದ್ದುವು. ಕಾನೂನಿನ ಪರವಾದ ಅಡಚಣೆಗಳು. ಅದು ಕೇಶವ ಪಿಳ್ಳೆ ಸೃಷ್ಟಿಸಿದ್ದೆಂದು ಮಂತ್ರಿಗಳು ತಿಳಿಸಬೇಕಾಗಿತ್ತು. ಆದರೆ ಅವರು ನಿಸ್ಸಹಾಯಕರಾಗಿದ್ದರು. ಸ್ಟೇಟ್ ಸೆಕ್ರೆಟರಿ ಗೋಪಿಯಿಂದ ತೀರ ರೂಕ್ಷವಾದ ಒಂದು ವಿಮರ್ಶೆಯಿತ್ತು. ಚೀಫ್ ಸೆಕ್ರೆಟರಿಯುನ್ನು ಕುರಿತು ನೇರವಾದ ಒಂದು ವಿಮರ್ಶೆಯಾಗಿತ್ತು ಅದು. ನಾಡಿನ ಸಾಮಾನ್ಯ ಜನಗಳಿಗೆ ಉಪಕಾರಿಯಾದ ಯೋಜನೆಗಳನ್ನು ಜಾರಿಗೆ ತರುವುದನ್ನು ಚೀಫ್ ಸೆಕ್ರೆಟರಿಯೇ ಸಾಂಕೇತಿಕ ತಡೆಗಳನ್ನುಂಟುಮಾಡುತ್ತಿದ್ದಾರೆ ಎನ್ನುವುದು ಪಾರ್ಟಿಯ ಗಮನಕ್ಕೆ ಬಂದಿರುವುದಾಗಿ ಗೋಪಿ ಹೇಳಿದ್ದದ್ದು. ಆದರೆ ಆ ಕೆಲಸವನ್ನು ಎಚ್ಚರಿಕೆಯಿಂದ ಮಾಡಬೇಕೆಂದು ಮುನ್ಸೂಚನೆ ಕೊಟ್ಟರು.

ಅನಂತರದ ದಿವಸಗಳಲ್ಲಿ ಕಾಂಗ್ರೆಸ್ ಪತ್ರಿಕೆಗಳಲ್ಲಿ ಒಂದು ಪ್ರಸ್ತಾವನೆ ಬಂದಿತು. ಅದು ಲೇಬರ್ ಕಾಂಟ್ರಾಕ್ಟ್ ಸೊಸೈಟಿಗಳನ್ನು ಕುರಿತಾಗಿತ್ತು. ಕಮ್ಯುನಿಸ್ಟ್ ಪಾರ್ಟಿಯ ಜಿಲ್ಲಾ ಮಟ್ಟದ ಮುಂದಾಳುಗಳು ಕಂಟ್ರಾಕ್ಟರಾಗುವುದಕ್ಕಾಗಿ ಮಾಡಿಕೊಂಡಿರುವ ಮಾರ್ಗಗಳು ಈ ಸೊಸೈಟಿಗಳು ಎನ್ನುವ ಸಂಗತಿಗಳನ್ನು ಉದ್ಧರಿಸಿ ಹೊರಬಂದಿದ್ದುವು. ಗೋಪಿ ಕೆಲವೇ ದಿನದಲ್ಲಿ ಮಾಡಿದ ಸಂಪಾದನೆಯನ್ನು ಕುರಿತು ಅದರಲ್ಲಿ ವಿಮರ್ಶಿಸಲಾಗಿತ್ತು. ದಿವಾನರ ಆಡಳಿತ ಕಾಲದಿಂದ ಪ್ರಾರಂಭವಾಗಿ ಎಷ್ಟೋ ಕೆಲಸಗಳನ್ನು

ಉಪೇಕ್ಷಿಸಿ ಈಟ್ಟಿಕಾಡು ಪರ್ವತದ ತಪ್ಪಲಿನಲ್ಲಿ ಹಾಗೆಯೇ ಬಿದ್ದಿರುವ ಹೈಡ್ರೊ ಎಲೆಕ್ಟ್ರಿಕ್ ಯೋಜನೆಯನ್ನು ತಾತ್ಕಾಲಿಕವಾಗಿ ಉಪೇಕ್ಷಿಸುವುದು ಒಳ್ಳೆಯದು ಎಂದು ಆರ್. ಟಿ. ಮೆನನ್ ಮಂತ್ರಿ ಸಭೆಗೆ ಶಿಫಾರಸ್ ಮಾಡಿದರು. ರಾಜ್ಯದ ವಿಸ್ತರಣಾ ಯೋಜನೆಗಳನ್ನು ಕುರಿತು ಆದಷ್ಟು ಬೇಗ ಸರ್ವೆ ನಡೆಸಿ ಪುನಃ ಸಂಘಟಿಸಬೇಕು. ಮಾಡಿದುದೆಲ್ಲ ಅಶಾಸ್ತ್ರೀಯ. ಹಾಗೆ ಸ್ವಲ್ಪ ಕಾಲದ ವರೆಗೆ ಎಲ್ಲ ವಿಸ್ತರಣೆಯ ಯೋಜನೆಗಳನ್ನೂ ನಿಲ್ಲಿಸಿ ಸರಿಯಾಗಿ ಅಭ್ಯಾಸ ಮಾಡಿ, ಹೊಸ ಯೋಜನೆಯನ್ನು ಜಾರಿಗೆ ತರಬೇಕು—ಎಂದಾಗಿತ್ತು ಆತನ ಸಲಹೆ.

[44]

## ರಕ್ತಸಾಕ್ಷಿಯ ತಂದೆ

ಯಾವುದೋ ಕೆಲವು ಪತ್ರಿಕೆಗಳಲ್ಲಿ. ಯಾತನೆ ಅನುಭವಿಸಿದ ಶಂಕರ ಪಿಳ್ಳೆ ಎನ್ನುವ ಒಬ್ಬ ಮನುಷ್ಯ ಸೆಕ್ರೆಟರಿಯೇಟ್ ಮುಂದೆ ಸತ್ಯಾಗ್ರಹ ನಡೆಸಲು ಹೋಗುತ್ತಾನೆ ಎನ್ನುವ ಅಪ್ರಧಾನವಾದ ಮಾತುಗಳಿದ್ದುವು. ಒಂದು ದಿನ ಬೆಳಗ್ಗೆ ಶಂಕರ ಪಿಳ್ಳೆ ಒಂದು ಪ್ಲಕ್ ಕಾರ್ಡ್ ಬರೆದು ಕುಳಿತಿದ್ದ. ಯಾರೂ ಮೆರವಣಿಗೆಯಿಂದ ಕರೆದು ಕೊಂಡು ಹೋಗಿ ಆ ಮನುಷ್ಯನನ್ನು ಅಲ್ಲಿ ಕೂರಿಸಿಲ್ಲ. ಘೋಷಣೆ, ಜನಸಮೂಹ —ಯಾವುದೂ ಇಲ್ಲ. ದಾರಿಹೋಕರು ಆ ಪ್ಲಕ್ ಕಾರ್ಡ್ ಕಡೆಗೆ ನೋಡಿಕೊಂಡು ಹೋದರು. ಕಾಂಗ್ರೆಸಿನವರೂ ಕಮ್ಯುನಿಸ್ಟರೂ ಅದನ್ನು ಗಮನಿಸಿಲ್ಲ. ಕಾಂಗ್ರೆಸ್ಸಿನ ಯಾತನೆಯ ಕೂಲಿಯನ್ನು ಕೊಡುವುದಕೆ ಕಮ್ಯುನಿಸ್ಟರಿಗೆ ಸಂಬಂಧಿಸಿದಂತೆ ಅಷ್ಟೊಂದು ಮುಖ್ಯ ವಿಷಯವೇನಲ್ಲ. , ತಮ್ಮನ್ನು ಅಪಮಾನ ಮಾಡುವುದಕ್ಕಾಗಿ ಒಬ್ಬ ಸಿದ್ಧತೆ ನಡೆಸಿದ್ದಾನೆ ಎಂದು ಕಾಂಗ್ರೆಸ್ಸಿನವರೂ ಭಾವಿಸಿದರು. ಪ್ಲಕ್ ಕಾರ್ಡಿನಲ್ಲಿ ನಿರಾಹಾರ ಸತ್ಯಾಗ್ರಹ ಎನ್ನುವ ಮಾತು ಕಂಡುಬಂದಿತು. ಮುಂದಿನ ದಿನ ಪೋಲೀಸರು ಶಂಕರ ಪಿಳ್ಳೆಯನ್ನು ಆ ಸ್ಥಳದಿಂದ ಕರೆದುಕೊಂಡು ಹೋದರು.

ಇನ್ನು ಮೇಲೆ ತನ್ನ ಕೆಲಸ ಆಯಿತು ಎನ್ನುವ ವಿಶ್ವಾಸದಲ್ಲಿ ಕೃಷ್ಣನ್ ತಿರುವನಂತಪುರಕ್ಕೆ ಹೋಗಿದ್ದ. ತನ್ನ ಸರ್ಕಾರ ಅಧಿಕಾರಕ್ಕೆ ಬಂದಿದೆಯಲ್ಲ. ಇನ್ನು ತಡವಾಗುವುದಿಲ್ಲ, ಲಂಚ ಕೊಡಬೇಕಾಗುವುದಿಲ್ಲ. ಮದುವೆಯ ದಿನವನ್ನೂ ನಿಶ್ಚಯಿಸುವುದರಲ್ಲಿ ತಪ್ಪಿಲ್ಲ ಎಂದು ಕೃಷ್ಣನ್ ನಂಬಿದ್ದ. ಹಾಗೆ ಕೃಷ್ಣನ್ ತಿರುವನಂತಪುರಕ್ಕೆ ಹೋದದ್ದು.

ಸೆಕ್ರೆಟರಿಯೇಟಿಗೆ ಆತ್ಮವಿಶ್ವಾಸದಿಂದಲೂ ಧೈರ್ಯದಿಂದಲೂ ಕೃಷ್ಣನ್ ಹೋದದ್ದು. ಆದರೆ ಸರ್ಕಾರದ ಭಾವನೆಯೇ ಬದಲಾಯಿಸಿತ್ತು. ಎಲ್ಲಿ ತನ್ನ ಕಾರ್ಯ ಮಾಡಿಸಿಕೊಳ್ಳಲು ಸಾಧ್ಯ ಎಂದು ಆತನಿಗೆ ಗೊತ್ತಿತ್ತು. ಆ ಮೂಲೆಯಲ್ಲಿ ಒಬ್ಬ ಕ್ಲಾರ್ಕ್ ಇದ್ದ. ಅಲ್ಲಿ ಕೇಳಬೇಕಾದದ್ದು.

ಹಗಲು ಹನ್ನೆರಡು ಗಂಟೆಯಾಗಿರಬಹುದು. ಹೆಚ್ಚು ಕುರ್ಚಿಗಳು ಖಾಲಿಯಾಗಿದ್ದುವು. ಹಿಂದೆ ಕಂಡಿದ್ದಂತೆಯೇ ಹತ್ತಿರ ಕುಳಿತಿದ್ದ ಹೆಂಗಸರು, ಗಂಡಸರು ಹರಟೆ ಹೊಡೆದುಕೊಂಡಿದ್ದರು. ವರಾಂಡದಲ್ಲಿ ಮೂರು ನಾಲ್ಕು ಜನರು ಮಾತನಾಡುತ್ತಿದ್ದರು. ಮೊದಲು ಕಂಡದ್ದಕ್ಕೂ ಈಗ ಕಾಣುವುದಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಆ ಕುರ್ಚಿ ಖಾಲಿಯಾಗಿದೆ. ಅದರಲ್ಲಿ ಕುಳಿತಿರುತ್ತಿದ್ದ ಮನುಷ್ಯ ಕಾಣುವುದಿಲ್ಲ. ಯಾವುದೋ ಒಂದು ವಿಶೇಷ ಘಟನೆಯುಂಟಾದಂತೆ ಕೃಷ್ಣನಿಗೆ ತೋರಿದ್ದು. ಕೃಷ್ಣನ್

ಸ್ವಲ್ಪ ಹೊತ್ತು ಅಲ್ಲಿಲ್ಲಿ ತಿರುಗಾಡಿದ. ಎಲ್ಲ ವಿಭಾಗಗಳ ಅವಸ್ಥೆಯೂ ಅದೇ ಆಗಿತ್ತು. ಪುನಃ ಆತ ಆ ಕ್ಲಾರ್ಕ್ ಕುಳಿತುಕೊಳ್ಳುತ್ತಿದ್ದ ಕುರ್ಚಿಯ ಕಡೆಗೆ ನೋಡಿದ. ಅಲ್ಲಿ ಯಾರೂ ಇಲ್ಲ. ಅದರ ಹತ್ತಿರ. ಬಾಗಿಲಲ್ಲಿ ಒಬ್ಬ ಜವಾನ ಒಂದು ಸ್ಟೂಲಿನ ಮೇಲೆ ಕುಳಿತು ತೂಕಡಿಸುತ್ತಿದ್ದ. ಕೃಷ್ಣನ್ ಅವನ ಹತ್ತಿರ ಹೋದ. ಜವಾನ ಕೇಳಿದ:

"ಏನು?"

ಕೃಷ್ಣನ್ ವಿನಯವಾಗಿ ಕೇಳಿದ: "ಆ ಕುರ್ಚೀಲಿ ಕುಳಿತುಕೊಳ್ಳೋದಿಲ್ಲವಾ ಅವರನ್ನು ಒಂದು ಸಲ ಕಾಣಬೇಕಾಗಿತ್ತು."

ಜವಾನ. ಅಡಿಯಿಂದ ಮುಡಿ ವರೆಗೆ ಕೃಷ್ಣನನ್ನು ನೋಡಿದ. ಕೃಷ್ಣನ್ ವಿಷಯ ಹೇಳಿದ: "ಒಂದು ವಿಷಯ ತಿಳಿದುಕೊಳ್ಳಬೇಕಾಗಿತ್ತು ಅದಕ್ಕೆ."

ಅಲ್ಲಿ ಸ್ವಲ್ಪ ದೂರದಲ್ಲಿ ಮೂರು ನಾಲ್ಕು ಜನರು ಮಾತನಾಡುತ್ತಿದ್ದಾರೆ— ಆ ಗುಂಪಿನಲ್ಲಿದ್ದಾರೆ ಎಂದು ಜವಾನ ಹೇಳಿದ. ಅಲ್ಲಿಗೆ ಕೃಷ್ಣನ್ ಹೋದ. ಅವರು ಯಾವುದೋ ಮುಖ್ಯವಾದ ವಿಷಯವನ್ನು ಮಾತನಾಡಿಕೊಂಡಿದ್ದರು. ಕೃಷ್ಣನ್ ತುಂಬ ಹೊತ್ತು ಅಲ್ಲಿ ನಿಂತುಕೊಂಡ. ಹಾಗೆ ಅಲ್ಲಿ ಅವರು ಏನು ಮಾತನಾಡುತ್ತಿರುವುದೆಂದು ತಿಳಿಯಲು ಸಾಧ್ಯವಾಯಿತು.

ಅಲ್ಲಲ್ಲಿ ಕ್ಲಾರ್ಕುಗಳು ಗುಂಪಾಗಿ ನಿಂತು ಆಲೋಚಿಸುವುದಕ್ಕೂ ಕುರ್ಚಿಗಳು ಖಾಲಿಯಾಗಿರುವುದಕ್ಕೂ ಕಾರಣ ಇಷ್ಟೇ! ಹೊಸ ಸರ್ಕಾರ ಒಂದು ಬದಲಾವಣೆ ನಡೆಸಿದೆ. ಸೆಕ್ರೆಟರಿಗಳು. ಅಸಿಸ್ಟೆಂಟ್ ಸೆಕ್ರೆಟರಿಗಳು ಮುಂತಾದವರನ್ನೆಲ್ಲ ಬದಲಾಯಿಸಿದ್ದಾರೆ. ಆ ವಿಷಯಕ್ಕೆ ಸಂಬಂಧಪಟ್ಟ ಊಹಾಪೋಹಗಳು. ಹೊಸ ಸರ್ಕಾರದಲ್ಲಿ ವಿಶ್ವಾಸವಿದ್ದವರನ್ನು ಕೆಲವು ಪ್ರಧಾನ ವಿಭಾಗಗಳಲ್ಲಿರಿಸಿದರು. ಅಷ್ಟೊಂದು ವಿಶ್ವಾಸವಿಲ್ಲದವರನ್ನು ಹೊರಗೆ ಕಳಿಸುವುದೋ ಪ್ರಧಾನವಾದ ವಿಭಾಗದಿಂದ ಕೈಬಿಡುವುದೋ ಮುಂತಾದ್ದನ್ನು ಮಾಡಿದ್ದಾರೆ. ಹಣಕಾಸಿನ ವಿಭಾಗಕ್ಕೆ ಬೇರೆ ಮನುಷ್ಯ ಬಂದಿದ್ದಾನೆ.

ಒಬ್ಬ ಕ್ಲಾರ್ಕ್ ಕೇಳಿದ: "ಹಾಗಾದರೆ ಈತ ಕಮ್ಯುನಿಸ್ಟ್ ಕಡೇನಾ?"

ಮತ್ತೊಬ್ಬ ಕ್ಲಾರ್ಕ್ ಉತ್ತರ ಹೇಳಿದ:

"ಮುವರಾಸಿನಿಂದ ಬಂದ ಮನುಷ್ಯನಲ್ಲವೇ? ಆ ದೊಡ್ಡ ಕಮ್ಯುನಿಸ್ಟ್ ಎಂ. ಪಿ.ಯ ಸಂಬಂಧಿ. ಆ ಪಕ್ಷದವನೇ ಆಗಿರಬೇಕು."

ಮತ್ತೊಬ್ಬ ಕೇಳಿದ:

"ಹಾಗಾದರೆ ಸೆಕ್ರೆಟರಿಗಳ ಬಣ್ಣವೆಲ್ಲ ಈ ಬದಲಾವಣೆಯಿಂದ ಗೊತ್ತಾಗುತ್ತೆ." ಹಾಗೆಂದು ತೋರುವುದೆಂದು ಮತ್ತೊಬ್ಬ ಹೇಳಿದ.

ನಾಲ್ಕನೆಯ ಮನುಷ್ಯನ ಸಂಶಯ ಅದಲ್ಲ.

"ಹಾಗಾದರೆ ಚೀಫ್ ಸೆಕ್ರೆಟರಿನ ಏನು ಮಾಡ್ತಾರೆ? ಎಲ್ಲಿಗೆ ಬದಲಾಯಿಸ್ತಾನೆ?"

ಅದೊಂದು ಬುದ್ಧಿವಂತಿಕೆಯ ಪ್ರಶ್ನೆ. ನಾಲ್ಕನೆಯುವನಂ ಮತ್ತೆ ಹೇಳಿದ: "ಆತ ಒಂದನೇ ನಂಬರ್ ಕಾಂಗ್ರೆಸ್."

ಈ ವಿಷಯಗಳಲ್ಲಿ ತಿಳಿದವನಾಗಿದ್ದ ಎರಡನೆಯುವನು ಉತ್ತರ ಹೇಳಿದ್ದು:

"ಅವನು ಹಾಗೆ ಸ್ವಲ್ಪ ಕೆಂಪು. ಈಗ ತುಂಬ ಕೆಂಪಲ್ಲವೇ? ಹಾಗೆ ಕಾಣಿಸುತ್ತೆ. ಕ್ಯಾಬಿನೆಟ್ಟಿನಲ್ಲಿ ಅವನು ಸಮರ್ಪಿಸಿದ ಲಿಸ್ಟನ್ನು ಅಂಗೀಕರಿಸಿದ್ದು ಅಂತ ಹೇಳ್ತಾರೆ. ಸರ್ಕಾರಕ್ಕೆ ಆತನನ್ನು ಕಂಡರೆ ವಿಶ್ವಾಸ. ಅಕ್ರಮ ನಿವಾರಣೆಯನ್ನು ಪುನಃರೂಪೀಕರಿಸಲು ಆತನಿಗೇ ವಹಿಸಿದೆ."

ಮೂರನೆಯುವನಿಗೆ ಭೇಷ್ ಎಂದು ಹೇಳುವುದೇ ಇದ್ದದ್ದು. ಚೀಫ್ ಸೆಕ್ರೆಟರಿ ರಾಜೀನಾಮೆ ಕೊಟ್ಟು ಚುನಾವಣೆಗೆ ನಿಂತು ಮಂತ್ರಿಯಾಗಲಿದ್ದಾರೆ ಎನ್ನುವ ವಿಷಯವೂ ಆ ಕೂಟದಲ್ಲಿ ಚರ್ಚಾವಿಷಯುವಾಗಿ ಬಂದಿತು.

ಎರಡನೆಯುವನು ಹೇಳಿದ:

"ಹಾಗೆಲ್ಲ ಆತ ದಡ್ಡತನ ಮಾಡಿಕೊಳ್ಳೋದಿಲ್ಲ. ಕಾಂಗ್ರೆಸ್ ಅಧಿಕಾರಕ್ಕೆ ಬರೋದಿಲ್ಲ ಅಂತ ಆತನಿಗೆ ಗೊತ್ತಿತ್ತು. ಮನುಷ್ಯ ಎಂಥಾ ನರಿ. ಈಗ ಹೇಗೆ ಅಂತೀರಿ? ಕಮ್ಯುನಿಸ್ಟರ ಸ್ವಂತ ಮನುಷ್ಯ."

ಮತ್ತೊಬ್ಬ ಆಶ್ಚರ್ಯಪಟ್ಟ:

"ಗೋವಿಂದ ಪಿಳ್ಳೆ ಮುಂತಾದವರಿಗೂ ಆ ಸಾಮರ್ಥ್ಯವಿಲ್ಲ." ಮೊದಲನೆಯವನು ಕೇಳಿದ:

"ಇನ್ನೂ ಎಷ್ಟು ದಿನ ಇದೆ?"

"ಹೆಚ್ಚು ದಿನ ಇದೆ ಅಂತ ಕಾಣೋದಿಲ್ಲ. ಒಂದೋ ಒಂದುವರೆ ವರ್ಷವೋ ಇದೆ."

ಅವರ ಮಾತನ್ನು ಕೇಳಿಸಿಕೊಳ್ಳುತ್ತಾ ಒಬ್ಬ ಅಲ್ಲಿ ನಿಂತಿರುವುದು ಆಗ ಅವನ ಗಮನಕ್ಕೆ ಬಂದದ್ದು.

ಒಬ್ಬ ಕೃಷ್ಣನ ಹತ್ತಿರ ಕೇಳಿದ:

"ಏನು ವಿಷಯ?"

"ಆ ಕುರ್ಚೀಲಿ ಕುಳಿತುಕೊಳ್ಳೋರನ್ನ ಒಂದು ಸಲ ಕಾಣಬೇಕು."

ಆ ಕ್ಲಾರ್ಕ್ ಆ ಗುಂಪಿನಲ್ಲಿದ್ದ. ಆತ ಕೇಳಿದ:

"ಏನಾಗಬೇಕು?"

ಕೃಷ್ಣನ್ ವಿಷಯವನ್ನು ವಿವರವಾಗಿ ತಿಳಿಸಿದ. ಆ ಗುಂಪಿನಲ್ಲಿದ್ದವನು ಆ ಕ್ಲಾರ್ಕಿಗೆ ಮುನ್ಸೂಚನೆ ಕೊಟ್ಟ:

"ಬೇಗ ಹೋಗು ಅದೇನು ಮಾಡಿಕೊಡು. ಅದು ಒಳ್ಳೆಯದು."

ಅವನು ಕೇಳಿದ: "ಯಾಕೆ?"

"ಕೆಲಸ ಹೋಗುತ್ತೆ. ಅಂಗಡಿ ಮುಚ್ಚುತ್ತೆ. ಒಂದು ಸೆಲ್ ಅದು. ಅರ್ಥ ಆಯಿತಾ?"

"ಓ! ಇಂಥಾದ್ದನ್ನೆಷ್ಟೋ ನೋಡಿದೆ. ಚಿಂತೆಯಿಲ್ಲ."

"ಹಾಗಿದ್ದರೆ ಬಂದಾಗ ಅದು ಗೊತ್ತಾಗುತ್ತೆ."

ಅಂತೂ ಆ ಕ್ಲಾರ್ಕು ತನ್ನ ಕುರ್ಚಿಯ ಪತ್ತಿರಕ್ಕೆ ಬಂದ. ಕೃಷ್ಣನ್ ಅವನ ಹಿಂದು ಗಡೆ ಬಂದ. ಎಷ್ಟೋ ಹೊತ್ತು ಆ ಕ್ಲಾರ್ಕು ದಪ್ಪನೆಯ ರಿಜಿಸ್ಟರ್‌ಗಳನ್ನು ನೋಡುವು ದನ್ನೂ, ಸೆಲ್ಫಿನ ಫೈಲುಗಳನ್ನು ಹುಡುಕುವುದನ್ನೂ ಮಾಡಿದ. ಅನಂತರ ಹೇಳಿದ:

"ಆ ಫೈಲು ಇಲ್ಲಿಲ್ಲ. ಕೆಲವು ದಿನಗಳ ಹಿಂದೆ ನಿಮ್ಮ ಅರ್ಜಿ ಇಲ್ಲಿಗೆ ಬಂದಿದ್ದ ಹಾಗೆ ಕಾಣಿಸುತ್ತೆ. ಅದನ್ನು ರೆವಿನ್ಯೂ ಬೋರ್ಡಿಗೆ ಕಳಿಸಿದ್ದಾಗಿದೆ."

ಕೃಷ್ಣನ್ ಸ್ತಂಭಿತನಾದ. ಅವನು ಹೇಳಿದ: "ಹಾಗಲ್ಲ ಸ್ವಾಮಿ, ಇಲ್ಲಿ ಮೊದಲು ಕುಳಿತಿದ್ದವರು ಹೇಳಿದ್ದು ಅದು ಆಡಿಟ್‌ಗೆ ಹೋಗಿದೆ ಅಂತ."

ಕ್ಲಾರ್ಕಿಗೆ ಅದು ಹಿಡಿಸಲಿಲ್ಲ. ಅವನು ಹೇಳಿದ: "ಹಾಗಿದ್ದರೆ ನೀವು ಅವರ ಹತ್ತಿರವೇ ಹೋಗಿ ಕೇಳಿ. ಹಾಗೇ ಮಾಡಿ."

ಕೃಷ್ಣನ್ ಕುಸಿದುಹೋದ: "ಹಾಗಾದರೆ ನಾನೀಗ ಏನು ಮಾಡಲಿ? ಈ ಸರ್ಕಾರ ಬಂದರೆ ಎಲ್ಲವೂ ಕೂಡಲೇ ನಡೆಯುತ್ತೆ ಅಂತ ಆಲೋಚಿಸಿದ್ದೆ. ಈ ಹಣ ಸಿಕ್ಕಬೇಕು— ಮದುವೆ ಮಾಡಬೇಕು. ಒಬ್ಬ ಮಗಳು ಮೈ ನೆರೆದು ನಿಂತಿದ್ದಾಳೆ. ನಾನು ಎರಡು ತಿಂಗಳೊಳಗೆ ಮದುವೆ ಮಾಡೋದಾಗಿ ಮಾತು ಕೊಟ್ಟಿದ್ದೇನೆ."

ಆ ಕ್ಲಾರ್ಕಿಗೆ ಸ್ವಾರಸ್ಯವಾಗಿ ತೋರಿತು. ಆತ ಕೇಳಿದ: "ಯಾರಿಗೆ ಮಾತು ಕೊಟ್ಟದ್ದು? ಹೆಣ್ಣಿಗಾ?"

ಆ ಪ್ರಶ್ನೆಯಲ್ಲಿ ಅಡಗಿದ್ದ ವಿಷ, ಆ ಸಾಧು ತಂದೆಗೆ ಅರ್ಥವಾಗಲಿಲ್ಲ. ಅವನು 'ಸೀದಾ ಬಾ ಸೀದಾ ಹೋಗು' ಎನ್ನುವ ರೀತಿಯಲ್ಲಿ ಹೇಳಿದ: "ಅಲ್ಲ, ಒಂದು ಕಡೆ ಯಿಂದ ಸಂಬಂಧ ಕೂಡಿಬಂದಿದೆ. ಅವರಿಗೆ ನಾನು ಏನು ಹೇಳಲಿ?"

ಕ್ಲಾರ್ಕ್ ತಲೆ ಅಲ್ಲಾಡಿಸಿದ. "ಹಾಗೋ? ಹಾಗಿದ್ದರೆ ಯಜಮಾನರ ಊರಿನಲ್ಲಿ ಸೆಲ್ಲುಂಟಾ; ಸೆಲ್ಲು?"

ಕೃಷ್ಣನಿಗೆ ಅದು ಅರ್ಥವಾಗಲಿಲ್ಲ. ಕ್ಲಾರ್ಕ್ ಅದನ್ನು ವಿಶದೀಕರಿಸಿದ. ಕಮ್ಯುನಿಸ್ಟ್ ಸೆಲ್ಲು. ಅಲ್ಲಿ ಒಂದು ಬ್ರಾಂಚಿದೆ. ಚಂದ್ರೇಶ ಅದರ ಮನುಷ್ಯ. ಕ್ಲಾರ್ಕ್ ಮತ್ತೆ ಕೇಳಿದ:

"ನೀವು ಯಾರಿಗೆ ಓಟು ಕೊಟ್ಟದ್ದು?"

ಅಷ್ಟು ಹೊತ್ತಿಗೆ ಮೂರು ನಾಲ್ಕು ಕ್ಲಾರ್ಕುಗಳು ಅಲ್ಲಿಗೆ ಬಂದರು. ಕೃಷ್ಣನ್ ಹೇಳಿದ:

"ಕಮ್ಯುನಿಸ್ಟರಿಗೆ."

ಆಗ ಅಲ್ಲಿಗೆ ಬಂದ ಕ್ಲಾರ್ಕುಗಳಲ್ಲಿ ಒಬ್ಬನಿಗೆ ಕೃಷ್ಣನ ಬಗ್ಗೆ ಅನುಕಂಪ ಉಂಟಾಯಿತು. ಅವನು ಜೊತೆಯವನ ಹತ್ತಿರ ಹೇಳಿದ:

"ವಿಷಯ ಹೇಳೋ!"

ಆ ಕ್ಲಾರ್ಕು ಅದಕ್ಕೆ ಸಿದ್ಧನಾದ. ಅವನು ಸಲಹೆ ಮಾಡಿದ:

"ನೀವು ಒಂದು ಕೆಲಸ ಮಾಡಿ. ರೆವಿನ್ಯೂ ಬೋರ್ಡ್ ಆಫೀಸಿಗೆ ಹೋಗಿ ಕೇಳಿ. ಆ ಮೇಲೆ ಅಕೌಂಟೆಂಟ್ ಆಫೀಸಿಗೆ ಹೋಗಿ ನೋಡಿ."

"ಇದ್ಯಾವುದೂ ಬೇಡ. ನಾನು ಒಂದು ಸುಲಭ ಮಾರ್ಗ ಹೇಳ್ಕೊಡ್ತೀನಿ. ಮಗನ ಹೆಸರಿನಲ್ಲಿ ಆಲಪ್ಪುಳ ಟ್ರೆಜರಿಯಲ್ಲಿ ಡಿಪಾಸಿಟ್ ಮಾಡಿದ್ದ ಹಣ ಹಿಂದಕ್ಕೆ ಕೊಡಬೇಕು ಅನ್ನೋ ಗೌರ್ಮೆಂಟ್ ಆರ್ಡರ್ ಕಾಣಿಸಿ ಒಂದು ಹೊಸ ಅರ್ಜಿ ಬರೆದು ಕೊಡಿ. ನಾನು ಸರಿಮಾಡಿ ಕೊಡ್ತೀನಿ."

ಕೃಷ್ಣನ್ ಹೇಳಿದ: "ನನಗೆ ಕೊಡಬೇಕೂಂತ ಆರ್ಡರ್ ಆಗಿದೆ. ನಾನು ಹಕ್ಕಿನ ಸರ್ಟಿಫಿಕೇಟನ್ನು ಹಾಜರ್ ಮಾಡಿದೆ. ಮೊದಲು ಇಲ್ಲಿದ್ದವರು ಸ್ಪ್ರೀ ಆಡಿಟ್‌ಗೆ ಹೋಗಿದೆ ಅಂತ ಹೇಳಿದರು—"

ಕ್ಲಾರ್ಕ್ ಕೇಳಿದ:

"ಹಾಗಿದ್ದರೆ ಯಜಮಾನರು ಒಂದು ಕೆಲಸ ಮಾಡಿ. ಈಗ ನೀವು ಹೋಗಿ. ಒಂದು ಗಂಟೆ ಆಯಿತು. ನಾವು ಕಾಫಿಗೆ ಹೋಗುವ ಸಮಯ. ಆ ಮೇಲೆ ಕೆಲಸವೂ ಇದೆ. ಸ್ಪ್ರೀ ಆಡಿಟ್‌ಗೆ ಹೋಗಿ ನೋಡಿ ಆ ಮೇಲೆ ಬನ್ನಿ."

ಕೃಷ್ಣನ್ ಸ್ವಲ್ಪ ಹೊತ್ತು ವಾದಿಸುತ್ತ ನಿಂತ. ಕ್ಲಾರ್ಕ್ ಶಾಂತವಾಗಿ ಹೇಳಿದ:

"ನೀವು ಒಮ್ಮೆ ಹೋಗಿ! ಸ್ಥಳ ಬಿಡಿ! ತೊಂದರೆ ಮಾಡಬೇಡಿ!"

ಕೃಷ್ಣನ್ ಹೊರಟುಹೋದ.

ಇಂತಹ ಒಂದು ಅನುಭವ ಇದಕ್ಕೆ ಮೊದಲು ಉಂಟಾಗಿರಲಿಲ್ಲ. ಆ ಕ್ಲಾರ್ಕ್ ತಮಾಷೆ ಮಾಡಿ ಕಳಿಸಿದ್ದು ಎಂದಲ್ಲ ಕೃಷ್ಣನಿಗೆ ಅನ್ನಿಸಿದ್ದು. ಮೊದಲು ದೊರೆತ ವಿವರವೋ, ಇದೋ ಯಾವುದು ಸರಿ ಎಂದು ಆಲೋಚನೆ! ಹೊಸದಾಗಿ ಒಂದು ಅರ್ಜಿ ಕೊಡುವುದಕ್ಕಾಗಿ ಹೇಳಿದುದು. ಹಾಗಾದರೆ ಹಳೆಯದೆಲ್ಲ ಹಕ್ಕಿನ ಸರ್ಟಿಫಿಕೇಟ್ ಮೊದಲುಗೊಂಡು ಎಲ್ಲವೂ ಬೇಕಾಗಬಹುದು. ಬೋರ್ಡ್ ಆಫೀಸಿನಲ್ಲೂ ಹೋಗಿ ಕೇಳಿಬರುವಂತೆ ಹೇಳಿದರು. ಆ ಆಫೀಸುಗಳು ಎಲ್ಲಿ ಎಂದು ತಿಳಿಯದು. ಒಟ್ಟಿನಲ್ಲಿ ತೊಂದರೆಗೊಳಗಾದ. ಇದು ವರೆಗೆ ಒಂದು ವಿಷಯ ಗೊತ್ತಿತ್ತು. ಆ ಕಾಗದ ಸ್ಪ್ರೀ ಆಡಿಟ್‌ಗೆ ಹೋಗಿದೆ ಎಂದು. ಈಗ ಅದೂ ತೊಂದರೆಯಾಯಿತು.

ಮೊದಲಿದ್ದ ಕ್ಲಾರ್ಕಿಗೆ ಸ್ವಲ್ಪವಾದರೂ ಮನುಷ್ಯತ್ವವಿತ್ತು. ಅತ ಸ್ವಲ್ಪ ವಯಸ್ಸಾಗಿದ್ದ ಮನುಷ್ಯನಾಗಿದ್ದ, ಪಕ್ವತೆಯಿದ್ದ ಮನುಷ್ಯನಾಗಿದ್ದ, ವಿಷಯ ಹೇಳುತ್ತಿದ್ದ.

ಎಲ್ಲವನ್ನೂ ತಾಳ್ಮೆಯಿಂದ ಕೇಳಿ ಅರ್ಥಮಾಡಿಕೊಳ್ಳುತ್ತಿದ್ದ. ಈಗ ಆ ಕುರ್ಚಿಯಲ್ಲಿ ಕುಳಿತಿರುವವನು ಅಂತಹ ಸಂದರ್ಭವನ್ನೇ ಉಂಟುಮಾಡಿ ಕೊಡಲಿಲ್ಲ.

ಸೆಕ್ರೆಟರಿಯೇಟಿನ ತೆಂಕುಭಾಗದ ವೃಕ್ಷದ ಅಡಿಯಲ್ಲಿ ಕೃಷ್ಣನ್ ಏನು ಮಾಡಬೇಕು ಎಂದು ತಿಳಿಯದೆ ಕುಳಿತಿದ್ದ. ಬೋರ್ಡ್ ಆಫೀಸ್ ಕಂಡುಹಿಡಿಯಬೇಕು. ಈ ಸ್ಟ್ರೀ ಆಡಿಟ್ ಎಲ್ಲಿ ಎಂದು ಅರ್ಥ ಮಾಡಿಕೊಳ್ಳಬೇಕು. ಆದರೆ ಅದನ್ನು ಯಾರ ಹತ್ತಿರ ಕೇಳುವುದು?

'ಶಿವಮಯಂ ಹೋಟೆಲಿ'ನಲ್ಲಿ ಡಿಸ್‌ಮಿಸ್ ಮಾಡಿ ಪುನಃ ಕೆಲಸಕ್ಕೆ ಪ್ರಯತ್ನಿಸುತ್ತಿದ್ದ ಒಬ್ಬ ಪೋಲೀಸಿನವನು ಬೇಕಾದ ಸಹಾಯ ಮಾಡುವುದಾಗಿ ಹೇಳಿದ. ಆದರೆ ಸ್ವಲ್ಪ ಹಣ ಖರ್ಚು ಮಾಡಬೇಕಾಗುತ್ತದೆ. ಹೆಚ್ಚೇನೂ ಬೇಡ. ನಾಲ್ಕೈದು ರೂಪಾಯಿ ಸಾಕು—ಅವನು ಒಂದು ಸತ್ಯ ಸಂಗತಿಯನ್ನು ಹೇಳಿದ:

"ಈಗ ನೀವು ಅಂದುಕೊಂಡಿರೋದು ನಿಮ್ಮ ಜನರು ಆಳೋದರಿಂದ ಲಂಚ ಬೇಕಾಗಿಲ್ಲ ಅಂತ ಅಲ್ಲವಾ? ನನಗೆ ಗೊತ್ತು. ಈಗ ಮಂತ್ರಿಯಾಗಿರೋ ಒಬ್ಬ ಮನುಷ್ಯನ ಕೈಯಿಂದ ರೂಪಾಯಿ ತೆಗೆದುಕೊಂಡಿದ್ದೀನಿ. ಒಂದು ಯೂನಿಯನ್ ಕೆಲಸದ ಮುಷ್ಕರದಲ್ಲಿ ಸಾಹುಕಾರರು ಪಾರಿತೋಷಕವನ್ನು ಆತನಿಗೆ ಕೊಟ್ಟದ್ದೂ ನನಗೆ ಗೊತ್ತು. ಅದನ್ನು ಆ ಕಡೆ ಬಿಡಿ."

ಆತನ ಮುಂದಿನ ಪ್ರಯತ್ನ ಹಾಗೆ ಪೋಲೀಸಿನವನ ಜೊತೆಯಲ್ಲಾಯಿತು. ರೆವಿನ್ಯು ಬೋರ್ಡ್ ಆಫೀಸಿನ ಒಬ್ಬ ಕ್ಲಾರ್ಕ್ ಮುಂಖಾಂತರ ಶ್ರಮಿಸಿದಾಗ ಅಕೌಂಟಾಫೀಸಿನಿಂದ ಕಂಡುಬಂದ ಆಸ್ತಿಪಾಸ್ತಿಯ ಸರ್ಕಾರದ ಆರ್ಡರ್‌ನ ನಂಬರ್ ತಾರೀಖುಗಳನ್ನು ಕೇಳಿದ್ದ ಒಂದು ಕಾಗದ ಮಾತ್ರ ಸಿಕ್ಕಿತು. ಅದಕ್ಕೆ ಉತ್ತರವನ್ನೂ ಕಳಿಸಿಲ್ಲ. ಆ ಫೈಲ್ ಅಲ್ಲೇ ಎಲ್ಲೋ ಇರಬೇಕು. ಕಂಡುಹಿಡಿಯಲು ಸಾಧ್ಯವಿಲ್ಲವೆಂದು ಆ ಗುಮಾಸ್ತ ಹೇಳುವುದು. ಅವನ ಅಭಿಪ್ರಾಯವೂ ಹೊಸದಾಗಿ ಅರ್ಜಿ ಕೊಡಬೇಕು ಎಂದು. ಇಲ್ಲಿಯ ವರೆಗೆ ಮಾಡಿದ್ದೆಲ್ಲವೂ ಹೋಗಲಿ. ಆದರೆ ತುಂಬ ತಡವಾಗುವುದೆನ್ನುವ ವಿಷಯವನ್ನು ಅವನೂ ತೀರ್ಮಾನಿಸಿಲ್ಲ. ಪುನಃ ಅಕೌಂಟ್ ಆಫೀಸಿನಲ್ಲಿಯೇ ಶ್ರಮಿಸಬೇಕು ಎಂದಾಯಿತು. ಆ ಆಫೀಸಿನ ಒಳಗೆ ಪ್ರವೇಶಿಸುವುದಕ್ಕೂ ಆ ಬಡ ಕೃಷ್ಣನಿಗೆ ಸಾಧ್ಯವಾಗಲಿಲ್ಲ. ಈ ಮಧ್ಯೆ ತಿರುವನಂತಪುರದ ಕಮ್ಯುನಿಸ್ಟ್ ಪಾರ್ಟಿ ಆಫೀಸಿಗೆ ಹೋಗಿ ಕಷ್ಟ ಹೇಳಿಕೊಂಡರೆ ಕೆಲಸ ಆಗಬಹುದೆಂದು ಯಾರೋ ಹೇಳಿದರು. ಕೃಷ್ಣನ್ ಆಫೀಸಿಗೆ ಹೋದ. ಅಲ್ಲಿ ಪರಿಚಯವಿದ್ದ ಒಬ್ಬನೂ ಕಾಣಿಸಲಿಲ್ಲ. ಆದರೂ ಸೆಕ್ರೆಟರಿಯ ಹತ್ತಿರ ಹೋಗಲು ಸಾಧ್ಯವಾಯಿತು. ಶ್ರದ್ಧಾಪೂರ್ವಕವಾಗಿ ಆತ ಎಲ್ಲವನ್ನೂ ಕೇಳಿಸಿಕೊಂಡು ವಿವರವನ್ನು ಕೇಳಿ ತಿಳಿದರು. ತನ್ನಿಂದ ಸಾಧ್ಯವಾದದ್ದನ್ನು ಮಾಡಿಕೊಡುವುದಾಗಿ ಮಾತು ಕೊಟ್ಟರು.

ಹೆಚ್ಚುಕಡಿಮೆ ಒಂದು ತಿಂಗಳಾಗಿತ್ತು, ಕೃಷ್ಣನ್ ತಿರುವನಂತಪುರಕ್ಕೆ ಹೋಗಿ.

ಪ್ರತಿ ದಿನ ಒಂದು ಹೊತ್ತು ಊಟ ಮಾಡುತ್ತಿದ್ದ. ಕೈಯಲ್ಲಿದ್ದ ಕಾಸೆಲ್ಲವೂ ತೀರಿತು. ಈ ಕೆಲಸಕ್ಕೆ ಹೊರಟಿದ್ದ ಕಾಲದಲ್ಲಿ ಹೇಗಿತ್ತೋ ಅದಕ್ಕಿಂತಲೂ ಅವ್ಯವಸ್ಥೆಯಾಗಿತ್ತು.

ಈ ಕೆಲಸಕ್ಕೆ ಹೊರಟು ಅಲೆಯಬಾರದಾಗಿತ್ತು. ಇದಕ್ಕೋಸ್ಕರ ಖರ್ಚುಮಾಡಿದ ಹಣವನ್ನು ಕೂಡಿಹಾಕಿದ್ದಿದ್ದರೆ ಮಂಗಳ ಮದುವೆಯನ್ನು ನಡೆಸಬಹುದಾಗಿತ್ತು. ಇದಕ್ಕಾಗಿ ಎಷ್ಟೋ ವರ್ಷಗಳು ಅಲೆದಾಡಿದ್ದಾಯಿತು. ಇಷ್ಟು ಕಾಲದಲ್ಲಿ ಇದಕ್ಕಾಗಿ ಹಾಳುಮಾಡಿಕೊಂಡ ದಿನಗಳಲ್ಲಿ ಕೂಲಿ ಮಾಡಿದ್ದರೂ ಆ ಹಣವನ್ನು ಸಂಪಾದಿಸಬಹುದಾಗಿತ್ತು. ಕೃಷ್ಣನ್ ಹಾಗೆ ಮೊತ್ತಮೊದಲಾಗಿ ಕಾರ್ಯಕಾರಣ ಸಂಬಂಧದಿಂದ ಆ ಸಂಗತಿಯನ್ನು ಕುರಿತು ಆಲೋಚಿಸತೊಡಗಿದ. ಹಿಂದೆಂದೂ ಈ ರೀತಿಯಲ್ಲಿ ಆಲೋಚಿಸಿರಲಿಲ್ಲ. ಇದೊಂದು ಮರೀಚಿಕೆಯಾಗಿತ್ತು. ಒಂದು ಆಸಕ್ತಿಯಿತ್ತು. ಕೃಷ್ಣನ್ ಊರಿಗೆ ಹಿಂದಿರುಗಿದ್ದದ್ದು ತೀರ ಅಸಹಾಯಕನಾಗಿ. ಇನ್ನು ಯಾವ ಮಾರ್ಗವೂ ಆತನ ಬುದ್ಧಿಗೆ ಹೊಳೆಯಲಿಲ್ಲ. ಆಲಪ್ಪುಳದ ಕಮ್ಯುನಿಸ್ಟ್ ಪಾರ್ಟಿ ಪುನ್ನಂಬ್ರ, ವಯಲಾರ್ ದಿನಾಚರಣೆ ಆಚರಿಸಲು ಒಟ್ಟುಗೂಡುತ್ತಿದ್ದ ಸಮಯ. ಕಮ್ಯುನಿಸ್ಟ್ ಸರ್ಕಾರ ಅಧಿಕಾರಕ್ಕೆ ಬಂದ ನಂತರ ಮೊದಲನೆಯ ಪುನ್ನಂಬ್ರ, ವಯಲಾರ್ ದಿನಾಚರಣೆ. ಆ ದಿನದಲ್ಲಿ ಅಂದಿನ ಸಡಗರಕ್ಕೆ ವಿಶೇಷ ಪ್ರಾಧಾನ್ಯತೆಯುಂಟಲ್ಲ !

ವರನ ಕಡೆಯವರು ವಿಷಯ ಏನಾಯಿತು ಎಂದು ಕೇಳಿದರು. ಕೃಷ್ಣನ್ ಯಾವ ಉತ್ತರ ಹೇಳಿಯಾನು? ಆ ದೀರ್ಘ ಕತೆಯನ್ನು ಕೇಳಲು ಅವರಿಗೆ ಹೆಚ್ಚು ಆಸಕ್ತಿಯೇನೂ ಇರಲಿಲ್ಲ. ಹಾಗೆ ದೀರ್ಘವಾಗುವುದಿದ್ದಲ್ಲಿ ಬೇರೆ ಮದುವೆಯನ್ನು ಆಲೋಚಿಸಬೇಕೆಂದು ಅವರು ಮುನ್ಸೂಚನೆ ಕೊಟ್ಟರು. ಕೃಷ್ಣನಿಗೆ ಒಂದು ಹತ್ತಿರದ ದಿನವನ್ನು ಹೇಳುವುದಕ್ಕೂ ಸಾಧ್ಯವಿರಲಿಲ್ಲ.

ನ್ಯಾಯ ದೊರಕಿಸಿಕೊಳ್ಳುವುದಕ್ಕಾಗಿ ತಿರುವನಂತಪುರಕ್ಕೆ ಹೋಗಿದ್ದ ಶಂಕರ ಪಿಳ್ಳೆ ಸೆಕ್ರೆಟರಿಯೇಟ್‌ನ ಬಾಗಿಲಿನಲ್ಲಿ ಕುಳಿತಿದ್ದುದನ್ನು ಕೃಷ್ಣನ್ ಕಂಡದ್ದುಂಟು. ಕಾಂಗ್ರೆಸ್ಸಿನವರ ಕೃತಘ್ನತೆಯನ್ನು ಕುರಿತು, ಅಸಭ್ಯತೆಯನ್ನು ಕುರಿತು ಆತ ಶಿವಮಯಂ ಹೋಟೆಲಿನಲ್ಲಿ ಹೋಗಿ ಹೇಳಿದ. ಇಡೀ ಬದುಕನ್ನು ಕಾಂಗ್ರೆಸ್ಸಿಗಾಗಿ ಸವೆಸಿದ ಆ ಬಡ ಮನುಷ್ಯನ ಕಡೆಗೆ ತಿರುಗಿ ನೋಡುವ ಜನರಿಲ್ಲದಂತಾಯಿತು. ಆದರೆ ತನ್ನ ಕಥೆಯೇನು?

ಕೃಷ್ಣನ್ ಅವನ ಊರಿನ ಲೋಕಲ್ ಕಮಿಟಿ ಸೆಕ್ರೆಟರಿಯನ್ನು ಕಂಡು ವಿವರವನ್ನೆಲ್ಲ ತಿಳಿಸಿದ. ಅವನು ಸಹಾನುಭೂತಿಯಿಂದ ಕೇಳಿಸಿಕೊಂಡು ಅನಂತರ ಹೇಳಿದ: "ಏನಾದರೂ ಪರಿಹಾರ ಮಾಡೋಣ. ಈ ಪುನ್ನಂಬ್ರ ವಯಲಾರ್ ದಿನಾಚರಣೆ ಕಳೆಯಲಿ." ಕೃಷ್ಣನಿಗೆ ಆ ಉತ್ತರ ಅಷ್ಟಾಗಿ ಹಿಡಿಸಲಿಲ್ಲ.

"ತಿಂಗಳು ಬೆಳಕು ಬರೋವರೆಗೆ ಕಂದಿ ನಿಲ್ಲುತ್ತಾ, ಸ್ವಾಮಿ, ಅವರು ಬೇರೆ ಕಡೆ ಸಂಬಂಧ ನೋಡ್ತಾರೆ."

ಸೆಕ್ರೆಟರಿಗೆ ಅದೊಂದು ದೊಡ್ಡ ವಿಷಯವಾಗಿರಲಿಲ್ಲ. "ಹಾಗಿದ್ದರೆ ನಾವು ಬೇರೆ ಕಡೆ ಸಂಬಂಧ ನೋಡಿದರಾಯಿತು. ಅವರು ಹೋದರೆ ಹೋಗಲಿ."

ದಿಕ್ಕು ಕಾಣದ ಆ ಮುದುಕ ನಡುಗುತ್ತ ನಿಂತ. ಆತನ ಅಂತರಂಗ ವೇದನೆಗೊಳಗಾಯಿತು. ಆದರೆ ಆತ ಅದನ್ನು ಅದುಮಿಕೊಂಡ. ಏತಕ್ಕೆ ಎಂದು ತಿಳಿಯದು.

ಆ ಮಧ್ಯೆ ಮತ್ತೊಂದು ಹೇಳಿಕೆ ಅಲ್ಲಿ ಹೊರಟಿತ್ತು. ಕಾಂಗ್ರೆಸ್‌ನವರು ಪುನ್ನಂಪ್ರ ವಯಲಾರ್ ಪಂಚನಾದಿನ ಆಚರಿಸುತ್ತಿದ್ದರು. ಅದೇನು ಎಂದು ಕೃಷ್ಣನ್ ಸ್ವಲ್ಪ ಮಟ್ಟಿಗೆ ಒಂದು ಟೀ ಹೋಟೆಲಿನಲ್ಲಿ ತಿಳಿದ. ಕಮ್ಯುನಿಸ್ಟ್ ನೇತೃತ್ವದಲ್ಲಿ ಅವರಿಗೆ ರಕ್ತಸಾಕ್ಷಿಗಳನ್ನು ಕೊಡುವುದಕ್ಕಾಗಿ ಎಷ್ಟೋ ಮನುಷ್ಯರನ್ನು ಬಲಿಕೊಟ್ಟರು ಎಂದು ಪುನ್ನಂಪ್ರ ವಯಲಾರನ್ನು ಕುರಿತು ಆತ ಆಗ ತಿಳಿದದ್ದು.

ಆ ಅರಿವು ಆ ತಂದೆಯ ತಲೆಗೆ ಎಲ್ಲಿಯೋ ಹೋಗಿ ತಲಪಿತು. ಅದೊಂದು ನಡುಕವಾಗಿತ್ತು. ಆ ನಡುಕದ ಫಲ ಹಿಡಿತಪ್ಪಿ ಹೋದ ಒಂದು ಚಿಂತಾಗತಿಯಾಗಿತ್ತು. ಅವನು ತನಗೆ ತಾನೇ ಕೇಳಿಕೊಂಡ:

"ಅದೊಂದು ವಂಚನೆಯಾಗಿತ್ತೆ?"

ಆ ಪ್ರಶ್ನೆಯನ್ನು ಕೃಷ್ಣ ಹಿಂದಕ್ಕೆ ತೆಗೆದುಕೊಂಡ. ಆಗಿರಲಿಲ್ಲ ಎಂದು ಉತ್ತರವನ್ನು ಹೇಳಬೇಕೆಂದು ಕೃಷ್ಣನ ಆಗ್ರಹ. ಆದರೆ ಅದೇ ಪ್ರಶ್ನೆ ನಾನಾ ಭಾಗದಿಂದ ಹೊರಟುಬರುತ್ತಿತ್ತು. ಸದಾಶಿವ ಗುಂಡಿನೇಟು ಬಿದ್ದು ಸತ್ತ. ಅದರಿಂದ ಯಾರಿಗೆ ಗುಣವಾಯಿತು? ತನಗೋ, ಅವನ ಏಕ ಸಹೋದರಿಗೋ? ಹಾಗೆ ಆ ದೃಷ್ಟಿಯಲ್ಲಿ ಕೃಷ್ಣನ ಚಿಂತನೆ ಮುಂದುವರಿದದ್ದು. ಆ ರಕ್ತಸಾಕ್ಷಿಗಳ ಹೆಸರಿನಲ್ಲಿ ಎಷ್ಟೋ ಲಕ್ಷ ಬಡವರು ಓಟು ಹಾಕಿದ್ದರು. ಚುನಾವಣೆಯ ದಿನ ಆ ಪತ್ರಿಕೆಯನ್ನು ತೆಗೆದುಕೊಂಡು ಪೆಟ್ಟಿಗೆಯಲ್ಲಿಟ್ಟದ್ದು ಮಗನನ್ನು ಜ್ಞಾಪಿಸಿಕೊಂಡು. ಮೀಟಿಂಗುಗಳ ಭಾಷಣವನ್ನು ಕೇಳುವಾಗ ಘೋಷಣೆಗಳನ್ನು ಕರೆಯುತ್ತ ಮೆರವಣಿಗೆ ಹೋಗುವಾಗ ಆತನಿಗೆ ಆವೇಶವುಂಟಾಗುತ್ತಿತ್ತು. ಅದು ಮಗನ ಹೆಸರಿನಲ್ಲಿ. ಯಾವುದೋ ಒಂದು ಒಳ್ಳೆಯ ಕೆಲಸಕ್ಕಾಗಿ ಅವನು ಧಾವಿಸಿ ಬರುವ ಗುಂಡಿಗೆ ಎದೆಯೊಡ್ಡಿದ್ದ. ಅಲ್ಲಿ ಸುಡುಗಾಡಿನಲ್ಲಿ ಹರಡಿಕೊಂಡು ಬಿದ್ದಿರುವ ಕಪ್ಪು ಮರಳಿನಲ್ಲಿ ಅವನ ದೇಹವನ್ನು ದಹಿಸಿದ ಬೂದಿಯೂ ಇತ್ತು. ಆ ಬೂದಿಯ ಪುಡಿ ಈಗ ಸಹೋದರಿಯ ಸ್ಥಿತಿಯನ್ನು ಕಂಡು, ತಂದೆಯ ಅಲೆದಾಟವನ್ನು ಕಂಡು ಅಳುತ್ತಿರಬೇಕು. ಅದಲ್ಲದಿದ್ದರೆ ನಿಷ್ಪ್ರಯೋಜನವಾದ ಜೀವಾರ್ಪಣೆಯಿಂದ ಪರಿತಪಿಸಿ ನಂದಿಹೋಗುತ್ತಿರಬೇಕು. ಅದೂ ಅಲ್ಲದಿದ್ದರೆ ಸಿಟ್ಟುಗೊಂಡಿರಬೇಕು.

ಆ ಆತ್ಮಕ್ಕೆ ತನ್ನ ಹತ್ತಿರ ಏನೋ ಹೇಳಲಿರುವಂತೆ ಕೃಷ್ಣನಿಗೆ ತೋರಿತು. ಅವನಿಗೂ ಏನನ್ನೋ ಕೇಳಿ ತಿಳಿದುಕೊಳ್ಳಬೇಕಾಗಿತ್ತು.

ಅಂದು ಪುನ್ನಂಪ್ರದಲ್ಲಿ ತೆಂಗಿನ ಓಲೆಯ ತುದಿಯಿಂದ ಕೇಳಿಬರುತ್ತಿದ್ದ ಮರ್ಮರ

ಧ್ವನಿಯಲ್ಲಿ ಅವನಿಗೆ ಹೇಳಬೇಕಾದದ್ದೆಲ್ಲವೂ ಇರಬಹುದು. ಆ ಭಾಷೆ ಅರ್ಥವಾಗುವುದಿಲ್ಲ. ಎಲ್ಲಿ ಹುಡುಕುವುದು ಅವನನ್ನು? ಎಲ್ಲಿ ಹುಡುಕಿ ಅವನ ಶಬ್ದವನ್ನು ಕೇಳುವುದು?

ರಕ್ತಸಾಕ್ಷಿಯ ದಿನವನ್ನು ಸಂಭ್ರಮದಿಂದ ಆಚರಿಸುವ ಸಡಗರ. ಮಂತ್ರಿಗಳಾರೋ ಬರಲಿದ್ದಾರೆ—ಅದೇ ರೀತಿಯಲ್ಲಿ ಮಂಚನಾದಿನವನ್ನು ಆಚರಿಸಲಿದ್ದರು. ಯಾರೋ ದೊಡ್ಡ ಕಾಂಗ್ರೆಸ್ ಮುಂದಾಳುಗಳು ಬರಲಿದ್ದರು. ಶಂಕರ ಪಿಳ್ಳೆಯಂಥವರಿಂದ—ಅವರು ಸಾಹುಕಾರರೂ ಮುಂದಾಳುಗಳೂ ಆದರು. ಎಷ್ಟೋ ಮಂದಿ ಸದಾಶಿವರ ಸಾವಿನಿಂದ ಉಳಿದವರು ಮುಂದಾಳುಗಳಾದರು ಎನ್ನಿಸಿತು ಆ ಬಡ ಕೃಷ್ಣನಿಗೆ.

ಬ್ರಾಂಚ್ ಕಮಿಟಿ ಸೆಕ್ರೆಟರಿಯ ಹತ್ತಿರ ನಾಲ್ಕು ಮಾತು ಹೇಳಬೇಕೆಂದು ಕೃಷ್ಣನ್ ತೀರ್ಮಾನಿಸಿದ. ಅದನ್ನು ಹೇಳಿದರೇ ಆತನ ಮನಸ್ಸು ಸಮಾಧಾನಗೊಳ್ಳುತ್ತಿತ್ತು. ಆದರೆ ಏಕಾಂತದಲ್ಲಿ ಆ ವಿಷಯವನ್ನು ಹೇಳಲು ಸಾಧ್ಯವಿಲ್ಲ. ಸೆಕ್ರೆಟರಿ ತುಂಬ ಕೆಲಸದ ಗಡಿಬಿಡಿಯಿದ್ದ ಮನುಷ್ಯನಾದ—ಬ್ರಾಂಚ್ ಕಮಿಟಿ ಆಫೀಸು ಜನರಿಂದ ತುಂಬಿದ ಸ್ಥಳವಾಯಿತು. ಅಲ್ಲಿ ಯಾವಾಗಲೂ ಜನರು ಒಂದೊಂದು ವಿಷಯಕ್ಕಾಗಿ ತುಂಬಿಕೊಂಡಿರುತ್ತಿದ್ದರು.

ಪುನ್ನಂಬ್ರ ವಯಲಾರ್ ದಿನ ಬಹು ದೊಡ್ಡ ಮೆರವಣಿಗೆಯಲ್ಲಿ, ಈ ವರ್ಷ ಕೃಷ್ಣನ್ ದಾರಿಯ ಪಕ್ಕದಲ್ಲಿ ನಿಂತ ಪ್ರೇಕ್ಷಕನಾಗಿದ್ದ. ಗಟ್ಟಿಯಾದ ಘೋಷಣೆಗಳನ್ನು ಕೂಗುತ್ತ ಸಾಲು ಸಾಲಾಗಿ ಹೋಗುತ್ತಿದ್ದವರನ್ನು ಕೃಷ್ಣನ್ ದಿಟ್ಟಿಸಿ ನೋಡಿದ. ಮೊದಲು ಎಂದೂ ಇಷ್ಟು ದೊಡ್ಡ ಮೆರವಣಿಗೆಯನ್ನು ಆ ದಿನದ ಹಾಗೆ ಕಂಡಿಲ್ಲ. ಅದಕ್ಕೆ ಅಷ್ಟೊಂದು ಶೋಭೆಯುಂಟಾಗಿತ್ತು. ಒಂದು ರೀತಿಯ ಉತ್ಸಾಹವಿತ್ತು. ಮೊದಲು ಹೀಗೆಲ್ಲ ಇರಲಿಲ್ಲ. ಯಾವುದೋ ಬದಲಾವಣೆಗಳು ಬಂದಿವೆ. ಬಾವುಟಗಳ ಕೆಂಪು ಬಣ್ಣಕ್ಕೆ ಒಂದು ಪ್ರಕಾಶವುಂಟಾದಂತೆ ತೋರಿತು. ನಿರ್ಧಾರ ಮಾಡಿ ಬಂದವರ ಮೆರವಣಿಗೆ ಇದು. ಒಳ್ಳೆಯ ಪಂಚೆ ಉಟ್ಟವರಿದ್ದರು. ಆ ಆವೇಶವಿಲ್ಲ. ಮೊದಲು ಇಂತಹ ಮೆರವಣಿಗೆಯಲ್ಲಿ ಪಾಲುಗೊಳ್ಳುವವರಿಗೆ ಒಂದು ವಿಶೇಷತೆಯಿತ್ತು. ಕಣ್ಣುಗಳು ಕೆಂಡದಂತಿರುತ್ತಿದ್ದುವು. ಅದಕ್ಕೆ ಕಾರಣವಿದೆ—ಪುನ್ನಂಬ್ರದಲ್ಲಿ ಗುಂಡೇಟು ಬಿದ್ದು ಸತ್ತವರೆಲ್ಲರೂ ಕೃಷ್ಣನಿಗೆ ಗೊತ್ತಿತ್ತು. ಅವರಲ್ಲಿ ಹೆಚ್ಚು ಜನರಿಲ್ಲ. ಗೋವಿಂದ ಕಾಣುವುದಿಲ್ಲ. ಅಂತಪ್ಪನನ್ನು ಕಾಣಲು ಕೃಷ್ಣನ್ ಶ್ರಮಿಸಿದ. ಕೇಶವನ ವಿಧವೆಯಿಲ್ಲ. ಅಲಿಯ ಕುಂಟಪ್ಪ ಆ ಮೆರವಣಿಗೆಯ ಜೀವವಾಗಿದ್ದ. ಅವನು ಸತ್ತಿಲ್ಲ. ಆದರೆ ಅವನು ಕಾಣಿಸುತ್ತಿಲ್ಲ. ಅವರೆಲ್ಲ ಭೂಮಿಯನ್ನು ನಡುಗಿಸುವವರಾಗಿದ್ದರು. ಹಾಗೆ ಒಬ್ಬೊಬ್ಬರನ್ನಾಗಿ ಕಂಡುಹಿಡಿಯಲು ಕೃಷ್ಣನ್ ಶ್ರಮಿಸಿದಾಗ ಬೇರೆ ಕೆಲವರನ್ನು ಆ ಮೆರವಣಿಗೆಯಲ್ಲಿ ಕಂಡನು—ಕಳೆದ ವರ್ಷ ಆ ಮೆರವಣಿಗೆಗೆ ಕಲ್ಲು ಎಸೆದಿದ್ದ ಜೋಸೇಫ್ ಈಗ ಒಂದು ಕೆಂಪು ಬಾವುಟ ಹಿಡಿದು ಹೋಗುತ್ತಿದ್ದ. ಮೆರವಣಿಗೆಯನ್ನು

ಚದುರಿಸಿದ್ದ ಪಪ್ಪುವೂ ಅದರಲ್ಲಿದ್ದ. ಪಪ್ಪುವಿನ ಕೆಲಸ ಯಾವಾಗಲೂ ಮೆರವಣಿಗೆ ಚದುರಿಸುವುದೇ ಆಗಿತ್ತು. ಹಿಂದಿನ ವರ್ಷಗಳಲ್ಲಿ ವಂಚನಾ ದಿನಗಳಲ್ಲಿ ಪಾಲುಗೊಂಡ ಕೆಲವರಿದ್ದರು. ಯಾಕೆ ಕಂಟ್ರಾಕ್ಟರ್ ಕೊಚ್ಚುಕೋಷಿ ಪುನ್ನಂಬ್ರ ವೈಲಾರ್ ದಿನದಲ್ಲಿ ರಕ್ತಸಾಕ್ಷಿಗಳಿಗೆ ಅಭಿನಂದನ ಸಮರ್ಪಿಸುವುದಕ್ಕೆ ಹೊರಟಿದ್ದಾನೆ. ಕೊಚ್ಚುಕೋಷಿ ಇಪ್ಪತ್ತೆರಡರಲ್ಲಿ ಮನೆಮನೆಗಳಿಗೆಲ್ಲ ನುಗ್ಗಿ ಬೇಟೆಯಾಡುವುದಕ್ಕೆ ಬಂದ ಸೈನಿಕರ ಜೊತೆಯಲ್ಲಿ ಓಡಾಡಿದವನು. ಈ ಬಡ ಕೃಷ್ಣನಿಗೆ ಯಾವುದೂ ಅರ್ಥವಾಗಲಿಲ್ಲ. ಅಂದು ಸೇರಿದ ಸಭೆ ದೊಡ್ಡ ಸಭೆಯಾಗಿತ್ತು. ಒಬ್ಬರಲ್ಲ ಇಬ್ಬರು ಮಂತ್ರಿಗಳು ಭಾಗವಹಿಸಿದ್ದರು.

ಅಂತೂ ಮುಂದಿನ ದಿನ ನಡೆದ ವಂಚನಾ ದಿನದಲ್ಲಿ ರ್‍ಯಾಲಿ, ಮೀಟಿಂಗುಗಳು ಅಂತಪ್ಪನಿಗೂ ಕುಂಟ ಫರೀದನಿಗೂ ಸಂಬಂಧಿಸಿದ್ದನ್ನು ಕೃಷ್ಣನಿಗೆ ಸಹಿಸಲು ಸಾಧ್ಯವಿಲ್ಲ. ಅವರು ಕಾಂಗ್ರೆಸ್ಸಿನವರ ಚರಕವಿದ್ದ ಬಾವುಟವನ್ನು ಹಿಡಿದಿದ್ದರು. ಅವರು ಘೋಷಣೆಗಳನ್ನು ಮಾಡುತ್ತಿದ್ದರು. ಅದು ಕಷ್ಟವಾಯಿತು—ಫರೀದನನ್ನೂ ಅಂತಪ್ಪನನ್ನೂ ಕಂಡು ಅದು ಸರಿಯೇ ಎಂದು ಕೇಳಬೇಕೆಂದು ಕೃಷ್ಣನಿಗೆ ತೋರಿತು. ಆದರೆ ಹೇಗೆ ಮುಖ ನೋಡಿ ಮಾತನಾಡುವುದು?

ಮುಂದಿನ ಎರಡು ದಿನಗಳು ಕಳೆದುವು. ಸೆಕ್ರೆಟರಿಯನ್ನು ಕಂಡು ಈ ವಿಷಯಗಳನ್ನೆಲ್ಲ ಮಾತನಾಡಬೇಕೆಂದಿತ್ತು. ತುಂಬ ವಿಷಯಗಳನ್ನು ಹೊರಗೆ ಹಾಕಬೇಕಾಗಿತ್ತು. ಸ್ವಂತ ವಿಷಯವೂ ಇತ್ತು. ರಕ್ತಸಾಕ್ಷಿಯ ದಿನ ಕಳೆಯಲಿ ಎಂದಲ್ಲವೋ ಹೇಳಿರುವುದು? ಹಾಗೆ ಒಂದು ದಿನ ಕೃಷ್ಣನ್ ಪಾರ್ಟಿ ಆಫೀಸಿಗೆ ಹೋದದ್ದು.

ಅಂದು ಎಂದಿಗಿಂತ ಹೆಚ್ಚು ಜನರಿದ್ದರು. ಒಮ್ಮೆಯೂ ಪಾರ್ಟಿ ಆಫೀಸಿಗೆ ಬಾರದ ಕೆಲವರಿದ್ದರು. ಮಟ್ಟತ್ತು ಕೃಷ್ಣ ಕೈಮಳ್, ಎರಾತ್ ಅಂಥೋಣಿ ಮಾಪಿಳ್ಳೆ ಮುಂತಾದ ಕೆಲವರು—ಕೃಷ್ಣನಿಗೆ ಯಾವುದೂ ಅರ್ಥವಾಗಲಿಲ್ಲ. ಇವರೆಲ್ಲ ಪಾರ್ಟಿ ಆಫೀಸಿಗೆ ಬರುತ್ತಿದ್ದಾರೆ. ಕೃಷ್ಣನಿಗೆ ಅದನ್ನು ನಂಬುವುದಕ್ಕೂ ಸಾಧ್ಯವಿರಲಿಲ್ಲ. ಇವರೂ ಕಮ್ಯುನಿಸ್ಟರಾದರು ಎಂತಲೇ. ಒಟ್ಟಿನಲ್ಲಿ ಕೃಷ್ಣನಿಗೆ ಹೇಗೆಹೇಗೋ ಆಯಿತು.

ಕೃಷ್ಣನ್ ಸೆಕ್ರೆಟರಿಯ ಹತ್ತಿರ ಹೋದ. ಆತ ಯಾವುದೋ ಕಾಗದಗಳನ್ನು ಹುಡುಕುತ್ತಿದ್ದ. ಕೃಷ್ಣನ್ ಹೇಳಿದ: "ಇನ್ನು ಮೇಲೆ ನನ್ನ ಕೆಲಸ ಸ್ವಲ್ಪ ನೋಡಬೇಕು."

ಆ ಮಾತು ಸೆಕ್ರೆಟರಿಗೆ ಅಷ್ಟೊಂದು ಇಷ್ಟವಾದಂತೆ ತೋರಲಿಲ್ಲ. ಆ ಕೆಲಸದ ಮಧ್ಯೆ ಹೋಗಿ ಕೇಳಿದುದು. ಆದರೆ ಸೆಕ್ರೆಟರಿ ಅದನ್ನು ತೋರಿಸಿಕೊಳ್ಳಲಿಲ್ಲ. ಆತ ಕೇಳಿದ:

"ಏನಾಗಬೇಕು?"

"ಸದಾಶಿವ ಟ್ರಜರಿ ಆಫೀಸಿನಲ್ಲಿಟ್ಟಿದ್ದ ಹಣದ ವಿಷಯ."

ಸೆಕ್ರೆಟರಿಗೆ ನೆನಪಾಯಿತು. ಆತ ಹೇಳಿದ:

"ಸ್ವಲ್ಪ ದಿನ ಕಳೆಯಲಿ! ತಿರುಗಾಡೋದಕ್ಕೆ ಸಮಯ ಇಲ್ಲ."

ಕೃಷ್ಣನ್ ಅವನ ಪ್ರಾರಬ್ಧವನ್ನು ವಿವರಿಸಿದ:

"ನಿಶ್ಚಯಿಸಿದ ಸಂಬಂಧ ಕೈಬಿಟ್ಟುಹೋಯಿತು. ಇನ್ನು ಮೇಲಾದರೂ ಯಾರ್ನಾದರೂ ಕಂಡುಹಿಡೀಬೇಕು. ಅದನ್ನು ಕೈಯಲ್ಲಿಟ್ಟುಕೊಂಡು ಹೊರಡಬೇಕು."

"ಹುಂ. ಆಗಲಿ. ಸ್ವಲ್ಪ ದಿನ ಕಳೆದ ಮೇಲೆ ಆ ವಿಷಯ ನೋಡೋಣ."

ಅಂಥೋಣಿ ಮಾಪಿಳ್ಳೆಯೂ ಕೃಷ್ಣ ಕೈಮಳೂ ಕಮ್ಯುನಿಸ್ಟ್ ಆದ ವಿಷಯವನ್ನು ತಿಳಿಯುವ ಕುತೂಹಲವುಂಟಾಯಿತು.

"ಈ ಕೈಮಳೂ ಅಂಥೋಣಿಯೂ ಬಂದದ್ದು ಯಾಕೆ?"

"ಅವರಿಗೆ ನೋಟೀಸ್ ಕಳಿಸಿ ಬರಿಸಿದ್ದು. ಅವರು ಅವರ ಮನೆಯಲ್ಲಿದ್ದ ಕೆಲವು ಹೊಲೆಯ ಕಮ್ಯುನಿಸ್ಟರನ್ನು ಮನೆ ಬಿಡಿಸ್ತಾರೆ ಅಂತ ದೂರು ಬಂದಿತು."

ಕೃಷ್ಣನ್ ಆಶ್ಚರ್ಯದಿಂದ ಕೇಳಿದ: "ಹಾಗಾದರೆ ಅವರು ಬಂದರಲ್ಲ?"

"ಬರದೇ ಇರೋದಕ್ಕೆ ಸಾಧ್ಯವಾ? ನಮ್ಮ ಸರ್ಕಾರ ಅಲ್ಲವಾ? ಆಗಿನ ಚುನಾವಣೆಗೆ ಕಷ್ಟಪಟ್ಟದ್ದರ ಫಲ ಅರ್ಥವಾಯ್ತಾ?"

ಒಂದು ಮರದ ಅಡಿಯಲ್ಲಿ ಕುಳಿತಿದ್ದ ಕೃಷ್ಣ ಕೈಮಳನ್ನೂ ಅಂಥೋಣಿ ಮಾಪಿಳ್ಳೆಯನ್ನೂ ಕೃಷ್ಣನ್ ನೋಡಿದ. ಅವರು ಹಾಗೆ ಕುಳಿತಿದ್ದದ್ದು ಕೃಷ್ಣನ್‌ಗೆ ಹಿಡಿಸಿತು. ಸೆಕ್ರೆಟರಿ ಹೇಳಿದ್ದು ಸರಿ. ಚುನಾವಣೆಯ ಕಾಲದಲ್ಲಿ ಕಷ್ಟಪಟ್ಟದ್ದು ಸುಮ್ಮನೇ ಅಲ್ಲ. ಆ ಬಲಾಢ್ಯರನ್ನು ಪಾರ್ಟಿ ಆಫೀಸಿಗೆ ಬರಮಾಡಲಾಯಿತು. ಯಥಾರ್ಥವಾದ ಒಂದು ಸಂತೃಪ್ತಿ ಕೃಷ್ಣನ್‌ಗೆ ಉಂಟಾಯಿತು.

ಒಂದು ಕಾರು ಬಂದು ನಿಂತಿತು. ಅದರಿಂದ ಆಲಪ್ಪುಳದ ಬಹು ದೊಡ್ಡ ವ್ಯಾಪಾರಿ ಇಳಿದು ಬಂದು ಆಫೀಸಿನೊಳಕ್ಕೆ ಹೋದ. ಕೃಷ್ಣನ್‌ಗೆ ಆತ ಗೊತ್ತಿತ್ತು. ಆ ದೊಡ್ಡ ಸಾಹುಕಾರನೂ ಪಾರ್ಟಿ ಆಫೀಸಿಗೆ ಬರುತ್ತಿದ್ದ. ಅದು ಒಂದು ದೊಡ್ಡ ವಿಷಯವೇ ಆಗಿತ್ತು. ರಕ್ತಸಾಕ್ಷಿ ದಿನದಲ್ಲಿ ಮಂತ್ರಿ ಮಾಡಿದ ಭಾಷಣ ಕೃಷ್ಣನ ಕಿವಿಯೊಳಗೆ ಮೊಳಗಿತು:

"ಪುನ್ನಂಬ್ರ ವೈಲಾರಿನಲ್ಲಿ ಸತ್ತವರ ರಕ್ತದಿಂದ ಮೊಳೆತು ಬಂದ ಪಾರ್ಟಿ. ಅದರ ಶಕ್ತಿಯ ಮೊದಲ ಹಂತವನ್ನು ನಾವು ಕಾಣುತ್ತಿದ್ದೇವೆ." ಅದು ಸರಿ. ಕೈಮಳುವೂ ಅಂಥೋಣಿ ಮಾಪಿಳ್ಳೆಯೂ ಹುಣಸೆ ಮರದ ಅಡಿಯಲ್ಲಿ ಕುಳಿತಿದ್ದರು. ಆಲಪ್ಪುಳದ ದೊಡ್ಡ ಸಾಹುಕಾರನೂ ಬಂದ. ಇನ್ನೂ ಏನೆಲ್ಲ ನಡೆಯುವುದಿಲ್ಲ. ಸ್ವಲ್ಪ ಸಮಯ ಕಳೆದು ಒಬ್ಬ ಮನುಷ್ಯ ಬಂದು ಹೇಳಿದ:

"ಇವತ್ತಿಗೆ ನೋಟೀಸ್ ಕಳಿಸಿದವರೆಲ್ಲ ಭಾನುವಾರ ಬಂದರೆ ಸಾಕು. ಇವತ್ತು ಅರ್ಜಿಯ ವಿಷಯ ಕೈಗೆತ್ತಿಕೊಳ್ಳೋದಿಲ್ಲ."

ಸ್ವಲ್ಪ ಹೊತ್ತು ಯಾರೂ ಏನೂ ಮಾತಾಡಲಿಲ್ಲ. ಅಂಥೋಣಿ ಎದ್ದು ನಿಂತು

ಹೇಳಿದ: "ಭಾನುವಾರ ನಾವು ಚರ್ಚಿಗೆ ಹೋಗಬೇಕು. ಎಡವಗೇಲನ ಧ್ಯಾನ ಪ್ರಾರಂಭಿಸುತ್ತಾರೆ."

"ಅದೇನಾದರೂ ಇರಲಿ. ಭಾನುವಾರ ಬರಬೇಕು."

ಸ್ವಲ್ಪ ಸಮಯ ಕಳೆದ ಮೇಲೆ ಸೆಕ್ರೆಟರಿಯೂ ಆ ದೊಡ್ಡ ಸಾಹುಕಾರನೂ ಕಾರಿನಲ್ಲಿ ಹೋದರು. ಕಾರಿನ ಹಿಂದಿನ ಸೀಟಿನಲ್ಲಿ ಸೆಕ್ರೆಟರಿಯೂ ದೊಡ್ಡ ಸಾಹುಕಾರನೂ ಕುಳಿತಿದ್ದರು. ಕಾರು ಅಲ್ಲಿಂದ ಹೊರಟಿತು. ಆ ಹೋಗಾಣಿಕೆಗೆ ಒಂದು ಆಕರ್ಷಣೆಯಿತ್ತು. ಕಾಯರ್ ಆಫೀಸಿನಲ್ಲಿ ಸಾಧಾರಣ ಕೂಲಿಯವನಾಗಿದ್ದ ಅವನಿಗೆ ಆ ಪದವಿ ಬಂದಿತು. ಅದರಲ್ಲಿ ಅಭಿಮಾನ ಪಡಬೇಕು. ಆದರೆ......... ಅದೊಂದು ದೊಡ್ಡ ವಿಷಯ. ಆದರೆ......... ಎಲ್ಲಿಯೋ ಏನೋ ಒಂದು ತೊಂದರೆ ಕೃಷ್ಣನಿಗೆ ತೋರಿತು. ಹೊಂದಾಣಿಕೆಯಿಲ್ಲದ್ದು—ಆ ಸಾಹುಕಾರನ ಜೊತೆಯಲ್ಲಿ ಸೆಕ್ರೆಟರಿ ಹಾಗೆ ಹೋದದ್ದು ಸರಿಯೋ? ಎಂದೆಂದೂ ಅವರೂ ಹೋರಾಡುತ್ತಿರಲಿಲ್ಲವೇ? ಏನೋ. ಹೊಸ ಏರ್ಪಾಡುಗಳಾವುವೂ ಕೃಷ್ಣನಿಗೆ ಅರ್ಥವಾಗುವುದಿಲ್ಲ. ಎಲ್ಲಿಯೋ ತಪ್ಪಿದ್ದಂತೆ ತೋರಿತು. ಕೆಲವು ಕಡೆಗಳಲ್ಲೆಲ್ಲ ಏನೋ ದೊರೆತ ಹೆಸರಿನಲ್ಲಿ ಅಭಿಮಾನ ತೋರುವುದೂ ಉಂಟು.

ಕೆಲವು ದಿನಗಳು ಕಳೆದ ಮೇಲೆ ಕೃಷ್ಣನ ವಿಚಾರಗಳನ್ನೆಲ್ಲ ಬರೆದುಕೊಂಡರು. ಕೈಯಲ್ಲಾದದ್ದನ್ನು ಮಾಡುವುದಾಗಿ ತಿಳಿಸಿದರು. ಇನ್ನು ಮೇಲೆ ಈ ಕೆಲಸದಲ್ಲಿ ಜಯವುಂಟಾಗುವುದೆಂಬ ಭರವಸೆ ಕೃಷ್ಣನಿಗುಂಟಾಯಿತು.

ಒಂದು ವಾರದೊಳಗೆ ಮತ್ತೊಂದು ಘಟನೆ ಆಲಪ್ಪುಳದಲ್ಲಿ ನಡೆಯಿತು. ತೋಟಿಗಳು ಅವರ ಆವಶ್ಯಕತೆಗಳನ್ನು ಮುಂದಿರಿಸಿದರು. ಅವರು ಕೆಲಸ ನಿಲ್ಲಿಸುವುದಾಗಿ ಹೆದರಿಸಿದರು. ಅದು ಆಳಪ್ಪುಳದ ವಿಚಾರ ಮಾತ್ರವಾಗಿರಲಿಲ್ಲ. ಕೇರಳದ ಎಲ್ಲ ನಗರಗಳನ್ನೂ ಅದು ಬಾಧಿಸಿತು. ಸ್ವಾಭಾವಿಕವಾಗಿ ಸೆಕ್ರೆಟರಿಗೆ ಮೂಲಭೂತ ಶ್ರದ್ಧೆಯನ್ನುಂಟುಮಾಡುತ್ತಿದ್ದ ಒಂದು ಪ್ರಶ್ನೆಯಾಗಿತ್ತು. ಕೃಷ್ಣನ್ ಅನಂತರ ಸೆಕ್ರೆಟರಿಯನ್ನು ಹೋಗಿ ಕಂಡ. ಆತನ ಕೆಲಸದಲ್ಲಿ ಗಮನ ಹಾಯಿಸಲು ಸಾಧ್ಯವಾಗಲಿಲ್ಲವೆಂದು ಅವನು ಹೇಳಿದ. ಅದಕ್ಕೆ ಸಾಕಷ್ಟು ಕಾರಣಗಳೂ ಇದ್ದುವು. ಎಲ್ಲವೂ ಕೃಷ್ಣನಿಗೆ ತಿಳಿದ ಸಂಗತಿಗಳೇ ಆಗಿದ್ದುವು.

"ಕೆಲವು ದಿವಸಗಳು ಕಳೆಯಲಿ. ಈ ಮುನಿಸಿಪಲ್ ಕಾರ್ಮಿಕರ ಕೆಲಸ ಕಳೆಯಲಿ. ಮುಂದೆ ನೋಡೋಣ."

ಆ ಮಾತನ್ನು ಒಪ್ಪಿಕೊಳ್ಳದಿರುವುದಕ್ಕೆ ಸಾಧ್ಯವೇ? ಒಂದು ವಿಷಯ ನಿಜ. ಸೆಕ್ರೆಟರಿಗೆ ಒಂದು ಕಡೆ ಕುಳಿತುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಅನಂತರ ಸೆಕ್ರೆಟರಿ ಹೇಳಿದ್ದು ತಿರುವನಂತಪುರದ ವರೆಗೆ ಹೋದರೆ ಮಾತ್ರ ಏನಾದರೂ ಕೆಲಸ ಆಗಬಹುದು ಎಂದು. ಅಲ್ಲಿಗೆ ಹೋದರೆ ಮಾಡಬಹುದು. ಕೃಷ್ಣನ್ ಅವನ ಅವಸ್ಥೆಯನ್ನು ಹೇಳಿದ:

"ಕೈಯಲ್ಲಿ ಒಂದಾಣೆ ಇಲ್ಲ. ನಾನು ನಾಲ್ಕು ಕಾಸು ಸಂಪಾದಿಸಿದ್ದೂ ತಿರುವನಂತಪುರಕ್ಕೆ ಹೋಗಿಬಂದದ್ದಕ್ಕೆ ಖರ್ಚಾಯ್ತು. ಈಗ ಕೈಯಲ್ಲಿ ಕಾಸಿಲ್ಲ."

ಸೆಕ್ರೆಟರಿಗೆ ಅದು ಅರ್ಥವಾಗುತ್ತಿತ್ತು. ಮತ್ತೆ ಹೇಗೆ ಆ ಕೆಲಸ ಬೇಗನೆ ಮಾಡೋದು? ಕೃಷ್ಣನಿಗೆ ಅದಕ್ಕೆ ಉತ್ತರವಿಲ್ಲ.

ಸೆಕ್ರೆಟರಿ ಹೇಳಿದರು:

"ಖರ್ಚು ಮಾಡಬೇಕಾದದ್ದಕ್ಕೆಲ್ಲ ಖರ್ಚು ಮಾಡದೇ ಇರೋದಕ್ಕಾಗುತ್ತಾ?"

ಕೃಷ್ಣನಿಗೆ ಖರ್ಚು ಮಾಡಬಾರದು ಎಂದಲ್ಲ. ಕೈಯಲ್ಲಿಲ್ಲ ಅಷ್ಟೆ. ಅದೂ ಸೆಕ್ರೆಟರಿಗೆ ಅರ್ಥವಾಗುವ ವಿಷಯ. ಸೆಕ್ರೆಟರಿ ಹೇಳಿದ—

"ಹಾಗಿದ್ದರೆ ನಾನು ನಿಮ್ಮ ವಿಷಯವನ್ನೆಲ್ಲ ವಿವರಿಸಿ ಬಹು ಮುಖ್ಯವಾದ ವಿಷಯ ಅಂತ ಹೇಳಿ ಸ್ಟೇಟ್ ಕಮಿಟಿ ಆಫೀಸಿಗೆ ಬರೀತೀನಿ. ಆ ಮಾರ್ಗವಾಗಿ ಕೆಲಸ ನಡೆಯಲಿ. ಒಂದು ವಿಷಯ ನಿಮ್ಮ ತಿಳುವಳಿಕೆಗಾಗಿ ಹೇಳ್ತೀನಿ. ದೇಶದ ನಾನಾ ಭಾಗದಿಂದ ಇಂತಹ ವಿಷಯಗಳು ಅಲ್ಲಿ ಬಂದು ಒಟ್ಟುಗೂಡಿಕೊಳ್ಳುತ್ತವೆ."

ಕೃಷ್ಣನಿಗೆ ಗಟ್ಟಿಯಾಗಿ ಅಳು ಬಂದಿತು.

"ಹಾಗಾದರೆ?"

"ತಡವಾಗುತ್ತೆ."

ಕೃಷ್ಣನಿಗೆ ತಡೆಯಲು ಸಾಧ್ಯವಾಗಲಿಲ್ಲ.

"ಹಾಗಾದರೆ ನನ್ನ ಸದಾಶಿವ ಗುಂಡು ಬಿದ್ದು ಸತ್ತದ್ದು ಯಾಕೆ?"

ಸೆಕ್ರೆಟರಿಗೆ ಸ್ವಲ್ಪ ಬೇಸರವಾಯಿತು.

"ನಿಮಗೆಲ್ಲ ದೊಡ್ಡ ಸಾಹುಕಾರರ ಜೊತೆಯಲ್ಲೂ ಗುಂಡು ಹಾರಿಸಿದ ಪೋಲೀಸಿನವರ ಜೊತೆಯಲ್ಲೂ ಕಾರಿನಲ್ಲಿ ತಿರುಗಾಡೋದಕ್ಕಾ?"

ಸೆಕ್ರೆಟರಿಯ ಕೆನ್ನೆಗೆ ಒಂದು ಏಟು ಬಿದ್ದಂತೆ ತೋರಿತು.

"ಸ್ವಲ್ಪ ಆಲೋಚನೆ ಮಾಡಿ ಮಾತಾಡಬೇಕು ಯಜಮಾನ!"

"ಇಲ್ಲದೆ ಇದ್ದರೋ?"

"ನೀವು ಒಬ್ಬ ರಕ್ತಸಾಕ್ಷಿಯ ತಂದೆಯಾಗಿ ಹೋದಿರಿ. ಇಲ್ಲದೆ ಇದ್ದರೆ ತೋರಿಸಬಹುದಾಗಿತ್ತು!"

"ನೀನು ಏನು ತೋರಿಸೋದು?"

"ವಂಚನೆ! ವಂಚನೆ!" ಎಂದು ಹೇಳಿಕೊಂಡು ಕೃಷ್ಣನ್ ಅಲ್ಲಿಂದ ಹೋದ.

# [45]

## ಉದ್ಯೋಗ ಪರ್ವದ ಅಂತ್ಯ

ಕೆಲವು ತಿಂಗಳುಗಳು ಕಳೆದುವು. ಆಳುವ ಪಕ್ಷದ ಮುಂದಾಳುಗಳಿಗೆ ಚೀಫ್ ಸೆಕ್ರೆಟರಿಯ ಬಗ್ಗೆ ಸ್ವಲ್ಪವೂ ತೃಪ್ತಿಯಿಲ್ಲ. ಅಷ್ಟೇ ಅಲ್ಲ; ಪ್ರತ್ಯಕ್ಷವಾಗಿಯೇ ವಿರೋಧ ವುಂಟಾಯಿತು. ಸರ್ಕಾರದ ಪ್ರಗತಿಪರವಾದ ತೀರ್ಮಾನಗಳಿಗೆ ಅಡ್ಡಿಯನ್ನುಂಟುಮಾಡುವುದು ಚೀಫ್ ಸೆಕ್ರೆಟರಿ ಎಂದು ಆರೋಪಣೆ. ಅವನ್ನು ಕಾರ್ಯಾಚರಣೆಗೆ ಬರದಂತೆ ಸಾಂಕೇತಿಕ ತಡೆಗಳನ್ನು ಚೀಫ್ ಸೆಕ್ರೆಟರಿ ಮಾಡುತ್ತಿದ್ದಾರೆ.

ಆದರೆ ಕೇಶವ ಪಿಳ್ಳೆಗೆ ಆ ಆರೋಪಣೆ ಅರ್ಥವಾಗುವುದಿಲ್ಲ. ಹೊಸ ಸರ್ಕಾರದೊಂದಿಗೆ ಹೊಂದಿಕೊಂಡುಹೋಗಲು ಅವರು ಶಕ್ತಿ ಮೀರಿ ಶ್ರಮಿಸುತ್ತಿದ್ದರು. ಅದೊಂದು ಕ್ಲೇಶವಾಗಿ ಅವರಿಗೆ ತೋರಿಯೂ ಇಲ್ಲ. ಒಮ್ಮೆಯೂ ತಮ್ಮದಾದ ಅಭಿಪ್ರಾಯ ಅವರನ್ನು ಉಸಿರುಕಟ್ಟಿಸಿಲ್ಲವಲ್ಲ. ಪಂಚವಾರ್ಷಿಕ ಯೋಜನೆ, ಲೋಕೋಪಯೋಗಿ ಖಾತೆ ಮುಂತಾದ ವಿಭಾಗಗಳನ್ನೆಲ್ಲ ಅವರ ಕೈಗೆಟುಕದಂತೆ ಮಾಡಲಾಗಿದೆ. ಆರ್. ಟಿ. ಮೆನನ್ ಮತ್ತು ಸಚಿವರೂ ನೇರವಾಗಿ ಆ ವಿಷಯಗಳನ್ನು ಆಲೋಚಿಸುತ್ತಿದ್ದರು, ತೀರ್ಮಾನಿಸುತ್ತಿದ್ದರು. ಕ್ಯಾಬಿನೆಟ್ ಸೆಕ್ರೆಟರಿ ಎನ್ನುವ ವೃತ್ತಿಯಲ್ಲಿ ಅವರ ಕೈಗೆ ಬರಬೇಕು. ಆದರೆ ಒಂದು ಅಭಿಪ್ರಾಯವನ್ನೂ ಅವರು ಚೀಫ್ ಸೆಕ್ರೆಟರಿಯ ಹತ್ತಿರ ಕೇಳುವುದಿಲ್ಲ.

ಅಂದು ವಿಶೇಷವಾದ ಒಂದು ಕೆಲಸವೂ ಇತ್ತು. ಮುಖ್ಯ ಮಂತ್ರಿ ಚೀಫ್ ಸೆಕ್ರೆಟರಿಯನ್ನು ತಮ್ಮ ಕೋಣೆಗೆ ಬರಮಾಡಿದರು. ದೈನಂದಿನ ಔದ್ಯೋಗಿಕ ವಿಷಯಗಳನ್ನು ಕುರಿತು ಅವರು ಮಾತನಾಡಿದರು. ಅದೊಂದೂ ಅಷ್ಟು ಪ್ರಧಾನವಾದ ವಿಷಯಗಳಲ್ಲ. ಅದನ್ನು ಕುರಿತು ಮಾತನಾಡುವುದಕ್ಕಲ್ಲ ತನ್ನನ್ನು ಕರೆದದ್ದು ಎಂದು ಕೇಶವ ಪಿಳ್ಳೆಗೆ ಸ್ಪಷ್ಟವಾಗಿತ್ತು. ಮುಖ್ಯ ಮಂತ್ರಿಯ ಮನಸ್ಸಿನಲ್ಲಿ ಏನೋ ಇತ್ತು. ಅದೇನೆಂದು ಅರ್ಥವಾಗುತ್ತಿಲ್ಲ. ಸುತ್ತಿ, ಬಳಸಿ ಸ್ವಲ್ಪ ಹೊತ್ತಿನ ಮಾತುಕತೆಯ ನಂತರ ಹೊರಗೆ ಬಂದಿತು. ಅವರು ಹೇಳಿದರು: "ಚೀಫ್ ಸೆಕ್ರೆಟರಿಯ ಸುದೀರ್ಘವಾದ ಅನುಭವದ ಫಲ ಈ ಸರ್ಕಾರಕ್ಕೆ ದೊರೀತಾ ಇಲ್ಲ ಅನ್ನೋ ಆಕ್ಷೇಪ ಇದೆ."

ಮುಖ್ಯ ಮಂತ್ರಿಯ ಮುಖದಲ್ಲಿ ನಗು ಇದ್ದೇ ಇತ್ತು. ಕೇಶವ ಪಿಳ್ಳೆ ಹೇಳಿದರು: "ಅದು ಹೇಗೆ ಅಂತ ನನಗೆ ಅರ್ಥವಾಗೋದಿಲ್ಲ."

ಮುಖ್ಯ ಮಂತ್ರಿ ಒಂದು ಹೆಜ್ಜೆ ಮುಂದೆ ಹೋಗಿ ಹೇಳಿದರು—

"ನೀವು ಈ ಸರ್ಕಾರದ ಜೊತೆಯಲ್ಲಿ ಸಂಪೂರ್ಣವಾಗಿ ಸಹಕರಿಸ್ತಾ ಇಲ್ಲ ಅಂತ ದೂರು."

ಕೇಶವ ಪಿಳ್ಳೆ ಆ ಆರೋಪಣೆಯನ್ನು ಕೇಳಿ ಆಶ್ಚರ್ಯಪಟ್ಟರು. "ಎಲ್ಲಿ ಹೇಗೆ ನಾನು ಸಹಕರಿಸದೆ ಇರೋದು ಅಂತ ತಿಳಿಸಿದ್ದರೆ ಚೆನ್ನಾಗಿತ್ತು."

ಮುಖ್ಯ ಮಂತ್ರಿ ಅದಕ್ಕೆ ಸ್ಪಷ್ಟ ಉತ್ತರ ಹೇಳಲಿಲ್ಲ. ಅವರು ಹೇಳಿದರು: "ಅದು ದೂರು. ನೀವು ಯಾವುದರ ಬಗ್ಗೆಯೂ ಸರಿಯಾದ ಸಲಹೆ ಕೊಡೋದಿಲ್ಲ. ಅದೇ ಆಕ್ಷೇಪ."

ಕೇಶವ ಪಿಳ್ಳೆಗೂ ತಮ್ಮ ದೂರನ್ನು ಹೇಳಿಕೊಳ್ಳಬಹುದಾದ ಸಂದರ್ಭವಾಗಿತ್ತು ಅದು.

"ನನ್ನ ಸಲಹೆ ತಿಳಿಸುವ ಸಂದರ್ಭ ಬರಲಿಲ್ಲ."

ಮುಖ್ಯ ಮಂತ್ರಿ ನಕ್ಕರು. ಅವರು, ಮಾತಿಗೆ ಮಾತು ಮುಂದುವರಿಸುವುದಕ್ಕೆ ಸಿದ್ಧರಿರಲಿಲ್ಲ. ಆಗ ಒಂದು ವಿಷಯ ಸ್ಪಷ್ಟವಾಗಿತ್ತು: "ಸರ್ಕಾರಕ್ಕೂ ಚೀಫ್ ಸೆಕ್ರೆಟರಿಗೂ ಹೊಂದಿಕೆಯಿಲ್ಲ."

ಅದನ್ನು ಒಪ್ಪಿಕೊಳ್ಳುವುದಕ್ಕಾಗಲೀ ನಿಷೇಧಿಸುವುದಕ್ಕಾಗಲೀ ಕೇಶವ ಪಿಳ್ಳೆ ಹೋಗಲಿಲ್ಲ. ಮೌನವಾಗಿದ್ದರು—ಅಷ್ಟೆ. ಆದರೆ ಸ್ಟೇಟ್ ಕಮಿಟಿ ಸೆಕ್ರೆಟರಿ ಕೇಶವ ಪಿಳ್ಳೆಗೆ ಎದುರಾಗಿ ಯಾವ ಅಡೆತಡೆಗಳೂ ಇಲ್ಲದೆ ಮಾಡುವ ಕೆಲಸಗಳನ್ನು ಕುರಿತು ಒಂದು ಸಲಹೆ ಮಾಡಿದರೇನೆಂದು ಕೇಶವ ಪಿಳ್ಳೆಗೆ ತೋರಿತು. ಅದೂ ಒಂದು ರೀತಿಯಲ್ಲಿ ಅಸಂಗತವಲ್ಲವೇ?

ಚೀಫ್ ಮಿನಿಸ್ಟರ್ ಒಂದು ಸಲಹೆಯನ್ನು ಪರಿಗಣನೆಗಾಗಿ ಕೇಶವ ಪಿಳ್ಳೆಯ ಮುಂದಿಟ್ಟರು.

"ನಾನು ಒತ್ತಾಯ ಮಾಡ್ತಿದ್ದೀನಿ ಅಂದುಕೊಳ್ಳಬೇಡಿ. ಇದು ಕೇವಲ ವೈಯಕ್ತಿಕ ವಿಚಾರ. ಪಾರ್ಟಿಯದಾಗಲೀ ಮಂತ್ರಿಸಭೆಯದಾಗಲೀ ಅಭಿಪ್ರಾಯವಲ್ಲ. ನನ್ನ ಸ್ವಂತ ಅಭಿಪ್ರಾಯ. ಮಿ॥ ಕೇಶವ ಪಿಳ್ಳೆಯ ಹತ್ತಿರ ಹೇಳುತ್ತಿದ್ದೇನೆ ಅಷ್ಟೆ."

ಕುತೂಹಲದಿಂದ ಕೇಶವ ಪಿಳ್ಳೆ ಕಾದಿದ್ದರು. ಯಾವುದೋ ಹೊಸ ಸಂವಿಧಾನದ ಸಲಹೆಯಿರಬೇಕೆಂದು ಕೇಶವ ಪಿಳ್ಳೆ ಭಾವಿಸಿದ್ದದ್ದು. ಚೀಫ್ ಮಿನಿಸ್ಟರ್ ಹೇಳಿದರು: "ಚೀಫ್ ಸೆಕ್ರೆಟರಿ ಕೆಲವು ದಿನ ರಜೆ ತೆಗೆದುಕೊಂಡರೇನು?"

ಮುಖ್ಯ ಮಂತ್ರಿ ಚೀಫ್ ಸೆಕ್ರೆಟರಿಯ ಉತ್ತರಕ್ಕಾಗಿ ಕಾದು ನಿಲ್ಲದೆ ಹೇಳಿದರು:

"ಒತ್ತಾಯ ಮಾಡೋದಿಲ್ಲ. ಒಂದು ಸಲಹೆ ಮಾತ್ರ. ಅಂತೂ ಒಂದು ಅಂತರ ಕಾಣಿಸ್ತಿದೆ. ಅದು ಸತ್ಯ ಸಂಗತಿ. ಆ ಅಂತರ ಕ್ಲೇಶ ಉಂಟುಮಾಡೋದಕ್ಕೆ ಮೊದಲು ಸ್ವಲ್ಪ ಕಾಲದ ವರೆಗೆ ದೂರ ನಿಲ್ಲುವುದು ಒಳ್ಳೆಯದು ಎಂದು ನನಗೆ ಅನ್ನಿಸಿತು, ಅಷ್ಟೇ."

ಕೇಶವ ಪಿಳ್ಳೆ ತನ್ನ ಔದ್ಯೋಗಿಕ ಜೀವನವನ್ನೆಲ್ಲ ಕೂಡಲೇ ನೆನಸಿಕೊಂಡರು.

ಪಾರ್ಕ್ ವ್ಯೂನ ಗೇಟಿನಲ್ಲಿ ನಿಂತಿದ್ದು ಹದಿನೈದು ರೂಪಾಯಿ ಸಂಬಳದ ಉದ್ಯೋಗ ಸಿಕ್ಕಿದ ಕಾಲದಿಂದ ಇಲ್ಲಿಯ ವರೆಗಿದ್ದ ಕಾಲಘಟ್ಟವನ್ನು ನೆನಸಿಕೊಂಡರು. ಒಂದು ನಿಮಿಷದ ವರೆಗೆ ಅತ್ಯುಗ್ರವಾದ ಭಾರದ ಕೆಳಗೆ ಕೇಶವ ಪಿಳ್ಳೆ ಸಿಕ್ಕಿಹಾಕಿಕೊಂಡರು. ಅವರಿಗೆ ಉಸಿರು ಕಟ್ಟಿದ ಹಾಗಾಯಿತು. ಶರೀರವಿಡೀ ಕಂಪಿಸಿತು. ಅವರು ತೇಜೋಹೀನರಾದದ್ದು ಮುಖ್ಯ ಮಂತ್ರಿಯ ದೃಷ್ಟಿಗೆ ಬಿದ್ದಿತೋ ಏನೋ! ಜೀವ ಹೋಗುವುದು ಜೀವನ ಹೋಗುವುದು ಒಂದೇ.

ಸ್ವಲ್ಪ ಹೊತ್ತು ಕೇಶವ ಪಿಳ್ಳೆ ಹಾಗೆಯೇ ಕುಳಿತಿದ್ದರು. ಅವರು ಯಾವುದನ್ನೂ ಚಿಂತಿಸುತ್ತಿರಲಿಲ್ಲ. ಪ್ರತಿಮೆಯಂತೆ ಕುಳಿತಿದ್ದರು.

"ಈ ಕೆಲಸ ಕೈಬಿಡೋಣ"—ಅಂತರಂಗದಲ್ಲಿ ಹೇಳಿದಂತಾಯಿತು. ಅದು ಅವರ ಕಿವಿಗೆ ಕೇಳಿಸಿದಂತಾಯಿತು.

"ನಮಗೆ ಜೀವಿಸುವುದಕ್ಕೆ ದಾರಿಯಿಲ್ಲವೇ?"

—ಮುಂದಿನ ಪ್ರಶ್ನೆ. ಅದನ್ನು ಕಾತ್ಯಾಯಿನಿಯಮ್ಮ ಕೇಳುತ್ತಿದ್ದದ್ದು.

ಕೇಶವ ಪಿಳ್ಳೆಯ ಮ್ಲಾನತೆ ಬದಲಾಯಿಸಿತು. ಅವರ ಮನಸ್ಸಿನಲ್ಲಿ ಆಲೋಚನೆಗಳು ನುಗ್ಗಿದುವು. ಇನ್ನು ಪೆನ್ಶನ್ ಆಗುವುದಕ್ಕೆ ಹೆಚ್ಚು ಕಾಲವಿಲ್ಲ. ಇಷ್ಟು ಕಾಲವೂ ಅಂತಸ್ಥಿನಿಂದಲೇ ಕೆಲಸ ನೋಡಿದ್ದಾಯಿತು. ಈ ಗುಂಪಿನ ಜೊತೆಯಲ್ಲಿ ಇನ್ನು ಮುಂದೆ ಹೊಂದಿಕೊಂಡು ಹೋಗಲು ಸಾಧ್ಯವಿಲ್ಲ. ಈಗಲೇ ಈ ಕುರ್ಚಿಯಲ್ಲಿ ಕುಳಿತುಕೊಳ್ಳುವುದು ನಾಚಿಕೆಗೇಡಿನಂತಾಗಿದೆ. ಅಲ್ಲಿಂದ ಕೆಳಗಿಳಿದರೇನು? ಇರುವ ಪೆನ್ಶನ್ ತೆಗೆದುಕೊಂಡು ಹೋದರೇನು? "ಹಾಗೆ ಬಾ" ಎಂದು ತನ್ನೊಳಗಿನಿಂದ ಹೇಳಿದಂತಾಯಿತು.

ಹಾಗೆಯೇ ತೀರ್ಮಾನಿಸಲು ಸಾಧ್ಯವೇ? ಇದೇ ರೀತಿಯ ಎಷ್ಟೋ ಪರೀಕ್ಷೆಯ ಘಟ್ಟಗಳನ್ನು ನೋಡಿದ್ದಾಯಿತು. ಹಾಗೆ ಸೋತುಹೋಗುವುದೇ? 'ಹಾಗೆ ಬಾ' ಇದಕ್ಕೊಂದು ಅಸಾಮಾನ್ಯವಾದ ಶಕ್ತಿಯಿದೆ.

ಕೇಶವ ಪಿಳ್ಳೆ ಮುಖ್ಯ ಮಂತ್ರಿಯನ್ನು ಅಡಿಯಿಂದ ಮುಡಿಯ ವರೆಗೆ ಸೂಕ್ಷ್ಮವಾಗಿ ನೋಡಿದರು. ಒಂದು ಕ್ಷಣದಲ್ಲಿ ಆ ಮನುಷ್ಯನ ಜೀವನ ಚರಿತ್ರೆಯನ್ನೆಲ್ಲ ಪೋಲೀಸ್ ರಿಪೋರ್ಟುಗಳಲ್ಲಿದ್ದಂತೆ ಅವರು ಜ್ಞಾಪಿಸಿಕೊಂಡರು.

ಈ ಮನುಷ್ಯ ಹೇಳಿದ್ದಕ್ಕೆ ಕೆಲಸ ಕೈಬಿಟ್ಟು ಹೋಗುವುದೆ? ಅದೊಂದು ಕೊರತೆಯಲ್ಲವೆ? ಅಷ್ಟು ಹೊತ್ತಿಗೆ ನಿಶ್ಶಬ್ದವಾದ ಕೆಲವು ನಿಮಿಷಗಳು ದಾಟಿದುವು. ಕೇಶವ ಪಿಳ್ಳೆ ಎದ್ದು ನಿಂತರು.

ಮುಖ್ಯ ಮಂತ್ರಿ ಹೇಳಿದರು: "ಸರಿ. ನಾನು ಹೇಳಿದ ವಿಷಯ ಕುರಿತು ಆಲೋಚನೆ ಮಾಡಿ. ಒತ್ತಾಯ ಮಾಡೋದಿಲ್ಲ."

ಏನನ್ನೂ ಹೇಳದೆ ನಮಸ್ಕರಿಸಿ ಕೇಶವ ಪಿಳ್ಳೆ ಆ ರೂಮಿನಿಂದ ಹೊರಗೆ ಬಂದರು.

ತಮ್ಮ ರೂಮಿಗೆ ಹೋಗುತ್ತಿದ್ದಾಗ ಬೇರೆ ಮಾರ್ಗವಾಗಿ ಒಂದು ಫೈಲನ್ನು ಹಿಡಿದುಕೊಂಡು ಆರ್. ಟಿ. ಮೆನನ್ ಹೋಗುತ್ತಿದ್ದರು. ಕೇಶವ ಪಿಳ್ಳೆ ಅದನ್ನು ನೋಡಿದರು. ಆದರೆ ಕಣ್ಣಿನಿಂದ ನೋಡಿದ್ದು ಅಷ್ಟೆ. ಮನಸ್ಸು ಆಲೋಚಿಸಲಿಲ್ಲ.

ಕೆಲವು ಹೆಜ್ಜೆಯಿಟ್ಟನಂತರ ಕೇಶವ ಪಿಳ್ಳೆ ತಿರುಗಿ ನೋಡಿದರು. ಮೆನನ್ ಕೂಡ ತಿರುಗಿ ನೋಡಿದರು. ಆರ್. ಟಿ. ಮೆನನ್ ಮತ್ತು ಮುಖ್ಯ ಮಂತ್ರಿ ಗುಪ್ತಾಲೋಚನೆ ನಡೆಸುವುದಕ್ಕೆ ಹೋಗುವುದಾಗಿರಬೇಕು.

ಕೇಶವ ಪಿಳ್ಳೆ ನಿಟ್ಟುಸಿರು ಬಿಟ್ಟದ್ದಲ್ಲ. ಹಲ್ಲು ಕಡಿದು ಮುಖ ಸಿಂಡರಿಸಿಕೊಂಡದ್ದು. ನರನಾಡಿಗಳೆಲ್ಲ ಉಬ್ಬಿದುವು. ಆಯುಷ್ಯದಲ್ಲಿ ಇದು ವರೆಗೆ ಉಂಟಾಗದಂತಹ ವಿಕಾರ ಹೇಗೆ ಉಂಟಾಯಿತು ಎಂದು ತಿಳಿಯದು. ಎಲ್ಲಿಂದ ಎಂದು ತಿಳಿಯದು. ಅವರಲ್ಲಿ ಒಂದು ಜಾಗೃತಿಯನ್ನುಂಟುಮಾಡಿತು. ಕೇಶವ ಪಿಳ್ಳೆ ಹೋಗುತ್ತಿದ್ದಾಗ ಆರ್. ಟಿ. ಮೆನನ್ನನನ್ನು ಮತ್ತೊಮ್ಮೆ ನೋಡಿದರು. ಜಯಿಸಿದ ರೀತಿಯಲ್ಲಿ ಆರ್. ಟಿ. ಮೆನನ್ ಹೋಗುತ್ತಿದ್ದರು.

ಇದುವರೆಗೆ ಅನುಭವಕ್ಕೆ ಬಾರದ ಒಂದು ಅಸ್ವಸ್ಥತೆ ಕೇಶವ ಪಿಳ್ಳೆಯ ಮನಸ್ಸನ್ನು ಬಾಧಿಸಿತು. ಸಮಯ ಕಳೆದಂತೆಲ್ಲ ಆ ಅಸ್ವಸ್ಥತೆ ಹೆಚ್ಚುತ್ತಿತ್ತೇ ಹೊರತು ಕಡಿಮೆಯಾಗುತ್ತಿರಲಿಲ್ಲ. ಅವರಿಗೆ ಸರಿಯಾಗಿ ಕುಳಿತುಕೊಳ್ಳಲಾಗುತ್ತಿರಲಿಲ್ಲ. ಏನನ್ನೋ ಮಾಡಬೇಕೆನ್ನುವ ಆವೇಶ ಅನಿಯಂತ್ರಿತವಾಗಿ ಮೂಡಿತ್ತು. ಏನು ಮಾಡಬೇಕೆನ್ನುವುದು ತಿಳಿಯದು. ಅವರ ಎಲ್ಲ ಸಾಮರ್ಥ್ಯಗಳೂ ಎಚ್ಚೆತ್ತುವು.

ಯಾವ ಕೆಲಸವನ್ನೂ ಮಾಡದೆ ಬೇಗನೆ ಮನೆಗೆ ಹೋದರು. ಅವರ ಮನಸ್ಸಿನ ಅಸ್ವಸ್ಥತೆಯನ್ನು ಕಾತ್ಯಾಯಿನಿಯಮ್ಮ ತಿಳಿದಳು. ಎಷ್ಟೋ ಕಾಲದಿಂದ ಆ ಸ್ತ್ರೀಗೆ ಆ ಸಾಮರ್ಥ್ಯ ಬಂದಿತ್ತು. ಗಂಡನ ಮನಸ್ಸಿನ ಸಮತೋಲನದಲ್ಲಿ ಒಂದು ಸಣ್ಣ ತೊಂದರೆಯುಂಟಾದರೂ ಅವಳಿಗೆ ಅರ್ಥವಾಗುತ್ತಿತ್ತು. ಅದು ಏತರಿಂದ ಎಂದು ಹೇಳುವಷ್ಟರ ಮಟ್ಟಿಗೂ ಸಾಧ್ಯವಾಗುತ್ತಿತ್ತು. ಅಂದೂ ಆ ಅವಸ್ಥೆಯನ್ನು ಒಂದೇ ನೋಟದಲ್ಲಿ ಅರ್ಥ ಮಾಡಿಕೊಂಡಳು. ವಿಷಯವೇನೆಂದು ಕೇಳುವುದಕ್ಕೆ ಮೊದಲೇ ಕೇಶವ ಪಿಳ್ಳೆ ಹೇಳಿದರು:

"ಅವರು ನನ್ನನ್ನು ಆದಷ್ಟು ಬೇಗ ಮನೆಗೆ ಕಳಿಸಬೇಕು. ನಾನಿರೋದರಿಂದ ಅವರ ಕೊಳ್ಳೆ ಸರಿಯಾಗಿ ನಡೆಯೋದಿಲ್ಲ. ಅವರ ಲೇಬರ್ ಕಂಟ್ರಾಕ್ಟ್ ಸೊಸೈಟಿಯೂ ಸಮುದ್ರಕ್ಕೆ ಕಲ್ಲು ಕಟ್ಟಿಸುವುದೂ ಕಾರ್ಮಿಕ ಸೊಸೈಟಿಯೂ ಯಾವುದೂ ಸರಿಯಾಗಿ ನಡೆಯುತ್ತಿಲ್ಲ. ನಾನು ಈಗ ರಜೆ ತೆಗೆದುಕೊಳ್ಳಬೇಕಂತೆ !"

ಕಾತ್ಯಾಯಿನಿಗೆ ಅದು ನಡುಕ ಹುಟ್ಟಿಸುವಂತಹ ವಿಷಯವಾಗಿರಲಿಲ್ಲ. ಅವಳ ಅಭಿಪ್ರಾಯವನ್ನೇ ಬೇರೆ ಕೆಲವರು ಅನುಮೋದಿಸಿದರು. ಅದು ಎಷ್ಟೋ ಒಳ್ಳೆಯದು ಎಂದು ಅವಳು ಭಾವಿಸುವುದು. ಕಾತ್ಯಾಯಿನಿಯಮ್ಮ ಹೇಳಿದಳು:

"ನಾನು ಯಾವಾಗಲೂ ಹೇಳೋದಲ್ಲವಾ?" ಒಂದು ಕ್ಷಣ ಬಿಟ್ಟು ಮತ್ತೆ ಹೇಳಿದಳು:

"ಹೋಗೋದೇ ಒಳ್ಳೇದು. ಈ ತಿರುವನಂತಪುರದಿಂದ ಹೊರಟುಹೋಗ ಬೇಕು. ಆಗಲೇ ಸಮಾಧಾನ ಸಿಕ್ಕೋದು."

ಕಾತ್ಯಾಯಿನಿಯಮ್ಮ ನಿರ್ವಿಕಾರಿಯಾಗಿ ಒಂದು ವಿರೋಧಿಸಲಾರದ ವಾಸ್ತವ ಸಂಗತಿಯನ್ನು ಹೇಳಿದಂತೆ ಮಾತನಾಡಿದ್ದಾಗಿತ್ತು ಅದು. ಅದಾಗಿತ್ತು ಅದರ ವೈಶಿಷ್ಟ್ಯ. ಕೇಶವ ಪಿಳ್ಳೆ 'ಹ್ಞು' ಎಂದರು.

ಆ ದಿನ ವಿಶೇಷವಾಗಿ ಏನೋ ಸಂಭವಿಸಿದೆ ಎಂದು ಕಾತ್ಯಾಯಿನಿ ಅಮ್ಮನಿಗೆ ಅರ್ಥವಾಯಿತು. ಅದೇನೆಂದು ತಿಳಿಯಲು ಅವಳಿಗೆ ಕುತೂಹಲವುಂಟಾಯಿತು. ಅವರು ಅದನ್ನು ವಿವರಿಸಿದರು:

"ಆ ಮಲಬಾರಿನ ನಾಯಿ ನನ್ನನ್ನು ನೋಡಿ ಜಯಿಸಿದವನ ಹಾಗೆ ತಿರುಗಾಡ್ತಾನೆ" —ಈ ಮಾತಿನಿಂದ ಪ್ರಾರಂಭಿಸಿ ಅವರು ಆ ಕಥೆಯನ್ನು ಹೇಳಿ ಮುಗಿಸಿದ್ದು. ಕಾತ್ಯಾಯಿನಿಯಮ್ಮ ಹೇಳಿದಳು:

"ಧ್ವನಿ ಚೆನ್ನಾಗಿದ್ದಾಗಲೇ ಹಾಡು ನಿಲ್ಲಿಸಿದ್ದರೆ ಚೆನ್ನಾಗಿತ್ತು."

ಅಸ್ವಸ್ಥರಾಗಿದ್ದ ಕೇಶವ ಪಿಳ್ಳೆ ಹೇಳಿದರು: "ಹ್ಞುಂ, ಹಾಡು ನಿಲ್ಲಿಸೋಣ. ಆದರೆ ಹಾಗಲ್ಲ ಹಾಡು ನಿಲ್ಲಿಸಿ ಸುಮ್ಮನೆ ವಿಶ್ರಮಿಸೋದಕ್ಕೆ ಹೋಗೋದಿಲ್ಲ."

"ಮತ್ತೇನು ಮಾಡೋದಕ್ಕೆ ಹೋಗ್ತೀರಿ?"

ಅದಕ್ಕೆ ಕೇಶವ ಪಿಳ್ಳೆ ಉತ್ತರ ಹೇಳಲಿಲ್ಲ. ಒಂದು ಸಲ 'ಹ್ಞುಂ' ಎಂದರು ಅಷ್ಟೆ. ಅದು ಕಾತ್ಯಾಯಿನಿಯಮ್ಮನ ಕುತೂಹಲವನ್ನು ಹೆಚ್ಚಿಸಲಿಲ್ಲ. ಈ ಉದ್ಯೋಗವನ್ನು ಕೈಬಿಟ್ಟು ತಿರುವನಂತಪುರದಿಂದ ಅವಳಿಗೆ ಹೋದರೆ ಸಾಕಾಗಿತ್ತು. ಆತ ಪುನಃ ಏನೋ ಮಾಡುವುದಕ್ಕೆ ಹೋಗ್ತಿದ್ದಾರೆ. ಅದೇನಾದರೂ ಇರಲಿ!

ಕಾತ್ಯಾಯಿನಿಯ ಜೀವನದಲ್ಲಿ ಒಂದು ಭಾರವಾದ ನಿಮಿಷವಾಗಿತ್ತು ಅದು. ಅಷ್ಟು ಭಾರವಾದ ನಿಮಿಷವಾಗಿರಲಿಲ್ಲ ಎಂದೂ ಹೇಳಬಹುದು. ಅವಳು ಎಷ್ಟೋ ದಿನ ಪ್ರಸನ್ನಳಾಗಿದ್ದದ್ದುಂಟು. ಕೆಲವಾರು ದಿನಗಳ ನಂತರ......... ಕನ್ಯಾಕುಮಾರಿಯ ನಂತರ......... ಆ ಸ್ತ್ರೀಯ ತುಟಿಯಿಂದ ಮಂದಹಾಸ ಮರೆಯಾಗಿತ್ತು. ಈ ಮಧ್ಯೆ ಅವಳಲ್ಲಿ ದೊಡ್ಡ ವ್ಯತ್ಯಾಸಗಳುಂಟಾದುವು. ಅವಳು ಶೋಷಿಸಿಹೋದಳು. ಮುಖದ ಕಾಂತಿ ಮರೆಯಾಯಿತು. ಶರೀರ ಕ್ಷೀಣಿಸಲು ಇನ್ನು ಹೆಚ್ಚು ದಿನ ಬೇಕಾಗಿರಲಿಲ್ಲ. ಮುಖದ ಎಲುಬುಗಳು ಎದ್ದು ಕಾಣಿಸತೊಡಗಿದುವು. ತಲೆಗೂದಲಿನ ಕೆಲವು ಕೆಲವು ಎಳೆಗಳು ಬೆಳ್ಳಗಾದುವು. ಎಂದೆಂದಿಗೂ ಮುಖದ ಪ್ರಸನ್ನತೆಯನ್ನು ಅಳಿಸಿಹಾಕಿದಂತಿತ್ತು. ಒಂದು ಕಾರ್ಗತ್ತಲೆ ಹರಿದು ಹೋದಂತೆ, ಒಂದು ದೊಡ್ಡ ಭಾರವನ್ನು ಇಳಿಸಿದಂತೆ ಅವಳು ನಕ್ಕಳು. ಒಂದು ವೇಳೆ ಅವಳು ಒಳ್ಳೆಯ ಕಾಲವನ್ನು ಕಾಣಬಹುದು.

ಉತ್ಸಾಹವಾಗಿ ಕಳೆದ ಆ ಒಳ್ಳೆಯ ಕಾಲ ತಿರುವನಂತಪುರವನ್ನು ಬಿಡುವಾಗ ಉಂಟಾಗಲೂಬಹುದು. ಅವಳು ಕೇಳಿದಳು:

"ಕೆಲಸ ಕೈಬಿಟ್ಟ ಮೇಲೂ ತಿರುವನಂತಪುರದಲ್ಲೇ ಇರಬೇಕು ಅಂತಲಾ?"

ಕೇಶವ ಪಿಳ್ಳೆಯ ತಲೆಗೆ ಆ ಪ್ರಶ್ನೆ ಹೋಗಲಿಲ್ಲ. ಒಂದು ದೊಡ್ಡ ಯೋಜನೆ ಅವರ ತಲೆಯೊಳಗೆ ರೂಪುಗೊಳ್ಳುತ್ತಿತ್ತು.

"ಹ್ಞುಂ, ಈ ಘೋಷಣೆ ಮಾಡಿಕೊಂಡು ಬೀದಿ ಬೀದಿ ಅಲೆದವನು ನನಗೆ ಹೇಳೋ ಅಷ್ಟಕ್ಕಾದ. ಇವರನ್ನೇ ಹೊರಗೆ ಹಾಕೋದಕ್ಕಾಗುತ್ತಾ ಅಂತ ಒಂದು ಕೈ ನೋಡ್ತೀನಿ."

ಹಳೆಯ ರೆವಿನ್ಯೂ ಸೆಕ್ಷನ್ ಕ್ಲಾರ್ಕುಗಳು ಬಂದು ಅನುಮೋದಿಸಿದಾಗ ಹರಿಹರ ಯ್ಯರ್ ನೀಡಿದ ಆಶೀರ್ವಾದವಾಗಿರಬೇಕು. ಕೇಶವ ಪಿಳ್ಳೆಯ ಮನಸ್ಸಿನಲ್ಲಿ, ತಲೆಯಲ್ಲಿ ಆಗ ತುಂಬಿಕೊಂಡಿದ್ದದ್ದು ಒಬ್ಬ ಮಂತ್ರಿಯಾಗುವುದು. ಆದರೆ ಕೇಶವ ಪಿಳ್ಳೆ ಖಂಡಿತವಾಗಿಯೂ ಅದನ್ನು ಕುರಿತು ಆಲೋಚಿಸಿರಲಿಲ್ಲ. ಮುಖ್ಯ ಮಂತ್ರಿ ಅವರನ್ನು ಅಪಮಾನಿಸಿದರು—ಅದಕ್ಕೆ ಪ್ರತೀಕಾರ ಮಾಡಬೇಕು. ಈ ಮಂತ್ರಿಸಭೆಯನ್ನು ಉರುಳಿಸಬೇಕು.

ಕಾತ್ಯಾಯಿನಿಯಮ್ಮನಿಗೆ ತಿಳಿಯಬೇಕಾಗಿದ್ದದ್ದು ಅದಲ್ಲ. ಅವಳು ಅದೇ ಪ್ರಶ್ನೆಯನ್ನು ಆವರ್ತಿಸಿದಳು:

"ಏನೇ ಆಗಲಿ ಈ ತಿರುವನಂತಪುರದಲ್ಲೇ ವಾಸಮಾಡಬೇಕೂ ಅಂತಲಾ?"

ಕೇಶವ ಪಿಳ್ಳೆ ಕಾತ್ಯಾಯಿನಿಯಮ್ಮನ ಹತ್ತಿರ "ಆ್ಞ! ನೀನು ಏನು ಕೇಳಿದ್ದು?" ಎಂದರು.

ಕಾತ್ಯಾಯಿನಿಯಮ್ಮ ಆ ಪ್ರಶ್ನೆಯನ್ನು ಪುನಃ ಕೇಳಿದಳು. ಉದ್ಯೋಗದಿಂದ ಕೆಳಗಿಳಿಯಲು ಗಂಡನಿಗೆ ಸಮ್ಮತವೆಂದು ತೋರುತ್ತದೆ. ಒಳ್ಳೆಯದು. ಇನ್ನು ಮೇಲೆ ತಿಳಿಯಬೇಕಾದದ್ದು ತಿರುವನಂತಪುರದಲ್ಲೇ ವಾಸ ಮಾಡಬೇಕು ಎಂತಲೇ ಎಂದು.

ಕೇಶವ ಪಿಳ್ಳೆ ಕೇಳಿದರು: "ಎಲ್ಲಿ ವಾಸಮಾಡಿದರೇನು? ನಾನು ಆ ಕೆಲಸ ಸಾಧಿಸಬೇಕು."

ಕಾತ್ಯಾಯಿನಿ ಅವಳ ಅಸಮ್ಮತಿಯನ್ನು ಸ್ಪಷ್ಟವಾಗಿ ತಿಳಿಸಿದಳು.

"ನನಗಿಷ್ಟವಿಲ್ಲ. ನಾನು ಹೋಗ್ತೀನಿ. ನಾನು ಸಹಿಸೋ ಅಷ್ಟು ಸಹಿಸಿದೆ. ಇನ್ನು ನನಗೆ ಒಂದಿಷ್ಟೂ ಸಹಿಸೋದಕ್ಕಾಗೋದಿಲ್ಲ." ಕೇಶವ ಪಿಳ್ಳೆಗೆ ಸಿಟ್ಟು ಬಂದಿತು.

"ನಾನು ಆನೆ ವಿಷಯ ಆಲೋಚನೆ ಮಾಡುವಾಗ ಇವಳು ಸೌತೆಕಾಯಿ ವಿಷಯ ಮಾತಾಡ್ತಾಳೆ. ಇದೆಂಥ ತಿಳಿಗೇಡಿತನ?"

ಕಾತ್ಯಾಯಿನಿಯಮ್ಮನಿಗೂ ಸಿಟ್ಟು ಬಂದಿತು. ಇಷ್ಟು ಧ್ವನಿವ್ಯತ್ಯಾಸದಲ್ಲಿ ಗಂಡ ಮಾತನಾಡಿದರೆ—ಮೊದಲಾಗಿದ್ದಿದ್ದರೆ ಕಾತ್ಯಾಯಿನಿಯಮ್ಮ ಏನೂ ಹೇಳ್ತಿರಲಿಲ್ಲ.

ಗಂಡನ ಹಿತದಲ್ಲಿ ಅವಳು ಪ್ರೋತ್ಸಾಹಿಸುತ್ತಿದ್ದಳೋ ಅದಕ್ಕೆ ಹೊಂದಿಕೊಳ್ಳುತ್ತಿದ್ದಳೋ ಯಾವುದನ್ನಾದರೂ ಮಾಡುತ್ತಿದ್ದಳು. ಅವಳು ವಿರೋಧಿಸುವುದಕ್ಕೆ ತೀರ್ಮಾನಿಸಿದಳು. ಮಾತ್ರವಲ್ಲ ಹೇಳಿದ್ದು ಸಾಲದು ಎಂದು ಅವಳಿಗೆ ತೋರಿದ್ದು.

"ಹ್ಞು ! ತಿಳಿಗೇಡಿತನ ಏನು ಬಂತು? ನಾನೂ ನನ್ನ ಮಗಳೂ ಊರಿಗೆ ಹೋಗಿ ಇರ್ತೀವಿ."

ಕೇಶವ ಪಿಳ್ಳೆ ಕಠಿಣವಾದ ಮುನ್ಸೂಚನೆ ಕೊಟ್ಟರು. "ಇಲ್ಲಿ ನೋಡು, ಹೇಳೋದನ್ನೆಲ್ಲ ಕೇಳುತ್ತೆ ಅಂತ ಹಾವಿನ ಹಲ್ಲು ಎಣಿಸಬೇಕು ಅಂತ ಆಲೋಚಿಸ ಬೇಡ. ನಾನು ನನ್ನ ವಿಷಯ ಹೇಳ್ತಿದ್ದೆ" ಎಂದು ಹೇಳಿ ಕೇಶವ ಪಿಳ್ಳೆ ಕೈ ಎತ್ತಿಕೊಂಡು ಕಾತ್ಯಾಯಿನಿಯಮ್ಮನ ಕಡೆಗೆ ಹೋದರು.

ಕಾತ್ಯಾಯಿನಿಯಮ್ಮ ಸ್ವಲ್ಪವೂ ಜಗ್ಗಲಿಲ್ಲ. ಅವಳು ನಿಂತ ಕಡೆಯಿಂದ ಅಲುಗಾಡಲಿಲ್ಲ. ಹೊಡೆಯೋದಿದ್ದರೆ ಹೊಡೆಯಲಿ. ಹೊಡೆಸಿಕೊಳ್ಳುವುದು ಎನ್ನುವ ರೀತಿಯಲ್ಲಿ ಅವಳು ನಿಂತಿದ್ದಳು. ಅವಳು ಕಣ್ಣು ಕೆಂಪಗೆ ಮಾಡಿಕೊಂಡು ಹೇಳಿದಳು:

"ಇನ್ನು ಮೇಲೆ ಅದೂ ಮಾಡ್ತೀರಿ ಅಂತ ನನಗೆ ಗೊತ್ತು". ಸಹಿಸಲು ಸಾಧ್ಯವಿಲ್ಲದೆ ಅವಳು ಹೇಳಿದಳು—

"ಹಾಗಿದ್ದರೆ ನಾನು ಒಂದು ಸುಲಭದ ಮಾರ್ಗ ಹೇಳ್ತೀನಿ. ಅದನ್ನು ಮಾಡಿ ಮುಗಿಸಿಬಿಡಿ. ನನ್ನನ್ನು ಕೊಂದು ಹಾಕಿಬಿಡಿ. ಆ ಮೇಲೆ ಯಾರೂ ನಿಮ್ಮನ್ನು ಕೇಳೋದಿಲ್ಲ. ನೀವೇನು ಮಾಡಿದರೂ ತಿಳಿಯೋದಿಲ್ಲ. ಆ ಮೇಲೆ ಕಷ್ಟವೆಲ್ಲ ಕಳೀತಲ್ಲ. ಮಂತ್ರಿಯಾದ ಮೇಲೆ ಅವಳ ಜೊತೇಲಿರಬಹುದು. ಅವಳು ತಕ್ಕ ಹೆಂಡತಿಯಾಗಿರ್ತಾಳೆ."

ಆ ಮಾತು ತುಂಬ ಹೆಚ್ಚಾಗಿತ್ತು. ಕೇಶವ ಪಿಳ್ಳೆ ಗರ್ಜಿಸಿದರು. ನಿಜ, ಗರ್ಜಿಸಿದರು:

"ನೀನು ಏನು ಹೇಳ್ತಿದ್ದೀಯಾ?"

ಕಾತ್ಯಾಯಿನಿ ಸುಮ್ಮನಾಗಲಿಲ್ಲ.

"ಹೌದು, ಅದನ್ನೇ ನಾನು ಹೇಳಿದ್ದು. ಈ ತೊಂದರೆ ಹೋಗಿಸಿಕೊಂಡು ಅವಳನ್ನು ಹೆಂಡತಿ ಮಾಡಿಕೊಂಡು ಮಂತ್ರಿಯಾಗಿ ಸುಖವಾಗಿರಿ. ಒಂದೇ ಏಟಿಗೆ ಸಾಯಿಸಿ ಹಾಕಿ."

ಕಾತ್ಯಾಯಿನಿಯಮ್ಮ ತನ್ನನ್ನು ತಾನು ಮರೆತು ಗಟ್ಟಿಯಾಗಿ ಅತ್ತಳು. ಆ ಸಂಭಾಷಣೆಯೂ ಗಟ್ಟಿಯಾಗಿತ್ತು. ಆ ಮನೆಯಲ್ಲಿ ಅಷ್ಟು ಗಟ್ಟಿಯಾದ ಮಾತುಕತೆ ಒಮ್ಮೆಯೂ ಉಂಟಾಗಿರಲಿಲ್ಲ. ಕೇಶವ ಪಿಳ್ಳೆಯೂ ತಮ್ಮನ್ನು ತಾವು ಮರೆತರು. ಅವರಿಗೂ ಏನು ಹೇಳುವುದಕ್ಕೂ ತೋರುತ್ತಿರಲಿಲ್ಲ. ಯಾವುದೋ ಶಬ್ದಗಳು ಬಿಗಿಯಾಗಿ ಕಚ್ಚಿದ್ದ ಹಲ್ಲುಗಳ ಮಧ್ಯದಿಂದ ಹೊರಗೆ ಬರುತ್ತಿದ್ದವು, ಸಿಟ್ಟನ್ನು ತಡೆದುಕೊಳ್ಳುವ ಪ್ರಯತ್ನದಲ್ಲಿ. ಅವರ ಮಾಂಸಖಂಡಗಳೂ ನರಗಳೂ ಉಬ್ಬಿದುವು.

ಅದೊಂದು ಧ್ವನಿ ಎತ್ತರಿಸಿದ ಮಾತಾಗಿತ್ತು. ಆ ಕುಟುಂಬದಲ್ಲಿ ಅಂಥದ್ದೊಂದೂ

ನಡೆದಿರಲಿಲ್ಲ. ಕೇಶವ ಪಿಳ್ಳೆ ಹೀಗೆ ಒಮ್ಮೆಯೂ ಸಿಟ್ಟಾಗಿರಲಿಲ್ಲ. ಕಾತ್ಯಾಯಿನಿಯಮ್ಮ ಗಂಡನನ್ನು ಎದುರಿಸಿದ್ದೂ ಇಲ್ಲ. ಎಲ್ಲವನ್ನೂ ಸಹಿಸಿಕೊಂಡು ಮೌನವಾಗಿರುತ್ತಿದ್ದ ಆ ಸ್ತ್ರೀ ಗಂಡನ ಮೇಲೆ ಆರ್ಭಟಿಸುತ್ತ ನಿಂತಿದ್ದಳು. ಆದರೆ ಅವಳ ಆ ನಿಲುವು ಗಂಡನ ದೊಡ್ಡ ಧ್ವನಿಯನ್ನು ಸ್ವಾಗತಿಸಿತ್ತು. ಅವಳು ಅಳುವಿನ ಮಧ್ಯೆ ಹೇಳಿದಳು:

"ಇದು ನನಗೆ ಗೊತ್ತಿತ್ತು. ಹೀಗೆಲ್ಲ ನಡೆಯುತ್ತೆ ಅಂತ ಅಂದುಕೊಂಡಿದ್ದೆ."

ರೂಕ್ಷವಾಗಿ ಕೇಶವ ಪಿಳ್ಳೆ ಕೇಳಿದರು:

"ಹೇಗೆಲ್ಲ?"

"ನನ್ನನ್ನು ಹೊಡೆಯೋದು ಬಡಿಯೋದು. ಇನ್ನು ಮೇಲೆ ಅದೂ ನಡೆಯುತ್ತೆ. ನನಗೆ ಗೊತ್ತು."

ಕೇಶವ ಪಿಳ್ಳೆ ತಮ್ಮನ್ನು ತಾವು ಮರೆತು ಕೈ ಮೇಲೆತ್ತಿದರು. ಅಂತಹ ಒಂದು ಘಟನೆ ಮೊತ್ತಮೊದಲಾಗಿ ಉಂಟಾದದ್ದು. ಆದರೆ ಅದು ಸಂಭವಿಸಿತು. ಅವರು ಕಟುವಾಗಿಯೇ ಕೇಳಿದರು: "ನೀನು ನನ್ನನ್ನು ನೆಮ್ಮದಿಯಾಗಿರೋದಕ್ಕೆ ಬಿಡೋದಿಲ್ಲವಾ?"

ಥಟ್ಟನೆ ಕಾತ್ಯಾಯಿನಿಯಮ್ಮ ಕೇಳಿದಳು:

"ನಾನೆಂದೂ ನೆಮ್ಮದಿ ಹಾಳುಮಾಡಿದೋಳು. ನನಗೆ ಗೊತ್ತು."

ಕೇಶವ ಪಿಳ್ಳೆಗೆ ಪುನಃ ಸಹಿಸಲು ಸಾಧ್ಯವಿಲ್ಲದಾಯಿತು. ಅದೊಂದು ತಾಳ್ಮೆ ತಪ್ಪಿದ ವಿಚಾರವಾಗಿತ್ತು.

"ನೀನು ಯಾಕೆ ಹೀಗೆ ಚಾಮುಂಡಿ ಹಾಗಾಡ್ತೀ? ಈ ಅವತಾರ ತಾಳೋದಕ್ಕೆ ನಾನು ಏನು ಹೇಳಿದೆ? ಇಲ್ಲಿ ಏನು ನಡೀತು?"

ಅದಕ್ಕೂ ಕೂಡಲೇ ಕಾತ್ಯಾಯಿನಿಯಮ್ಮ ಉತ್ತರಿಸಿದಳು:

"ಇವತ್ತಲ್ಲ ಉಂಟಾದದ್ದು. ಎಷ್ಟೋ ತಿಂಗಳ ಹಿಂದೆ ಕನ್ಯಾಕುಮಾರಿಗೆ ಹೋಗಿ ಬಂದ ಮೇಲೆ ಉಂಟಾದದ್ದು. ಒಂದು ಸಲ ಜ್ಞಾಪಿಸಿಕೊಂಡು ನೋಡಿ. ಮೊದಲು ಹೇಗಿದ್ದೀರಿ ಅಂತ."

ಕೇಶವ ಪಿಳ್ಳೆ ಹಲ್ಲು ಕಡಿಯುತ್ತ ರೇಗಿದರು: "ಹಾಳಾದವಳು! ನನಗೆ ನೆಮ್ಮದಿ ಕೊಡೋದಿಲ್ಲ."

"ನಾನು ಏನು ನೆಮ್ಮದಿ ಕೊಡದೇ ಇರೋದು? ಈ ಕತ್ತಿಗೆ ತಾಳಿ ಕಟ್ಟಿದ ದಿನದಿಂದ ಜ್ಞಾಪಿಸಿಕೊಂಡು ನೋಡಿ. ನಾನು ಏನು ಹೇಳಿದ್ದೀನಿ?"

ಗಂಟಲನ್ನು ಸರಿಮಾಡಿಕೊಳ್ಳುತ್ತ ಕಾತ್ಯಾಯಿನಿಯಮ್ಮ ಪುನಃ ಹೇಳಿದಳು:

"ನಾನು ಎಲ್ಲ ಸಹಿಸಿದೆ. ಒಂದು ಸಲ ನಿಮ್ಮ ವಿಷಯವನ್ನೆಲ್ಲ ಜ್ಞಾಪಿಸಿಕೊಂಡು ನೋಡಿ."

ಆ ಮೇಲೆ ಕನ್ಯಾಕುಮಾರಿಗೆ ಹೋಗಿ ಬಂದ ನಂತರ ಆ ಮನೆಯಲ್ಲಿ ಉಂಟಾದ

ಬದಲಾವಣೆಯನ್ನು ಒಂದೊಂದಾಗಿ ಕಾತ್ಯಾಯಿನಿ ಹೇಳಿದಳು. ಆ ಹಿಂದಿನ ಪ್ರೀತಿ, ಅನಂತರ ಕಂಡುಬಂದಿಲ್ಲ. ಆ ನಗು, ವಿನೋದಗಳು ಅಲ್ಲಿ ಮೂಡಿರಲಿಲ್ಲ. ತಮ್ಮನ್ನು ತಾವು ಮರೆತಂತೆ ಏನನ್ನೋ ನೆನಸಿಕೊಳ್ಳುತ್ತಿದ್ದದ್ದು. ಜೀವನದ ಆನಂದ ತೊಡೆದು ಹೋಯಿತು ಎನ್ನುವುದು ವಾಸ್ತವಿಕ ಸಂಗತಿಯಾಗಿತ್ತು. ಅದನ್ನು ಅಲ್ಲಗಳೆಯಲು ಸಾಧ್ಯವೇ ಎಂದು ಕಾತ್ಯಾಯಿನಿಯಮ್ಮ ಕೇಳಿದಳು.

ಕೇಶವ ಪಿಳ್ಳೆ ಮೌನವಾಗಿ ಕುಳಿತಿದ್ದರು. ಇಂತಹ ಸ್ಥಿತಿಗಳಲ್ಲಿ ಮಾತ್ರವಲ್ಲ ಗಂಭೀರ ಸನ್ನಿವೇಶಗಳಲ್ಲಿ ಹಗುರವಾದ ಮನಸ್ಸಿನಿಂದ ಸಲಹೆ ನೀಡಿದುದನ್ನೂ ತನ್ನ ಸಾಧಾರಣ ಬುದ್ಧಿಯಿಂದಲೂ ಕಾತ್ಯಾಯಿನಿಯಮ್ಮ ಪರಿಹಾರಗಳನ್ನು ನಿರ್ದೇಶಿಸಿರುವುದನ್ನೂ ಅವರು ನೆನಸಿಕೊಂಡರು. ಯಾವುದೂ ಗಂಭೀರ ಸನ್ನಿವೇಶದಂತೆ ಅವರಿಗೆ ತೋರಿಲ್ಲ. ಯಾವ ವಿಷಮತೆಯ ಭಾರವೂ ಆ ಮನುಷ್ಯನ ಮನಸ್ಸಿನ ಒಳ ಹೋಗುವುದನ್ನು ಬಿಟ್ಟಿಲ್ಲ. ಇಂದು ಎಂತಹ ಬದಲಾವಣೆ ಬಂದದ್ದು. ಹೆಂಡತಿ ಹೆಚ್ಚಿನ ವೇದನೆಯನ್ನುಂಟುಮಾಡುವ ಪ್ರಶ್ನೆಯನ್ನುಂಟುಮಾಡಿದ್ದಾಳೆ.

ಅಸಹಾಯಕರಾಗಿ ಕೇಶವ ಪಿಳ್ಳೆ ದೈನ್ಯದಿಂದ ಹೇಳಿದರು: "ಮನೆಗೆ ಬಂದಾಗ ನನಗೆ ಸಮಾಧಾನ ಸಿಕ್ಕಿತ್ತು. ಈಗ ಅದೂ ಇಲ್ಲದಾಯ್ತಾ?"

ಕಾತ್ಯಾಯಿನಿಯಮ್ಮ ಅವಳ ಸತ್ಯ ಸಂಗತಿಯನ್ನು ಮುಚ್ಚಿಟ್ಟುಕೊಳ್ಳಲಿಲ್ಲ: "ನನಗೂ ಇದನ್ನು ಸಹಿಸೋದಕ್ಕಾಗೋದಿಲ್ಲ. ನನಗೂ ಅನ್ನಿಸುತ್ತೆ. ನಾನು ತೊಂದರೆ ಕೊಡ್ತಿದ್ದೀನಿ ಅಂತ. ಕೆಟ್ಟ ಆಲೋಚನೆಯಿಂದ ನಾನು ತೊಂದರೆ ಕೊಡ್ತಿಲ್ಲ."

ಇಬ್ಬರಿಗೂ ಸಾಕಾಯಿತು. ಹಿಡಿತ ತಪ್ಪಿ ಮುಂದುವರಿದಿದ್ದ ಕ್ಷೋಭೆ ಹೋಗುವಷ್ಟು ದೂರ ಹೋಗಿತ್ತು. ಆಗ ಬುದ್ಧಿ, ವಿಕಾರ, ನರನಾಡಿಗಳು ಎಲ್ಲವೂ ಕ್ಷೀಣಿಸಿದುವು. ಅಂತಹ ಕ್ಷೀಣಿಸಿದ ಸ್ಥಿತಿಯಲ್ಲಿ ಒಂದು ದೋಷಾರೋಪಣೆಯಾಗಿತ್ತು ಅದು. ಒಂದು ಜೀವನವಿಡೀ ಕಾಪಾಡಿಕೊಂಡು ಸೂಕ್ಷ್ಮವಾಗಿಟ್ಟುಕೊಂಡುಬಂದಿದ್ದ ಯಾವುದೋ ಒಂದು ಕೈಬಿಟ್ಟು ಹೋದಂತೆ ಕಾತ್ಯಾಯಿನಿಯಮ್ಮನಿಗೆ ತೋರಿತು. ಹೇಳಬಾರದ್ದನ್ನು ಹೇಳಿದ್ದಾಗಿತ್ತು. ಮಾಡಬಾರದ್ದನ್ನು ಮಾಡಿದ್ದು. ಎಲ್ಲವೂ ಹಾಳಾಯಿತು. ಎಷ್ಟೆಷ್ಟು ಪರೀಕ್ಷೆಗಳು ಕಳೆದುವು! ಅಂದು ಇದು ಸಂಭವಿಸಲಿಲ್ಲ. ಯೌವ್ವನದ ಕಾವಿನಲ್ಲೂ ತಡೆ ಹಿಡಿಯಲು ಸಾಧ್ಯವಾಯಿತು. ಇಂದು ಎಲ್ಲವನ್ನೂ ಅನುಭವಿಸಿದ ನಂತರ ಇದು ಸಂಭವಿಸಿತು. ಹಾಗೆ ಅಪರಾಧ ಮಾಡಿದವಳಂತೆ ಕಾತ್ಯಾಯಿನಿಯಮ್ಮ ನಿಂತುಕೊಂಡು ಅಳುತ್ತಿದ್ದಳು.

ಕೇಶವ ಪಿಳ್ಳೆಯ ಮನಸ್ಸಿಗೂ ನೋವಾಗಿತ್ತು. ಯಾವ ವಿಷಯದಲ್ಲೂ ತೊಂದರೆ ಮಾಡದೆ ಇದ್ದ ಹೆಂಡತಿಯ ಮೇಲೆ ಕೈಯೆತ್ತಿದೆ. ಹೇಗೆ ಈ ತಿಳಿಗೇಡಿತನ ಬಂದಿತು ಎನ್ನಿಸಿತು. ಹೆಂಡತಿಯೊಡನೆ ನಡೆದುಕೊಳ್ಳುವುದು ಅವರಿಗೆ ಗೊತ್ತಿತ್ತು. ಅದಕ್ಕೊಂದು ಶಿಕ್ಷಣ ಬೇಕಾಗಿರಲಿಲ್ಲ. ಈಗ ಆ ಶಕ್ತಿ ಕೈಬಿಟ್ಟು ಹೋಯಿತೇ ಎಂದು

ಅವರು ಭಯಪಡುತ್ತಿದ್ದರು. ಛೇ ! ಹಾಗೆ ಮಾಡಬಾರದಾಗಿತ್ತು. ಒಂದು ಸಮಾಧಾನ ವನ್ನು ಕಂಡುಹಿಡಿಯುವ ಶ್ರಮವೂ ಪರಾಜಯ ಹೊಂದುತ್ತಿದೆ.

ಕಾತ್ಯಾಯಿನಿಗೆ ಆ ಮ್ಲಾನತೆಯಲ್ಲೂ ಒಂದು ಸಮಾಧಾನವುಂಟಾಗಿತ್ತು. ಅಂತಹ ದೊಡ್ಡ ತಪ್ಪೇನೂ ಮಾಡಿಲ್ಲವೆಂದು ವಾದಿಸಲು ಅವಕಾಶ ಸಿಕ್ಕಿತು. ಯಾದೃಚ್ಛಿಕವಾಗಿ ಹಾಗಾದದ್ದು. ತನ್ನ ಮನೆಯಲ್ಲೂ ಗಂಡನ ಮನೆಯಲ್ಲೂ ತಂದೆ ತಾಯಿಗಳು ಎಂದೂ ಜಗಳ ಕಾಯುತ್ತಿದ್ದರು. ಅದನ್ನು ಕಾತ್ಯಾಯಿನಿ ಜ್ಞಾಪಿಸಿಕೊಂಡಳು. ಅಲ್ಲಿ ತಾಯಿ ತಂದೆಯ ಮೇಲೆ ರೇಗುತ್ತಿದ್ದರು. ಆ ದೃಷ್ಟಿಯಲ್ಲಿ ನೋಡಿದಾಗ ಇದು ಅಷ್ಟೊಂದು ಕ್ಷಮಿಸಲಾಗದ ಸಿಟ್ಟೇನು? ಪಪ್ಪು ಪಿಳ್ಳೆ ಕುಟ್ಟಿಯಮ್ಮನ ಮೇಲೆ ಕೈ ಎತ್ತುತ್ತಿರಲಿಲ್ಲ. ಹೊಡೆಯುತ್ತಿದ್ದರು. ಹೆಚ್ಚು ಹೊತ್ತು ಕಳೆಯುವುದಕ್ಕೆ ಮೊದಲೇ ಅವರು ಹತ್ತಿರ ಕುಳಿತು ಮಾತನಾಡುತ್ತಿದ್ದುದನ್ನು ನೋಡಬಹುದು. ಅತ್ತೆ ಮಾವನಿಗೆ ವೀಳ್ಯದೆಲೆ ಮಡಿಸಿಕೊಡುತ್ತಿದ್ದುದನ್ನು ಕಾಣಬಹುದಾಗಿತ್ತು. ಅತ್ತೆ ಮಾವನ ನೆಳಲಿನಂತೆ ಹಿಂಬಾಲಿಸುತ್ತಿದ್ದುದನ್ನು ನೋಡಬಹುದಾಗಿತ್ತು. ಹಾಗೆಯೇ ಇದ್ದಾಗ ಅತ್ತೆಗೆ ಮಾವನಿಂದ ಒಂದು ಏಟು ಬೀಳಬೇಕು. ಅವರಿಗೆ ಆ ಹಕ್ಕಿತ್ತು. ಹಕ್ಕಿದ್ದದ್ದು ಸಿಕ್ಕಬೇಕು. ಅದ ಕ್ಕೋಸ್ಕರವಾಗಿ ಅತ್ತೆ ಮಾವನ ಹತ್ತಿರ ಕುಳಿತುಕೊಳ್ಳುತ್ತಿದ್ದರು.

ಆ ದೃಷ್ಟಿಯಲ್ಲಿ ಅದೊಂದು ದೊಡ್ಡ ಪತನವಾಗಿ ತೋರಲಿಲ್ಲ. ಅವರೆ ಮಾವ, ಹೆಂಡತಿಯಲ್ಲದೆ ಬೇರೊಬ್ಬಳಿಗೆ ಹೃದಯದಲ್ಲಿ ಸ್ಥಾನವನ್ನು ಕೊಟ್ಟಿರಲಿಲ್ಲ.

ಕನ್ಯಾಕುಮಾರಿಯಿಂದ ಪ್ರಾರಂಭವಾದ ಆ ಘಟನೆಗಳು ಮೊದಲು, ಎಲ್ಲವನ್ನೂ ತೆರೆದು ಹೆಂಡತಿಗೆ ತಿಳಿಸಿದರೇನು ಎಂದು ಕೇಶವ ಪಿಳ್ಳೆಗೆ ತೋರಿತು. ಭಾರ ಇಳಿಸಿಕೊಂಡು ಸಮಾಧಾನವಾಗಿರಲು ಅವರಿಗೆ ಸಾಧ್ಯವಾಯಿತು. ಹೆಂಡತಿಗೂ ಎಲ್ಲವನ್ನೂ ತಿಳಿದ ನಂತರ ಸಮಾಧಾನವಾಯಿತು. ಕನ್ಯಾಕುಮಾರಿ ಸಂಭವದ ನಂತರ ಆ ಮನೆ ಆನಂದ ಪಿದ್ದದ್ದಾಗಿರಲಿಲ್ಲ. ಅಲ್ಲಿಯ ಸಂತೃಪ್ತಿ ತೊಡೆದುಹೋಗಿತ್ತು. ಇನ್ನು ಮೇಲೆ ಅದು ಪುನಃ ಸಿಕ್ಕೀತೇ? ಉದ್ಯೋಗದಿಂದ ಹಿಂದಿರುಗಿದ ನಂತರ ಹಾಗೆ ತೇಜೋಹೀನವಾದ ಒಂದು ಮನೆಯೇ ಉಳಿಯಬೇಕಾದದ್ದು? ಜೀವನದಲ್ಲಿ ಬೇಕಾದದ್ದೆಲ್ಲ ಇದೆ. ಆದರೆ ಉತ್ಸಾಹವಿಲ್ಲ. ಆ ಅವಸ್ಥೆಯನ್ನು ಕೇಶವ ಪಿಳ್ಳೆ ಜ್ಞಾಪಿಸಿಕೊಳ್ಳುತ್ತಿದ್ದರು.

ಕಾತ್ಯಾಯಿನಿ ಎಲ್ಲವನ್ನೂ ಸಹಿಸಬಲ್ಲವಳು, ಕ್ಷಮಿಸಬಲ್ಲವಳು, ಮರೆಯಬಲ್ಲ ವಳು. ಅದು ಏನೆಂದು ಕೇಶವ ಪಿಳ್ಳೆಗೆ ಅನುಭವವಾಗಿತ್ತು. ಕನ್ಯಾಕುಮಾರಿಯನ್ನೂ ಪೀರುಮೇಡನ್ನೂ ಅವಳು ಕ್ಷಮಿಸುತ್ತಾಳೆ—ಮರೆಯುತ್ತಾಳೆ.

ಆದರೆ ಕೇಶವ ಪಿಳ್ಳೆಗೆ ಅದಕ್ಕೆ ಧೈರ್ಯವಿಲ್ಲ. ಅವಳ ಹತ್ತಿರ ಹೇಳುವುದು ಹೇಗೆ? ಹಿಂದೆ ಇನ್ನು ಮೇಲೆ ಆ ರೀತಿ ಉಂಟಾಗುವುದಿಲ್ಲ ಎಂದು ಪ್ರಮಾಣ ಮಾಡಿರ ಲಿಲ್ಲವೆ? ಅದನ್ನು ಅವಳು ನಂಬಿದ್ದಳು. ಏನೋ ಸಂಭವಿಸಿದೆಯೆಂದು ಕಾತ್ಯಾಯಿನಿಗೆ ಸಂಶಯವಿಲ್ಲದಿರುತ್ತದೆಯೇ? ಅವಳ ಉತ್ಸಾಹ ಪ್ರಕೃತಿ ನಷ್ಟವಾಗಿ ಹೋಯಿತು.

ಇನ್ನು ಮೇಲೂ ಒಮ್ಮೆಯೂ ಮಾತು ಪಾಲಿಸಲು ಸಾಧ್ಯವಿಲ್ಲದವನ ಹತ್ತಿರ ದೋಷ ವನ್ನು ಅವಳು ಒಪ್ಪಿಕೊಳ್ಳುತ್ತಾಳೆಯೆ?

ಅದನ್ನು ಒಮ್ಮೆ ಹೇಳಿಬಿಡು ಎಂದು ಕೇಶವ ಪಿಳ್ಳೆಯ ಅಂತರಂಗದಿಂದ ಎಲ್ಲಿಯೋ ಹೇಳಿದಂತಾಯಿತು. ಆ ಆಜ್ಞೆಯನ್ನು ನಿಷೇಧಿಸಲು ಅವರಿಗೆ ಸಾಧ್ಯವಿಲ್ಲ. ಯಾವ ತಪ್ಪು ಮಾಡಿದ್ದರೂ ಅವಳು ಕ್ಷಮಿಸುತ್ತಾಳೆ. ಸಮಾಧಾನದಿಂದ ಇರಬಹುದು. ಮತ್ತೆ ಏತಕ್ಕೆ ಸಾಧ್ಯವಿಲ್ಲ?

ಹೇಗೆ ಅದನ್ನು ಹೇಳಬೇಕು ಎನ್ನುವುದು ಕೇಶವ ಪಿಳ್ಳೆಗೆ ತಿಳಿಯದು. "ನಾನು ಕನ್ಯಾಕುಮಾರಿಯಲ್ಲಿ ಕುಳಿತು ಫೈಲು ನೋಡುತ್ತಿದ್ದಾಗ ಅವಳು ಒಳಗೆ ನುಗ್ಗಿ ಬಂದಳು..." ಎಂದು ಪ್ರಾರಂಭಿಸಲೇ? ಅಥವಾ ನನ್ನ ತಪ್ಪು ಕ್ಷಮಿಸು ಎಂದು ಪ್ರಾರಂಭಿಸಬೇಕೆ? ಇದೊಂದೂ ಅಲ್ಲದೆ "ನೀನು ಯಾಕೆ ನನ್ನ ಮನಸ್ಸಿಗೆ ಕ್ಲೇಶ ಉಂಟುಮಾಡ್ತೀ? ನಾನು ಹೇಗಿದ್ದರೂ—ಎಲ್ಲೇ ಹೋದರೂ ನಿನ್ನವನೇ ಅಂತ ತಿಳಿದುಕೋ! ಇಷ್ಟು ದಿನದಲ್ಲಿ ಅದು ತಿಳಿಯಲಿಲ್ಲವೇ?......" ಈ ರೀತಿಯಲ್ಲಿ ಪ್ರಾರಂಭಿಸಬೇಕೇ? ಅದನ್ನು ಕೇಶವ ಪಿಳ್ಳೆ ಆಲೋಚಿಸುತ್ತಿದ್ದದ್ದು. ಯಾವುದು ಸರಿಯಾಗಿ ನಾಟುವಂತಹ ಪ್ರಶ್ನೆ? ಅನಂತರ ಯಾವ ರೀತಿಯಲ್ಲಾದರೂ ಸರಿಯೆ, ಯಾವುದನ್ನು ಮುಚ್ಚಿಡಬೇಕು. ಯಾವುದಕ್ಕೆಲ್ಲ ಪ್ರಾಧಾನ್ಯ ಕೊಡಬೇಕು ಎಂದು ಆತ ಆಲೋಚಿಸಿ ಪ್ರಾರಂಭಿಸಿದರು.

ಮೊದಲಿನಿಂದ ಆ ಕಥೆಯನ್ನು ಪ್ರಾರಂಭಿಸಬೇಕು ಎಂದುಕೊಂಡು ಒಂದು ತೀರ್ಮಾನಕ್ಕೆ ಬಂದರು.

"ನಾನು ಕನ್ಯಾಕುಮಾರಿಯಲ್ಲಿ ಫೈಲ್ ನೋಡುತ್ತಾ ಕುಳಿತಿದ್ದಾಗ............" ಎಂದು ಪ್ರಾರಂಭಿಸಬೇಕೆಂದು ಅವರು ತೀರ್ಮಾನಿಸಿದರು. ಅದಕ್ಕೆ ತಕ್ಕಂತೆ ಮುಚ್ಚಿಡ ಬೇಕಾದದ್ದನ್ನು ಮುಚ್ಚಿ ಹೇಳಬೇಕಾದದ್ದು ಹೇಳುವ ರೀತಿಯಲ್ಲೂ ಆ ಕಥೆಯೂ ಸಿದ್ಧ ವಾಯಿತು.

ಆಗಿಹೋದ ತಪ್ಪನ್ನು ಕುರಿತು ವ್ಯಾಕುಲಪಟ್ಟುಕೊಂಡು ಕಾತ್ಯಾಯಿನಿಯಮ್ಮ ಕುಳಿತಿದ್ದಳು.

* * * *

ಆಸ್ಪತ್ರೆಯ ಹೆರಿಗೆಯ ವಾರ್ಡಿನಲ್ಲಿ ಪ್ರಸವವನ್ನು ನಿರೀಕ್ಷಿಸುತ್ತ ಮಾತಾ ಜ್ಯೋತಿರ್ಮಯಿ ಮಲಗಿದ್ದಳು. ಆಕೆ ಹೀಗೆ ಒಮ್ಮೆಯೂ ಉತ್ಸಾಹದಲ್ಲಿರಲಿಲ್ಲ. ಸಾವಿತ್ರಿ ಮಾತ್ರ ಅವಳ ಜೊತೆಯಲ್ಲಿದ್ದಳು. ಆದರೆ ಅವಳು ಎಲ್ಲ ರೀತಿಯ ಸಂಕಟ ಗಳನ್ನೂ ಅನುಭವಿಸಿ ತುಂಬ ಸೊರಗಿ ಹೋಗಿದ್ದಳು. ಜ್ಯೋತಿರ್ಮಯಿ ದೇವಿ ಗಂಟೆಗೆ ನಲವತ್ತು ಸಲ ಆಶ್ರಮವನ್ನೂ ಆಶ್ರಮದಲ್ಲಿದ್ದವರನ್ನೂ ಶಪಿಸಿಕೊಂಡಿದ್ದಳು. ಜೀವನದ ಬಹುದೊಡ್ಡ ಕಷ್ಟಗಳಿಂದ ಅವಳು ದಿನಗಳನ್ನು ಕಳೆದರೂ ಅವಳಿಗೆ ಸುರಕ್ಷಿತವಾಗಿ ಜೀವಿಸಲಾಗಲಿಲ್ಲ.

"ಆ ಮಹಾ ಪಾಪಿಗಳು ಇದನ್ನು ತೆಗೆಸಿ ಹಾಕಬೇಕು ಅಂದರು. ಅವರಿಗೆ ಆ ದೋಷ ತಟ್ಟುತ್ತೆ"—ಇದು ಅವಳ ಆಕ್ಷೇಪ. ಸಾವಿತ್ರಿ ಅದನ್ನು ಕೇಳಿಸಿಕೊಂಡಿದ್ದಳು. ಅದನ್ನು ಕುರಿತು ಅವಳಿಗೆ ಹೇಳುವುದೇನೂ ಇಲ್ಲವೆಂದಲ್ಲ. ಏನನ್ನೂ ಹೇಳಲು ಸಾಧ್ಯವಿಲ್ಲ ಅಷ್ಟೆ. ಒಂದು ಕಪ್ಪು ನೆರಳು ಅವಳ ಅಂತರಂಗವನ್ನು ವ್ಯಾಪಿಸಿತ್ತು. ಬಹುಶಃ ಸನ್ಯಾಸಿನಿಯರ ಅಭಿಪ್ರಾಯವೇ ಅವಳಿಗೂ ಇದ್ದದ್ದು, ಅದನ್ನು ಅವಳು ಹೇಳಿಲ್ಲದಿದ್ದರೂ. ಜ್ಯೋತಿರ್ಮಯಿಯ ಅಸಾಧಾರಣವಾದ ಉತ್ಸಾಹವೂ ಸನ್ಯಾಸಿನಿಯರ ಮೇಲಿದ್ದ ತೀರದ ಹಗೆತನವೂ ಮನಸ್ಸನ್ನು ಬಾಧಿಸುತ್ತಿದ್ದ ಪ್ರಶ್ನೆಗಳೇ ಆಗಿದ್ದುವು. ಒಮ್ಮೆ ಸಾವಿತ್ರಿ ಜ್ಯೋತಿರ್ಮಯಿ ದೇವಿಯೊಡನೆ ಹೇಳಿದಳು: "ಅವರನ್ನು ಯಾಕೆ ಬಯ್ಯೋದು? ಆಶ್ರಮಕ್ಕೆ ಕೆಟ್ಟ ಹೆಸರು ಬರುತ್ತಲ್ಲಾ ಅಂತ ಅವರು ಹಾಗೆ ಹೇಳಿಬಿಟ್ಟರು."

ಜ್ಯೋತಿರ್ಮಯಿಗೆ ಸಾವಿತ್ರಿಯ ಉದ್ದೇಶ ಸರಿಯಾಗಿ ಅರ್ಥವಾಗದೆ ಹೇಳಿದಳು:

"ಆಶ್ರಮದ ಕೆಟ್ಟ ಹೆಸರು! ಅದಕ್ಕೆ ಒಳ್ಳೆ ಹೆಸರು ಹೇಗೆ ಉಂಟಾದೀತು? ನನಗೆಲ್ಲ ಗೊತ್ತು. ನಾನು ಮಾತ್ರ ಮರ್ಯಾದೆಯಾಗಿ ಅಲ್ಲಿ ಜೀವಿಸಿದ್ದು ಗೊತ್ತಾ?"

ಅನಂತರ ಜ್ಯೋತಿರ್ಮಯಿ ಕಥೆಗಳನ್ನು ಹೇಳತೊಡಗಿದಾಗ ಅದನ್ನು ನಿಲ್ಲಿಸುವಂತೆ ಸಾವಿತ್ರಿ ಕೇಳಿಕೊಂಡಳು.

"ಅದಲ್ಲಮ್ಮ, ಅವರು ಆ ಮೇಲೆ ಎಲ್ಲಿಗೆ ಹೋಗೋದು? ಆಶ್ರಮಕ್ಕೆ ಒಳ್ಳೆ ಹೆಸರಿದ್ದರಲ್ಲವಾ? ಅವರಿಗೆ ಅಲ್ಲಿ ಜೀವಿಸೋದಕ್ಕೆ ಸಾಧ್ಯವಾ? ಎಲ್ಲ ಕೈಬಿಟ್ಟು ಅವರು ಅಲ್ಲಿಗೆ ಬಂದದ್ದಲ್ಲವಾ? ಅಲ್ಲಿ ಹೆಸರು ಹಾಳಾದರೆ ಆ ಮೇಲೆ ಅವರು ಹೇಗೆ ಜೀವಿಸೋದು?"

"ಅವರು ಅವರ ಕಾಮುಕರ ಜೊತೆಯಲ್ಲಿ ಹೋಗಲಿ."

ಅನಂತರ ಥಟ್ಟನೆ ಜ್ಯೋತಿರ್ಮಯಿ ಹೇಳಿದಳು: "ನನಗೆ ಎಲ್ಲರ ವಿಷಯವೂ ಗೊತ್ತು. ಸನ್ಯಾಸಿನಿಯರಾಗೋದಕ್ಕೆ ಮೊದಲಿನ, ಅನಂತರದ ಕಥೆಗಳೆಲ್ಲ ಗೊತ್ತು."

ಆ ಆಶ್ರಮದ ಸನ್ಯಾಸಿನಿಯರೆಲ್ಲರ ಜೀವನದ ಮಾರ್ಗದಲ್ಲೂ ತಡೆಯುಂಟಾದ ದೃಶ್ಯವನ್ನು ಸಾವಿತ್ರಿ ಕಾಣುತ್ತಿದ್ದದ್ದು. ಎಲ್ಲರೂ ಪರಿಹಾಸ್ಯ ಪಾತ್ರಗಳಾದರು. ಆ ಕಟ್ಟಡದ ಮುಂದೆ ಹೋಗುವವರಿಗೆ ಈಗ ತುಂಬ ಕಥೆ ಹೇಳಬಹುದು. ಅಲ್ಲಿಗೆ ಇನ್ನು ಮೇಲೆ ಮನುಷ್ಯರು ಹೋಗೋದಕ್ಕೆ ಸಾಧ್ಯವಾ? ತನ್ನನ್ನು ಕುರಿತ ಚಿಂತೆಯಿಲ್ಲದೆ, ಮುಂದಿನ ವಿಚಾರವಿಲ್ಲದೆ ಬೆಳೆಯುವ ದ್ವೇಷ, ಸಿಟ್ಟುಗಳು ಸಾವಿತ್ರಿಯನ್ನು ಆಶ್ಚರ್ಯಗೊಳಿಸಿದ್ದು ಮಾತ್ರವಲ್ಲ, ಹೆದರಿಸಿಯೂ ಇದ್ದುವು.

ಅವಳು ಕೇಳಿದಳು: "ಹೆರಿಗೆಯಾದ ಮೇಲೆ ಏನು ಮಾಡ್ತೀರಮ್ಮ?"

ಒಂದು ವಿಷಾದದ ನಗುವಿನೊಂದಿಗೆ ಜ್ಯೋತಿರ್ಮಯಿ ಉತ್ತರ ನೀಡಿದಳು:

"ನನ್ನನ್ನು ಕೇಳಿದೆಯಾ? ನನ್ನ ವಿಷಯವಾಗಿ ನೀನು ಆಲೋಚನೆ ಮಾಡಬೇಡ."

"ಅದ್ಯಾಕೆ? ಅವರು ನಿಮ್ಮನ್ನ ಸ್ವೀಕರಿಸ್ತಾರಾ?"

"ನನ್ನನ್ನ ಅವರು ಸ್ವೀಕರಿಸೋದು ಬೇಡ."

"ಆ ಮೇಲೆ?"

ಜ್ಯೋತಿರ್ಮಯಿ ದೇವಿ ಮೌನದಿಂದಿದ್ದಳು. ಉತ್ತರವನ್ನು ನಿರೀಕ್ಷಿಸುತ್ತ ಸಾವಿತ್ರಿಯೂ ಕುಳಿತಳು.

ಆಶ್ರಮವಾಸಿಗಳದು ಮಾತ್ರವಲ್ಲ, ಜ್ಯೋತಿರ್ಮಯೀ ದೇವಿಯ ಭವಿಷ್ಯವನ್ನು ಕುರಿತು ಎಷ್ಟು ಆಲೋಚಿಸಿದರೂ ಸಾವಿತ್ರಿಗೆ ಯಾವ ಗೊತ್ತುಗುರಿಯೂ ತಿಳಿಯ ದಂತಾಗಿತ್ತು. ಜ್ಯೋತಿರ್ಮಯಿಯ ಮನಸ್ಸಿನಲ್ಲಿರುವುದೇನು ಎಂದು ಮಾತ್ರ ಅವಳು ತಿಳಿಯಲು ಬಯಸಿದಳು.

ಜ್ಯೋತಿರ್ಮಯಿ ತುಂಬು ಗಾಂಭೀರ್ಯದಿಂದ ಅಲಂಘನೀಯವಾದ ಒಂದು ಆಜ್ಞೆ ಮಾಡುವಂತೆ ಹೇಳಿದಳು: "ನೀನು ಏನೂ ತಿಳಿಯೋದು ಬೇಡ. ನೀನು ಇಷ್ಟು ಮಾಡಿದರೆ ಸಾಕು. ಈ ಮಗೂನ ಅವರ ಮುಂದೆ ಇಟ್ಟು ಹಿಂದಿರುಗಿ ಬರಬೇಕು. ಮಗು ಸತ್ತು ಹೋದರೆ ಅವರ ತಂದೆ ಯಾರು ಅನ್ನೋ ವಿಷಯ ಈಗಿನ ಹಾಗೆಯೇ ರಹಸ್ಯ ವಾಗಿಡಬೇಕು. ಒಬ್ಬರ ಹತ್ತಿರವೂ ಹೇಳಬಾರದು."

ಒಂದು ಕ್ಷಣ ಬಿಟ್ಟು ಜ್ಯೋತಿರ್ಮಯಿ ಹೇಳಿದಳು:

"ಆ ಮೇಲೆ ನೀನು, ಮೊದಲಿನ ಹಾಗೆಯೇ ಬೀದಿಯಲ್ಲಿ ದೂರ ದೂರ ನಡೆದು ಹೋಗಬೇಕು."

ಸಾವಿತ್ರಿ ಕೇಳಿದಳು:

"ಹಾಗಾದರೆ ಅಮ್ಮ.........?"

ಅವಳು ಪ್ರಶ್ನೆಯನ್ನು ಕೇಳಿ ಮುಗಿಸುವ ಮೊದಲೇ ಹೇಳಿದಳು: "ಓ! ನನ್ನ ವಿಷಯ ಆಲೋಚನೆ ಮಾಡಬೇಡ. ಯಾರೂ ಆಲೋಚಿಸಬೇಡಿ."

"ಮತ್ತೆ?"

"ನಾನು ಹೇಳಿದ ಹಾಗೆ ನೀನು ಮಾಡಿದರೆ ಸಾಕು. ನಿನಗೆ ಇರೋದು ಒಂದೇ ಕೆಲಸ. ನಿನ್ನ ಭಾರ ಇಳಿಸಿಕೊಳ್ಳೋದು ಮಾತ್ರ. ಈ ಮಗೂನ ತೋಳಿನಲ್ಲಿ ಎತ್ತಿ ಕೊಂಡು ಹೇಗಾದರೂ ಸರಿಯೆ; ಪಾರ್ಕ್ ವ್ಯೂ ಒಳಗೆ ಹೋಗಬೇಕು. ಆ ಮೇಲೆ ಅವರ ಪಾದದ ಬುಡದಲ್ಲಿ ಕಾಣಿಕೆ ಇಡುವಂತೆ ಇಟ್ಟು ಹಿಂದಿರುಗಿ ಬರಬೇಕು. ಅಷ್ಟು ಮಾತ್ರ ಮಾಡು. ಸಾಕು."

* * * *

ಎರಡು ದಿನಗಳ ನಂತರ ಜ್ಯೋತಿರ್ಮಯಿ ಸಾವಿತ್ರಿಯಿಂದ ಒಂದೆರಡು ಪ್ರತಿಜ್ಞೆ ಗಳನ್ನು ಮಾಡಿಸಿದಳು. ಒಂದು, ಆ ಮಗುವಿನ ತಂದೆ ಯಾರೆಂದು ಲೋಕದಲ್ಲಿ ಯಾರ

ಹತ್ತಿರವೂ ಹೇಳುವುದಿಲ್ಲವೆಂದು. ಆದರೆ ಅದರಲ್ಲಿ ಒಂದು ವಿಷಯವನ್ನು ಒಪ್ಪಿಕೊಳ್ಳು ವಂತೆ ಸಾವಿತ್ರಿ ಒತ್ತಾಯಿಸಿದಳು. ಅವರ ಹತ್ತಿರ ಮಾತ್ರ ಹೇಳಬಹುದು ಎಂದು. ಮತ್ತೊಂದು, ಆ ಮಗುವನ್ನು ಮತ್ತೆಂದೂ ಸಾವಿತ್ರಿ ಕಾಣಬಾರದು ಎಂದು. ಸಾವಿತ್ರಿಗೆ ಒಂದು ಹೊಸ ದೂರನ್ನು, ಅವಳ ವಿಧಿಯನ್ನು ಕುರಿತು ಹೊರಿಸುವುದಿತ್ತು. ಯಾಕೆ ಆ ಭಿಕ್ಷೆ ಬೇಡುತ್ತ ಬಂದಾಗ ಆಶ್ರಮದ ಬಾಗಿಲಿನ ಹತ್ತಿರಕ್ಕೆ ವಿಧಿ ಅವಳನ್ನು ಎಳೆದು ಕೊಂಡು ಹೋಯಿತು, ಎಂದು. ಅವಳು ತುಂಬ ಅನುಭವಿಸಿದವಳು. ಹೀಗೂ ಒಂದು ಅನುಭವವುಂಟಾಗಬೇಕಿತ್ತೇ? ಈ ಜವಾಬ್ದಾರಿಗಳನ್ನು ಮಾಡಿ ತೀರಿಸಬೇಕಾಗಿ ಬಂದದ್ದರ ಅರ್ಥವೇನು?

[46]

## ಪಯಣ ಮುಗಿಯುತ್ತದೆ

ಪೆನ್ಶನ್ ತೆಗೆದುಕೊಂಡು ಹಿಂದಿರುಗಲು ಒಪ್ಪಿದುದಾದರೂ ಕೇಶವ ಪಿಳ್ಳೆಗೆ ಅದನ್ನು ಸಂಪೂರ್ಣವಾಗಿ ಅಂಗೀಕರಿಸಬೇಕು ಎನ್ನಿಸಲಿಲ್ಲ. ಬಹು ದೀರ್ಘ ಕಾಲದ ಎಲ್ಲ ಹಂತಗಳಲ್ಲೂ ಪರಿಚಯವಿದ್ದ ಒಬ್ಬ ಅಧಿಕಾರಿಯ ಸೇವೆ ಬೇಕಾಗಿ ಬರಬಹುದು ಎಂದು ಸರ್ಕಾರಕ್ಕೆ ತೋರಿಬರಬಹುದೇ? ಕೇಶವ ಪಿಳ್ಳೆಗೆ ಅನುಕೂಲವಾಗಿ ಒಂದು ವಿಭಾಗದ ಜನರ ಅಭಿಪ್ರಾಯವೂ ಈ ಮಧ್ಯೆ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಒಟ್ಟಿನಲ್ಲಿ ಹಿಂದಕ್ಕೆ ಕಳುಹಿಸುವುದಿಲ್ಲ ಎನ್ನುವ ಒಂದು ಆಶೆ ಕೇಶವ ಪಿಳ್ಳೆಗಿತ್ತು. ಮುಖ್ಯ ಮಂತ್ರಿ ಕರೆಸಿ ಅರ್ಜಿಯನ್ನು ಹಿಂತೆಗೆದುಕೊಳ್ಳುವಂತೆ ಹೇಳಲೂಬಹುದು. ಏನಿದ್ದರೂ ಕೇಶವ ಪಿಳ್ಳೆಗೆ ಹಿಂದಿರುಗಿ ಹೋಗಬೇಕು ಎನ್ನುವುದನ್ನು ನೆನಸಿಕೊಳ್ಳುವುದಕ್ಕೆ ಕೂಡ ಸಾಧ್ಯವಿಲ್ಲದ ಒಂದು ಅವಸ್ಥೆಯಾಗಿತ್ತು. ಅವರು ಕೆಲವಾರು ದಿವಸಗಳಲ್ಲಿ ತುಂಬ ಬದಲಾಯಿಸಿ ಹೋಗಿದ್ದರು. ಬಹು ಬೇಗನೆ ತುಂಬ ವಯಸ್ಸಾಗಿ ಹೋಗಿದ್ದಂತೆ ತೋರಿತು. ನೋಡಿದಾಗ ಒಂದು ರೀತಿಯ ಮಂಕು, ಆಯಾಸ, ಎದ್ದು ಕಾಣುತ್ತಿತ್ತು. ಹಾಗೆಯೇ ಇದ್ದಾಗ ಒಂದು ದಿನ ಆರ್ಡರ್ ಬಂದಿತು. ಸರ್ಕಾರ ತನ್ನ ಅಸಮಾಧಾನವನ್ನು ಪ್ರಕಟಿಸುತ್ತ ಕೇಶವ ಪಿಳ್ಳೆಯನ್ನು ಪೆನ್ಶನ್ ಪಡೆದುಕೊಂಡು ಸ್ಥಾನವನ್ನು ತೆರವು ಮಾಡಿಕೊಡಲು ತಿಳಿಸಿತ್ತು. ತಾರೀಖನ್ನೂ ನಿಶ್ಚಯಿಸಿತ್ತು. ಮಾರನೆಯ ದಿನವೇ ನಿರೀಕ್ಷಿಸಬಹುದಾಗಿದ್ದದ್ದೂ, ಹೆಚ್ಚು ಕಡಿಮೆ ನಿರೀಕ್ಷಿಸಿದ್ದೂ ಆಗಿದ್ದ ಆ ಆಘಾತ ಕ್ರೂರವಾಗಿಯೇ ಇತ್ತು.

ಆದರೂ, ಒಂದಲ್ಲ ಒಂದು ದಿನ ಕೆಳಗಿಳಿಯಲೇಬೇಕಲ್ಲವೇ ಎಂದು ಸಮಾಧಾನಪಟ್ಟುಕೊಂಡರಾಯಿತು. ಬದಲಾಯಿಸುವುದಕ್ಕಿರಬಹುದೇ? ಈ ದಿವಸದಿಂದಲೂ ದೂರ ನಿಂತು ಕಾಲ ಕಳೆಯುವುದು ಹೇಗೆ? ಸರ್ಕಾರದ ಕುರ್ಚಿಯಿಂದಲೂ ಬದಲಾಯಿಸಿಯೇ ತೀರಬೇಕು. ಅದೆಲ್ಲ ಸರಿಯೆ. ಆ ಜೀವನವನ್ನು ಕುರಿತು ಅನಂತರವೂ ಸಮಾಧಾನದಿಂದ ಹೇಳುವುದಿದೆ—ಅಲ್ಲಿಯ ವರೆಗೆ ಹೋಗಿ ಶಿಲಪುತ್ರೇನೆ ಎಂದಾಗಲೀ ತಲಪಬೇಕು ಎಂದಾಗಲೀ ಉದ್ದೇಶಿಸಿಕೊಂಡಲ್ಲ ಸರ್ಕಾರದ ಕೆಲಸಕ್ಕೆ ಸೇರಿದುದು. ಆ ಜೀವನ ಒಂದು ದೊಡ್ಡ ಸಾಧನೆಯೇ ಅಲ್ಲವೇ?

ಕೇಶವ ಪಿಳ್ಳೆಗೆ ಬದುಕೇ ಅಂತ್ಯಗೊಂಡಿತೋ ಎನ್ನುವಂತೆ ತೋರಿತು. ಆ ಅವಸ್ಥೆಯಲ್ಲಿ ಕಳೆದುಹೋದ ದಿನಗಳನ್ನು ಸ್ಪಷ್ಟವಾಗಿ ಅವರು ಜ್ಞಾಪಿಸಿಕೊಂಡರು. ಉದ್ಯೋಗವನ್ನು ಹುಡುಕಿಕೊಂಡು ತಿರುವನಂತಪುರಕ್ಕೆ ಬಂದು ಅಲೆದಾಡುತ್ತಿದ್ದ ಕಾಲದಲ್ಲಿ ಎಷ್ಟೋ ಸಲ ಕಾಸಿಲ್ಲದೆ ಹೋದರೆ ಊಟ ಹಾಕುವುದಿಲ್ಲ ಎಂದು ಹೇಳಿದರೂ ಕಡೆಗೆ

ಊಟ ಹಾಕುತ್ತಿದ್ದ, ಸಾಲ ತೀರಿಸಿದಾಗ ಸಂತೃಪ್ತಿಯಿಂದ ಹರಸುತ್ತಿದ್ದ, 'ಶಿವಮಯಂ ಲಕ್ಷ್ಮೀ ಹೋಟೆಲಿ'ನ ಯಜಮಾನಿ ತೆಳ್ಳನೆಯ, ಕ್ಷಯರೋಗಿಯಾದ ಲಕ್ಷ್ಮಿ ಅಮ್ಮನನ್ನು ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು. ಎಲ್ಲರಿಗೂ ಊಟ ಹಾಕಿದ ಮೇಲೆ ಕುಳಿತು ಕೆಮ್ಮಿ ಕೆಮ್ಮಿ ಬಗ್ಗಿಹೋಗಿದ್ದಳು. ಒಳ್ಳೆಯದಾಗುತ್ತದೆ ಎಂದು ಹಾರೈಸುತ್ತಿದ್ದಾಗಲೂ ಆ ಕಾಲದಲ್ಲಿ ತನ್ನನ್ನು ಜ್ಞಾಪಿಸಿಕೊಳ್ಳಬೇಕೆಂದು ಲಕ್ಷ್ಮೀ ಅಮ್ಮ ಹೇಳಿರಲಿಲ್ಲ. ಅದರ ನಂತರ ಅವಳನ್ನು ತಾನು ಕಂಡದ್ದಿಲ್ಲ. ಆ ಹೋಟೆಲ್ ಈಗಲೂ ಇರಬೇಕು. ಆ ಮೇಲೆ ಅಲ್ಲಿಗೆ ಒಂದು ಸಲ ಹೋದದ್ದಾಗಲೀ ಆಕೆಯನ್ನು ಕುರಿತು ವಿಚಾರಿಸಿದ್ದಾಗಲೀ ಇಲ್ಲ. ಹಾಗನ್ನಿಸಲೂ ಇಲ್ಲ. ಜ್ಞಾಪಕವೂ ಆಗಲಿಲ್ಲ. ಆ ಮರವೆ ಮನಸ್ಸಾಕ್ಷಿಯ ಮುಂದೆ ವಿಚಾರಣೆ ನಡೆಸುವಂಥಾದ್ದೇನು? ಆಕೆಗೆ, ಈ ಕೇಶವ ಪಿಳ್ಳೆಗೆ ದೊರೆತ ಉದ್ಯೋಗದ ವಿಚಾರ ತಿಳಿದಿರಬಹುದು. ಅಂತು ತನ್ನ ಆ ಮರವೆಯನ್ನು ಕುರಿತು ಮೊತ್ತಮೊದಲಾಗಿ ಕೇಶವ ಪಿಳ್ಳೆಗೆ ಜುಗುಪ್ಸೆಯುಂಟಾಯಿತು.

ಎಷ್ಟೋ ವರ್ಷಗಳ ಹಿಂದಕ್ಕೆ ಕೇಶವ ಪಿಳ್ಳೆಯ ಮನಸ್ಸು ಓಡಿತು. ಸಾಧಾರಣ ಸಂಗತಿಗಳನ್ನು ಕೂಡ ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು. ಮ್ಯೂಸಿಯಂನ ಪಶ್ಚಿಮ ಭಾಗಕ್ಕಿದ್ದ ರೋಡಿನಲ್ಲಿ ಯಾವಾಗಲೂ ಏನಾದರೂ ತುಂಬಿಕೊಂಡು ಹರಿಯುತ್ತಿದ್ದ ಕಾಲುವೆಯ ಸಮೀಪದಲ್ಲಿ ಒಂದು ಮಣ್ಣಿನ ಗೋಡೆಯ ಮನೆಯಲ್ಲಿ ಕಪ್ಪಾದ, ಕೊಳಕಿಯಾದ ಆದರೆ ಲಕ್ಷಣವಾಗಿದ್ದ ಒಬ್ಬಳು ಕುಳಿತು ಪುಸ್ತಕವನ್ನು ಓದಿಕೊಂಡಿರುತ್ತಿದ್ದಳು. ಅವಳ ಆ ಕಪ್ಪನೆಯ ಮುಖದಲ್ಲಿ ಹರಡುತ್ತಿದ್ದ ಮಂದಹಾಸದಲ್ಲಿ ಆಕರ್ಷಕ ಶಕ್ತಿಯಿತ್ತು. ಒಂದು ರೀತಿಯಲ್ಲಿ ಅವಳು ತನಗೆ ಸಮೀಪದವಳಾಗಿದ್ದಂತೆ ತೋರಿತು. ಯಾವಾಗಲೂ ಆ ಮಾರ್ಗವಾಗಿ ಹೋಗುತ್ತಿದ್ದಾಗ ಅವಳು ತನ್ನ ಕಡೆಗೆ ನೋಡಿ ನಗುತ್ತಿದ್ದಳು. ತಾನು ನಗುತ್ತಿದ್ದದ್ದುಂಟು. ಅವಳ ಹತ್ತಿರ ಏನಾದರೂ ಒಂದು ಶಬ್ದ ಉಚ್ಚರಿಸಿದ್ದಿದ್ದರೆ ಅದು ಇಡೀ ಜೀವನದಲ್ಲಿ ಸಮಸ್ಯೆಗಳನ್ನುಂಟುಮಾಡಿಬಿಡುತ್ತಿತ್ತು ಎಂದು ಕೇಶವ ಪಿಳ್ಳೆಗೆ ತೋರಿತು. ಕೇಶವ ಪಿಳ್ಳೆ ತನ್ನನ್ನು ಮಾತನಾಡಿಸಲಿ ಎಂದು ಅವಳು ಕಾದಿರುತ್ತಿದ್ದಳು. ಏನನ್ನೋ ಹೇಳಲು ಅವಳು ಪ್ರಯತ್ನಿಸುತ್ತಿದ್ದುದಾಗಿ ಕೇಶವ ಪಿಳ್ಳೆಗೆ ತೋರಿದ್ದುಂಟು. ಆ ಹೆಣ್ಣು ಈಗ ಇರಬಹುದೇ? ಈಗ ಅವಳ ಸ್ಥಿತಿ ಏನಾಗಿರಬಹುದು? ಅವಳೀಗ ಒಬ್ಬಳು ಮುದುಕಿಯಾಗಿ ಮುತ್ತಜ್ಜಿಯಾಗಿರಬಹುದು. ಕೇಶವ ಪಿಳ್ಳೆಯ ಮನಸ್ಸಿನ ಮುಂದೆ ಆ ಸಣ್ಣ ಹುಡುಗಿಯಾಗಿಯೇ ಅವಳು ನಿಂತಿದ್ದಳು. ಅವಳಲ್ಲಿ ಯಾವ ವ್ಯತ್ಯಾಸವೂ ಉಂಟಾಗಿರಲಿಲ್ಲ.

ಅವಳನ್ನು ವಿಶೇಷವಾಗಿ ಜ್ಞಾಪಿಸಿಕೊಂಡದ್ದೇಕೆ ಎಂದು ಕೇಶವ ಪಿಳ್ಳೆ ಆಶ್ಚರ್ಯಪಟ್ಟರು. ಜೀವನದಲ್ಲಿ ಈ ಹಂತದಲ್ಲಿ ಅವಳು ಜ್ಞಾಪಕಕ್ಕೆ ಬರುತ್ತಿದ್ದಳು. ಕಾತ್ಯಾಯಿನಿಯಮ್ಮನಿಗೂ ತಂಗಮ್ಮನಿಗೂ ಮೀರಿದ, ಮನಸ್ಸಿನಿಂದ ಮರೆಯಾಗದ ನೆನಪನ್ನು ಸೃಷ್ಟಿಸಿದವಳು ಅವಳಾಗಿರಬಹುದೇ?

ಪಾರ್ಕ್ ವ್ಯೂ ಮೆಟ್ಟಲಿನ ಹತ್ತಿರ ಚೀಫ್ ಸೆಕ್ರೆಟರಿ ಮೆನನ್ನರ ದೃಷ್ಟಿಗೆ ಬೀಳ ಬೇಕೆಂದು ಕಾದು ನಿಂತಿರುತ್ತಿದ್ದ ದಿನಗಳನ್ನು ಕೇಶವ ಪಿಳ್ಳೆ ಒಂದೊಂದಾಗಿ ಜ್ಞಾಪಿಸಿ ಕೊಂಡರು. ಪೋಲೀಸಿನವರು ಬಯ್ದು ಅಟ್ಟಿದ್ದುಂಟು. ಅವರಲ್ಲಿಯೂ ಸಹಾನುಭೂತಿ ಯಿಂದ ಮಾತನಾಡಿಸಿದವರುಂಟು. ಅದೊಂದು ಮಹಾಭಾಗ್ಯವೇ ಆಗಿತ್ತು. ಹಾಗೆ ಕಾದು ನಿಂತಿದ್ದಾಗ ಈ ಸ್ಥಾನಕ್ಕೆ ಏರುತ್ತೇನೆಂದಾಗಲೀ, ಅದು ಹಾಗಿರಲಿ; ಒಂದು ಉದ್ಯೋಗ ಸಿಕ್ಕೀತು ಎಂದು ನಂಬುವುದಕ್ಕೆ ಕೂಡ ಆಗಿರಲಿಲ್ಲ. ಆ ಪರಿಮಿತವಾದ ಜೀವನ ಸೌಕರ್ಯಗಳಲ್ಲಿ ತಾನು ಸಂತೃಪ್ತನಾಗಿದ್ದೆ ಎನ್ನುವ ವಿಷಯದಲ್ಲಿ ಕೇಶವ ಪಿಳ್ಳೆಗೆ ಯಾವ ಸಂಶಯವೂ ಇಲ್ಲ. ಮೆನನ್ನರು ಒಳ್ಳೆಯವರಾಗಿದ್ದರು, ದಯಾಳು ವಾಗಿದ್ದರು, ಇತರರ ಕಷ್ಟವನ್ನು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು. ಯಾರಿಗೂ ತಿಳಿಯದಂತೆ ಅವರು ಉದ್ಯೋಗದಿಂದ ನಿರ್ಗಮಿಸಿದ್ದರು. ಯಾರಾದರೂ, ತಾನು ಕೂಡ ಅವರ ನಿರ್ಗಮನದ ಸಮಯದಲ್ಲಿ ವ್ಯಾಕುಲಪಟ್ಟದ್ದುಂಟೇ?

ಕೇಶವ ಪಿಳ್ಳೆಯ ಆಲೋಚನೆ ಮತ್ತೊಂದು ಕಡೆಗೆ ತಿರುಗಿತು. ಬಹಳ ಕಾಲ ತಾನು ಚೀಫ್ ಸೆಕ್ರೆಟರಿಯಾಗಿದ್ದದ್ದು. ಒಬ್ಬನೇ ಒಬ್ಬ ಮನುಷ್ಯನಿಗೆ ಕೆಲಸ ಕೊಟ್ಟದ್ದಾಗಲೀ ಮತ್ತಾವ ರೀತಿಯಲ್ಲಾದರೂ ಸಹಾಯ ಮಾಡಿದ್ದಾಗಲಿ ಉಂಟೇ? ಈ ಮೆಟ್ಟಲಿನಲ್ಲಿ ಕೇಶವ ಪಿಳ್ಳೆ ಚೀಫ್ ಸೆಕ್ರೆಟರಿಯಾದ ನಂತರ ಉದ್ಯೋಗವನ್ನು ಹುಡುಕಿಕೊಂಡು ಬಂದು ತಾನು ಕಾಯುತ್ತ ನಿಂತಿದ್ದಂತೆ, ಎಷ್ಟೋ ಜನರು ಕಾಯುತ್ತ ನಿಂತಿದ್ದಿರಬಹುದು. ಅಲ್ಲ, ಕಾದು ನಿಂತಿದ್ದಿರಲೇಬೇಕು. ಆದರೆ ಅವರಾರೂ ತನ್ನ ದೃಷ್ಟಿಗೆ ಬಿದ್ದಿಲ್ಲ.

* * * *

ಮಾರನೆಯ ದಿನ, ಕೇಶವ ಪಿಳ್ಳೆ ಸರಿಯಾಗಿ ನಿದ್ದೆ ಮಾಡಿರಲಿಲ್ಲ. ಮಲಗುವುದು ಸ್ವಲ್ಪ ತಡವಾಯಿತು. ಟೆಲಿಫೋನ್ ಗಂಟೆ ಬಾರಿಸುತ್ತಿತ್ತು. ಅವರು ರಿಸೀವರ್ ತೆಗೆದುಕೊಂಡರು. ಮಾತನಾಡುತ್ತಿದ್ದದ್ದು ಸೆಕ್ರೆಟರಿಯೇಟ್‌ನಿಂದ. ಅಲ್ಲಿ ಇಬ್ಬರು ಸಾಲಾಗಿ ಸತ್ತುಬಿದ್ದಿದ್ದರು ಅಷ್ಟೆ. ಆತ್ಮಹತ್ಯೆಯೆಂದು ಊಹಿಸಲಾಗಿತ್ತು.

ಕೇಶವ ಪಿಳ್ಳೆ ಸ್ತಂಭೀಭೂತರಾದರು. ಥಟ್ಟನೆ ಕಣ್ಣೆದುರಿಗೆ ಗೋಪಾಲನ್ ನಾಯರ್ ನೇಣು ಹಾಕಿಕೊಂಡು ನೇತಾಡುತ್ತಿದ್ದ ದೃಶ್ಯ ಕಾಣಿಸಿತು. ಅನಿಷ್ಟ! ಅವರು ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಈ ದಿನವೇ ಆಗಬೇಕಿತ್ತೇ? ಗೋಪಾಲನ್ ನಾಯರ್ ಹಾಗೆಯೇ ಇವರಿಗೂ ತನಗೂ ಏನಾದರೂ ಸಂಬಂಧವಿರಬಹುದೇ ಎಂದು ಕೇಶವ ಪಿಳ್ಳೆ ಭಯಗೊಂಡರು. ಯಾವುದೂ ನೆನಪಾಗುತ್ತಿಲ್ಲ. ಈ ಸುದೀರ್ಘವಾದ ಔದ್ಯೋಗಿಕ ಜೀವನದಲ್ಲಿ ಯಾವುದೋ ಸಂಬಂಧವಿದ್ದರೂ ಇರಬಹುದು. ಎಷ್ಟೆಷ್ಟು ಅರ್ಜಿಗಳು ಈ ಕೈಗೆ ಬಂದಿವೆ! ಎಷ್ಟೆಷ್ಟು ಆರ್ಡರ್‌ಗಳನ್ನು ಪಾಸು ಮಾಡಿದ್ದಾಗಿದೆ! ಸತ್ಯ, ನೀತಿ, ನ್ಯಾಯಗಳಿಂದ ದೂರವಾದ ಆರ್ಡರುಗಳೂ ಆ ಗುಂಪಿನಲ್ಲಿರಬಹುದು. ಹಾಗೆ

ಯಾವುದೋ ನೋವು ಅನುಭವಿಸಿದವರಾಗಿರಬಹುದೇ? ಇರಬಹುದು ಎನ್ನುವ ಭಾವನೆಯೂ ಕೇಶವ ಪಿಳ್ಳೆಗುಂಟಾಗಿತ್ತು.

ಅಂದು ಕೊನೆಯದಾಗಿ ಸೆಕ್ರೆಟರಿಯೇಟಿಗೆ ಚೀಫ್ ಸೆಕ್ರೆಟರಿಯಾಗಿ ಕೇಶವ ಪಿಳ್ಳೆ ಹೊರಟಿದ್ದದ್ದು. ಹಿಂದಿರುಗುವುದು ಚೀಫ್ ಸೆಕ್ರೆಟರಿಯಾಗಿ ಅಲ್ಲ. ಆ ದಿನ ಕೇಶವ ಪಿಳ್ಳೆ ಮನೆಯಿಂದ ಹೊತ್ತಿಗೆ ಮುಂಚೆ ಹೊರಟರು.

ಸೆಕ್ರೆಟರಿಯೇಟಿನ ಮುಂಭಾಗದಲ್ಲಿ ಹುಲ್ಲು ಹಸಲೆ ಜಾಗದ ನಡುವೆ ಒಂದು ಬಾವುಟದ ಕಂಬವಿದೆ. ಅದರ ಬುಡದಲ್ಲಿ ಆ ಇಬ್ಬರು ಸತ್ತು ಬಿದ್ದಿರುವುದು. ತುಂಬ ಜನರು ಸೇರಿದ್ದರು. ಪೋಲೀಸಿನವರು ಬಂದು ಇನ್‌ಕ್ವೆಸ್ಟ್ ಸಿದ್ಧಪಡಿಸುತ್ತಿದ್ದರು.

ಸತ್ತವರು ಯಾರೆಂದು ಕೇಶವ ಪಿಳ್ಳೆ ಕೇಳಿದರು. ಪೋಲೀಸು ಅಧಿಕಾರಿ ವಿವರಗಳನ್ನು ತಿಳಿಸಿದರು. ಒಬ್ಬ ಮೀನಚ್ಚಿಲ್ ಗ್ರಾಮದ ಶಂಕರ ಪಿಳ್ಳೆ; ಆತ ಕಾಂಗ್ರೆಸ್ಸಿನವನಾಗಿದ್ದ. ಐದು ಎಕರೆ ಸ್ಥಳ ಆತನಿಗೆ ಸಿಕ್ಕಿಲ್ಲ. ಅದನ್ನು ಯಾರೋ ಅಪಹರಿಸಿದ್ದರು. ಆತ ಸೆಕ್ರೆಟರಿಯೇಟ್ ಮುಂಭಾಗದಲ್ಲಿ ಸತ್ಯಾಗ್ರಹಕ್ಕೈಗೊಂಡಿದ್ದನಂತೆ. ಮತ್ತೊಬ್ಬ ಆಲಪ್ಪುಳದವನು—ಕೃಷ್ಣನ್. ಆತನ ಮಗ ಪುನ್ನಂಬ್ರದ ಗೋಲಿಬಾರಿನಲ್ಲಿ ಸತ್ತನಂತೆ. ಕೆಲವು ರೂಪಾಯಿಗಳು ಸರ್ಕಾರದಿಂದ ಸಿಕ್ಕಬೇಕಾಗಿತ್ತು. ಆತನ ಮಗಳು ಮದುವೆಯಾಗದೆ ಗರ್ಭಿಣಿಯಾಗಿದ್ದಾಳೆ ಎಂದು ಪೋಲೀಸ್ ಅಧಿಕಾರಿ ತಿಳಿಸಿದರು.

"ಇಬ್ಬರೂ ಕಾಗದ ಬರೆದಿಟ್ಟಿದ್ದಾರೆ."

ಕೇಶವ ಪಿಳ್ಳೆ ಸ್ವಲ್ಪ ಹತ್ತಿರ ಹೋದರು. ಜನರು ದಾರಿ ಬಿಟ್ಟು ನಿಂತುಕೊಂಡರು.

ರಾಷ್ಟ್ರಪತಾಕೆಯ ತಂಪು ಆ ಮೃತ ದೇಹಗಳ ಮೇಲೆ ಬೀಳುತ್ತಿತ್ತು.

ಒಂದು ನಡುಕದಿಂದ ಕೇಶವ ಪಿಳ್ಳೆ ಜ್ಞಾಪಿಸಿಕೊಂಡರು: 'ಈಟ್ಟಿಕ್ಕಾಡು ಮಲೆಯ ಟೀ ತೋಟ. !'

ತಲೆಗೆ ಬಲವಾದ ಒಂದು ಏಟು ಬಿದ್ದ ಹಾಗೆ ಕೇಶವ ಪಿಳ್ಳೆಗೆ ತೋರಿತು.

* * * *

ಕೇಶವ ಪಿಳ್ಳೆ ತನ್ನನ್ನೇ ಕುರಿತು ಆಲೋಚಿಸುತ್ತ ವಿಮರ್ಶಿಸಿಕೊಂಡರು. ಇತರರಿಗೆ ಉಪಕಾರ ಮಾಡದೆ ಇರುವುದು ಹೋಗಲಿ, ಉಪಕಾರ ಮಾಡಿದವರನ್ನು ಸ್ಮರಿಸಿಕೊಂಡದ್ದುಂಟೆ? ಮೆನನ್ನರ ಸ್ಥಿತಿ ಏನಾಯಿತು ಎಂದು ಅನ್ವೇಷಿಸಲಿಲ್ಲ. ಕೃಷ್ಣನ್ ನಾಯರನ್ನು ಅನಂತರ ಕಂಡದ್ದಿಲ್ಲ. ಅದು ಸರಿಯೇ? ಆದರೆ ಕೇಶವ ಪಿಳ್ಳೆ ತನಗೆ ತಾನೇ ಸಮಾಧಾನ ಮಾಡಿಕೊಳ್ಳುವುದಿತ್ತು. ಮೆನನ್ನರೋ ಕೃಷ್ಣನ್ ನಾಯರೋ ತನ್ನಿಂದ ಏನಾದರೂ ಸಹಾಯ ಅಪೇಕ್ಷಿಸಿದ್ದಿದ್ದರೆ ಅದನ್ನು ಮಾಡಿಕೊಡುತ್ತಿದ್ದುದು ಖಂಡಿತ. ಅವರಿಗೆ ಅಂತಹ ಅಗತ್ಯವೇ ಬರಲಿಲ್ಲ. ಆದ್ದರಿಂದ ಅವರಿಗೇನೂ ಮಾಡಿಕೊಡಲಿಲ್ಲ ಅಷ್ಟೆ.

ಅಂತು ಅವರನ್ನು ಹೋಗಿ ಕಾಣದೇ ಇದ್ದದ್ದು ಸರಿಯಾದದ್ದಲ್ಲ ಎಂದು ಕೇಶವ ಪಿಳ್ಳೆಯ ಅಂತರಂಗ ಹೇಳಿತು. ಅವರಿಬ್ಬರೂ ಸತ್ತು ಮಣ್ಣಾಗಿ ಹೋಗಿದ್ದಾರೆ.

ಕೇಶವ ಪಿಳ್ಳೆಯನ್ನು ಮನೆಗೆ ಕಳುಹಿಸಿದ ಆರ್ಡರ್ ಕಾತ್ಯಾಯಿನಿಯಮ್ಮನಿಗೆ ಸಂಬಂಧಿಸಿದಂತೆ ಒಂದೇ ಒಂದು ಸಮಸ್ಯೆಯನ್ನುಂಟುಮಾಡಿತ್ತು. ಅದನ್ನು ಕುರಿತು ಅವಳು ಕೇಳದೆಯೂ ಇರಲಿಲ್ಲ: "ಈ ತಿರುವನಂತಪುರದಲ್ಲೇ ಇರಬೇಕು ಅನ್ನೋ ಉದ್ದೇಶವಾ?"

ಕೇಶವ ಪಿಳ್ಳೆ ಅದಕ್ಕೆ ಉತ್ತರವಾಗಿ ಒಂದು ಪ್ರಶ್ನೆಯನ್ನು ಕೇಳಿದರು: "ಈ ಊರಿನ ಮೇಲೆ ಯಾಕೆ ನಿನಗೆ ಇಷ್ಟು ದ್ವೇಷ?" ಅನಂತರ ಅವರು ಹೇಳಿದರು: "ಸಕಲೈಶ್ವರ್ಯಗಳೂ ದೊರೆತದ್ದು ಈ ಊರಿನಲ್ಲೇ."

ಕೇಶವ ಪಿಳ್ಳೆ ಮತ್ತೆ ಹೇಳಿದರು: "ಪೆನ್ಶನ್ ತೆಗೆದುಕೊಂಡು ಸತ್ತವನ ಹಾಗೆ ಜೀವಿಸಬೇಕು ಅಂತ ನಾನು ಉದ್ದೇಶಪಟ್ಟಿಲ್ಲ. ಇನ್ನು ಮೇಲೂ ನಾನು ಮಾಡ ಬೇಕಾದ ಎಷ್ಟೋ ಕೆಲಸಗಳಿವೆ."

ಒಂದು ದೃಢ ನಿರ್ಧಾರದಿಂದ ಆ ಮಾತನ್ನು ಕೇಶವ ಪಿಳ್ಳೆ ಹೇಳಿದುದು. ಕಾತ್ಯಾ ಯಿನಿಯಮ್ಮನಿಗೆ ಅದು ಅರ್ಥವಾಯಿತು. ಅವಳು ಆಲೋಚಿಸುತ್ತಿರುವುದೇನೆಂದು ಅವರಿಗೂ ಗೊತ್ತಿತ್ತು.

ಕಾತ್ಯಾಯಿನಿಯಮ್ಮ ತನಗರಿವಿಲ್ಲದಂತೆಯೇ ಕೇಳಿದಳು: "ಆ ಮೇಲೆ ಅವಳನ್ನು ಮುಟ್ಟಲಿಲ್ಲವಾ?" ನಿಜವಾಗಿಯೂ ಕೇಶವ ಪಿಳ್ಳೆ ನಡುಗಿಹೋದರು. ಆ ಪ್ರಶ್ನೆ ಅವರ ಬುದ್ಧಿಯಲ್ಲೂ, ಹೃದಯದಲ್ಲೂ ಮತ್ತೆಲ್ಲಿಯೋ ಹೋಗಿ ಇರಿದಂತಾಯಿತು. ಕಾತ್ಯಾಯಿನಿಯಮ್ಮನಿಗೆ ಅದೆಲ್ಲ ತಿಳಿಯಿತೆ? ಅವಳು ನೇರವಾಗಿ ಕೇಳುತ್ತಾಳೆ. ಗಾಯ ಗೊಂಡು ಸತ್ಯಸಂಧತೆಯೊಡನೆ ಬಿಗುಮಾನವನ್ನು ತಂದುಕೊಳ್ಳಲು ಕೇಶವ ಪಿಳ್ಳೆ ಶ್ರಮಿಸಿದರು. ಆದರೆ ಅದು ಫಲಿಸಲಿಲ್ಲ.

ಕಾತ್ಯಾಯಿನಿಯಮ್ಮ ಗಂಡನೊಡನೆ ಪ್ರಾರ್ಥಿಸಿದಳು: "ನನ್ನ ಹತ್ರ ಎಲ್ಲ ಹೇಳಿ ಕೊಂಡಿರಿ. ನಾನು ನುಂಗಿಕೊಂಡೆ. ಇನ್ನು ಮೇಲೆ ಹಾಗೆಲ್ಲ ಆಗೋದಿಲ್ಲ ಅಂತ ನಂಬಿಕೆ. ಆ ಸುಖಸಂತೋಷ ಎಲ್ಲ ಕೈಬಿಟ್ಟು ಹೋಗೋದಿಲ್ಲವಾ? ಜ್ಞಾಪಿಸಿಕೊಂಡು ನೋಡಿ."

ಆ ಸತ್ಯಸ್ಥಿತಿಯನ್ನು ತಳ್ಳಿಹಾಕಲು ಸಾಧ್ಯವಿರಲಿಲ್ಲ. ಆ ಮನೆಯ ಆನಂದಕ್ಕೆ ಧಕ್ಕೆಯುಂಟಾಗಿತ್ತು. ಪೆನ್ಶನ್ ಆದಾಗ ಒಂದು ಮ್ಲಾನವಾದ ಗೃಹ ಆ ಮನುಷ್ಯನಿಗೆ ದೊರೆತಿರುವುದು. ಆದರೆ ಒಂದು ವಿಷಯ ನಿಜ. ಆ ಹೃದಯದಲ್ಲಿ ತಂಗಮ್ಮ ಇಲ್ಲ. ಆದರೆ ಶಕ್ತಿಗುಂದಿದ ಒಬ್ಬಳು ದೇವತೆ ಅಲ್ಲಿದ್ದಾಳೆ. ಕಾತ್ಯಾಯಿನಿಯಮ್ಮ!. ಯಾಕೆ ಆ ದೇವತೆಯ ಶಕ್ತಿ ಕ್ಷಯಿಸಿಹೋಯಿತು?

ಕಾತ್ಯಾಯಿನಿಯಮ್ಮ ಗಂಡನ ಮುಖವನ್ನೇ ದಿಟ್ಟಿಸುತ್ತ ಹೇಳಿದಳು: "ನನ್ನ ಹತ್ರ ಎಲ್ಲ ಹೇಳಬೇಕು. ಯಾವುದನ್ನೂ ಮುಚ್ಚಿಟ್ಟುಕೊಳ್ಳಬಾರದು. ನಾನು ಎಲ್ಲವನ್ನೂ

ಸಹಿಸೋಳು. ನಾನೆಲ್ಲ ಮರೆಯಬಲ್ಲೆ. ಅವಳನ್ನು ತಿರುಗಿ ಕಂಡಿರಾ? ನಿಜ ಹೇಳ ಬೇಕು."

ಎಲ್ಲವನ್ನೂ ಸ್ಪಷ್ಟವಾಗಿ ಹೇಳುವ ಉತ್ಸಾಹ ಕೇಶವ ಪಿಳ್ಳೆಗೆ ಥಟ್ಟನೆ ಉಂಟಾಯಿತು. ಅದು ಹೇಗೆ ಉಂಟಾಯಿತೋ ಹಾಗೆಯೇ ಮಾಯವಾಯಿತು. ಮರುಕ್ಷಣದಲ್ಲಿ ಕಾತ್ಯಾಯಿನಿಯಮ್ಮನನ್ನು ಬಾಯಿಗೆ ಬಂದಂತೆ ಬಯ್ಯಬೇಕು ಎನ್ನಿಸಿತು. ಆದರೆ ತಪ್ಪುಗಾರನಾದ ಕೇಶವ ಪಿಳ್ಳೆಗೆ ಅದಕ್ಕೆ ಧೈರ್ಯವಿರಲಿಲ್ಲ. ಅನಂತರವೂ ನೇರವಾಗಿ ಹೇಳಲು ಯಾರೋ ಒಳಗಿದ್ದುಕೊಂಡು ಉಪದೇಶಿಸುತ್ತಿದ್ದರು. ಉಪದೇಶಕ್ಕೆ ಬಲವಾದ ನ್ಯಾಯಗಳಿದ್ದುವು; ಮಾರ್ಗಗಳಿದ್ದುವು. ಪುನಃ ಆನಂದವಿರುವ ಒಂದು ಗೃಹ ದೊರೆಯುತ್ತದೆ. ಕಾತ್ಯಾಯಿನಿಯಮ್ಮ ಕ್ಷಮಿಸುತ್ತಾಳೆ. ಅವಳು ಸಹಿಸಬಲ್ಲಳು. ಕ್ಷಮಿಸಬಲ್ಲಳು.

ಯಾಕೆ ಎಲ್ಲವನ್ನೂ ಹೇಳಬಾರದು? ಆದರೆ ಅದೊಂದು ದೌರ್ಬಲ್ಯವಾಗಿತ್ತು. ಘಟನೆ ನಡೆದುಹೋಯಿತು. ಕಾತ್ಯಾಯಿನಿಯಮ್ಮನ ಮೇಲಿನ ಪ್ರೀತಿಯಿಂದಾಗಿಯೇ ತಂಗಮ್ಮನನ್ನು ದೂರ ತಳ್ಳಿ ಮರೆತದ್ದು. ಮಾಡಿದ ತಪ್ಪನ್ನು ಒಪ್ಪಿಕೊಳ್ಳಬಹುದಾದಂತಹ ಬೇರೆ ಸ್ಥಳ ಯಾವುದು? ಈಗಲೂ ಪ್ರತಿಜ್ಞೆ ಮಾಡಲು ಕೇಶವ ಪಿಳ್ಳೆ ಸಿದ್ಧರಾಗಿದ್ದರು. ಇನ್ನೆಂದೂ ಆ ಪ್ರತಿಜ್ಞೆಯನ್ನು ಉಲ್ಲಂಘಿಸುವುದಿಲ್ಲ. ಆದರೆ ಆ ತಪ್ಪನ್ನು ಒಪ್ಪಿಕೊಳ್ಳಲು ಅವರಿಗೆ ಸಾಧ್ಯವಾಗಿರಲಿಲ್ಲ. ಜೀವನವಿಡೀ ಆ ಸ್ತ್ರೀಯ ಹತ್ತಿರ ತಪ್ಪುಮಾಡಿಕೊಂಡಿದ್ದರು.

ಅವರು ಹೇಳಿದರು: "ನೀನು ಅಳೋದು ಗಿಳೋದು ಮಾಡದಿದ್ದರೆ ನಾನೆಲ್ಲ ಹೇಳ್ತೀನಿ. ನೀನು ಅಂದಕೊಂಡಿರೋ ಅಂಥಾದ್ದೇನೂ ನಡೆದಿಲ್ಲ. ಆದರೂ ಹೇಳ್ತೀನಿ".

ಕಾತ್ಯಾಯಿನಿಯಮ್ಮ ಕೇಶವ ಪಿಳ್ಳೆಯನ್ನು ಒರಗಿಕೊಂಡು ಅವರ ತೋಳಿನ ಮೇಲೆ ಕೈಯಿಟ್ಟುಕೊಂಡು ಹೇಳಿದಳು: "ಇಲ್ಲ, ನಾನು ಅಳೋದಿಲ್ಲ. ನಾನು ನೊಂದುಕೊಳ್ಳೋದಿಲ್ಲ; ತಪ್ಪು ಎಣಿಸೋದಿಲ್ಲ."

ಅವಳು ಹಾಗೆ ಹೇಳುತ್ತಿದ್ದಾಗಲೇ ಕಣ್ಣಿನಲ್ಲಿ ನೀರು ತುಂಬಿಕೊಂಡಿತ್ತು.

"ನೋಡು, ನಿನ್ನ ಕಣ್ಣಿನಲ್ಲಿ ನೀರು. ನೀನು ಅಳ್ತಿದ್ದೀಯಲ್ಲ !"

ಕಾತ್ಯಾಯಿನಿಯಮ್ಮ ಒಂದು ಹೂನಗು ನಗುತ್ತ ಸೆರಗಿನಿಂದ ಕಣ್ಣೀರೊರಸಿಕೊಂಡು ಹೇಳಿದಳು:

"ಇಲ್ಲ, ಇಲ್ಲ. ಇನ್ನು ನಾನು ಅಳೋದಿಲ್ಲ."

ಕತ್ತೆತ್ತಿ ಗಂಡನ ಮುಖವನ್ನು ನೋಡುತ್ತ "ಹೇಳಿ" ಎಂದಳು.

ಆ ಎರಡು ಮುಖಗಳೂ ಒಂದು ಚುಂಬನಕ್ಕಾಗಿ ಹತ್ತಿರ ಬಂದುವು. ಬಹುಶಃ ಅದು ಅವರಿಗೆ ಎನ್ನಿಸಿರಲೂಬಹುದು.

ಕಾತ್ಯಾಯಿನಿಯಮ್ಮ ಕೇಳುವುದಕ್ಕೆ ಸಿದ್ಧಳಾಗಿ ನಿಂತಿದ್ದಳು. ಆದರೆ ಕೇಶವ ಪಿಳ್ಳೆಗೆ

ಏನು ಹೇಳಬೇಕು, ಹೇಗೆ ಪ್ರಾರಂಭಿಸಬೇಕು ಎನ್ನುವುದು ತಿಳಿಯದಾಗಿತ್ತು. ಹಾಗೆಯೇ ಸ್ವಲ್ಪ ಹೊತ್ತು ಅವರು ನಿಂತಿದ್ದರು.

ಎಲ್ಲಿಂದಲೋ ತಿಳಿಯದು. ಒಬ್ಬಳು ಸ್ತ್ರೀ ಆ ಸ್ಥಳದಲ್ಲಿ ಆವಿರ್ಭವಿಸಿದಳು. ಅವಳು ಬಿಳಿಯ ಬಟ್ಟೆ ಹೊದಿಸಿದ್ದ ಒಂದು ಮಗುವನ್ನು ಎದೆಗೆ ಅಪ್ಪಿಕೊಂಡಿದ್ದಳು. ಅವಳು ಸಾವಿತ್ರಿ. ಕೇಶವ ಪಿಳ್ಳೆಯೂ ಕಾತ್ಯಾಯಿನಿಯಮ್ಮನೂ ತಕ್ಷಣ ದೂರ ಸರಿದು ನಿಂತುಕೊಂಡರು.

ಸಾವಿತ್ರಿ ಕೇಶವ ಪಿಳ್ಳೆಯ ಕಾಲಿನ ಬುಡದಲ್ಲಿ ಅವಳ ಕೈಯಲ್ಲಿದ್ದ ಮಗುವನ್ನು ಇರಿಸಿದಳು.

ಅದೊಂದು ಗಂಡು ಮಗು. ಹುಟ್ಟಿ ಒಂದು ದಿನ ಕೂಡಾ ಆಗಿಲ್ಲ. ಆ ಮಗು ಅಳತೊಡಗಿತು.

ಕೇಶವ ಪಿಳ್ಳೆ ಮೌನವಾಗಿ ನಿಂತಿದ್ದರು. ಆದರೆ ಅವರಿಗೆ ಎಲ್ಲವೂ ಅರ್ಥವಾಗಿದ್ದಂತೆ ತೋರಿತು. ಕಾತ್ಯಾಯಿನಿಯಮ್ಮ ಸ್ತಬ್ಧಳಾಗಿ ನಿಂತಿದ್ದಳು.

ಸಾವಿತ್ರಿ ಹೇಳಿದಳು: "ಇದು ಜ್ಯೋತಿರ್ಮಯಿ ದೇವಿ ಹೆತ್ತ ಮಗು. ಇಲ್ಲಿಗೆ ತೆಗೆದುಕೊಂಡುಹೋಗಿ ಒಪ್ಪಿಸಿ ಬಾ ಅಂತ ಹೇಳಿದರು. ಮಗು ಹುಟ್ಟಿತು. ತಾಯಿ ಈ ಮಗೂನ ಒಂದು ಸಲ ಕಣ್ಣಲ್ಲಿ ನೋಡಿ ಕಣ್ಣು ಮುಚ್ಚಿದರು."

ಅಷ್ಟರಲ್ಲಿ ವಿಜಯಮ್ಮ ಅಲ್ಲಿಗೆ ಬಂದಳು. ಬಹುಶಃ ಮಗು ಅಳುವುದನ್ನು ಕೇಳಿ ಬಂದದ್ದಾಗಿರಬೇಕು. ಕೇಶವ ಪಿಳ್ಳೆ ದೈನ್ಯದಿಂದ ಕಾತ್ಯಾಯಿನಿಯಮ್ಮನ ಮುಖದ ಕಡೆಗೆ ನೋಡಿದರು. ಆ ನೋಟ ತಮ್ಮ ಎಲ್ಲ ತಪ್ಪುಗಳನ್ನೂ ಒಪ್ಪಿಕೊಳ್ಳುವಂತಿತ್ತು.

ಅವರು ಆ ನೋಟದಲ್ಲಿ ಹೆಂಡತಿಯನ್ನು ಪ್ರಾರ್ಥಿಸಿಕೊಳ್ಳುತ್ತಿದ್ದಂತೆ ಕಾಣಿಸಿದರು. ಅದೇತಕ್ಕೆಂದರೆ ಆ ಮಗುವನ್ನು ಕೈಗೆತ್ತಿಕೊಳ್ಳುವಂತೆ ಪ್ರಾರ್ಥಿಸುವುದಕ್ಕಾಗಿ. ಆದರೆ ಕಾತ್ಯಾಯಿನಿಯಮ್ಮ ಪ್ರತಿಮೆಯಂತೆ ನಿಂತಿದ್ದಳು.

"ಆ ಮಗು ಎತ್ತಿಕೋ" ಎಂದು ಅಧಿಕಾರದಿಂದ ಹೇಳಲು ಸಾಧ್ಯವೆ? ಹಾಗೆಯೇ ಸ್ವಲ್ಪ ಹೊತ್ತು ಕಳೆಯಿತು. ಆ ಪುಟ್ಟ ಮಗು ಅಳುತ್ತಿತ್ತು. ವಿಜಯಮ್ಮ ಯಾರ ಹತ್ತಿರವೂ ಕೇಳದೆ ಎಲ್ಲವೂ ಅರ್ಥವಾದಂತೆ ಆ ಮಗುವನ್ನು ಎತ್ತಿ ಎದೆಗಪ್ಪಿಕೊಂಡಳು. ಮಗು ಅಳು ನಿಲ್ಲಿಸಿತು.

ಸಾವಿತ್ರಿಯ ಹತ್ತಿರ ಕೇಶವ ಪಿಳ್ಳೆ ಆ ವಿಚಾರವಾಗಿ ಕೇಳಿ ತಿಳಿದುಕೊಳ್ಳಬೇಕಾಗಿತ್ತು. ಆದರೆ ಅಷ್ಟರಲ್ಲಿ ಅವಳು ಅಲ್ಲಿಂದ ಹೊರಟು ಹೋಗಿದ್ದಳು.

ಉದ್ಯೋಗಕ್ಕೆ ಪ್ರವೇಶಿಸಿದಂತೆಯೇ ಅಲ್ಲಿಂದ ಹಿಂದಿರುಗುವ ದಿನವೂ ಜೀವನದಲ್ಲಿ ಗಣನೀಯವಾದ ದಿನ. ಕೇಶವ ಪಿಳ್ಳೆ ಕೆಳಗಿಳಿಯುತ್ತಿದ್ದದ್ದು ಸೆಕ್ರೆಟರಿಯೇಟ್‌ನಲ್ಲಿ ಬಹು ದೊಡ್ಡ ಘಟನೆಯಾಗಿತ್ತು. ಎಷ್ಟು ವರ್ಷಗಳು ಆ ಮನುಷ್ಯ ಆ ಕುರ್ಚಿಯಲ್ಲಿ ಕುಳಿತದ್ದು ! ಆದರೆ ಒಂದೇ ಒಂದು ವ್ಯಕ್ತಿಯಾದರೂ ಅವರಿಗೆ ಹೃದಯ ತೆರೆದು

ಬೀಳ್ಕೊಡಲಿಲ್ಲ. ಯಾರೊಡನೆಯೂ ಅವರು ಆತ್ಮೀಯರಾಗಿರಲಿಲ್ಲ. ಆದರೆ ಮುಖ್ಯ ಮಂತ್ರಿಯ ಹತ್ತಿರ ಅವರು ನಗುತ್ತಾ ಹೇಳಿದರು:

"ಬಹುಶಃ ನಾನು ಇಲ್ಲಿಗೆ ಪುನಃ ಬಂದರೂ ಬಂದೆ."

ಹಾಗೆ ಕೇಶವ ಪಿಳ್ಳೆಯ ಔದ್ಯೋಗಿಕ ಜೀವನ ಲೆಕ್ಕಾಚಾರ ಮುಗಿಸಿದ ಹಾಗೆ ಅಂತ್ಯಗೊಂಡಿತು.

ಸಂಪಾದಿಸಿದ್ದೇನು? ನಷ್ಟವಾದದ್ದೇನು? ಯಾವುದೋ ಒಂದು ದೊಡ್ಡ ತಪ್ಪನ್ನು ತನಗೆ ಮಾಡಿದರು ಎನ್ನುವ ಭಾವನೆಯಿಂದ ಕೇಶವ ಪಿಳ್ಳೆ ಸೆಕ್ರೆಟರಿಯೇಟ್ ಬಿಟ್ಟದ್ದು.

ಪಾರ್ಕ್ ವ್ಯೂನಿಂದ ಅವರು ವಾಸವನ್ನು ಬದಲಾಯಿಸುತ್ತಿದ್ದರು. ತಂಗಮ್ಮ ತೀರಿಕೊಂಡಿದ್ದರೂ ಕಾತ್ಯಾಯಿನಿಯಮ್ಮನಿಗೆ ತಿರುವನಂತಪುರದಲ್ಲಿರುವುದು ಇಷ್ಟವಾಗ ಲಿಲ್ಲ. ಊರಿಗೇ ಹಿಂದಿರುಗುವುದೆಂದು ತೀರ್ಮಾನಿಸಿದರು.

ವಿಜಯಮ್ಮ ಬಟ್ಟೆ ಹೊದೆಸಿದ್ದ ಮಗುವನ್ನು ಎದೆಗಪ್ಪಿಕೊಂಡು ಪಾರ್ಕ್ ವ್ಯೂವಿನ ದೊಡ್ಡ ಗೇಟಿನಿಂದ ಹೊರಗೆ ಬಂದಳು. ಅವಳ ಹಿಂದೆ ಕಾತ್ಯಾಯಿನಿಯಮ್ಮ. ಅವಳ ಮುಖದಲ್ಲಿ ಒಂದು ದೊಡ್ಡ ಸಮಾಧಾನ ಕಂಡುಬರುತ್ತಿತ್ತು. ಕೇಶವ ಪಿಳ್ಳೆ ಒಮ್ಮೆ ಹಿಂದಿರುಗಿ ಆ ದೊಡ್ಡ ಬಂಗಲೆಯನ್ನು ನೋಡಿದರು. ಅವರ ಕಣ್ಣುಗಳು ತೇವಗೊಂಡಂತೆ ತೋರಿತು.

ಆ ಕುಟುಂಬವನ್ನು ಕರೆದುಕೊಂಡು ಕಾರು ತಿರುವನಂತಪುರವನ್ನು ಬಿಟ್ಟಿತು.

Printed at Kay Kay Printers 150-D Kamla Nagar Delhi - 110007